# ಇತಿಹಾಸ ದರ್ಶನ

ಸಂಪುಟ ೧೧ / ೧೯೯೬




ಕರ್ನಾಟಕ ಇತಿಹಾಸ ಅಕಾದೆಮಿ (ರಿ.) ಬೆಂಗಳೂರು




# ಇತಿಹಾಸ ದರ್ಶನ

ಸಂಪುಟ ೧೧/೧೯೯೬

೧೯೯೫ರಲ್ಲಿ ಬೆಳಗಾವಿಯಲ್ಲಿ ಸಮಾವೇಶಗೊಂಡ ಕರ್ನಾಟಕ ಇತಿಹಾಸ ಅಕಾದೆಮಿಯ
ಒಂಬತ್ತನೆಯ ವಾರ್ಷಿಕ ಸಮ್ಮೇಳನದಲ್ಲಿ ಮಂಡಿಸಿದ ಪ್ರಬಂಧಗಳ ಸಂಪುಟ

ಸಂಪಾದಕರು

**ಡಾ || ಸೂರ್ಯನಾಥ ಕಾಮತ್**

**ಪಿ. ವಿ. ಕೃಷ್ಣಮೂರ್ತಿ**




**ಕರ್ನಾಟಕ ಇತಿಹಾಸ ಅಕಾದೆಮಿ ( ರಿ. ), ಬೆಂಗಳೂರು**

ITIHAASA DARSHANA
Proceedings of the Nineth Annual
Conference of the Karnataka Itihasa
Academy (Regd.) held at Belagaum
on 9, 10 and 11th September, 1995

Volume 11, June 1996

Edited by : Dr. Suryanath Kamath
P.V. Krishna Murthy

Published by Karnataka Itihasa Academy (Regd.)
Gokhale Institute of Public Affairs Compound
Basavanagudi Road, Narasimharaja Colony
Bangalore-560 019



ಬೆಲೆ: ರೂ. ೧೦೦-೦೦

ಲಕ್ಷ್ಮಿ ಮುದ್ರಣಾಲಯ
ಚಾಮರಾಜಪೇಟೆ, ಬೆಂಗಳೂರು-೫೬೦ ೦೧೮
ದೂರವಾಣಿ: ೬೬೧೩೧೨೩, ೬೬೧೮೭೫೨



ಡಾ॥ ಎ. ವಿ. ನರಸಿಂಹಮೂರ್ತಿ

ಒಂಬತ್ತನೆಯ ಸಮ್ಮೇಳನದ ಅಧ್ಯಕ್ಷರು

# ಸಂಪಾದಕೀಯ

ಇತಿಹಾಸ ಅಕಾದೆಮಿಯ ಒಂಬತ್ತನೆಯ ಸಮ್ಮೇಳನದ ನಡವಳಿಕೆಗಳ- ಆಗ ಮಂಡಿಸಿದ ಪ್ರಬಂಧಗಳ-ಸಂಕಲನ ಈ 'ಇತಿಹಾಸ ದರ್ಶನ' ೧೧ನೆಯ ಸಂಪುಟ. ಒಂಬತ್ತನೆಯ ಸಮ್ಮೇಳನ ನಡೆದು ಒಂಬತ್ತೇ ತಿಂಗಳಲ್ಲಿ ೧೦ನೆಯ ಸಮ್ಮೇಳನ ನಡೆದುದರಿಂದ ಈ ಸಂಪುಟದ ಮುದ್ರಣಕ್ಕೆ ಕಾಲಾವಕಾಶ ಬಹಳ ಕಡಿಮೆಯಾಯಿತು. ಲೇಖನಗಳು ಕೈಸೇರಲು ವಿಳಂಬವಾಯಿತು. ಒಂದೆರಡನ್ನು ಬಿಟ್ಟು ಕೈಸೇರಿದ ಎಲ್ಲ ಪ್ರಬಂಧಗಳನ್ನು ಇಲ್ಲಿ ಪ್ರಕಟಿಸಿದೆ. ಮಂಡಿಸಿದ ಪ್ರಬಂಧದ ಹಸ್ತಪ್ರತಿ ೧೦ ಪುಟಕ್ಕೂ ಮೀರದಂತೆ ಇರಬೇಕೆಂದು ಈ ಲೇಖನಗಳ ವಿದ್ವಾಂಸರನ್ನು ಇಲ್ಲಿ ಮತ್ತೊಮ್ಮೆ ವಿನಂತಿಸುತ್ತೇವೆ.

ಅಕಾದೆಮಿಗೆ ಹತ್ತು ವರ್ಷ ತುಂಬಿದಾಗ ಸಂಶೋಧಕರಿಗೆ ಮಾರ್ಗದರ್ಶಕವಾಗುವಂತೆ ವಿಚಾರ ಸಂಕಿರಣವೊಂದನ್ನು ಬೆಂಗಳೂರಲ್ಲಿ ಏರ್ಪಡಿಸಿದ್ದೆವು. ಇದಲ್ಲದೆ ಹಂಪಿಯಲ್ಲಿ ಬೃಹತ್ ಪ್ರಮಾಣದ ವಿಜಯನಗರದ ಇತಿಹಾಸದ ಬಗೆಗಿನ ಸಮ್ಮೇಳನ ಸಂಘಟಿಸಲಾಯಿತು. ಈಗ ಹತ್ತನೆಯ ವಾರ್ಷಿಕ ಸಮ್ಮೇಳನ ನಡೆದಿದೆ.

ಕರ್ನಾಟಕ ಸರಕಾರದ ಪದವಿಪೂರ್ವ ಶಿಕ್ಷಣ ಮಂಡಳಿಯು ದ್ವಿತೀಯ ವರ್ಷದ ಪಠ್ಯಕ್ರಮದಿಂದ ಕರ್ನಾಟಕದ ಇತಿಹಾಸವನ್ನು ತೆಗೆದು ಹಾಕಲು ನಿರ್ಣಯಿಸಿದ್ದು ಒಂದು ವಿಷಾದಕರ ಬೆಳವಣಿಗೆ.

ಮುದ್ರಣಕ್ಕೆ ಕಾಲಾವಕಾಶ ತೀರಕಡಿಮೆ ಇದ್ದುದರಿಂದ ಈ ಬಾರಿ ಲೇಖನಗಳ ಆಂಗ್ಲ ಸಂಗ್ರಹಾನುವಾದ ಕೈಬಿಡುವುದು ಅನಿವಾರ್ಯವಾಯಿತು.

ಈ ಸಂಪುಟವನ್ನು ಎಂದಿನಂತೆ ಸುಂದರವಾಗಿ ಮುದ್ರಿಸಿಕೊಟ್ಟ ಲಕ್ಷ್ಮಿ ಮುದ್ರಣಾಲಯದ ಶ್ರೀ ಅಶೋಕ್‌ಕುಮಾರ್ ಮತ್ತು ಸಿಬ್ಬಂದಿಯವರಿಗೆ ನಮ್ಮ ಹೃತ್ಪೂರ್ವಕ ಕೃತಜ್ಞತೆಗಳು. ಮುದ್ರಣದ ಅಂತಿಮ ಘಟ್ಟದಲ್ಲಿ ನೆರವಿಗೆ ಬಂದ ಕು॥ ಕೂ.ಸ. ಅಪರ್ಣ ಅವರಿಗೂ ನಮ್ಮ ಕೃತಜ್ಞತೆಗಳು.

- ಸೂರ್ಯನಾಥ ಕಾಮತ್

೩-೬-೧೯೯೬ -ಪಿ.ವಿ. ಕೃಷ್ಣಮೂರ್ತಿ

# ಕರ್ನಾಟಕ ಇತಿಹಾಸ ಅಕಾದೆಮಿ (ರಿ.)

ಬೆಂಗಳೂರು



ಲಿಂಗೈಕ್ಯ ಶ್ರೀ ಮ.ನಿ.ಪ್ರ.ಡಾ॥ ಶಿವಬಸವ ಮಹಾಸ್ವಾಮಿಗಳು

ರುದ್ರಾಕ್ಷಿಮಠ, ನಾಗನೂರ-ಬೆಳಗಾವಿ

ಸಮ್ಮೇಳನದ ಉದ್ಘಾಟನೆ

ಪೂಜ್ಯಶ್ರೀಮನ್ನಿರಂಜನ ಜಗದ್ಗುರು ಡಾ॥ ತೋಂಟದ ಸಿದ್ಧಲಿಂಗ ಮಹಾಸ್ವಾಮಿಗಳು

ಗದಗ ಅವರಿಂದ




ಸಮ್ಮೇಳನಾಧ್ಯಕ್ಷರ ಭಾಷಣ

ಉದ್ಘಾಟನಾ ಸಮಾರಂಭದಲ್ಲಿ ವೇದಿಕೆಯ ಮೇಲೆ ಉಪಸ್ಥಿತರು

ಪೂಜ್ಯಶ್ರೀ ಡಾ॥ ತೋಂಟದ ಸಿದ್ಧಲಿಂಗ ಮಹಾಸ್ವಾಮಿಗಳವರಿಂದ ಆಶೀರ್ವಚನ

ಇತಿಹಾಸ ದರ್ಶನ ಸಂಚಿಕೆ 10 ಬಿಡುಗಡೆ

ಪೂಜ್ಯ ಶ್ರೀ ಮ.ನಿ.ಪ್ರ.ಸಿದ್ಧರಾಮ ಮಹಾಸ್ವಾಮಿಗಳು

ರುದ್ರಾಕ್ಷಿಮಠ, ನಾಗನೂರ-ಬೆಳಗಾವಿ

ಪೂಜ್ಯಶ್ರೀ ಮ.ನಿ.ಪ್ರ. ಸಿದ್ಧರಾಮ ಮಹಾಸ್ವಾಮಿಗಳು

ರುದ್ರಾಕ್ಷಿಮಠ, ನಾಗನೂರ-ಬೆಳಗಾವಿ ಅವರಿಂದ ಆಶೀರ್ವಚನ

“ ಬೀಳಗಿ ಅರಸು ಮನೆತನ” ಪುಸ್ತಕ ಬಿಡುಗಡೆ ಡಾ || ಜಿ. ಎಸ್. ದೀಕ್ಷಿತ್




ಹಿನ್ನೋಟ. : ಪ್ರಥಮ ಸಮ್ಮೇಳನ ಬೆಂಗಳೂರಿನಲ್ಲಿ: ಡಾ || ವಿನಾಯಕ ಕೃಷ್ಣ ಗೋಕಾಕರಿಂದ ಉದ್ಘಾಟನಾ ಭಾಷಣ. ಅಧ್ಯಕ್ಷ : ಡಾ || ಎಂ. ಚಿದಾನಂದಮೂರ್ತಿ

# ಪರಿವಿಡಿ


ಸಮ್ಮೇಳನ ಅಧ್ಯಕ್ಷರ ಭಾಷಣ — ಡಾ॥ ಎ. ವಿ. ನರಸಿಂಹಮೂರ್ತಿ — ix

೧. ತುಮಕೂರು ಜಿಲ್ಲಾ ಪ್ರದೇಶದ ಹಳೇ ಶಿಲಾಯುಗ ಸಂಸ್ಕೃತಿ – — ಕೆ. ಬಿ. ಶಿವತಾರಕ್ — ೧

೨. ಬೆಳಗಾವಿ ಜಿಲ್ಲಾ ಪ್ರದೇಶದಲ್ಲಿಯ ಪೂರ್ವಭಾವಿ ಇತಿಹಾಸ ಸಂಸ್ಕೃತಿಗಳು: ಕೆಲವು ಮುಖ್ಯ ಸಮಸ್ಯೆಗಳು ಮತ್ತು ಸೂಚನೆಗಳು — ಡಾ॥ ಅ. ಸುಂದರ — ೯

೩. ಬೆಳಗಾವಿ ಸುತ್ತ ಮುತ್ತಲಿನ ಕೆಲವು ಪುರಾತತ್ವ ಶೋಧನೆಗಳು — ಎಸ್. ಎಂ. ನಾಗಭೂಷಣ — ೧೫

೪. ಬಳ್ಳಾರಿ ತಾಲ್ಲೂಕು ಹಳೇನೆಲ್ಲುಡಿ ಗ್ರಾಮದ ಸ್ಮಾರಕಗಳು : ಈಚಿನ ಶೋಧಗಳ ಹಿನ್ನೆಲೆಯಲ್ಲಿ — ಪ್ರೊ॥ ಲಕ್ಷ್ಮಣ್ ತೆಲಗಾವಿ — ೧೯

೫. ಆನೇಕಲ್ ತಾಲ್ಲೂಕಿನ ಮೇಲೂರು ದಿಣ್ಣೆ ಹಾಗೂ ಕಾಳನಾಯಕನಹಳ್ಳಿಯ ಶಿಲಾಯುಗದ ನಿವೇಶಗಳು — ಡಿ. ಸ್ಮಿತಾರೆಡ್ಡಿ — ೨೩

೬. ಬಿಳಿಕೆರೆಯ ಹತ್ತಿರ ಬೃಹತ್ ಶಿಲಾಯುಗದ ಸಂಸ್ಕೃತಿ ಪತ್ತೆ — ಡಾ॥ ಎನ್. ಎಸ್. ರಂಗರಾಜು — ೨೬

೭. ಅರದೇಶಹಳ್ಳಿಯ ಬೃಹತ್ ಶಿಲಾಯುಗದ ನೆಲೆಗಳು — ಜೆ. ಟಿ. ಜಯರಾಮಯ್ಯ., ಸವಿತಾ. ಇ. ಆರ್. — ೨೮

೮. ಮಾಗಡಿ ತಾಲ್ಲೂಕಿನ ಹೊಸಪಾಳ್ಯದ ಬೃಹತ್ ಶಿಲಾಯುಗದ ನಿವೇಶನ — ಆರ್. ಜಗದೀಶ್ — ೩೦

೯. ಚಿತ್ರದುರ್ಗ ತಾಲ್ಲೂಕು ಚಿಪ್ಪಿನಕೆರೆಯಲ್ಲಿ ಕಂಡುಬಂದಿರುವ ಪ್ರಾಕ್ಚಾರಿತ್ರಿಕ ಕುರುಹುಗಳು — ಎಸ್. ವೈ. ಸೋಮಶೇಖರ — ೩೨

೧೦. ಮೇಳಿಗೆ ಮತ್ತು ಬುಕ್ಕಾಪುರದ ಶಿಲಾಯುಗದ ನಿವೇಶನಗಳು ಒಂದು ಶೋಧ — ಜಿ. ಕೆ. ದೇವರಾಜಸ್ವಾಮಿ — ೩೪

೧೧. ಅರಸೀಕೆರೆ ಪರಿಸರದ ಬೃಹತ್ ಶಿಲಾಯುಗದ ನೆಲೆಗಳು : ಒಂದು ಶೋಧ — ಆರ್. ವೆಂಕಟೇಶಮೂರ್ತಿ — ೩೭

೧೨. ಕನಕಪುರ ತಾಲೂಕಿನ ಕೆಲವು ಬೃಹತ್ ಶಿಲಾಯುಗದ ಶಿಲಾಗೋರಿಗಳು –ಹೊಸ ಶೋಧನೆ — ಮುತ್ತುರಾಜು — ೩೯

೧೩. ತಾವರಗೇರಾದಲ್ಲಿ ಕಲ್ಲಾಸರೆಯ ವರ್ಣಚಿತ್ರಗಳ ಶೋಧನೆ — ವಿಲಾಸ ಮ. ಜೋಗುಳ — ೪೪

೧೪. 'ಸಾಸಲು'ವಿನ ಬೃಹತ್ ಶಿಲಾಯುಗದ ಸ್ಮಾರಕಗಳು ಮತ್ತು ರೇಖಾಚಿತ್ರಗಳು — ಜಿ. ವಿಶ್ವನಾಥ್., ಎಂ. ಜಿ. ಮಂಜುನಾಥ — ೪೬

೧೫. ಗುಲ್ಬರ್ಗಾ ಜಿಲ್ಲೆಯ ಸೇಡಂ ತಾಲೂಕಿನ ಪ್ರಾಚ್ಯಾವಶೇಷಗಳು (ಶೋಧನೆ) — ಡಾ॥ ಆರ್. ಎಂ. ಷಡಕ್ಷರಯ್ಯ — ೪೯

೧೬. ಅರೆತಿಪ್ಪೂರಿನ ಜೈನ ಅವಶೇಷಗಳು — ತಮಿಳ್ ಸೆಲ್ವಿ ೬೦
೧೭. ವಾಸಂತಿಕಾದೇವಿ-ಒಂದು ಚಿಂತನೆ — ಡಾ॥ ಕೆ. ವಸಂತಲಕ್ಷ್ಮಿ ೬೩
೧೮. ಬಾದುಬ್ಬೆ-ಬನಶಂಕರಿ ಶಿಲ್ಪಗಳು — ವಾಸುದೇವ ಬಡಿಗೇರ ೬೭
೧೯. ಚಾಲುಕ್ಯ ಪೂರ್ವ ಕಾಲದ ಸುಡಾವೆ ಮಣ್ಣಿನ ದ್ವಿಬಾಹು ನರಸಿಂಹ ವಿಗ್ರಹ — ಆರ್. ಎಚ್. ಕುಲಕರ್ಣಿ ೬೯
೨೦. ಕೊಡಗಿನ ಎರಡು ಅಪೂರ್ವ ಜೈನ ಮತ್ತು ಬೌದ್ಧ (!) ಶಿಲಾಶಿಲ್ಪ ಫಲಕಗಳು — ಎಂ. ಜಿ. ನಾಗರಾಜ್ ೭೨
೨೧. ಒಂದು ಅಪೂರ್ವ ಮಾತೃ ಶಿಲ್ಪ — ಶಿವಕುಮಾರ್ ಸುಬ್ಬಯ್ಯ ೮೩
೨೨. ಅಪರೂಪದ ನಂದಿ ವಿಗ್ರಹ — ಕಲ್ಲನಗೌಡ ತಿಪ್ಪನಗೌಡ ಪಾಟೀಲ ೮೭
೨೩. ಆದಿತ್ಯರು — ಪ್ರೊ॥ ಕ. ವೆಂ. ರಾಜಗೋಪಾಲ ೮೯
೨೪. ಟೀಪು ಸುಲ್ತಾನನ ಖಡ್ಗಗಳು — ಡಾ॥ ಚನ್ನಬಸಪ್ಪ ಎಸ್. ಪಾಟೀಲ ೯೭
೨೫. ಬಾದಾಮಿ ಚಲುಕ್ಯರ ಎರಡು ಹೊಸ ನಾಣ್ಯಗಳು — ಡಾ॥ ಎನ್. ಹವಳಯ್ಯ ೧೦೦
೨೬. ಬೆಳಗಾವಿಯ ರಕ್ಷಣಾ ಗೋಡೆಗಳು — ಡಾ॥ ಎಸ್. ಕೆ. ಜೋಶಿ ೧೦೨
೨೭. ಶಿವಮಾಂಧಾತೃವರ್ಮ್ಮನ ಮುತ್ತೂರು ತಾಮ್ರ ಶಾಸನ — ಡಾ॥ ದೇವರಕೊಂಡಾರೆಡ್ಡಿ ೧೦೭
೨೮. ಧರ್ಮಪುರಿ ಜಿಲ್ಲೆಯ ಮೂರು ಶಾಸನಗಳು — ಡಾ॥ ಎಚ್. ಎಸ್. ಗೋಪಾಲರಾವ್ ೧೧೦
೨೯. ಹೂಜಿಗಲ್ಲಿನ ನಿಷಧಿ ಶಾಸನಗಳು — ಎಂ. ಜಿ. ಮಂಜುನಾಥ ೧೧೫
೩೦. ಹೂವಿನ ಹಡಗಲಿಯ ಕಲ್ಯಾಣ ಚಾಲುಕ್ಯರ ಒಂದು ಅಪ್ರಕಟಿತ ಶಾಸನ — ವೀಣಾ, ಎಂ. ಪಿ. ೧೧೮
೩೧. ಸ್ವಾದಿಯಲ್ಲಿ ಮತ್ತೊಂದು ಶಿಲಾಶಾಸನ ಶೋಧನೆ — ಪ್ರೊ॥ ಎಚ್. ಆರ್. ರಘುನಾಥ ಭಟ್ ೧೨೨
೩೨. ಬಯಕಾರ ರಾಮಪ್ಪನ ೧೬ನೇ ಶತಮಾನದ ಕೆಲವು ಹೊಸ ಶಾಸನಗಳು — ಡಬ್ಲ್ಯು. ವಿ. ಎಸ್. ನರಸಿಂಹಮ್ ೧೨೪
೩೩. ಗುಮ್ಮನಾಯಕನ ಪಾಳೆಯದ ಪಾಳೆಯಗಾರರ ಬಾಗೇಪಲ್ಲಿ ತಾಮ್ರಶಾಸನ — ಎ. ಜಯಂತಿ ೧೨೬
೩೪. ಬೆಂಗಳೂರು ದೊಡ್ಡ ಬಸವಣ್ಣ ದೇವಾಲಯ ಮುಂದಿನ ಎರಡು ಅಪ್ರಕಟಿತ ಶಾಸನಗಳು — ವೇಮಗಲ್ ಸೋಮಶೇಖರ್ ೧೨೯
೩೫. ಕೆಳದಿ ವೀರಭದ್ರನಾಯಕನ ಅಪ್ರಕಟಿತ ಶಾಸನ — ಡಾ॥ ಜಿ. ವಿ. ಕಲ್ಲಾಪುರ ೧೩೨
೩೬. ಶಿಶುಗಲಿ ಪಾಂಡ್ಯರ ಕೆಕ್ಕಾರ ವೀರಗಂಬ ಶಾಸನಗಳು : ಒಂದು ಅಧ್ಯಯನ — ಡಾ॥ ಗಣಪತಿ ಗೌಡ, ಎಸ್. ೧೩೪
೩೭. ಆನಂದಪುರ ದೆಶೆಮುಖ ಮಹತ್ತ ದೇವರಿಗೆ ಮಹಾನಾಡ ಸೆಟ್ಟಿಗಳು ನೀಡಿದ ತಾಮ್ರಶಾಸನ — ಕೆಳದಿ ಗುಂಡಾಜೋಯಿಸ್ ೧೪೦
೩೮. ಬೈಂದೂರಿನ ಎರಡು ಶಿಲಾ ಶಾಸನಗಳ ಅಧ್ಯಯನ — ಡಾ॥ ಕೆ. ಜಿ. ವಸಂತಮಾಧವ ೧೪೪

೩೯. ಕನ್ನಡದ ಮೊಟ್ಟಮೊದಲ ದೇಶೀ ಶಾಸನತಜ್ಞ, ಕವಿ ದೇವಚಂದ್ರ — ಕೆಂಗೇರಿ ಚಕ್ರಪಾಣಿ ೧೪೬

೪೦. ಶ್ರೀ ಸೋಂದಾ ಸ್ವರ್ಣವಲ್ಲಿ ಮಹಾಸಂಸ್ಥಾನದ ಚಾರಿತ್ರಿಕ ದಾಖಲೆಗಳ ಕಿರುಪರಿಚಯ — ಡಾ॥ ಎ. ಕೆ. ಶಾಸ್ತ್ರಿ ೧೫೦

೪೧. ಪ್ರಾಚೀನ ಕರ್ನಾಟಕದಲ್ಲಿ ನೌಕಾಯುದ್ಧಗಳು — ಡಾ॥ ಎಂ. ಪಿ. ಮಹದೇವಯ್ಯ ೧೫೮

೪೨. ರಾಜಪ್ರಶಸ್ತಿಗಳ ಹಿನ್ನೆಲೆಯಲ್ಲಿ ರಾಷ್ಟ್ರಕೂಟ ರಾಜಪ್ರಭುತ್ವದ ಸ್ವರೂಪ ಒಂದು ವಿವೇಚನೆ — ಡಾ॥ ಬೆಂ. ಶಾ. ಶ್ಯಾಮಲಾ ರತ್ನಕುಮಾರಿ ೧೬೨

೪೩. ಶಾಸ್ತ್ರಗ್ರಂಥಗಳಲ್ಲಿ ನಿರೂಪಿತವಾದ ದೇವಾಲಯ ಮೇಲ್ಕಟ್ಟಡದ ರಚನೆ — ಕೂ. ಸ. ಅಪರ್ಣ ೧೬೮

೪೪. ಬನವಾಸಿ ನಾಗರಖಂಡ ಹಾಗೂ ಸುತ್ತಲಿನ ಪ್ರದೇಶದಲ್ಲಿ ಮಧ್ಯಕಾಲೀನ ಇಟ್ಟಿಗೆಯ ದೇವಾಲಯಗಳು — ಡಾ. ರಾಜಾರಾಮ ಹೆಗಡೆ ೧೭೬

೪೫. ಬಸದಿಬೆಟ್ಟ-ಒಂದು ಅಧ್ಯಯನ — ತುಂಕೂರು ಸುನಂದಾ ೧೮೪

೪೬. ಕೆಳದಿಯ ವಾಸ್ತುಶಿಲ್ಪದ ಮೇಲೆ ಹೊಸ ಬೆಳಕು — ಮೋಹನ ಗ. ಹೆಗಡೆ ೧೮೬

೪೭. ರಾಚೋಟಿ ವೀರಭದ್ರ ದೇವಾಲಯ-ಒಂದು ಅಧ್ಯಯನ — ಡಾ॥ ಚನ್ನಬಸವಯ್ಯ ಹಿರೇಮಠ ೧೯೦

೪೮. ದರಿಯಾ ದೌಲತ್‌ಬಾಗ್‌ನ ವರ್ಣಚಿತ್ರಗಳ ಬಗ್ಗೆ ಕೆಲವು ಅನಿಸಿಕೆಗಳು — ವೀಣಾ ಶೇಖರ್ ೧೯೫

೪೯. ಹದಿನೆಂಟನೆಯ ಶತಮಾನದಲ್ಲಿ ಬೆಳಗಾವಿ — ಪ್ರೊ॥ ಸಿ. ವ್ಹಿ. ಮಠದ ೧೯೭

೫೦. ಇತಿಹಾಸಕಾರರ ನಿರ್ಲಕ್ಷ್ಯಕ್ಕೆ ಗುರಿಯಾದ ಕಾಶೀಪುರದ ಪ್ರಾಚೀನ ವಿದ್ಯಾಕೇಂದ್ರ — ಹೊ. ನ. ನೀಲಕಂಠೇಗೌಡ ೨೦೦

೫೧. ಹರಪನಹಳ್ಳಿ ಪಾಳೇಗಾರರು ಸ್ಥಾಪಿಸಿದ ಕೆಲವು ದೇವಾಲಯಗಳ ಬಗ್ಗೆ ಐತಿಹ್ಯಗಳು — ಕುಂ.ಬಾ. ಸದಾಶಿವಪ್ಪ ೨೦೩

೫೨. ಮಂಡ್ಯ ಜಿಲ್ಲೆಯ ಶಾಸನಗಳಲ್ಲಿ ಜಾನಪದೀಯ ದೈವಗಳು — ಕೆ. ಜಿ. ರೇಖಾ ೨೦೫

೫೩. ಕೈವಾರನಾಡು-ಶಾಸನಗಳ ಹಿನ್ನೆಲೆಯಲ್ಲಿ ಒಂದು ಅಧ್ಯಯನ — ಪಿ. ವಿ. ಕೃಷ್ಣಮೂರ್ತಿ ೨೦೭

೫೪. ಬೆಳ್ವೊಲ-೩೦೦ ಒಂದು ವಿವೇಚನೆ — ಪ್ರೊ॥ ಎಲ್. ವಿ. ಪಾಟೀಲ ೨೧೩

೫೫. ಸಂಕೇಶ್ವರದ ಸಾಂಸ್ಕೃತಿ ದರ್ಶನ — ಡಾ॥ ಶಿ. ಬಾ. ಪಾಟೀಲ ೨೧೬

೫೬. ಮುಣ್ಣಪೊಯ್ಸಳ (ಕ್ರಿ. ಶ. ೧೦೦೬-೧೦೨೬) — ಎಂ. ಎನ್. ಪ್ರಭಾಕರ್ ೨೨೨

೫೭. ಕಲಕೇರಿಯ ನಾಳ್ಪ್ರಭುಗಳು — ಡಾ॥ ಜೆ. ಎಂ. ನಾಗಯ್ಯ ೨೨೬

೫೮. ಆರನೆಯ ವಿಕ್ರಮಾದಿತ್ಯನ ರಾಣಿ ಧಾರಲದೇವಿ — ಹನುಮಾಕ್ಷಿ ಗೋಗಿ ೨೩೧

೫೯. ಆಳುಪ ಅರಸರ ಹೆಸರುಗಳು — ಡಾ॥ ಗಣಪಯ್ಯ ಭಟ್. ಪಿ. ೨೩೬

೬೦. ಬಾಸವೂರು ಖಚರ ಮನೆತನದ ಮತಾಂತರ — ಡಾ॥ ಚೆನ್ನಕ್ಕ ಪಾವಟೆ ೨೪೦

೬೧. ನಿಡುಗಲ್ಲು ಪ್ರದೇಶದ ಚೋಳ ಮನೆತನದ ವಂಶಾವಳಿ ಮತ್ತು

ಕಾಲಗಣನೆ-ಪುನರ್ ಪರಿಶೀಲನೆ | ಆರ್. ಕವಿತ | ೨೪೨
೬೨. ಬೆಳಗಾವಿ ಪ್ರದೇಶದ ಇತಿಹಾಸ ಪರಂಪರೆ | ಡಾ॥ ಎಂ. ಬಿ. ನೇಗಿನಹಾಳ | ೨೪೭
೬೩. ನಾಗನೂರು ರುದ್ರಾಕ್ಷಿಮಠದ ಇತಿಹಾಸ ಹಾಗೂ ಪರಂಪರೆ | ಎಸ್. ಎಸ್. ಪಾಟೀಲ | ೨೫೨
೬೪. ವಚನಕಾರ ಆದಯ್ಯನ ಜನ್ಮಸ್ಥಳ-ಮರು ಪರಿಶೀಲನೆ | ಡಾ॥ ಸಿ. ನಾಗಭೂಷಣ | ೨೫೬
೬೫. ಹಿಂದು-ಮುಸ್ಲಿಂ ಧರ್ಮ ಸಮನ್ವಯ ಪ್ರತೀಕ ಶಿರಹಟ್ಟಿಯ ಜಗದ್ಗುರು ಶ್ರೀ ಫಕೀರೇಶ್ವರ ಸಂಸ್ಥಾನ ಮಠ | ಪ್ರೊ॥ ರಾಜಶೇಖರ ಈ ಇಚ್ಚಂಗಿ | ೨೫೯
೬೬. ಶ್ರೀ ಕೃಷ್ಣದೇವರಾಯನ ದಿನಚರಿ ಮತ್ತು ರಾಯವಾಚಕಮು | ಸಿಂದಿಗಿ ರಾಜಶೇಖರ | ೨೬೩
೬೭. ಸೇವಂತಿಕಾ ಪರಿಣಯ-ಕೆಳದಿ ಇತಿಹಾಸದ ಆಕರ ಗ್ರಂಥ | ಡಾ॥ ರಾಧಾಕೃಷ್ಣಮೂರ್ತಿ | ೨೬೭
೬೮. ಮಧುಗಿರಿ ಪಾಳೆಯಗಾರರ ಕೈಫಿಯತ್ತು-ಒಂದು ಚಾರಿತ್ರಿಕ ಪರಿಶೀಲನೆ | ಬಿ. ಪಾಂಡುಕುಮಾರ್ | ೨೭೩
೬೯. ಹರಿಹರದ ಕಾರಣೀಕ | ಚಂದನ್. ವೈ. ನೀಲಪ್ಪ | ೨೭೬
೭೦. ದತ್ತಕ ವಿಧಿ-ಮುಂಬಯಿ ಕರ್ನಾಟಕದ ಕೆಲವು ಘಟನೆಗಳು | ಡಾ॥ ಶ್ರೀನಿವಾಸ ಹಾವನೂರ | ೨೮೦
೭೧. ಭಾರತೀಯ ಭಾಷೆಗಳಲ್ಲಿ ಬಸವ ಚರಿತ್ರೆ | ಡಾ॥ ಎಸ್. ಆರ್. ಗುಂಜಾಳ | ೨೮೫
೭೨. ಮೆಕೆನ್ಜಿಯ ಒಂದು ಅಜ್ಞಾತ ಸಂಗ್ರಹ | ಸಿ. ಆರ್. ಶ್ಯಾಮಲ., -ಡಾ॥ ಶ್ರೀನಿವಾಸ ಹಾವನೂರ | ೨೯೨
೭೩. ಈ ಶತಮಾನದ ಓಲೆಗರಿಯ ಲಿಪಿಗಾರ ಹಾಗಲವಾಡಿ ಅಳಗಯ್ಯ (ಸುಮಾರು ೧೮೪೦-೧೯೨೮) | ಡಾ॥ ಬಿ. ನಂಜುಂಡಸ್ವಾಮಿ | ೨೯೭
೭೪. ರಾಜ್ಯ ಪುನರ್ ರಚನೆಯ ನಂತರದ ಪಂಚಾಯಿತ್ ರಾಜ್ ವ್ಯವಸ್ಥೆ (೧೯೫೬-೧೯೯೫) | ಎಂ. ಬಿ. ಪಾಟೀಲ | ೩೦೧
೧೯೯೪ನೇ ಸಾಲಿನ ವಾರ್ಷಿಕ ವರದಿ | | ೩೦೮

ಬೆಳಗಾವಿಯಲ್ಲಿ ನಡೆದ ಕರ್ನಾಟಕ ಇತಿಹಾಸ ಅಕಾದೆಮಿಯ ಒಂಬತ್ತನೆಯ ವಾರ್ಷಿಕ ಸಮ್ಮೇಳನ

# ಸಮ್ಮೇಳನ ಅಧ್ಯಕ್ಷರ ಭಾಷಣ

– ಡಾ॥ ಎ. ವಿ. ನರಸಿಂಹ ಮೂರ್ತಿ

– ೧ –

ಶ್ರೀ ನಾಗನೂರು ರುದ್ರಾಕ್ಷಿ ಮಠದ ವೀರಶೈವ ಅಧ್ಯಯನ ಅಕಾದೆಮಿಯ ಪದಾಧಿಕಾರಿಗಳೇ, ಕರ್ನಾಟಕ ಇತಿಹಾಸ ಅಕಾದೆಮಿಯ ಅಧ್ಯಕ್ಷರಾದ ಪ್ರೊ॥ ಜಿ. ಎಸ್. ದೀಕ್ಷಿತ್ ಅವರೇ, ಡಾ॥ ಸೂರ್ಯನಾಥ ಕಾಮತ್ ಅವರೇ, ಕಾರ್ಯದರ್ಶಿ ಡಾ॥ ಗೋಪಾಲರಾಯರೇ, ಅಕಾದೆಮಿಯ ಸದಸ್ಯರೇ, ಬೆಳಗಾಮಿ ನಗರದ ಇತಿಹಾಸ ಪ್ರೇಮಿಗಳೇ, ಆಹ್ವಾನಿತರೇ,

ನಾನು ಮಾಡಿರುವ ಅಲ್ಪ ಕೆಲಸವನ್ನು ಗುರುತಿಸಿ ಕರ್ನಾಟಕ ಇತಿಹಾಸ ಅಕಾದೆಮಿಯ ಪದಾಧಿಕಾರಿಗಳಾದ ಪ್ರೊ॥ ಜಿ. ಎಸ್. ದೀಕ್ಷಿತ್, ಡಾ॥ ಸೂರ್ಯನಾಥ್ ಕಾಮತ್, ಡಾ॥ ದೇವರಾಜ, ಡಾ॥ ಗೋಪಾಲರಾವ್ ಮುಂತಾದವರು ಈ ವರ್ಷದ ಸಮ್ಮೇಳನದ ಅಧ್ಯಕ್ಷ ಪದವಿಯನ್ನು ನನಗೆ ವಹಿಸಿದ್ದಾರೆ. ಇದಕ್ಕಾಗಿ ಅವರೆಲ್ಲರಿಗೂ ಹಾಗೂ ಇತರ ಪದಾಧಿಕಾರಿಗಳಿಗೂ ನನ್ನ ಕೃತಜ್ಞತೆಯನ್ನು ಅರ್ಪಿಸುತ್ತೇನೆ. ಈ ಗೌರವ ನಾನು ಹೆಚ್ಚಿನ ಕೆಲಸ ಮಾಡಲು ಪ್ರೋತ್ಸಾಹವೆಂಬುದನ್ನು ನಾನು ಬಲ್ಲೆ.

ಈ ವರ್ಷದ ಸಮ್ಮೇಳನ ಬೆಳಗಾವಿ ನಗರದಲ್ಲಿ ನಡೆಯುತ್ತಿರುವುದು ಒಂದು ವಿಶೇಷ. ಉತ್ತರ ದಕ್ಷಿಣಾಭಿಮುಖವಾಗಿ ಕರ್ನಾಟಕವನ್ನು ಗಮನಿಸಿದರೆ ಬೆಳಗಾವಿ ಕರ್ನಾಟಕದ ಬಲಭುಜದಂತೆ ಕಾಣಬರುತ್ತದೆ. ಭೌಗೋಳಿಕವಾಗಿ ಮಾತ್ರವಲ್ಲ – ಇತಿಹಾಸ ಮತ್ತು ಸಂಸ್ಕೃತಿಯ ದೃಷ್ಟಿಗಳಿಂದಲೂ ಇದೊಂದು ಸಂಪದ್ಭರಿತವಾದ ಪ್ರದೇಶ. ಕಲ್ಯಾಣದ ಚಾಲುಕ್ಯರು, ರಟ್ಟರು, ರಾಷ್ಟ್ರಕೂಟರು, ಸೇವುಣರು, ಆದಿಲ್‌ಷಾಹಿ, ಬಹಮನಿ ಸುಲ್ತಾನರು ಮುಂತಾದವರ ಆಳ್ವಿಕೆಯಿಂದ ಶ್ರೀಮಂತವಾದ ಪ್ರದೇಶವಿದು. ನಾಣ್ಯಶಾಸ್ತ್ರ ವಿಷಯದಲ್ಲಿ ವಿಶೇಷ ಆಸಕ್ತಿಯಿರುವ ನನಗೆ, ರಾಮದುರ್ಗ ತಾಲೂಕಿನ ಮುದಕವಿಯಲ್ಲಿ ಐವತ್ತು ವರ್ಷಗಳಿಗೂ ಹಿಂದೆ ದೊರಕಿದ ಚಿನ್ನದ ನಾಣ್ಯಗಳು ಬಹಳ ಮಹತ್ವದ್ದೆನಿಸಿವೆ. ನಿಗಳಂಕಮಲ್ಲ ದಂಡಿನ ಗೋವ ಎನ್ನುವ ಸುಂದರವಾದ ಹನ್ನೆರಡನೆಯ ಶತಮಾನದ ಕನ್ನಡ ಬರಹವಿರುವ ಈ ನಾಣ್ಯಗಳ ಕಲಾತ್ಮಕತೆಗೆ ಯಾವ ಇತರ ನಾಣ್ಯಗಳೂ ಸಾಟಿಯಿಲ್ಲ. ಬೆಳಗಾವಿ ನಗರವಂತೂ ಪ್ರಾಚೀನ ಶಾಸನಗಳಲ್ಲಿ ವೇಣುಪುರವೆಂದು ಖ್ಯಾತವಾಗಿದ್ದು ಅನೇಕ ಸ್ಮಾರಕಗಳಿಂದ ತುಂಬಿದೆ. ಈ ನಗರದ ಇನ್ನೊಂದು ವೈಶಿಷ್ಟ್ಯವನ್ನು ಇಲ್ಲಿ ಗಮನಿಸಬೇಕು. ೧೯೨೪ರಲ್ಲಿ ಇಲ್ಲಿ ಅಖಿಲ ಭಾರತ ಕಾಂಗ್ರೆಸ್ ಅಧಿವೇಶನ ನಡೆಯಿತು. ಆ ಅಧಿವೇಶನಕ್ಕೆ ಗಾಂಧೀಜಿಯವರು ಅಧ್ಯಕ್ಷರಾಗಿದ್ದರು. ಅದೊಂದೇ ಅವರು ಅಧ್ಯಕ್ಷರಾಗಿದ್ದ ಅಧಿವೇಶನ. ಈ ಅಧಿವೇಶನದಲ್ಲಿ ಹುಯಿಲಗೋಳ ನಾರಾಯಣರಾಯರ 'ಉದಯವಾಗಲಿ ನಮ್ಮ ಚೆಲುವ ಕನ್ನಡ ನಾಡು' ಎನ್ನುವ ಗೀತೆಯನ್ನು ಮೊದಲಬಾರಿಗೆ ಹಾಡಲಾಯಿತು. ಇಂತಹ ನಗರದಲ್ಲಿ ಈ ಸಮ್ಮೇಳನ ನಡೆಯುತ್ತಿರುವುದು, ಬೆಳಗಾವಿಯ ಜನಗಳಿಗೆ ಕರ್ನಾಟಕ ಇತಿಹಾಸ ಮತ್ತು ಸಂಸ್ಕೃತಿಯ ಬಗೆಗೆ ಇರುವ ಒಲವು ಮತ್ತು ಆಸಕ್ತಿಯನ್ನು ಪ್ರತಿಬಿಂಬಿಸುತ್ತದೆ ಎಂದು ಭಾವಿಸುತ್ತೇನೆ. ಇದನ್ನು ಆಗು ಮಾಡಿ ಕೊಡುತ್ತಿರುವ ಶ್ರೀ ನಾಗನೂರು ರುದ್ರಾಕ್ಷಿ ಮಠದ ವೀರಶೈವ ಅಧ್ಯಯನ ಅಕಾದೆಮಿಯ ಪದಾಧಿಕಾರಿಗಳನ್ನು ವಂದಿಸಬೇಕು.

– ೨ –

ಇತ್ತೀಚಿನ ವರ್ಷಗಳಲ್ಲಿ ಕರ್ನಾಟಕದಲ್ಲಿ ಆಗಿರುವ ಇತಿಹಾಸ ಮತ್ತು ಪುರಾತತ್ವ ಅಧ್ಯಯನ ಪ್ರಗತಿಯನ್ನು ಗಮನಿಸಿದರೆ ಸ್ವಲ್ಪ ಸಮಾಧಾನ ಕಂಡು ಬಂದರೂ, ಒಂದು ರೀತಿಯ ಅತೃಪ್ತಿ ಮಾತ್ರ ಇದ್ದೇ ಇರುತ್ತದೆ. ಬಿಡಿ ಬಿಡಿಯಾದ ಲೇಖನಗಳನ್ನು ಹಾಗೂ ಗ್ರಂಥಗಳನ್ನು ಗಮನಿಸಿದಾಗ 'ಪರವಾಗಿಲ್ಲ' ಎಂದು ಅನಿಸಿದರೂ, ಒಟ್ಟಾರೆ ನೋಡಿದಾಗ ನ್ಯೂನತೆಗಳು ಅರಿವಾಗುತ್ತವೆ.

ಪುಣೆಯ ಡೆಕ್ಕನ್ ಕಾಲೇಜಿನ ಡಾ॥ ಪದ್ದಯ್ಯನವರು ಹುಣಸಿಗಿಯಲ್ಲಿ ನಡೆಸುತ್ತಿರುವ ಸಂಶೋಧನೆ ಬಲು ಮಹತ್ತರವಾದ ಅಂಶಗಳನ್ನು ಹೊರಗೆಡಹುತ್ತಿದೆ. ಹಳೆಯ ಶಿಲಾಯುಗದ ಮಾನವನೂ ಕೂಡ, ಕ್ರೂರಮೃಗಗಳಿಂದ ರಕ್ಷಿಸಿಕೊಳ್ಳಲು ಕಲ್ಲಿನ ಬಂಡೆಗಳನ್ನೇ ಉಪಯೋಗಿಸಿ ಒಂದು ರೀತಿಯ 'ಮನೆ'ಯನ್ನು ಮಾಡಿಕೊಂಡಿದ್ದನೆಂಬ ವಿಶಿಷ್ಟ ಸಂಗತಿ ಅವರ ಸಂಶೋಧನೆಯಿಂದ ತಿಳಿದು ಬಂದಿದೆ. ಈ ರೀತಿಯ ಸಂಶೋಧನೆ ಯೂರೋಪಿನಲ್ಲಿ ಮಾತ್ರ ನಡೆದಿದ್ದಿತು. ಆಂಧ್ರದವರಾದ ಪದ್ದಯ್ಯನವರು, ಮಹಾರಾಷ್ಟ್ರದಲ್ಲಿದ್ದುಕೊಂಡು ಕರ್ನಾಟಕದ ಇತಿಹಾಸಪೂರ್ವಕಾಲದ ಸಂಸ್ಕೃತಿಯ ಮೇಲೆ ಸಂಶೋಧನೆ ನಡೆಸುತ್ತಿದ್ದಾರೆ.

ಡಾ॥ ಸುಂದರ ಅವರು ಬೃಹತ್ ಶಿಲಾ ಸಮಾಧಿ ಸಂಸ್ಕೃತಿಯ ವಿಷಯದಲ್ಲಿ ಮಾಡಿದ ಸಂಶೋಧನೆಯನ್ನು ಯಾರೂ ಮುಂದುವರಿಸುತ್ತಿಲ್ಲ. ಮೈಸೂರು ವಿಶ್ವವಿದ್ಯಾನಿಲಯದ ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ವಿಭಾಗದವರು ಕೊಪ್ಪ ಮತ್ತು ಹೆಗ್ಗಡೆಹಳ್ಳಿಗಳಲ್ಲಿ ಬೃಹತ್ ಶಿಲಾ ಸಮಾಧಿಗಳ ಉತ್ಖನನ ನಡೆಸಿದರು. ಇವುಗಳ ವರದಿ ಇನ್ನೂ ಪ್ರಕಟವಾಗಿಲ್ಲ. ಕೆಲವು ತಿಂಗಳ ಹಿಂದೆ ಡಾ. ದೇವರಾಜ್ ಅವರ ನೇತೃತ್ವದಲ್ಲಿ ಹೆಗ್ಗಡೆಹಳ್ಳಿಯಲ್ಲಿ ಬೃಹತ್ ಶಿಲಾಸಮಾಧಿಗಳ ಉತ್ಖನನ ನಡೆಯಿತು. ವಿವರಗಳು ತಿಳಿದುಬಂದಿಲ್ಲ. ಡಾ. ರಂಗರಾಜು ಅವರು ತೊಣ್ಣೂರು ಸಮೀಪದಲ್ಲಿ ಬೃಹತ್ ಶಿಲಾಸಮಾಧಿಗಳನ್ನು ಪತ್ತೆಮಾಡಿದ್ದಾರೆ. ಇದರ ವೈಶಿಷ್ಟ್ಯವೆಂದರೆ, ಕ್ಯಾಪ್‌ಸ್ಟೋನಿನ ಮೇಲೆ ಮಲಗಿರುವ ಮನುಷ್ಯನ ಚಿತ್ರಗಳಿವೆ. ಈ ಚಿತ್ರಗಳು ಇತಿಹಾಸಪೂರ್ವಕಾಲದ ಚಿತ್ರಗಳನ್ನು ಹೋಲುತ್ತವೆ. ಬಲು ಹಿಂದೆಯೇ ಸಿ. ಕೃಷ್ಣಮೂರ್ತಿಯವರು ಹತ್ತಾರು ನವಶಿಲಾಯುಗ, ಬೃಹತ್ ಶಿಲಾಸಮಾಧಿ ಹಾಗೂ ಇತಿಹಾಸ ಕಾಲದ ಅನೇಕ ನೆಲೆಗಳನ್ನು ಸಂಶೋಧಿಸಿದ್ದಾರೆ. ಅವುಗಳಲ್ಲಿ ಉತ್ಖನನ ನಡೆಯುವವರೆಗೆ ಇತಿಹಾಸ ಪೂರ್ವಕಾಲದ ಜನಜೀವನ ನಿಗೂಢವಾಗಿಯೆ ಉಳಿಯುತ್ತದೆ.

ಇತಿಹಾಸ ಆರಂಭ ಕಾಲದ ಅನೇಕ ನೆಲೆಗಳು ಉತ್ಖನನಗೊಂಡಿವೆ. ಆದರೆ ಅವುಗಳ ವಿಷಯದಲ್ಲಿ ಖಚಿತತೆಯಿಲ್ಲ. ಈ ಕಾಲದ ಸಂಸ್ಕೃತಿಯ ವಿಶಿಷ್ಟ ಲಕ್ಷಣಗಳೇನು? ಹಾಗೂ ಈ ಸಂಸ್ಕೃತಿಯ ಕಾಲಾನುಕ್ರಮವೇನು? ಎನ್ನುವುದರಲ್ಲಿ ಒಮ್ಮತವಿಲ್ಲ. ಇದನ್ನು ಸಮರ್ಪಕವಾಗಿ ವಿಶ್ಲೇಷಿಸಿ ಈ ಸಂಸ್ಕೃತಿಯ ಲಕ್ಷಣಗಳು ಹಾಗೂ ಕಾಲಮಾನದ ವಿಚಾರವಾಗಿ ನಿರ್ದಿಷ್ಟವಾದ ಸಿದ್ಧಾಂತವನ್ನು ರೂಪಿಸಬೇಕಾಗಿದೆ. ಇದೊಂದು ತುರ್ತಾಗಿ ಆಗಬೇಕಾದ ಕಾರ್ಯ.

–೩–

ಇನ್ನು ಶಾಸನ ಶಾಸ್ತ್ರವನ್ನು ಪ್ರವೇಶಿಸಿದರೆ ಕರ್ನಾಟಕದ ಕೊಡುಗೆ ಬಹಳ ಗಣನೀಯವಾದುದು. ಯಾವ ರಾಷ್ಟ್ರೀಯ ಅಥವಾ ಅಂತರರಾಷ್ಟ್ರೀಯ ಶಾಸನಶಾಸ್ತ್ರ ಸಮ್ಮೇಳನವಾದರೂ ಕರ್ನಾಟಕದ್ದೆ ಸಿಂಹಪಾಲು. ಇದು ನಮಗೆ ಹೆಮ್ಮೆಯ ವಿಷಯವೇ ಸರಿ. ಆದರೆ ಶಾಸನ ಸಂಗ್ರಹ, ಸಂಪಾದನೆ ಹಾಗೂ ಪ್ರಕಟಣೆಯಲ್ಲಿ ನಾವು ಎಂ. ಎಚ್. ಕೃಷ್ಣ ಅವರ ಕಾಲಕ್ಕಿಂತ ಹೆಚ್ಚು ಮುಂದೆ ಹೋಗಿದ್ದೇವೆ ಎಂದು ಅನಿಸುವುದಿಲ್ಲ. ಕಾರಣಗಳು ಏನೇ ಇರಲಿ, ಹಳೆಯ ಮೈಸೂರು ಸಂಸ್ಥಾನದ ಜಿಲ್ಲೆಗಳನ್ನು ಬಿಟ್ಟು, ಕರ್ನಾಟಕದ ಇತರ ಜಿಲ್ಲೆಗಳು ಎಪಿಗ್ರಾಫಿಯ ಕರ್ನಾಟಿಕ ಸಂಪುಟಗಳ, –ಇನ್ನೂ ಪ್ರಕಟವಾಗಬೇಕಾಗಿವೆ. ಇದು ದೊಡ್ಡ ನ್ಯೂನತೆ. ಅದನ್ನು ಯಾರು ಮಾಡಬೇಕು ಎನ್ನುವುದರಲ್ಲಿ ಅಧಿಕಾರಿಗಳಲ್ಲಿ ಮತ್ತು ಸಂಸ್ಥೆಗಳಲ್ಲಿ ಭಿನ್ನಾಭಿಪ್ರಾಯವಿರಬಹುದು. ಆದರೆ ಈ ಶಾಸನ ಸಂಪುಟಗಳು ಶೀಘ್ರವಾಗಿ ಆಗಬೇಕು ಎನ್ನುವುದರಲ್ಲಿ ಭಿನ್ನಾಬಿ ಪ್ರಾಯವಿರಲಾರದು. ಮೈಸೂರು ವಿಶ್ವವಿದ್ಯಾನಿಲಯದ ಕನ್ನಡ ಅಧ್ಯಯನ ಸಂಸ್ಥೆಯು ಹಮ್ಮಿಕೊಂಡಿರುವ ಎಪಿಗ್ರಾಫಿಯ ಕರ್ನಾಟಿಕ ಸಂಪುಟಗಳ ಪರಿಷ್ಕಾರ ಹಾಗೂ ಪುನರ್‌ಮುದ್ರಣ ಕಾರ್ಯ ಮಂದಗತಿಯಿಂದ ಸಾಗುತ್ತಿದೆ. ಪರಿಷ್ಕರಣಾಕಾರ್ಯ ಸಾಧ್ಯವಿಲ್ಲವಾದರೂ ಪುನರ್ಮುದ್ರಣ ಕಾರ್ಯವನ್ನಾದರೂ ಮಾಡಿದರೆ, ಈ ಸಂಪುಟಗಳು ಶೀಘ್ರವಾಗಿ ಸಂಶೋಧಕರಿಗೆ ದೊರಕಿದಂತೆ ಆಗುತ್ತದೆ. ಭಾರತ ಸರ್ಕಾರದ ಶಾಸನ ಶಾಸ್ತ್ರ ಇಲಾಖೆಯೂ ಕೂಡ ಶಾಸನ ಸಂಪಾದನೆ ಹಾಗೂ ಪ್ರಕಟಣೆಯ ಕಾರ್ಯದಲ್ಲಿ ಹಿಂದೆ ಬಿದ್ದಿದೆ. ಈಗಿನ ಡೈರಕ್ಟರ್ ಆದ ಶ್ರೀ ಎಂ. ಎನ್. ಕಟ್ಟಿಯವರು ಇದಕ್ಕೆ ಸೂಕ್ತಕಾರ್ಯಕ್ರಮಗಳನ್ನು ಹಾಕಿದ್ದಾರೆಂದು ಕೇಳಿದ್ದೇನೆ. ಅವರಿಗೆ ಯಶಸ್ಸು ಸಿಗಲಿ ಎಂದು ಶಾಸನಶಾಸ್ತ್ರ ಪ್ರಿಯರ ಪರವಾಗಿ ಹಾರೈಸುತ್ತೇನೆ.

ಶಾಸನಸೂಚಿಗಳು ಸಂಶೋಧಕರಿಗೆ ಅಗತ್ಯವಾದ ಸಾಧನಗಳು. ಅವು ಇಲ್ಲದೇ ಹೋದರೆ ಸಂಶೋಧಕರು ಶಾಸನ ಸಂಗ್ರಹಣಾ ಕಾರ್ಯದಲ್ಲಿಯೇ ಹೆಚ್ಚಿನ ಸಮಯವನ್ನು ವ್ಯಯ ಮಾಡಬೇಕಾಗುತ್ತದೆ. ಕರ್ನಾಟಕದ ಪ್ರತೀಯೊಂದು ರಾಜವಂಶಕ್ಕೂ ಶಾಸನದ ಪಾಠಗಳನ್ನೂ ಒಳಗೊಂಡಂತೆ ಸೂಚಿಗಳು ತಯಾರಾಗಬೇಕು. ಡಾ॥ ಕೆ. ವಿ. ರಮೇಶ್ ಅವರು ತಲಕಾಡಿನ ಗಂಗರ ರಾಜವಂಶದ ಎಲ್ಲ ಶಾಸನಗಳನ್ನೂ ಸಂಪಾದಿಸಿ, ವಿದ್ವತ್‌ಪೂರ್ಣ ಮುನ್ನುಡಿಯೊಡನೆ, ಉತ್ತಮ

ಗ್ರಂಥವನ್ನು ಕೊಟ್ಟಿದ್ದಾರೆ. ಇದೇ ಮಾದರಿಯಲ್ಲಿ ಕರ್ನಾಟಕದ ಇತರ ರಾಜವಂಶದ ಶಾಸನ ಸಂಪುಟಗಳೂ ತಯಾರಾಗಬೇಕು.

ಶಾಸನಗಳ ಸಾಂಸ್ಕೃತಿಕ ಅಧ್ಯಯನವನ್ನು ಡಾ॥ ಚಿದಾನಂದ ಮೂರ್ತಿ, ಡಾ॥ ಎಂ. ಎಂ. ಕಲ್ಬುರ್ಗಿ ಮುಂತಾದವರು ಸಮರ್ಥವಾಗಿ ಮುಂದುವರಿಸಿಕೊಂಡು ಹೋಗುತ್ತಿದ್ದಾರೆ. ಈ ದಿಸೆಯಲ್ಲಿ ಇತ್ತೀಚಿನ ಕೃತಿಗಳಾದ ಶಾಸನಗಳಲ್ಲಿ ಸ್ತ್ರೀ ಸಮಾಜ (ಚೆನ್ನಕ್ಕ ಎಲಿಗಾರ), ಶಾಸನಗಳಲ್ಲಿ ವರ್ತಕರು (ಬಿ. ಆರ್. ಹಿರೇಮಠ) ಉತ್ತಮ ಉದಾಹರಣೆಗಳು. ಇದೇ ಗುಂಪಿಗೆ ಸೇರಬಹುದಾದ ಕೃತಿಗಳೆಂದರೆ ಡಾ॥ ಗೋಪಾಲ್ ರಾವ್ ಅವರ ಕಲ್ಯಾಣ ಚಾಲುಕ್ಯ ದೇವಾಲಯಗಳು ಮತ್ತು ಡಾ॥ ದೇವರಾಜ್ ಅವರ ಸೋಮನಾಥಪುರವನ್ನು ಕುರಿತಾದ ಗ್ರಂಥ. ಇವೆರಡೂ ಶಾಸನಗಳ ಹಿನ್ನೆಲೆಯ ಅಧ್ಯಯನಗಳು. ಡಾ॥ ಎಂ.ವಿ.ಕೃಷ್ಣಪ್ಪನವರ ಗ್ರಂಥ ಸಾಮಾಜಿಕ ಹಾಗೂ ಆರ್ಥಿಕ ಸ್ಥಿತಿಗಳು (ಇಂಗ್ಲಿಷ್) ಇಲ್ಲಿ ಹೆಸರಿಸಬಹುದು. ನನಗೆ ತಿಳಿದಂತೆ ಈ ಗುಂಪಿಗೆ ಸೇರಬಹುದಾದ ಅನೇಕ ಮಹಾ ಪ್ರಬಂಧಗಳೂ ಇವೆ. ಅಂದರೆ ಶಾಸನಗಳನ್ನು ಉಪಯೋಗಿಸಿಕೊಂಡು ಸಂಸ್ಕೃತಿಯ ವಿವಿಧ ಮುಖಗಳನ್ನು ರಚಿಸುವ ಕಾರ್ಯ ಹೆಚ್ಚು ಸಂಶೋಧಕರಿಗೆ ಪ್ರಿಯುವೆನಿಸಿದೆ ಎಂದು ಗೊತ್ತಾಗುತ್ತದೆ.

-೪-

ಕರ್ನಾಟಕ ವಾಸ್ತು ಶಿಲ್ಪ ಇತಿಹಾಸವನ್ನು ಗಮನಿಸಿದರೆ, ಅಂತಹ ಪ್ರಗತಿಯಾದಂತೆ ತೋರುವುದಿಲ್ಲ ಇಂದಿಗೂ ಪ್ರಾಚೀನ ಕದಂಬರ ವಾಸ್ತು ಶಿಲ್ಪ ಲಕ್ಷಣಗಳೇನು ಎಂಬುದು ಖಚಿತವಾಗಿ ನಿರ್ಧಾರವಾಗಿಲ್ಲ. ಬಾದಾಮಿ ಚಲುಕ್ಯರ ವಾಸ್ತು ಶಿಲ್ಪ ಕೃತಿಗಳ ಕಾಲಮಾನದ ಬಗೆಗೆ ವಿದ್ವಾಂಸರಲ್ಲಿ ಒಮ್ಮತವಿಲ್ಲ; ಅವೆಲ್ಲವನ್ನೂ ಹೊಂದಾಣಿಕೆ ಮಾಡುವ ಪ್ರಯತ್ನಗಳೂ ನಡೆದಿಲ್ಲ. ಆದರೆ ಅವುಗಳನ್ನು ಜನಸಾಮಾನ್ಯರಿಗೆ ಪರಿಚಯ ಮಾಡಿಕೊಡುವ ಸಲುವಾಗಿ ತಿ. ಶ್ರೀ ರಂಗಾಚಾರ್ ಅವರು ಐಹೊಳೆ, ಪಟ್ಟದಕಲ್ಲು ಮತ್ತು ಬಾದಾಮಿಗಳಲ್ಲಿ ಚಾಲುಕ್ಯೋತ್ಸವ ಪ್ರತಿ ವರ್ಷವೂ ನಡೆಸುತ್ತಿದ್ದರೆ. ಇತ್ತೀಚಿಗೆ ಡಾ॥ ಸಿಂದಗಿ ರಾಜಶೇಖರ ಅವರು ರಾಷ್ಟ್ರಕೂಟ ದೇವಾಲಯಗಳಿಗೆ ಪುನರ್ಜನ್ಮ ಕೊಟ್ಟಿದ್ದಾರೆ. ಇದೊಂದು ಮಹತ್ವವಾದ ಸಂಶೋಧನೆ; ಇದು ಇನ್ನೂ ವ್ಯಾಪಕವಾಗಿ ಮುಂದುವರೆಯಬೇಕು. ಐ. ಕೆ. ಶರ್ಮ ಅವರು ತಲಕಾಡಿನ ಗಂಗರ ವಾಸ್ತುಶಿಲ್ಪವನ್ನು ಕುರಿತು ಉತ್ತಮ ಗ್ರಂಥವನ್ನು ಪ್ರಕಟಿಸಿದ್ದಾರೆ. ಕಲ್ಯಾಣದ ಚಾಲುಕ್ಯರ ವಾಸ್ತುಶಿಲ್ಪ ಕೃತಿಗಳ ವಿಷಯದಲ್ಲಿ ಅಂತಹ ಪ್ರಗತಿಯೇನೂ ಕಾಣಬರುತ್ತಿಲ್ಲ. ಎಸ್. ಶೆಟ್ಟರ್ ಅವರ ಹೊಯ್ಸಳ ದೇವಾಲಯಗಳನ್ನು ಕುರಿತಾದ ಗ್ರಂಥ, ಹೊಯ್ಸಳ ವಾಸ್ತು ಶಿಲ್ಪವನ್ನು ಒಟ್ಟಾರೆ ತಿಳಿಯುವಲ್ಲಿ ಉತ್ತಮನೆನಿಸಿದೆ. ಡಾ॥ ಆರ್. ಎನ್. ಸಾಲೆತೊರೆಯವರ ವಿಜಯನಗರ ವಾಸ್ತುಶಿಲ್ಪ ಪ್ರಮುಖ ಲಕ್ಷಣಗಳನ್ನು ಉತ್ತಮವಾಗಿ ವಿಶ್ಲೇಷಿಸಿದರೂ, ಬಿಡಿ ದೇವಾಲಯಗಳ ವಿವರಣೆ ದೊರಕದೇ ಇರುವುದು ಒಂದು ನ್ಯೂನತೆಯಾಗಿದೆ. ಕೆಳದಿ ಅರಸರ ವಾಸ್ತುಶಿಲ್ಪ ಕೃತಿಗಳನ್ನು ಡಾ॥ ಸುಂದರ ಅವರು ಉತ್ತಮವಾಗಿ ವಿಶ್ಲೇಷಿಸಿದ್ದಾರೆ. ಅದರೆ ಮೈಸೂರು ಒಡೆಯರ ಕಾಲದ ವಾಸ್ತುಶಿಲ್ಪ ಕೃತಿಗಳ ಸಮರ್ಥ ಅಧ್ಯಯನ ಇನ್ನೂ ನಡೆಯಬೇಕಾಗಿದೆ. ಒಟ್ಟಾರೆ ಕರ್ನಾಟಕ ವಾಸ್ತು ಶಿಲ್ಪವನ್ನು ಅಭ್ಯಾಸ ಮಾಡಿ, ಕರ್ನಾಟಕದ ವೈಶಿಷ್ಟ್ಯವೇನು, ಭಾರತೀಯ ವಾಸ್ತು ಶಿಲ್ಪಕ್ಕೆ ಕರ್ನಾಟಕದ ಕೊಡುಗೆ ಏನು ಎಂಬುದನ್ನು ನಿರ್ಧಾರಾಗಿ ಹೇಳಲು ಆಗಿಲ್ಲ. ಈ ರೀತಿಯ ಒಟ್ಟಾರೆ ಸಮಗ್ರ ನೋಟದ ಇತಿಹಾಸವನ್ನು ರಚಿಸುವಲ್ಲಿ ಡಾ॥ ಚೂಡಾಮಣಿ ನಂದಗೋಪಾಲ್ ಮತ್ತು ದಯಾನಂದ ಪಟೇಲ್ ಅವರ ಪ್ರಯತ್ನಗಳು ಶ್ಲಾಘನೀಯ.

ಆರ್. ನರಸಿಂಹಾಚಾರ್ಯರು ಪ್ರಾರಂಭಿಸಿದ ದೇವಾಲಯಗಳನ್ನು ಕುರಿತಾದ ಏಕವಿಷಯ ಪ್ರಬಂಧಗಳ ಸರಣಿಯನ್ನು ಪುನರಾರಂಭಿಸುವ ಅವಶ್ಯಕತೆ ಹೆಚ್ಚಾಗಿದೆ. ರಾಜವಂಶಕ್ಕೆ ಸಂಬಂಧಿಸಿದ ವಾಸ್ತುಶಿಲ್ಪ ಗ್ರಂಥಗಳಲ್ಲಿ ಬಿಡಿ ದೇವಾಲಯಗಳು ಗೌಣವಾಗಿ ಬಿಡುತ್ತವೆ. ಅದುದರಿಂದ ಅವುಗಳನ್ನು ಪ್ರತ್ಯೇಕವಾಗಿ ಅಭ್ಯಾಸ ಮಾಡುವ ಅವಶ್ಯಕತೆ ಇದೆ. ಲಾಡ್ ಖಾನ್, ಮಾಲೆಗಿತ್ತಿ ಶಿವಾಲಯ, ಮೇಗುತಿ, ಕಂಬದ ಹಳ್ಳಿ, ಕೀರ್ತಿನಾರಾಯಣ, ಹೊಸಹೊಳಲು, ನುಗ್ಗೆಹಳ್ಳಿ, ಬಸರಾಳು, ಇಟಗಿ, ಲಕ್ಕುಂಡಿ, ಗದಗ್, ಡಂಬಳ ಮುಂತಾದ ಕಡೆಗಳ ದೇವಾಲಯಗಳು ದೀರ್ಘ ಅಧ್ಯಯನಕ್ಕೆ ಯೋಗ್ಯವಾಗಿದೆ. ಡಾ॥. ಸಿ. ಎಸ್. ಪಾಟೀಲರ ರಾಯಚೂರು ಮತ್ತು ಬಳ್ಳಾರಿ ಜಿಲ್ಲೆಯ ದೇವಾಲಯಗಳನ್ನು ಕುರಿತಾದ ಗ್ರಂಥ ಈ ಗುಂಪಿಗೆ ಸೇರಬಹುದು. ಕರ್ನಾಟಕದ ಲೋಹಶಿಲ್ಪಗಳನ್ನು ಕುರಿತು ಹೆಚ್ಚಿನ ಸಂಶೋಧನೆ ನಡೆಯಬೇಕಾಗಿದೆ.

-೫-

ಇತಿಹಾಸ ಅಕಾಡೆಮಿಯ ಮೈಸೂರು ಸಮ್ಮೇಳನದಲ್ಲಿ ಅಧ್ಯಕ್ಷ ಭಾಷಣ ಮಾಡುವಾಗ ಡಾ॥ ಸುಂದರ ಅವರು ಡಾ॥ ನರಸಿಂಹಮೂರ್ತಿಯವರು ನಾಣ್ಯಶಾಸ್ತ್ರದಲ್ಲಿ ಏಕೈಕ ವೀರರಾಗಿ ಸಾಗಿದ್ದಾರೆ, ಎಂದು ಹೇಳಿದ್ದರು. ಆ ಕ್ಷಣದಲ್ಲಿ ಇದು ನನಗೆ

ಸಂತೋಷವನ್ನು ತಂದಿತ್ತು. ಆದರೆ ನಾಣ್ಯಶಾಸ್ತ್ರ ಕ್ಷೇತ್ರಕ್ಕೆ ಸಂಶೋಧಕರು ಬರದೇ ಇರುವುದು ಒಂದು ನ್ಯೂನತೆಯೇ ಸರಿ. ವಿಷಯ ಬೆಳವಣಿಗೆಯ ದೃಷ್ಟಿಯಿಂದ ನಾಲ್ಕಾರು ಸಂಶೋಧಕರು ಸೇರಿ ತಮ್ಮ ತಮ್ಮ ಅಭಿಪ್ರಾಯಗಳನ್ನು ಮಂಡಿಸುವುದೇ ಸರಿಯಾದ ಕ್ರಮ. ಆಗಲೇ ವಿಷಯ ಸರಿಯಾದ ದಾರಿಯಲ್ಲಿ ಬೆಳೆಯುತ್ತದೆ. ಇತ್ತೀಚೆಗೆ ನಾಲ್ಕಾರು ತರುಣ ವಿದ್ವಾಂಸರು ನಾಣ್ಯಶಾಸ್ತ್ರವನ್ನು ಪ್ರವೇಶಿಸುತ್ತಿರುವುದು ನನಗೆ ಸಮಾಧಾನವನ್ನು ತಂದಿದೆ.

ಈ ಸಂದರ್ಭದಲ್ಲಿ ದಕ್ಷಿಣ ಭಾರತೀಯ ನಾಣ್ಯಶಾಸ್ತ್ರ ಸಂಘ ಸ್ಥಾಪಿತವಾಗಿರುವುದು ಒಂದು ಮಹತ್ವದ ವಿಷಯ. ಈ ಐದು ವರ್ಷಗಳಲ್ಲಿ ಈ ಸಂಘ ಐದು ಸಂಪುಟ ನಿಯತ ಕಾಲಿಕೆಯನ್ನು ಪ್ರಕಟಿಸಿದೆ. ಇವುಗಳಿಗೆ ಸಂಪಾದಕನಾಗಿ ಕಾರ್ಯ ನಿರ್ವಹಿಸುವ ಸುಯೋಗ ನನ್ನ ಪಾಲಿಗೆ ಬಂದಿದೆ. ಈ ನಿಯತ ಕಾಲಿಕೆಯಲ್ಲಿ (ಸ್ಟಡೀಸ್ ಇನ್ ಸೌತ್ ಇಂಡಿಯನ್ ಕಾಯಿನ್ಸ್) ಕರ್ನಾಟಕಕ್ಕೆ ಸಂಬಂಧಿಸಿದಂತೆ ಅನೇಕ ಪ್ರಮುಖ ಲೇಖನಗಳು ಪ್ರಕಟವಾಗಿವೆ. ಡಾ॥ ರಘುನಾಥ ಭಟ್ ಅವರು ಉತ್ತರ ಕನ್ನಡ ಜಿಲ್ಲೆಯ ಕುಂದೂರಿನಲ್ಲಿ ದೊರಕಿದ ಶಾತವಾಹನ ನಾಣ್ಯರಾಶಿಯನ್ನು ಬೆಳಕಿಗೆ ತಂದಿದ್ದಾರೆ. ಬಹುಶಃ ಕರ್ನಾಟಕದಲ್ಲಿ ದೊರೆತ ಅತ್ಯಂತ ದೊಡ್ಡ ಶಾತವಾಹನರ ನಾಣ್ಯರಾಶಿ ಇದು. ಮುಕುಂದ ಪ್ರಭು ಅವರು ಮಲವರಮಾರಿ ನಿಷ್ಕ, ಸಾಮಂತ ಕೇಸರಿಯ ನಾಣ್ಯ, ಬಾಣರಾಜ ವೈರಿಗಳ ಕೇಸರಿಯ ನಾಣ್ಯ ಮತ್ತು ಗುತ್ತರ ಬೀಮನ ನಾಣ್ಯಗಳನ್ನು ಬೆಳಕಿಗೆ ತಂದಿದ್ದಾರೆ. ಡಾ॥ ಹವಳಯ್ಯನವರು ಬಾದಾಮಿ ಚಾಲುಕ್ಯರ ನಾಣ್ಯಗಳನ್ನು ಶಾಸನದ ಮಾಹಿತಿಯೊಂದಿಗೆ ತಾಳೆ ಹಾಕಿದ್ದಾರೆ. ಡಾ॥ ಎಂ. ಎಸ್. ಕೃಷ್ಣಮೂರ್ತಿಯವರು ವಿಜಯನಗರ ರಾಜರ ಎರಡು ಹೊಸ ನಮೂನೆಯ ನಾಣ್ಯಗಳನ್ನು ಬೆಳಕಿಗೆ ತಂದಿದ್ದಾರೆ; ಮೊದಲನೆಯದು ಸದಾಶಿವರಾಯನ ಅಶ್ವ ಮತ್ತು ನಂದಿ ನಮೂನೆಯ ನಾಣ್ಯಗಳು. ಎರಡನೆಯದು ತಲಕಾಡಿನ ಉತ್ಖನನದಲ್ಲಿ ದೊರೆತ ವ್ಯಾಳ ನಮೂನೆಯ ನಾಣ್ಯ. ಡಾ॥ ದೇವರಾಜ್ ಅವರು ತಲಕಾಡಿನಲ್ಲಿ ದೊರೆತ ರೋಮನ್ ನಾಣ್ಯ ಮುದ್ರೆಯನ್ನು ವಿವರವಾಗಿ ವಿಶ್ಲೇಷಿಸಿದ್ದಾರೆ. ಡಾ॥ ಕೃಷ್ಣಪ್ಪನವರು ವಿಜಯನಗರದ ಬಾಲಕೃಷ್ಣನ ಚಿತ್ರವಿರುವ ತಾಮ್ರದ ನಾಣ್ಯವನ್ನು ಪತ್ತೆ ಮಾಡಿದ್ದಾರೆ. ಕರ್ನಾಟಕ ಪುರಾತತ್ವ ಇಲಾಖೆ ಇತ್ತೀಚೆಗೆ ಒಬ್ಬ ನಾಣ್ಯ ಶಾಸ್ತ್ರಜ್ಞನನ್ನು ನೇಮಕ ಮಾಡಿರುವುದು ಸಂತೋಷದ ಸಂಗತಿ. ಇದರಿಂದಾಗಿ ಧೂಳು ಕುಡಿಯುತ್ತಿದ್ದ ಸಾವಿರಾರು ನಾಣ್ಯಗಳು ಬೆಳಕಿಗೆ ಬಂದು ಹತ್ತಾರು ಹೊಸ ನಮೂನೆಯ ನಾಣ್ಯಗಳು ಕರ್ನಾಟಕ ಇತಿಹಾಸವನ್ನು ಶ್ರೀಮಂತಗೊಳಿಸುತ್ತವೆಯೆಂದು ಭಾವಿಸಬಹುದಾಗಿದೆ. ಈ ಹುದ್ದೆಯಲ್ಲಿ ಕಾರ್ಯ ನಿರ್ವಹಿಸುತ್ತಿರುವ ಡಾ॥ ಗೋಪಾಲ್ ಅವರು ಹಾಸನದಲ್ಲಿ ದೊರೆತ ಗ್ರೀಕ್ ನಾಣ್ಯ, ನೊಸಗೆರೆಯಲ್ಲಿ ದೊರೆತ ರೋಮನ್ ನಾಣ್ಯ, ಲಿಂಗಸುಗೂರಿನಲ್ಲಿ ದೊರೆತ ಬೈಜಾಂಟೈನ್ ನಾಣ್ಯ ಹಾಗೂ ವೆನೀಷಿಯನ್ ನಾಣ್ಯಗಳನ್ನು ಕುರಿತು ಬರೆದಿದ್ದಾರೆ.

ಇತ್ತೀಚಿನ ದಿನಗಳಲ್ಲಿ ವಿಜಯನಗರ ನಾಣ್ಯಗಳ ಬಗಗೆ ಆಸಕ್ತಿ ಹೆಚ್ಚುತ್ತಿದೆ. ಓರುಗಂಟಿ ಹರಿಹರಯ್ಯ, ಕೆ. ಗಣೇಶ್ ಹಾಗೂ ಗಿರಿಜಾಪತಿಯವರು ಕೆಲವು ಹೊಸ ನಮೂನೆಯ ನಾಣ್ಯಗಳನ್ನು ಬೆಳಕಿಗೆ ತಂದಿದ್ದಾರೆ. ಅವುಗಳಲ್ಲಿ ಮುಖ್ಯವಾದುವು, ಶ್ರೀ ರಂಗರಾಯನ ಚಿತ್ರವಿರುವ ನಾಣ್ಯ, ಹಾಗೂ ನಂದಿನಮೂನೆಯ ನಾಣ್ಯ, ವಿಜಯನಗರದಲ್ಲಿ ಬೆಳ್ಳಿಯ ನಾಣ್ಯಗಳು ಬಲು ಕಡಿಮೆ ಎಂದು ಭಾವಿಸಲಾಗಿದ್ದಿತು. ಶಶಿಕಾಂತ ಧೋಪಟೆಯವರು ಹರಿಹರನ ಅನೇಕ ನಮೂನೆಯ ಬೆಳ್ಳಿಯ ನಾಣ್ಯಗಳನ್ನು ಹಂಪೆಯ ಪ್ರದೇಶದಲ್ಲಿ ಪತ್ತೆ ಮಾಡಿದ್ದಾರೆ. ಶೈಲೇಂದ್ರ ಭಂಡಾರೆ ಹಾಗೂ ಸುಬೋಧ ಪೇಠೆಯವರು ಅನೇಕ ಹೊಸ ನಮೂನೆಯ ಬೆಳ್ಳಿಯ ನಾಣ್ಯಗಳನ್ನು ಬೆಳಕಿಗೆ ತಂದಿದ್ದು ವಿಜಯನಗರ ಕಾಲದಲ್ಲಿ ಬೆಳ್ಳಿಯ ನಾಣ್ಯಗಳು ಹೇರಳವಾಗಿದ್ದುವು ಎಂಬುದನ್ನು ತೋರಿಸಿಕೊಟ್ಟಿದ್ದಾರೆ. ಓರುಗಂಟಿ ಹರಿಹರಯ್ಯನವರು ಬಹಳ ಕುತೂಹಲಕರವಾದ ವಿಜಯವನಗರದ ಬೆಳ್ಳಿಯ ಮುದ್ರೆಯನ್ನು ಪತ್ತೆ ಮಾಡಿದ್ದಾರೆ. ಇದು ವಿಜಯನಗರ ದೊರೆ ತಿರುಮಲರಾಯನ ಕಾಲದ ಕಾಜಿಯೊಬ್ಬನಿಗೆ ಸೇರಿದ ಮುದ್ರೆ. ನಾಗರೀಲಿಪಿಯಲ್ಲಿ 'ಶ್ರೀ ತಿರುಮಲ ನವಾಬ ಕಾಜಿ' ಎಂಬ ಬರಹವಿದೆ.

ಎ. ಸೀತಾರಾಮನ್ ಅವರು ರಾಮಾನುಜಾಚಾರ್ಯರಿಗೆ ಸಂಬಂಧಿಸಿದ ಒಂದು ನಾಣ್ಯವನ್ನು ಪತ್ತೆ ಮಾಡಿದ್ದಾರೆ. ಇದೊಂದು ತಾಮ್ರದ ನಾಣ್ಯ. ಮುಮ್ಮುಖದಲ್ಲಿ ಪದ್ಮಾಸನದಲ್ಲಿ ಕುಳಿತಿರುವ ರಾಮಾನುಜಾಚಾರ್ಯರ ಚಿತ್ರವಿದೆ. ಹಿಮ್ಮುಖದಲ್ಲಿ ಶ್ರೀ ಪಟ್ಟಣ ಎನ್ನುವ ಹನ್ನೆರಡನೇ ಶತಮಾನದ ಕನ್ನಡ ಬರಹವಿದೆ. ಇದೊಂದು ಮಹತ್ವದ ಸಂಶೋಧನೆ. ಇದೇ ಸಂಶೋಧಕರು ಕರೂರಿನಲ್ಲಿ ಅಮರಾವತೀ ನದಿಯ ದಂಡೆಯಲ್ಲಿದ್ದ ಇನ್ನೊಂದು ನಾಣ್ಯವನ್ನು ಬೆಳಕಿಗೆ ತಂದಿದ್ದಾರೆ. ಅದರ ಮುಮ್ಮುಖದಲ್ಲಿ ದೇವಾಲಯವಿದೆ; ಹಿಮ್ಮುಖದಲ್ಲಿ ಮೂರು ಸಾಲುಗಳು ಪೋಸಳೇಶ್ವರ ಎನ್ನುವ ಹದಿಮೂರನೆಯ ಶತಮಾನದ ತಮಿಳು ಲಿಪಿಯಲ್ಲಿವೆ. ತಮಿಳುನಾಡಿನ ರಾಜಕೀಯದಲ್ಲಿ ಸಕ್ರಿಯವಾಗಿ ಪಾತ್ರ ವಹಿಸಿದ್ದ ಹೊಯ್ಸಳದೊರೆ ಸೋಮೇಶ್ವರನ ನಾಣ್ಯವಿದೆಂದು ಬಾವಿಸಲು ಯಾವ ಅಡ್ಡಿಯೂ ಇಲ್ಲ. ತಮಿಳುನಾಡಿನ ಹೊಯ್ಸಳ ರಾಜ್ಯದಲ್ಲಿ ಚಲಾವಣೆಗೋಸ್ಕರ ಈ ನಾಣ್ಯವನ್ನು ಟಂಕಿಸಿರಬೇಕು. ಏಕೆಂದರೆ ಬರಹ ತಮಿಳಿನಲ್ಲಿದೆ. ಗಿರಿಜಾಪತಿ ಹಾಗೂ ಗಣೇಶ್ ಅವರು

ಒಂದು ಕಳಚೂರಿ ನಾಣ್ಯವನ್ನು ಪತ್ತೆ ಮಾಡಿ, ಅದರ ಮೇಲೆ 'ಬಸವಣನವರ ಭಟರು' ಎಂಬ ಕನ್ನಡ ಬರಹವಿದೆ ಎಂದು ಹೇಳಿ, ಈ ನಾಣ್ಯ ಬಸವಣ್ಣನವರಿಗೆ ಸಂಬಂಧಿಸಿದುದು ಎಂದು ತೀರ್ಮಾನಿಸಿದ್ದಾರೆ. ಆದರೆ ಇದರಲ್ಲಿ ಖಚಿತತೆಯಿಲ್ಲ.

ಇತ್ತೀಚೆಗೆ ಒಂದು ಮಹತ್ವದ ನಾಣ್ಯ ಬೆಳಕಿಗೆ ಬಂದಿತು. ಅದು ವಿಜಯ ನಗರದ ಬೆಳ್ಳಿಯ ನಾಣ್ಯ. ಡಾ॥ ಆರ್. ಗೋಪಾಲ್ ರವರು ಮೈಸೂರಿನಲ್ಲಿ ಮೇ ತಿಂಗಳಿನಲ್ಲಿ ನಡೆದ ವಿಚಾರ ಸಂಕಿರಣದಲ್ಲಿ ಈ ನಾಣ್ಯವನ್ನು ಕುರಿತು ಪ್ರಬಂಧ ಮಂಡಿಸುವ ಸಲುವಾಗಿ ಈ ನಾಣ್ಯವನ್ನು ತೋರಿಸಿದರು. ಈ ನಾಣ್ಯದ ಮಹತ್ವವೆಂದರೆ, ಈ ನಾಣ್ಯದ ಮುಮ್ಮುಖದಲ್ಲಿ 'ಹವರಡೂವರೆ' ಎನ್ನುವ ಬರಹವಿದೆ. ಹಿಂಭಾಗದಲ್ಲಿ ಆನೆಯ ಚಿತ್ರವಿದೆ. ಹ ಎನ್ನುವುದು ಹಣವನ್ನು ಸೂಚಿಸಿದರೆ ಕನ್ನಡ ಲಿಪಿಯ ೨ ಮತ್ತು ಅದರ ಪಕ್ಕದಲ್ಲಿ ಎರಡು ಗೆರೆಗಳು ಅರ್ಧವನ್ನು ಸೂಚಿಸುತ್ತವೆ. (೨॥). ಸಾಮಾನ್ಯವಾಗಿ ಹಿಂದೂ ನಾಣ್ಯಗಳ ಮೇಲೆ ನಾಣ್ಯದ ಹೆಸರಾಗಲೀ, ಅದರ ಮೌಲ್ಯವಿರುವುದಿಲ್ಲವೆಂಬುದು ಎಲ್ಲರಿಗೂ ತಿಳಿದಿರುವ ಸಂಗತಿ. ಆದರೆ ಇದು ಮಹಮ್ಮದೀಯರ ನಾಣ್ಯಗಳ ಮೇಲೆ ಮಾತ್ರ ಕಂಡುಬರುತ್ತದೆ. ಆದುದರಿಂದ ಈ ಪ್ರಸ್ತುತ ವಿಜಯನಗರ ನಾಣ್ಯ, ನಾಣ್ಯದ ಹೆಸರು ಮತ್ತು ಮೌಲ್ಯವನ್ನು ಹೊಂದಿರುವ ಮೊಟ್ಟಮೊದಲನೆಯ ಭಾರತೀಯ ನಾಣ್ಯ ಎಂಬ ಗೌರವಕ್ಕೆ ಪಾತ್ರವಾಗುತ್ತದೆ. ಜೊತೆಗೆ ದಶಮಾಂಶ ಪದ್ಧತಿಯ ಅನುಕೂಲಗಳನ್ನು ವಿಜಯನಗರದ ಅರಸರು ಕಂಡು ಕೊಂಡಿದ್ದರು ಎನ್ನುವ ಹೊಸ ವಿಷಯವೂ ಇದರಿಂದ ತಿಳಿಯಬರುತ್ತದೆ.

ಕರ್ನಾಟಕ ಸರ್ಕಾರದ ಪುರಾತತ್ವ ಇಲಾಖೆಯ ನಿರ್ದೇಶಕರಾದ ಡಾ॥ ದೇವರಾಜ್ ಅವರು ಈ ಪ್ರಮುಖ ನಾಣ್ಯದಬಗ್ಗೆ ಒಂದು ಪತ್ರಿಕಾ ಹೇಳಿಕೆಯನ್ನು ಕೊಟ್ಟರು. ಅನೇಕ ಪತ್ರಿಕೆಗಳು ಚಿತ್ರ ಸಮೇತ ಈ ನಾಣ್ಯವನ್ನು ವರದಿಮಾಡಿದವು. ಇದನ್ನು ನೋಡಿದ ಅನೇಕ ನಾಣ್ಯಸಂಗ್ರಹಕಾರರು 'ಈ ನಾಣ್ಯವೇನೂ ಹೊಸದಲ್ಲ; ನನ್ನ ಸಂಗ್ರಹದಲ್ಲಿ ಹತ್ತು-ಹದಿನೈದು ವರ್ಷಗಳಿಂದಲೂ ಇದೆ' ಎಂದು ಉದ್ಗಾರವೆತ್ತಿದರು. ಯಾವ ಒಂದು ಪ್ರಾಚೀನ ಅವಶೇಷವನ್ನು ವಿದ್ವಾಂಸರಿಗೆ ತೋರಿಸದೆ ಭದ್ರವಾಗಿಟ್ಟು ಕೊಂಡರೆ ಹೀಗೇ ಆಗುತ್ತದೆ. ಇಂತಹ ಮಹತ್ವದ ನಾಣ್ಯವನ್ನು, ಅದರ ಪ್ರಾಮುಖ್ಯತೆಯನ್ನು ಅರಿಯದೆ ಸಂಗ್ರಹದಲ್ಲಿಟ್ಟುಕೊಂಡರೆ ಇತಿಹಾಸಕ್ಕೆ ಏನೂ ಉಪಯೋಗವಾಗುವುದಿಲ್ಲ. ಆದುದರಿಂದ ನನ್ನ ನಾಣ್ಯ ಸಂಗ್ರಹಕಾರ ಮಿತ್ರರಲ್ಲಿ ವಿನಂತಿ ಎಂದರೆ, ನಿಮ್ಮಲ್ಲಿರುವ ನಾಣ್ಯಗಳನ್ನು ವಿದ್ವಾಂಸರಿಗೆ ತೋರಿಸಿ, ಅವುಗಳ ವಿಷಯದಲ್ಲಿ ಮಾಹಿತಿ ಹಾಗೂ ಮಾರ್ಗದರ್ಶನ ಪಡೆಯಿರಿ. ಆಗ ನಿಮ್ಮ ನಾಣ್ಯಗಳಿಗೆ ಜೀವ ಬರುತ್ತದೆ; ಇಲ್ಲದಿದ್ದರೆ ಅವು ನಿರ್ಜೀವ ಅವಶೇಷಗಳಾಗಿ ಬಿದ್ದಿರುತ್ತವೆ. ನಿಮಗೂ ಉಪಯೋಗವಿಲ್ಲ; ಇತಿಹಾಸಕ್ಕೂ ಉಪಯೋಗವಿಲ್ಲ. ಪ್ರಾಚೀನ ನಾಣ್ಯಗಳಿಗೆ ಈ ಗತಿ ಬರಬಾರದು ಎಂದು ವಿನಂತಿಸಿಕೊಳ್ಳುತ್ತೇನೆ.

ನಾಣ್ಯಶಾಸ್ತ್ರ ಅಧ್ಯಯನದಲ್ಲಿ ಒಂದು ಹೊಸ ಬೆಳವಣಿಗೆಯನ್ನು ಈಗ ಕಾಣುತ್ತಿದ್ದೇವೆ. ಹಿಂದಿನ ವಿದ್ವಾಂಸರು ಮಾಡಿದಂತೆ ಹಿಮ್ಮುಖ-ಮುಮ್ಮುಖಗಳ ವರ್ಣನೆ ಇತಿಹಾಸಕಾರನಿಗೆ ಹೆಚ್ಚಿನ ಮಾಹಿತಿಯನ್ನು ಒದಗಿಸುವುದಿಲ್ಲ. ಶಾಸನಗಳಲ್ಲಿ, ನಾಣ್ಯ ಶಾಸ್ತ್ರ ಗ್ರಂಥಗಳಲ್ಲಿ ಈ ರೀತಿಯ ಮಾಹಿತಿ ದೊರಕುತ್ತದೆ. ನಾಣ್ಯಗಳನ್ನು ಟಂಕಿಸುತ್ತಿದ್ದ ವಿಧಾನಗಳೂ ಕೂಡ ಶಾಸನಗಳಿಂದ ಗೊತ್ತಾಗುತ್ತದೆ. ಉದಾಹರಣೆಗೆ ಶಾಸನಗಳಿಂದ ನಲವತ್ತು ವಿವಿಧ ರೀತಿಯ ಗದ್ಯಾಣಗಳು ಗೊತ್ತಾಗುತ್ತವೆ. ರಾಜನಹೆಸರಿನ ನಾಣ್ಯಗಳು (ಕಂಠೀರಾಯಿ, ವೀರರಾಯಿ), ನಾಣ್ಯಗಳ ಆಕಾರ (ದೊಡ್ಡ ಗದ್ಯಾಣ, ಚಿಕ್ಕವರಾಹ), ಟಂಕಶಾಲೆಯ ಹೆಸರು (ಬಾರಕೂರು ಗದ್ಯಾಣ, ಲೊಕ್ಕಿ ಗದ್ಯಾಣ), ಚಿಹ್ನೆಗಳು (ಚಕ್ರ ಗದ್ಯಾಣ, ಅಂಕುಶ ಕಠಾರಿ ಗದ್ಯಾಣ), ನಾಣ್ಯದ ಶುದ್ಧತೆ (ಶುದ್ಧ ವರಾಹ), ನಾಣ್ಯದ ಲೋಹ (ಬೆಳ್ಳಿಯ ಗದ್ಯಾಣ, ಸುವರ್ಣವರಾಹ), ಬೆಣ್ಣೆ ಮುದ್ದೆ ನಾಣ್ಯ, ತಿರುಪತಿ ಹಣ ಇತ್ಯಾದಿ ಪದಗಳು ಶಾಸನಗಳಲ್ಲಿ ಕಾಣಸಿಗುತ್ತವೆ. ವಿಜಯನಗರದ ನಾಣ್ಯಗಳಿಗೆ ಸಂಬಂಧಿಸಿದಂತೆ ಶಾಸನ, ವಿದೇಶಿಯ ಬರವಣಿಗೆ ಹಾಗೂ ಕನ್ನಡ ಗ್ರಂಥಗಳ ಮಾಹಿತಿಯನ್ನು ಅಧ್ಯಯನ ಮಾಡಿದ್ದೇವೆ. ಇದರಿಂದ ವಿಜಯನಗರದ ನಾಣ್ಯ ಪದ್ದತಿಯ ಮಾಹಿತಿ ಇತಿಹಾಸಕಾರನಿಗೆ ಹೆಚ್ಚುತ್ತದೆ. ಮನೌಮೀಚೌಪದ ಎನ್ನುವ ಹದಿನೆಂಟನೇಯ ಶತಮಾನದ ಕನ್ನಡ ಗ್ರಂಥದಲ್ಲಿ ಅನೇಕ ನಾಣ್ಯಗಳ ಹೆಸರು ಕಾಣಬರುತ್ತವೆ. ರಾಜಾದಿತ್ಯ ವ್ಯವಹಾರಗಣಿತವೂ ಈ ದೃಷ್ಟಿಯಿಂದ ಪರಾಮರ್ಶಿಸಬೇಕಾದ ಗ್ರಂಥ. ಈ ರೀತಿ ಎಲ್ಲ ಕನ್ನಡ ಶಾಸನಗಳು ಹಳೆಗ್ರಂಥಗಳ ಸಮಗ್ರ ಅಧ್ಯಯನ ಮಾಡಿ ನಾಣ್ಯ ಶಾಸ್ತ್ರಕ್ಕೆ ಸಂಬಂಧಿಸಿ ವಿವರ ಕಲೆಹಾಕುವುದು ಅವಶ್ಯಕವೆಂಬುದನ್ನು ಮತ್ತೆ ಹೇಳಬೇಕಾಗಿಲ್ಲ. ಕರ್ನಾಟಕದಲ್ಲಿ ಈವರೆಗೆ ದೊರಕಿರುವ ನಾಣ್ಯರಾಶಿಗಳೆಲ್ಲವೂ ಪುರಾತತ್ವ ಇಲಾಖೆಯ ವಶದಲ್ಲಿರುವುದರಿಂದ, ಈ ಎಲ್ಲ ನಾಣ್ಯರಾಶಿಗಳ ಸೂಚಿಯೊಂದು ತುರ್ತಾಗಿ ತಯಾರಾಗಬೇಕಾಗದ ಅವಶ್ಯಕತೆಯಿದೆ. ಆ ನಂತರ ಈ ನಾಣ್ಯಗಳನ್ನು ವಿಶೇಷವಾಗಿ ಅಧ್ಯಯನ ಮಾಡಲು ಸಹಾಯವಾಗುತ್ತದೆ. ಇನ್ನೊಂದು ವಿಷಯ, ಸರಕಾರಿ ಮತ್ತು ಖಾಸಗಿ ಸಂಗ್ರಹಾಲಯಗಳಲ್ಲಿರುವ ನಾಣ್ಯಗಳನ್ನು ವಿದ್ವಾಂಸರಿಗೆ ಅಧ್ಯಯನಕ್ಕಾಗಿ ಒದಗಿಸಬೇಕು; ಎಲ್ಲ ಸೌಲಭ್ಯಗಳನ್ನೂ ಮಾಡಿ ಕೊಡಬೇಕು. ಇದು ನಾಣ್ಯಶಾಸ್ತ್ರ ಬೆಳವಣಿಗೆಗೆ ಬಲುಮುಖ್ಯವಾದುದು.

ಕರ್ನಾಟಕದಲ್ಲಿ ಆಳಿದ ರಾಜವಂಶಗಳ ಇತಿಹಾಸವನ್ನು ಕುರಿತು ಹೇಳುವುದಾದರೆ ಈ ಕಾರ್ಯ ಸುಮಾರಾಗಿ ಆಗಿದೆ ಎನ್ನಬಹುದು. ಮೊರೇಸ್ ಅವರಿಂದ ಹಿಡಿದು ಇತ್ತೀಚಿನವರೆಗೆ ರಾಜವಂಶಗಳನ್ನು ಕುರಿತಾದ ಇತಿಹಾಸ ಗ್ರಂಥಗಳು ಪ್ರಕಟವಾಗಿವೆ. ಆದರೆ ಹೊಯ್ಸಳರನ್ನು ಕುರಿತಾದ ಇತಿಹಾಸ ಗ್ರಂಥ ಇನ್ನೂ ಪ್ರಕಟವಾಗಬೇಕಾಗಿದೆ. ಹೊಯ್ಸಳರ ಶಾಸನ ಸಂಪತ್ತು, ನಾಣ್ಯ ಸಂಪತ್ತು, ಸಾಹಿತ್ಯ ಆಕರ, ವಾಸ್ತುಶಿಲ್ಪಗಳನ್ನು ಗಮನಿಸಿದರೆ, ನೀಲಕಂಠ ಶಾಸ್ತ್ರಿಗಳು ಚೋಳರನ್ನು ಕುರಿತು ಬರೆದ ಬೃಹತ್ ಗ್ರಂಥದ ಮಾದರಿಯಲ್ಲಿ, ಹೊಯ್ಸಳರ ಇತಿಹಾಸ ರಚನೆಯಾಗಬೇಕಾಗಿದೆ. ಇಂದಿಗೂ ನಾವು ವಿಜಯನಗರವನ್ನು ಕುರಿತು ತಮಿಳು, ತೆಲುಗು ಇತಿಹಾಸಕಾರರು ರಚಿಸಿದ ಗ್ರಂಥಗಳನ್ನೇ ಉಪಯೋಗಿಸುತ್ತಿದ್ದೇವೆ. ಅವುಗಳ ನ್ಯೂನತೆಯನ್ನು ಬೊಟ್ಟುಮಾಡಿ ತೋರಿಸುತ್ತೇವೆ. ಆದರೆ ಕನ್ನಡ ಶಾಸನಗಳು ಹಾಗೂ ಕನ್ನಡ ಆಕರಗಳನ್ನು ಉಪಯೋಗಿಸಿಕೊಂಡು ವಿಜಯನಗರದ ಸಮಗ್ರ ಇತಿಹಾಸವನ್ನು ರಚಿಸುವಲ್ಲಿ ವಿಫಲರಾಗಿದ್ದೇವೆ. ಇದು ತುರ್ತಾಗಿ ಆಗಬೇಕಾದ ಕಾರ್ಯ. ನನ್ನ ಗುರುಗಳಾದ ಓರುಗಂಟಿ ರಾಮಚಂದ್ರಯ್ಯನವರು ರಚಿಸಿದಂತಹ ವಿಜಯನಗರ ದೊರೆ ಕೃಷ್ಣದೇವರಾಯನನ್ನು ಕುರಿತು ಒಂದು ಏಕವಿಷಯ ಪ್ರಬಂಧವನ್ನೂ ಯಾವ ಕರ್ನಾಟಕದ ಇತಿಹಾಸಕಾರನೂ ರಚಿಸಿಲ್ಲದೇಇರುವುದು ಸೋಜಿಗದ ವಿಷಯ.

ಕರ್ನಾಟಕದ ಇತಿಹಾಸದ ವಿವಿಧ ಮುಖಗಳನ್ನು ಕುರಿತು ಹತ್ತಾರು ಮಹಾ ಪ್ರಬಂಧಗಳು ವಿವಿಧ ವಿಶ್ವವಿದ್ಯಾನಿಲಗಳಿಗೆ ಒಪ್ಪಿಸಲ್ಪಟ್ಟಿವೆ. ಇವು ಎಲ್ಲವೂ ಪ್ರಕಟಣೆಗೆ ಯೊಗ್ಯವಲ್ಲದಿರಬಹುದು. ಇವುಗಳಲ್ಲಿ ಕೆಲವಾದರೂ ಉತ್ತಮ ಮಾಹಿತಿಯನ್ನು ಹೊಂದಿದ್ದು ಇತಿಹಾಸಕಾರರಿಗೆ ಉಪಯೋಗವಾಗುವಂತಹ ಮಹಾಪ್ರಬಂಧಗಳು. ವಿಶ್ವವಿದ್ಯಾನಿಲಯದ ಪ್ರಸಾರಾಂಗಗಳು ಇಂತಹ ಮಹಾಪ್ರಬಂಧಗಳನ್ನು ಶೀಘ್ರವಾಗಿ ಪ್ರಕಟಿಸುವ ವ್ಯವಸ್ಥೆ ತಾನೇ ತಾನಾಗಿ ಆಗಬೇಕು. ಇಲ್ಲದಿದ್ದರೆ ಇಂತಹ ಇತಿಹಾಸ ಆಕರಗಳಿಂದ ವಂಚಿತರಾಗುತ್ತಾರೆ.

ಇತಿಹಾಸ ರಚನಾ ಕ್ಷೇತ್ರದಲ್ಲಿ 'ಇಜಂ'ಗಳ ಹಾವಳಿ ಜಾಸ್ತಿಯಾಗುತ್ತಿದೆ. ದೃಷ್ಟಿಕೋನಗಳ ಪ್ರಕಾರ ಇತಿಹಾಸವನ್ನು ಬರೆಯುವ ಪ್ರವೃತ್ತಿ ಹೆಚ್ಚುತ್ತಿದೆ. ಇತಿಹಾಸ ಎಂಬ ಪದದ ಅರ್ಥವನ್ನೇ ತಲೆಕೆಳಗು ಮಾಡಿ ಘಟನಾವಳಿಗಳ ವ್ಯಾಖ್ಯೆಯನ್ನು ದೃಷ್ಟಿ ಕೋನಗಳಿಗೆ ಸರಿಹೊಂದುವಂತೆ ಬದಲಾಯಿಸಲಾಗುತ್ತಿದೆ. ಇತಿಹಾಸ ರಚನೆಯ ಮೂಲ ತತ್ವವಾದ 'ವಿಷಯವು ಪವಿತ್ರವಾದುದು. ವ್ಯಾಖ್ಯೆಯು ವೈಯಕ್ತಿಕವಾದುದು' ಎಂಬುದನ್ನು ಗಾಳಿಗೆ ತೂರಿದಂತೆ ಕಾಣುತ್ತಿದೆ. ವ್ಯಾಖ್ಯೆಯನ್ನೇ ವಿಷಯವನ್ನಾಗಿ ಪರಿವರ್ತಿಸುವ, ನಂಬಿಸುವ ಪ್ರಯತ್ನಗಳಿಂದಾಗಿ ಸಾಮಾನ್ಯ ಓದುಗನಿಗೆ ಗಾಬರಿಯಾಗುತ್ತಿದೆ. ಹಾಗಾಗಿ ಇತಿಹಾಸಕಾರನನ್ನು ಸಂಶಯದೃಷ್ಟಿಯಿಂದ ನೋಡಲು ಪ್ರಾರಂಭಿಸಿದ್ದಾರೆ. ಆತನ ಗೌರವ ಕಡಿಮೆಯಾಗುತ್ತಿದೆ. ಇದೇ ಪ್ರವೃತ್ತಿ ಮುಂದುವರಿದರೆ, ಇತಿಹಾಸಕಾರ ಮಧ್ಯಯುಗೀನ ಹೊಗಳುಭಟ್ಟನಾಗಿ ತನ್ನ ಮೌಲ್ಯವನ್ನು ಸಂಪೂರ್ಣ ಕಳೆದುಕೊಳ್ಳಬೇಕಾಗುತ್ತದೆ. ಈ ಕಾಲ ಬರದಂತೆ ಕಾಪಾಡಿಕೊಳ್ಳುವುದು ಎಲ್ಲ ಇತಿಹಾಸಕಾರರ ಕರ್ತವ್ಯ. ಈ ದಿಸೆಯಲ್ಲಿ ಕರ್ನಾಟಕ ಇತಿಹಾಸ ಅಕಾದೆಮಿಯ ಪಾತ್ರ ಹಿರಿದಾದುದು. ತನ್ನ ಚಟುವಟಿಕೆಗಳ ಮೂಲಕ, ಇತಿಹಾಸದ ಪಾವಿತ್ರ್ಯತೆಯನ್ನು ಕಾಪಾಡಿಕೊಂಡು ಬರಲು ಮಾರ್ಗದರ್ಶನ ನೀಡಬೇಕು. ವಿಷಯಪ್ರಧಾನ ಇತಿಹಾಸದ ಕಡೆಗೆ ಜನರ ಮನಸ್ಸನ್ನು ಬದಲಿಸಬೇಕು. ಇಷ್ಟೊಂದು ಸಾಧನ ಸಂಪತ್ತು, ವಿದ್ವತ್ ಸಂಪತ್ತು ಇದ್ದಾಗ್ಯೂ ಕೂಡ ಅಧಿಕೃತವಾದ ಕರ್ನಾಟಕದ ಇತಿಹಾಸ ರಚನೆಯಾಗಿಲ್ಲದೇ ಇರುವುದು ದುಃಖದ ಸಂಗತಿ. ಹತ್ತು ಸಂಪುಟಗಳಲ್ಲಿ ಕರ್ನಾಟಕ ಇತಿಹಾಸವನ್ನು ಪ್ರಕಟಿಸುವ ಅನೇಕ ಸಂಸ್ಥೆಗಳ ನಿರ್ಧಾರ ಹುಸಿಯಾಗಿವೆ. ಈ ದಿಸೆಯಲ್ಲಿ ಇತಿಹಾಸ ಅಕಾದೆಮಿಯು ಪ್ರಯತ್ನಿಸುವ ಸಾಧ್ಯತೆಯನ್ನು ಅದರ ಪದಾಧಿಕಾರಿಗಳು ಪರಿಶೀಲಿಸಬೇಕೆಂದು ಸೂಚಿಸ ಬಯಸುತ್ತೇನೆ.

ಕರ್ನಾಟಕ ಇತಿಹಾಸವನ್ನು ಕುರಿತು ಹತ್ತಾರು ಪಠ್ಯಪುಸ್ತಕಗಳು ಪ್ರಕಟವಾಗಿವೆ ಮತ್ತು ಪ್ರಕಟವಾಗುತ್ತಿವೆ. ಒಂದೆರಡನ್ನು ಬಿಟ್ಟರೆ ಮಿಕ್ಕೆಲ್ಲವೂ ಕೆಟ್ಟ ಪುಸ್ತಕಗಳೆಂದರೆ ಯಾರೂ ತಪ್ಪಾಗಿ ಭಾವಿಸಬಾರದು. ನಾಲ್ಕಾರು ಪುಸ್ತಕಗಳನ್ನು ಇಟ್ಟುಕೊಂಡು, ಅವುಗಳಿಂದ ನಾಲ್ಕಾರು ಪುಟಗಳನ್ನು ಎತ್ತಿಕೊಂಡರೆ ಪಠ್ಯ ಪುಸ್ತಕವಾಯಿತು ಎಂಬ ಭಾವನೆಯಿಂದ ಬರೆದ ಪುಸ್ತಕಗಳೇ ಜಾಸ್ತಿ. ಅಮಾಯಕ ವಿದ್ಯಾರ್ಥಿಗಳು ಈ ಪುಸ್ತಕಗಳನ್ನು ಓದಿ ತಪ್ಪು ಕಲ್ಪನೆಯನ್ನು ಮಾಡಿಕೊಂಡು ಇತಿಹಾಸದ ವಿಷಯದಲ್ಲಿಯೇ ತಾತ್ಸಾರ ಮೂಡಿಸಿಕೊಳ್ಳುತ್ತಾರೆ. ನಾಯಿಕೊಡೆಗಳಂತೆ ತಲೆಯೆತ್ತುತ್ತಿರುವ ಮೂರನೆಯ ದರ್ಜೆಯ ಪಠ್ಯಪುಸ್ತಕಗಳಿಂದ ಬಲು ಹಾನಿಯಾಗುತ್ತಿದೆ. ಕನ್ನಡದ ಅಕ್ಷರಗಳೂ ಗೊತ್ತಿಲ್ಲದ, ಶಾಸನವೇನೆಂದರೆ ತಿಳಿಯದ, ವಾಸ್ತುಶಿಲ್ಪ ಕೃತಿಗಳ ಪರಿಚಯವಿಲ್ಲದವರು ಕರ್ನಾಟಕ ಇತಿಹಾಸ ರಚನೆಗೆ ಕೈಹಾಕುತ್ತಿರುವುದು ದುರ್ದೈವದ ಸಂಗತಿ. ಅರ್ಥಶಾಸ್ತ್ರದಲ್ಲಿ ನೋಬಲ್ ಪಾರಿತೋಷಕ ಪಡೆದಿರುವ ಪಾಲ್ ಸ್ಯಾಮುಯಲ್‌ಸೆನ್ ಹೇಳುತ್ತಾರೆ. 'ಒಂದು ದೇಶದ ಕಾನೂನುಗಳನ್ನು ಯಾರು ರಚಿಸುತ್ತಾರೆ ಎನ್ನುವುದು ಮುಖ್ಯವಲ್ಲ; ಆದೇಶದ ಅರ್ಥಶಾಸ್ತ್ರದ ಪಠ್ಯಪುಸ್ತಕವನ್ನು ಯಾರು ಬರೆಯುತ್ತಾರೆ ಎನ್ನುವುದು ಮುಖ್ಯ'. ಇದು ಇತಿಹಾಸದ ಪಠ್ಯಪುಸ್ತಕಗಳಿಗೂ ಅನ್ವಯಿಸುತ್ತದೆ ಎಂದು ಪ್ರತ್ಯೇಕವಾಗಿ ಹೇಳಬೇಕಾಗಿಲ್ಲ.

ಹೊಸ ಚಿಂತನೆಯ ಹೆಸರಿನಲ್ಲಿ ಹಳೆಯ ಅಭಿಪ್ರಾಯಗಳನ್ನು ಮತ್ತು ಸಿದ್ಧಾಂತಗಳನ್ನು ಹೀಯಾಳಿಸುವ ಪ್ರಯತ್ನಗಳು ನಡೆಯುತ್ತಿವೆ. ಇದರ ಪ್ರಕಾರ ಅಶೋಕನು ಪ್ರಾಪಗಾಂಡಿಸ್ಟ್ ಆಗುತ್ತಾನೆ; ಸಮುದ್ರಗುಪ್ತನು ಸಾಮ್ರಾಜ್ಯಶಾಹೀ ದಾಹ ಉಳ್ಳವನಾಗುತ್ತಾನೆ; ವಿಷ್ಣುವರ್ಧನನು ರಾಮಾನುಜಾಚಾರ್ಯರ ಆಡಿಯಾಳಾಗಿ ಕಾಣಬರುತ್ತಾನೆ; ಬುಕ್ಕ-ಹರಿಹರರು ವಿದ್ಯಾರಣ್ಯರ ದಾಸರಾಗಿ ಕಾಣಬರುತ್ತಾರೆ. ಅದೇ ರೀತಿಯಲ್ಲಿ ನೀಲಕಂಠಶಾಸ್ತ್ರಿ, ಮಹಾಲಿಂಗಂ, ಪಿ. ಬಿ. ದೇಸಾಯಿ, ವೆಂಕಟರಮಣಯ್ಯ, ರಾಮಚಂದ್ರಯ್ಯ ಮುಂತಾದವರು ಅಧಃಪತನದ ಇತಿಹಾಸಕಾರರಾಗಿ ಕಾಣಬರುತ್ತಾರೆ. ಈ ರೀತಿಯ ಹೊಸ ಚಿಂತನೆಯಿಂದ ದೂರವಿದ್ದಷ್ಟೂ ಕ್ಷೇಮ; ನಮಗೆ ಮಾತ್ರವಲ್ಲ ಇತಿಹಾಸಕ್ಕೂ ಕೂಡ ಎಂದು ಹೇಳಬಯಸುತ್ತೇನೆ.

-೭-

ಬದಲಾಗುತ್ತಿರುವ ಇಂದಿನ ದಿನಗಳಲ್ಲಿ ವಿಶ್ವವಿದ್ಯಾನಿಲಯಗಳ, ಇತಿಹಾಸ ಮತ್ತು ಪುರಾತತ್ವ ವಿಭಾಗಗಳು ಬೋಧನೆಗೇ ಹೆಚ್ಚು ಗಮನ ಕೊಡಬೇಕಾಗಿರುವುದು, ಕ್ಷೇತ್ರಕಾರ್ಯ, ಉತ್ಖನನ ಮುಂತಾದ ಕಾರ್ಯಗಳನ್ನು ನಡೆಸಲು ಸಾಕಷ್ಟು ಸಮಯ ಮತ್ತು ಹಣವಿಲ್ಲದೇ ಸೊರಗುತ್ತಿರುವುದನ್ನು ನಾವು ಕಾಣುತ್ತಿದ್ದೇವೆ. ಆದರೆ ಕರ್ನಾಟಕ ಸಂಸ್ಕೃತಿಯ ಅಧ್ಯಯನವನ್ನೇ ಕೇಂದ್ರವಾಗಿಟ್ಟುಕೊಂಡು ಜನ್ಮ ತಾಳಿರುವ ಹಂಪಿಯ ಕನ್ನಡ ವಿಶ್ವವಿದ್ಯಾನಿಲಯ, ಕರ್ನಾಟಕ ಸರ್ಕಾರದ ಪುರಾತತ್ವ ಇಲಾಖೆ, ಪತ್ರಾಗಾರ ಇಲಾಖೆ, ಕನ್ನಡ ಸಂಸ್ಕೃತಿ ಇಲಾಖೆಗಳು ಈ ದಿಸೆಯಲ್ಲಿ ಕಾರ್ಯ ನಡೆಸಬೇಕು.

ಕನ್ನಡ ವಿಶ್ವವಿದ್ಯಾನಿಲಯ ಸೃಜನಶೀಲ ಸಾಹಿತ್ಯಕ್ಕೆ ಹೆಚ್ಚು ಗಮನಕೊಟ್ಟು ಇತಿಹಾಸ ಸಂಶೋಧನೆಗೆ ಗಮನ ಕೊಟ್ಟಂತೆ ಕಾಣುವುದಿಲ್ಲ. ಈಗ ಪುರಾತತ್ವ, ಶಾಸನಶಾಸ್ತ್ರ ಮುಂತಾದ ವಿಭಾಗಗಳನ್ನು ತೆರೆಯುವ ಸೂಚನೆಗಳು ಕಂಡುಬರುತ್ತಿರುವುದು ಇತಿಹಾಸದ ವಿದ್ಯಾರ್ಥಿಗಳಿಗೆ ಸ್ವಲ್ಪ ಸಮಾಧಾನವನ್ನು ತಂದು ಕೊಟ್ಟಿವೆ. ಅದಷ್ಟು ಶೀಘ್ರವಾಗಿ ಇತಿಹಾಸ ಸಂಶೋಧನೆಯ ಕಾರ್ಯವನ್ನು ಕೈಗೆತ್ತಿಕೊಂಡು ಕನ್ನಡ ಜನಗಳ ಆಶೋತ್ತರಗಳನ್ನು ಪೂರೈಸಬೇಕು. ಕರ್ನಾಟಕದ ಇತರ ಜಿಲ್ಲೆಗಳ ಎಪಿಗ್ರಾಫಿಯಾ ಕರ್ನಾಟಿಕ ಅನಾಥವಾಗಿದ್ದು, ಎಲ್ಲರನ್ನೂ ಕೈಬೀಸಿ ಕರೆಯುತ್ತಿದೆ. ಅದನ್ನು ಮಾಡುವ ಪುಣ್ಯ ಯಾರಿಗಿದೆಯೋ? ರಾಜವಂಶಗಳ ಶಾಸನ ಸಂಪುಟಗಳು, ನಾಣ್ಯಶಾಸ್ತ್ರ ಯಾದಿಗಳು, ಶಾಸನ ಸೂಚಿಗಳು ಮುಂತಾದವುಗಳನ್ನು ಸುಲಭವಾಗಿ ಹಂಪೆಯ ಕನ್ನಡ ವಿಶ್ವವಿದ್ಯಾನಿಲಯ ಮಾಡಬಹುದಾದ ಕೆಲಸಗಳು. ಅದೇ ರೀತಿಯಲ್ಲಿ ವಾಸ್ತುಶಿಲ್ಪ ಅಧ್ಯಯನವೂ ಮುಖ್ಯವಾದ ಕೆಲಸ. ಪರಿಣಿತರ ನೇತೃತ್ವದಲ್ಲಿ ಸಮಸ್ಯೆಯನ್ನು ಬಿಡಿಸಲು ಅನುಕೂಲವಾಗುವಂತಹ ಉತ್ಖನನಗಳನ್ನು ಮಾಡಬೇಕು. ಇವೆಲ್ಲವೂ ಕಷ್ಟ ಸಾಧ್ಯವಾದ ಕೆಲಸ; ಇದಕ್ಕೆ ಪರಿಣಿತರ ಹಾಗೂ ವಿದ್ವಾಂಸರ ನೆರವು ಹಾಗೂ ಮಾರ್ಗದರ್ಶನ ಅತ್ಯವಶ್ಯಕ. ವಿಶ್ವವಿದ್ಯಾನಿಲಯದ ಒಬ್ಬಿಬ್ಬರು ಉಪಾಧ್ಯಾಯರಿಂದ ಆಗುವ ಕೆಲಸವಿದಲ್ಲ. ಆದುದರಿಂದ ಸೂಕ್ತವಾದ ರೀತಿಯಲ್ಲಿ ತಜ್ಞರ ಮಾರ್ಗದರ್ಶದಲ್ಲಿ ಈ ಸಂಶೋಧನಾ ಕಾರ್ಯಗಳು ನಡೆಯಬೇಕು ಎನ್ನುವುದನ್ನು ಕನ್ನಡ ವಿಶ್ವನಿದ್ಯಾನಿಲಯದ ಅಧಿಕಾರಿಗಳು ಅರಿಯಬೇಕು.

ಇಷ್ಟೆಲ್ಲ ಸಂಪದ್ಭರಿತವಾದ ಇತಿಹಾಸ ಪರಂಪರೆಯನ್ನು ಹೊಂದಿರುವ ಕರ್ನಾಟಕದಲ್ಲಿ ಒಂದು ಕೇಂದ್ರ ಸಂಗ್ರಹಾಲಯವಿಲ್ಲದಿರುವುದು ಶೋಚನೀಯ. ಬೆಂಗಳೂರು ಸರ್ಕಾರಿ ಸಂಗ್ರಹಾಲಯವನ್ನು ಮೀರಿಸುವಂತಹ ಸಮಗ್ರ ಸಂಗ್ರಹಾಲಯವನ್ನು ತೆರೆಯುವ ಅವಕಾಶವನ್ನು ಹಂಪೆಯ ವಿಶ್ವವಿದ್ಯಾನಿಲಯ ಕಳೆದು ಕೊಳ್ಳಬಾರದು.

ವಿಶ್ವವಿದ್ಯಾನಿಲಯಗಳು ಉತ್ಖನನಗಳನ್ನು ಕೈಬಿಟ್ಟಂತೆ ತೋರುತ್ತಿದೆ. ಆದರೆ ಕರ್ನಾಟಕ ಸರ್ಕಾರದ ಪುರಾತತ್ವ ಇಲಾಖೆಯು ಈ ದಿಸೆಯಲ್ಲಿ ಉತ್ತಮ ಕೆಲಸ ಮಾಡುತ್ತಿದೆ. ತಲಕಾಡಿನ ಉತ್ಖನನ ಮೈಸೂರು ವಿಶ್ವವಿದ್ಯಾನಿಲಯ ಸಹಭಾಗಿತ್ವದಲ್ಲಿ ನಡೆದು ಅದರ ವರದಿ ಅಚ್ಚಿನ ಮನೆಯಲ್ಲಿದೆ. ಹೆಗ್ಗಡೆಹಳ್ಳಿಯ ಉತ್ಖನನವು ಮುಗಿದಿದ್ದು ವರದಿ ತಯಾರಾಗುತ್ತಿದೆ. ಸನ್ನತಿಯಲ್ಲಿ ಮಾತ್ರ ಉತ್ಖನನವು ಮಂದಗತಿಯಲ್ಲಿ ಸಾಗುತ್ತಿದೆ. ಆ ನೆಲೆಯು ಅಣೆಕಟ್ಟಿನಲ್ಲಿ ಮುಳುಗಿ ಹೋಗುವ ಭಯವಿರುವುದರಿಂದ, ಹೆಚ್ಚು ಮಂದಿ ವಿದ್ವಾಂಸರನ್ನು ಉಪಯೋಗಿಸಿಕೊಂಡು ಆದಷ್ಟು ಬೇಗನೆ ವ್ಯಾಪಕವಾಗಿ ಸನ್ನತಿಯಲ್ಲಿ ಉತ್ಖನನ ಮುಂದುವರಿಯಬೇಕು. ಈಗ ಅಲ್ಲಿ ದೊರಕಿರುವ ಅವಶೇಷಗಳನ್ನು ಗಮನಿಸಿದರೆ, ಕರ್ನಾಟಕ ಇತಿಹಾಸ ಪ್ರಾರಂಭದ ಕಾಲದ ಕುರುಹುಗಳು, ಮೌರ್ಯರ ನಗರ ಮುಂತಾದ ಮಹತ್ವದ ವಿಷಯಗಳು, ಬಲು ಕುತೂಹಲಕಾರಿಯಾದ ಶಾತವಾಹನ ನಾಣ್ಯಗಳು ಮುಂತಾದವು ದೊರಕುವ ನಿರೀಕ್ಷೆಯಿದೆ. ಈಗ ಎಲ್ಲರ ಲಕ್ಷ್ಯವೂ ಸನ್ನತಿಯ ಉತ್ಖನನದ ಮೇಲಿದೆ ಎಂದರೆ ಅತಿಶಯೋಕ್ತಿಯಾಗುವುದಿಲ್ಲ. ಆದುದರಿಂದ ಡಾ॥ ದೇವರಾಜ್ ಅವರು ಮತ್ತು ತಳವಾರ್ ಅವರು ಉತ್ಖನನದ ಗತಿಯನ್ನು ತೀವ್ರಗೊಳಿಸಬೇಕು; ಅವಶೇಷಗಳ ಅಧ್ಯಯನಕ್ಕೆ ಎಲ್ಲ ಏರ್ಪಾಡುಗಳನ್ನು ಮಾಡಬೇಕು.

ಒಟ್ಟಿನಲ್ಲಿ ಸನ್ನತಿಯ ಉತ್ಖನನ ಕರ್ನಾಟಕ ಇತಿಹಾಸದಲ್ಲೇ ಅತ್ಯಂತ ಮಹತ್ವವಾದ ಸ್ಥಾನವನ್ನು ಪಡೆಯುವುದರಲ್ಲಿ ಸಂಶಯವಿಲ್ಲ. ಅದು ಮುಳುಗಡೆಯಾಗುವ ಮುಂಚೆ ಅದನ್ನು ಪೂರ್ಣಗೊಳಿಸುವುದೇ ನಿರ್ದೇಶಕರಿಗೆ ಒಂದು ಸವಾಲಾಗಿದೆ.

ತಲಕಾಡಿನ ಉತ್ಖನನ ಬಹಳ ಉತ್ತಮವಾದ ಫಲಿತಾಂಶಗಳನ್ನು ಕೊಟ್ಟಿದೆ. ಗಂಗರ ರಾಜಧಾನಿಯಲ್ಲಿ ಅನೇಕ ಹೊಸಕಟ್ಟಡಗಳು, ಮಡಿಕೆಗಳು, ಮಣಿಗಳು, ಮುದ್ರೆಗಳು ಮುಂತಾದವು ದೊರಕಿದ್ದು, ಇನ್ನು ಮುಂದೆ ಗಂಗರ ಸಾಂಸ್ಕೃತಿಕ ಇತಿಹಾಸವನ್ನು ಬರೆಯುವವರಿಗೆ ಅತ್ಯಂತ ಅಮೂಲ್ಯವಾದ ಮಾಹಿತಿಗಳನ್ನು ಒದಗಿಸಿದೆ. ಇದೇ ರೀತಿಯಲ್ಲಿ ಇತರ ಪ್ರಾಚೀನ ಪ್ರಮುಖ ರಾಜಧಾನಿಗಳಲ್ಲಿ ಹಾಗೂ ನಗರಗಳಲ್ಲಿ ಉತ್ಖನನ ನಡೆಸಿದರೆ, ಆ ಕಾಲದ ಇತಿಹಾಸ ರಚನೆಗೆ ಉತ್ತಮ ಆಕರಗಳನ್ನು ಒದಗಿಸಬಲ್ಲುದು.

ಕರ್ನಾಟಕ ಸರ್ಕಾರದ ಪುರಾತತ್ವ ಮತ್ತು ವಸ್ತುಸಂಗ್ರಹಾಲಯ ಇಲಾಖೆ ಇತ್ತೀಚಿನ ವರ್ಷಗಳಲ್ಲಿ, ಡಾ॥ ದೇವರಾಜ್ ಅವರ ನಿರ್ದೇಶನದಲ್ಲಿ ಸಾಕಷ್ಟು ಕೆಲಸವನ್ನು ಮಾಡುತ್ತಿದೆ. ಉತ್ಖನನ, ಸಂಗ್ರಹಾಲಯ ಸ್ಥಾಪನೆ, ಸ್ಮಾರಕಗಳ ಸಂರಕ್ಷಣೆ ಮತ್ತು ಪ್ರಕಟಣೆ ಮುಂತಾದ ಕಾರ್ಯಗಳಲ್ಲಿ ಶ್ಲಾಘನೀಯ ಪ್ರಗತಿಯನ್ನು ಸಾಧಿಸಿದೆ. ಅವರ ವಿಭಾಗಕ್ಕೆ ಸಾಕಷ್ಟು ಧನ ಸಂಪತ್ತಿದೆ; ಕೆಲಸಮಾಡುವ ಉತ್ಸಾಹೀ ಅಧಿಕಾರಿಗಳಿದ್ದಾರೆ. ಡಾ॥ ಗೋಪಾಲ್, ಶ್ರೀ ಸ್ವಾಮಿ, ತಳವಾರ್, ಪೂಜಾರ್ ಮುಂತಾದ ತರುಣ ಉತ್ಸಾಹೀ ಅಧಿಕಾರಿಗಳಿಗೆ ತಮ್ಮನ್ನು ಪುರಾತತ್ವ ಕಾರ್ಯಗಳಲ್ಲಿ ತೊಡಗಿಸಿಕೊಳ್ಳುವ ಮನೋಭಾವವಿದೆ. ಆದುದರಿಂದ ಮೇಲೆ ಸೂಚಿಸಿದ ಕೆಲವು ಕಾರ್ಯಗಳನ್ನಾದರೂ ಅವರು ಕೈಗೆತ್ತಿಕೊಂಡರೆ, ಕರ್ನಾಟಕ ಪುರಾತತ್ವ ಸಾಕಷ್ಟು ಪ್ರಗತಿಯನ್ನು ಹೊಂದುತ್ತದೆ.

ಸರ್ಕಾರಕ್ಕೆ ತನ್ನದೇ ಆದ ಆದ್ಯತೆಗಳಿವೆ. ಬಹುಶಃ ಪುರಾತತ್ವ ಮತ್ತು ಇತಿಹಾಸ ಸರಕಾರದ ಮೊದಲನೆಯ ಆದ್ಯತೆಯಲ್ಲಿ ಸೇರಿಲ್ಲದೇ ಇರಬಹುದು. ಆದರೆ ಪ್ರಾಚೀನ ಸ್ಮಾರಕಗಳನ್ನು ರಕ್ಷಿಸುವುದು ಮಾತ್ರ ಆದ್ಯ ಕರ್ತವ್ಯ. ಈ ಸ್ಮಾರಕಗಳು ಹಾಳಾಗಿ ಹೋಗುವುದಕ್ಕೆ ಮುಂಚೆ ಅವುಗಳನ್ನು ಸಂರಕ್ಷಿಸಬೇಕಾದುದು ಸರ್ಕಾರದ ಕರ್ತವ್ಯ. ಈ ದಿಸೆಯಲ್ಲಿ ಧರ್ಮಸ್ಥಳ ಶ್ರೀ ಕ್ಷೇತ್ರದ ಧರ್ಮಾಧಿಕಾರಿಗಳಾದ ಪೂಜ್ಯ ಡಾ॥ ಡಿ. ವೀರೇಂದ್ರ ಹೆಗಡೆಯವರು ಸ್ಥಾಪಿಸಿರುವ 'ಧರ್ಮೋತ್ಥಾನ ಟ್ರಸ್ಟ್' ಎಂಬ ಸಂಸ್ಥೆಯು ನಾಲ್ಕಾರು ಪ್ರಾಚೀನ ದೇವಾಲಯಗಳನ್ನು ಸಂರಕ್ಷಿಸಿದೆ ಮತ್ತು ಸಂರಕ್ಷಿಸುತ್ತಿದೆ. ಬೆಂಗಳೂರು ವಿಮಾನ ನಿಲ್ದಾಣದ ಬಳಿಯ ಬೇಲೂರಿನ ದೇವಾಲಯ, ಹೆಮ್ಮನಹಳ್ಳಿ ಮತ್ತು ಬೂದನೂರಿನ ಹೊಯ್ಸಳ ದೇವಾಲಯಗಳನ್ನು ಪುರಾತತ್ವ ತಜ್ಞರ ಮಾರ್ಗದರ್ಶನದಲ್ಲಿ ಪುನರುಜ್ಜೀವನ ಗೊಳಿಸಲಾಗಿರುವುದನ್ನು ಇಲ್ಲಿ ಉಲ್ಲೇಖಿಸಬೇಕು. ಇದೊಂದು ಅನುಕರಣೀಯವಾದ ಹಾಗೂ ಸ್ತುತ್ಯಾರ್ಹ ವಾದ ಕಾರ್ಯ. ಈ ಮಾದರಿಯನ್ನು ಅನುಸರಿಸಿ ಇತರ ಸಂಸ್ಥೆಗಳು ಹಾಗೂ ಮಠಗಳು ಈ ಕಾರ್ಯವನ್ನು ಕೈಗೆತ್ತಿಕೊಂಡರೆ ನಮ್ಮ ಪ್ರಾಚೀನ ಪರಂಪರೆಯನ್ನು ಪ್ರತಿಬಿಂಬಿಸುವ ಸ್ಮಾರಕಗಳು ನೂರಾರು ವರ್ಷಗಳ ಕಾಲ ಬಾಳುತ್ತವೆ. ಹಾಗೂ ಜನಗಳಿಗೆ ತಮ್ಮ ಅಮೂಲ್ಯ ಇತಿಹಾಸ ಪರಂಪರೆಯನ್ನು ಜ್ಞಾಪಿಸುತ್ತಾ ಇದ್ದು ಸ್ಫೂರ್ತಿ ನೀಡುತ್ತವೆ.

ಕರ್ನಾಟಕ ಇತಿಹಾಸ ಮತ್ತು ಸಂಸ್ಕೃತಿಯ ಬೆಳವಣಿಗೆಯಲ್ಲಿ ಅನೇಕ ಸಂಘ, ಸಂಸ್ಥೆಗಳು ಬೆಂಗಳೂರು, ಮೈಸೂರು, ಧಾರವಾಡ, ಉಡುಪಿ ಮುಂತಾದ ಕಡೆಗಳಲ್ಲಿ ಕೆಲಸ ಮಾಡುತ್ತಿವೆ. ಇವುಗಳಲ್ಲಿ ಅತಿ ಮುಖ್ಯವಾದುದು ಮಿಥಿಕ್ ಸೊಸೈಟಿ. ಕರ್ನಾಟಕದ ಅನೇಕ ರಾಜವಂಶಗಳನ್ನು ಕುರಿತು ವಿಚಾರ ಸಂಕಿರಣಗಳನ್ನು ಏರ್ಪಡಿಸಿ ಅವುಗಳನ್ನು ಪ್ರಕಟಿಸಿದೆ. ದತ್ತಿ ಉಪನ್ಯಾಸಗಳನ್ನು ಅಳವಡಿಸುವುದರ ಮೂಲಕ ಹಾಗೂ ತನ್ನ ನಿಯತಕಾಲಿಕೆಯನ್ನು ಸಮಯಕ್ಕೆ ಸರಿಯಾಗಿ ಹೊರ ತರುವುದರ ಮೂಲಕ ಮಿಥಿಕ್ ಸೊಸೈಟಿ, ಕರ್ನಾಟಕದಲ್ಲಿ ಮಾತ್ರವಲ್ಲ ಇಡೀ ದೇಶದಲ್ಲಿ ಒಂದು ಗಣ್ಯಸ್ಥಾನ ಪಡೆದಿದೆ. ಇದಕ್ಕೆ ಕಾರಣಕರ್ತರಾದ ಡಾ॥ ಸೂರ್ಯನಾಥ ಕಾಮತ್, ಡಾ॥ ಎಂ. ಕೆ. ಎಲ್. ಎನ್. ಶಾಸ್ತ್ರಿ, ಸುಬ್ರಹ್ಮಣ್ಯಂ ಮುಂತಾದವರ ಸೇವೆ ಉಲ್ಲೇಖನೀಯ.

ಸ್ನೇಹಿತರೇ! ನನ್ನ ಗಮನಕ್ಕೆ ಬಂದ ಕೆಲವು ವಿಷಯಗಳನ್ನು ಮಾತ್ರ ನಿಮ್ಮ ಮುಂದೆ ಅರಿಕೆ ಮಾಡಿದ್ದೇನೆ. ಇನ್ನು ಎಷ್ಟೋ ವಿಷಯಗಳು ಬಿಟ್ಟುಹೋಗಿವೆ. ಹಾಗೂ ಅನೇಕ ವಿದ್ವಾಂಸರ ಹೆಸರನ್ನು ಹೇಳಲಾಗಿಲ್ಲ. ಕರ್ನಾಟಕ ಇತಿಹಾಸ ಕ್ಷೇತ್ರದಲ್ಲಿ ಆಗಬೇಕಾದ ಕೆಲಸ ಅಗಾಧವಾಗಿದೆ; ನಾವು ಮಾಡುತ್ತಿರುವ ಗತಿ ಮಂದವಾಗಿದೆ. ಮಾರ್ಗವನ್ನು ಸರಿಯಾಗಿ ರೂಪಿಸಿಕೊಂಡರೆ ಈ ಕೆಲಸ ಶೀಘ್ರಗತಿಯಲ್ಲಿ ಸಾಗಬಲ್ಲದು. ಇದಕ್ಕೆ ನಿಮ್ಮೆಲ್ಲರ ಸಹಕಾರ ಅಗತ್ಯ ಎಂದು ಹೇಳುವುದೇ ನನ್ನ ಉದ್ದೇಶ. ಈ ನನ್ನ ಮಾತುಗಳನ್ನು ಕೇಳಿದ, ನಿಮಗೆಲ್ಲರಿಗೂ ನನ್ನ ನಮನಗಳು.

ಕೆ. ಬಿ. ಶಿವತಾರಕ್ *

# ತುಮಕೂರು ಜಿಲ್ಲಾ ಪ್ರದೇಶದ ಹಳೇ ಶಿಲಾಯುಗ ಸಂಸ್ಕೃತಿ

ತುಮಕೂರು ಜಿಲ್ಲೆಯ ಏಕೈಕ ಹಳೇ ಶಿಲಾಯುಗದ ನೆಲೆ ಕಿಬ್ಬನಹಳ್ಳಿಯಾಗಿದ್ದಿತು. ಇತ್ತೀಚಿನ ಸರ್ವೇಕ್ಷಣೆಯಲ್ಲಿ ಹಲವು ಪ್ರದೇಶಗಳಲ್ಲಿ ಶಿಲಾಯುಗ ಸಂಸ್ಕೃತಿಯ ಅವಶೇಷಗಳು ದೊರೆಕಿದ್ದು ತುಮಕೂರು ಜಿಲ್ಲಾ ಪ್ರದೇಶದ ಇನ್ನೂ ಹಲವಾರು ಸ್ಥಳಗಳಲ್ಲಿ ಈ ಮಾನವನು ನೆಲೆಸಿದ್ದನೆಂಬ ಅಂಶ ಸ್ಪಷ್ಟವಾಗಿ ತಿಳಿದು ಬರುತ್ತದೆ. ಇಲ್ಲಿ ದೊರಕುವ ಹಲವು ಶಿಲಾ ಮಾದರಿಗಳು ಆದಿಮಾನವನಿಗೆ ತನ್ನ ಆಯುಧ ತಯಾರಿಕೆಗೆ ಉಪಯುಕ್ತ ಕಚ್ಚಾವಸ್ತುವನ್ನು ಒದಗಿಸಿ ಕೊಟ್ಟಿದ್ದಿತೆಂಬ ಅಂಶ ಸ್ಪಷ್ಟವಾಗಿ ತಿಳಿಯುತ್ತದೆ. ಇಲ್ಲಿ ದೊರೆತ ವಿವಿಧ ವರ್ಗದ ಕಲ್ಲುಗಳಿಂದ ಹಲವು ಮಾದರಿ ಆಯುಧಗಳನ್ನು ನಿರ್ಮಿಸಿರುವುದು ಕಾಣಬರುತ್ತಿದೆ. ಅಂತಹ ಪ್ರಮುಖ ಆಯುಧಗಳೆಂದರೆ ಕೈಗೊಡಲಿ, ಸೀಳುಗತ್ತಿ, ಮೊನಚಾದ ಚಕ್ಕೆ ಆಯುಧ, ಕೊಕ್ಕಿನಾಕಾರದ ಆಯುಧ, ಮಚ್ಚುಗತ್ತಿ, ಕೊಚ್ಚುಗತ್ತಿ ದುಂಡಾದ ಹೆರೆಯುವ, ಸೀಳಿದ, ಕೊರೆಯುವ ಆಯುಧಗಳು ಇತ್ಯಾದಿ. ಈ ಆಯುಧಗಳನ್ನು ಬಳಸಿ ಆದಿಮಾನವನು ತನ್ನ ಆಹಾರವನ್ನು ಸಂಗ್ರಹಿಸಿ ಕೊಂಡುದ್ದೇ ಅಲ್ಲದೆ, ತನ್ನನ್ನು ತಾನು ದುಷ್ಟ ಜಂತು ಗಳಿಂದಲೂ ರಕ್ಷಿಸಿಕೊಳ್ಳುತ್ತಿದ್ದ ಈ ಮಾನವನು ಅಭಿವೃದ್ಧಿ ಪಡಿಸಿದ ಆಯುಧಗಳು ದೊರಕುವುದರಿಂದ ಈ ಮಾನವನ ಜೀವನ ಕ್ರಮವೂ ಕಾಲಾನುಕ್ರಮದಲ್ಲಿ ವಿಕಸಿತಗೊಂಡಿತೆಂಬ ಅಂಶ ತಿಳಿಯುತ್ತದೆ.

## ಭೌಗೋಳಿಕ ಲಕ್ಷಣ

ತುಮಕೂರು ಜಿಲ್ಲೆಯು ಕರ್ನಾಟಕ ರಾಜ್ಯದ ಬಯಲು ಸೀಮೆಗಳ ಒಂದು ಜಿಲ್ಲೆಯಾಗಿದ್ದು ತನ್ನದೇ ಆದ ವಿಭಿನ್ನ ಪ್ರಾಕೃತಿಕ ಸಂಪತ್ತನ್ನು ಹೊಂದಿದೆ. ಅಲ್ಲಲ್ಲಿ ಇರುವ ಬೆಟ್ಟಗುಡ್ಡಗಳು, ದಟ್ಟವಾದ ಅರಣ್ಯ, ಪೀಠಭೂಮಿ, ಮತ್ತು ಎತ್ತರವಾದ ತೋಪುಗಳು ಈ ಭೂಭಾಗದ ಭೌಗೋಳಿಕ ಲಕ್ಷಣಗಳು.

ತುಮಕೂರು ಜಿಲ್ಲೆಯ ಉತ್ತರಕ್ಕೆ ಆಂಧ್ರಪ್ರದೇಶದ ಅನಂತಪುರ ಜಿಲ್ಲೆ ಪಶ್ಚಿಮಕ್ಕೆ ಚಿತ್ರದುರ್ಗ, ಚಿಕ್ಕಮಗಳೂರು ಮತ್ತು ಹಾಸನ ಜಿಲ್ಲೆಗಳೂ, ದಕ್ಷಿಣಕ್ಕೆ ಮಂಡ್ಯ ಜಿಲ್ಲೆ, ಪೂರ್ವಕ್ಕೆ ಬೆಂಗಳೂರು ಮತ್ತು ಕೋಲಾರ ಜಿಲ್ಲೆಗಳು ಸರಹದ್ದು ಪ್ರಾಂತ್ಯಗಳಾಗಿವೆ.

ತುಮಕೂರು ಜಿಲ್ಲೆಯ ಒಂದು ಅಸಾಮಾನ್ಯ ಭೌಗೋಳಿಕ ವಿಭಾಗದ ಅಂಶವೆಂದರೆ, ತುಮಕೂರು ಜಿಲ್ಲೆಗೆ ಸೇರಿದ ಪಾವಗಡ ತಾಲ್ಲೂಕು ಜಿಲ್ಲೆಯ ಭೂಭಾಗಕ್ಕೆ ಯಾವ ಕಡೆಯಿಂದಲೂ ಸಂಬಂಧವನ್ನು ಪಡೆಯದೆ ಉತ್ತರ ಭಾಗದಲ್ಲಿ ಪ್ರತ್ಯೇಕವಾಗಿರುವುದು. ಪಾವಗಡ ತಾಲ್ಲೂಕು ಆಂಧ್ರ ಪ್ರದೇಶದ ಅನಂತಪುರ ಜಿಲ್ಲೆಯ ಭೂಭಾಗದಿಂದ ಸುತ್ತುವರಿಯಲ್ಪಟ್ಟಿದ್ದು, ಪಶ್ಚಿಮದಲ್ಲಿ ಮಾತ್ರ ಸ್ವಲ್ಪ ಭೂಭಾಗ ಚಿತ್ರದುರ್ಗ ಜಿಲ್ಲೆಗೆ ತಾಗಿದೆ. ಪಾವಗಡ ತಾಲ್ಲೂಕು ತುಮಕೂರು ಜಿಲ್ಲೆಯ ಭೂಭಾಗವಾದರೂ ಸಹ ಜಿಲ್ಲೆಯಿಂದ ಹೊರತಾಗಿದೆ. ಜಿಲ್ಲೆಯು ತನ್ನದೇ ಆದ ಪ್ರಕೃತಿ ಸಂಪತ್ತು, ಜಲಸಂಪತ್ತು, ಅರಣ್ಯ ಸಂಪತ್ತು, ಪ್ರಾಣಿ ಸಂಪತ್ತು ಮತ್ತು ಹವಾಮಾನವನ್ನು ಹೊಂದಿದೆ. ಈ ಪ್ರಕೃತಿ ಲಕ್ಷಣಗಳು ಆದಿಮಾನವನ ಜನಜೀವನಕ್ಕೆ ಬಹು ಪೂರಕವಾಗಿದ್ದವು.

* ಉಪನ್ಯಾಸಕರು, ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ವಿಭಾಗ, ಸೈಂಟ್ ಮೇರೀಸ್ ಸಿರಿಯನ್ ಕಾಲೇಜು, ಬ್ರಹ್ಮಾವರ-೫೭೬೨೧೩.

## ಪ್ರಾಕೃತಿಕ ಸಂಪತ್ತು

ತುಮಕೂರು ಜಿಲ್ಲೆಯಲ್ಲಿ ಹಲವು ಬೆಟ್ಟ ಗುಡ್ಡಗಳು ಹಬ್ಬಿದ್ದು, ಈ ಗುಡ್ಡಗಳು ಅಲ್ಲಲ್ಲಿ ಬಹು ಎತ್ತರವಾಗಿವೆ. ಜಿಲ್ಲೆಯ ಪೂರ್ವ ಭಾಗದಲ್ಲಿ ಉತ್ತರ-ದಕ್ಷಿಣವಾಗಿ ಒಂದು ಸಾಲು ಹಬ್ಬಿದೆ. ಪಾವಗಡ ತಾಲ್ಲೂಕಿನ ಕಾಮನದುರ್ಗ ಬೆಟ್ಟದಿಂದ ಪ್ರಾರಂಭವಾಗಿ ನಿಡುಗಲ್ಲು, ಮಿಡಿಗೇಶಿ, ಅವರ್ಗಲ್ಲು, ಮಧುಗಿರಿ, ಕೊರಟಗೆರೆ, ದೇವರಾಯನ ದುರ್ಗಗಳ ಮೂಲಕ ಸಾಗಿ ನಿಜಗಲ್ ಬೆಟ್ಟದಲ್ಲಿ ಕೊನೆಗೊಂಡಿದೆ. ಜಿಲ್ಲೆಯ ಪಶ್ಚಿಮ ಭಾಗದಲ್ಲಿ ಮತ್ತೊಂದು ಸಾಲು ಹಬ್ಬಿದ್ದು ತಿಪಟೂರು ತಾಲ್ಲೂಕಿನ ಕಿಬ್ಬನಹಳ್ಳಿಯ ಬಳಿ ಪ್ರಾರಂಭವಾಗಿ ಚಿಕ್ಕನಾಯಕನಹಳ್ಳಿ ತಾಲ್ಲೂಕಿನ ಮೂಲಕ ಸಾಗಿ ಚಿತ್ರದುರ್ಗದ ಬೆಟ್ಟಸಾಲಿಗೆ ಸೇರಿಕೊಂಡಿವೆ. ಈ ಬೆಟ್ಟಗುಡ್ಡಗಳ ಸಾಲುಗಳಲ್ಲಿ ಅಲ್ಲಲ್ಲಿ ಎತ್ತರವಾದ ಬೆಟ್ಟಗಳನ್ನು ಕಾಣಬಹುದು. ಇವುಗಳಲ್ಲಿ ಮಧುಗಿರಿ ದುರ್ಗವು ಜಿಲ್ಲೆಯ ಅತಿ ಎತ್ತರದ ಬೆಟ್ಟವಾಗಿದ್ದು ಇದರ ಎತ್ತರ ೧೧೨೭.೯ ಮೀ. ಜಿಲ್ಲೆಯ ಸಾಮಾನ್ಯ ಎತ್ತರವು ಸಮುದ್ರ ಮಟ್ಟದಿಂದ ಸರಾಸರಿ ೭೬೦ ಮೀ. ಇದೆ.

**ಜಲ ಸಂಪತ್ತು :** ತುಮಕೂರು ಜಿಲ್ಲಾ ಪ್ರದೇಶದಲ್ಲಿ ಹುಟ್ಟಿ ಹರಿಯುವ ಯಾವುದೇ ಜೀವನದಿಗಳಿಲ್ಲ. ಕೆಲವು ಸಣ್ಣ ಪುಟ್ಟ ನದಿಗಳು ಬೆಟ್ಟ ಗುಡ್ಡಗಳಲ್ಲಿ ಹುಟ್ಟಿ ಬಯಲು ಪ್ರದೇಶಗಳಲ್ಲಿ ಹರಿಯುತ್ತವೆ. ಬೇಸಿಗೆಯಲ್ಲಿ ಸುಳಿವು ಸಿಗದ ಈ ಹೊಳೆಗಳು ಹಲವಾರು ಕೆರೆಗಳಿಗೆ ನೀರನ್ನೊದಗಿಸುತ್ತವೆ. ಜಿಲ್ಲೆಯ ಹೆಸರಿಸಬಹುದಾದ ಪ್ರಮುಖ ನದಿಗಳೆಂದರೆ 'ಶಿಂಷಾ' ಮತ್ತು 'ಜಯಮಂಗಲಾ'.

ಈ ನದಿಗಳ ಜೊತೆಗೆ 'ಉತ್ತರ ಪಿನಾಕಿನಿ', 'ಕುಮದ್ವತಿ' ಮತ್ತು 'ವೇದಾವತಿ' ನದಿಗಳು ಕೂಡ ತುಮಕೂರು ಜಿಲ್ಲಾ ಪ್ರದೇಶಗಳಲ್ಲಿ ಹರಿದು ಈ ಭೂಭಾಗಕ್ಕೆ ನೀರನ್ನುಣಿಸುವುದೇ ಅಲ್ಲದೆ ಇಲ್ಲಿನ ಜನರ ಬದುಕಿನ ಜೀವನಾಡಿಗಳಾಗಿಯೂ ಪರಿಣಮಿಸಿವೆ.

**ಭೂಗರ್ಭ ಸಂಪತ್ತು :** ತುಮಕೂರು ಜಿಲ್ಲೆ ಉತ್ಕೃಷ್ಟ ಭೂಗರ್ಭ ಸಂಪತ್ತನ್ನು ಹೊಂದಿರುವ ಭೂಭಾಗವಾಗಿದೆ. ಆಗಾಗ ಈ ಪ್ರದೇಶಗಳಲ್ಲಿ ಭೂಗರ್ಭ ವಿಜ್ಞಾನಿಗಳು ಕೈಗೊಂಡ ಸರ್ವೇಕ್ಷಣೆಯಿಂದಾಗಿ ಇಲ್ಲಿ ದೊರೆಯುವ ಭೂಗರ್ಭ ಸಂಪತ್ತಿನ ವಿವರಣೆಯನ್ನು ಪಡೆಯಬಹುದಾಗಿದೆ. ಜೊತೆಗೆ ಪುರಾತತ್ವಜ್ಞರೂ ಭೂಗರ್ಭ ಸಂಪತ್ತಿನ ಮಾಹಿತಿಯನ್ನು ನೀಡಿದ್ದಾರೆ.

ಜಿಲ್ಲೆಯ ಹಲವು ಭಾಗಗಳಲ್ಲಿ ವಿವಿದ ಮಾದರಿಯ ಮಣ್ಣು ಮತ್ತು ಶಿಲಾಸಂಪತ್ತನ್ನು ಕಾಣಬಹುದು. ಶಿರಾ ಮಧುಗಿರಿ ಮತ್ತು ಚಿಕ್ಕನಾಯಕನಹಳ್ಳಿಯ ಉತ್ತರ ಮತ್ತು ಪೂರ್ವ ಭಾಗವನ್ನು ಬಿಟ್ಟರೆ ಉಳಿದೆಲ್ಲಾ ಕಡೆ ಭೂಮಿ ಗಡುಸಾಗಿದೆ. ಜಿಲ್ಲೆಯ ದಕ್ಷಿಣ ಮತ್ತು ಉತ್ತರ ಭಾಗವು ಕೆಂಪು ಬಣ್ಣದ ಮಣ್ಣನ್ನು ಹೊಂದಿದ್ದರೆ ಶಿರಾ ಮತ್ತು ಪಾವಗಡದ ಪಶ್ಚಿಮ ಭಾಗಗಳು ಕಪ್ಪು ಮಣ್ಣಿನಿಂದ ಕೂಡಿದೆ. ಜಿಲ್ಲೆಯ ಪೂರ್ವ ವಲಯದಲ್ಲಿ ಮರಳು ಮಿಶ್ರಿತವಾದ ಮಣ್ಣಿನಿಂದ ಕೂಡಿದೆ. ಅಲ್ಲಲ್ಲಿ ಗಡುಸಾದ ಚಿಟ್ಟಕಲ್ಲು ಭೂಮಿಯ ಸ್ವಲ್ಪ ಆಳದಲ್ಲಿ ವಿಸ್ತಾರವಾಗಿ ಹರಡಿದೆ. ಪಾವಗಡದ ಪೂರ್ವಭಾಗದಲ್ಲಿ ಈ ಚಿಟ್ಟಕಲ್ಲು ಕಪ್ಪು ಬಣ್ಣದ್ದಿದ್ದು ಅಭ್ರಕದ ಅಂಶವನ್ನು ಹೊಂದಿದೆ. ಉಳಿದ ಭಾಗದಲ್ಲಿ ಚಿಟ್ಟಕಲ್ಲು ಬಿಳಿಯಾಗಿದ್ದು ಶ್ವೇತಾಭ್ರಕ ಪದರಗಳನ್ನು ಹೊಂದಿರುವುದು ತಿಳಿಯುತ್ತದೆ.

ತುರುವೇಕೆರೆ ಮತ್ತು ಚಿಕ್ಕನಾಯಕನಹಳ್ಳಿಯ ಭೂಭಾಗದಲ್ಲಿ ಬೆಣಚುಕಲ್ಲಿನ ಹರಳುಗಳಿಂದ ಕೂಡಿದ ಭೂಮಿ ಇದೆ. ಈ ಭಾಗದ ಶಿಲಾಖಂಡದಲ್ಲಿ ಪ್ರಾಚೀನ ಅಗ್ನಿ ಶಿಲಾಖಂಡಗಳೂ ಇದ್ದು ಇವು ಚಿತ್ರದುರ್ಗ ಮತ್ತು ಧಾರವಾಡ ಜಿಲ್ಲಾ ಶಿಲಾಮಾದರಿಯನ್ನು ಹೋಲುತ್ತವೆ. ಅತಿ ಗಡುಸು ಅಲ್ಲದ ಮೃದು ಪದರಗಳಿರುವ ಶಿಲೆಗಳಲ್ಲಿ ಅನೇಕ ಮಾದರಿಯ ಸಮ್ಮಿಶ್ರಲೋಹ ಕಣಗಳನ್ನು ಒಳಗೊಂಡಿದೆ. ಅಭ್ರಕ, ಸಿಲಿಕಾ ಮತ್ತು ಅಲ್ಯೂಮಿನಿಯಂ ಜಾತಿಯ ಹೊಳಪುಳ್ಳ ಖನಿಜಾಂಶಗಳು ಈ ಮಾದರಿಗಳಲ್ಲಿವೆ.

ಚಿಕ್ಕನಾಯಕನಹಳ್ಳಿಯ ಪೂರ್ವಕ್ಕೆ ಹಬ್ಬಿರುವ ಬೆಟ್ಟಸಾಲು ಉತ್ಕೃಷ್ಟ ಜಾತಿಯ ಕಲ್ಲನ್ನು ಹೊಂದಿದೆ. ಬಾಣಸಂದ್ರದ ಸಮೀಪ ಸುಮಾರು ೪೦ ಕಿ.ಮೀ.ಗಳಷ್ಟು ಭಾಗ ಇಂತಹ ಕಲ್ಲನ್ನು ಹೊಂದಿದೆ. ಇದೇ ಶಿಲಾ ಸಂಪತ್ತು ಬೇರೊಂದು ಪರಿವರ್ತನೆಯಿಂದಾಗಿ ಸುಣ್ಣಕಲ್ಲಾಗಿದ್ದು ಹುಳಿಯಾರು ಪ್ರದೇಶವು ಇಂತಹ ಕಲ್ಲನ್ನು ಹೊಂದಿದೆ. ಬೆಳ್ಳಾರ, ಬುಕ್ಕಾಪಟ್ಟ ಮತ್ತು ಮಾನಂಗಿ ಪ್ರದೇಶದ ಇದೇ ಶಿಲಾಸಂಪತ್ತು ಕಂದು ಬಣ್ಣದಿಂದ ಕೂಡಿದ್ದು ಖನಿಜಾಂಶವನ್ನು ಹೊಂದಿದೆ. ಇಂತಹಾ ಶಿಲಾ ಸಂಪತ್ತು ಅಗ್ನಿಪರ್ವತಗಳ ಅವಶಿಷ್ಟ ಜಾತಿಯ ಕಲ್ಲುಗಳಾಗಿವೆ.

ತುರುವೇಕೆರೆಯ ನೈಋತ್ಯಕ್ಕೆ ಸುಮಾರು ಒಂದು ಕಿ.ಮೀ. ಅಗಲ ಹಾಗೂ ೮ ಕಿ.ಮೀ.ಗೂ ಹೆಚ್ಚು ಭೂಭಾಗದಲ್ಲಿ ಕರೇಕಲ್ಲು ಗುಡ್ಡವಿದೆ. ಈ ಶಿಲೆಯು ಕಪ್ಪು ಬಣ್ಣದಲ್ಲಿದ್ದು ಗಡುಸು ಮತ್ತು ಬೆಣಚು ಜಾತಿಯ ಶಿಲಾಕಣಗಳನ್ನು ಒಳಗೊಂಡಿದೆ.

ಜಿಲ್ಲೆಯ ದಕ್ಷಿಣ ಪೂರ್ವ ಭಾಗದಲ್ಲಿ ಕ್ಲೋಸ್‌ಪೇಟೆ ಗ್ರಾನೈಟ್ ಜಾತಿಯ ಹರಳು ಮಿಶ್ರಿತವಾದ ಹಾಗೂ ಹೊಳಪಿನ ಕಲ್ಲುಗಳು ಕಂಡುಬರುತ್ತವೆ.

**ಸಸ್ಯ ಸಂಪತ್ತು** : ತುಮಕೂರು ಜಿಲ್ಲಾ ಪ್ರದೇಶದಲ್ಲಿ ನಿತ್ಯಹರಿದ್ವರ್ಣದ ಕಾಡುಗಳಿಲ್ಲದಿದ್ದರೂ ಕುರುಚಲ ಗಿಡದ ಕಾಡುಗಳನ್ನು ಹಾಗೂ ಸಾಧಾರಣದ ಕಾಡುಗಳನ್ನು ಕಾಣಬಹುದಾಗಿದೆ. ಮಧುಗಿರಿ, ಬುಕ್ಕಾಪಟ್ಟ, ತೀರ್ಥಪುರ, ಮಂಚಲ್ದೊರೆ, ಹುಲಿಯೂರುದುರ್ಗ, ಕೊರಟಗೆರೆ ಹಾಗೂ ದೇವರಾಯನದುರ್ಗದ ಪ್ರದೇಶಗಳಲ್ಲಿ ರಾಜ್ಯ ರಕ್ಷಿತ ಕಾಡುಗಳಿವೆ. ಈ ಕಾಡುಗಳಲ್ಲಿ ಶ್ರೀಗಂಧ, ಬೋಗಿ, ಧೂಪ, ಕರಚಿ ಅಥವಾ ಕಮ್ಮರ, ಜಾಲಾರಿ, ಹೊನ್ನೆ, ದಿಂಡಿಗ, ಕರಿಮತ್ತಿ, ಅಳಲೆ, ತೋರಮತ್ತಿ ಮುಂತಾದ ಗಿಡಮರಗಳನ್ನು ಕಾಣಬಹುದು. ಅಲ್ಲಲ್ಲಿ ಕುರುಚಲ ಗಿಡಗಳಾದ ಸೀತಾಫಲ, ತುಪ್ರ, ಮರಡಿ ಹಾಗೂ ಹುಣಸೆ ಮರಗಳು ಬೆಳೆಯುತ್ತಿವೆ.

**ಪ್ರಾಣಿ ಸಂಪತ್ತು** : ದಟ್ಟವಾದ ಕಾಡುಗಳು ಇಲ್ಲದಿರುವುದರಿಂದ ಇಲ್ಲಿನ ಕಾಡುಪ್ರಾಣಿಗಳ ಸಂಖ್ಯೆ ಬಹಳ ಕಡಿಮೆ. ಆದರೂ ಕೆಲವೊಮ್ಮೆ ಹುಲಿ, ಚಿರತೆಗಳು ಕಂಡುಬರುತ್ತವೆ. ನರಿ, ತೋಳ, ಕತ್ತೆಕಿರುಬಗಳು ಹೆಚ್ಚಿನ ಸಂಖ್ಯೆಯಲ್ಲಿ ಪಾವಗಡ ತಾಲ್ಲೂಕಿನಲ್ಲಿ ಕಾಣಬಹುದಾಗಿದೆ. ತಿಪಟೂರು, ಚಿಕ್ಕನಾಯಕನಹಳ್ಳಿ ಮತ್ತು ಗುಬ್ಬಿ ತಾಲ್ಲೂಕುಗಳ ಗುಡ್ಡಗಾಡುಗಳಲ್ಲಿ ಕರಡಿಗಳು ಆಗಾಗ ಕಂಡುಬರುತ್ತವೆ. ಇದೇರೀತಿ ಅಲ್ಪ ಸಂಖ್ಯೆಯಲ್ಲಿ ಜಿಂಕೆ, ಕಾಡುಕೋಣ, ಕಾಡುಹಂದಿ, ಮುಳ್ಳು ಹಂದಿಗಳು ಮಧುಗಿರಿ ಹಾಗೂ ಶಿರಾ ತಾಲ್ಲೂಕುಗಳಲ್ಲಿ ಕಂಡುಬಂದಿವೆ.

ಪಕ್ಷಿಗಳು, ಮುಂಗಸಿ ಮತ್ತು ಮೊಲಗಳನ್ನು ಹೇರಳವಾಗಿ ಜಿಲ್ಲೆಯಾದ್ಯಂತ ಕಾಣಬಹುದಾಗಿದೆ. ಉರಗ ಜಾತಿಯಲ್ಲಿ ಎಲ್ಲಾ ಜಾತಿಯ ವಿಷಪೂರಿತ ಹಾಗೂ ವಿಷಪೂರಿತವಲ್ಲದ ಹಾವುಗಳು ಕಂಡುಬರುತ್ತವೆ.

**ವಾಯುಗುಣ** : ತುಮಕೂರು ಜಿಲ್ಲಾ ಪ್ರದೇಶದಲ್ಲಿ ಯಾವುದೇ ಪ್ರಮುಖ ವಾಯುಮಾಪನ ಕೇಂದ್ರವಿಲ್ಲದಿದ್ದರೂ, ಇರುವ ಅಲ್ಪ ಪ್ರಮಾಣದ ಮಾಪನ ಕೇಂದ್ರಗಳು ಒದಗಿಸುವ ಮಾಹಿತಿಯಿಂದ ಈ ಪ್ರದೇಶದ ಹವಾಮಾನದ ಬಗ್ಗೆ ತಿಳಿಯಲು ಸಹಾಯಕವಾಗಿದೆ.

ಜಿಲ್ಲೆಯಲ್ಲಿ ಮಾರ್ಚ್‌ನಿಂದ ಮೇ ತಿಂಗಳವರೆಗೆ ವಾತಾವರಣ ಅತೀ ಹೆಚ್ಚು ಉಷ್ಣಾಂಶ ಹೊಂದಿರುತ್ತದೆ. ಏಪ್ರಿಲ್ ತಿಂಗಳು ಅತೀ ಹೆಚ್ಚು ಉಷ್ಣಾಂಶ ಹೊಂದಿರುವ ತಿಂಗಳಾಗಿದೆ. ಈ ತಿಂಗಳಲ್ಲಿ ಪರಮಾವಧಿ ೪೦ ಅಥವಾ ೪೧ ಡಿಗ್ರಿ ಸೆಂಟಿಗ್ರೇಡ್ ಉಷ್ಣಾಂಶವಿರುತ್ತದೆ. ನೈಋತ್ಯದ ಮುಂಗಾರು ಮಾರುತವು ಜೂನ್ ತಿಂಗಳಲ್ಲಿ ಬೀಸಲು ಪ್ರಾರಂಭವಾಗಿ ಉಷ್ಣಾಂಶ ಇಳಿಮುಖವಾಗುತ್ತಾ ಹೋಗುತ್ತದೆ. ಅಕ್ಟೋಬರ್‌ನಿಂದ ಫೆಬ್ರವರಿವರೆಗೆ ತಂಪು ವಾತಾವರಣವಿರುತ್ತದೆ. ಡಿಸೆಂಬರ್-ಅತಿ ಹೆಚ್ಚು ತಂಪು ವಾತಾವರಣವಿರುವ ತಿಂಗಳಾಗಿರುತ್ತದೆ. ಈ ಸಮಯದಲ್ಲಿ ಸರಾಸರಿ ೯ ರಿಂದ ೧೦ ಡಿಗ್ರಿ ಸೆಂಟಿಗ್ರೇಡ್ ಮಾತ್ರ ಇರುತ್ತದೆ.

ಒಟ್ಟಿನಲ್ಲಿ ಈ ಜಿಲ್ಲೆಯ ಪ್ರಕೃತಿ ಸಂಪತ್ತು, ಇಲ್ಲಿ ದೊರೆಯುವ ಹಲವು ಮಾದರಿ ಶಿಲೆಗಳು, ಇಲ್ಲಿರುವ ಹಲವು ಬೆಟ್ಟಗುಡ್ಡಗಳು ಇದಕ್ಕೂ ಮಿಗಿಲಾಗಿ ಇಲ್ಲಿನ ವಾಯುಗುಣ ಮತ್ತು ನೀರಿನ ಆಸರೆಗಳೆಲ್ಲವೂ ಕಾಲಮಾನದುದ್ದಕ್ಕೂ ಮಾನವನಿಗೆ ಒದಗಿ ತನ್ನ ಜೀವನವನ್ನು ಸತ್ವಪೂರ್ಣವಾಗಿ ಹಾಗೂ ಕುತೂಹಲಭರಿತವಾಗಿ ಸಾಗಿಸಲು ಅನುಕೂಲ ವಾಗಿದೆ.

**ಹಳೇ ಶಿಲಾಯುಗ ಸಂಸ್ಕೃತಿ**

ತುಮಕೂರು ಜಿಲ್ಲೆಯ ಬಾಣಸಂದ್ರದ ಭೂಪ್ರದೇಶದ ಭೂ ವಿಜ್ಞಾನ ಸರ್ವೇಕ್ಷಣೆಯನ್ನು ೧೯೦೦-೧೯೦೧ರಲ್ಲಿ ಭೂಗರ್ಭ ವಿಜ್ಞಾನಿ ವಿಧಿರಿಲ್‌ರವರು ಕೈಗೊಂಡು ಇಲ್ಲಿ ದೊರೆಯುವ ಪ್ರಮುಖ ಮಾದರಿ ಶಿಲೆಗಳೆಂದರೆ ಪದರಗಲ್ಲು, ಅಗ್ನಿಶಿಲೆ ಹಾಗೂ ಕಗ್ಗಲ್ಲುಗಳು ಎಂದು ತಿಳಿಸಿರುವರು. ಇವುಗಳಲ್ಲಿ ಪದರಗಲ್ಲಿನ ಅಂಶ ಅತಿ ಹೆಚ್ಚು ಎಂದು ಹೇಳಿರುವರು. ಕಬ್ಬಿಣದ ಅದಿರುಯುಕ್ತ ಸ್ಫಟಿಕ ಶಿಲೆಯು ಆಯುಧ ತಯಾರಿಕೆಗೆ ಯೋಗ್ಯವಾದ ಕಚ್ಚಾವಸ್ತು ವಾಗಿದ್ದಿತೆಂಬ ಪ್ರಮುಖ ಅಂಶ ಕೂಡ ವ್ಯಕ್ತವಾಗಿದೆ.

ಕಿಬ್ಬನಹಳ್ಳಿ ಮತ್ತು ಬಿಳಿಗೆರೆ ಪ್ರದೇಶಗಳ ಸರ್ವೇಕ್ಷಣೆ ಕೈಗೊಂಡು ಇಲ್ಲಿ ಇದ್ದ ಹಳೇ ಶಿಲಾಯುಗ ಸಂಸ್ಕೃತಿಯ ನೆಲೆಯನ್ನು ೧೯೨೪ರಲ್ಲಿ ಭೂಗರ್ಭ ವಿಜ್ಞಾನಿಯಾದ ಪ್ರೊ. ಸಂಪತ್ ಐಯ್ಯಂಗಾರ್‌ರವರು ಬೆಳಕಿಗೆ ತಂದರು. ಈ

ನೆಲೆಯ ಪ್ರಾಮುಖ್ಯತೆಯ ಬಗ್ಗೆ ವಿವರಗಳನ್ನು ನೀಡಿ ಇಲ್ಲಿ ದೊರೆತ ಶಿಲಾಯುಧಗಳ ಮಾದರಿ ಬಗ್ಗೆ ವಿವರ ನೀಡಿರುವರು.

ಸ್ಥಳೀಯವಾಗಿ ದೊರಕುತ್ತಿದ್ದ ಕಚ್ಚಾವಸ್ತು ಪ್ರಾಚೀನ ಅಲೆಮಾರಿ ಮಾನವನಿಗೆ ಅತ್ಯವಶ್ಯಕವಾಗಿ ಬೇಕಿದ್ದ ಆಯುಧಗಳನ್ನು ತಯಾರಿಸಲು ಉತ್ತೇಜನ ನೀಡಿರುವುದನ್ನು ಕಾಣಬಹುದು. ಹೀಗಾಗಿ ಈ ಪ್ರದೇಶ ಆಯುಧ ಉದ್ಯಮ ಕೇಂದ್ರವಾಗಿದ್ದಿತೆಂಬ ಅಂಶ ಸ್ಪಷ್ಟವಾಗಿ ತಿಳಿಯುತ್ತದೆ. ಕಿಬ್ಬನಹಳ್ಳಿ ಮತ್ತು ಬಿಳಿಗೆರೆ ಸುತ್ತಮುತ್ತಲಿನ ಇಳಿಜಾರಿನಲ್ಲಿ ಮಳೆಯ ಕೊರೆತದಿಂದ ಹೊರಬಂದ ಕಲ್ಲಿನ ಆಯುಧಗಳನ್ನು ಸಂಗ್ರಹಿಸಿರುವರು.

ಇಂತಹ ಶಿಲಾಯುಧಗಳನ್ನು ಪದರಗಲ್ಲು, ಬೆಣಚುಕಲ್ಲು ಹಾಗೂ ಕಗ್ಗಲ್ಲುಗಳಲ್ಲಿ ತಯಾರಿಸಿದ್ದು, ಅವುಗಳಲ್ಲಿ ಪ್ರಮುಖವಾದವುಗಳೆಂದರೆ ಕೊರೆಯುವ ಕೈಗೊಡಲಿ, ಮೊನಚಾದ ಚಕ್ಕೆ ಕಲ್ಲಿನ ಆಯುಧ, ಸೀಳುಗತ್ತಿ, ಕೊಕ್ಕಿನಾಕಾರದ ಆಯುಧ, ಮಚ್ಚುಗತ್ತಿ, ಕೊಚ್ಚುಗತ್ತಿ, ದುಂಡಾದ ಚಪ್ಪಟೆ ಆಯುಧ, ಅಗಲವಾದ ತೆಳುಚಕ್ಕೆ ಆಯುಧ, ಹೆರೆಗತ್ತಿ ಮತ್ತು ತಿರುಳಾಯುಧಗಳು.

ಇದೇ ಸ್ಥಳವನ್ನು ಮತ್ತೊಬ್ಬ ಭೂಗರ್ಭ ವಿಜ್ಞಾನಿ ಶ್ರೀ ಜಿ. ರಾಮರಾವ್‌ರವರು ೧೯೨೮ರಲ್ಲಿ ಮತ್ತೊಮ್ಮೆ ಪರಿವೀಕ್ಷಿಸಿ ಇಲ್ಲಿನ ಆಯುಧಗಳ ಬಗ್ಗೆ ಮತ್ತಷ್ಟು ವಿವರಗಳನ್ನು ನೀಡಿರುವರು.

೧೯೫೧ರಲ್ಲಿ ಶ್ರೀಮತಿ ಅಲ್ಚಿನ್‌ರವರು ಇದೇ ಸ್ಥಳದ ಸರ್ವೇಕ್ಷಣೆ ನಡೆಸಿ ಕಿಬ್ಬನಹಳ್ಳಿಯಲ್ಲಿ ದೊರೆತಿರುವ ಆಯುಧಗಳು ಅತ್ತಿರಂಪಕ್ಕಂ ಹಾಗೂ ತಮಿಳುನಾಡಿನ ಇತರ ಸ್ಥಳಗಳಲ್ಲಿ ದೊರೆತಿರುವ ಆಯುಧಗಳನ್ನು ಹೋಲುತ್ತವೆಂದೂ ಹಾಗೂ ಇವುಗಳನ್ನು ತಯಾರಿಸಿರುವ ಬೆಣಚುಕಲ್ಲು ಒಂದೇ ಎಂದು ತಿಳಿಸಿರುವರು. ಕಿಬ್ಬನ ಹಳ್ಳಿಯ ಆಯುಧಗಳನ್ನು ವೈಜ್ಞಾನಿಕವಾಗಿ ಪರೀಕ್ಷಿಸಿ ಇಲ್ಲಿ ಕಚ್ಚಾಶಿಲೆ ಹೇರಳವಾಗಿ ದೊರಕುತ್ತಿದುದರಿಂದ ಇಲ್ಲಿನ ಹಳೇ ಶಿಲಾಯುಗದ ಮಾನವನು ಆತನ ದಕ್ಷಿಣ ಆಫ್ರಿಕಾದ ಸಂಬಂಧಿಗಳಂತೆ ಆಯುಧಗಳಿಗಾಗಿ ಸಿಗುವ ಸೂಕ್ತ ಕಲ್ಲಿಗೋಸ್ಕರ ಅಲ್ಲಲ್ಲಿಗೆ ಬಂದು ಆಗಾಗ ನಿಗದಿತ ಸ್ಥಳಗಳಲ್ಲಿ ಆಯುಧ ತಯಾರಿಸಿಕೊಳ್ಳುತ್ತಿದ್ದಿರಬೇಕೆಂದೂ ಊಹಿಸಿರುವರು. ಇಲ್ಲಿ ದೊರಕುವ ಅಪೂರ್ಣ ಆಯುಧಗಳು ಮತ್ತು ನಿರುಪಯುಕ್ತ ಕಲ್ಲು ಚಕ್ಕೆಗಳು ತಿಳಿಸುವಂತೆ ಹಳೇ ಶಿಲಾಯುಗದ ಮಾನವನು ಒಂದು ಸ್ಥಳದಲ್ಲೇ ಇದ್ದು ಆಯುಧಗಳನ್ನು ಪರಿಪೂರ್ಣಗೊಳಿಸಿ ಅಂತಹವುಗಳನ್ನು ಮಾತ್ರ ಕೊಂಡೊಯ್ಯುತ್ತಿದ್ದನೆಂಬ ಅಂಶ ತಿಳಿಯುತ್ತದೆ.

ಪ್ರೊ. ಎಂ. ಶೇಷಾದ್ರಿಯವರು ಕಿಬ್ಬನಹಳ್ಳಿಯಲ್ಲಿ ದೊರೆತಿರುವ ಶಿಲಾಯುಧಗಳ ಸಂಪೂರ್ಣ ಅಧ್ಯಯನ ಕೈಗೊಂಡು ಅವುಗಳ ಬಗ್ಗೆ ತಮ್ಮ ಮಹಾಪ್ರಬಂಧದಲ್ಲಿ ವಿಶ್ಲೇಷಿಸಿರುವರು. ತಿರುಳುಗಲ್ಲಿನಲ್ಲಿ ಮಾಡಿದ ಕೈಗೊಡಲಿಗಳು ಮೂರು ನಮೂನೆಯಲ್ಲಿದ್ದು ಅವುಗಳನ್ನು ಅಬ್ಬೆವಿಲಿಯನ್ ಹಾಗೂ ಅಶ್ಯೂಲಿಯನ್ ತಂತ್ರಗಳಿಂದ ತಯಾರಾದವುಗಳು ಎಂದು ತಿಳಿಸಿರುವರು.

ಒಟ್ಟಿನಲ್ಲಿ ಕಿಬ್ಬನಹಳ್ಳಿ ಮತ್ತು ಬಿಳಿಗೆರೆಗಳು ಹಳೇ ಶಿಲಾಯುಗದ ಆಯುಧ ಉದ್ಯಮ ಕೇಂದ್ರಗಳಾಗಿದ್ದುವೆಂಬ ಅಂಶ ಸ್ಪಷ್ಟವಾಗಿ ತಿಳಿಯುತ್ತದೆ. ಆದಿ ಮತ್ತು ಮಧ್ಯಹಳೇ ಶಿಲಾಯುಗಗಳ ಬಗ್ಗೆ ನಿರ್ದಿಷ್ಟವಾಗಿ ವಿವರಿಸುತ್ತಾರಾದರೂ ಅಂತ್ಯ ಹಳೇಶಿಲಾಯುಗದ ಬಗ್ಗೆ ಹಲವಾರು ಭಿನ್ನಾಭಿಪ್ರಾಯಗಳನ್ನು ನೀಡಿರುವರು.

### ಇತ್ತೀಚೆಗೆ ದೊರೆತ ಹಳೇ ಶಿಲಾಯುಗ ನೆಲೆಗಳು

ತುಮಕೂರು ಜಿಲ್ಲೆಯ ಹಲವು ಭಾಗಗಳು ಹಳೇ ಶಿಲಾಯುಗ ಸಂಸ್ಕೃತಿಯ ವಿಭಾಗವಾಗಿದ್ದಿತೆಂಬ ಅಂಶ ಇತ್ತೀಚೆಗೆ ಕೈಗೊಂಡ ಪ್ರಾಗೈತಿಹಾಸಿಕ ಸರ್ವೇಕ್ಷಣೆಯಿಂದ ಸ್ಪಷ್ಟವಾಗಿ ತಿಳಿದುಬಂದಿದೆ. ಇಲ್ಲಿ ಹಳೇ ಶಿಲಾಯುಗದ ಅವಶೇಷಗಳು ದೊರೆಕಿದ್ದು ಇವುಗಳ ವರ್ಗೀಕರಣವು ಆದಿ ಹಳೇ ಶಿಲಾಯುಗ, ಮಧ್ಯ ಹಳೇ ಶಿಲಾಯುಗ ಮತ್ತು ಅಂತ್ಯ ಹಳೇ ಶಿಲಾಯುಗಕ್ಕೆ ಸೇರಿದವುಗಳಾಗಿವೆ ಎಂದು ನಿರ್ದಿಷ್ಟವಾಗಿ ಹೇಳಬಹುದಾಗಿದೆ. ಸರ್ವೇಕ್ಷಣೆಯ ಸಮಯದಲ್ಲಿ ಕೆಲವು ಸ್ಥಳಗಳು ಕಡಿಮೆ ಸಂಖ್ಯೆಯಲ್ಲಿ ಶಿಲಾಯುಧಗಳನ್ನಿತ್ತಿದ್ದರೆ ಮತ್ತೆ ಕೆಲವು ಸ್ಥಳಗಳಲ್ಲಿ ಬಹುಸಂಖ್ಯೆಯ ಮತ್ತು ವಿವಿಧ ಮಾದರಿಯ ಆಯುಧಗಳನ್ನು ಕಾಣಬಹುದಾಗಿದೆ. ಹೆಚ್ಚು ಸಂಖ್ಯೆಯಲ್ಲಿ ಆಯುಧಗಳು ದೊರೆಯುವುದರಿಂದ ಇವು ನಿರ್ದಿಷ್ಟವಾಗಿ ನೆಲೆಗಳಾಗಿದ್ದುವೆಂಬುದು ಸ್ಪಷ್ಟವಾಗಿ ತಿಳಿಯುತ್ತದೆ. ಇಂತಹ ನೆಲೆಗಳ ಪ್ರಾಕೃತಿಕ ಹಿನ್ನೆಲೆಯನ್ನು ಅರಿಯಲು ಇಲ್ಲಿ ದೊರೆತಿರುವ ಶಿಲಾಯುಧಗಳು ಬಹು ಉಪಯೋಗಿಯಾಗಿವೆ. ಇಲ್ಲಿರುವ ಹಲವು ಸರೋವರಗಳು

ಾಗಿನಿಂದಲೂ ಮಾನವನಿಗೆ ನೀರನ್ನೊದಗಿಸುವ ಕೇಂದ್ರವಾಗಿ ರಬಹುದೆಂಬ ಅಂಶ ಸ್ಪಷ್ಟವಾಗಿ ತಿಳಿದುಬರುತ್ತದೆ.

**ಆದಿ ಹಳೇ ಶಿಲಾಯುಗ ಸಂಸ್ಕೃತಿ**

ಆದಿ ಹಳೇಶಿಲಾಯುಗ ಸಂಸ್ಕೃತಿಯ ಶಿಲಾಯುಧಗಳನ್ನು ತಿಪಟೂರು ತಾಲ್ಲೂಕಿನ ಹರೇನಹಳ್ಳಿ, ಹೊನ್ನೇಮಾರನಹಳ್ಳಿ ಮತ್ತು ಬೊಮ್ಮೇನಹಳ್ಳಿ, ಮಧುಗಿರಿ ತಾಲ್ಲೂಕಿನ ಅವರ್ಗಲ್ಲು, ಗುಟ್ಟೆ ಮತ್ತು ಚಿಕ್ಕೇಗೌಡನರೊಪ್ಪ, ಪಾವಗಡ ತಾಲ್ಲೂಕಿನ ವೈ. ಎನ್. ಹೊಸಕೋಟೆ, ತುಮಕೂರು ತಾಲ್ಲೂಕಿನ ಸೀಗೆಹಳ್ಳಿಗಳಲ್ಲಿ ಕೆಲವೇ ಆಯುಧಗಳು ದೊರೆತಿದ್ದು ಈ ಸಂಸ್ಕೃತಿ ಇದ್ದಿತೆಂಬುದು ಸ್ಪಷ್ಟವಾಗುತ್ತದೆ. ಆದರೆ ಗುಬ್ಬಿ ತಾಲ್ಲೂಕಿನ ಅಪ್ಪಾನಹಳ್ಳಿ, ದೊಡ್ಡಗುಣಿ, ಮೂಗನಾಯಕನಕೋಟೆ, ಮಾರಶೆಟ್ಟಿಹಳ್ಳಿ, ಗಳಿಗೆಕೆರೆ, ಶಿವಪುರ, ಓಬಳಾಪುರ ಮತ್ತು ಮಂಚಲ್ದೊರೆಗಳಲ್ಲಿ ದೊರೆತಿರುವ ವಿವಿಧ ಮಾದರಿ ಆಯುಧಗಳಿಂದಾಗಿ ಈ ಸ್ಥಳಗಳು ಅತಿ ಪ್ರಮುಖ ನೆಲೆಗಳಾಗಿದ್ದವೆಂಬ ಅಂಶ ಸ್ಪಷ್ಟವಾಗಿ ತಿಳಿಯುತ್ತದೆ.

ಈ ಪ್ರದೇಶಗಳಲ್ಲಿ ಪ್ರಮುಖವಾಗಿ ದೊರೆತಿರುವ ಶಿಲಾಯುಧಗಳೆಂದರೆ ಕೈಗೊಡಲಿ, ಸೀಳುಗತ್ತಿ, ಮಚ್ಚುಗತ್ತಿ, ಹೆರೆಗತ್ತಿ, ಈಟಿ, ದುಂಡಾದ ಚಪ್ಪಟೆ ಆಯುಧ, ಮೊನಚಾದ ಚಕ್ಕೆಕಲ್ಲಿನ ಆಯುಧ, ಕೊಚ್ಚುಗತ್ತಿ, ತೆಳುಚಕ್ಕೆ ಆಯುಧ, ಬೈರಿಗೆ ಇತ್ಯಾದಿ. ಈ ಆಯುಧಗಳನ್ನು ಪದರಗಲ್ಲು, ಅಗ್ನಿಶಿಲೆ ಹಾಗೂ ಕಗ್ಗಲ್ಲುಗಳಲ್ಲಿ ತಯಾರಿಸಲಾಗಿದೆ. ಮೂಗನಾಯಕನ ಕೋಟೆ(ಗುಬ್ಬಿ ತಾಲ್ಲೂಕು)ಯಲ್ಲಿ ದೊರೆತಿರುವ ಒಂದು ಕೈಗೊಡಲಿಯು ಅಬ್ಬೆವಿಲಿಯನ್ ಮಾದರಿಯಲ್ಲಿದ್ದು ಅದನ್ನು ಕಬ್ಬಿಣದ ಅದಿರುಯುಕ್ತ ಸ್ಫಟಿಕ ಶಿಲೆಯಲ್ಲಿ ಸಿದ್ಧಪಡಿಸಲಾಗಿದೆ. ಮತ್ತೊಂದು ಶಿಲಾಯುಧವು ಯಕ್ಕಲಕಟೆ-ಕೈಮರ (ಗುಬ್ಬಿ ತಾಲ್ಲೂಕು)ದಲ್ಲಿ ದೊರಕಿದ್ದು, ಇದನ್ನು ಈಟಿಶಸ್ತ್ರ (Lanceolate) ಎಂದು ಗುರುತಿಸಲಾಗಿದೆ. ಇದನ್ನು ಹಿಡಿಕೆಗೆ ಕಟ್ಟಿಕೊಂಡು ಬಳಸಲಾಗುತ್ತಿತ್ತೆಂಬ ಅಂಶ ತಿಳಿಯುತ್ತದೆ.

ತಿಪಟೂರು ತಾಲ್ಲೂಕು ಮತ್ತು ಗುಬ್ಬಿ ತಾಲ್ಲೂಕಿನ ನೆಲೆಗಳಿರುವ ಸುತ್ತಮುತ್ತಲ ಪ್ರದೇಶಗಳು ಗುಡ್ಡಗಳಿಂದ ಕೂಡಿದ್ದು, ಇಲ್ಲಿ ಬಿದ್ದ ಮಳೆನೀರು ಒಂದು ಕಡೆ ಶೇಖರವಾಗುತ್ತದೆ. ಹೀಗೆ ಶೇಖರಗೊಂಡ ನೀರು ವರ್ಷವಿಡಿ ಮಾನವನಿಗೆ ಉಪಯೋಗಕ್ಕೆ ಬರುತ್ತಿದ್ದಿರಬೇಕು. ಆದ್ದರಿಂದ ಈ ಮಾನವನು ಇಂತಹ ಸರೋವರಗಳನ್ನು ಅವಲಂಬಿಸಿ ತನ್ನ ನೀರಿನ ಅವಶ್ಯಕತೆಯನ್ನು ಪೂರೈಸಿಕೊಂಡಿರಬೇಕೆಂಬ ಅಂಶ ತಿಳಿಯುತ್ತದೆ.

**ಮಧ್ಯ ಹಳೇಶಿಲಾಯುಗ ಸಂಸ್ಕೃತಿ**

ಮಧ್ಯ ಹಳೇ ಶಿಲಾಯುಗ ಸಂಸ್ಕೃತಿಗೆ ಸೇರಿದ ಹಲವು ನೆಲೆಗಳು ತುಮಕೂರು ಜಿಲ್ಲಾ ಪ್ರದೇಶದಲ್ಲಿ ಇರುವುದು ತಿಳಿಯುತ್ತದೆ. ಗುಬ್ಬಿ ತಾಲ್ಲೂಕಿನ ಅಪ್ಪಾನಹಳ್ಳಿ, ಓಬಳಾಪುರ, ಗಳಿಗೆಕೆರೆ, ದೊಡ್ಡಗುಣಿ, ಮೂಗನಾಯಕನಕೋಟೆ, ಮಾರಶೆಟ್ಟಿಹಳ್ಳಿ, ಮಂಚಲ್ದೊರೆ, ಯಕ್ಕಲಕಟ್ಟೆ-ಕೈಮರ ಮತ್ತು ಶಿವಪುರ, ಮಧುಗಿರಿ ತಾಲ್ಲೂಕಿನ ಅವರ್ಗಲ್ಲು, ಮಿಡಿಗೇಶಿ ಮತ್ತು ಗುಟ್ಟೆ, ತಿಪಟೂರು ತಾಲ್ಲೂಕಿನ ಕರಡಿ, ಬೊಮ್ಮೇನಹಳ್ಳಿ, ಹರೇನಹಳ್ಳಿ ಮತ್ತು ಹೊನ್ನೇಮಾರನಹಳ್ಳಿ ಹಾಗೂ ಪಾವಗಡ ತಾಲ್ಲೂಕಿನ ನಿಡುಗಲ್ಲುಗಳಲ್ಲಿ ಈ ಸಂಸ್ಕೃತಿಗೆ ಸೇರಿದ ಶಿಲಾಯುಧಗಳನ್ನು ಶೋಧಿಸಲಾಗಿದೆ.

ಮಧ್ಯ ಹಳೆ ಶಿಲಾಯುಗದ ಹಂತದಲ್ಲಿ ಪ್ರಾದೇಶಿಕವಾಗಿ ಹಾಗೂ ಸ್ಥಳೀಯವಾಗಿ ವೈವಿಧ್ಯತೆಯ ಉಪಕರಣಗಳನ್ನು ಸಿದ್ಧಮಾಡಿರುವುದು ತಿಳಿಯುತ್ತದೆ. ಈ ಕಾಲದ ಆಯುಧಗಳನ್ನು ಚಕ್ಕೆಗಳಿಂದ ತಯಾರಿಸಲಾಗಿದ್ದು, ಹೀಗೆ ತಯಾರಿಸುವಾಗ ಹಲವು ತಂತ್ರಗಳನ್ನು ಬಳಸಿರುವುದನ್ನು ಕಾಣಬಹುದು. ಅದೇ ರೀತಿ ಆಯುಧ ತಯಾರಿಕೆಯ ಕಚ್ಚಾವಸ್ತುವಿನ ಆಯ್ಕೆಯಲ್ಲೂ ಸಾಕಷ್ಟು ಬದಲಾವಣೆ ಕಾಣಬಹುದು. ತುಮಕೂರು ಜಿಲ್ಲಾ ಪ್ರದೇಶದಲ್ಲಿ ದೊರೆತಿರುವ ಆಯುಧಗಳನ್ನು ಹೆಚ್ಚಾಗಿ ಬೆಣಚುಕಲ್ಲು ಮತ್ತು ಅಗ್ನಿಶಿಲೆಯಲ್ಲೂ ತಯಾರಿಸಿದವುಗಳಾಗಿವೆ. ಪ್ರಮುಖ ಮಾದರಿ ಆಯುಧಗಳೆಂದರೆ ಹೆರೆಯುವ ಆಯುಧ, ರಂಧ್ರ ಕೊರೆಯುವ ಆಯುಧ, ಮೊನೆಗಳು, ತಿರುಳಾಯುಧ ಹಾಗೂ ಇತರೆ ಮಾದರಿಗಳಲ್ಲಿವೆ. ಇವುಗಳ ಪ್ರಮುಖ ಮಾದರಿಯು ದುಂಡಾಗಿ ಆಯತಾಕೃತಿಯಲ್ಲಿ ಮತ್ತು ಮೊನಚಾಗಿರುವುದನ್ನು ಕಾಣಬಹುದು. ಒಮ್ಮೊಮ್ಮೆ ಅವು ಚಿಪ್ಪಿನಾಕಾರದಲ್ಲಿ ಇರುವುದು ಕಂಡುಬರುತ್ತದೆ.

ಮೂಗನಾಯಕನಕೋಟೆ (ಗುಬ್ಬಿ ತಾಲ್ಲೂಕು)ಯಲ್ಲಿ ಆದಿ ಹಳೇ ಶಿಲಾಯುಗದಿಂದ ಮಧ್ಯ ಹಳೇ ಶಿಲಾಯುಗಕ್ಕೆ ಆದಂತಹ ಬೆಳವಣಿಗೆಯ ಹಂತವನ್ನು ಕಾಣಬಹುದಾಗಿದೆ.

ಒಟ್ಟಿನಲ್ಲಿ ಈ ಶಿಲಾಯುಧಗಳ ಮತ್ತು ಈ ನೆಲೆಗಳ



ಹಳೇ ಶಿಲಾಯಗ - ಕೈಗೊಡಲಿ, ಯಕ್ಕಲಕಟ್ಟೆ - ಕೈಮರ
ಗುಬ್ಬಿ ತಾಲ್ಲೂಕು, ತುಮಕೂರು ಜಿಲ್ಲೆ



ಅಪ್ಪಾನಹಳ್ಳಿ, ಹಾಗಲವಾಡಿ ಹೋಬಳಿ
ಗುಬ್ಬಿ ತಾಲ್ಲೂಕು →
ಹಳೇ ಶಿಲಾಯುಧಗಳು



ಹಳೇ ಶಿಲಾಯುಧಗಳು, ದೊಡ್ಡಗುಣಿ
ಗುಬ್ಬಿ ತಾಲ್ಲೂಕು, ತುಮಕೂರು ಜಿಲ್ಲೆ





ಹಳೇ ಶಿಲಾಯುಗದ ಆಯುಧ : ಮೂಗನಾಯಕನ ಕೋಟೆ
ಗುಬ್ಬಿ ತಾಲ್ಲೂಕು

ಅಧ್ಯಯನ ಮಧ್ಯ ಹಳೇ ಶಿಲಾಯುಗ ಸಂಸ್ಕೃತಿಯ ಮೇಲೆ ಹೆಚ್ಚು ಬೆಳಕು ಚೆಲ್ಲುವುದರಲ್ಲಿ ಸಂಶಯವಿಲ್ಲ.

**ಅಂತ್ಯ ಹಳೇ ಶಿಲಾಯುಗ ಸಂಸ್ಕೃತಿ**

ಪ್ರೊ. ಎಂ. ಶೇಷಾದ್ರಿಯವರು ಕಿಬ್ಬನಹಳ್ಳಿಯ ಅಂತ್ಯ ಹಳೇ ಶಿಲಾಯುಗದ ಸ್ತರವನ್ನು ಗುರ್ತಿಸುವುದರಲ್ಲಿ ಹಲವಾರು ಅನುಮಾನಗಳನ್ನು ಸೂಚಿಸಿರುವುದನ್ನು ಕಾಣಬಹುದು. ಕಿಬ್ಬನಹಳ್ಳಿಯು ಒಂದು ಪ್ರಮುಖ ಅಂತ್ಯಹಳೇ ಶಿಲಾಯುಗದ ನೆಲೆಯಾಗಿದೆ. ಅದೇ ರೀತಿ ಇತ್ತೀಚೆಗೆ ಹಲವಾರು ನೆಲೆಗಳು ದೊರೆತಿದ್ದು ಅಂತ್ಯ ಹಳೇ ಶಿಲಾಯುಗ ಸಂಸ್ಕೃತಿಯ ಆಯುಧ ಉದ್ಯಮ ಕೇಂದ್ರಗಳೇ ಇದ್ದ ಬಗ್ಗೆ ಖಚಿತ ಮಾಹಿತಿ ಯನ್ನೊದಗಿಸಿವೆ. ಇಂತಹ ಒಂದು ಪ್ರಮುಖ ನೆಲೆ ಮೂಗ ನಾಯಕನಕೋಟೆ(ಗುಬ್ಬಿ ತಾಲ್ಲೂಕು).

ತುಮಕೂರು ಜಿಲ್ಲಾ ಪ್ರದೇಶದ ಹಲವು ಸ್ಥಳಗಳಲ್ಲಿ ಅಂತ್ಯ ಹಳೇ ಶಿಲಾಯುಗದ ಅವಶೇಷಗಳನ್ನು ಗುರ್ತಿಸಲಾಗಿದೆ. ಅವುಗಳೆಂದರೆ ಗುಬ್ಬಿ ತಾಲ್ಲೂಕಿನ ಅದ್ಲಗೆರೆ, ಅಪ್ಪಾನಹಳ್ಳಿ, ಉನಗನಾಲ, ಓಬಳಾಪುರ, ಕಾರೇಕುರ್ಚಿ, ಗಳಿಗೆಕೆರೆ, ತ್ಯಾಗಟೂರು, ತಿಪ್ಪಸಂದ್ರ, ಬಣ್ಣಿಗಾನಹಳ್ಳಿ, ಬೋಗಸಂದ್ರ, ಬಂಡನಹಳ್ಳಿ, ಮಾರಶೆಟ್ಟಿಹಳ್ಳಿ, ಮುದಿಪುರ, ಮೂಗನಾಯಕನಕೋಟೆ, ಮಂಚಲ್ದೊರೆ, ಯಲ್ಲಾಪುರ, ಯಕ್ಕಲಕಟ್ಟೆ-ಕೈಮರ, ವೀರಾಪುರ, ಸೌರನಕೋಟೆ, ಸಾಕ್ಸಂದ್ರ, ಹೂವಿನಕಟ್ಟೆ, ಹೊಸಕೆರೆ ಮತ್ತು ಶಿವಪುರ, ಚಿಕ್ಕನಾಯಕನಹಳ್ಳಿ ತಾಲ್ಲೂಕು, ಅಂಕನಬಾವಿ, ಸಾಲುಕಟ್ಟೆ ಮತ್ತು ಹೊಸಹಳ್ಳಿ, ಮಧುಗಿರಿ ತಾಲ್ಲೂಕು ಅವರ್ಗಲ್ಲು, ಗುಟ್ಟೆ ಮತ್ತು ಮಿಡಿಗೇಶಿ, ಕೊರಟಗೆರೆ ತಾಲ್ಲೂಕು ಇರಕಸಂದ್ರ ಕಾಲೋನಿ ಮತ್ತು ಗೊಲ್ಲರಹಟ್ಟಿ, ತಿಪಟೂರು ತಾಲ್ಲೂಕು ಕರಡಿ, ಬೊಮ್ಮೇನಹಳ್ಳಿ, ಸಿಡ್ಲೆಹಳ್ಳಿ, ಹರೇನಹಳ್ಳಿ, ಹೊನ್ನೇಮಾರನ ಹಳ್ಳಿ ಮತ್ತು ಶೆಟ್ಟಿಹಳ್ಳಿ, ತುಮಕೂರು ತಾಲ್ಲೂಕು, ಧಣಾಪುರ ಹಾಗೂ ಪಾವಗಡ ತಾಲ್ಲೂಕು ನಾಗಲಾಪುರ, ನಿಡುಗಲ್ಲು ಮತ್ತು ವೈ. ಎನ್. ಹೊಸಕೋಟೆ ಈ ಸ್ಥಳಗಳಲ್ಲಿ ದೊರೆತಿರುವ ಪ್ರಮುಖ ಆಯುಧಗಳೆಂದರೆ ಅಲಗುಕತ್ತಿ, ಉಳಿಗಳು, ಕೊರೆಯುಳಿ, ದಬ್ಬಳ, ಬಾಣದ ಮೊನೆ, ಹೆರೆಗತ್ತಿ, ಕೆತ್ತುಮೊಳೆ, ಮಚ್ಚುಕತ್ತಿ, ಅಗಲವಾದ ತೆಳೆಚಕ್ಕೆ ಮತ್ತು ಇತರೆ. ಈ ಆಯುಧಗಳನ್ನು ತಯಾರಿಸಲು ಸ್ಫಟಿಕಶಿಲೆ, ಬೆಣಚುಕಲ್ಲು ಮತ್ತು ಹಾಲುಗಲ್ಲನ್ನು ಪ್ರಮುಖವಾಗಿ ಬಳಸಲಾಗಿದೆ.

ಅಂತ್ಯ ಹಳೇ ಶಿಲಾಯುಗ ಸಂಸ್ಕೃತಿಯ ಹಲವಾರು ನೆಲೆಗಳು ಇಲ್ಲಿರುವುದರಿಂದ ಮತ್ತು ಆಯುಧಗಳು ಅತಿ ಹೆಚ್ಚು ಸಂಖ್ಯೆಯಲ್ಲಿ ದೊರಕುವುದರಿಂದ ಕೆಲವು ಸ್ಥಳಗಳು ಈ ಸಂಸ್ಕೃತಿಯ ಆಯುಧ ಉದ್ಯಮ ಕೇಂದ್ರವಾಗಿದ್ದಿತೆಂಬ ಅಂಶ ಸ್ಪಷ್ಟವಾಗಿ ತಿಳಿಯುತ್ತದೆ.

**ಉಪಸಂಹಾರ**

ತುಮಕೂರು ಜಿಲ್ಲಾ ಪ್ರದೇಶವು ಶಿಲಾ ಸಂಸ್ಕೃತಿಗೆ ಯಾವುದೇ ಪರಿವರ್ತನೆಯನ್ನಾಗಲೀ ಅಥವಾ ತಿರುವನ್ನಾಗಲೀ ನೀಡಬಹುದೇ ಎಂಬ ಬಗ್ಗೆ ನಿರ್ಧರಿಸಬೇಕಾಗಿದೆ. ಆದರೆ ಶಿಲಾ ಉಪಕರಣಗಳ ಆಕೃತಿ ವರ್ಗೀಕರಣ, ಕಚ್ಚಾ ವಸ್ತುಗಳ ಉಪಯೋಗ ಮತ್ತು ಗುಣಮಟ್ಟದಲ್ಲಿ ಸ್ವಲ್ಪವಾದರು ಬದಲಾವಣೆಗಳನ್ನು ಗುರ್ತಿಸಬಹುದಾಗಿದೆ. ಇಲ್ಲಿನ ಕೆಲವು ನೆಲೆಗಳಲ್ಲಿ ಈ ಮೂರೂ ಹಂತಗಳ ನಡುವಿನ ಬೆಳವಣಿಗೆಯನ್ನೂ ಗುರ್ತಿಸಲು ಸಾಧ್ಯವಾಗಬಹುದು. ಒಟ್ಟಿನಲ್ಲಿ ಇದುವರೆಗೂ ಶಿಲಾಯುಗದ ಬಗ್ಗೆ ಕಿರು ಪರಿಚಯವನ್ನಷ್ಟೇ ಕಂಡಿದ್ದ ಈ ಪ್ರದೇಶದ ಬಗ್ಗೆ ಅತಿ ಹೆಚ್ಚು ಮಾಹಿತಿಯನ್ನು ಪಡೆದುಕೊಳ್ಳಲು ಸಹಾಯಕವಾಗಿದೆ. ಅದೇ ರೀತಿ ಕರ್ನಾಟಕದ ಈ ಒಂದು ಭೂಭಾಗವೂ ಕೂಡ ಪ್ರಾಗೈತಿಹಾಸಿಕವಾಗಿ ಸರ್ವೇಕ್ಷಣೆಗೊಂಡು ಹಲವು ಮಾಹಿತಿಗಳನ್ನು ಒದಗಿಸುತ್ತಿದೆ ಎಂದು ಹೇಳಬಹುದು. ○

ಡಾ॥ ಅ. ಸುಂದರ *

# ಬೆಳಗಾವಿ ಜಿಲ್ಲಾ ಪ್ರದೇಶದಲ್ಲಿಯ ಪೂರ್ವಭಾವಿ ಇತಿಹಾಸ ಸಂಸ್ಕೃತಿಗಳು: ಕೆಲವು ಮುಖ್ಯ ಸಮಸ್ಯೆಗಳು ಮತ್ತು ಸೂಚನೆಗಳು

ಸುಮಾರು ೧೮೮೪ರಲ್ಲಿ ಕೊಣ್ಣೂರು (ಗೋಕಾಕ್ ತಾ): ಗ್ರಾಮದ ಬಳಿ ೧೦೦ಕ್ಕೂ ಹೆಚ್ಚು ಬೃಹತ್ ಶಿಲಾ ಸಂಸ್ಕೃತಿ (ಸು.ಕ್ರಿ.ಪೂ.೧೨೦೦-೮೦೦)ಯ ದಾರಿಕೋಣೆ ಗೋರಿಗಳ ಬಗ್ಗೆ ಬೆಳಗಾವಿ ಜಿಲ್ಲಾ ಗೆಜೆಟೀರ್‌ನಲ್ಲಿ[1] ವರದಿಯಾಗಿತ್ತು. ರಾಬರ್ಟ್ ಬ್ರೂಸ್‌ಫುಟ್ ಅವರು ನೂತನ ಶಿಲಾಯುಗ ಸಂಸ್ಕೃತಿ (ಸು.ಕ್ರಿ.ಪೂ.೨೦೦೦-೧೦೦೦)ಯ ಒಂದು ವಿಶಿಷ್ಟ ಪ್ರಕಾರದ ಕೊಡಲಿ[2] ಸಿಕ್ಕಿದ್ದನ್ನು ವರದಿ ಮಾಡಿದ್ದಾರೆ. ೧೯೩೯ರಲ್ಲಿ ಅಂದಿನ ಬೊಂಬಾಯಿ ಸರ್ಕಾರ ಸ್ಥಾಪಿಸಿದ, ೧೯೫೬ರಲ್ಲಿ ಕರ್ನಾಟಕ ವಿಶ್ವವಿದ್ಯಾಲಯಕ್ಕೆ ಸೇರಿಸಲ್ಪಟ್ಟ, ಕನ್ನಡ ಸಂಶೋಧನ ಸಂಸ್ಥೆಯ ಪ್ರಥಮ ನಿರ್ದೇಶಕ ಪಂಚಮುಖಿಯವರು ಸಪ್ತನಾಗರ (ಅಥಣಿ ತಾ)ದ ಒಂದು ಪ್ರಾಚೀನ ನೆಲೆಯಲ್ಲಿ ಕಪ್ಪು ನೇರಳೆ ಬಣ್ಣದ ರೇಖಾಚಿತ್ರವಿದ್ದ ಮೃತ್‌ಪಾತ್ರೆ ಅವಶೇಷಗಳನ್ನು[3] ಹಾಗೂ ಅನಂತರ ಬೆಳಗಾವಿ ನಗರದ ಹೊರವಲಯದ ವಡಗಾಂವ್ ಮಾಧವಪುರದಲ್ಲಿ ಶಾತವಾಹನ ಅರಸೊತ್ತಿಗೆ ಕಾಲದ ಇಟ್ಟಿಗೆ ಕಟ್ಟಡಗಳಿದ್ದ ಒಂದು ಪ್ರಾಚೀನ ಜನವಸತಿ ನಗರ ನೆಲೆಯನ್ನು[4] ಶೋಧಿಸಿದ್ದರು. ಹೀಗೆ ಬನವಾಸಿ-ಹಲಶಿ (ಖಾನಾಪುರ, ತಾ)ಯ ಕರ್ನಾಟಕದ ಆದಿಕದಂಬ ಅರಸು ಮನೆತನ (ಸು.ಕ್ರಿ.ಶ.೩೪೨-೫೪೫)ಕ್ಕಿಂತ ಪೂರ್ವದ ಸುಮಾರು ೨೫೦೦ ವರ್ಷ ಕಾಲಾವಧಿಯಲ್ಲಿ ಈ ಪ್ರದೇಶದಲ್ಲಿದ್ದ ಜನ ವಾಸ್ತವ್ಯದ ಬೆಳವಣಿಗೆಯಲ್ಲಿ ಅನುಕ್ರಮವಾಗಿ ಮೂರು ಪ್ರಮುಖ ಘಟ್ಟಗಳನ್ನು ಗುರುತಿಸಬಹುದಾದ ಕೆಲವೇ ಪುರಾವೆಗಳು ದೊರೆತಿದ್ದವು. ೧೯೫೪ರಿಂದ ಈಗಿನವರೆಗೆ ಆಗಾಗ್ಗೆ ಈ ಪ್ರದೇಶದಲ್ಲಿ ವೈಜ್ಞಾನಿಕ ತರಬೇತಿಯನ್ನು ಪಡೆದ ಪುರಾತತ್ವ ತಜ್ಞರು ತಕ್ಕಮಟ್ಟಿಗೆ ಕೂಲಂಕಷ ಅನ್ವೇಷಣೆ ಮತ್ತು ಅಧ್ಯಯನವನ್ನು ಕೈಗೊಂಡಿದ್ದರಿಂದ ಮೊದಲನೇ ಎರಡು ಸಂಸ್ಕೃತಿಗಳ ಇನ್ನೂ ಹಲವಾರು ಮಹತ್ವದ ನೆಲೆಗಳು ಪತ್ತೆಯಾದುದಲ್ಲದೆ, (ನೂತನ)ಶಿಲಾತಾಮ್ರಯುಗ ಸಂಸ್ಕೃತಿಗಿಂತಲೂ ಬಹಳ ಪೂರ್ವದ ಕೃಷ್ಣಾ-ಘಟಪ್ರಭಾ ನದಿಗಳ ಬಯಲಿನಲ್ಲಿ ಸ್ಪಷ್ಟವಾಗಿ ಎರಡು ಮುಖ್ಯ ಘಟ್ಟಗಳ ಶಿಲಾಯುಗ ನೆಲೆಗಳು ಶೋಧವಾದವು: ಅವು ಆದಿ ಮತ್ತು ಮಧ್ಯ ಹಳೇ ಶಿಲಾಯುಗ ಸಾಂಸ್ಕೃತಿಕ ನೆಲೆಗಳು[5] (ಸು.೫ ಲಕ್ಷವರ್ಷಗಳಿಂದ ಹಿಡಿದು ೪೦ ಸಾವಿರ ವರ್ಷಗಳಷ್ಟು ಪ್ರಾಚೀನ).

ಈ ಶೋಧನೆಗಳಲ್ಲಿ ತೊರಗಲ್ ಯಾದವಾಡ (ರಾಮದುರ್ಗ ತಾ) ಮತ್ತು (ಬೈಲಹೊಂಗಲ ತಾ)[6]

---

* ನಿರ್ದೇಶಕರು, ಕರ್ನಾಟಕ ವಿಶ್ವವಿದ್ಯಾಲಯ ಸ್ನಾತಕೋತ್ತರಕೇಂದ್ರ, ಬಿಜಾಪುರ

೧. ಬಾಂಬೆ ಪ್ರೆಸಿಡೆನ್ಸಿ ಗೆಜೆಟೀರ್: ಬೆಳಗಾವಿ ಜಿಲ್ಲೆ (೧೮೮೪) ಸಂ. XXI

೨. ರಾಬರ್ಟ್ ಬ್ರೂಸ್ ಫುಟ್; ೧೯೧೬: ದಿ ಇಂಡಿಯನ್ ಪ್ರಿಹಿಸ್ಟಾರಿಕ್ ಆ್ಯಂಡ್ ಪ್ರೋಟೋ ಹಿಸ್ಟಾರಿಕ್ ಆ್ಯಂಟಿಕ್ವಿಟಿಸ್: ನೋಟ್ಸ್ ಆನ್ ದೇರ್ ಏಜಸ್ ಆ್ಯಂಡ್ ಡಿಸ್ಟ್ರಿಬ್ಯೂಶನ್, ಗೌವರ್ನಮೆಂಟ್ ಮ್ಯೂಸಿಯಮ್, ಮದ್ರಾಸ್, ಪುಟಗಳು ೭೭-೯೬, ೧೨೨-೨೮.

೩. ಪ್ರಾಗ್ರೆಸ್ ಆಫ್ ಕನ್ನಡ ರಿಸರ್ಚ್ ಇನ್ ಬಾಂಬೆ ಸ್ಟೇಟ್ ಫಾರ್ ೧೯೪೧-೪೬, ಕನ್ನಡ ರಿಸರ್ಚ್ ಇನ್‌ಸ್ಟಿಟ್ಯೂಟ್, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ (ಕ.ರಿ.ಇ,ಕ.ವಿ.ವಿ), ಪುಟ ೨೩

೪. ಅದೇ ಕಡೆ, ಪುಟಗಳು ೧-೨

೫. ಜೋಶಿ, ಆರ್.ವಿ; ೧೯೫೬: ದಿ ಪ್ಲೀಸ್ಟೊಸೀನ್ ಸ್ಟಡಿಸ್ ಇನ್ ದಿ ಮಲಪ್ರಭಾ ಬೇಸಿನ್, ಕರ್ನಾಟಕ ವಿಶ್ವವಿದ್ಯಾಲಯ ಮತ್ತು ಡೆಕ್ಕನ್ ಕಾಲೇಜ್ ಪೋಸ್ಟ್ ಗ್ರಾಜುಯೇಟ್ ಆ್ಯಂಡ್ ರಿಸರ್ಚ್ ಇನ್‌ಸ್ಟಿಟ್ಯೂಟ್, ಪುಣೆ.

೬. ಕರ್ನಾಟಕ ವಿಶ್ವವಿದ್ಯಾಲಯ ಪ್ರಾಚೀನ ಭಾರತ ಇತಿಹಾಸ ಮತ್ತು ಶಾಸನ ವಿಜ್ಞಾನ ವಿಭಾಗದ ವಿದ್ಯಾರ್ಥಿ ಶ್ರೀ ಹೊಂಡದಕಟ್ಟಿ, ತಮ್ಮ ಎಂ.ಫಿಲ್. ಸಂಶೋಧನೆ ಕಾಲದ ಪ್ರಾದೇಶಿಕ ಅನ್ವೇಷಣೆಯಲ್ಲಿ ಈ ನೆಲೆಯನ್ನು ಶೋಧಿಸಿದರು.

ಕೊಣ್ಣೂರು (ಗೋಕಾಕ ತಾ), ಕಡೋಲಿ, ಏಕ್ಸಂಬಾ, ಚಿಕ್ಕೋಡಿ ತಾ), ಕುಡಚಿ (ರಾಯಭಾಗ ತಾ), ಸತ್ತಿ, ಮಂಗಸೂಳಿ (ಅಥಣಿ ತಾ) ಮೊದಲಾದವು ಮುಖ್ಯವಾದವು.[7] ಈ ಪ್ರಾಗಿತಿಹಾಸ ಸಂಸ್ಕೃತಿಗಳ ನೆಲೆಗಳನ್ನು ಹೀಗೆ ವಿಂಗಡಿಸಬಹುದು.

ಅ) ಮಲಪ್ರಭಾ ನದಿ ಬಯಲು ಪ್ರದೇಶ

| | |
|---|---|
| ೧) ಆದಿ ಹಳೇ ಶಿಲಾಯುಗ | ತೊರಗಲ್ |
| ೨) ಮಧ್ಯ ಹಳೇ ಶಿಲಾಯುಗ | ಯಾದವಾಡ |
| ೩) ನೂತನ (ಶಿಲಾ ತಾಮ್ರಯುಗ ಹಂತ)ಶಿಲಾಯುಗ | ಜೋಗಿ ಬೂದಿಹಾಳ |
| ೪) ಕಬ್ಬಿಣಯುಗ ಬೃಹತ್ ಶಿಲಾ ಸಂಸ್ಕೃತಿ | ಹಲಶಿ, ಸೌಂದತ್ತಿ, ನವಿಲುತೀರ್ಥ ಸಿಂದೋಗಿ, ತಲ್ಲೂರು |
| ೫) ಆದಿ ಇತಿಹಾಸ ಸಂಸ್ಕೃತಿ | ಕಡೋಲಿ,ವಡಗಾಂವ್ -ಮಾಧವ್‌ಪುರ, ತಲ್ಲೂರು |

ಬ) ಘಟಪ್ರಭಾ ನದಿ ಬಯಲು ಪ್ರದೇಶ

| | |
|---|---|
| ೧) ಆದಿ ಹಳೇ ಶಿಲಾಯುಗ ಸಂಸ್ಕೃತಿ | ಸುತಗಟ್ಟಿ |
| ೨) ನೂತನ (ಶಿಲಾ-ತಾಮ್ರ) ಯುಗ ಸಂಸ್ಕೃತಿ | ಕೊಣ್ಣೂರು (ಬೂದಿಗುಡ್ಡಸಹಿತ) |
| ೩) ಕಬ್ಬಿಣ ಯುಗ ಬೃಹತ್ ಶಿಲಾ ಸಂಸ್ಕೃತಿ | ನಿರ್ವಾಣಹಟ್ಟಿ, ಹಿಡಕಲ್, ಹೂನೂರು, ಗುಡಗೇರಿ ಗೊಡಚನಮಲ್ಕಿ, ಗುಮಚಿ ಮರಡಿ |

ಕ) ಕೃಷ್ಣಾ ಮೇಲ್ದಂಡೆ ಪ್ರದೇಶ

| | |
|---|---|
| ೧) ಸೂಕ್ಷ್ಮ ಶಿಲಾಯುಗ ಸಂಸ್ಕೃತಿ | ಮಂಗಸೂಳಿ. |
| ೨) ಶಿಲಾ-ತಾಮ್ರಯುಗ ಸಂಸ್ಕೃತಿ | ಕಡೋಲಿ, ಏಕ್ಸಂಬಿ, ಕುಡಚಿ, ಮಂಗಸೂಳಿ, ಸತ್ತಿ |
| ೩) ಆದಿ ಇತಿಹಾಸ ಕಾಲದ ಸಂಸ್ಕೃತಿ | ಕರೋಶಿ |

ಈ ಶೋಧನೆಗಳ ಬಗ್ಗೆ ಕೆಲವು ಲೇಖನಗಳು ಮತ್ತು ಗ್ರಂಥಗಳು ಈಗಾಗಲೇ ಪ್ರಕಟವಾಗಿವೆ. ಇಲ್ಲಿ ಗಮನಿಸಬೇಕಾದ ಕೆಲವು ಅಂಶಗಳು ಹೀಗಿವೆ: ಮಲಪ್ರಭಾ ನದಿ ಮತ್ತು ಕೃಷ್ಣಾನದಿ ಉಗಮ ಪ್ರದೇಶದಿಂದ ಇವೆರಡು ನದಿಗಳ ಸಂಗಮದವರೆಗೆ ತಜ್ಞರು ಸಾಧ್ಯವಾದಷ್ಟು ಮಟ್ಟಿಗೆ ಕೂಲಂಕಷವಾಗಿ ಪರಿಶೀಲಿಸಿದ್ದಾರೆ. ಆದರೂ ಬೆಳಗಾವಿ ಜಿಲ್ಲಾ ಭಾಗದ ಕೃಷ್ಣಾ ನದಿ ಬಯಲಿನಲ್ಲಿ ಹಳೇಶಿಲಾಯುಗದ ಆದಿ, ಮಧ್ಯ ಮತ್ತು ಅಂತ್ಯ ಹಾಗೂ ಸೂಕ್ಷ್ಮ ಶಿಲಾಯುಗದ ಸಾಂಸ್ಕೃತಿಕ ನೆಲೆಗಳು ಸದ್ಯಕ್ಕೆ ವಿರಳವಾಗಿ ಕಂಡುಬಂದಿರುವದು ತುಲನಾತ್ಮಕವಾಗಿ ಕುತೂಹಲಕಾರಿಯಾಗಿದೆ. ತದ್ವಿರುದ್ಧವಾಗಿ ನೂತನ-ಶಿಲಾ ತಾಮ್ರ ಹಾಗೂ ಶಿಲಾ-ತಾಮ್ರಯುಗ ನೆಲೆಗಳು ವಿಶೇಷವಾಗಿ ಕೃಷ್ಣಾ ಮೇಲ್ದಂಡೆ ಯಲ್ಲಿರುವುದು ಮತ್ತು ಕಬ್ಬಿಣಯುಗದ ಬೃಹತ್ ಶಿಲಾ ಸಂಸ್ಕೃತಿ ನೆಲೆಗಳು ಘಟಪ್ರಭಾ ನದಿ ಬಯಲಿನಲ್ಲಿ ಹೆಚ್ಚಾಗಿರುವುದು ಮತ್ತು ಆದಿ ಇತಿಹಾಸ ಕಾಲದ ನೆಲೆಗಳು ವ್ಯಾಪಕವಾಗಿ ಎಲ್ಲೆಡೆಗಳಲ್ಲಿರುವುದೂ ಗಮನಾರ್ಹ.

### ಸಮಸ್ಯೆಗಳು

ಹಳೇ ಶಿಲಾಯುಗ ಸಂಸ್ಕೃತಿ ನೆಲೆಗಳು ಅತಿ ಪ್ರಾಚೀನವೂ ಮತ್ತು ವಿರಳವು ಆಗಿರುವುದರಿಂದ ಇವುಗಳ ಬಗ್ಗೆ ಹೆಚ್ಚಿನ ಸಂಶೋಧನೆಯಾಗದ ಹೊರತು ಸದ್ಯಕ್ಕೆ ಶಿಲಾ ಉಪಕರಣವನ್ನು ಮಾಡಲು ಬಳಸಿದ ತಂತ್ರ ಮತ್ತು ಉಪಕರಣಗಳ ಪ್ರಕಾರಗಳ ಬಗೆಗಷ್ಟೆ ಹೇಳಬಹುದು. ಈ ಭಾಗದ ನೆಲೆಗಳ ಉಪಕರಣಗಳು ಕೃಷ್ಣಾ ಘಟಪ್ರಭಾ ಮತ್ತು ಮಲಪ್ರಭಾ ಕೆಳದಂಡೆಗಳ ನೆಲೆಗಳಲ್ಲಿ ದೊರೆತ ಶಿಲಾ ಉಪಕರಣಗಳಂತಿವೆ.

ಇನ್ನು ಪೂರ್ವ ಭಾವಿ ಇತಿಹಾಸ ಸಂಸ್ಕೃತಿಗಳು ಅಂದರೆ ಮಲಪ್ರಭಾ-ಘಟಪ್ರಭಾ-ಕೃಷ್ಣಾ ಬಯಲು ಪ್ರದೇಶದ ೧) ನೂತನ-ಶಿಲಾ ತಾಮ್ರಯುಗ ಹಾಗೂ ಶಿಲಾ-ತಾಮ್ರ ಯುಗ ಮತ್ತು ೨) ಬೃಹತ್ ಶಿಲಾ ಸಂಸ್ಕೃತಿಗಳ ಮಾದರಿಗಳು ಕುತೂಹಲಕಾರಿಯಾಗಿವೆ. ಒಂದನೆಯದರಲ್ಲಿ ಎರಡು ಸ್ಪಷ್ಟ ವರ್ಗಗಳಿವೆ:

೧) ಮಸ್ಕಿ (ಪೀರಿಯಡ್ I) ಮತ್ತು ಬ್ರಹ್ಮಗಿರಿ (IA)ಯ ನೂತನ ಶಿಲಾ ತಾಮ್ರಯುಗ ಸಂಸ್ಕೃತಿ ತರಹದ್ದು, ಹಾಗೂ ೨) ಸಾವಳ್ದಾ (ಧುಳೆ ಜಿಲ್ಲೆ, ಮಹಾರಾಷ್ಟ್ರ) ಶಿಲಾ-ತಾಮ್ರ ಯುಗ ಸಂಸ್ಕೃತಿ ತರಹದ್ದು

ಇವೆರಡು ಭಿನ್ನ ಸಾಂಸ್ಕೃತಿಕ ಸಂಪ್ರದಾಯಗಳುಳ್ಳ ಬೇರೆ ಬೇರೆ ಜನವರ್ಗದವರದ್ದೆಂದು ಮಸ್ಕಿ, ಬ್ರಹ್ಮಗಿರಿ ಮತ್ತು ದೈಮಾಬಾದಿನ ಉತ್‌ಖನನಗಳಿಂದ[8] ಸ್ಪಷ್ಟವಾಗಿದೆ.

---

೭. ಸುಂದರ, ಅ : ೧೯೭೦:" ದಿ ಕ್ಯಾಲ್ಕೊಲಿಥಿಕ್ ಫೇಸ್ ಇನ್ ದಿ ಅಪ್ಪರ್ ಕೃಷ್ಣಾ" ಡಾ.ಪಿ.ಬಿ.ದೇಸಾಯಿ ಫೆಲಿಸಿಟೇಶನ್ ವಾಲ್ಯೂಂ, ಧಾರವಾಡ

ಶ್ರೀ ಎಚ್.ಎಸ್ ಕಾಂಬಳೆ ಅವರ ಪಿ ಎಚ್.ಡಿ ಸಂಶೋಧನೆಯ ಪ್ರಾದೇಶಿಕ ಅನ್ವೇಷಣೆಯಲ್ಲಿ ಮಂಗಸೂಳಿಯಲ್ಲಿ ಮಹತ್ವದ ಶಿಲಾ-ತಾಮ್ರಯುಗ ನೆಲೆಯನ್ನು ಶೋಧಿಸಿದರು.

೮. ಸಾಳಿ, ಎಸ್.ಎ. ೧೯೮೬: ದೈಮಾಬಾದ್, ೧೯೭೬-೭೯ ಆರ್ಕಿಯಾಲಾಜಿಕಲ್ ಸರ್ವೆ ಆಫ್ ಇಂಡಿಯಾ, ನವದೆಹಲಿ.

ದೈಮಾಬಾದಿನಲ್ಲಿ ಅನುಕ್ರಮವಾಗಿ ಐದು ಭಿನ್ನ ಭಿನ್ನ ಶಿಲಾ-ತಾಮ್ರಯುಗ ಸಾಂಸ್ಕೃತಿಕ ಹಂತಗಳಿದ್ದು ಅವುಗಳಲ್ಲಿ ಉತ್ತರಾರ್ಧ ಹರಪ್ಪಾ ಸಂಸ್ಕೃತಿಯ ಹಂತ (ಸು.ಕ್ರಿ.ಪೂ.೨೦೦೦-೧೮೦೦)ಕ್ಕಿಂತಲೂ ಪೂರ್ವದ ಆ ನೆಲೆಯಲ್ಲಿಯ ಅತ್ಯಂತ ಪ್ರಾಚೀನ ಸಂಸ್ಕೃತಿಯೇ ಸಾವಳ್ದಾ ಸಂಸ್ಕೃತಿ (ಸು.ಕ್ರಿ.ಪೂ.೨೨೦೦-೨೦೦೦). ಈ ಸಂಸ್ಕೃತಿಯ ಪ್ರಥಮ ಸುಳಿವು ಗೊತ್ತಾದುದು ತಾಪಿ ನದಿ ಬಯಲಿನಲ್ಲಿಯ ಸಾವಳ್ದಾದಲ್ಲಿ.[9] ಮೊದಲನೆಯದು ವಿಶೇಷವಾಗಿ ಕೃಷ್ಣಾ-ಘಟಪ್ರಭಾ-ಮಲಪ್ರಭಾ-ತುಂಗಭದ್ರಾ (ಕೆಳದಂಡೆ) ಪ್ರದೇಶದಲ್ಲಿ ಇದ್ದರೆ, ಎರಡನೆಯದು ಹೆಚ್ಚು ವ್ಯಾಪಕವಾಗಿ ಆದರೆ ವಿರಳವಾಗಿ ಕೃಷ್ಣಾ ಮೇಲ್ದಂಡೆ, ಗೋದಾವರಿ ಮಧ್ಯ ಭಾಗ ಮತ್ತು ತಾಪಿ ಬಯಲಿನಲ್ಲಿದೆ. ಈ ಸಂಸ್ಕೃತಿಗಳ ಮೂಲ ಪ್ರದೇಶಗಳು ಸ್ಪಷ್ಟವಾಗಿಲ್ಲ. ಆದರೆ ಇವೆರಡು ಸಂಸ್ಕೃತಿಗಳ ದಟ್ಟ ಸಾಂದ್ರತೆ ತುಲನಾತ್ಮಕವಾಗಿ ಕೃಷ್ಣಾ ಮೇಲ್ದಂಡೆ. ಇವುಗಳಲ್ಲಿ ಸಾವಳ್ದಾ ಸಂಸ್ಕೃತಿಯೇ ಇನ್ನೊಂದಕ್ಕಿಂತ ಮೊದಲು ಕಾಣಿಸಿಕೊಂಡು ಎರಡನೆಯದರ ಜೊತೆಗೆ ಇದ್ದಿತೆಂಬ ಅಸ್ಪಷ್ಟ ಸೂಚನೆಯು* ಕಾಂಬಳೆಯವರ ಮಂಗಸೂಳಿಯಲ್ಲಿ ನಡೆಸಿದ ಸಣ್ಣ ಪ್ರಮಾಣದ ಶೋಧನೆಯಲ್ಲಿ ಇದೆ. ದಾರಿಕೋಣೆ ಕಲ್‌ಗೋರಿಗಳು ತುಲನಾತ್ಮಕವಾಗಿ ದಕ್ಷಿಣ ಭಾರತದಲ್ಲಿಯೇ ವಿಶಿಷ್ಟವೂ ಪ್ರಾಚೀನವೂ ಆಗಿವೆ. ಇದರಂತೆಯೇ ತುಂಗಭದ್ರಾ ಮೇಲ್ದಂಡೆಯ ಭೈರವನಪಾದ (ಹಳ್ಳೂರು)-ತಡಕನಹಳ್ಳಿ (ಹಿರೇಕೆರೂರು ತಾ, ಧಾರವಾಡ ಜಿ), ಕೊಮಾರನಹಳ್ಳಿ (ಹರಿಹರ ತಾ, ಚಿತ್ರದುರ್ಗ ಜಿ.) ಹಾಗೂ ಘಟಪ್ರಭಾದಲ್ಲಿಯ ಕಲಾದಗಿ (ಬೀಳಗಿ ತಾ, ಬಿಜಾಪೂರ ಜಿ.)ಯ ಬೃಹತ್ ಶಿಲಾ ಸಂಸ್ಕೃತಿಯ ಸಾಧಾರಣ ದಾರಿ ಕೋಣೆ (?) ಕಲ್ಗೋರಿಗಳು ಈ ಸಂಪ್ರದಾಯ ಉತ್ತರಾರ್ಧ ಹಂತದ್ದೆಂದು (ಸು.ಕ್ರಿ.ಪೂ.೧೦೦೦-೮೦೦) ಹಿಂದೆ ನಾನು ಬೇರೆಡೆಯಲ್ಲಿ ಚರ್ಚಿಸಿದ್ದೇನೆ. ಈ ಬೃಹತ್ ಶಿಲಾ ಸಂಸ್ಕೃತಿಯ ಮೂಲ ಪ್ರದೇಶವು ನಿಶ್ಚಿತವಾಗಿ ತಿಳಿದಿಲ್ಲ. ಶಿಲಾ ದಾರಿಕೊಣೆ ಗೋರಿಗಳ ಮಧ್ಯದಲ್ಲಿದ್ದ ಒಂದು ಶಿಲಾ ತಾಮ್ರಯುಗ ಸಂಸ್ಕೃತಿಯ ಚಕ್ಕೆ ಕಲ್ಲಿನ ದಿಣ್ಣೆ ಗೋರಿಯು, ಈ ಸಂಸ್ಕೃತಿಯ ಕೊನೆಯ ಹಂತವು ಬೃಹತ್ ಶಿಲಾ ಸಂಸ್ಕೃತಿಯ ಪ್ರಾಚೀನ ಹಂತಕ್ಕೆ ಸಮಕಾಲೀನವಾಗಿದ್ದು ಇವೆರಡು ಸಂಸ್ಕೃತಿಗಳ ನಡುವೆ ಸಂಬಂಧವು ಏರ್ಪಟ್ಟಿತ್ತೆಂಬುದನ್ನು ಸೂಚಿಸುತ್ತದೆಯೆಂದು[11] ಈಗಾಗಲೆ ಚರ್ಚಿಸಲಾಗಿದೆ. ಹೀಗೆ ಈ ಪ್ರದೇಶದಲ್ಲಿ ಸುಮಾರು ಕ್ರಿ.ಪೂ.೨೦೦೦ ದಿಂದ ೮೦೦ರ ಕಾಲಾವಧಿಯಲ್ಲಿ ಬಹುಶಃ ಸಾವಳ್ದ ಶಿಲಾ-ತಾಮ್ರಯುಗ ಸಂಸ್ಕೃತಿ, ಮಸ್ಕಿ (ನೂತನ) ಶಿಲಾ-ತಾಮ್ರಯುಗ ಸಂಸ್ಕೃತಿ ಮತ್ತು ಕಬ್ಬಿಣಯುಗದ ಬೃಹತ್ ಶಿಲಾ ಸಂಸ್ಕೃತಿಗಳು ಹೆಚ್ಚು ಕಡಿಮೆ ಇವುಗಳ ನಡುವೆ ಸಾಂಸ್ಕೃತಿಕ ಅಂತರವಿಲ್ಲದೆ ಒಂದು ಇರುವಾಗಲೇ ಮತ್ತೊಂದು ಕಾಣಿಸಿಕೊಂಡು ಜೊತೆ-ಜೊತೆಯಾಗಿ ಬೆಳೆದಿರುವುದು ಸೂಚಿತವಾಗಿದೆ.

ಈ ಸಂಸ್ಕೃತಿಗಳು ಇಲ್ಲಿಯೇ ಹುಟ್ಟಿ ಬೆಳೆದು ಇತರ ಪ್ರದೇಶಗಳಿಗೆ ಬದಲಾವಣೆ ಹೊಂದುತ್ತ ಪ್ರಸಾರವಾದುವೆ? ಅಥವಾ ಬೇರೆ ಪ್ರದೇಶಗಳಿಂದ ಈ ಪ್ರದೇಶಗಳಿಗೆ ಇವು ಪ್ರಸಾರವಾದುವೆ? ಹಾಗಿದ್ದಲ್ಲಿ ಇವುಗಳ ಮೂಲ ಪ್ರದೇಶಗಳು ಯಾವವು? ಆ ಪ್ರದೇಶದಿಂದ ಈ ಪ್ರದೇಶಕ್ಕೆ ಯಾವ ಮಾರ್ಗದಿಂದ/ಗಳಿಂದ ಪ್ರಸಾರವಾದುವು? ಇವೆಲ್ಲ ಪ್ರಶ್ನೆಗಳನ್ನು ಇನ್ನು ಹೆಚ್ಚಿನ ಸಂಶೋಧನೆಗಳಿಂದ ಬಿಡಿಸಬೇಕಾಗಿದೆ. ಆದರೂ ಕೂಡ ಹರಪ್ಪಾ ಸಂಸ್ಕೃತಿಯ ಅವನತಿ ಹಂತದಲ್ಲಿ ಗುಜರಾತ್ ಪ್ರದೇಶದಿಂದ ಈ ಪ್ರದೇಶಗಳಿಗೆ ಸಂಸ್ಕೃತಿ ಪ್ರಸರಣವಾಗಿರುವುದಕ್ಕೆ ಕೆಲವು ಸೂಚನೆಗಳಿವೆ. ಈ ಪ್ರಸರಣಗಳು ಸುಮಾರು ಕ್ರಿ.ಪೂ. ೨೦೦೦ದ ಹೊತ್ತಿಗೆ ಪ್ರಾರಂಭವಾಯಿತೆಂದು ತೋರುತ್ತದೆ. ಈ ಸೂಚನೆಗಳು ಕೃಷ್ಣಾ-ತುಂಗಭದ್ರ ಮೇಲ್ದಂಡೆ ಪ್ರದೇಶದ ಸಂಸ್ಕೃತಿಗಳ ಕೆಲವು ಕುರುಹುಗಳಲ್ಲಿವೆ. ಇವು:

೧) ಶಿಲಾ-ತಾಮ್ರಯುಗ ಸಂಸ್ಕೃತಿಯ ವೈವಿಧ್ಯಮಯ ವರ್ಣ ಚಿತ್ರಗಳು.

೨) ಬಿಳಿ ವರ್ಣದ ರೇಖಾ ಚಿತ್ರಗಳುಳ್ಳ ಪೂರ್ಣ ಕಪ್ಪು ಮತ್ತು ಕಪ್ಪು ಕೆಂಪಿನ ಪಾತ್ರೆಗಳು.

೩) ವಿಶೇಷವಾಗಿ ನಸುಗೆಂಪು ಮರಳು ಕಲ್ಲಿನಿಂದ ದಾರಿ ಕೋಣೆ ಗೋರಿಗಳ ರಚನಾಕ್ರಮ.

---

೯. ಸಾಳಿ, ಎಸ್, ಎ.: ೧೯೬೪:'' ಎ ನ್ಯೂ ಸೆರಾಮಿಕ್ ಆಫ್ ದಿ ಕ್ಯಾಲ್ಕೊಲಿಥಿಕ್ ಫ್ರಂ ಧೂಳಿಯ'' ಜರ್ನಲ್ ಆಫ್ ಏಷಿಯಾಟಿಕ್ ಸೊಸೈಟಿ ಆಫ್ ಬಾಂಬೆ, ಸಂ.೯೮, ಮುಂಬೈ.

೧೦. ಸುಂದರ, ಅ.: ೧೯೭೫: ದಿ ಅರ್ಲಿ ಛೇಂಬರ್ ಟೂಂಬ್ಸ್ ಆಫ್ ಸೌತ್ ಇಂಡಿಯಾ, ಕಾನ್ಸೆಪ್ಟ್ ಪಬ್ಲಿಷಿಂಗ್ ಕಂಪೆನಿ, ನವದೆಹಲಿ.

೧೧. ಸುಂದರ, ಅ,: ೧೯೬೭.: '' ಎ ನ್ಯೂ ಟೈಪ್ ಆಫ್ ನಿಯೋಲಿಥಿಕ್ ಬರಿಯಲ್ ಇನ್ ತೇರ್‌ದಾಳ್, ಮೈಸೂರು'', ಪುರಾತತ್ವ, ಸಂ. ೩, ಇಂಡಿಯನ್ ಆರ್ಕಿಯಾಲಾಜಿಕಲ್ ಸೊಸೈಟಿ, ದೆಹಲಿ.

* ಈ ವಿಷಯವನ್ನು ಶ್ರೀ ಎಚ್.ಎಸ್. ಕಾಂಬಳೆಯವರು ನನಗೆ ತಿಳಿಸಿದ್ದಾರೆ. ಅವರಿಗೆ ಧನ್ಯವಾದಗಳು.

ಈಗಾಗಲೇ ಶಿಲಾ-ತಾಮ್ರಯುಗ ಸಂಸ್ಕೃತಿಯ ರೇಖಾ ವರ್ಣಚಿತ್ರಗಳು, ಬಲೂಚಿಸ್ಥಾನ ಹಾಗೂ ಗುಜರಾತಿನ ರೇಖಾ ಚಿತ್ರಗಳ ಸಂಪ್ರದಾಯಗಳನ್ನು ನೆನಪಿಗೆ ತರುವುದನ್ನು ಬೇರೆಡೆಗಳಲ್ಲಿ ಸೂಚಿಸಲಾಗಿದೆ. ದಖನ್ನಿನ ವಿವಿಧ ಶಿಲಾ-ತಾಮ್ರಯುಗ ಸಂಸ್ಕೃತಿಗಳಲ್ಲಿ ಸಾವಳ್ದ ಸಂಸ್ಕೃತಿಯೇ ಅತ್ಯಂತ ಪ್ರಾಚೀನವಾಗಿದ್ದು ಅದು ಈ ಪ್ರದೇಶದಲ್ಲಿ ಸುಮಾರು ೨೦೦೦ದ ಹೊತ್ತಿಗೆ ಊರ್ಜಿತ ಅವಸ್ಥೆಯಲ್ಲಿದ್ದುದು ಮೇಲೆ ಹೇಳಲಾಗಿದೆ. ಸ್ವಲ್ಪ ಅನಂತರ ಕಾಲದಲ್ಲಿ ಇನ್ನೊಂದು ಶಿಲಾ ತಾಮ್ರಯುಗ ಸಂಸ್ಕೃತಿಯು ಸು.ಕ್ರಿ.ಪೂ.೧೮೦೦ರ ಹೊತ್ತಿಗೆ ಪ್ರಸರಣವಾಗಿ ಕ್ರಮೇಣ ಕೃಷ್ಣಾ ಮಧ್ಯ ದಂಡೆ ಪ್ರದೇಶದಲ್ಲಿಯ ನೂತನ ಶಿಲಾಯುಗ ಸಂಸ್ಕೃತಿಯು ಶಿಲಾ ತಾಮ್ರಯುಗ ಹಂತವನ್ನು ಮುಟ್ಟುವಂತೆ ಮಾಡಿದುದನ್ನು ಬೇರೆಡೆ ಚರ್ಚಿಸಲಾಗಿದೆ.[12]

ಎರಡನೆಯದಾಗಿ ಬಿಳಿ ವರ್ಣದ ರೇಖಾ ಚಿತ್ರದ ಕಪ್ಪು-ಕೆಂಪಿನ ಪಾತ್ರೆಗಳು ಸಧ್ಯಕ್ಕೆ ತುಂಗಭದ್ರಾ ಮೇಲ್ದಂಡೆ ಪ್ರದೇಶದ ಹಳ್ಳೂರು, ಕೂನಬೇವು, ಹಾದರಹಳ್ಳಿ ಮೊದಲಾದ ಸ್ಥಳಗಳಲ್ಲಿಯ ಕಬ್ಬಿಣಯುಗದ ಬೃಹತ್ ಶಿಲಾ ಸಂಸ್ಕೃತಿಯ ಹಂತದಲ್ಲಿ ಹೇರಳವಾಗಿಯೂ ಮತ್ತು ತಡಕನಹಳ್ಳಿ, ಕೊಮಾರನಹಳ್ಳಿ ಬೃಹತ್ ಶಿಲಾ ಸಂಸ್ಕೃತಿಯ ಕಲ್ ಗೋರಿಗಳಲ್ಲಿ ಇವೆ. ಈ ಮೃತ್ ಪಾತ್ರೆಗಳು ರಚನೆಯಲ್ಲಿ, ಆಕೃತಿಗಳಲ್ಲಿ ಇವುಗಳ ಮೇಲಿನ ವರ್ಣ ರೇಖಾ ಚಿತ್ರಗಳಲ್ಲಿ ಗುಜರಾತ್ ಪ್ರದೇಶದ ಲೋಥಾಲ್, ರಂಗಪುರ, ಸುರ್ ಕೋಟಡ ಮೊದಲಾದ ಸ್ಥಳಗಲ್ಲಿಯ ಹರಪ್ಪಾ ಸಂಸ್ಕೃತಿಯ ಪ್ರಾಚೀನ ಹಂತದ ಇದೇ ತರದ ಮೃತ್‌ಪಾತ್ರೆಗಳಿಗೆ ಅತ್ಯಂತ ಸಮೀಪವಾಗಿರುವುದನ್ನು ಬೇರೆಡೆಯಲ್ಲಿ ವಿಶದವಾಗಿ ಚರ್ಚಿಸಿದ್ದೇನೆ.[13]

ಈ ವಿಶಿಷ್ಟ ಮೃತ್ಪಾತ್ರೆಯು ತುಂಗಾ ನದಿಯ ಬೆನಕನಹಳ್ಳಿಯಲ್ಲಿ (ಹೊನ್ನಾಳಿ ತಾ) ಪೂಣಚ್ಚರವರ ಪರೀಕ್ಷಕ ಗುಂಡಿಯಲ್ಲಿ ಕಬ್ಬಿಣಯುಗದ ಬೃಹತ್ ಶಿಲಾ ಸಂಸ್ಕೃತಿಯ ಹಿಂದಿನ ನೂತನ ಶಿಲಾಯುಗ ಸಂಸ್ಕೃತಿಯ ಉತ್ತರಾರ್ಧದ ಕೊನೆಯ ಹಂತದಲ್ಲಿ (ಅಂದರೆ ಕ್ರಿ.ಪೂ. ೧೫೦೦-೧೨೦೦) ಕಾಣಿಸಿಕೊಂಡಿರುವುದು ಗಮನಾರ್ಹ. ಕೊಮಾರನ ಹಳ್ಳಿಯ ಬೃಹತ್ ಶಿಲಾ ಗೋರಿಗಳ ಮೃತ್ಪಾತ್ರೆಗಳ ಥರ್ಮೋಲೂಮಿಸೆನ್ಸ ವೈಜ್ಞಾನಿಕ ತಂತ್ರದಿಂದ ತಿಳಿದ ಎಂಟು ಕಾಲಮಾನಗಳ [14] ಅಂತರವು ಕ್ರಿ.ಪೂ.೧೪೦೦ ರಿಂದ -೧೦೦೦ ದವರೆಗಿದೆ. ಆದ್ದರಿಂದ ಈ ಕಲ್ಗೋರಿಗಳ ಸರಾಸರಿ ಕಾಲಮಾನ ಸು.ಕ್ರಿ.ಪೂ.೧೨೦೦ ವೆಂದು ತರ್ಕಿಸಬಹುದು. ಇಂಗಾಲ ೧೪ ಎಂಬ ಇನ್ನೊಂದು ವೈಜ್ಞಾನಿಕ ತಂತ್ರದಿಂದ ಗೊತ್ತು ಮಾಡಿದ ಹಳ್ಳೂರಿನ ಬೃಹತ್‌ಶಿಲಾ ಸಂಸ್ಕೃತಿಯ ಆದಿ ಹಂತದ ಕಾಲಮಾನವು[15] ಸುಮಾರು ಕ್ರಿ.ಪೂ.೧೦೦೦. ಮತ್ತು ತಡಕನಹಳ್ಳಿ ಹಾಗೂ ಕೊಮಾರನಹಳ್ಳಿಯ ಕಲ್ಗೋರಿಗಳಲ್ಲಿ ಈ ವಿಶಿಷ್ಟಪಾತ್ರೆಗಳ ಜೊತೆಗೆ ಆ ಪ್ರದೇಶದ ನೂತನ ಶಿಲಾಯುಗ ಸಂಸ್ಕೃತಿಯ ಮಸುಕು ಬೂದುವರ್ಣದ ಮೃತ್ಪಾತ್ರೆಗಳೂ ಇವೆ. ಆದ್ದರಿಂದ ಬಿಳಿವರ್ಣ ರೇಖಾ ಚಿತ್ರಗಳುಳ್ಳ ಕಪ್ಪು-ಕೆಂಪು ಪಾತ್ರೆಗಳನ್ನು ಉಪಯೋಗಿಸುತ್ತಿದ್ದ ಜನರೇ ಬೃಹತ್ ಶಿಲಾ ಗೋರಿ ಸಂಪ್ರದಾಯದವರಾಗಿದ್ದ ರೆಂದು ತೋರುತ್ತದೆ.

ಗುಜರಾತಿನ ಸುರಕೋಟಡ[16] ಮತ್ತು ದೋಲ ವೀರದಲ್ಲಿ[17] ಕೆಲವು ಶವ ಸಂಸ್ಕಾರ ಕುಣಿಗಳ ಮೇಲ್ಭಾಗದಲ್ಲಿ ಕಲ್ಲು ಚಪ್ಪಡಿಯಿದೆ. ಮತ್ತೆ ಕೆಲವು ಕುಣಿಗಳಲ್ಲಿ ನಾಲ್ಕು ಬದಿಗಳಲ್ಲಿ ಕಲ್ಲು ಹಲಗೆಗಳನ್ನು ನಿಲ್ಲಿಸಲಾಗಿದೆ. ಇವು ದಕ್ಷಿಣ ಭಾರತದ ಕಬ್ಬಿಣಯುಗದ ಬೃಹತ್ ಶಿಲಾ ಕಲ್ಗೋರಿಗಳ ವಿಶಿಷ್ಟ ಲಕ್ಷಣಗಳು. ಆದ್ದರಿಂದ ಗುಜರಾತ್ ಪ್ರದೇಶದ ಹರಪ್ಪಾ ಸಂಸ್ಕೃತಿಯ ಜನಗಳಲ್ಲಿ ಶವ

---

೧೨. ಸುಂದರ, ಅ.: ೧೯೭೦: " ದಿ ನಿಯೋಲಿಥಿಕ್ ಕಲ್ಚರಲ್ ಪ್ಯಾಟರ್ನ್ಸ್ ಆ್ಯಂಡ್ ಮೂವ್‌ಮೆಂಟ್ಸ್ ಇನ್ ನಾರ್ತ್ ಮೈಸೂರ್ ಸ್ಟೇಟ್'' ಕರ್ನಾಟಕ ಯೂನಿವರ್ಸಿಟಿ ಜರ್ನಲ್ (ಸೋಶಿಯಲ್ ಸೈನ್ಸ್), ಸಂ.೬, ಧಾರವಾಡ. ೧೯೭೧: ಅದೇ ನಿಯತಕಾಲಿಕೆ ಸಂ.೭.

೧೩. ಸುಂದರ, ಅ.: ೧೯೭೨: " ಈಸ್ ದೇರ್ ನಾನ್ ಮೆಗಲಿಥಿಕ್ ಬ್ಲಾಕ್-ಆ್ಯಂಡ್-ರೆಡ್ ವೇರ್ ಕಲ್ಚರ್ ಇನ್ ನಾರ್ತ್ ಕರ್ನಾಟಕ?'' ಆರ್ಕಿಯಲಾಜಿಕಲ್ ಕಾಂಗ್ರೆಸ್ ಆ್ಯಂಡ್ ಸೆಮಿನಾರ್ ಪೇಪರ್ಸ್, ನಾಗಪುರ.

೧೪. ನಾಗರಾಜರಾವ್, ಎಂ.ಎಸ್.: ೧೯೯೦: "ಗ್ರೇವ್ಸ್ ಆಫ್ ದಿ ಅರ್ಲಿ ಐರನ್ ಯೂಸಿಂಗ್ ಪೀಪಲ್ ಆ್ಯಟ್ ಕೊಮಾರನಹಳ್ಳಿ: ರೀಸೆಂಟ್ ಎವಿಡೆನ್ಸ್'', ಆರ್ಕಿಯಾಲಜಿ ಆಫ್ ಕರ್ನಾಟಕ, ಡೈರೆಕ್ಟೊರೇಟ್ ಆಫ್ ಆರ್ಕಿಯಾಲಜಿ ಆ್ಯಂಡ್ ಮ್ಯೂಸಿಯಮ್ಸ್, ಮೈಸೂರು (ಡೈ.ಆ.ಮ್ಯೂ.)

೧೫. ನಾಗರಾಜರಾವ್, ಎಂ.ಎಸ್: ೧೯೭೦: ದಿ ಪ್ರೋಟೊ ಹಿಸ್ಟಾರಿಕ್ ಕಲ್ಚರ್ಸ್ ಆಫ್ ದಿ ತುಂಗಭದ್ರಾ ವ್ಯಾಲಿ, ಧಾರವಾಡ.

೧೬. ಜೋಶಿ.ಜೆ.ಪಿ.: ೧೯೯೦: ಎಕ್ಸ್‌ಕವೇಶನ್ ಆ್ಯಟ್ ಸುರ್‌ಕೋಟಡ ಆ್ಯಂಡ್ ಎಕ್ಸ್‌ಪ್ಲೋರೇಶನ್ ಇನ್ ಕಚ್ಛ್, ಪುರಾತತ್ವ ಸರ್ವೇಕ್ಷಣ ಇಲಾಖೆ, ನವದೆಹಲಿ.

೧೭. ಫೆಬ್ರವರಿ-ಮಾರ್ಚ್ ೯೨ರಲ್ಲಿ ಕೇಂದ್ರ ಸರ್ಕಾರದ ಪುರಾತತ್ವ ಸರ್ವೇಕ್ಷಣ ಇಲಾಖೆಯು ದೋಲಾವೀರದಲ್ಲಿ ನಡೆಸಿದ ಹರಪ್ಪಾ ನೆಲೆಯ ಉತ್ಖನನದಲ್ಲಿ ಭಾಗವಹಿಸಿದ್ದ ಡಾ॥ಎಸ್.ವಿ.ಪಾಡಿಗಾರ್ ಮತ್ತು ಶ್ರೀ ಎಚ್.ಎಸ್. ಕಾಂಬಳೆ ಇವರುಕೊಟ್ಟ ಮಾಹಿತಿಯ ಆಧಾರದಮೇಲೆ ಈ ವಿಷಯವನ್ನು ಹೇಳಲಾಗಿದೆ. ಇವರಿಗೂ ಮತ್ತು ಪುರಾತತ್ವ ಸರ್ವೇಕ್ಷಣ ಇಲಾಖೆಗೂ ಧನ್ಯವಾದಗಳು.

ಸಂಸ್ಕಾರದಲ್ಲಿ ಕಲ್ಲಿನ ಮನೆಗಳನ್ನು ನಿರ್ಮಿಸುವ ಸಂಪ್ರದಾಯದ ಜನವರ್ಗದವರೂ ಸಣ್ಣ ಪ್ರಮಾಣದಲ್ಲಿದ್ದರೆಂದು ಹೇಳಬಹುದು. ಅಲ್ಲಿ ಉಪಯೋಗಿಸಿದ ಕಲ್ಲು ನಸುಗೆಂಪಿನ ಮರಳುಕಲ್ಲು. ಈ ಜನವರ್ಗದವರು ಈ ವಿಶಿಷ್ಟ ಮಣ್ಣಿನ ಪಾತ್ರೆಯನ್ನು ಉಪಯೋಗಿಸುವವರಾಗಿದ್ದು, ಹರಪ್ಪಾ ಸಂಸ್ಕೃತಿಯ ಅವನತಿ ಕಾಲದಲ್ಲಿ ಕೃಷ್ಣಾ-ತುಂಗಭದ್ರಾದ ಕಡೆಗೆ ಬಂದವರೆಂದು ತೋರುತ್ತದೆ.

ಇವರು ಅನುಸರಿಸಿದ ಮಾರ್ಗವು ಪುಣೆ ಬಳಿ ಥೇವೂರು-ಸಾಸ್ವೆವಾಡಿ[18] ಮೂಲಕ ಇತ್ತೆಂದು ತೋರುತ್ತದೆ. ಏಕೆಂದರೆ ಥೇವೂರಿನಲ್ಲಿ ಇಂಥ ಮೃತ್ಪಾತ್ರೆಗಳು ದೊರೆತಿವೆ. ಈ ಜನರೇ ತುಂಗಭದ್ರಾ ಪ್ರದೇಶದಿಂದ ಕಲ್ಗೋರಿಗಳ ನಿರ್ಮಾಣಕ್ಕೆ ಅತ್ಯಂತ ಸೂಕ್ತವಾದ ಮಲಪ್ರಭಾ- ಘಟಪ್ರಭಾ ಪ್ರದೇಶಕ್ಕೆ ಪ್ರಸರಿಸಿ ದಾರಿಕೋಣಿ ಗೋರಿಗಳಿಗೆ ಕಾರಣರಾದರೆಂದು ಈಗ ಕಾಣಿಸುತ್ತಿದೆ. ಮುಖ್ಯವಾಗಿ ಗೊಡಚಿನಮಲ್ಕಿಯಲ್ಲಿಯ ಕಲ್ಗೋರಿಗಳಲ್ಲಿಯ ಜಂಬಿಟ್ಟಿಗೆ ಕಲ್ಲಿನ ಅಚ್ಚುಕಟ್ಟಾದ ಕೆತ್ತನೆ ಮತ್ತು ಹಳಿಂಗಳಿಯಲ್ಲಿಯ ಉತ್‌ಖನನ ಮಾಡಿದ ಬೃಹತ್ ಕಲ್ಗೋರಿ IIIನೆಯ ಹೊರಸುತ್ತಿನ ನಸುಗೆಂಪು ಮರಳು ಕಲ್ಲಿನ ಕಲ್ಲುಗೋಡೆಯ ನಿರ್ಮಾಣ ಕ್ರಮ[19] ದೋಲಾವೀರದ ಇಂಥ ಕಲ್ಲಿನ ಕಟ್ಟಡಗಳನ್ನು ನೆನಪಿಗೆ ತರುತ್ತದೆ. ಆದ್ದರಿಂದ ಗುಜರಾತಿನ ಹರಪ್ಪಾ ಸಂಸ್ಕೃತಿಯ ಒಂದು ಜನವರ್ಗದವರು ತುಂಗಾ ಮತ್ತು ತುಂಗಭದ್ರಾ ಪ್ರದೇಶದಲ್ಲಿ ಕಬ್ಬಿಣಯುಗದ ಆರಂಭಕ್ಕೆ ಕಾರಣರಾಗಿ ಬೃಹತ್ ಶಿಲಾ ಗೋರಿ ಸಂಪ್ರದಾಯವನ್ನು ಸುಮಾರು ೧೪೦೦-೧೨೦೦ರಲ್ಲಿ ಆರಂಭಿಸಿ ಅತ್ಯಂತ ಅನುಕೂಲವಾದ ಮಲಪ್ರಭಾ-ಘಟಪ್ರಭಾ ಪ್ರದೇಶದಲ್ಲಿ ಸು.ಕ್ರಿ.ಪೂರ್ವ ೧೨೦೦ರ ಹೊತ್ತಿಗೆ ವಿಶೇಷವಾಗಿ ಕಲ್ಗೋರಿ ಸಂಪ್ರದಾಯವನ್ನು ಬೆಳೆಸಿದರೆಂದು ಗಟ್ಟಿಯಾಗಿ ಕಾಣುತ್ತದೆ.

ಈ ಸಂದರ್ಭದಲ್ಲಿ ಈ ಜನರ ಕಬ್ಬಿಣ ಸಾಮಾನುಗಳನ್ನು ಮಾಡುವ ತಾಂತ್ರಿಕ ಜ್ಞಾನದ ಬಗ್ಗೆ ಒಂದು ಮಾತು. ತಡಕನ[20] ಹಳ್ಳಿಯ ಮತ್ತು ಕೊಮಾರನಹಳ್ಳಿಯ[21] ಕಬ್ಬಿಣ ಸಾಮಾನುಗಳ ಪ್ರಯೋಗಶಾಲೆಯಲ್ಲಿಯ ವೈಜ್ಞಾನಿಕ ವಿಶ್ಲೇಷಣೆಯಿಂದ ಸ್ಥಳೀಯ ಅದಿರಿನಿಂದ ಕಬ್ಬಿಣ ಲೋಹವನ್ನು ಮಾಡುವ ಇವರ ತಾಂತ್ರಿಕ ಜ್ಞಾನವು ತುಂಬ ಸುಧಾರಿಸಿದ ಮಟ್ಟದ್ದಾಗಿತ್ತೆಂದು ಸಿದ್ಧವಾಗಿದೆ. ಈ ಪ್ರದೇಶದಲ್ಲಿ ಉತ್ತಮ ಗುಣಮಟ್ಟದ ಕಬ್ಬಿಣದ ಅದಿರು ಹೇರಳವಾಗಿ ಸುಲಭವಾಗಿ ಲಭ್ಯವಿದೆ. ಅಷ್ಟೆ ಅಲ್ಲ ಅತ್ಯಂತ ಸುಧಾರಿತ ವೈಜ್ಞಾನಿಕ ತಂತ್ರಜ್ಞಾನದಿಂದ ಕಷ್ಟಸಾಧ್ಯವಾದ ಉಕ್ಕನ್ನು (ವೂಟ್ಸ್ ಸ್ಟೀಲ್) ಇವರು ಕ್ರಿ.ಪೂ.೧೪೦೦-೧೨೦೦ರ ಹೊತ್ತಿಗೆ ತಯಾರು ಮಾಡುತ್ತಿದ್ದುದು ಒಂದು ಮಹತ್ವದ ವಿಷಯ. ತೇರದಾಳ್, ಹಳಿಂಗಳಿಯ ಬೃಹತ್ ಶಿಲಾ ಗೋರಿಗಳ ಕಬ್ಬಿಣದ ಸಾಮಾನುಗಳು ಇದೇ ವರ್ಗಕ್ಕೆ ಸೇರಿದ್ದವೆಂದು[22] ವೈಜ್ಞಾನಿಕ ವಿಶ್ಲೇಷಣೆಯಿಂದ ನಿಶ್ಚಿತವಾಗಿದೆ. ಈ ತಂತ್ರಜ್ಞಾನವು ಈ ಜನರಿಂದ ಕ್ರಮೇಣ ಎಲ್ಲೆಲ್ಲಿ ಅತ್ಯುತ್ತಮ ಮಟ್ಟದ ಕಬ್ಬಿಣದ ಅದಿರಿನ ನಿಕ್ಷೇಪವಿದೆಯೋ ಅಲ್ಲೆಲ್ಲಾ ವ್ಯಾಪಕವಾಗಿ ಬೆಳೆಯಿತು. ಹಾಗೆ ಬೆಳೆಸಿದ ಉದ್ಯಮ ಪ್ರದೇಶಗಳಲ್ಲಿ ಕ್ರಮೇಣ 'ಕಾರ್ತಿಕೇಯವನ'ವು ಹೆಚ್ಚು ಪ್ರಸಿದ್ಧವಾಯಿತೆಂದು ತೋರುತ್ತದೆ. ಅದರಲ್ಲಿ ಸಿದ್ಧವಾಗುತ್ತಿದ್ದ ಕಬ್ಬಿಣದ ಆಯುಧಗಳು ಬಹಳಷ್ಟು ದೂರದವರೆಗೆ ಪ್ರಸಿದ್ಧಿಯನ್ನು ಪಡೆದವೆಂದು ತೋರುತ್ತದೆ. ಆದ್ದರಿಂದಲೆ ವಾಲ್ಮೀಕಿ ಮಹರ್ಷಿಯು ತನ್ನ ಮಹಾಕಾವ್ಯ ರಾಮಾಯಣವನ್ನು ರಚಿಸುವ ಕಾಲದಲ್ಲಿ ರಾಮ-ಲಕ್ಷ್ಮಣರು ಕಾರ್ತಿಕೇಯ ದೇವರ ಸೂಚನೆಯಂತೆ ಅಲ್ಲಿ ತಮ್ಮ ಶಸ್ತ್ರಗಳನ್ನು ಮಾಡಿಸಿಕೊಂಡಿದ್ದಾಗಿ ಸ್ವತಃ ಶ್ರೀ ರಾಮನೇ ಸುಗ್ರೀವನಿಗೆ ಹೇಳಿದಂತೆ ಕಾವ್ಯದಲ್ಲಿ ನಿರೂಪಿಸಿದ್ದಾರೆ. ಈ ವಿಷಯವನ್ನು ಈಗಾಗಲೇ ಸುದೀರ್ಘವಾಗಿ ಬೇರೆಡೆಯಲ್ಲಿ [23] ಚರ್ಚಿಸಿದ್ದೇನೆ. ಆದ್ದರಿಂದ ಈ ತಂತ್ರಜ್ಞಾನದ ಬೆಳವಣಿಗೆಯ ಹಂತಗಳ ದೃಷ್ಟಿಯಿಂದ ಬೆಳಗಾವಿ ಜಿಲ್ಲಾ ಪ್ರದೇಶವು ಅತ್ಯಂತ ಮಹತ್ವದ್ದಾಗಿದೆ.

---

೧೮. ಇಂಡಿಯನ್ ಆರ್ಕಿಯಾಲಾಜಿ, ಎ ರಿವ್ಯೂ, ೧೯೬೯-೭೦. ಪುಟಗಳು ೨೭-೨೯. ಪ್ಲೇಟ್‌ಗಳು X ಮತ್ತು XI

೧೯. ಸುಂದರ, ಅ.: ೧೯೭೫: ಅದೇ ಕಡೆ ಪುಟಗಳು. ೨೬-೨೮,

೨೦. ಅಗ್ರವಾಲ್, ಒ.ಪಿ.: ೧೯೮೦-೮೧: "ಟೆಕ್ನಿಕಲ್ ಸ್ಟಡಿಸ್ ಆಫ್ ಐರನ್ ಇಂಪ್ಲಿಮೆಂಟ್ಸ್, ಫ್ರಂ ದಿ ಮೆಗಲಿಥಿಕ್ ಸೈಟ್, ತಡಕನಹಳ್ಳಿ" ಪುರಾತತ್ತ್ವ ಸಂ.೧೨. ಇಂಡಿಯನ್ ಆರ್ಕಿಯಾಲಾಜಿಕಲ್ ಸೊಸೈಟಿ, ನವದೆಹಲಿ.

೨೧. ಆಗ್ರವಾಲ್, ಒ.ಪಿ. ಮತ್ತು ಇತರರು: ೧೯೭೦: "ಐರನ್ ಆಬ್ಜೆಕ್ಟ್ಸ್ ಫ್ರಂ ಸೌತ್ ಇಂಡಿಯನ್ ಮೆಗಲಿಥ್ಸ್ (ಕರ್ನಾಟಕ), ಎ ಟೆಕ್ನಲಾಜಿಕಲ್ ಸ್ಟಡಿ ಆ್ಯಂಡ್ ಸಿಗ್ನಿಫಿಕೆನ್ಸ್", ಆರ್ಕಿಯಾಲಜಿ ಆಫ್ ಕರ್ನಾಟಕ ಮೈ.ಆ.ಮ್ಯೂ.

೨೨ ಮುಧೋಳ್, ಎಂ.ಎಸ್.೧೯೮೯: ಎ ಟೆಕ್ನಿಕಲ್ ಸ್ಟಡಿ ಆಫ್ ದಿ ಮೆಟಲ್ ಆಬ್ಜೆಕ್ಟ್ಸ್ ಫ್ರಂ ಮೆಗಲಿಥ್ಸ್, ಅಪ್ರಕಟಿತ ಪಿಎಚ್.ಡಿ ಮಹಾಪ್ರಬಂಧ ಎಂ. ಎಸ್. ವಿಶ್ವವಿದ್ಯಾಲಯ, ವಡೋದರ,

೨೩. ಸುಂದರ, ಅ.: ೧೯೯೫: "ಶ್ರೀಮದ್ರಾಮಯಣದ ಕಾರ್ತಿಕೇಯವನವು ಸೊಂಡೂರಿನ ಕುಮಾರ ಸ್ವಾಮಿ ಬೆಟ್ಟವೆ"?, ಇತಿಹಾಸ ದರ್ಶನ, ಸಂ.೧೦ ಕರ್ನಾಟಕ ಇತಿಹಾಸ ಅಕಾದೆಮಿ, ಬೆಂಗಳೂರು.

**ಸಂಸ್ಕೃತಿಗಳು ಮತ್ತು ರಾಮಾಯಣದ ಕೆಲವು ಸನ್ನಿವೇಶಗಳು :**

ಈ ಸಂಸ್ಕೃತಿಗಳ ಜನರು ಯಾರು? ಇವರು ಸ್ಥಳೀಯರೆ ಅಥವಾ ಬೇರೆ ಪ್ರದೇಶದಿಂದ ಬಂದವರೆ? ಇವರ ಸಂಸ್ಕೃತಿಯ ಮುಖ್ಯ ಲಕ್ಷಣಗಳೇನು? ಇವರ ದಿನ ನಿತ್ಯದ ವಾಸ್ತವಿಕ ಜೀವನದ ಕೆಲವು ಅಂಶಗಳನ್ನಾದರೂ ಅಂದರೆ, ಈ ಜನರ ನಿವೇಶನ ಆಯ್ಕೆ, ವಿನ್ಯಾಸ, ರಚನಾಕ್ರಮ; ತಮ್ಮ ನಿತ್ಯ ಕೆಲಸಗಳಿಗೆ ಬಳಸುವ ಉಪಕರಣಗಳ ಮತ್ತು ಅವುಗಳನ್ನು ಮಾಡುವ ವಿಧಾನಗಳು; ಕೃಷಿ, ಪಶುಸಂಗೋಪನೆ, ಧಾನ್ಯ ಸಂಗ್ರಹ, ಬೇಟೆಯಾಡುವುದು, ಮೀನುಗಾರಿಕೆ ಮೊದಲಾದ ಆಹಾರ ಸಂಪಾದನೆ ಕ್ರಮಗಳು; ಲೋಹ ಕೈಗಾರಿಕೆ, ಮೃತ್ಪಾತ್ರೆ, ಆಭರಣದ ಮಣಿಗಳ ಮೊದಲಾದ ಕುಶಲ ಕೈಗಾರಿಕೆ, ಕಲೆ, ಧಾರ್ಮಿಕ ಕಟ್ಟಳೆಗಳು, ಶವ ಸಂಸ್ಕಾರ ಪದ್ಧತಿ, ವ್ಯಾಪಾರ-ವ್ಯವಹಾರ ಹಾಗೂ ಸಂಸ್ಕೃತಿಯ ಕಾಲಮಾನ ಇವೇ ಮೊದಲಾದ ವಿಷಯಗಳನ್ನು ಆಯ್ದು ಆಯಾಯ ಸಂಸ್ಕೃತಿಯ ಜನ ವಾಸ್ತವ್ಯದ ನೆಲೆಗಳ ವಿಸ್ತೃತ ಪ್ರಾಯಶಃ ಉತ್‌ಖನನ ಗಳಿಂದ ತಿಳಿಯಲು ಸಾಧ್ಯವಾಗಬಹುದು. ಆದರೆ ಇವರು ಯಾವ ಜನವರ್ಗದವರು? ಇವರ ಆಚಾರ ವಿಚಾರಗಳೇನು ಮೊದಲಾದ ಗಹನ ವಿಷಯಗಳನ್ನು, ಪ್ರಾಯಶಃ ಆಯಾಯ ಪ್ರದೇಶದಲ್ಲಿಯ ಪ್ರಚಲಿತ ಪ್ರಾಚೀನ ಕಥೆಗಳಲ್ಲಿ ಅಡಕ ವಾಗಿದ್ದು ಅವುಗಳ ವಿಶ್ಲೇಷಣೆಯಿಂದ ಕೆಲವೊಂದು ಅಂಶಗಳಾದರೂ ತಿಳಿಯಬಹುದೇನೋ? ಈ ನಿಟ್ಟಿನಲ್ಲಿ ಬೆಳಗಾವಿ ಜಿಲ್ಲಾ ಪ್ರದೇಶವು ತಕ್ಕಮಟ್ಟಿಗೆ ಆಶಾದಾಯಕ ವಾಗಿರುವಂತೆ ಕಾಣಿಸುತ್ತದೆ.

ಮಲಪ್ರಭಾ ನದಿ ಬಯಲಿನಲ್ಲಿ ಅದರ ಉಗಮದಿಂದ ಹಿಡಿದು ಶಿರಸಂಗಿಯವರೆಗೆ ಅಲ್ಲಲ್ಲಿ ಕೆಲವು ಸ್ಥಳಗಳಲ್ಲಿ ಪ್ರಚಲಿತ ದಂತ ಕಥೆಗಳಿವೆ. ಖಾನಾಪುರ ತಾ॥ ದ ಜಾಂಬೋಟಿಯು ಕಿಷ್ಕಿಂಧೆಯ ವಾನರರೊಡನೆ ಇದ್ದ ಜಾಂಬವಂತನ ಸ್ಥಳವೆಂದು ಅಲ್ಲಿಯೆ ಇವನ ಮಗಳು ಜಾಂಬವತಿಯು ಶ್ರೀ ಕೃಷ್ಣನನ್ನು ಲಗ್ನವಾದಳೆಂಬ ಒಂದು ಕಥೆಯಿದೆ. [24] ಗೋಕರ್ಣವು ಹನುಮಂತನ ಜನ್ಮಸ್ಥಳವೆಂದು[25] ಒಂದು ಪ್ರಬಲವಾದ ಅಭಿಪ್ರಾಯವಿದೆ. ಸೌಂದತ್ತಿಯು ಋಷಿ ಜಮದಗ್ನಿ-ಋಷಿ ಪತ್ನಿ ರೇಣುಕಾ, ಪುತ್ರ ಪರಶುರಾಮರ [26] ಕ್ಷೇತ್ರ. ಮುನವಳ್ಳಿಯು ಮುನಿಗಳ ಹಳ್ಳಿ. ಶಿರಸಂಗಿಯು ಋಷ್ಯಶೃಂಗರ ಆಶ್ರಮ್ಮ, ಇಲ್ಲಿಯೇ ಶ್ರೀರಾಮನು ಲಕ್ಷ್ಮಣ, ಸೀತಾ ಮತ್ತು ಹನುಮಂತರೊಂದಿಗೆ ಅಯೋಧ್ಯೆಗೆ ಹಿಂದಿರುಗುವಾಗ ಎಲ್ಲರೂ ರಾಮೇಶ್ವರ, ಲಕ್ಷ್ಮಣೇಶ್ವರ, ಹನುಮಂತೇಶ್ವರ ಶಿವಲಿಂಗಗಳನ್ನು ಸ್ಥಾಪಿಸಿದರಂತೆ.[27] ಈ ವಿಷಯವನ್ನು ಇಲ್ಲಿಯ ಒಂದು ಶಿಲಾಶಾಸನದಲ್ಲಿ ಹೇಳಲಾಗಿದೆ, ಮತ್ತು ಇದರಲ್ಲಿ ಉತ್ತರದಲ್ಲಿ ಹಿಮಾಲಯ, ವಿಂಧ್ಯ ಪರ್ವತಾವಳಿಗಳು ಪೂರ್ವಕ್ಕೆ ಋಷ್ಯಮೂಕ ಪರ್ವತದಲ್ಲಿಯ ಕಿಷ್ಕಿಂಧಾನಗರವಿದ್ದ ಉಲ್ಲೇಖವಿರುವುದು ಗಮನಾರ್ಹ. ಹಲಶಿಯಲ್ಲಿಯ ರಾಮತೀರ್ಥವು ಶ್ರೀರಾಮನು ಲಂಕೆಯಿಂದ ಹಿಂದಿರುಗುವಾಗ ಇಲ್ಲಿ ಸ್ವಲ್ಪ ಸಮಯವಿದ್ದುದ ರಿಂದ ಇದು 'ರಾಮತೀರ್ಥ'ವಾಯಿತೆಂದು ಪ್ರತೀತಿ. ಇಂಥ ರಾಮ ತೀರ್ಥಗಳು ಈ ಪ್ರದೇಶದಲ್ಲಿ ನಾಲ್ಕೈದು ಇವೆ. ಹೊನ್ನಾವರ, ರಾಮದುರ್ಗದ ಹತ್ತಿರ, ಅಥಣಿ ತಾಲೂಕಿನಲ್ಲಿ ಒಂದೊಂದು ಇದೆ. ಮುಂದೆ ಬಾದಾಮಿಯ ಶಿಡ್ಲಪಡಿ ಹತ್ತಿರ ಒಂದು ರಾಮತೀರ್ಥವಿದೆ. ಒಟ್ಟಿನಲ್ಲಿ ಸ್ವಲ್ಪ ಮಟ್ಟಿಗೆ ಪರಸ್ಪರ ಹೊಂದಾಣಿಕೆ ಇರುವ ಈ ಕಥೆಗಳಲ್ಲಿ ಮೂರು ಮುಖ್ಯಾಂಶಗಳಿವೆ:

೧) ಜಮದಗ್ನಿ-ಪರಶುರಾಮ ಕುಲದವರಿಂದ, ಋಷ್ಯಶೃಂಗರ ಪರಂಪರೆಯವರಿಂದ ಈ ಪ್ರದೇಶದಲ್ಲಿ ವೈದಿಕ ಸಂಸ್ಕೃತಿಯು ನೆಲೆಯೂರಿದುದು; ೨) ಹನುಮಂತ ಜಾಂಬ ವಂತಾದಿಗಳು ಪಶ್ಚಿಮ ಕರಾವಳಿ ಘಟ್ಟ ಪ್ರದೇಶದಿಂದ ಕ್ರಮೇಣ ಕಿಷ್ಕಿಂಧೆ ಅಂದರೆ ಈಗಿನ ಹಂಪಿ ಪ್ರದೇಶದಲ್ಲಿ ವಾಲಿ-ಸುಗ್ರೀವಾದಿಗಳೊಡನೆ ನೆಲೆಸಿದ್ದು; ೩) ಶ್ರೀರಾಮನು ಲಂಕೆ ಯಿಂದ ಹಿಂದಿರುಗುವಾಗ ಹೊನ್ನಾವರದಿಂದ ಹಲಶಿ, ರಾಮದುರ್ಗ ಶಿರಸಂಗಿ ಬಾದಾಮಿ ಮೂಲಕ ಕಿಷ್ಕಿಂಧೆಗೆ ಹೋಗಿ ಅಲ್ಲಿಂದ ಮುಂದೆ ಪ್ರಾಯಶಃ ವಿದರ್ಭದ ರಾಮಟೇಕ್ ಮೂಲಕ ಅಯೋಧ್ಯೆಯನ್ನು ತಲುಪಿದುದು.

---

೨೪. ಕರ್ನಾಟಕ ಡಿಸ್ಟ್ರಿಕ್ಟ್ ಗೆಜೆಟೀರ್: ಬೆಳಗಾವಿ ಜಿಲ್ಲೆ: ಐತಿಹಾಸಿಕ ಸ್ಥಳಗಳು.

೨೫. ಮಹಾಲಿಂಗಮ್, ಎನ್. : (ಸಂ): ೧೯೮೨: ಏನ್ಷಿಯೆಂಟ ವರ್ಲ್ಡ್: ಎ ನ್ಯೂಲುಕ್, ಇಂಟರ್ ನ್ಯಾಷನಲ್ ಸೊಸೈಟಿ ಫಾರ್ ದಿ ಇನ್ವೆಸ್ಟಿಗೇಶನ್ ಆಫ್ ಏನ್ಷಿಯೆಂಟ್ ಸಿವಿಲೈಸೇಶನ್, ಮದ್ರಾಸ್. ಪುಟ ೬೨.

೨೬. ಸುಂದರ, ಅ: ೧೯.... ಕರ್ನಾಟಕ ವಿಶ್ವವಿದ್ಯಾಲಯ ಧಾರವಾಡ.

೨೭. ಅಣ್ಣಿಗೇರಿ, ಎ.ಎಮ್. : ಕರ್ನಾಟಕ ಇನ್‌ಸ್ಕ್ರಿಪ್ಶನ್ಸ್, ಸಂ. ೧, ಕಂ.ಸಂ.ಸಂ., ಕ.ವಿ.ವಿ.ಧಾರವಾಡ.

೨೮. ಈ ಶಾಸನವನ್ನು ಶೋಧಿಸಿದ ಡಾ॥ಎಸ್.ಎಲ್ ಶಾಂತಕುಮಾರಿಯವರು ಇದರ ಪಾಠವನ್ನು ನನಗೆ ಒದಗಿಸಿದ್ದಾರೆ. ಅವರಿಗೆ ಧನ್ಯವಾದಗಳು.

ಈ ಸಂದರ್ಭದಲ್ಲಿ ಹಸ್ತಿನಾಪುರ, ಉಜ್ಜಯಿನಿ (ಮಧ್ಯ ಪ್ರದೇಶ), ಗೋವಾ ಮತ್ತು ಮಾಲ್‌ದೀವ್ ದ್ವೀಪ ಸಮೂಹದ ಸಮೀಪ ತರುವಾಯ ಸಮುದ್ರದಲ್ಲಿ ಮುಳುಗಿ ಹೋಯಿತಲೆನ್ನಲಾದ ಲಂಕೆ (ಈಗಿನ ಶ್ರೀಲಂಕಾ ಇದರ ಒಂದು ಭಾಗವೆಂದು ತಿಳಿಯಲಾಗಿದೆ.) ಮೂಲಕ ಲಂಕೆಯ ಹೆಸರಿನ ಮೇಲೆ ಗುರುತು ಮಾಡಲಾದ ರೇಖಾಂಶವು ಆರ್ಯಭಟೀಯ ಖಗೋಳ ಶಾಸ್ತ್ರದಲ್ಲಿ ಉಲ್ಲೇಖಿಸಿರುವ ಮಂಗಳಕರ 'ಲಂಕಾರೇಖೆ'ಯಾಗಿದೆ. ಈ ವಿಷಯದೊಡನೆ ಲಂಕಾಧಿಪತಿ ರಾವಣನು ಶಿವನನ್ನು ತಪಸ್ಸಿನಿಂದ ಮೆಚ್ಚಿಸಿ ಆ ದೇವರಿಂದ ಆತ್ಮಲಿಂಗವನ್ನು ಪಡೆದು ಲಂಕೆಗೆ ಹಿಂದಿರುಗುವಾಗ ಗೋಕರ್ಣದ ಮೂಲಕ ಹೋದದ್ದನ್ನು ನೆನೆಯಬೇಕು. ಒಂದು ವೇಳೆ ಈಗಿನ ಶ್ರೀ ಲಂಕಾದ್ವೀಪವೇ ಆಗಿನ ರಾವಣನ ಲಂಕೆ ಯಾಗಿದ್ದರೆ ರಾವಣನು ಗೋಕರ್ಣದ ಮೂಲಕ ಹೋಗುವ ಅವಶ್ಯಕತೆಯಿರುತ್ತಿರಲಿಲ್ಲ ಮತ್ತು ಗೋವಾ ಕದಂಬ ಅರಸು ಮನೆತನದ ಇಮ್ಮಡಿ ಜಯಕೇಶಿಯ ಕ್ರಿ.ಶ.೧೧೨೬ರ ಶಾಸನದಲ್ಲಿ ಮತ್ತು ಚಟ್ಟಯನ ಒಂದು ಅಪ್ರಕಟಿತ ಶಾಸನ[29] ತುಂಡೊಂದರಲ್ಲಿ (''ಕದಂಬಾನ್ವಯದೊಳು ಲಂಕೆಗೆ ಕಪ್ಪಮಂ ಮಣಿದು ಬೇಡಿ ಬಹಿತ್ರಮನೇರಿ ನೂಂಕಿದಂ ಕೊಂಕಣ ಚಕ್ರವರ್ತಿ ವಿಭು ಚಟ್ಟಯ್ಯಂ........'') ಉಲ್ಲೇಖಿತವಾದ ಲಂಕೆಯು ಗೋವಾದ ಕಡೆ ಉಜ್ಜಯಿನಿ-ಗೋವಾ ರೇಖಾಂಶ ದಲ್ಲಿದ್ದಿರುವ ಸಾಧ್ಯತೆ ಹೆಚ್ಚು. ಗೋವಾ ಕದಂಬರ ಶಾಸನಗಳಲ್ಲಿ ಉಲ್ಲೇಖವಾದ ಲಂಕೆಯು ಮತ್ತು ರಾವಣರ ರಾಜಧಾನಿ ಲಂಕೆಯು, ಈಗಿನ ಶ್ರಿಲಂಕಾ ಪ್ರದೇಶವಾಗಿರಲು ಸಾಧ್ಯವಿರಲಿಕ್ಕಿಲ್ಲ. ಆದ್ದರಿಂದ ಶ್ರೀರಾಮನು ಲಂಕೆಯಿಂದ ಹೊನ್ನಾವರ-ಹಲಶಿ-ರಾಮದುರ್ಗ ಶಿರಸಂಗಿ ಮಾರ್ಗವಾಗಿ ಕಿಷ್ಕಿಂಧೆಗೆ ಹಿಂದಿರುಗಿದ್ದು ಸ್ವಲ್ಪ ಹೆಚ್ಚು ಕಡಿಮೆ ಸರಿಯಾಗಿ ಕಾಣುತ್ತದೆ. ಆದೇ ಈಗಿನ ಶ್ರಿಲಂಕಾ ಆಗಿನ ಲಂಕೆಯಾಗಿದ್ದರೆ ಈ ಮಾರ್ಗವು ಸರಿಯಾಗುತ್ತಿರಲಿಲ್ಲ. ಕ್ರಮೇಣ ಭಾವನಾತ್ಮಕವಾಗಿ ಕಲ್ಪಿಸಿಕೊಂಡ ಮಾರ್ಗವಾಗಿರುತ್ತಿತ್ತು. ಆದ್ದರಿಂದ ಸ್ಪಷ್ಟವಾಗಿ ಆದೇ ಮಾರ್ಗವಲ್ಲದಿದ್ದರೂ ನಿಜವಾದ ಮಾರ್ಗದ ಪರಿಸರದಲ್ಲಿ ಅಥವಾ ರಾಮಾಯಣ ಜನವರ್ಗಗಳ ತರುವಾಯ ಪೀಳಿಗೆಯವರು ವಲಸೆ ಬಂದು ಇದ್ದ ಪರಿಸರದಲ್ಲಿ ಈ ಸ್ಥಳಗಳಿದ್ದು ಆ ಪರಂಪರೆಯಿಂದ ಪ್ರಭಾವಿತಗೊಂಡಿದೆ.

ಹೀಗೆ ಒಂದೆಡೆಯಲ್ಲಿ ಪೂರ್ವಭಾವಿ ಇತಿಹಾಸ ಸಂಸ್ಕೃತಿಗಳ ಮೂರು ವರ್ಗಗಳು ಮತ್ತೊಂದೆಡೆಯಲ್ಲಿ ಅತಿ ಪ್ರಾಚೀನ ಋಷಿ ವರ್ಗದ ವೈದಿಕ ಪರಂಪರೆ, ಜಾಂಬವಂತ-ಹನುಮಾನ್ ವಾಲಿ-ಸುಗ್ರೀವಾದಿಗಳ ಪರಂಪರೆ ಮತ್ತು ರಾಮಾಯಣ ಮಹಾಭಾರತದ ಸನ್ನಿವೇಶದ ಪರಂಪರೆ ವರ್ಗಗಳಿರುವುದು ತುಂಬ ಕುತೂಹಲಕಾರಿಯಾಗಿದೆ. ಎಷ್ಟರ ಮಟ್ಟಿಗೆ ಇವು ಪರಸ್ಪರ ಹೊಂದಾಣಿಕೆಯಾಗಬಹು ದೆಂಬುದನ್ನು ಮುಂದಿನ ಗಂಭೀರ ವೈಜ್ಞಾನಿಕ ಸಂಶೋಧನೆ ಗಳಿಂದ ಗೊತ್ತು ಮಾಡಬೇಕಾಗಿದೆ.

ಎಸ್. ಎಂ. ನಾಗಭೂಷಣ *

# ಬೆಳಗಾವಿ ಸುತ್ತ ಮುತ್ತಲಿನ ಕೆಲವು ಪುರಾತತ್ತ್ವ ಶೋಧನೆಗಳು

ಬೆಳಗಾವಿ ನಗರ ಹಾಗೂ ಸುತ್ತಮುತ್ತಲಿನ ಬಹುತೇಕ ಗ್ರಾಮಗಳಲ್ಲಿ ಒಂದಲ್ಲಾ ಒಂದು ಐತಿಹಾಸಿಕ, ಆಕರ ಸಾಮಗ್ರಿಗಳಾದ ಶಿಲ್ಪಾವಶೇಷಗಳು, ಸ್ಮಾರಕಗಳು, ಶಿಲಾಶಾಸನಗಳು ದೊರೆಯುತ್ತವೆ. ಬೆಳಗಾವಿ ವಾಯವ್ಯ ಭಾಗದ ಗ್ರಾಮಗಳಾದ ತುರಮರಿ, ಉಚಗಾವೆ, ಅಂಬೆವಾಡಿ, ಗೋಜಗ, ಬೆಕ್ಕಿನಕರ, ಅತಿವಾಡ, ಚಲುವನಟ್ಟಿ, ಹಂದಿಗನೂರು ಗ್ರಾಮಗಳ ಕೆಲವು ಪುರಾತತ್ತ್ವ ಅವಶೇಷಗಳನ್ನು ಕ್ರೋಢೀಕರಿಸಿ ಈ ಪ್ರಬಂಧದಲ್ಲಿ ವಿವರಿಸಿದ್ದೇನೆ.

ತುರಮರಿ : ಬೆಳಗಾವಿಯಿಂದ ೧೨ ಕಿ.ಮೀ. ಅಂತರದಲ್ಲಿ ಪಶ್ಚಿಮದ ಚಂದಗಡ ಹೆದ್ದಾರಿಯಲ್ಲಿದೆ. ಗ್ರಾಮದ ಉತ್ತರದಲ್ಲಿ ಒಂದು ಹುಣಸೇಮರದ ಬುಡದಲ್ಲಿ ಕರಿಶಿಲೆಯ ಶಿಥಿಲವಾದ ೪' ೩'' ಎತ್ತರದ ಶಿಲ್ಪಮೂರ್ತಿ ಇದೆ. ಇದನ್ನು ಸ್ಥಳೀಕರು ''ಜಡೆಶಂಕರ'' ಮೂರ್ತಿ ಎಂದು ಕರೆಯುತ್ತಾರೆ. ಕೈ, ತೊಡೆಗಳು ಶಿಥಿಲವಾಗಿರುವ ಹಾಗೂ ಸವೆದು ಹೋದ ಮೂರ್ತಿಶಿಲ್ಪ ಸುಮಾರು ಕ್ರಿ.ಶ. ೭-೮ ನೇ ಶತಮಾನದಾಗಿದ್ದು, ಆಕರ್ಷಕವಾಗಿದೆ. ಎತ್ತರವಾದ ಜಟಾಮುಕಟದಲ್ಲಿ ಕೇಶಲಂಕಾರಗಳಿಂದ ಅಲ್ಲಲ್ಲಿ ಮುತ್ತುಗಳ ಸರಗಳಿಂದ ಅಲಂಕರಿಸಲಾಗಿದೆ. ಅಗಲವಾದ ಅಲಂಕೃತ ಕರ್ಣಕುಂಡಲಗಳು ಸುಂದರವಾಗಿವೆ. ಆಕರ್ಷಕ ಕಣ್ಣು ಹುಬ್ಬುಗಳು, ಹಾರಗಳಿಂದ ಅಲಂಕೃತವಾದ ಕೊರಳನ್ನು ಹೊಂದಿದೆ. ಸೊಂಟದಲ್ಲಿ ಒಂದು ರೀತಿಯ ಅಲಂಕೃತ ಸರಗಳಿವೆ. ಶಿಲ್ಪ ಕುಳಿತ ಭಂಗಿಯಲ್ಲಿದೆ. ಬಾದಾಮಿ ಚಾಲುಕ್ಯ ಹಾಗೂ ರಾಷ್ಟ್ರಕೂಟರ ಪ್ರಾರಂಭಕಾಲದ ೮ನೇ ಶತಮಾನಕ್ಕೆ ಸೇರಬಹುದಾದ ಈ ಸುಂದರ ಮೂರ್ತಿ ಶಿಲ್ಪ ಈ ಭಾಗದ ಶೈವ ಧರ್ಮ ಆರಾಧನೆ ಹಾಗೂ ಕೇಶಾಲಂಕಾರ ಆಭರಣಗಳ ಕಲೆಯನ್ನು ತಿಳಿಯಬಹುದಾಗಿದೆ.



ಜಡೆಶಂಕರ ವಿಗ್ರಹ

ಈ ಭಾಗದಲ್ಲಿ ಅನೇಕ ಮಣ್ಣಿನ ಪಾತ್ರೆಗಳು ಕಪ್ಪು ಹಾಗೂ ಕೆಂಪು ಬಣ್ಣದ ಚೂರುಗಳು ಕಾಣಸಿಗುತ್ತವೆ. ಇದರಿಂದ ಇದೊಂದು ಪ್ರಾಚೀನ ಗ್ರಾಮವಿರಬೇಕೆಂದು ತಿಳಿದು ಬರುತ್ತದೆ.

* ಇತಿಹಾಸ ಉಪನ್ಯಾಸಕ, ಮಹಾಲಕ್ಷ್ಮೀ ಮಹಾವಿದ್ಯಾಲಯ, ಧಾರವಾಡ-೩.



ಉಚಗಾಂವ ವೀರಗಲ್ಲುಗಳು

**ಉಚಗಾಂವ** : ಶಾಸನಗಳಲ್ಲಿ ಉತ್ಸುಗ್ರಾಮವೆಂದು ಗೋವೇ ಕದಂಬರ ಆಡಳಿತಕಾಲದಲ್ಲಿ "ಉತ್ಸುಗಾಮೆ-೩೦" ಎಂದು ನರೇಂದ್ರದ ಕ್ರಿ.ಶ. ೧೧೨೬ ಶಾಸನದಲ್ಲಿ ಹಾಗೂ ಅನೇಕ ಶಾಸನಗಳಲ್ಲಿ ಉಲ್ಲೇಖಗಳನ್ನು ನೋಡಬಹುದು.

ಕಲ್ಲೇಶ್ವರ, ವಿಠೋಬ, ಲಕ್ಷ್ಮಿ, ರವಳನಾಥ, ಮಾರುತಿ, ವಿಶ್ವನಾಥ ಹಾಗೂ ಎರಡು ಗಣಪತಿ ದೇವಸ್ಥಾನಗಳು ಹಾಗೂ ಇತ್ತೀಚೆಗೆ ಜೀರ್ಣೋದ್ಧಾರ ಮಾಡಿದ ದೇವಾಲಯಗಳ ಸುತ್ತಮುತ್ತ ಅಲ್ಲಲ್ಲಿ ಪ್ರಾಚೀನ ವಾಸ್ತುಶಿಲ್ಪ ಅವಶೇಷಗಳನ್ನು ನೋಡಬಹುದು. ಗ್ರಾಮದಲ್ಲಿ ಅಲ್ಲಲ್ಲಿ ಒಟ್ಟು ೪೦ ವೀರಗಲ್ಲುಗಳು ೨೦ ಸತೀಗಲ್ಲುಗಳು ಇವೆ. ಗ್ರಾಮದ ಪೂರ್ವದಿಕ್ಕಿನಲ್ಲಿರುವ ಕೆರೆಯ ದಂಡೆಯಲ್ಲಿ ಇತ್ತೀಚೆಗೆ ಜೀರ್ಣೋದ್ಧಾರ ಮಾಡಿಸಿದ ರಾಮಲಿಂಗ ದೇವಸ್ಥಾನವಿದೆ. ಈ ದೇವಸ್ಥಾನದ ದ್ವಾರಬಂಧ ಕಲ್ಯಾಣ ಚಾಲುಕ್ಯರ ಕಾಲದ ಶಿಲ್ಪವಾಗಿದ್ದು, ಉಣಸುರುಳಿ ಶಾಖಾ, ರತ್ನಶಾಖಾ, ಸ್ಥಂಬಶಾಖಾಗಳಿಂದ ಕೂಡಿದೆ. ಒಂದೇ ಗರ್ಭಗೃಹ ಇರುವ ಇಲ್ಲಿ ಶಿವಲಿಂಗ, ಪೀಠ, ನಂದಿ, ಹಿಂಭಾಗದಲ್ಲಿ ಸಪ್ತಮಾತೃಕೆಯರ ವಿಗ್ರಹವಿದೆ. ದೇವಸ್ಥಾನದ ಸುತ್ತಲಿನ ಬಯಲಿನಲ್ಲಿ ಅನೇಕ ವಾಸ್ತುಶಿಲ್ಪ ಅವಶೇಷಗಳು ಹರಡಿವೆ. ಇವುಗಳ ಆಧಾರದಿಂದ ಈ ಹಿಂದೆ ಇಲ್ಲಿ ದೇವಸ್ಥಾನವಿದ್ದಿರಬಹುದೆಂದು ತಿಳಿದುಬರುತ್ತದೆ. ಈ ಬಯಲಿನಲ್ಲಿ ಕೆಂಪು ಹಾಗೂ ಕಪ್ಪು ಬಣ್ಣದ ಸಣ್ಣ ಮಡಿಕೆ ಚೂರುಗಳು ದೊರೆಯುತ್ತವೆ. ಇದರಿಂದ ಇದೊಂದು ೧೦-೧೨ನೇ ಶತಮಾನದ ಗ್ರಾಮವಾಗಿತ್ತೆಂದು ತಿಳಿದುಬರುತ್ತದೆ. ಗ್ರಾಮದೊಳಗಿರುವ ಬಹುತೇಕ ಎಲ್ಲಾ ವೀರಗಲ್ಲುಗಳು ಮಹಾಸತಿ ಕಲ್ಲುಗಳು ಕ್ರಿ.ಶ. ೧೧ ರಿಂದ ೧೩ನೇ ಶತಮಾನಕ್ಕೆ ಸೇರಿರಬಹುದು. ರವಳನಾಥ ದೇವಸ್ಥಾನದ ಸಮೀಪದಲ್ಲಿ ಕಲ್ಯಾಣ ಚಾಲುಕ್ಯರ ಕಾಲಕ್ಕೆ ಸೇರಬಹುದಾದ ದ್ವಾರಮಂಟಪ, ಗಜಲಕ್ಷ್ಮಿ, ಕೆಲ ಶಿಲ್ಪಾವಶೇಷಗಳನ್ನು ಕಟ್ಟೆಯೊಳಗೆ ಕಟ್ಟಿ ಸಂರಕ್ಷಿಸಲಾಗಿದೆ. ಗಣಪತಿ ದೇವಸ್ಥಾನದಲ್ಲಿ ವಾಸ್ತುಶಿಲ್ಪಕ್ಕೆ ಸಂಬಂಧಿಸಿದ ದುಂಡನೆಯ ಕಂಬಗಳು ಹಾಗೂ ವಾಸ್ತುಶಿಲ್ಪ ಅವಶೇಷಗಳನ್ನು ಕಾಣಬಹುದು. ಒಟ್ಟಿನಲ್ಲಿ ಈ ಗ್ರಾಮ ೧೦ ರಿಂದ ೧೩ನೇ ಶತಮಾನದಲ್ಲಿ ಆಡಳಿತ ಕೇಂದ್ರವಾಗಿದ್ದು, ರಾಜಕೀಯವಾಗಿ ಪ್ರಮುಖ ಸ್ಥಾನ ಗಳಿಸಿತ್ತೆಂದು ಈ ಅವಶೇಷಗಳಿಂದ ತಿಳಿದು ಬರುತ್ತದೆ.

**ಅಂಬೇವಾಡಿ** : ಬೆಳಗಾವಿಯಿಂದ ಪಶ್ಚಿಮಕ್ಕೆ ೧೨ ಕಿ.ಮೀ. ಅಂತರದಲ್ಲಿರುವ ಈ ಗ್ರಾಮದಲ್ಲಿ ಇತ್ತೀಚಿನ ದೇವಾಲಯಗಳಾದ ಮಾರುತಿ, ಲಕ್ಷ್ಮಿ, ಬಾವುಕಾಯಿ, ಗಳಿಗೇಶ್ವರ ದೇವಾಲಯಗಳಿವೆ. ಈ ದೇವಾಲಯಗಳಲ್ಲಿ ಅಲ್ಲಲ್ಲಿ ಪ್ರಾಚೀನ ಶಿಲ್ಪಮೂರ್ತಿ ಹಾಗೂ ಪ್ರಾಚೀನ ವಾಸ್ತುಶಿಲ್ಪದ ಅವಶೇಷಗಳನ್ನು ಕಾಣಬಹುದು. ಬಾವುಕಾಯಿ ಎಂದು ಕರೆಯುವ ದೇವರ ಓಣಿಯಲ್ಲಿ ಒಂದು ಕಟ್ಟೆ ಕಟ್ಟಿ ಅದರಲ್ಲಿ ಪ್ರಾಚೀನ ಮೂರ್ತಿ ಶಿಲ್ಪಗಳಾದ ಗಜಲಕ್ಷ್ಮಿ, ಗಣಪತಿ ಹಾಗೂ ನಲ್ಲಿಕಾಯಿ ಆಕೃತಿಯ ಗೋಪುರ ಕಳಸವನ್ನು ಕಟ್ಟೆಯಲ್ಲಿ ಕಟ್ಟಲಾಗಿದೆ. ಗಜಲಕ್ಷ್ಮಿ ಮೂರ್ತಿಶಿಲ್ಪ ೨½ ಅಡಿ ಎತ್ತರವಿದ್ದ ಪದ್ಮಾಸನದಲ್ಲಿ ಕುಳಿತ ಲಕ್ಷ್ಮಿ ಅಕ್ಕಪಕ್ಕದಲ್ಲಿ ಮುಂಗಾಲು ಎತ್ತಿ ಸೊಂಡಲಿನಿಂದ ಕುಂಬಗಳಿಂದ ಅಭಿಷೇಕ ಮಾಡುವ ರೀತಿಯಲ್ಲಿ ಎರಡು ಗಜಗಳು ನಿಂತಿವೆ. ಇದು ಬಹುಶಃ ೧೦ನೇ ಶತಮಾನಕ್ಕೆ ಸೇರಬಹುದಾದ ಶಿಲ್ಪ. ಗಣಪತಿ ವಿಗ್ರಹ ಬಹಳ ಸವೆದ ಶಿಥಿಲ ವಿಗ್ರಹ. ಮೇಲ್ಭಾಗದ ಶಿಖರ ಭಾಗದಲ್ಲಿ ಅಂಡ ಕಳಸವಿದೆ. ಇದು ಬಹುಶಃ ೧೩ನೇ ಶತಮಾನದ ಶಿಲ್ಪ ಅವಶೇಷ. ಗ್ರಾಮದ ಪಕ್ಕದಲ್ಲಿನ ಕಬ್ಬಿನ



ಗಣಪತಿ, ಗಜಲಕ್ಷ್ಮಿ, ಅಂಬೇವಾಡಿ

ಹೊಲದಲ್ಲಿ ಇತ್ತೀಚೆಗೆ, ಕ್ರಿ.ಶ. ೧೧೮೫ ಮೇ ೫ರ ರಟ್ಟಲಕ್ಷ್ಮಿದೇವರಸನ ಶಾಸನ ಸಿಕ್ಕಿದೆ. ಇದನ್ನು ಇತಿಹಾಸ ದರ್ಶನ ಸಂಪುಟ ೭ರಲ್ಲಿ ಪ್ರಕಟಿಸಿದ್ದೇನೆ. ಗ್ರಾಮದಲ್ಲಿರುವ ಗಳಿಗೇಶ್ವರ ದೇವರ ಅಂಗಭೋಗಕ್ಕೆಂದು ದತ್ತಿ ಬಿಟ್ಟ ರಟ್ಟಲಕ್ಷ್ಮಿದೇವರಸ ಹೊರಡಿಸಿದ ಆಜ್ಞೆ ವಿಷಯ ಇದರಲ್ಲಿದೆ. ಗಳಿಗೇಶ್ವರ ದೇವಸ್ಥಾನ ಹೊರಭಾಗದಲ್ಲಿ ಎರಡು ವೀರಗಲ್ಲು, ಒಂದು ಸತಿ ಕಲ್ಲು ಇದೆ. ಈ ಅವಶೇಷಗಳಿಂದ ೧೧ ರಿಂದ ೧೩ನೇ ಶಮಾನದ ಕಾಲದಲ್ಲಿ ಈ ಗ್ರಾಮ ಒಂದು ರಾಜಕೀಯ ಹಾಗೂ ಸಾಂಸ್ಕೃತಿಕ ಮಹತ್ವದ ಸ್ಥಳವಾಗಿತ್ತೆಂದು ತಿಳಿದುಬರುತ್ತದೆ.

**ಗೋಜಗ** : ಬೆಳಗಾವಿಯಿಂದ ವಾಯವ್ಯ ದಿಕ್ಕಿನಲ್ಲಿ ೧೪ ಕಿ.ಮೀ. ಅಂತರದಲ್ಲಿದೆ. ಗ್ರಾಮದ ಬಸ್ ನಿಲ್ದಾಣದಲ್ಲಿ ಇಳಿಯುತ್ತಿದ್ದಂತೆ ಇಲ್ಲಿನ ಅನೇಕ ವಾಸ್ತುಶಿಲ್ಪ ಬೋದಿಗೆ ಕಂಬಗಳು ಗ್ರಾಮದ ಪ್ರಾಚೀನತೆಯ ಎತ್ತಿ ತೋರಿಸುತ್ತವೆ. ಹೈಸ್ಕೂಲ್‌ನ ಹಿಂಭಾಗದ ಬೇಲಿಯಲ್ಲಿರುವ ಒಂದು ಕಲ್ಲಿನಲ್ಲಿ ಪದ್ಮಾಸನದಲ್ಲಿ ಕುಳಿತ ಭಂಗಿಯ ಜೈನ ಉಬ್ಬುಶಿಲ್ಪ ಈ ಭಾಗದ ಜೈನ ಧರ್ಮ ಪರಂಪರೆಯನ್ನು ಪ್ರಾಚೀನತೆಯನ್ನೂ ಎತ್ತಿ ತೋರಿಸುತ್ತದೆ. ಗ್ರಾಮದ ಮಧ್ಯದಲ್ಲಿರುವ ಜಿನಾಲಯದಲ್ಲಿ (ಇತ್ತೀಚಿನ ದೇವಸ್ಥಾನ) ೧ ಅಡಿ ಎತ್ತರದ ಎರಡು ಕಂಚಿನ ವಿಗ್ರಹಗಳು ಪದ್ಮಾವತಿ ಹಾಗೂ ನಾಗಬಂಧಗಳಿಂದ ಅಲಂಕೃತವಾಗಿದೆ. ಗ್ರಾಮದ ಪೂರ್ವ ದಿಕ್ಕಿನ ½ ಕಿ.ಮೀ. ದೂರದ ಮಾವಿನ ತೋಪುಗಳ ನಡುವೆ ಇತ್ತೀಚೆಗೆ ಜೀರ್ಣೋದ್ಧಾರ ಮಾಡಿದ ಕಲ್ಮೇಶ್ವರ ದೇವಸ್ಥಾನವಿದೆ. ಕಲ್ಮೇಶ್ವರ ದೇವರಿಗೆ ೩½ ಅಡಿ ಎತ್ತರದ ಸುಂದರ ಕಂಚಿನ ಮುಖವಾಡವಿದೆ. ಕಿರೀಟ ಹಾಗೂ ಏಳು ಹೆಡೆ ಸರ್ಪದಿಂದ ಅಲಂಕರಿಸಲಾಗಿದೆ. ದೇವಸ್ಥಾನದಲ್ಲಿ ಈಶ್ವರ ಹಾಗೂ ಮುಂಭಾಗದಲ್ಲಿ ನಂದಿ ವಿಗ್ರಹವಿದೆ. ಗರ್ಭಗುಡಿಯ ಹೊರಭಾಗದ ಸಭಾ ಮಂಟಪದಲ್ಲಿ ಕಲ್ಯಾಣ ಚಾಲುಕ್ಯರ ಕಾಲಕ್ಕೆ ಸೇರಬಹುದಾದ ಒಂದು ವೀರಗಲ್ಲು ಹಾಗೂ ಒಂದು ವಿಷ್ಣು ವಿಗ್ರಹವಿದೆ. ಶಂಖ, ಚಕ್ರ, ಅಭಯ ಹಸ್ತವಿದ್ದು ಮತ್ತೊಂದು ಕೈ ಶಿಥಿಲವಾಗಿದೆ. ಸಾಕಷ್ಟು ಎಣ್ಣೆ ಜಿಡ್ಡಿನಿಂದ ಮುಚ್ಚಿರುವದರಿಂದ ಆಲಂಕಾರಿಕ ಆಭರಣ ಇತ್ಯಾದಿ ಕಾಣಸಿಗದು. ದೇವಸ್ಥಾನದ ಬಲಭಾಗದ ಹೊಲದಲ್ಲಿ ಸುಮಾರು ೧೦ ವೀರಗಲ್ಲುಗಳಿವೆ. ಈ ವೀರಗಲ್ಲುಗಳಲ್ಲಿ ಕೆಲವು ಕಲ್ಯಾಣ ಚಾಲುಕ್ಯರಿಗೂ ಪೂರ್ವಕಾಲದವು. ಪಕ್ಕದ ಹೊಲದಲ್ಲಿ ಒಂದು ಶಿಲಾಶಾಸನವಿದೆ. ಐದು ಅಡಿ ಉದ್ದವಿರುವ ಈ ಶಿಲಾಶಾಸನ ಮೇಲಿನ ಭಾಗದ ಸೂರ್ಯಚಕ್ರ, ಈಶ್ವರ ಪೀಠ, ಗೋವಿನ ರೇಖಾ ಚಿತ್ರವಿದ್ದು, ಕೆಳಭಾಗದ ಲಿಪಿ ಅಷ್ಟೇನು ಸ್ಪಷ್ಟವಾಗಿಲ್ಲ. ಲಿಪಿ ಆಧಾರದಿಂದ ೧೩ನೇ ಶತಮಾನಕ್ಕೆ ಸೇರಬಹುದಾಗಿದೆ. ದೇವಸ್ಥಾನ ಹಿಂಭಾಗದ ಹೊಲದಲ್ಲಿ ಇಟ್ಟಿಗೆ ಚೂರುಗಳು, ಮಣ್ಣಿನ ಪಾತ್ರ ಚೂರುಗಳು, ಹೇರಳವಾಗಿ ಸಿಗುತ್ತವಲ್ಲದೆ, ಗ್ರಾಮಸ್ಥರಿಗೆ ಅನೇಕ ಸಲ ಇಲ್ಲಿ ನಾಣ್ಯಗಳು ದೊರಕಿದ್ದಾಗಿ ಹೇಳುತ್ತಾರೆ. ಅಲ್ಲಲ್ಲಿ ಎರಡು ಚೌಕ ಹಾಗೂ ಅಷ್ಟಕೋನಾಕೃತಿಯ ಕಂಬಗಳು ಬಿದ್ದಿದ್ದು, ಇವುಗಳ ಆಧಾರದಿಂದ ಇದೊಂದು ಪಾಳುಬಿದ್ದ ಗ್ರಾಮ ಪ್ರದೇಶವೆಂದು ಹೇಳಬಹುದು. ಇಲ್ಲಿನ ಪುರಾತತ್ವ ಅವಶೇಷಗಳ ಆಧಾರದಿಂದ ರಾಷ್ಟ್ರಕೂಟ, ಕಲ್ಯಾಣಚಾಲುಕ್ಯರ ಕಾಲದ ಗ್ರಾಮವಿದ್ದು, ಅದು ಪಾಳು ಬಿದ್ದು, ಬೇರೆಡೆಗೆ ಸ್ಥಳಾಂತರ ಹೊಂದಿದೆ ಎಂದು ತಿಳಿದುಬರುತ್ತದೆ.

**ಬೆಕ್ಕಿನಕರೆ** : ಬೆಳಗಾವಿಯಿಂದ ವಾಯುವ್ಯ ಭಾಗದಲ್ಲಿ ೧೪ ಕಿ.ಮೀ. ಅಂತರದ ಗಡಿಗ್ರಾಮವಾಗಿದೆ. ಈ ಗ್ರಾಮದ ಉತ್ತರದಲ್ಲಿ ಸ್ಮಶಾನದಲ್ಲಿ ಒಂದು ಸರಳ ಜಂಬಿಟ್ಟಿಗೆಯ ೧೦ ಅಡಿ ಚೌಕಾಕಾರದ ಗರ್ಭಗೃಹ ಇರುವ ದೇವಾಲಯವಿದೆ. ಕದಂಬ ಶೈಲಿಯ ಗೋಪುರವಿದೆ. ಸ್ಥಳೀಕರು ಇದನ್ನು ''ನಾಗನಾಥ್'' ದೇವರೆಂದು ಕರೆಯುತ್ತಾರೆ. ಗರ್ಭಗೃಹದಲ್ಲಿ ಮೂರ್ತಿಶಿಲ್ಪಕ್ಕೆ ಆಕಾರವಿಲ್ಲ ದುಂಡನೆಯ ಕಲ್ಲುಗಳಿವೆ. ದೇವಸ್ಥಾನದ ಮುಂಭಾಗದ ಬೇವಿನ ಮರದಡಿ ಎರಡು ಗಡಿಗಲ್ಲುಗಳು ೬' X ೩' ಗಾತ್ರದ ಜಂಬಿಟ್ಟಿಗೆ ಕಲ್ಲುಗಳಿವೆ. ಇವು ಬಹುಶಃ ೧೦ನೇ ಶತಮಾನದ ಕಾಲಮಾನಕ್ಕೆ ಸೇರಬಹುದು. ಮತ್ತೆರಡು ವೀರಗಲ್ಲುಗಳು ದೇವಾಲಯದ ಎಡ ಬಲಭಾಗಗಳಲ್ಲಿವೆ. ದೇವಾಲಯದ ಸುತ್ತಲಿನ ಪ್ರದೇಶದಲ್ಲಿ ಮಣ್ಣಿನ ಪಾತ್ರ ಚೂರುಗಳು ಹಾಗೂ ಅನೇಕ ಶಿಲಾ ಅವಶೇಷಗಳು ಬಿದ್ದಿವೆ. ಇವುಗಳ ಆಧಾರದಿಂದ ಇದೊಂದು ಪ್ರಾಚೀನ ಗ್ರಾಮ ಪ್ರದೇಶವೆಂದು ಹೇಳಬಹುದು.

**ಅತವಾಡ** : ಬೆಳಗಾವಿಯಿಂದ ವಾಯವ್ಯ ಮಹಾರಾಷ್ಟ್ರ ಗಡಿಯಲ್ಲಿರುವ ಈ ಕುಗ್ರಾಮ ೨೦ ಕಿ.ಮೀ. ಅಂತರದಲ್ಲಿದೆ. ಈ ಕುಗ್ರಾಮಕ್ಕೆ ಸಾವಿರ ವರ್ಷದ ಇತಿಹಾಸವಿದೆ. ಮಾರುತಿ ಮಂದಿರ, ಸತವೀರ ಲಕ್ಷ್ಮಿ, ಅಥವಾ ಮಾರಿ ಕಲಮೇಶ್ವರ ಮುಂತಾದ ಕಿರಿಯ ದೇವಾಲಯಗಳಿವೆ. ಗ್ರಾಮದ ಪಶ್ಚಿಮದ ಊರ ಮುಂಭಾಗದಲ್ಲಿ ಹುಲ್ಲು ಬಣವೆಗಳ ಮಧ್ಯದಲ್ಲಿ ಅನೇಕ ಸತೀಕಲ್ಲುಗಳು ಭೂಮಿಯಲ್ಲಿ ಹೂತುಹೋಗಿವೆ.



ಆತವಾಡ ಮಹಾಸತಿ

ಒಂದು ಸತೀಕಲ್ಲಿನ ಮೇಲಿನ ಭಾಗ ಮಾತ್ರ ನೋಡಲು ಸಿಗುತ್ತದೆ. ಮೇಲಿನ ಭಾಗದಲ್ಲಿ ಸೂರ್ಯಚಂದ್ರ, ಮಧ್ಯದಲ್ಲಿ ಇಬ್ಬರು ವೀರರು ನಿಂತ ಹಾಗೂ ಬಲಭಾಗದಲ್ಲಿ ಒಂದು ಗೋವು, ಎಡಭಾಗದಲ್ಲಿ ಎರಡು ಗೋವುಗಳ ಉಬ್ಬು ಶಿಲ್ಪವಿರುವುದು, ಕೆಳಭಾಗದ ಅಂಕಣದಲ್ಲಿ ನಾಲ್ಕು ಜನ ವೀರರು ಒಬ್ಬರಿಗೊಬ್ಬರು ಹೆಗಲ ಮೇಲೆ ಕೈ ಹಾಕಿ ನಿಂತಿರುವ ಹಾಗೂ ಬಲಭಾಗದ ಎತ್ತಿದ ಹಸ್ತ ಚಿಹ್ನೆಯನ್ನು ಕೆತ್ತಲಾಗಿದೆ. ಕೆಳ ಅಂಕಣಗಳು ಭೂಮಿಯಲ್ಲಿ ಹೂತುಹೋಗಿವೆ. ಈ ಶಿಲ್ಪಕಲಾ ಅವಶೇಷಗಳಿಂದ ಈ ಗ್ರಾಮ ಸುಮಾರು ೧೧ನೇ ಶತಮಾನದಿಂದ ೧೫ನೇ ಶತಮಾನದ ಒಂದು ಪ್ರಮುಖ ಗ್ರಾಮವೆಂದು ಹೇಳಬಹುದು.

ಹಂದಿಗನೂರು : ಬೆಳಗಾವಿಯಿಂದ ೨೦ ಕಿ.ಮೀ. ವಾಯುವ್ಯದಲ್ಲಿರುವ ಗ್ರಾಮ. ಇಲ್ಲಿನ ಪ್ರಾಚೀನ ಅವಶೇಷಗಳಿಂದ ಇದೊಂದು ಪ್ರಾಚೀನ ಪಟ್ಟಣವೆಂದು ಹೇಳಬಹುದು. ಗ್ರಾಮದ ಉತ್ತರ ಭಾಗದಲ್ಲಿ ಮಾರುತಿ ಮಂದಿರ, ಕಲ್ಲೇಶ್ವರ, ಲಕ್ಷ್ಮೀ ಮಂದಿರಗಳಿವೆ. ಈಗಿನ ಕಲ್ಲೇಶ್ವರ ದೇವಾಲಯವನ್ನು ನವೀಕರಣ ಮಾಡಲಾಗಿದೆ. ಕಲ್ಲೇಶ್ವರ ದೇವಾಲಯ ಪ್ರಾಚೀನವಾಗಿದ್ದು, ಅನೇಕ ಶಿಲ್ಪ ಅವಶೇಷಗಳು ಬಿದ್ದಿವೆ. ದೇವಾಲಯದ ಕಂಬಗಳು, ಬೋದಿಗೆಗಳು, ಬಿತ್ತಿಕಲ್ಲುಗಳನ್ನು ಕಾಣಬಹುದು. ಶಿವಲಿಂಗ (ಈಶ್ವರ), ನಂದಿ, ಗಣಪತಿ, ವಿಗ್ರಹಗಳು ಪೂರ್ಣ ಶಿಥಿಲವಾಗಿದೆ. ಕರಿಕಲ್ಲಿನ ಇವು ೧೦-೧೨ ನೇ ಶತಮಾನಕ್ಕೆ ಸೇರಿದ ಶಿಲ್ಪಗಳು. ಅಲ್ಲದೇ ದೇವಾಲಯದ ಸುತ್ತಲು ಅನೇಕ ಮಡಿಕೆ ಚೂರು, ಇಟ್ಟಿಗೆ ಚೂರುಗಳು ಇವೆ. ಇವುಗಳ ಆಧಾರದಿಂದ ಹಂದಿಗನೂರು ಸುಮಾರು ಸಾವಿರ ವರ್ಷದ ಇತಿಹಾಸವುಳ್ಳ ಕಲ್ಯಾಣ ಚಾಲುಕ್ಯರ ಕಾಲದಿಂದ ಅಸ್ತಿತ್ವದಲ್ಲಿದ್ದ ಗ್ರಾಮವೆಂದು ಹೇಳಬಹುದು.

ಚಲುವನಟ್ಟಿ : ಬೆಳಗಾವಿಯಿಂದ ೧೮ ಕಿ.ಮೀ. ವಾಯವ್ಯದಲ್ಲಿರುವ ಈ ಕುಗ್ರಾಮ ಅನೇಕ ಐತಿಹಾಸಿಕ ಅವಶೇಷ ಹಾಗೂ ಭಾರ ಎಳೆಯುವ ಪ್ರಾಚೀನ ರೈತರ ಪಂದ್ಯಾಟದ ಬಗ್ಗೆ ಮಹತ್ವವಾದ ಮಾಹಿತಿ ದೊರೆಯುತ್ತದೆ. ಈ ಗ್ರಾಮದಲ್ಲಿ ಮಾರುತಿ, ಬ್ರಹ್ಮಲಿಂಗ ಮುಖ್ಯವಾದ ದೇವಾಲಯುಗಳು. ಊರಿನ ಪಶ್ಚಿಮದಲ್ಲಿ ಒಂದು ಸಣ್ಣ ಕೆರೆ ಇದೆ. ಕೆರೆಯ ಹಿಂಭಾಗದಲ್ಲಿ ಬ್ರಹ್ಮಲಿಂಗ ಎನ್ನುವ ದೇವಾಲಯ ಕಟ್ಟಡ ಇತ್ತೀಚೆಗೆ ಜೀರ್ಣೋದ್ಧಾರಗೊಂಡು ಪ್ರಾಚೀನ ದೇವಲಾಯದ ವಾಸ್ತುಶಿಲ್ಪ ಅವಶೇಷಗಳು ಬಿದ್ದಿವೆ. ಈ ವಾಸ್ತುಶಿಲ್ಪ ಅವಶೇಷಗಳ ಆಧಾರದಿಂದ ಈ ದೇವಾಲಯ ೧೨ನೇ ಶತಮಾನಕ್ಕೆ ಸೇರಬಹುದಾಗಿದೆ. ಮೂರ್ತಿಶಿಲೆಗಳೇನು ಇಲ್ಲ. ಆದರೆ ದೇವಾಲಯದ ಮುಂಭಾಗದಲ್ಲಿ ೭ ಅಡಿ ಉದ್ದನೆಯ ೨ ಅಡಿ ಚೌಕದಲ್ಲಿ ಕಂಬ, ಎರಡು ಕಡೆ (೭'X೨'X೨') ರಂಧ್ರಗಳಿವೆ. ಈ ಭಾರವಾದ ಕಲ್ಲನ್ನು ವಿಸೇಷ ದಿನಗಳಲ್ಲಿ ರೈತರು ತಾವು ಬೆಳಸಿದ ದಷ್ಟಪುಷ್ಟವಾದ ಎತ್ತುಗಳಿಗೆ ಕಟ್ಟಿ ಎಳೆಸುವ ಪಂದ್ಯಾಟವಿದ್ದು, ನಿರ್ದಿಷ್ಟ ದೂರಕ್ಕೆ ಈ ಕಂಬವನ್ನು ಎಳೆದರೆ ಅಂತಹ ಎತ್ತುಗಳನ್ನೂ, ರೈತನನ್ನೂ ಗ್ರಾಮದಲ್ಲಿ ಮೆರವಣಿಗೆ ಮಾಡಿ ಸನ್ಮಾನಿಸಿ, ಬಹುಮಾನ ನೀಡುವ ಪದ್ಧತಿ ಇತ್ತೆಂದು ಗ್ರಾಮವೃದ್ಧರು ಹೇಳುತ್ತಾರೆ. ಆದರೆ ಇತ್ತೀಚೆಗೆ ಈ ಪಂದ್ಯಾಟ ಮಾಯವಾಗಿದೆ. ಪ್ರಾಚೀನ ಕಾಲದ ರೈತರ ಪಂದ್ಯಾಟಗಳಲ್ಲಿ ಇಲ್ಲಿರುವ ಭಾರ ಎಳೆಯುವ ಪಂದ್ಯಾಟದ ಕಂಬ ಈ ಭಾಗದ ಪ್ರದೇಶಿಕ ಪ್ರಾಚೀನ ಕ್ರೀಡೆಗಳ ಬಗ್ಗೆ ಬೆಳಕು ಚೆಲ್ಲುವ ಕಂಬ ಒಂದು ಸ್ಮಾರಕವಾಗಿದೆ.

ಗ್ರಾಮದ ದಕ್ಷಿಣ ಭಾಗದ ಕೊನೇ ಗಲ್ಲಿಯಲ್ಲಿನ ಶ್ರೀ ಜಕಪ್ಪಪಾಟೀಲರ ಮನೆ ಹಿಂಭಾಗದ ತಿಪ್ಪೆಯಲ್ಲಿ ೩ ಸತಿಕಲ್ಲುಗಳಿವೆ. ಜಂಬೆಟ್ಟಿಗೆ ತರದ ಕರಿಕಲ್ಲಿನ ವೀರಗಲ್ಲುಗಳ ೩ ಹಂತಗಳಲ್ಲಿ ಕೆಳಭಾಗದಲ್ಲಿ ನಾಲ್ಕು ಜನರು ಸಾಲಾಗಿ ನಿಂತಂತೆ, ಎರಡನೇ ಹಂತದಲ್ಲಿಯೂ ಇದೇ ರೀತಿ ಇದ್ದು, ಎಡಗೈ ಹಸ್ತ ಎತ್ತಿದ ಉಬ್ಬು ಶಿಲ್ಪಗಳಿವೆ. ಮೇಲಿನ ಭಾಗದಲ್ಲಿ ಅಸ್ಪಷ್ಟವಾದ ಸೂರ್ಯ-ಚಂದ್ರ ಚಿತ್ರಗಳಿವೆ. ಉಳಿದ ಸತೀಕಲ್ಲುಗಳು ಇದೇ ಮಾದರಿಯಲ್ಲಿವೆ. ಶಿಲ್ಪಕಲೆಯ ಕಾಲಮಾನ ದೃಷ್ಟಿಯಿಂದ ಇವು ಕ್ರಿ.ಶ. ೧೨-೧೩ನೇ ಶತಮಾನಕ್ಕೆ ಸೇರಬಹುದು. ಹೀಗೆ ಅನೇಕ ಅವಶೇಷಗಳನ್ನು ಹೊಂದಿದ ''ಚಲುವನಟ್ಟಿ'' ಬೆಳಗಾವಿ ತಾಲೂಕಿನ ಕರ್ನಾಟಕದ ಗಡಿಗ್ರಾಮ. ●

ಪ್ರೊ॥ಲಕ್ಷ್ಮಣ್ ತೆಲಗಾವಿ *

# ಬಳ್ಳಾರಿ ತಾಲ್ಲೂಕು ಹಳೇನೆಲ್ಲುಡಿ ಗ್ರಾಮದ ಸ್ಮಾರಕಗಳು: ಈಚಿನ ಶೋಧಗಳ ಹಿನ್ನಲೆಯಲ್ಲಿ

ಹಳೇನೆಲ್ಲುಡಿಯು ಬಳ್ಳಾರಿ ತಾಲ್ಲೂಕಿನಲ್ಲಿರುವ ಗ್ರಾಮ. ಕಂಪ್ಲಿ-ಕುರುಗೋಡು ಮಾರ್ಗದಲ್ಲಿ, ಕಂಪ್ಲಿಯಿಂದ ಸುಮಾರು ೧೦ ಕಿ.ಮೀ. ಅಂತರದಲ್ಲಿ ಇದು ನೆಲೆಸಿದೆ. ಇಲ್ಲಿಂದ ಬಳ್ಳಾರಿಗೆ ಇರುವ ದೂರ ಸುಮಾರು ೪೦ ಕಿ.ಮೀ. ಈ ಗ್ರಾಮವು ನೆಲಸಿರುವುದು ಚಾರಿತ್ರಿಕ ಮಹತ್ವ ಪಡೆದ ನಾರೀಹಳ್ಳದ ದಂಡೆಯಲ್ಲಿ. ಹಳ್ಳ ಮತ್ತು ಊರುಗಳ ನಡುವೆ ಇರುವ ಈಗಿನ ಅಂತರ ಸುಮಾರು ಅರ್ಧ ಕಿಲೋಮೀಟರ್. ಗುರುದೇವರ ಸಿದ್ಧೇಶ್ವರದೇವರು ಅಥವಾ ಸಿದ್ಧಲಿಂಗಪ್ಪನ ದೇವನೆಲೆಯಾಗಿಯೂ ಹಳೇನೆಲ್ಲುಡಿ ಪುಸಿದ್ಧಿ ಪಡೆದಿದೆ. ಕಳೆದ ಶತಮಾನದಲ್ಲಿದ್ದ ಬಳ್ಳಾರಿ ಜಿಲ್ಲೆಯ ಶಿವಶರಣ ಎಮ್ಮಿಗನೂರಿನ ಜಡೆ ತಾತಾ ಅಥವಾ ಜಡೆಸಿದ್ಧಶಿವಯೋಗಿಗಳು (೧೮೪೯-೧೯೭೯) ಆಗಾಗ್ಗೆ ಈ ದೇವನೆಲೆಯಲ್ಲಿ ತಂಗುತಿದ್ದರೆಂಬುದು ಗಮನಾರ್ಹ. ಚಲವಾದಿ ಹುಸುಮಪ್ಪನೆಂಬ ಶರಣ ಸಹಾ ಹಳೇನೆಲ್ಲುಡಿಯವನೇ ಆಗಿರುವನೆಂಬುದು, ಈ ಎಡೆಯು ಪಡೆದಿದ್ದ ಪ್ರಾಮುಖ್ಯತೆಗೆ ಸಾಕ್ಷಿಯಾಗಿದೆ.

ಇಲ್ಲಿಯ ನಾರೀಹಳ್ಳವು ಮಳೆಗಾಲದಲ್ಲಿ ಮಾತ್ರ ತುಂಬಿ ಹರಿಯುತ್ತದೆ ಹಾಗೂ ದಕ್ಷಿಣದಿಂದ ಪಶ್ಚಿಮ ಮಾರ್ಗವಾಗಿ ಹರಿದು ಉತ್ತರದಲ್ಲಿ ಸಾಗುತ್ತದೆ. ಇದು ಹರಿಯುವುದು ಹೊಸನೆಲ್ಲುಡಿ ಮತ್ತು ಹಳೇನೆಲ್ಲುಡಿಗಳ ನಡುವೆ. ಪ್ರಾಚೀನ ಕಾಲದಿಂದಲೂ ಈ ಹಳ್ಳವು ಇಲ್ಲಿಯ ಪರಿಸರದ ಸಂಸ್ಕೃತಿಯ ವಿಕಾಸದಲ್ಲಿ ಪ್ರಮುಖ ಪಾತ್ರ ವಹಿಸುತ್ತಾ ಬಂದಿದೆಯೆಂಬುದಕ್ಕೆ ಈಗ ಅನೇಕ ಕುರುಹುಗಳು ಕಂಡುಬಂದಿವೆ.

ಸುಮಾರು ೬೦ ವರುಷಗಳ ಹಿಂದೆ ಪ್ಲೇಗ್ ಕಾರಣದಿಂದಾಗಿ ಹಳೇನೆಲ್ಲುಡಿಯನ್ನು ತೊರೆದ ಜನರು, ಸುಮಾರು ೨ ಕಿ.ಮೀ. ಅಂತರದಲ್ಲಿ ನಾರೀಹಳ್ಳದ ಇನ್ನೊಂದು ದಂಡೆಯ ಮೇಲೆ ಹೊಸನೆಲ್ಲುಡಿಯನ್ನು ಸ್ಥಾಪಿಸಿದರು. ಅವರ ಭೂಮಿ-ಕಾಣೆಗಳೆಲ್ಲ ಇಂದಿಗೂ ಹಳೇನೆಲ್ಲುಡಿಯಲ್ಲೆ ಇವೆ. ಸುಮಾರು ೧೮೦ ಕುಟುಂಬಗಳು ಇಲ್ಲಿವೆ. ಇಲ್ಲಿಯ ಒಟ್ಟು ಜನಸಂಖ್ಯೆಯಲ್ಲಿ (ಸುಮಾರು ೧೧೦೦) ಚಲವಾದಿ ಮತ್ತು ಕುರುಬ ಜನಾಂಗದವರು ಬಹುಸಂಖ್ಯಾತರು. ಉಳಿದವರಲ್ಲಿ ಪಿಂಜಾರರು ಸಾಕಷ್ಟು ಸಂಖ್ಯೆಯಲ್ಲಿದ್ದಾರೆ.

ಹಳೇನೆಲ್ಲುಡಿಯಲ್ಲಿ ಈಗ ಕಂಡುಬರುವ ಚಾರಿತ್ರಿಕ ಅವಶೇಷಗಳು ನೊಳಂಬ-ಪಲ್ಲವರ ಕಾಲದವು. ಹಿಂದೊಮ್ಮೆ ಈ ಊರನ್ನು ರಕ್ಷಣಾ ಪ್ರಾಕಾರವೊಂದು ಸುತ್ತುವರೆದಿತ್ತೆನ್ನಲು ಅಗಸೆಬಾಗಿಲು, ಬುಡ್ಡೆಕಲ್ಲು, ಅಗಸೆಬಾಗಿಲು ಬಳಿಯ ಆಂಜನೇಯ ಗುಡಿ, ಮುಚ್ಚಿಹೋಗಿರುವ ಕಂದಕಗಳು ಸಾಕ್ಷಿಯಾಗಿವೆ. ಗ್ರಾಮದ ದಕ್ಷಿಣಕ್ಕೆ ಇದ್ದ ಮಾಳೇದಿಬ್ಬದಲ್ಲಿ ಜಂಬೇಗಿಡದ ಜೊತೆಗೆ 'ವೀರಣ್ಣ'ನ ವಿಗ್ರಹ ನಿಲ್ಲಿಸಲಾಗಿದ್ದಿತು. ಈಗ ವಿಗ್ರಹ ಮಾತ್ರವಿದೆ, ಗಿಡವಿಲ್ಲ. ವಿಗ್ರಹ ಪೂರ್ವಾಭಿಮುಖನಾಗಿದೆ. ಊರೊಳಗಿರುವ ದೇವಾಲಯಗಳಲ್ಲಿ ಈಶ್ವರ ದೇವಾಲಯ, ವೆಂಕಟೇಶ್ವರ ಮೊದಲಾದ ವಿಗ್ರಹಗಳ ನೆಲೆಗಳು ಮುಖ್ಯವಾದುವು. ಇವುಗಳ ಪೈಕಿ ಮಹಿಷಾಸುರಮರ್ದಿನಿ ಕರಿಯಕಲ್ಲು ವಿಗ್ರಹ ಪ್ರಮುಖವಾದುದು. ಇದು ರಚನೆಗೊಂಡಿರುವುದು ನೊಳಂಬ-ಪಲ್ಲವ ಕಲಾಶೈಲಿಯಲ್ಲಿ.

ಈ ಗ್ರಾಮದ ಪ್ರಮುಖ ಆಕರ್ಷಣೆಯೆಂದರೆ ಊರ ಹೊರಗಿರುವ ಸಿದ್ಧೇಶ್ವರ ದೇವನೆಲೆ. ಇಲ್ಲಿರುವ ಕಪ್ಪುಶಿಲೆಯ ಮೂರು ಲಿಂಗಗಳು, ನಂದಿ ಹಾಗೂ ಗಜಲಕ್ಷ್ಮಿ ಶಿಲ್ಪಗಳು, ಕಣಶಿಲೆಯಲ್ಲಿ ಮೂಡಿಸಿದ ವೀರಗಲ್ಲುಶಿಲ್ಪಗಳು ಗಮನ ಸೆಳೆಯುತ್ತವೆ. ಇಲ್ಲೊಂದು ಭವ್ಯ ದೇಗುಲವಿದ್ದು, ಅದು ನೊಳಂಬ-ಪಲ್ಲವರ ಕಾಲದಲ್ಲೇ ನಿರ್ಮಾಣಗೊಂಡಿದ್ದಿರ

* ಇತಿಹಾಸ ವಿಭಾಗದ ಮುಖ್ಯಸ್ಥರು,ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ, ಕಮಲಾಪುರ ೫೮೩೨೭೧



ನೊಳಂಬ ಪಲ್ಲವ ಪೆರ್ಮ್ಮಾನಡಿ ಉದಯಾದಿತ್ಯದೇವನ
ಶಾಸನ ೧೧ನೇ ಶತಮಾನ : ಹಳೇ ನೆಲ್ಲುಡಿ

ಸಿದ್ಧೇಶ್ವರ ದೇವನೆಲೆಯ ಎದುರಿಗೆ ನಿಲ್ಲಿಸಲಾಗಿರುವ ೧೧ನೇ ಶತಮಾನಕ್ಕೆ ಸೇರಿದ ನೊಳಂಬ-ಪಲ್ಲವರ ಶಿಲಾಶಾಸನದ ಪ್ರಕಾರ, ವಿಪ್ರನಾರಾಯಣದ ಧರೆಯನ್ನಾಳಿದ ಪಲ್ಲವ ಪೆರ್ಮ್ಮಾನಡಿದೇವರು ಗುರುದೇವರ ಸಿದ್ಧೇಶ್ವರ ದೇವರಿಗೆ ನೆರುಣ್ಣಾಗಲ್ಲ ಪೊಲದೊಳಗೆ ಧಾರಾಪೂರ್ವಕ ಬಿಟ್ಟ ಕೆಯಿ ಮತ್ತರು ಆಯಿವತ್ತು ಎಂದು ತಿಳಿಯುತ್ತದೆ. ಶಾಪಾಶಯ ಸಹಿತವಾದ ಈ ಶಾಸನದ ಪಾಠದಲ್ಲಿ ಬರುವ ಹಾಗೂ ಸಿದ್ಧೇಶ್ವರದೇವರಿಗೆ ಭೂದತ್ತಿಯನ್ನು ನೀಡಿರುವ ಪಲ್ಲವ ಪೆರ್ಮ್ಮಾನಡಿದೇವರು ಎಂಬಾತ, ನೊಳಂಬ-ಪಲ್ಲವ ವಂಶದ ಇಮ್ಮಡಿ ಇರಿವನೊಳಂಬ ಘಟೆಯಂಕಕಾರ (ಸು.೧೦೧೦-೧೦೨೪) ನ ತರುವಾಯ ಸು.೧೦೨೪-೧೦೫೪ರ ವರೆಗೆ ಆಳಿದ ಜಗದೇಕಮಲ್ಲ ನೊಳಂಬ ಪಲ್ಲವ ಪೆರ್ಮಾನಡಿ ಉದಯಾದಿತ್ಯದೇವನೇ ಆಗಿರುವನೆಂದು ತಿಳಿಯಲು ಅವಕಾಶವಿದೆ. ಈ ಅರಸನು ಹಾಕಿಸಿದ ಬಾಗಳಿಯ ಶಾಸನವು ಹೇಳುವಂತೆ, ಈತನು ಅಲ್ಲಿಯ ಗುರುಕುಲವೊಂದರ ಪೋಷಣೆಗಾಗಿ ಹೇರಳ ಭೂದತ್ತಿ ಬಿಟ್ಟನು (ಸೌ.ಇ.ಇ., IX-I ಸಂಖ್ಯೆ-೮೦). ಇದೇ ಶಾಸನವು ಈ ಆರಸನು ತನ್ನ



ನೊಳಂಬ-ಪಲ್ಲವರ ಕಾಲದ
ಮಹಿಷಾಸುರ ಮರ್ದಿನಿ ಶಿಲ್ಪ : ಹಳೇನೆಲ್ಲುಡಿ

ಬಹುದೆಂಬುದಕ್ಕೆ ಇಲ್ಲಿರುವ ಕೆಲವು ಶಿಲ್ಪಾವಶೇಷಗಳು ಆಧಾರ ವಾಗಿವೆ. ಈಗ ಇಲ್ಲಿ ಸಿದ್ಧೇಶ್ವರ ದೇವಾಲಯವಿಲ್ಲದಿದ್ದರೂ ಅದರ ಅವಶೇಷಗಳು ಕಂಡುಬರುತ್ತವೆ. ಈ ನೆಲೆಯನ್ನು ಸುಮಾರು ೬೦ ಅಡಿ ವಿಸ್ತಾರದಲ್ಲಿ ಪ್ರಾಚೀನವಾದ ಗೋನ(ಣ) ದಮರ ಅಥವಾ ಗೋಂದುಮರವು ಪೂರ್ಣವಾಗಿ ಆವರಿಸಿರುವುದು ವಿಶೇಷ. ಇದು ಪವಿತ್ರವೂ ವೈದ್ಯದ ದೃಷ್ಟಿಯಿಂದ ಪ್ರಯೋಜನಕಾರಿಯೂ ಆದುದೆಂದು ಪರಿಗಣಿಸಲ್ಪಟ್ಟಿದೆ. ಈ ಮರದಿಂದ ಪ್ರತಿ ಶ್ರಾವಣ ಮಾಸದಲ್ಲಿ ಸಕ್ಕರೆ ಬೀಳುತ್ತಿದ್ದಿತೆಂಬ ಪ್ರತೀತಿ ಇದ್ದರೂ ವಾಸ್ತವದಲ್ಲಿ, ..ವರಲ್ಲಿ ಬಿಡುವ ಚಿಕ್ಕ ಹೂ ಸಕ್ಕರೆಯಂತೆ ಸಿಹಿಯಾಗಿರುತ್ತದೆ.

ರಾಜಧಾನಿಯನ್ನು ಮೊದಲಬಾರಿಗೆ ಹೆಂಜೇರುವಿನಿಂದ ಬಳ್ಳಾರಿ ಜಿಲ್ಲೆ ಕಂಪಿಲಿಗೆ ಬದಲಾಯಿಸಿದನೆಂಬ ಗಮನಾರ್ಹ ಸಂಗತಿಯನ್ನು ತಿಳಿಸುತ್ತದೆ. ಅಲ್ಲದೆ, ಬಳ್ಳಾರಿ ತಾಲ್ಲೂಕು ಕಲ್ಲುಕಂಬ ಗ್ರಾಮದ ಕಲ್ಲೇಶ್ವರ ದೇವಾಲಯದ ಬಳಿ ಇರುವ ಇದೇ ಅರಸನ ಕ್ರಿ.ಶ.೧೦೨೮ರ ಶಾಸನವು ಈ ಅರಸನು ವಿಪ್ರನಾರಾಯಣದ ನೆಲೆವೀಡಿನಲ್ಲಿ ನೆಲಸಿದ್ದನೆಂಬುದನ್ನೂ ಸಮರ್ಥಿಸುತ್ತದೆ (ಸೌ.ಇ.ಇ., IX-I., ಸಂಖ್ಯೆ-೯೨). ಹಳೇನೆಲ್ಲುಡಿಯು ಕಂಪಿಲಿಯ ಪಕ್ಕದಲ್ಲಿ ಇರುವುದರಿಂದಲೂ ಈ ಅರಸನು ಗುರುದೇವರ ಸಿದ್ಧೇಶ್ವರ ದೇವರಿಗೆ ಭೂದತ್ತಿ ಕಾರ್ಯವನ್ನು ನೆರವೇರಿಸಿರುವ ಸಾಧ್ಯತೆ ಹೆಚ್ಚುತ್ತದೆ. ಈತನ ಕಾಲವು ಯುದ್ಧಗಳಿಲ್ಲದ ಶಾಂತಿಕಾಲ ಆಗಿದ್ದುದ ರಿಂದಲೂ ಆಡಳಿತ ಸುಧಾರಣೆ, ದತ್ತಿ-ದಾನಗಳ ವಿತರಣೆಗಳ ಬಗೆಗೆ ಹೆಚ್ಚು ಗಮನ ಹರಿಸಲು ಅವಕಾಶವಿದ್ದಿತು.

ಹಳೇನೆಲ್ಲುಡಿಯ ಶಾಸನಪಾಠದಲ್ಲಿ ಉಕ್ತವಾಗಿರುವ 'ನೆರುಣ್ಣಗಲ್ಲು' ಎಂಬುದಲ್ಲಿಯ ಆದಿಪ್ರತ್ಯಯ 'ನೆರುಣ್ಣ' ಎಂಬುದು ಇಂದಿನ ಸ್ಥಳನಾಮ 'ನೆಲ್ಲುಡಿ'ಯ ಮೂಲರೂಪವೇ ಆಗಿದೆಯೆಂದು ಇದರಿಂದ ಸಮರ್ಥಿಸಬಹುದು. ನೆರುಣ್ಣವು ನೆಲುಂಡವಾಗಿ ಕ್ರಮೇಣ ಇಂದಿನ ನೆಲ್ಲುಡಿಯಾಗಿರುವುದು ಸಂಭವನೀಯ. 'ನೆರುಣ್ಣ' ಎಂಬುದಕ್ಕೆ 'ನೇರಂದ' ಎಂಬ ಸಮೀಪ ಶಬ್ದವಿದ್ದು, ಅದಕ್ಕೆ ನೇರವಾದ ರೂಪ, ನೆಟ್ಟಗಿನ ಆಕೃತಿ ಎಂಬ ಅರ್ಥಗಳೂ ಇವೆ. ಈ ಶಬ್ದವು ಇಲ್ಲಿಯ ಸ್ಥಳನಾಮಕ್ಕೆ ಕಾರಣವಾದ ಭೌತಿಕಸಾಕ್ಷ್ಯವೊಂದರತ್ತ ನೇರವಾಗಿ ಬೊಟ್ಟುಮಾಡುತ್ತಿದೆ ಯೆಂಬುದು ಸ್ಪಷ್ಟ.

ಶಾಸನೋಕ್ತ 'ನೆರುಣ್ಣಗಲ್ಲು' ಎಂಬುದು ಕಲ್ಲು, ನೆಟ್ಟಗಿನ ಕಲ್ಲು ಎಂದಾದರೆ, ಶಾಸನಕಲ್ಲು ಮತ್ತು ಸಿದ್ಧೇಶ್ವರ ದೇವನೆಲೆಯ ಸಮೀಪದಲ್ಲೆ ಈಗಿನ ಪರಿವೀಕ್ಷಣೆಯ ಸಂದರ್ಭದಲ್ಲಿ ನಿಲುವುಗಲ್ಲು (ಮೆನ್‌ಹಿರ್) ಈ ಆಂಶವನ್ನು ಸಮರ್ಥಿಸುತ್ತದೆನ್ನಬಹುದು. ಸ್ಥಳೀಯರಿಂದ ನಿಲುವುಗಲ್ಲು ಎಂತಲೇ ಕರೆಸಿಕೊಳ್ಳುವ ಈ ಸ್ಮಾರಕಶಿಲೆ, ಈಚಿನ ಮೂಲ ನಾಮದ ಬಗೆಗೆ ಮತ್ತು ಪ್ರಾಕ್ಚಾರಿತ್ರಿಕ ಕಾಲದಿಂದಲೇ ಈ ಪರಿಸರವು ಜನವಸತಿಯ ತಾಣವಾಗಿದ್ದಿತೆಂಬ ಬಗೆಗೆ ಹೊಸಬೆಳಕು ಚೆಲ್ಲುತ್ತದೆಂದು ತಿಳಿಯಬಹುದು. ನಿಲುವು ಗಲ್ಲುಗಲು (ಮೆನ್‌ಹಿರ್ಸ್) ಪ್ರಾಕ್ಚಾರಿತ್ರಿಕ ಸಮಾಧಿ ಎಡೆಗಳಲ್ಲಿ ಸ್ಥಾಪನೆಗೊಂಡ ನೆನಪಿನ ಶಿಲೆಗಳು.

ಈಗ ಶೋಧಗೊಂಡಿರುವ ನಿಲುವುಗಲ್ಲು ಕರಿಯ ಕಲ್ಲಿನದು. ಇದರ ಮೇಲ್ಮುಖವನ್ನು ಚೆನ್ನಾಗಿ ಉಜ್ಜಿ ನಯಗೊಳಿಸಲಾಗಿದೆ. ಈ ಪದ್ಧತಿ ಈ ಕಲ್ಲು ಆರಾಧನೆಗೆ



ಶಕ್ತಿಯ ವಿಗ್ರಹ : ಹಳೇನೆಲ್ಲುಡಿ

ಸಂಬಂಧಿಸಿದುದೆಂಬುದನ್ನು ಸೂಚಿಸುತ್ತದೆ. ಇದರ ಎತ್ತರ ೧.೪೨ ಮೀಟರ್; ಸರಾಸರಿ ಅಗಲ ೧ ಮೀಟರ್. ಇದರ ದಪ್ಪ ತಳದಲ್ಲಿ ೪೨ ಸೆಂ.ಮೀ. ತುದಿಯಲ್ಲಿ ೧೫ ಸೆಂ.ಮೀ. ಇದರ ಮೊಂಡಾದ ಶಿರೋಭಾಗವು ೩೬ ಸೆಂ.ಮೀ. ಅಗಲವಿದೆ. ಶಿರೋಭಾಗದಲ್ಲಿ ೨೧ ಸೆಂ. ಮೀ. ವ್ಯಾಸದ ಮಾನವನಿರ್ಮಿತ ಕುಳಿ (Cup-Mark) ಇದ್ದು, ಇದರಲ್ಲಿ ಒಂದರೊಳ ಗೊಂದರಂತೆ ತೋಡಿ ಮೂಡಿಸಲಾದ ಇನ್ನೂ ಒಂದೆರಡು ಕುಳಿಗಳಿರುವುದು ವಿಶೇಷ. ಇದೇ ರೀತಿಯಲ್ಲಿ ನಿಲುವುಗಲ್ಲಿನ ಮೇಲ್ಮೈಯಲ್ಲಿ ಬುಡದಿಂದ ತುದಿಯವರೆಗೆ ವಿವಿಧ ವ್ಯಾಸವುಳ್ಳ

ಸುಮಾರು ೨೦ ಕುಳಿಗಳನ್ನು ಮೂಡಿಸಲಾಗಿದೆ. [ಈ ಲೇಖಕನು ಚಿತ್ರದುರ್ಗ ಜಿಲ್ಲೆಯಲ್ಲಿ ಈತನಕ ಶೋಧಿಸಿರುವ ಸುಮಾರು ನಲವತ್ತು ಹೊಸ ನಿಲುವುಗಲ್ಲುಗಳಲ್ಲಿ ಹಲವಾರು ನಿಲುವುಗಲ್ಲುಗಳು ಕುಳಿಸಾಲುಗಳನ್ನು (Cup-marks) ಹೊಂದಿರುವುದನ್ನು ಗಮನಿಸಿರುವನು]. ಒಟ್ಟಿನಲ್ಲಿ, ಹಳೇನೆಲ್ಲುಡಿಯ ಈ ವಿಶಿಷ್ಟ ನಿಲುವುಗಲ್ಲು ನವಶಿಲಾಯುಗದ ಎಲ್ಲಾ ಪ್ರಮುಖ ಲಕ್ಷಣಗಳನ್ನು ಹೊಂದಿದೆ. ಪೂರ್ವ-ಪಶ್ಚಿಮವಾಗಿ ಮಲಗಿ ಧೂಳಿನಲ್ಲಿ ಸೇರಿಹೋಗಿದ್ದ ಈ ಸ್ಮಾರಕಶಿಲೆಯನ್ನು ಗ್ರಾಮಸ್ಥರ ಸಹಕಾರದಿಂದ ಎತ್ತಿನಿಲ್ಲಿಸಿ ಈಗ ಸುಸ್ಥಿತಿಯಲ್ಲಿ ಇರಿಸಲಾಗಿದೆ. ಈ ಗ್ರಾಮದ ಕುರುಬ ಜನಾಂಗದವರು ಇಂದಿಗೂ ಈ ಶಿಲೆಯನ್ನು ಪೂಜಿಸುತ್ತಾ ಬಂದಿರುವುದು, ಇದು ಮೊದಲಿನಿಂದಲೂ ಆಚರಣೆಗೆ ಸಂಬಂಧಿಸಿದ ಸ್ಮಾರಕಶಿಲೆಯಾಗಿ ಉಳಿದುಬಂದುದನ್ನು ಸಾರುತ್ತದೆನ್ನಬಹುದು.

ನೊಳಂಬ-ಪಲ್ಲವರ ಕಾಲದಲ್ಲಿ ಪ್ರಾಮುಖ್ಯತೆ ಪಡೆದ ಹಳೇನೆಲ್ಲುಡಿ ಪರಿಸರವು ಪ್ರಾಕ್ಚಾರಿತ್ರಿಕ ಮಾನವನ ಕಾಲದಿಂದಲೂ ಜಾಗೃತವಾಗಿದ್ದಿತೆಂಬುದು ಇವುಗಳಿಂದ ಸ್ಪಷ್ಟಪಡುವ ಸಂಗತಿ. ಗಮನಾರ್ಹ ಅಂಶವೆಂದರೆ, ನವಶಿಲಾಯಗ ಜನಜೀವನದ ಪ್ರಮುಖ ಕುರುಹುಗಳಲ್ಲಿ ಒಂದಾದ ಬೂದಿದಿಬ್ಬವನ್ನೂ (Ash mound) ನಾರೀಹಳ್ಳದ ದಂಡೆಯಲ್ಲಿ ಈಗ ಶೋಧಿಸಲಾಗಿದೆ. ಹಳೇನೆಲ್ಲುಡಿಯ ಉತ್ತರಕ್ಕೆ ಸುಮಾರು ೨ ಕಿ.ಮೀ. ದೂರದಲ್ಲಿ ನಾರೀಹಳ್ಳದ ಪೂರ್ವದ ದಂಡೆಯ ಮೇಲೆ ಶಾಂತಿನಗರ ಸುಬ್ಬಾರಾವ್ ಕ್ಯಾಂಪ್ ಪರಿಸರದಲ್ಲಿ ಈ ಬೂದಿದಿಬ್ಬವಿದೆ. ಇಲ್ಲಿರುವ ಹೊಲವನ್ನು 'ಬೂದಿದಿಬ್ಬದ ಹೊಲ' ಎನ್ನುವರು. ಈ ಎಡೆಯು ಪ್ರಸ್ತುತ ಅಧ್ಯಯನಕ್ಕೆ ಪ್ರಮುಖ ಸಾಕ್ಷ್ಯವೆನಿಸಿದೆ. ದೀರ್ಘಕಾಲದ ಅಗೆತಕ್ಕೆ ತುತ್ತಾಗಿ ಸಾಕಷ್ಟು ಸವೆದಿದ್ದರೂ ಸುಮಾರು ೧ ಮೀಟರ್ ದಪ್ಪ ಮತ್ತು ೯×೬ ಮೀಟರ್ ನಷ್ಟು ವಿಸ್ತಾರದಲ್ಲಿ ಈ ಬೂದಿದಿಬ್ಬವು ಇಂದಿಗೂ ಉಳಿದುಬಂದಿದೆ. ಬೂದಿಯು ಉಂಡೆರೂಪದಲ್ಲಿ ಇಲ್ಲಿ ರಾಶಿ ರಾಶಿಯಾಗಿ ದೊರೆಯುತ್ತದೆ. ಇಂತಹ ಬೂದಿದಿಬ್ಬಗಳು ನಾರೀಹಳ್ಳ ದಂಡೆಗುಂಟ ಅಲ್ಲಲ್ಲಿ ಕಂಡುಬರುತ್ತವೆ. ಉದಾಹರಣೆಗೆ, ಮುದ್ದಾಪುರ ಪರಿಸರದಲ್ಲಿ ವೆಂಕಟಕೊಂಡಪ್ಪ ಅವರ ಗದ್ದೆಯ ಬದಿಯಲ್ಲಿಯೂ ಬೂದಿದಿಬ್ಬವಿದೆ. ಇದರೊಡನೆ, ಸುಬ್ಬಾರಾವ್ ಕ್ಯಾಂಪಿನಲ್ಲಿ ನಾರೀಹಳ್ಳಕ್ಕೆ ಹೊಂದಿಕೊಂಡಂತೆ 'ಗರಸಿನ ಸೆಟ್' ಸಹಾ ಬೆಳಕಿಗೆ ಬಂದಿರುವುದು ಗಮನಾರ್ಹ.



ಧೂಳಲ್ಲಿ ಸೇರಿಹೋಗಿದ್ದ ನಿಲುವುಗಲ್ಲು : ಹಳೇನೆಲ್ಲುಡಿ

ಹಳೇನೆಲ್ಲುಡಿಯಲ್ಲಿ ಶೋಧಗೊಂಡ ನಿಲುವುಗಲ್ಲು ಮತ್ತು ಈ ಬೂದಿದಿಬ್ಬಗಳಿಗೆ ಇರಬಹುದಾದ ಸಂಬಂಧವು ಮೇಲ್ನೋಟಕ್ಕೇ ಸಮರ್ಥನೀಯವೆನ್ನಬಹುದು. ಒಟ್ಟಿನಲ್ಲಿ, ಹಳೇನೆಲ್ಲುಡಿಯು ಪ್ರಾಕ್ಚಾರಿತ್ರಿಕ ಕಾಲದಿಂದ ವಿಜಯನಗರೋತ್ತರ ಕಾಲದವರೆಗಿನ ಭೌತಿಕ ಸಾಕ್ಷ್ಯಗಳನ್ನು ಹೊಂದಿರುವುದು ಮತ್ತು ಈಗಲೂ ಜೀವಂತಿಕೆಯುಳ್ಳ ಗ್ರಾಮವಾಗಿ ಮುಂದುವರೆದಿರುವುದು ಈ ಅಧ್ಯಯನದಿಂದ ವ್ಯಕ್ತಪಡುವ ಸಂಗತಿ. ಹಾಗೆಯೇ, ಭೂತವು ಭವಿಷ್ಯತ್ತನ್ನು ನಿಯಂತ್ರಿಸುವ ಮತ್ತು ನಿರ್ದೇಶಿಸುವ ಪ್ರಕ್ರಿಯೆಗೆ ಹಳೇನೆಲ್ಲುಡಿಯ ಪ್ರಾಕ್ಚಾರಿತ್ರಿಕ-ಚಾರಿತ್ರಿಕ ಸಂಗತಿಗಳು, ಅವಶೇಷಗಳು ಮುಖ್ಯ ಉದಾಹರಣೆಯಂತಿರುವುದು ಸ್ಪಷ್ಟ. ಗತಕಾಲದ ಸಂಗತಿಗಳು ವರ್ತಮಾನವನ್ನು ಪ್ರಭಾವಿಸುತ್ತಿರುವುದನ್ನು ಭಾರತದ ಸಹಸ್ರಾರು ಹಳ್ಳಿಗಳ ಸಂದರ್ಭವನ್ನು ಗ್ರಹಿಸಿ ಇಲ್ಲಿಯೂ ಗುರುತಿಸಬಹುದು.

ನಿವೇದನೆ:- ಹಳೇನೆಲ್ಲುಡಿ ಗ್ರಾಮ ಪರಿಸರದ ಪರಿವೀಕ್ಷಣೆ ಮತ್ತು ಸಂಶೋಧನ ಕಾರ್ಯದಲ್ಲಿ ಪ್ರೀತಿಪೂರ್ವಕವಾಗಿ ಸಹಕರಿಸಿದವರು ಬಳ್ಳಾರಿಯ ಸ್ವಾತಂತ್ರ್ಯ ಯೋಧರಾದ ಬಿ.ಎಂ.ಮರುಳಸಿದ್ದಯ್ಯ, ರಾಮಸಾಗರದ ಎಸ್.ಎಂ.ಚಂದ್ರಶೇಖರ್, ಶಾಂತಿನಗರದ ಕೆ.ಸುಬ್ಬಾರಾವ್, ಹಳೇನೆಲ್ಲುಡಿಯ ಪೋಸ್ಟ್‌ಮಾಸ್ಟರ್ ಅರಳೇಹಳ್ಳಿ ಸಿದ್ದಪ್ಪ, ಸೂಗೂರು ಕಾಳಪ್ಪ, ಗೌಡರ ಶಾಂತಮ್ಮ ಹಾಗೂ ಗ್ರಾಮಸ್ಥರು. ಕನ್ನಡ ವಿಶ್ವವಿದ್ಯಾಲಯದ ಅಧ್ಯಾಪಕ ಡಾ॥ ಸಿ.ಮಹದೇವ ಅವರು ಜತೆಗಿದ್ದು ನೆರವಾಗಿರುತ್ತಾರೆ. ಇವರೆಲ್ಲರಿಗೂ ನಾನು ಆಭಾರಿಯಾಗಿದ್ದೇನೆ.

○

ಡಿ. ಸ್ಮಿತಾರೆಡ್ಡಿ *

# ಆನೇಕಲ್ ತಾಲ್ಲೂಕಿನ ಮೇಲೂರು ದಿಣ್ಣೆ ಹಾಗೂ ಕಾಳನಾಯಕನಹಳ್ಳಿಯ ಶಿಲಾಯುಗದ ನಿವೇಶನಗಳು

ಬೆಂಗಳೂರು ಜಿಲ್ಲೆಯ ಆನೇಕಲ್ ತಾಲ್ಲೂಕಿಗೆ ಸೇರಿದ ಮೇಲೂರು ದಿಣ್ಣೆ ಹಾಗೂ ಕಾಳನಾಯಕನಹಳ್ಳಿ ಎಂಬ ಕುಗ್ರಾಮದಲ್ಲಿನ ಶಿಲಾಯುಗದ ಅವಶೇಷಗಳ ಬಗ್ಗೆ ಪ್ರಸ್ತುತ ಈ ಲೇಖನವನ್ನು ರಚಿಸಿದ್ದೇನೆ.

ಮೇಲೂರು ದಿಣ್ಣೆ ಎಂದು ಕರೆಯುವ ಸ್ಥಳವು ಆನೇಕಲ್‌ನಿಂದ ೮ ಕಿ. ಮೀ. ದೂರದಲ್ಲಿದೆ. ಈ ಸ್ಥಳದ ವ್ಯಾಪ್ತಿಯಲ್ಲಿ ಬೃಹತ್ ಶಿಲಾಯುಗಕ್ಕೆ ಸೇರಿದ ಸಮಾಧಿಗಳ ದೊಡ್ಡದೊಂದು ನಿವೇಶನವಿದೆ. ಇಲ್ಲಿ ಶಿಲಾವೃತ್ತಗಳುಳ್ಳ ಸು. ೯೫ ಸಮಾಧಿಗಳಿದ್ದು, ಇವುಗಳಲ್ಲಿ ಸು. ೭೫ ಸಮಾಧಿಗಳು ಸಂಪೂರ್ಣ ಹಾಳಾಗಿವೆ. ಇವುಗಳನ್ನು ಅಗೆದು ಆ ಭೂಮಿಯನ್ನು ವ್ಯವಸಾಯಕ್ಕೆ ಬಳಸಿಕೊಳ್ಳಲಾಗಿದೆ. ಹಾಳಾಗದಂತೆ ಉಳಿದಿರುವ ಸಮಾಧಿಗಳ ಸುತ್ತಲೂ ಏಳು ಮೀಟರ್ ವ್ಯಾಸವಿರುವ ಶಿಲಾವೃತ್ತಗಳನ್ನು ಹೊಂದಿವೆ. ಇಲ್ಲಿ ಅಗೆಯಲ್ಪಟ್ಟ ಸಮಾಧಿಗಳನ್ನು ಪರಿಶೀಲಿಸಿದಾಗ ಕಪ್ಪು ಹಾಗೂ ಕೆಂಪಿನ ಮಡಿಕೆ-ಕುಡಿಕೆ ಚೂರುಗಳು ದೊರೆತವು. ಹಾಗೂ ಮೂಳೆ ಚೂರುಗಳೂ ದೊರೆತಿವೆ.[1]

ಮೇಲೂರು ದಿಣ್ಣೆಯ ದಕ್ಷಿಣಕ್ಕೆ ಒಂದು ಕಿ.ಮೀ. ದೂರದಲ್ಲಿರುವ ಕಾಳನಾಯಕನಹಳ್ಳಿಯು ಆನೇಕಲ್‌ನಿಂದ ೬ ಕಿ.ಮೀ. ದೂರದಲ್ಲಿದೆ. ಇದು ಬೃಹತ್ ಶಿಲಾಯುಗದ ಮಾನವನ ನೆಲೆಯಾಗಿದ್ದುದಕ್ಕೆ ಸಾಕ್ಷಿಯಾಗಿ ಇಲ್ಲಿ ೨೪ ಸಮಾಧಿಗಳು ಪತ್ತೆಯಾಗಿವೆ. ಇವುಗಳಲ್ಲಿ ೧೪ ಸಮಾಧಿಗಳು ವ್ಯವಸಾಯಗಾರರ ಧಾಳಿಗೆ ಗುರಿಯಾಗಿ ಸಂಪೂರ್ಣ ಹಾಳಾಗಿವೆ. ಸುರಕ್ಷಿತವಾಗಿರುವ ಸಮಾಧಿಗಳ ಸುತ್ತಲೂ ಕಾಡುಗಲ್ಲು (ಉರುಟು ಕಲ್ಲು)ಗಳಿಂದ ನಿರ್ಮಿಸಿದ ವೃತ್ತಗಳಿವೆ.[2]

ಇಲ್ಲಿ ಕ್ಷೇತ್ರಕಾರ್ಯ ಕೈಗೊಂಡು ಅಗೆಯಲ್ಪಟ್ಟಿರುವ ಬೃಹತ್ ಶಿಲಾಯುಗ ಸಮಾಧಿಗಳನ್ನು ಸೂಕ್ಷ್ಮವಾಗಿ ಅವಲೋಕಿಸಿದಾಗ ಹಲವಾರು ಮಡಿಕೆ ಕುಡಿಕೆ ಚೂರುಗಳು



ಶಿಲಾಯುಗದ ಮಣ್ಣಿನ ಗೊಂಬೆಗಳು

ಮತ್ತು ಎರಡು ಮಣ್ಣಿನ ಗೊಂಬೆಗಳು ದೊರೆತವು. ಇಲ್ಲಿಯ ಒಂದು ಸಣ್ಣ ಬಂಡೆಯ ಮೇಲೆ ನಾಲ್ಕು ಅಂಗುಲ ಎತ್ತರದ ಜಿಂಕೆಯ ರೇಖಾಚಿತ್ರವೂ ದೊರೆತಿದೆ. ಇಲ್ಲಿ ಭೂಮಿಯನ್ನು ಉಳುವಾಗ ದೊರೆತ ಕಬ್ಬಿಣದ ಕೊಡಲಿಯೊಂದನ್ನು ಅಲ್ಲಿನ

* ಎಂ. ಎ. ವಿದ್ಯಾರ್ಥಿನಿ, ಕನ್ನಡ ಅಧ್ಯಯನ ಕೇಂದ್ರ, ಬೆಂಗಳೂರು-೫೬೦ ೦೫೬

1 ಇಲ್ಲಿಯ ಕ್ಷೇತ್ರಕಾರ್ಯದಲ್ಲಿ ನನ್ನೊಡನೆ ಬಂದು ಸಹಕರಿಸಿದ ಸನತ್‌ಕುಮಾರ್ ಡಿ, ಹಾಗೂ ಗೆಳತಿ ಸೆಲ್ವಿಗೆ ಕೃತಜ್ಞತೆಗಳನ್ನರ್ಪಿಸುತ್ತೇನೆ.

2 ಇಲ್ಲಿಯ ಕ್ಷೇತ್ರಕಾರ್ಯದಲ್ಲಿ ಸಹಕರಿಸಿದ ಪುಟಾಣಿಗಳಾದ ಎನ್. ಚಿತ್ರ, ಎನ್. ಶುಚೀಂದ್ರ, ವೀಣಾರಿಗೆ ನಾನು ಆಭಾರಿಯಾಗಿದ್ದೇನೆ.

3 ಕಬ್ಬಿಣದ ಕೊಡಲಿಯನ್ನು ನನಗೆ ಕೊಟ್ಟು ಉಪಕರಿಸಿದ ವನಕನಹಳ್ಳಿ ಮುನಿಯಪ್ಪ ಮತ್ತು ಅವರ ಮಗ ಕುಮಾರ ಅವರಿಗೆ ಕೃತಜ್ಞಳಾಗಿದ್ದೇನೆ.

ನಿವಾಸಿಗಳು ನೀಡಿರುತ್ತಾರೆ.[3] ಇಲ್ಲಿ ದೊರೆತ ಮಡಕೆಯ ಚೂರುಗಳು ಕಪ್ಪು ಹಾಗೂ ಕೆಂಪು ಬಣ್ಣದಿಂದ ಕೂಡಿವೆ. ಕೊಡಲಿಯು ೨೩ ಸೆಂ.ಮೀ. `ಉದ್ದ ಹಾಗೂ ೧೦ ಸೆಂ.ಮೀ. ಅಗಲವಾಗಿದೆ. ಈ ಸಮಾಧಿಗಳ ಕಾಲವನ್ನು ಕಬ್ಬಿಣದ ಯುಗಕ್ಕೆ ಸೇರಿಸಬಹುದಾಗಿದೆ.

## ಗೊಂಬೆಗಳು

ಇಲ್ಲಿ ದೊರೆತ ಗೊಂಬೆಗಳು ಜೇಡಿಮಣ್ಣಿನಿಂದ ಮಾಡಲ್ಪಟ್ಟಿದ್ದು, ಒಂದು ಹೆಣ್ಣು ಹಾಗೂ ಮತ್ತೊಂದು ಗಂಡಿನದಾಗಿದೆ. ಹೆಣ್ಣು ಗೊಂಬೆಯು ೬.೪ ಸೆಂ.ಮೀ. ಎತ್ತರ ಹಾಗೂ ೭.೫ ಸೆಂ.ಮೀ. ಅಗಲವಾಗಿದೆ. ಈ ಗೊಂಬೆಯ ತಲೆ ಹಾಗೂ ಕೈಕಾಲುಗಳು ತುಂಡಾಗಿವೆ. ಎರಡೂ ತೋಳುಗಳನ್ನು ಅಗಲಿಸಿ ಹಿಡಿದಂತಿರುವ, ಈ ಗೊಂಬೆಯ ಮುಂಗೈವರೆಗಿನ ಭಾಗ ಮಾತ್ರ ಇದ್ದು, ಎರಡೂ ಹಸ್ತಗಳು ಮುರಿದು ಹೋಗಿವೆ. ಕಾಲುಗಳಲ್ಲಿ ಎಡತೊಡೆಯ ಭಾಗ ಮಾತ್ರವಿದೆ. ಬಲಗಾಲು ಸೊಂಟದ ಭಾಗದಿಂದಲೇ ಮುರಿದಿದೆ. ಆದ್ದರಿಂದ ಗೊಂಬೆಯು ಕುಳಿತ ಭಂಗಿಯಲ್ಲಿದ್ದಿತೋ ನಿಂತ ಭಂಗಿಯಲ್ಲಿದ್ದಿತೋ ಎಂಬುದನ್ನು ಗುರುತಿಸುವುದು ಅಸಾಧ್ಯ ವಾಗಿದೆ. ಗೊಂಬೆಯು ಸಂಪೂರ್ಣ ನಗ್ನವಾಗಿದ್ದು ಯಾವುದೇ ರೀತಿಯ ವಸ್ತ್ರಗಳನ್ನು ಧರಿಸಿಲ್ಲ. ಆದರೆ ಸ್ತನಗಳ ಮೇಲ್ಭಾಗದಲ್ಲಿ ಕೊರಳಲ್ಲಿ 'ನೆಕ್ಲೆಸ್' ರೀತಿಯ ಒಡವೆಯೊಂದನ್ನು ಧರಿಸಿರುವಂತೆ ರಚಿಸಿದೆ. ತೆಳುವಾದ ಹೊಟ್ಟೆ, ಸಿಂಹಕಟಿ, ಹಾಗೂ ಪ್ರಮಾಣಬದ್ಧವಾದ ಅಂಗಸೌಷ್ಠವದಿಂದ ಕೂಡಿರುವ ಈ ಸ್ತ್ರೀ ಗೊಂಬೆಯ ಹೊಕ್ಕಳು ಹಾಗೂ ಕೊರಳಲ್ಲಿರುವ ಒಡವೆ ಸ್ಪಷ್ಟವಾಗಿ ಕಾಣುವಂತೆ ಶಿಲ್ಪಿಯು ನಿರ್ಮಿಸಿರುತ್ತಾನೆ.

ಮತ್ತೊಂದು ಗೊಂಬೆಯು ಪುರುಷನದಾಗಿದ್ದು ೭ ಸೆಂ.ಮೀ. ಉದ್ದ ಹಾಗೂ ೫.೪ ಸೆಂ.ಮೀ. ಅಗಲವಾಗಿದೆ. ಇದೂ ಸಹ ರುಂಡ ಹಾಗೂ ಕೈಕಾಲುಗಳನ್ನು ಕಳೆದುಕೊಂಡಿದೆ. ಬಲಗೈ ಮೊಣಕೈವರೆಗೆ ಮಾತ್ರವಿದ್ದು, ಎಡಗೈ ಹಾಗೂ ಎರಡೂ ಕಾಲುಗಳು ಸಂಪೂರ್ಣ ಹಾಳಾಗಿವೆ. ಗೊಂಬೆಯ ದೇಹದ ಮೇಲೆ ಯಾವುದೇ ವಸ್ತ್ರಗಳಿಲ್ಲದಿದ್ದರೂ, ಕೊರಳಲ್ಲಿ ಒಂದು ಆಭರಣ ಧರಿಸಿರುವಂತೆ ಕಂಡುಬರುತ್ತದೆ. ಇದೂ



ಕಾಳನಾಯಕನಹಳ್ಳಿಯಲ್ಲಿದೊರೆತ ಮಡಿಕೆಯ ಚೂರು

ಸಹ ಅಸಮಗ್ರವಾಗಿ ಲಭಿಸಿರುವುದರಿಂದ ಯಾವ ಭಂಗಿಯಲ್ಲಿದೆ ಎಂದು ಹೇಳುವದು ಅಸಾಧ್ಯ. ಈ ಗೊಂಬೆಗಳನ್ನು ಜೇಡಿಮಣ್ಣಿನಿಂದ ನಿರ್ಮಿಸಿ ನಂತರ ಸುಟ್ಟಿರುವುದರಿಂದ ತುಂಬಾ ಗಟ್ಟಿಯಾಗಿವೆ.

ಬೃಹತ್ ಶಿಲಾಯುಗ ಸಮಾಧಿಗಳಲ್ಲಿ ಈ ರೀತಿಯ ಟೆರಾಕೋಟಾ ಮಣ್ಣಿನ ಗೊಂಬೆಗಳು ದೊರೆತಿರುವ ಹಲವಾರು ನಿದರ್ಶನಗಳು ಇವೆ :

ಘಟಪ್ರಭಾ ನದಿಯ ದಂಡೆಯ ಮೇಲಿನ ಹೆರಕಲ್ ಗ್ರಾಮದ ಶಿಲಾಯುಗದ ನಿವೇಶನದಲ್ಲಿ ಸುಟ್ಟ ಮಣ್ಣಿನ ಗೊಂಬೆಗಳು ಪತ್ತೆಯಾಗಿವೆ. ಬೆಳಗಾವಿ ಹತ್ತಿರದ ವಡಗಾಂವ ಮಾಧವಪುರದಲ್ಲಿ ಸಹ ಸುಟ್ಟ ಮಣ್ಣಿನ ಗೊಂಬೆಗಳು ಪತ್ತೆಯಾಗಿವೆ; ಧಾರವಾಡ ಜಿಲ್ಲೆಯ ಹಿರೇಕೆರೂರ ತಾಲ್ಲೂಕಿನ ಭೈರವನ ಪಾದ ಎಂಬಲ್ಲಿ ಸುಟ್ಟ ಮಣ್ಣಿನ ಗೊಂಬೆಗಳು ದೊರೆತಿವೆ;[4] ಅದೇ ತಾಲ್ಲೂಕಿನ ಸಿರಗುಂಬಿ ಹೊಸಳ್ಳಿ ಎಂಬ ಗ್ರಾಮದಲ್ಲಿ ಸುಟ್ಟ ಮಣ್ಣಿನ ಹೆಣ್ಣು ಗೊಂಬೆ ದೊರೆತಿದೆ.[5] ರಾಯಚೂರು ಜಿಲ್ಲೆಯ ಪಿಕ್ಲಿಹಾಳ್ ಮತ್ತು ತೆಕ್ಕಲಕೋಟೆಯ ನಿವೇಶನಗಳಲ್ಲಿಯೂ ಸಹ ಕೆಲವು ಮಣ್ಣಿನ ಗೊಂಬೆಗಳು ದೊರೆತಿರುವೆ;[6] ಬಲೂಚಿಸ್ತಾನದ ಕಿಲಿಘುಲ್ ಮೊಹಮ್ಮದ್ ಎಂಬ ಪ್ರದೇಶದ ಬಳಿಯಲ್ಲಿರುವ 'ದಾಂಬ್ ಸದಾತ್'ನಲ್ಲಿ

---

4 ಡಾ॥ ಆರ್. ಎಸ್. ಪಂಚಮುಖಿ., ಕರ್ನಾಟಕದ ಇತಿಹಾಸ, ಪುಟ ೫೬

5 ಅದೇ ಪುಟ ೫೭

6 ಡಾ॥ ಬಿ. ಮುದ್ದಾಚಾರಿ., ದಕ್ಷಿಣ ಭಾರತದ ಇತಿಹಾಸ, ಪುಟ ೫೭



ಶಿಲಾಯುಗದ ಕಬ್ಬಿಣದ ಕೊಡಲಿ

ದೊರೆತ ಗಡಸು ಜೇಡಿಮಣ್ಣಿನ ಪ್ರತಿಮೆಗಳು ಕ್ರಿ.ಪೂ. ೨೩೦೦ ವರ್ಷಗಳಷ್ಟು ಹಳೆಯದೆಂದು ವಿದ್ವಾಂಸರು ಗುರುತಿಸಿದ್ದಾರೆ.[7] ಹಾಗೆಯೇ ಕೊಲ್ಹಾಪುರದ ಬಳಿಯ ಬ್ರಹ್ಮಪುರಿ ಎಂಬ ಗ್ರಾಮದ ಬಳಿ ಶಾತವಾಹನರ ಕಾಲದ ಮಣ್ಣಿನ ಗೊಂಬೆಗಳು ಪತ್ತೆಯಾಗಿವೆ. ಸನ್ನತಿಯಲ್ಲೂ ಇದೇ ಕಾಲದ ಮಣ್ಣಿನ ಗೊಂಬೆಗಳು ಪತ್ತೆಯಾದ ವರದಿಯಾಗಿದೆ.

ಬೆಂಗಳೂರು ಜಿಲ್ಲೆಯಲ್ಲಿ ಬೃಹತ್‌ಶಿಲಾಯುಗದ ನಿವೇಶನಗಳು ಪತ್ತೆಯಾಗಿದ್ದರೂ ಸಹ ಒಂದರಲ್ಲೂ ಮಣ್ಣಿನ ಗೊಂಬೆಗಳು ಪತ್ತೆಯಾದ ವರದಿಯಾಗಿಲ್ಲದಿರುವದು ಗಮನಾರ್ಹವಾದ ಅಂಶ. ಆದ್ದರಿಂದ ಪ್ರಸ್ತುತ ಕಾಳನಾಯಕನ ಹಳ್ಳಿಯಲ್ಲಿ ಪತ್ತೆಯಾಗಿರುವ ಮಣ್ಣಿನ ಗೊಂಬೆಗಳು ಪ್ರಾಮುಖ್ಯತೆ ಪಡೆದುಕೊಂಡಿವೆ. ಕಾಳನಾಯಕನಹಳ್ಳಿಯ ಬೃಹತ್ ಶಿಲಾಯುಗ ನಿವೇಶನಗಳಲ್ಲಿ ಉತ್ಖನನ ನಡೆಸಿದರೆ ಅಮೂಲ್ಯವಾದ ವಿಷಯಗಳು ಹೊರ ಬರಬಹುದಾದ ಸಾಧ್ಯತೆಗಳಿವೆಯೆಂದು ಹೇಳಬಹುದು.

---

7 (ಮೂಲ) ಕ. ಅಂತೋನವ ಜಿ. ಬೊಂಗಾರ್ಡ್-ಲೆವಿನ್, ಅನು : ಕೆ. ಎಲ್. ಗೋಪಾಲಕೃಷ್ಣರಾವ್., ಭಾರತದ ಇತಿಹಾಸ, ಪುಟ ೧೪

ಡಾ॥ ಎಸ್.ಎಸ್. ರಂಗರಾಜು *

# ಬಿಳಿಕೆರೆಯ ಹತ್ತಿರ ಬೃಹತ್ ಶಿಲಾಯುಗದ ಸಂಸ್ಕೃತಿ ಪತ್ತೆ

ಬಿಳಿಕೆರೆಯಲ್ಲಿ ಇರುವ ಬೈಪಾಸ್ ರಸ್ತೆಯಿಂದ ೫ ಕಿ.ಮೀ. ದೂರದಲ್ಲಿ ಆಯರಹಳ್ಳಿ ಎಂಬ ಒಂದು ಸಣ್ಣ ಗ್ರಾಮವಿದೆ. ಗ್ರಾಮದ ಹೊರವಲಯದಲ್ಲಿ ನೂರಕ್ಕೂ ಹೆಚ್ಚು ಬೃಹತ್ ಶಿಲಾಯುಗದ ಸಮಾಧಿಗಳು ಕಂಡು ಬರುತ್ತವೆ. ಆಯರಹಳ್ಳಿಯು ಮೈಸೂರಿನಿಂದ ಸರಿಯಾಗಿ ೨೮ ಕಿ.ಮೀ.ಗಳ ದೂರದಲ್ಲಿದೆ. ಇಲ್ಲಿಯವರೆಗೂ ಪತ್ತೆ ಯಾಗಿರುವ ಶಿಲಾಯುಗ ನೆಲೆಗಳಲೆಲ್ಲ ಇದು ಮೈಸೂರು ನಗರಕ್ಕೆ ಅತ್ಯಂತ ಸಮೀಪವಾಗಿರುವುದೆಂದು ಹೇಳಬಹುದು.

ಇಲ್ಲಿ ಇರುವ ನೂರಕ್ಕೂ ಹೆಚ್ಚು ಸಮಾಧಿಗಳಲ್ಲಿ ಗುಂಡಿಯ ಸುತ್ತ ವೃತ್ತಾಕಾರವಾಗಿ ಕಲ್ಲುಗಳನ್ನು ಜೋಡಿಸಿರುವ ಸಮಾಧಿಗಳೇ ಹೆಚ್ಚು (Pit-circles). ಹೆಚ್ಚಿನ ಸಂಖ್ಯೆಯಲ್ಲಿರುವ ಇವು ಅನೇಕ ಅಳತೆಗಳ ವೃತ್ತಗಳನ್ನು ಹೊಂದಿವೆ. ಇವುಗಳನ್ನು ಬಿಟ್ಟರೆ ಕೇರ್ನ್ ವೃತ್ತಗಳು ಸಹ ಹೆಚ್ಚಿನ ಸಂಖ್ಯೆಯಲ್ಲಿವೆ. ಇವುಗಳಲ್ಲಿ ಎರಡು ವಿಧಾನವಿದೆ. ಒಂದು ಸಮಾಧಿಯ ಮೇಲೆ ಮಧ್ಯೆ ಗಾತ್ರದ ಬೆಣಚು ಕಲ್ಲುಗಳನ್ನು ಹಾಕಿ ಅದನ್ನು ವೃತ್ತಾಕಾರವಾಗಿ ಮಾತ್ರ ಹರಡಿರುವುದು ಒಂದು ವಿಧಾನವಾದರೆ ಮತ್ತೊಂದು ವಿಧಾನದಲ್ಲಿ ಹೀಗೆ ಹರಡಿದ ಬೆಣಚು ಕಲ್ಲುಗಳ ಸುತ್ತಲೂ ದಪ್ಪನಾದ ಉಂಡೆಗಲ್ಲುಗಳನ್ನು ವೃತ್ತಾಕಾರವಾಗಿ ಜೋಡಿಸಿರುವುದು. ಇವುಗಳಲ್ಲದೆ ಸಂಪೂರ್ಣವಾಗಿ ನಾಶವಾಗಿರುವ ಕೆಲವು (Cist) ಸಿಸ್ಟ್ ಸಮಾಧಿಗಳು ಕಂಡುಬರುತ್ತವೆ.

ಮತ್ತೊಂದು ಪ್ರಮುಖ ಅಂಶವೆಂದರೆ ಕೆಲವು ಸಮಾಧಿಗಳ ಸುತ್ತಲೂ ಜೋಡಿಸಿರುವ ಉಂಡೆಗಲ್ಲುಗಳನ್ನು ಸೇರಿಸಿಕೊಂಡು ಮತ್ತೊಂದು ವೃತ್ತವನ್ನೂ, ಹಾಗೆ, ಅವರೆಡಕ್ಕೂ ಹೊಂದಿಕೊಂಡಿರುವಂತೆ ಉಂಡೆಗಲ್ಲುಗಳನ್ನು ಸೇರಿಸಿಕೊಂಡು ಪಕ್ಕದಲ್ಲೇ ಇನ್ನೂ ಒಂದು ವೃತ್ತವನ್ನು ರಚಿಸಿರುವುದನ್ನು ಕಾಣಬಹುದು. ಇದರಲ್ಲಿ ಗಮನಿಸಬೇಕಾದ ಅಂಶವೆಂದರೆ ಮುಖ್ಯ ವೃತ್ತವು ದೊಡ್ಡದಾಗಿದ್ದು ಅದಕ್ಕೆ ಹೊಂದಿಕೊಂಡಿರುವ ಉಳಿದ ವೃತ್ತಗಳು ಚಿಕ್ಕದಾಗಿರುವುದನ್ನು ನೋಡಿದರೆ ಬಹುಶಃ ರಕ್ತಸಂಬಂಧಿಗಳನ್ನು ಹೀಗೆ ಸಮಾಧಿ ಮಾಡಿರಬಹುದು. ಉತ್ಖನನವನ್ನು ಮಾಡಿ ಸಿಗುವ ಮೂಳೆಗಳನ್ನು ವೈಜ್ಞಾನಿಕ ರೀತಿಗಳಲ್ಲಿ ಅಧ್ಯಯನ ಮಾಡಿದರೆ ಇದಕ್ಕೆ ಉತ್ತರ ಸಿಗಬಹುದು.

ಆಯರಹಳ್ಳಿಯ ಹೊರ ಭಾಗದಲ್ಲಿ ಅಂದರೆ ಹೊಲ, ಗದ್ದೆಗಳಲ್ಲಿ ಕೆಲವು ಕಡೆ ಬೃಹತ್ ಶಿಲಾಯುಗದ ಮಡಿಕೆಯ ಚೂರುಗಳು ಕಂಡು ಬರುತ್ತವೆ. ಕೆಂಪು, ಕಪ್ಪು ಹಾಗೂ ಕೆಂಪು ಮತ್ತು ಕಪ್ಪು ಬಣ್ಣಗಳ ಮಿಶ್ರಿತ ಮಡಿಕೆ ಚೂರುಗಳು ಕಂಡು ಬರುತ್ತದೆ. ಆದರೆ ಯಾವುದೇ ಕಬ್ಬಿಣದ ಆಯುಧಗಳು ಸಂಶೋಧನೆಯಲ್ಲಿ ಕಂಡು ಬರಲಿಲ್ಲ. ಇನ್ನೊಂದು ಮುಖ್ಯ ಅಂಶವೆಂದರೆ ಕಬ್ಬಿಣವನ್ನು ಅದಿರಿನಿಂದ ಬೇರ್ಪಡಿಸಿದ ಮೇಲೆ ಉಳಿಯುವ ಕಿಟ್ಟ ಅಲ್ಲಲ್ಲಿ ಕಂಡುಬರುವುದರಿಂದ ಕಬ್ಬಿಣವನ್ನು ಬೇರ್ಪಡಿಸುವ ಕಾಯಕ ಇಲ್ಲೇ ನಡೆದಿರಬಹುದು. ಇದರ ಬಗ್ಗೆ ಹೆಚ್ಚಿನ ಮಾಹಿತಿ ಸಂಗ್ರಹಿಸಬೇಕಾದರೆ ಇಲ್ಲಿ ಉತ್ಖನನ ನಡೆಯಬೇಕಾಗಿದೆ. ಹಾಗೇನಾದರೂ ಇಲ್ಲಿ ಕಬ್ಬಿಣವನ್ನು ಬೇರ್ಪಡಿಸುವ ಕಾರ್ಯ ನಡೆದಿದ್ದರೆ ಬೃಹತ್ ಶಿಲಾಯುಗದ ಜನರ ಸಾಂಸ್ಕೃತಿಕ ಜೀವನದ ಬಗ್ಗೆ ಆಯರಹಳ್ಳಿಯ ನೆಲೆಗಳು ಹೆಚ್ಚಿನ ಮಾಹಿತಿ ನೀಡುವುದರಲ್ಲಿ ತುಂಬಾ ಸಹಾಯಕ ವಾಗುತ್ತವೆ.

* ಸಂಶೋಧನಾ ಸಹಾಯಕ, ಪ್ರಾಚೀನ ಇತಿಹಾಸ ಮತ್ತುಪುರಾತತ್ವ ಇಲಾಖೆ, ಮಾನಸ ಗಂಗೋತ್ರಿ, ಮೈಸೂರು-೫೭೦೦೦೬



ಬೃಹತ್ ಶಿಲಾಯುಗದ ಸಮಾಧಿ ಆಯರಹಳ್ಳಿ

ನಮ್ಮ ದುರಾದೃಷ್ಟಕ್ಕೆ ಇಲ್ಲಿಯ ಹಳ್ಳಿ ಜನಗಳು ಈ ಜಾಗವನ್ನು ಆಕ್ರಮಿಸಿಕೊಂಡು ವೃತ್ತಗಳನ್ನು ಕೆಡವಿ ಬೇಸಾಯ ಕಾರ್ಯ ಮಾಡುತ್ತಿದ್ದಾರೆ. ಈ ಜನಗಳಿಗೆ ಇದರ ಮಹತ್ವವನ್ನು ತಿಳಿಸಿದರೂ ಏನು ಪ್ರಯೋಜನವಾಗುತ್ತಿಲ್ಲ. ಕೆಲವರು ವೃತ್ತಗಳನ್ನು ಹಾಗೆ ಉಳಿಸಿಕೊಂಡು ಬೇಸಾಯ ಮಾಡುತ್ತಿದ್ದರೆ ಮತ್ತೆ ಕೆಲವರು ವೃತ್ತಗಳನ್ನು ಕಿತ್ತು ಬದಿಗಿಟ್ಟು ಬೇಸಾಯ ಮಾಡುತ್ತಿರುವುದರಿಂದ ಮುಂದೆ ಉತ್ಖನನ ಮಾಡುವವರಿಗೆ ಬಹಳ ತೊಂದರೆಯಾಗುವುದರಲ್ಲಿ ಸಂದೇಹವೇ ಇಲ್ಲ. ಇರುವ ವೃತ್ತಗಳನ್ನು ಉಳಿಸಿಕೊಂಡು ಅಥವಾ ಇವು ಸಂಪೂರ್ಣವಾಗಿ ನಾಶವಾಗುವುದಕ್ಕಿಂತ ಮೊದಲು ಉತ್ಖನನ ನಡೆಯ ಬೇಕಾಗಿದೆ. ಈ ಉತ್ಖನನದಿಂದ ಮೈಸೂರು ಜಿಲ್ಲೆಯಲ್ಲಿರುವ ಬೃಹತ್ ಶಿಲಾ ಯುಗದ ಸಮಾಧಿಗಳ ಮೇಲೆ ಉತ್ತಮ ಮಾಹಿತಿ ದೊರೆಯುತ್ತದೆ. ಅಷ್ಟೆ ಅಲ್ಲ ಈ ಜಿಲ್ಲೆಯಲ್ಲಿ ಇತರ ಕಡೆಗಳಲ್ಲಿ ನಡೆದಿರುವ ಉತ್ಖನನದ ಅವಶೇಷ ಗಳೊಂದಿಗೆ ಹೋಲಿಸಿ ನೋಡಿ ಒಂದು ಒಳ್ಳೆಯ ಫಲಿತಾಂಶವನ್ನು ಪಡೆದುಕೊಳ್ಳಬಹುದು. ದೊರೆಯುವ ಅವಶೇಷಗಳನ್ನು ಬಾಬ ಅಟೋಮಿಕ್ ರಿಸರ್ಚ್ ಸೆಂಟರ್‌ನವರ ಸಹಾಯದಿಂದ ಕಾಲ ನಿರ್ಣಯ ಮಾಡಿಸಿ ಬೃಹತ್ ಶಿಲಾಯುಗದ ಬಗ್ಗೆ ಉತ್ತಮ ಮಾಹಿತಿ ಒದಗಿಸಿ ಕೊಳ್ಳಬಹುದು. ಈ ರೀತಿಯ ವೈಜ್ಞಾನಿಕ ಹಾಗೂ ತಾಂತ್ರಿಕತೆಯ ಬಳಕೆಯಿಂದ ಪ್ರಾಚೀನ ನೆಲೆಗಳ ನಿಖರವಾದ ಅಧ್ಯಯನ ನಡೆಯಬೇಕಿದೆ. ಹೀಗೆ ಸಂಶೋಧನೆ ನಡೆಸಿದರೆ ಉತ್ತಮ ಮಾಹಿತಿ ದೊರೆಯುತ್ತದೆ. ಈ ನೆಲ ಹಾಳಾಗಿ ಹೋಗುವುದಕ್ಕೆ ಮೊದಲು ಈ ಕಾರ್ಯ ನಡೆಯಬೇಕಿದೆ. ○

ಜೆ.ಟಿ.ಜಯರಾಮಯ್ಯ *
ಸವಿತಾ.ಇ.ಆರ್. **

# ಅರದೇಶಹಳ್ಳಿಯ ಬೃಹತ್ ಶಿಲಾಯುಗದ ನೆಲೆಗಳು

ಬೆಂಗಳೂರು ಗ್ರಾಮಾಂತರ ಜಿಲ್ಲೆಯಲ್ಲಿರುವ ದೇವನ ಹಳ್ಳಿ ಹೋಬಳಿ ಅರದೇಶಹಳ್ಳಿಯಲ್ಲಿ ಬೃಹತ್ ಶಿಲಾಯುಗದ ನೆಲೆಗಳು ಕಂಡು ಬಂದಿವೆ. ಈ ಊರಿನಿಂದ ಕೆರೆಗೆ ಹೋಗುವ ರಸ್ತೆಯಲ್ಲಿ ಎರಡೂ ಕಡೆಗಳಲ್ಲಿ ಬೂದಿಹಳ್ಳ ಎಂಬ ಹೆಸರಿನಿಂದ ಕರೆಯುವ ಪ್ರದೇಶವಿದೆ. ಇಲ್ಲಿ ಸುಮಾರು ೧೦-೧೨ ಹೆಕ್ಟೆರ್ ಪ್ರದೇಶದಲ್ಲಿ ಬೂದಿ ಮಿಶ್ರಿತ ಮಣ್ಣು ಕಂಡು ಬರುತ್ತದೆ.

ಈ ಊರಿನ ಸುತ್ತಲಿನ ಜನರು ಈ ಭೂಮಿಯ ಮಣ್ಣನ್ನು ಗೊಬ್ಬರವಾಗಿ ಉಪಯೋಗಿಸಲು ತೆಗೆಯುತ್ತಿದ್ದಾಗ ಕೆಲವು ನಾಣ್ಯಗಳು, ಮಡಕೆಗಳು, ಮೂಳೆಗಳು, ಲೋಹದ ತುಕ್ಕು ಹಿಡಿದ ವಸ್ತುಗಳು ಕಂಡುಬಂದಿವೆ.

ಈ ಪ್ರದೇಶದಲ್ಲಿ ಕಂಡುಬಂದ ಶಿಲಾಯುಗದ ಸಮಾಧಿಗಳನ್ನು ಜನರು ನಿಧಿ ಇದೆ ಎಂಬ ಕಲ್ಪನೆಯಿಂದ ಹಾಳುಗೆಡವಿದ್ದಾರೆ. ಚಪ್ಪಡಿಯಾಕಾರದಲ್ಲಿದ್ದ ಕಲ್ಲುಗಳನ್ನು ಒಡೆದು ತಮ್ಮ ಉಪಯೋಗಕ್ಕೆ ಬಳಸಿಕೊಂಡಿರುವುದರಿಂದ ಹೆಚ್ಚಿನ ಸಮಾಧಿಗಳು ನಾಶವಾಗಿವೆ. ಹಾಳುಗೆಡವಿರುವ ಒಂದು ಸಮಾಧಿಯು ಸುಮಾರು ೧.೩೭ ಮೀ ಅಗಲ, ೧.೮೩ಮೀ ಉದ್ದ, ೧.೫೨ಮೀ. ಗಳಷ್ಟು ಎತ್ತರ ಉಳ್ಳದ್ದಾಗಿದೆ. ನಾಲ್ಕು ಕಡೆಗಳಲ್ಲಿ ನಿಲ್ಲಿಸಿರುವ ಕಲ್ಲುಗಳು ಸುಮಾರು ೨೨-೨೩ ಸೆಂ.ಮೀ. ದಪ್ಪವಾಗಿದೆ. ಮೇಲ್ಭಾಗದಲ್ಲಿ ಹಾಕಿದ್ದ ಚಪ್ಪಡಿಯು ೧೨½ ಅಡಿಗಳಷ್ಟು ಉದ್ದ ಮತ್ತು ೮ ಅಡಿ ಅಗಲವಾಗಿದೆ. ಈ ಸಮಾಧಿಯಲ್ಲಿ ಮೂರು ಮಡಿಕೆಗಳು ದೊರೆತಿದ್ದು ಅದರಲ್ಲಿ ಬೂದಿ ತುಂಬಿದೆ. ಸಮಾಧಿಯಲ್ಲಿ ಕಲ್ಲಿನ ಹಾಸುಗಲ್ಲು ಮತ್ತು ಅರೆಯುವ ಕಲ್ಲುಗಳು ದೊರೆತಿವೆ. ಈ ಮಡಿಕೆಗಳಲ್ಲಿ ಒಂದು ಮಡಿಕೆಯ ಮೇಲೆ ಬಣ್ಣದ ಸಾಲುಗಳನ್ನು ಚಿತ್ರಿಸಲಾಗಿದ ಬೃಹತ್ ಶಿಲಾಯುಗದ ಕಾಲದಲ್ಲಿ ಬಣ್ಣವನ ಉಪಯೋಗಿಸಿ, ಮಡಕೆಯ ಹೊರಭಾಗವನ ಚಿತ್ರಿಸಲಾಗುತ್ತಿತ್ತು. (ಗುರುಮೂರ್ತಿ. ಎಸ್., 'ಸೆರಾಮಿಕ ಟ್ರೆಡಿಶನ್ಸ್ ಇನ್ ಸೌತ್ ಇಂಡಿಯಾ,' ಪುಟ ೧೯೩, ೧೯ ೨೪೨).

ಈ ಸಮಾಧಿಯಲ್ಲಿ ಸಿಕ್ಕಿರುವ ಕೆಲವು ವಸ್ತುಗಳನ್ ಸಂಬಂಧಪಟ್ಟ ರೈತರು ಬೇರೆಯವರಿಗೆ ತೋರಿಸಿಲ್ಲವಾದ್ದರಿಂದ ಕೆಲವು ವಿವರಗಳು ದೊರೆಯುತ್ತಿಲ್ಲ. ಎಲ್ಲ ಸ್ಥಳಗಳಲ್ಲಿಯೂ ಜನರು ನಂಬಿರುವಂತೆ ಈ ಬೃಹತ್ ಶಿಲಾಯುಗದ ಕಲ್ಲ ಗೋರಿಗಳನ್ನು ಪಾಂಡವರ ಗುಡಿ ಎಂದು ಕರೆಯುವುದು ವಾಡಿಕೆಯಾಗಿದೆ. ಇವುಗಳಲ್ಲಿ ಮತ್ತು ಹಳೆಯ ದೇವಾಲಯ ಗಳಲ್ಲಿ ನಿಧಿ ಇರಬಹುದೆಂದು ನಂಬಿದ್ದ ಜನರು ಇವುಗಳನ್ನು ಹಾಳುಗೆಡುವುದು ಸಾಮಾನ್ಯ ವಿಷಯವಾಗಿದೆ.

ಹಾಳುಗೆಡವಿದ್ದ ಚಪ್ಪಡಿ ಕಲ್ಲನ್ನು ಒಡೆದು ಸ್ವಂತ ಕೆಲಸಗಳಿಗೆ, ದ್ರಾಕ್ಷಿ ತೋಟಕ್ಕೆ ಉಪಯೋಗಿಸಿರುವುದು ಕಂಡು ಬಂದಿದೆ. ಈ ಊರಿನ ಕೆರೆಯ ಕೋಡಿ ಬಯಲಿನಲ್ಲಿ ವೃತ್ತಾಕಾರದಲ್ಲಿರುವ ಶಿಲಾಯುಗದ ಸಮಾಧಿಗಳು ಕಂಡು ಬರುತ್ತವೆ. ಒಂದು, ಎರಡು ವೃತ್ತಗಳಿರುವ ಐದು ಸಮಾಧಿಗಳಿವೆ. ಎರಡು ಸಮಾಧಿಗಳನ್ನು ಕದಲಿಸಲಾಗಿದೆ. ಅದರಿಂದ ಹೊರ ತೆಗೆದ ಮಣ್ಣಿನಲ್ಲಿ ಮಡಕೆ, ಕಪ್ಪು ಮತ್ತು ಕಂದು ಮಿಶ್ರಿತ ಮಡಕೆ ಚೂರುಗಳು ಮತ್ತು ಮೂಳೆಯ ಚೂರುಗಳು ಕಂಡುಬರುತ್ತವೆ. ಈ ಸ್ಥಳದ ಸುತ್ತಲೂ ಬೂದಿ

* ಇತಿಹಾಸ ಉಪನ್ಯಾಸಕರು, ವಿವೇಕಾನಂದ ಕಾಲೇಜ್, ರಾಜಾಜಿನಗರ, ಬೆಂಗಳೂರು.
** ನಂ. ೧೧೧, ೧೧ನೇ ಮುಖ್ಯರಸ್ತೆ, ತ್ಯಾಗರಾಜನಗರ, ಬೆಂಗಳೂರು.

ಮಿಶ್ರಿತ ಮಣ್ಣು ಕಂಡು ಬರುತ್ತದೆ. ಈ ಸಂಗ್ರಹವು ಉತ್ತರ ಕರ್ನಾಟಕದ ನವಶಿಲಾಯುಗದ ಬೂದಿ ದಿಬ್ಬವನ್ನು ನೆನಪಿಗೆ ತರುತ್ತದೆ. ಇಲ್ಲಿ ದೊರೆತಿರುವ ಮಡಕೆಗಳು ಬೃಹತ್ ಶಿಲಾಯುಗ ಮತ್ತು ಆದಿ ಐತಿಹಾಸ ಯುಗದ ಮಡಕೆಗಳನ್ನು ಒಳಗೊಂಡಿದೆ ಈ ಸಮಾಧಿಗಳಿಗೆ ವೃತ್ತವನ್ನು ಮಾಡಲು ಕಪ್ಪು ಬೀಡುಗಲ್ಲನ್ನು ಉಪಯೋಗಿಸಲಾಗಿದೆ.

**ಬೃಹತ್ ಶಿಲಾಯುಗದ ಗೋರಿಗಳು**

ಇವುಗಳು ವೃತ್ತಾಕಾರದ ಶಿಲಾ ಗೋರಿಗಳಾಗಿದ್ದು ಇವುಗಳಲ್ಲಿ ಕೆಲವನ್ನು ಅಗೆದು ತೆಗೆಯಲಾಗಿದೆ. ಬೃಹತ್ ಶಿಲಾಯುಗದ ಮಡಕೆ ಚೂರುಗಳು ಸಿಕ್ಕಿವೆ. ಕೆಂಪಾದ ಮಡಕೆಯ ಚೂರುಗಳ ಮೇಲೆ ಬಿಳಿ ಬಣ್ಣದಿಂದ ಗೆರೆ ಮತ್ತು ಚುಕ್ಕೆಗಳನ್ನು ಹಾಕಿದೆ. ಸಮಾಧಿಯಲ್ಲಿ ನಿಧಿ ಇದೆ ಎಂಬ ತಪ್ಪು ಕಲ್ಪನೆಯಿಂದಾಗಿ ನಾಶ ಮಾಡಿರುವುದು ಕಂಡು ಬರುತ್ತದೆ. (ನಿಲುವುಗಲ್ಲುಗಳು) ಕಲ್ಲು ತೊಟ್ಟಿಯನ್ನು ಮುಚ್ಚಿದ ಕಲ್ಲು ೫೦ ಸೆಂ.ಮೀ. ದಪ್ಪ, ೪ ಮೀಟರ್ ಅಗಲ ಮತ್ತು ೫ ಮೀಟರ್ ಉದ್ದವಾಗಿರುತ್ತದೆ. ಮುಚ್ಚಳದ ಕಲ್ಲು ಪೂರ್ವಕ್ಕೆ ಸ್ವಲ್ಪ ಮುಂದಕ್ಕಿದೆ. ಕಪ್ಪುಬೀಡುಗಲ್ಲುಗಳನ್ನು ವೃತ್ತಕ್ಕೆ ಬಳಸಲಾಗಿದೆ. ಎರಡು, ಮೂರು ವೃತ್ತಗಳಲ್ಲಿ ಇದು ಕಂಡುಬರುತ್ತದೆ.

ಈ ರೀತಿಯಲ್ಲಿರುವ ಈ ಬೃಹತ್ ಶಿಲಾಯುಗದ ಸಮಾಧಿಗಳು ಈ ಸ್ಥಳ ಪ್ರಾಚೀನ ಜನವಸತಿಯ ಬಗ್ಗೆ ಮಾಹಿತಿ ನೀಡುವುದಲ್ಲದೆ ಈ ಸ್ಥಳವು ಶಿಲಾಯುಗದ ಸಂಸ್ಕೃತಿಯ ನೆಲೆಯಾಗಿ ರೂಪುಗೊಂಡಿತ್ತು ಎಂಬುದು ಸಂಶೋಧನೆಯಿಂದ ತಿಳಿದು ಬಂದಿದೆ.

(ಈ ಕ್ಷೇತ್ರಕಾರ್ಯದಲ್ಲಿ ಸಹಕರಿಸಿದ ಲೋಕೇಶ. ಎಂ. ಮತ್ತು ಮಾಹಿತಿ ನೀಡಿದ ಕನ್ನಡ ಉಪನ್ಯಾಸಕರಾದ ಎಂ.ಮುನಿಕೆಂಪಣ್ಣನವರಿಗೆ ನಮ್ಮ ಕೃತಜ್ಞತೆಗಳು).

○

ಆರ್. ಜಗದೀಶ್ *

# ಮಾಗಡಿ ತಾಲ್ಲೂಕಿನ ಹೊಸಪಾಳ್ಯದ ಬೃಹತ್ ಶಿಲಾಯುಗದ ನಿವೇಶನ

ಪ್ರಾಗೈತಿಹಾಸಿಕ ಯುಗವನ್ನು ಆದಿಶಿಲಾಯುಗ, ಸೂಕ್ಷ್ಮ ಶಿಲಾಯುಗ, ಮತ್ತು ನವಶಿಲಾಯುಗ ಎಂದು ಮೂರು ಭಾಗವಾಗಿ ವಿಂಗಡಿಸಲಾಗಿದೆ. ನವಶಿಲಾಯುಗದಲ್ಲಿ ಶಿಲಾಯುಧಗಳ ಜೊತೆಯಲ್ಲಿಯೇ ತಾಮ್ರದ ಆಯುಧ ಗಳನ್ನು ಬಳಸಲಾರಂಭಿಸಿದುದರಿಂದ ಈ ಯುಗವನ್ನು ತಾಮ್ರ ಶಿಲಾಯುಗ ಎಂದೂ ಕರೆಯುತ್ತಾರೆ. ನಂತರದ ಕಾಲದಲ್ಲಿ ಕಬ್ಬಿಣದ ಆವಿಷ್ಕಾರವಾಗಿ ಕಬ್ಬಿಣದ ಆಯುಧಗಳು ಬಳಕೆಗೆ ಬಂದುದರಿಂದ ಈ ಯುಗವನ್ನು ಕಬ್ಬಿಣದ ಯುಗವೆಂದು ಕರೆಯುತ್ತಾರೆ. ಈ ಯುಗದ ಜನರು ಬೃಹದಾಕಾರದ ಕಲ್ಲು ಚಪ್ಪಡಿಗಳನ್ನು ಬಳಸಿ ಸಮಾಧಿಗಳನ್ನು ನಿರ್ಮಿಸುತ್ತಿದ್ದುದರಿಂದ ಈ ಯುಗವನ್ನು ಬೃಹತ್‌ಶಿಲಾಯುಗ ಎಂದೂ ಕರೆಯುತ್ತಾರೆ.

ಕರ್ನಾಟಕದಾದ್ಯಂತ ಬೃಹತ್ ಶಿಲಾಯುಗದ ಅನೇಕ ನೆಲೆಗಳು ಪತ್ತೆಯಾಗಿವೆ. ಬೆಂಗಳೂರು ಗ್ರಾಮಾಂತರ ಜಿಲ್ಲೆಯಲ್ಲಿಯೂ ಮಾಗಡಿ ತಾಲ್ಲೂಕಿನಲ್ಲಿ ಸಾವನದುರ್ಗದ ಇಟ್ಟಿಗೆಬೈಲು, ಹೂಜಿಗಲ್ಲು, ಸೋಲೂರು ಹೋಬಳಿಯ ಕಲ್ಯಾಣಪುರ ಮುಂತಾದ ಸ್ಥಳಗಳಲ್ಲಿ ಬೃಹತ್ ಶಿಲಾಯುಗದ ಅನೇಕ ನೆಲೆಗಳು ಪತ್ತೆಯಾಗಿದ್ದವು.

ಇತ್ತೀಚೆಗೆ ಮಾಗಡಿ ತಾಲ್ಲೂಕಿನ ಸೋಲೂರು ಹೋಬಳಿಯ ಹೊಸಪಾಳ್ಯ ಎಂಬ ಗ್ರಾಮದ ಬಳಿಯಲ್ಲಿರುವ 'ಕರೇಕಲ್ಲು' ಎಂಬ ಗುಡ್ಡದ ತಪ್ಪಲಿನಲ್ಲಿ ಬೃಹತ್ ಶಿಲಾಯುಗಕ್ಕೆ ಸೇರಿದ ೧೮ ಸಮಾಧಿಗಳು ಪತ್ತೆಯಾಗಿವೆ. ಈ ಸಮಾಧಿಗಳು ಆಯತಾಕಾರದ ಕೋಣೆ ಗೋರಿಗಳಾಗಿದ್ದು, ಅವುಗಳ ಸುತ್ತಲೂ ವೃತ್ತಾಕಾರದಲ್ಲಿ ಕಲ್ಲುಗಳನ್ನು ಹೊಂದಿವೆ. ಈ ಸಮಾಧಿಗಳನ್ನು ಹತ್ತಿರದಲ್ಲಿಯೇ ಇರುವ ಕರೇಕಲ್ಲು ಗುಡ್ಡದಲ್ಲಿ ದೊರೆಯುವ ಸು. ೮ ಅಂಗುಲ ಮಂದದ ಗ್ರಾನೈಟ್ (ಕಣಶಿಲೆ) ಚಪ್ಪಡಿಗಳಿಂದ ನಿರ್ಮಿಸಲಾಗಿದೆ. ಈ ಸಮಾಧಿಗಳು ಎಂಟು ಅಡಿ ಉದ್ದ, ಹಾಗೂ ನಾಲ್ಕು ಅಡಿ ಅಗಲವಾಗಿವೆ. ಎಲ್ಲಾ ಸಮಾಧಿಗಳನ್ನೂ ಆಯತಾ ಕಾರದಲ್ಲಿ ಸ್ವಸ್ತಿಕ್‌ದ ಆಕಾರದಲ್ಲಿ ಒಂದಕ್ಕೊಂದನ್ನು ಒರಗಿಸಿಟ್ಟಂತೆ ನಿರ್ಮಿಸಲಾಗಿದೆ. ಈ ಸಮಾಧಿಗಳೆಲ್ಲವಕ್ಕೂ ಪೂರ್ವ ಭಾಗದಲ್ಲಿ ಒಬ್ಬ ವ್ಯಕ್ತಿ ತೂರುವಷ್ಟು ಸ್ಥಳವನ್ನು ಬಿಡಲಾಗಿದೆ. ಈ ರೀತಿಯ ಸಮಾಧಿಗಳನ್ನು ಹಾದಿಕೋಣೆ ಗೋರಿಗಳೆಂದು ಕರೆಯುತ್ತಾರೆ.

ಪ್ರಸ್ತುತ ಹೊಸಪಾಳ್ಯದಲ್ಲಿ ದೊರೆತ ೧೮ ಸಮಾಧಿಗಳಲ್ಲಿ ಬಹುತೇಕ ಸಮಾಧಿಗಳು ಸುಸ್ಥಿತಿಯಲ್ಲಿದ್ದು ಕೇವಲ ಒಂದೆರಡು ಸಮಾಧಿಗಳು ಮಾತ್ರ ಹಾಳಾಗಿವೆ. ಹಾಗೆ ಹಾಳಾದ



ಹೊಸಪಾಳ್ಯದ ಬೃಹತ್ ಶಿಲಾಯುಗದ ಸಮಾಧಿ

* ಕನ್ನಡ ಉಪನ್ಯಾಸಕ, ಸರ್ವೋದಯ ಪ್ರಥಮ ದರ್ಜೆ ಕಾಲೇಜು, ಶ್ರೀರಾಮಪುರಂ, ಬೆಂಗಳೂರು-೫೬೦ ೦೨೧

ಸಮಾಧಿಗಳು ನಿಧಿಶೋಧಕರ ದಾಳಿಗೆ ಗುರಿಯಾಗಿ ಹಾಳಾಗಿವೆಯೆಂದು ಅಲ್ಲಿನ ಸ್ಥಳೀಯರು ತಿಳಿಸಿದರು. ಈ ಸಮಾಧಿಗಳ ಮೇಲಿರುವ ಮುಚ್ಚಳದ ಕಲ್ಲುಗಳನ್ನು (ಕ್ಯಾಪ್ ಸ್ಟೋನ್) ಒಡೆದು ತೆಗೆದು ಸಮಾಧಿಯ ಒಳಭಾಗದ ಮಡಿಕೆಗಳನ್ನೆಲ್ಲಾ ಹೊರತೆಗೆದು ಚೆಲ್ಲಾಪಿಲ್ಲಿ ಮಾಡಿದ್ದಾರೆ. ಹಾಗೆ ಹೊರತೆಗೆಯಲಾದ ಮಡಿಕೆ ಕುಡಿಕೆಗಳು ಅಲ್ಲಿಯೇ ಬಿದ್ದಿದ್ದವುಗಳನ್ನು ಸಂಗ್ರಹಿಸಿ ಸೂಕ್ಷ್ಮವಾಗಿ ಪರಿಶೀಲಿಸಿದೆನು.

ಆ ಮಡಿಕೆಗಳು ಹೊರಭಾಗದಲ್ಲಿ ಕೆಂಪನೆಯ ಬಣ್ಣ ಹೊಂದಿದ್ದು ಒಳಭಾಗದಲ್ಲಿ ಕಪ್ಪಗಿದ್ದವು. ಕುಂಬಾರರ ಚಕ್ರದಲ್ಲಿ ನಿರ್ಮಿಸಿ, ಒಣಗಿಸಿ ನಂತರ ಸುಡಲಾಗಿದ್ದ ಆ ಮಡಕೆಗಳು ತೆಳುವಾಗಿದ್ದು ಹಗುರವಾಗಿದ್ದವು. ಮಡಿಕೆಗಳ ಒಳಭಾಗದಲ್ಲಿ ಕೆಲವು ಮೂಳೆಗಳು ದೊರೆತರೂ ಅವು ಮುಟ್ಟಿದ ಕೂಡಲೇ ಪುಡಿಯಾಗಿಬಿಡುವಂತಿದ್ದವು.

ಸಮಾಧಿಯ ಒಳಭಾಗದಲ್ಲಿ ಎರಡು ಕಬ್ಬಿಣದ ಬಾಣಗಳು ದೊರೆತವೆಂದು ಅಲ್ಲಿನ ಸ್ಥಳೀಯರು ತಿಳಿಸಿದರು. ಆದರೆ ಅವುಗಳು ನನಗೆ ದೊರೆಯಲಿಲ್ಲ.

ಈ ಸಮಾಧಿಗಳ ಹತ್ತಿರದಲ್ಲಿಯೇ ಇರುವ ಕರೇಕಲ್ಲು ಗುಡ್ಡದಲ್ಲಿ ಕೆಲವು ಗವಿಗಳು ಮತ್ತು ಕೆಲವು ಕಲ್ಲಾಸರೆಗಳಿವೆ. ಇವು ಆ ಯುಗದ ಜನರ ವಾಸಕ್ಕೆ ಬಳಕೆಯಾಗಿದ್ದಿರಬಹುದೆಂದು ಊಹಿಸಬಹುದು.

ಸಾಮಾನ್ಯವಾಗಿ ಬೃಹತ್ ಶಿಲಾಯುಗದ ಜನರ ವಾಸದ ನೆಲೆಗಳ ಹತ್ತಿರದ ಬೆಟ್ಟಗುಡ್ಡಗಳಲ್ಲಿ, ಗವಿಗಳಲ್ಲಿ, ಕಲ್ಲಾಸರೆಗಳಲ್ಲಿ ಕೆಲವೊಮ್ಮೆ ರೇಖಾಚಿತ್ರಗಳು ಕಂಡು ಬರುತ್ತವೆ. ಆದರೆ ಪ್ರಸ್ತುತ ಪತ್ತೆಯಾಗಿರುವ ಹೊಸಪಾಳ್ಯದ ನಿವೇಶನದಲ್ಲಿ ಈ ರೀತಿಯ ರೇಖಾಚಿತ್ರಗಳು ದೊರೆತಿಲ್ಲ. ಈ ಪ್ರದೇಶದಲ್ಲಿ ಮತ್ತಷ್ಟು ಕ್ಷೇತ್ರಪರಿವೀಕ್ಷಣೆ ನಡೆಸಿದರೆ ಮತ್ತೇನಾದರೂ ಹೆಚ್ಚಿನ ಮಾಹಿತಿ ದೊರೆಯುವ ಸಾಧ್ಯತೆಗಳಿವೆ. ○

ಎಸ್. ವೈ. ಸೋಮಶೇಖರ *

# ಚಿತ್ರದುರ್ಗ ತಾಲ್ಲೂಕು ಚಿಪ್ಪಿನಕೆರೆಯಲ್ಲಿ ಕಂಡುಬಂದಿರುವ ಪ್ರಾಕ್ಚಾರಿತ್ರಿಕ ಕುರುಹುಗಳು

ಚಿತ್ರದುರ್ಗ ತಾಲ್ಲೂಕಿನಲ್ಲಿರುವ ಚಿಪ್ಪಿನಕೆರೆಯು ತುರುವನೂರು ಹೋಬಳಿಗೆ ಸೇರಿದ ಗ್ರಾಮ. ಈ ಗ್ರಾಮದ ಪೂರ್ವ ದಿಕ್ಕಿಗೆ ಸುಮಾರು ಒಂದು ಕಿಲೋಮೀಟರು ದೂರದ ಮೂರನೇ ಸರ್ವೇ ನಂಬರಿನ ಹೊಲದಲ್ಲಿ ಪ್ರಾಕ್ಚಾರಿತ್ರಿಕ ಕಾಲದ ಕುರುಹುಗಳಾದ ವಿವಿಧ ಮಡಕೆಗಳು, ಕಬ್ಬಿಣದ ಬಳೆ, ಮಣಿಗಳು, ಎಲುಬಿನ ಅವಶೇಷಗಳು ಹಾಗೂ ಇಟ್ಟಿಗೆಯ ಚೂರುಗಳು ಕಂಡು ಬಂದಿವೆ. ಈ ವಸ್ತುಗಳು ದೊರೆತ ಸ್ಥಳವು ಜನಗಿಹಳ್ಳಿ ಮತ್ತು ಚಿಪ್ಪಿನಕೆರೆಯ ಕಡೆಯಿಂದ ಹರಿಯುವ ಕೋಡಿಹಳ್ಳಗಳ ಸಂಗಮ ಸ್ಥಾನದಲ್ಲಿದೆ. ಹದಿನೈದು ಎಕರೆಗಳಷ್ಟು ಪ್ರದೇಶದಲ್ಲಿರುವ ಈ ನೆಲೆಯು ಹಳ್ಳಗಳ ಮಟ್ಟದಿಂದ ಹದಿನೈದು-ಇಪ್ಪತ್ತು ಅಡಿಗಳಷ್ಟು ಎತ್ತರದಲ್ಲಿದೆ. ಈ ಪ್ರದೇಶವು ಎರಡು ಹಳ್ಳಗಳು ಕೂಡುವ ಸ್ಥಳವೂ, ಫಲವತ್ತಾಗಿರುವ ಭೂಮಿ ಮತ್ತು ನೀರಿನ ಉತ್ತಮ ಸೌಕರ್ಯಗಳನ್ನು ಹೊಂದಿರುವುದಾಗಿದೆ. ಒಟ್ಟಿನಲ್ಲಿ ಉತ್ತಮ ವಾತಾವರಣ ಹೊಂದಿದ್ದು, ಜನರು ವಾಸಿಸಲು ಅನುವಾಗುವ ಕನಿಷ್ಠ ಸೌಲಭ್ಯಗಳೆಲ್ಲವೂ ಇರುವುದನ್ನು ಇಲ್ಲಿ ಕಾಣಬಹುದು.

ಈ ಸ್ಥಳದಲ್ಲಿರುವ ಬೂದು ಬಣ್ಣದ ಮಣ್ಣಿನಿಂದ ಗ್ರಾಮದ ಜನರು ಬೂದಿನ ಹೊಲ, ಬೂದುಗಡ್ಡೆ ಎಂಬುದಾಗಿ ಕರೆಯುತ್ತಾರೆ. ಸ್ಥಳೀಯರ ಪ್ರಕಾರ ಇಲ್ಲಿ ಪಾಂಡವರು ವಾಸವಾಗಿದ್ದರೆಂಬುದು ತಿಳಿದುಬರುವ ಅಂಶ.

ಇಲ್ಲಿ ಕಂಡು ಬಂದಿರುವ ಅವಶೇಷಗಳೆಂದರೆ : ೧) ಕಪ್ಪು ಮತ್ತು ಕೆಂಪು ಬಣ್ಣದ ಮಡಕೆಗಳು, ೨) ಕಪ್ಪು ಮಡಕೆಗಳು, ೩) ಕೆಂಪು ಮಡಕೆಗಳು, ೪) ಕಪ್ಪು ಮತ್ತು ಕೆಂಪು ಮಡಕೆಗಳ ಮೇಲೆ ಬಿಳಿ ಬಣ್ಣದಿಂದ ಮೂಡಿಸಿರುವ ರೇಖಾಚಿತ್ರಗಳು, ಎಲೆಬಳ್ಳಿ, ಸೂರ್ಯ, ಮತ್ತಿತರ ಅಲಂಕರಣ ಹೊಂದಿದವುಗಳು, ೫) ದವಸಧಾನ್ಯ ಮತ್ತು ನೀರು ಸಂಗ್ರಹಿಸಲು ಬಳಸುತ್ತಿದ್ದ ಜಾಡಿಯ ಚೂರುಗಳು, ೬) ವಿವಿಧ ಹರಳು, ಬೆಣಚು ಕಲ್ಲುಗಳಿಂದ ಮಾಡಿದ ಅಗೇಟ್, ಕಾರ್ನೇಲಿಯನ್ ಮಣಿಗಳು, ಸುಟ್ಟ ಮಣ್ಣಿನ ಮಣಿಗಳು ಹಾಗೂ ೮) ಕಬ್ಬಿಣದ ಬಳೆ ಮತ್ತು ಚೂರುಗಳು, ಇವೇ ಮುಂತಾದ ವಸ್ತುಗಳನ್ನು ಕಾಣಬಹುದು. ಈ ಪ್ರದೇಶವು ನೂರಾರು ವರ್ಷಗಳಿಂದ ಕೃಷಿಗೆ ಒಳಪಟ್ಟಿರುವುದರಿಂದ ನೆಲೆಗೆ ತುಂಬಾ ಹಾನಿಯಾಗಿದೆ.

ಚಿತ್ರದುರ್ಗ ತಾಲ್ಲೂಕಿನಲ್ಲಿ ಜನಗಿಹಳ್ಳವೆಂದು ಹೆಸರು ಪಡೆದಿರುವ ಈ ಹಳ್ಳವು ಮುಂದೆ ಹರಿಯುತ್ತಾ ಮೊಳಕಾಲ್ಮೂರು ತಾಲ್ಲೂಕಿನಲ್ಲಿ ಚಿನ್ನಹಗರಿ (ಚಿಕ್ಕಹಗರಿ) ನದಿಯಾಗಿ ರೂಪ ಹೊಂದಿರುವುದು ಗಮನಾರ್ಹ. ಈ ಚಿನ್ನಹಗರಿ ನದಿಯ ದಂಡೆಯ ಮೇಲೆಯೇ ಕರ್ನಾಟಕದ ಪ್ರಮುಖ ಪ್ರಾಕ್ಚಾರಿತ್ರಿಕ ನೆಲೆಯಾದ ಬ್ರಹ್ಮಗಿರಿ ಇದ್ದು ಇದರ ಜೊತೆಗೆ ಚಿತ್ರದುರ್ಗದ ಬಳಿಯ ಚಂದ್ರವಳ್ಳಿ ಮತ್ತು ತಮ್ಮಟಕಲ್ಲುಗಳು ಈ ನೆಲೆಗೆ ಹದಿನೈದು ಮತ್ತು ಹತ್ತು ಮೈಲುಗಳ ಅಂತರದಲ್ಲಿವೆ.

ಎಂ. ಹೆಚ್. ಕೃಷ್ಣ ಮತ್ತು ಮಾರ್ಟಿಮರ್ ವ್ಹೀಲರ್‌ರು ಬ್ರಹ್ಮಗಿರಿ ಮತ್ತು ಚಂದ್ರವಳ್ಳಿಗಳಲ್ಲಿ ನಡೆಸಿದ ಉತ್ಖನನದಿಂದ ದೊರೆತ ಅವಶೇಷಗಳಿಗೆ ಸಮಾನವಾದ ಮಡಕೆಗಳು ಮತ್ತು ಮಣಿಗಳು ಇಲ್ಲಿಯೂ ದೊರೆತಿರುವುದರಿಂದ ಈ ನಾಲ್ಕು ನೆಲೆಗಳಿಗೂ ಸಂಬಂಧವನ್ನು ಕಲ್ಪಿಸಬಹುದಾಗಿದೆ.

* ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ, ಕಮಲಾಪುರ-೫೮೩ ೨೨೧.

ಇಲ್ಲಿ ದೊರೆತ ವಸ್ತುಗಳ ಆಧಾರದ ಮೇಲೆ ಈ ಪ್ರದೇಶವು ಬೃಹತ್ ಶಿಲಾಯುಗ ಅಥವಾ ಕಬ್ಬಿಣಯುಗ ಮತ್ತು ಪ್ರಾರಂಭದ ಚಾರಿತ್ರಿಕಯುಗ ಅಥವಾ ಶಾತವಾಹನರ ಕಾಲಕ್ಕೆ ಸೇರಿದ ನೆಲೆಯಾಗಿದ್ದುದು ತಿಳಿದುಬರುವ ಅಂಶ. ಈ ನೆಲೆಯ ಒಂದು ಭಾಗದಲ್ಲಿ ಅಗೆದಾಗ ಮೂರೂವರೆ ಅಡಿಗಳವರೆಗೆ ಹಾಳು ಮಣ್ಣು ಕಂಡುಬಂದಿದ್ದು, ಅದರ ಕೆಳಗೆ ಗಟ್ಟಿಯಾದ ಕೆಂಪು ಮಣ್ಣು ಅಂದರೆ ಸ್ವಾಭಾವಿಕ ಸ್ತರವಿದೆ. ಅಗೆದ ಭಾಗದಲ್ಲಿ ಚಾರಿತ್ರಿಕ ಯುಗದ ಮಡಕೆಗಳು ಒಂದು ಸ್ತರದಲ್ಲಿದ್ದು, ಅದರ ಕೆಳಭಾಗದಲ್ಲಿ ಬೃಹತ್ ಶಿಲಾಯುಗದ ಕಪ್ಪು ಮತ್ತು ಕೆಂಪು ಬಣ್ಣದ ಮಡಕೆಗಳು, ಕಬ್ಬಿಣದ ಬಳೆ, ಎಲುಬಿನ ಚೂರುಗಳು ಸಿಕ್ಕಿವೆ. ಇವುಗಳ ಜೊತೆಗೆ ಕೃಷಿ ಮಾಡುವಾಗ ಮಡಕೆಗಳು, ಜಾಡಿಗಳು, ಮಣಿಗಳು ಸಿಕ್ಕಿದ್ದವೆಂದು ಹೊಲದ ಯಜಮಾನರು ಹೇಳುತ್ತಾರೆ. ಇವುಗಳಿಂದ ಈ ನೆಲೆಯು ಬೃಹತ್ ಶಿಲಾಯುಗ ಮತ್ತು ಶಾತವಾಹನ ಯುಗಗಳಿಗೆ ಸೇರಿದ್ದಿತೆಂಬುದು ನನ್ನ ಅಭಿಪ್ರಾಯ. ಈ ಬಗೆಗೆ ಹೆಚ್ಚಿನ ಸಂಶೋಧನಾ ಕಾರ್ಯ ನಡೆಯಬೇಕಿದ್ದು, ಅಂತಿಮ ತೀರ್ಮಾನಕ್ಕೆ ವಿದ್ವಾಂಸರ ಗಮನಕ್ಕೆ ತರುತ್ತಿದ್ದೇನೆ.

ಚಿಪ್ಪಿನಕೆರೆಯಲ್ಲಿ ದೊರೆತ ಪ್ರಾಚೀನ ಅವಶೇಷಗಳು ಒಂದೆಡೆಯಾದರೆ, ಗ್ರಾಮದ ಹೆಸರಾದ 'ಚಿಪ್ಪಿನಕೆರೆ' ಎಂಬ ಪದವನ್ನು ಸೂಚಿಸುವ ವಿಜಯನಗರದ ನಂತರ ಕಾಲದ ಶಾಸನವೊಂದು ಸಿಕ್ಕಿದೆ. ಇದರಲ್ಲಿ ಬರುವ ವಿಷಯ "ಚಿಪ್ಪಿನಕೆರೆ ರುದ್ರಪ್ಪ ಗಿರಿಯಣಗೆ ಕೊಟ್ಟ ಹೊಲ'' ಎಂದಿದೆ.

(ಪ್ರಸ್ತುತ ಅಧ್ಯಯನಕ್ಕೆ ಸಹಕರಿಸಿ ಸಲಹೆ-ಸೂಚನೆಗಳನ್ನಿತ್ತ ಕನ್ನಡ ವಿಶ್ವವಿದ್ಯಾಲಯದ ಪ್ರಾಧ್ಯಾಪಕರಾದ ಲಕ್ಷ್ಮಣ್ ತೆಲಗಾವಿ, ಕೆ. ಎಂ. ಸುರೇಶ್ ಹಾಗೂ ಪುರಾತತ್ವ ವಿಭಾಗದ ಎಲ್ಲ ಮಿತ್ರರಿಗೂ, ಚಿಪ್ಪಿನಕೆರೆಯ ಗ್ರಾಮಸ್ಥರಿಗೂ ಹಾಗೂ ಸಹೋದರ ರಮೇಶನಿಗೂ ಧನ್ಯವಾದಗಳನ್ನು ಹೇಳಲು ಇಚ್ಛಿಸುತ್ತೇನೆ.) ○

## ಆಕರ ಗ್ರಂಥಗಳು

Annual Report of the Mysore Archaeological Department for the Year 1942, 1943 Mysore
Ancient India : Bulletin of Archaeological Survey of India, November 4, July 1947-Jan 1948.
ಸುಂದರ ಅ., ೧೯೭೩, ಬ್ರಹ್ಮಗಿರಿ ಮತ್ತು ಚಂದ್ರವಳ್ಳಿ, ಬೆಂಗಳೂರು, ಐಬಿಹೆಚ್ ಪ್ರಕಾಶನ

ಜಿ. ಕೆ. ದೇವರಾಜಸ್ವಾಮಿ*

# ಮೇಳಿಗೆ ಮತ್ತು ಬುಕ್ಕಾಪುರದ ಶಿಲಾಯುಗದ ನಿವೇಶನಗಳು ಒಂದು ಶೋಧ

ಈಗಿನ ಶಿವಮೊಗ್ಗಾದಿಂದ ೬೦ ಕಿ.ಮೀ. ದೂರದಲ್ಲಿರುವ, ಪೂರ್ಣ ಮಲೆನಾಡು ತಾಲ್ಲೂಕುಗಳಲ್ಲಿ ಒಂದಾದ ತೀರ್ಥಹಳ್ಳಿ, ನದಿ, ಶಿಖರ, ಹಚ್ಚಹಸಿರಿನ ಕಾಡಿನಿಂದ ಕೂಡಿ ಪ್ರಕೃತಿ ಸೌಂದರ್ಯದ ಬೀಡಾಗಿಯೂ, ಇತಿಹಾಸ, ಪುರಾಣ ಪ್ರಸಿದ್ಧ ತೀರ್ಥಕ್ಷೇತ್ರವೂ ಆಗಿದೆ. ಪ್ರಸ್ತುತ ಲೇಖನದಲ್ಲಿ ತೀರ್ಥಹಳ್ಳಿ ತಾಲ್ಲೂಕಿನ ಪ್ರಾಗಿತಿಹಾಸಕ್ಕೆ ಸಂಬಂಧಿಸಿದ ಹಾಗೂ ನನ್ನ ಕ್ಷೇತ್ರ ಕಾರ್ಯದಲ್ಲಿ, ತೀರ್ಥಹಳ್ಳಿ ತಾಲ್ಲೂಕಿನ ಮೇಳಿಗೆ ಹಾಗೂ ಬುಕ್ಕಾಪುರದಲ್ಲಿ ಪತ್ತೆ ಹಚ್ಚಿದ ಶಿಲಾಯುಗದ ಎರಡು ನೆಲೆಗಳ ಬಗ್ಗೆ ತಿಳಿಸಲು ಇಚ್ಛಿಸುತ್ತೇನೆ. ಒಂದು ನವಶಿಲಾಯುಗಕ್ಕೆ ಸೇರಿದ್ದು ಮತ್ತೊಂದು ಬೃಹತ್ ಶಿಲಾಯುಗಕ್ಕೆ ಸೇರಿದುದಾಗಿದೆ.

## ನವಶಿಲಾಯುಗದ ನೆಲೆ

ಪ್ರಸ್ತುತ ತೀರ್ಥಹಳ್ಳಿ ತಾಲ್ಲೂಕು, ಮುತ್ತೂರು ಹೋಬಳಿ ಮೇಳಿಗೆ ಗ್ರಾಮದ ತಳುವೆ ಗುಡ್ಡದ ತಪ್ಪಲಿನಲ್ಲಿ ನವಶಿಲಾಯುಗಕ್ಕೆ ಸೇರಿದ ನಾಲ್ಕು ಕಲ್ಲಿನ ಕೊಡಲಿಗಳು ದೊರೆತಿವೆ. ಕೊಡಲಿಗಳು ತೀರಾ ಗಡುಸಾದ ಡಾಲರೈಟ್ ಕಲ್ಲಿನಿಂದ ಮಾಡಿದವುಗಳಾಗಿದ್ದು, ಅವುಗಳಲ್ಲಿ ಮೂರು ಕೊಡಲಿಗಳು ಅರ್ಧಕ್ಕೆ ಸರಿಯಾಗಿ ತುಂಡಾಗಿವೆ. ಎರಡು ಕೊಡಲಿಯ ಮುಂಭಾಗ ಒಂದು ಕೊಡಲಿಯ ಹಿಂಭಾಗ ದೊರೆತಿದೆ. ಎರಡೂ ಕೊಡಲಿಗಳು ಚೆನ್ನಾಗಿ ಉಜ್ಜಿ ಮಾಡಲ್ಪಟ್ಟಿದ್ದು ತೀರಾ ಹರಿತವಾಗಿದೆ.

ಸಂಪೂರ್ಣ (ಇಡಿಯಾಗಿರುವ)ವಾಗಿರುವ ಕೊಡಲಿಯು ೧೬ ಸೆಂ.ಮೀ. ಉದ್ದ ಹಾಗೂ ೭.೫ ಸೆಂ.ಮೀ. ಅಗಲವಾಗಿದೆ. ಮುಂಭಾಗವು ಅಗಲವಾಗಿದ್ದು, ಹಿಂಭಾಗದಲ್ಲಿ ಮುಂಭಾಗಕ್ಕಿಂತ ಸಣ್ಣದಾಗಿದ್ದು ಮರದ ಕಾವಿಗೆ ಸಿಕ್ಕಿಸಲು ಅನುಕೂಲವಾಗುವಂತಹ ಆಕಾರದಲ್ಲಿದೆ.

ಎರಡನೆಯ ಕೊಡಲಿಯ ೬.೦ ಸೆಂ.ಮೀ. ಅಗಲ ಹಾಗೂ ೭.೪ ಸೆಂ.ಮೀ. ಉದ್ದವಾಗಿದ್ದು ಇದರ ಹಿಂಭಾಗವೂ ಮುರಿದುಹೋಗಿದೆ. ಇದನ್ನು ಗಮನಿಸಿದರೆ ಈ ಕೊಡಲಿಯು ಹಲವಾರು ಬೇಟೆಯ ಪ್ರಸಂಗಗಳಲ್ಲಿ ಬಳಕೆಯಾಗಿದ್ದಿರಬಹುದೆನಿಸುತ್ತದೆ.



ನಿಲುವುಗಲ್ಲು, ಬುಕ್ಕಾಪುರ (ತೀರ್ಥಹಳ್ಳಿ ತಾ||)

* ನಂ. ೩೯೩೬, ೨ನೇ ಹಂತ, 'ಬಿ' ಬ್ಲಾಕ್, ೨ನೇ ಅಡ್ಡರಸ್ತೆ, ಗಾಯತ್ರಿನಗರ, ಬೆಂಗಳೂರು-೫೬೦ ೦೨೧.

ಮೂರನೆಯ ಕೊಡಲಿಯು, ೫.೫ ಸೆಂ.ಮೀ. ಅಗಲ ಹಾಗೂ ೭.೦ ಸೆಂ.ಮೀ. ಉದ್ದವಾಗಿದ್ದು ಇದರ ಹಿಂಭಾಗವೂ ತುಂಡಾಗಿದೆ. ಈ ಕೊಡಲಿಯೂ ಹೆಚ್ಚಾಗಿ ಬಳಕೆಯಾಗಿರುವಂತೆ ಕಂಡುಬರುತ್ತದೆ.

ನಾಲ್ಕನೆಯ ಕೊಡಲಿಯು ಒಂದು ಕೊಡಲಿಯ ಹಿಂಭಾಗ ಮಾತ್ರವಾಗಿದ್ದು, ಮುಂಭಾಗ ಮುರಿದು ಹೋಗಿದ್ದು ಅದು ಉಪಲಬ್ಧವಾಗಿಲ್ಲ. ಈ ತುಂಡು ಮೊದಲು ಹೇಳಿದ ಎರಡು ಕೊಡಲಿಗಳಲ್ಲಿ ಯಾವುದಕ್ಕೂ ಸೇರದ ಬೇರೊಂದು ಕೊಡಲಿಯ ಭಾಗವಾಗಿದೆ. ಇದು ೮.೦ ಸೆಂ.ಮೀ. ಉದ್ದ, ೫.೫ ಸೆಂ.ಮೀ. ಅಗಲವಾಗಿದೆ.



ಕೊಡಲಿ ಮೇಳಿಗ, ತೀರ್ಥಹಳ್ಳಿ



ಕೊಡಲಿಗಳು ಮೇಳಿಗ, ತೀರ್ಥಹಳ್ಳಿ ತಾ॥

ಶಿಲಾಯುಧಗಳು ದೊರೆತ ಸ್ಥಳದ ಸುತ್ತಮುತ್ತಲಿನ ಪ್ರದೇಶವನ್ನೆಲ್ಲಾ ಸೂಕ್ಷ್ಮವಾಗಿ ಪರಿಶೀಲಿಸಿದರೂ ಸಹ ನವಶಿಲಾಯುಗಕ್ಕೆ ಸೇರಿದ ಮತ್ತಾವುದೇ ಅವಶೇಷಗಳು ದೊರೆಯಲಿಲ್ಲ. ನವಶಿಲಾಯುಗದ ಜನರ ನೆಲೆಗಳ ಸನಿಹದಲ್ಲಿ ಬೃಹದಾಕಾರದ ಬೂದಿಯ ಗುಡ್ಡೆಗಳು ದೊರೆಯುವುದು ಸಾಮಾನ್ಯ ಸಂಗತಿ. ಆದರೆ ಪ್ರಸ್ತುತ ನಿವೇಶನದಲ್ಲಿ ಯಾವುದೇ ಬೂದಿಯ ಗುಡ್ಡೆಗಳೂ ಸಹ ದೊರೆಯದಿರುವುದು ಆಶ್ಚರ್ಯದ ಸಂಗತಿ. ಈ ಪ್ರದೇಶದಲ್ಲಿ ಆಯುಧಗಳು ದೊರೆತ ಸ್ಥಳದಲ್ಲಿ ಈಗಲೂ ಅರಣ್ಯವಿದೆ. ಇಲ್ಲಿ ಕಾಡುಹಂದಿ, ಹುಲಿ, ಕಾಡುಕುರಿ ಮುಂತಾದ ಪ್ರಾಣಿಗಳಿವೆ. ಇಲ್ಲಿಂದ ಒಂದು ಫರ್ಲಾಂಗ್ ದೂರದಲ್ಲಿ ಸಣ್ಣ ನದಿಯೊಂದು ಹರಿಯುತ್ತದೆ. ಬಹುಶಃ ನವಶಿಲಾಯುಗದ ಜನರು ಇಲ್ಲಿ ವಿಪುಲವಾಗಿ ದೊರೆಯುತ್ತಿದ್ದ ಪ್ರಾಣಿಗಳನ್ನು ಬೇಟೆಯಾಡಿ ಆಹಾರಕ್ಕೋಸ್ಕರ ಬಳಸುತ್ತಿದ್ದರೆಂದು ಊಹಿಸಬಹುದು.

### ಬೃಹತ್ ಶಿಲಾಯುಗದ ನೆಲೆ

ನವಶಿಲಾ-ತಾಮ್ರ ಶಿಲಾಯುಗಗಳ ನಂತರದ ಕಾಲದಲ್ಲಿ ಕಬ್ಬಿಣದ ಆವಿಷ್ಕಾರವಾಗಿ ಕಬ್ಬಿಣದ ಆಯುಧಗಳು ಬಳಕೆಗೆ ಬಂದು ಕಲ್ಲಿನ ಆಯುಧಗಳ ಬಳಕೆ ನಿಂತಿತು. ಇದು ಬೃಹತ್ ಶಿಲಾಯುಗವಾಗಿದ್ದು ಈ ಯುಗವನ್ನು ಕಬ್ಬಿಣಯುಗವೆಂದೂ ಕರೆಯಲಾಗಿದೆ.

ಬೃಹತ್ ಶಿಲಾ ಸಮಾಧಿಗಳನ್ನು ಕಟ್ಟಲು ಕಲ್ಲೇ ಪ್ರಧಾನವಾಗಿದ್ದರಿಂದ ಈ ಎಲ್ಲಾ ಸೌಕರ್ಯವಿರುವ ಬೆಟ್ಟ ಗುಡ್ಡಗಳ ಬದಿಯ ಪ್ರದೇಶವನ್ನು ಈ ಯುಗದ ಜನರು ಆರಿಸಿಕೊಳ್ಳುತ್ತಿದ್ದರು. ಕೃಷಿ ಉಪಕರಣಗಳು ಹಾಗೂ ಆಯುಧಗಳನ್ನು ಕಬ್ಬಿಣದಿಂದ ಮಾಡಿ ಬಳಸುತ್ತಿದ್ದರು. ನಿಸರ್ಗದತ್ತವಾದ ಕಬ್ಬಿಣದ ಅದಿರನ್ನು ಕರಗಿಸಿ ಆಯುಧಗಳನ್ನು ಮಾಡಿಕೊಳ್ಳುವ ತಾಂತ್ರಿಕತೆ ಇವರಲ್ಲಿತ್ತು ಎಂಬುದಕ್ಕೆ ಬೇರೆ ಬೇರೆ ಕಡೆ ನಿವೇಶನಗಳಲ್ಲಿ ದೊರೆತ ಕಬ್ಬಿಣ ವಸ್ತುಗಳೇ ಸಾಕ್ಷಿಯಾಗಿವೆ.

ಇವರ ಸಮಾಧಿಗಳುಳ್ಳ ಹಲವಾರು ನಿವೇಶನಗಳು ದೊರೆತಿದ್ದರೂ ಸಹ ಇವರ 'ನಿವಾಸ'ಗಳುಳ್ಳ ನಿವೇಶನಗಳು ಬೆರಳೆಣಿಕೆಯಷ್ಟು ಮಾತ್ರ ದೊರಕಿವೆ. ಅವರ ವಾಸದ ಮನೆಗಳು ಸರಳವಾಗಿದ್ದು, ಮಣ್ಣು ಮೆತ್ತಿದ, ಹಣೆದ ದಬ್ಬೆ ಗೋಡೆ, ಹುಲ್ಲುಕಡ್ಡಿ ಮಾಡು, ಬೇಗ ನಶಿಸಿ ಹೋಗುವಂತಹ ವಸ್ತುಗಳಿಂದ ಕಟ್ಟಲಾಗಿತ್ತೆಂದು ಭಾವಿಸಲಾಗಿದೆ.

ಬೃಹತ್ ಶಿಲಾಯುಗದ ನಿವೇಶನಗಳಲ್ಲಿ ನಮಗೆ ಪ್ರಮುಖವಾಗಿ ದೊರೆಯುವ ಅವಶೇಷಗಳೆಂದರೆ ಅವರ ಸಮಾಧಿಗಳು. ಬೃಹತ್ ಶಿಲಾಯುಗದ ಜನರ ಸಮಾಧಿಗಳ ಹೆಗ್ಗುರುತು ಎಂದರೆ, ಇವರ ಸಮಾಧಿಗಳ ಸುತ್ತಲೂ ಕಲ್ಲುಗಳಿಂದ ಒಂದು ಅಥವಾ ೨-೩ ವೃತ್ತಗಳಿರುತ್ತವೆ. ಈ ವೃತ್ತಗಳನ್ನು ಚಪ್ಪಡಿ ಚೂರು, ಅಥವಾ ಕಾಡುಗಲ್ಲು (ಉರುಟುಗಲ್ಲು) ಸಿಕ್ಕಿದ್ದನ್ನು ಇದ್ದಂತೆಯೇ ತಂದು ನಿರ್ಮಿಸಿದ್ದಾಗಿರಬಹುದು.

ತೀರ್ಥಹಳ್ಳಿ ತಾಲ್ಲೂಕು ಕಸಬಾ ಹೋಬಳಿಯ ಬುಕ್ಲಾಪುರ ಗ್ರಾಮದ ಹೊರಬೈಲು ಗುಡ್ಡದ ತಪ್ಪಲಿನಲ್ಲಿ ಬೃಹತ್ ಶಿಲಾಯುಗಕ್ಕೆ ಸೇರಿದ ಒಂದು ನಿವೇಶನ ಪತ್ತೆ ಹಚ್ಚಿದ್ದೇನೆ. ಇಲ್ಲಿ ಶಿಲಾ ವೃತ್ತಗಳುಳ್ಳ ೧೫ ಸಮಾಧಿಗಳು ಮತ್ತು ಒಂದು ನಿಲವುಗಲ್ಲು (ಮೆನ್‌ಹಿರ್) ಇದೆ.

ಈ ಸಮಾಧಿಗಳು ಶಿಲಾವೃತ್ತಗಳಿಂದ ಕೂಡಿದ ಕಣಶಿಲೆಯ ಕೋಣೆ ಗೋರಿಗಳಾಗಿವೆ. ಕಣಶಿಲೆಯ ಚಪ್ಪಡಿಗಳನ್ನು ಸ್ವಸ್ತಿಕಾಕಾರದಲ್ಲಿ ಕೋಣೆಯಂತೆ ನಿರ್ಮಿಸಿ, ಕೆಳಗೆ ಮತ್ತು ಮೇಲ್ಭಾಗದಲ್ಲಿ ದೊಡ್ಡ ಚಪ್ಪಡಿಯಿಂದ ಮುಚ್ಚಿ ಈ ಗೋರಿಗಳನ್ನು ನಿರ್ಮಿಸಲಾಗಿದೆ. ಸುತ್ತಲೂ ಮಣ್ಣು ಮುಚ್ಚಿಕೊಂಡಿರುವುದರಿಂದ ಇವುಗಳಲ್ಲಿರುವ ರಂಧ್ರ ಅಥವಾ ಹಾದಿಯು ಕಂಡುಬರುವುದಿಲ್ಲ.

ಈ ಗೋರಿಗಳಲ್ಲಿ ಕೆಲವುಗಳ ಸುತ್ತಲೂ ಉರುಟು (ಕಾಡುಗಲ್ಲು) ಕಲ್ಲುಗಳಿಂದ ನಿರ್ಮಿಸಿದ ಶಿಲಾವೃತ್ತಗಳಿದ್ದು ಈ ವೃತ್ತಗಳು ೧೫ ಅಡಿಗಳಿಂದ ೨೦ ಅಡಿಗಳಷ್ಟು ವಿಸ್ತಾರವಾಗಿವೆ. ಎಲ್ಲಾ ಗೋರಿಗಳ ಮೇಲ್ಭಾಗದಲ್ಲಿಯೂ ಮುಚ್ಚಳದ ಕಲ್ಲುಗಳು ಇವೆ. ಇವುಗಳಲ್ಲಿ ಸುಮಾರು ೧೦ ಗೋರಿಗಳು ಸಂಪೂರ್ಣವಾಗಿ ಹಾಳಾಗಿದ್ದು ಕೋಣೆಯಾಕಾರದ ಚಪ್ಪಡಿಗಳು ಹಾಗೂ ಶಿಲಾವೃತ್ತಗಳು ಮಾತ್ರ ಉಳಿದಿವೆ. ಉಳಿದವುಗಳು ಯಾವುದೇ ರೀತಿಯ ಹಾನಿಗೊಳಗಾಗದಂತೆ ಇವೆ.




ಕೊಡಲಿಗಳು, ಮೇಳಿಗೆ, ತೀರ್ಥಹಳ್ಳಿ ತಾ||

ಈ ಪ್ರದೇಶದಲ್ಲಿ ಸರ್ಕಾರದ ತೋಟಗಾರಿಕಾ ಇಲಾಖೆಯವರ ಫಾರ್ಮ್ ಇದೆ. ಅವರು ತೆಂಗು ಮತ್ತು ಹಣ್ಣಿನ ಗಿಡಗಳನ್ನು ನೆಡುವುದಕ್ಕೋಸ್ಕರ ಹಲವಾರು ಸಮಾಧಿಗಳನ್ನು ಅಗೆದು ಹಾಳು ಮಾಡಿದ್ದಾರೆ. ಈ ಸಮಾಧಿಗಳ ಬಳಿಯಲ್ಲಿಯೇ ೧೦ ಅಡಿ ಎತ್ತರ, ೪ ಅಡಿ ೪ ಅಂಗುಲ ಅಗಲದ ಒಂದು ನಿಲವುಗಲ್ಲು ಇದೆ. ಕಪ್ಪು ಕಣಶಿಲೆಯ ಈ ನಿಲವುಗಲ್ಲು ಕೆಳಭಾಗದಲ್ಲಿ ಅಗಲವಾಗಿದ್ದು ಮೇಲ್ಭಾಗದಲ್ಲಿ ಕಿರಿದಾಗಿದೆ. ಬೃಹತ್ ಶಿಲಾಯುಗದ ಜನರು ತಮ್ಮ ಜನರ ಸಮಾಧಿಗಳ ಬಳಿಯಲ್ಲಿ ಈ ರೀತಿಯ ನಿಲವುಗಲ್ಲುಗಳನ್ನು ನಿಲ್ಲಿಸುತ್ತಿದ್ದ ಸಂಗತಿ ತಿಳಿದಿದೆ. ಈ ನಿವೇಶನದ ಬಳಿಯಲ್ಲಿಯೇ ಸುಮಾರು ೧೦೦ ಅಡಿ ದೂರದಲ್ಲಿ ತುಂಗಾನದಿಯು ಹರಿಯುತ್ತದೆ.

ಈ ಪ್ರದೇಶದಲ್ಲಿ ದೊರೆತಿರುವ ನವಶಿಲಾಯುಗ ಹಾಗೂ ಬೃಹತ್ ಶಿಲಾಯುಗದ ಅವಶೇಷಗಳನ್ನು ಗಮನಿಸಿದರೆ ಅಂದಿನಿಂದಲೂ ಇಲ್ಲಿ ಜನರು ವಾಸಿಸುತ್ತಿದ್ದರೆಂದು ಹೇಳಬಹುದಾಗಿದೆ.

## ಗ್ರಂಥಋಣ


ಕರ್ನಾಟಕ ಕನ್ನಡ ವಿಷಯ ವಿಶ್ವಕೋಶ, ಮೈಸೂರು ವಿಶ್ವವಿದ್ಯಾಲಯ, ೧೯೭೯.

ಎಂ. ಜಿ. ಮಂಜುನಾಥ್., ಇತ್ತೀಚೆಗೆ ಪತ್ತೆಯಾದ ಬೃಹತ್ ಶಿಲಾಯುಗದ ನಿವೇಶನಗಳು : ಸಾಧನೆ, ಸಂಪುಟ ೨೩, ಸಂಚಿಕೆ ೧-೨, ಬೆಂಗಳೂರು, ವಿ.ವಿ. ೧೯೯೪.


(ಕ್ಷೇತ್ರಕಾರ್ಯ ಮತ್ತು ಲೇಖನ ಸಿದ್ಧಪಡಿಸಲು ಸಹಾಯ ಮಾಡಿದ ರಘುವೀರ ಹೆಗಡೆ, ಎಂ. ಎನ್. ಸುಬ್ರಮಣ್ಯ ಮತ್ತು ಎಂ. ಜಿ. ಮಂಜುನಾಥ್‌ರವರಿಗೆ ಕೃತಜ್ಞತೆಗಳು).

ಆರ್. ವೆಂಕಟೇಶಮೂರ್ತಿ *

# ಅರಸೀಕೆರೆ ಪರಿಸರದ ಬೃಹತ್ ಶಿಲಾಯುಗದ ನೆಲೆಗಳು : ಒಂದು ಶೋಧ

ಹಾಸನ ಜಿಲ್ಲೆಯ ಅರಸೀಕೆರೆ ತಾಲ್ಲೂಕು, ಪ್ರಾಚೀನ ಸ್ಮಾರಕಗಳನ್ನು ಹೊಂದಿ ಈಗಾಗಲೇ ಪ್ರಾಮುಖ್ಯತೆಯನ್ನು ಪಡೆದಿದೆ. ಈ ತಾಲ್ಲೂಕಿನ ಶಾಸನಗಳ ಪುನರ್ ಪರಿಶೀಲನೆಗೆಂದು ಕ್ಷೇತ್ರಕಾರ್ಯ ಕೈಗೊಂಡಾಗ[1] ಕಲ್ಲು ಗೋರಿಗಳು ಮತ್ತು ನಿಲುವುಗಲ್ಲುಗಳುಳ್ಳ ಪ್ರಾಗೈತಿಹಾಸಿಕ ನೆಲೆಗಳು ಪತ್ತೆಯಾದವು.

### ಕಲ್ಲುಗೋರಿಗಳು

ಅರಸೀಕೆರೆ ತಾಲ್ಲೂಕಿಗೆ ಸೇರಿದ ತಳಲೂರು ಗ್ರಾಮವು ಚನ್ನರಾಯಪಟ್ಟಣ ರಸ್ತೆಯಲ್ಲಿ ೬ ಕಿ.ಮೀ. ದೂರದಲ್ಲಿದೆ. ಗ್ರಾಮದ ಆರಂಭದಲ್ಲಿಯೇ ವಾಸವಾಗಿರುವ ಶ್ರೀಯುತ ಈಶ್ವರಪ್ಪನವರ ಮನೆಯ ಪಕ್ಕದಲ್ಲಿ ಅವರದೇ ಆದ ಜಮೀನಿನಲ್ಲಿ ಮಣ್ಣನ್ನು ಅಗೆಯುವಾಗ ಕೆಂಪು ಮತ್ತು ಕಪ್ಪು ಬಣ್ಣದ ಮಡಕೆ ಚೂರುಗಳು ದೊರೆತಿದ್ದ (ಇದೇ ಸಂದರ್ಭದಲ್ಲಿ ಉತ್ತಮ ಸ್ಥಿತಿಯಲ್ಲಿರುವ ೭೭ ಸೆಂ. ಮೀ. ಉದ್ದ ಮತ್ತು ೩೧ ಸೆಂ. ಮೀ. ಅಗಲವುಳ್ಳ ಮಹಿಷ ಮರ್ದಿನಿ ಶಿಲ್ಪವೂ ದೊರೆತಿದೆ) ವಿಷಯ ತಿಳಿದು, ಸ್ಥಳ ಪರಿಶೀಲನೆ ಮಾಡಿದಾಗ ಸಣ್ಣ ಸಣ್ಣ ಕೆಂಪು, ಕಪ್ಪು ಮಡಕೆ ಚೂರುಗಳು ಕಂಡುಬಂದವು. ಈ ಸೂಚನೆಯ ಮೇರೆಗೆ ವಿಚಾರಿಸಲಾಗಿ ಈ ಸ್ಥಳದಿಂದ ಅರ್ಧ ಕಿ.ಮೀ. ದೂರದಲ್ಲಿ ಈಗ ಗುರುತಿಸಲಾಗಿರುವ ಬೃಹತ್ ಶಿಲಾಯುಗದ ನಿವೇಶನ ಪತ್ತೆಯಾಯಿತು.

ಈ ನಿವೇಶನದ ಮಾಲೀಕರಾದ ಶ್ರೀಯುತ ಜಗನ್ನಾಥ್‌ರವರು ಇದೇ ಗ್ರಾಮದ ನಿವಾಸಿ. ಇವರು ತಮ್ಮ ತೋಟಕ್ಕೆ ಇಲ್ಲಿಂದ ಮಣ್ಣನ್ನು ಹೊಡೆಸುವಾಗ ಪೂರ್ಣ ಆಕಾರದಲ್ಲಿದ್ದ ಹಿಡಿಯಿರುವ ಮಡಕೆ, ಅಗಲ ಬಾಯಿರುವ ಮಡಕೆಗಳು, ಕಬ್ಬಿಣದ ಆಯುಧಗಳು ಮತ್ತು ಒರಳುಕಲ್ಲು ಮುಂತಾದ ವಸ್ತುಗಳು ದೊರೆತವಂತೆ. ತುಕ್ಕು ಹಿಡಿದಿದ್ದ ಕಬ್ಬಿಣದ ಆಯುಧವೊಂದನ್ನು ತಮ್ಮ ನೇಗಿಲಿಗೆ 'ಗುಳ' (ತುಕ್ಕನ್ನು ತೆಗೆದು ಮೂಲ ರೂಪವನ್ನು ಕೆಡಿಸಲಾಗಿದೆ)ವನ್ನಾಗಿ ಮಾಡಿಕೊಂಡಿದ್ದಾರೆ. ದೊರೆತ ವಸ್ತುಗಳ ಪ್ರಾಮುಖ್ಯತೆಯ ಅರಿವಿಲ್ಲದೆ ಇದ್ದುದರಿಂದ ಅವುಗಳೆಲ್ಲವನ್ನೂ ಎಸೆಯಲಾಗಿ ಅವುಗಳು ದನ ಕಾಯುವ ಹುಡುಗರಿಂದ ನಾಶವಾಗಿದೆ ಎಂದು ಶ್ರೀಯುತರಿಂದ ತಿಳಿಯಿತು.



ಹುಳಿಯಾರು ರಸ್ತೆಯಲ್ಲಿ ಬೊಮ್ಮನಹಳ್ಳಿ ಬಳಿ ಹೊಲವೊಂದರಲ್ಲಿರುವ ನಿಲುವುಗಲ್ಲು

* 'ನವಸುಮ' ನಂ. ೨೭/೧, ೨೩ನೇ ಮುಖ್ಯರಸ್ತೆ, ೫೦ ಅಡಿ ರಸ್ತೆ, ಮುನೇಶ್ವರ ಬ್ಲಾಕ್, ಬೆಂಗಳೂರು-೫೬೦ ೦೭೫.

1 ಈ ಕ್ಷೇತ್ರಕಾರ್ಯಕ್ಕೆ ಅವಕಾಶ ಕಲ್ಪಿಸಿಕೊಟ್ಟ ಶ್ರೀಮತಿ ಕೆ. ವಸಂತಲಕ್ಷ್ಮಿಯವರಿಗೆ ಮತ್ತು ಕ್ಷೇತ್ರ ಕಾರ್ಯದುದ್ದಕ್ಕೂ ನಮ್ಮೊಡನೆ ಸಹಕರಿಸಿದ ತಳಲೂರಿನ ಶ್ರೀ ಸದಾಶಿವಯ್ಯ, ಚರಿತ್ರೆ ಉಪನ್ಯಾಸಕರು, ಇವರಿಗೆ ನನ್ನ ಕೃತಜ್ಞತೆಗಳು.

ಈ ಸಂದರ್ಭದಲ್ಲಿ ಗೋರಿಗಳಿಗೆ ಉಪಯೋಗಿಸಿದ್ದ ಕಲ್ಲು ಚಪ್ಪಡಿಗಳನ್ನು ಟ್ರ್ಯಾಕ್ಟರ್‌ನಲ್ಲಿ ಸುಮಾರು ೩-೪ ಬಾರಿ ಭರ್ತಿಯಾಗಿ ಸಾಗಿಸಿ ಸುಮಾರು ೨ ಕಿ.ಮೀ. ದೂರದಲ್ಲಿರುವ ಕಾಲುವೆಗೆ ಅಕ್ಕ ಪಕ್ಕದ ಗೋಡೆ ಮತ್ತು ಸೇತುವೆಯನ್ನು ಕಟ್ಟಲು ಉಪಯೋಗಿಸಿಕೊಳ್ಳಲಾಗಿದೆ. ಇದಕ್ಕಾಗಿ ಸುಮಾರು ೧೦-೧೫ ಸಮಾಧಿಗಳು ನಾಶವಾಗಿರುವ ಸಾಧ್ಯತೆಗಳಿವೆ. ಅಗೆದಿರುವ ಮಣ್ಣು ಗೋಡೆ ಎಂದರೆ ಸುಮಾರು ೧೨೫ ರಿಂದ ೧೩೦ ಅಡಿಗಳಷ್ಟು ಉದ್ದ, ಸುಮಾರು ೮೦ ಅಡಿಗಳಷ್ಟು ಅಗಲ ಹಾಗೂ ೪½-೫ ಅಡಿಗಳಷ್ಟು ಆಳವಾಗಿರುವ ಇಲ್ಲಿ ಮಡಕೆ-ಆಕಾರದ ಗುರುತುಗಳು, ಮಡಕೆ ಚೂರುಗಳು ಹಾಗೂ ಮೂಳೆಗಳು ಅಂಟಿಕೊಂಡಿರುವುದು ಕಂಡುಬರುತ್ತದೆ.

ಈ ನಿವೇಶನದಲ್ಲಿ ಸಧ್ಯಕ್ಕೆ ಗೋಚರಿಸುವುದು ಕೇವಲ ಮೂರು ಸಮಾಧಿಗಳು ಮಾತ್ರ. ಇವು ಸುಮಾರು ೧½-೨ ಅಡಿಗಳಷ್ಟು ಹೊರಗೆ ಕಾಣುತ್ತಿದ್ದು ಉಳಿದ ಭಾಗ ಮಣ್ಣಿನಲ್ಲಿ ಸೇರಿಕೊಂಡಿದೆ.

ಕ್ಷೇತ್ರಕಾರ್ಯದ ಸಂದರ್ಭದಲ್ಲಿ ದೊರೆತ ವಸ್ತುಗಳೆಂದರೆ : ೧) ಕೆಂಪು-ಕಪ್ಪು ಬಣ್ಣದ ಮಡಕೆ ಚೂರುಗಳು, ೨) ಉಗುರಿನಿಂದ ಚಿತ್ತಾರ ಮಾಡಿರುವ ಕೆಂಪು ಮಡಕೆ ಚೂರು, ೩) ಸಣ್ಣ ಬಾಯಿ ಇರುವ ಪುಟ್ಟದಾದ ಕುಡಿಕೆ, ೪) ಬೂದಿ ಅಂಟಿಕೊಂಡಿರುವ ಮಧ್ಯಮ ದಪ್ಪದ ಕೆಂಪು ಬಣ್ಣದ ಮಡಕೆಯ ಕಾಲು ಭಾಗ, ೫) ಒರಳು ಕಲ್ಲಿನಲ್ಲಿ ವಸ್ತುಗಳನ್ನು ಕುಟ್ಟುವ ಅಥವಾ ಅರೆಯುವ ಕಲ್ಲು,[2] ೬) ಪ್ರಾಯಶಃ ಮಡಕೆಯ ಮೇಲ್ಭಾಗವನ್ನು ನುಣುಪುಗೊಳಿಸಲು ಉಪಯೋಗಿಸುತ್ತಿದ್ದರೆಂದು ಭಾವಿಸಬಹುದಾದ ಒಂದು ನುಣುಪು ಕಲ್ಲು.

ಪ್ರಾಚ್ಯ ವಸ್ತು ಇಲಾಖೆಯವರಿಂದ ಮತ್ತು ಅನೇಕ ವಿದ್ವಾಂಸರುಗಳಿಂದ ಈಗಾಗಲೇ ಶೋಧಗೊಂಡಿರುವ ಬೃಹತ್ ಶಿಲಾಯುಗದ ನೆಲೆಗಳಲ್ಲಿ ಕಂಡು ಬಂದಿರುವಂಥ ಕಲ್ಲು ಗೋರಿಗಳು ಮತ್ತು ವಸ್ತುಗಳು ದೊರಕಿರುವುದರಿಂದ ಈ ತಳಲೂರಿನ ಸಮಾಧಿಗಳನ್ನು ಸುಮಾರು ಕ್ರಿ.ಪೂ. ೫೦೦ರ ಕಾಲವೆಂದು ಪರಿಗಣಿಸಬಹುದಾಗಿದೆ.

ಈ ನಿವೇಶನದ ಆಸುಪಾಸಿನ ಸುಮಾರು ೧-೧½ ಕಿ.ಮೀ. ಸುತ್ತಳತೆಯಲ್ಲಿ ಉತ್ಖನನ ನಡೆಸಿದರೆ ಮಣ್ಣಿನಿಂದ ಆವೃತಗೊಂಡಿರಬಹುದಾದ ಕಲ್ಲು ಗೋರಿಗಳು ಕಂಡುಬರುವ ಸಾಧ್ಯತೆಗಳಿವೆ.



ತಳಲೂರಿನ ಬೃಹತ್ ಶಿಲಾಯುಗದ ನೆಲೆ

## ನಿಲುವುಗಲ್ಲುಗಳು

ಈ ತಾಲ್ಲೂಕಿನಲ್ಲಿ ಕಲ್ಲುಗೋರಿಗಳಲ್ಲದೆ, ನಿಲುವುಗಲ್ಲುಗಳೂ ಸಹ ಗೋಚರಿಸಿವೆ. ಒಟ್ಟು ೧೦ ನಿಲುವುಗಲ್ಲುಗಳು ಕಣ್ಗೋಚರವಿದ್ದು, ಅರಸೀಕೆರೆ, ಹುಳಿಯಾರು ರಸ್ತೆಯಲ್ಲಿ ಬೊಮ್ಮೇನಹಳ್ಳಿಯಿಂದ ಹಿಂದಕ್ಕೆ ೩ ಕಿ.ಮೀ. ಕಲ್ಲಿನ ಬಳಿ ಹೊಲವೊಂದರಲ್ಲಿ ಸುಮಾರು ಎಂಟು ನಿಲುವುಗಲ್ಲುಗಳಿವೆ. ಇವುಗಳಲ್ಲಿ ನಾಲ್ಕು ಮುರಿದಿದ್ದು ಉಳಿದ ಮೂರು, ೪ ರಿಂದ ೫ ಅಡಿಗಳಷ್ಟು ಎತ್ತರವನ್ನು ಹೊಂದಿವೆ. ಆದರೆ ಒಂದು ನಿಲುವುಗಲ್ಲು ತುದಿಯಲ್ಲಿನ ಸ್ವಲ್ಪ ಭಾಗದ ಮುರಿಕೆಯೊಂದಿಗೆ ಭೂಭಾಗದ ಮೇಲ್ಮಟ್ಟದಿಂದ ಸುಮಾರು ೨೧ ಅಡಿ ಉದ್ದ, ೫ ಅಡಿ ೮ ಅಂಗುಲ ಅಗಲವನ್ನು ಹೊಂದಿದೆ. ಇದರ ದಪ್ಪ ಸುಮಾರು ೧½ ಅಡಿಯಿಂದ ಆರಂಭವಾಗಿ ತುದಿಯಲ್ಲಿ ½ ಅಡಿಯಷ್ಟಿದೆ. ಅಂತೆಯೇ ಮಾಲೆಕಲ್‌ತಿರುಪತಿ ಮಾರ್ಗದಲ್ಲಿರುವ ಎರಡು ನಿಲುವುಗಲ್ಲುಗಳು ಸುಮಾರು ೪-೫ ಅಡಿಗಳಷ್ಟು ಎತ್ತರದ್ದಾಗಿವೆ.

ಸುತ್ತಲೂ ಬೆಟ್ಟಗುಡ್ಡಗಳು ಹಾಗೂ ಜಲವಸತಿಯನ್ನು ಹೊಂದಿರುವ ಅರಸೀಕೆರೆ ಪ್ರದೇಶವನ್ನು, ಶೋಧಗೊಂಡಿರುವ ಹೆಚ್ಚಿನ ಸಂಖ್ಯೆಯ ಕಲ್ಲುಗೋರಿಗಳು ಮತ್ತು ನಿಲುವುಗಲ್ಲುಗಳ ಹಿನ್ನೆಲೆಯಲ್ಲಿ ಗಮನಿಸಿದಾಗ ಈ ಪ್ರದೇಶವು ಹಿಂದೆ ಬೃಹತ್ ಶಿಲಾಯುಗದ ಜನರ ಶಾಶ್ವತ ನೆಲೆಯಾಗಿತ್ತು ಎಂದು ಊಹಿಸಬಹುದಾಗಿದೆ. ○

2 ಇಂತಹುದೇ ವಸ್ತುಗಳು ಕಣ್ಣೂರು ಮತ್ತು ಓಡಿಗೇನಹಳ್ಳಿ ನಿವೇಶನಗಳಲ್ಲಿಯೂ ದೊರೆತಿವೆ.

ಮುತ್ತುರಾಜು *

# ಕನಕಪುರ ತಾಲೂಕಿನ ಕೆಲವು ಬೃಹತ್ ಶಿಲಾಯುಗದ ಶಿಲಾಗೋರಿಗಳು - ಹೊಸ ಶೋಧನೆ

ಬೆಂಗಳೂರು ಗ್ರಾಮಾಂತರ ಜಿಲ್ಲೆಯ ೮ ತಾಲೂಕುಗಳಲ್ಲಿ ಒಂದಾದ ಕನಕಪುರ ತಾಲೂಕಿನ ವಿವಿಧೆಡೆಗಳಲ್ಲಿ ಪ್ರಾಗೈತಿಹಾಸಿಕ ಕಾಲದ ಅನ್ವೇಷಣೆ, ಅಧ್ಯಯನ, ವಿಶ್ಲೇಷಣೆಗಳು ನಡೆದಿಲ್ಲವೆಂದೇ ಹೇಳಬೇಕು. ಈ ಜಿಲ್ಲೆಯ ಮತ್ತು ಬೆಂಗಳೂರು ನಗರ ಜಿಲ್ಲೆಯ ಇತರ ಭಾಗಗಳಾದ ಜಡಿಗೇನಹಳ್ಳಿ (ಹೊಸಕೋಟೆ ತಾಲೂಕು), ಸಾವನದುರ್ಗ (ಮಾಗಡಿ ತಾಲೂಕು), ಚಿಕ್ಕಜಾಲ (ಬೆಂಗಳೂರು ಉತ್ತರ ತಾಲೂಕು), ಬನವಳ್ಳಿ (ಚನ್ನಪಟ್ಟಣ ತಾಲೂಕು) ಇವುಗಳಲ್ಲಿ ಶಾಸ್ತ್ರೀಯ ರೀತಿಯಲ್ಲಿ ತಕ್ಕಮಟ್ಟಿನ ಉತ್ಖನನಗಳು ನಡೆದಿವೆ. ಈ ಜಿಲ್ಲೆಯಲ್ಲಿ ಇನ್ನೂ ಹಲವಾರು ಕಡೆಗಳಲ್ಲಿ ಪ್ರಾಗೈತಿಹಾಸಿಕ ಕುರುಹುಗಳು, ವಿವಿಧ ಬಗೆಯ ಉಪಕರಣಗಳು ದೊರೆತಿವೆ.

ಕನಕಪುರ ತಾಲೂಕು ಹಲವಾರು ಬೆಟ್ಟಗಳನ್ನು ಅಪಾರ ಸಂಖ್ಯೆಯ ಗವಿಗಳನ್ನು, ದಟ್ಟ ಅರಣ್ಯವನ್ನು ಹೊಂದಿದೆ. ಅಲಸೂರಿನ ಬಳಿಯ ಸೂಳೇಕಲ್ಲು ಮಠದಲ್ಲಿ ಗವಿಚಿತ್ರಗಳು ಇತ್ತೀಚೆಗಷ್ಟೆ ಪತ್ತೆಯಾಯಿತು.[1] ಇದೇ ತಾಲೂಕಿನ ಗೊಟ್ಟಿಗೆಹಳ್ಳಿಯಲ್ಲಿ ಸುಮಾರು ೩೦೦ ಶಿಲಾ ಗೋರಿಗಳು (ಸಿಸ್ಟ್ ಚೇಂಬರ್ಸ್) ಪತ್ತೆಯಾಗಿವೆ.[2]

ಈ ತಾಲೂಕಿನ ಇತರೆಡೆಗಳಾದ ಗದ್ದೆಮಡಿನಕ್ಕಲು, ಬಂಡೆಗುಡಿ, ತಿಗಳರಹೊಸಳ್ಳಿ, ಮರಳೇಗವಿಮಠ. ಸಂಬೇಗೌಡನದೊಡ್ಡಿ, ಮತ್ತು ಕುಪ್ಪೆದೊಡ್ಡಿಯಲ್ಲಿ ಪ್ರಾಗೈತಿಹಾಸಿಕ ಕಾಲದ ಮಾನವರು ನೆಲಸಿದ್ದರೆಂಬುದಕ್ಕೆ ಬೃಹತ್ ಶಿಲಾಯುಗಕ್ಕೆ ಸೇರುವಂತಹ (ಕಾಲ ಕ್ರಿ.ಪೂ. ಸು. ೮೦೦ ರ) ವಿವಿಧ ಅಳತೆಯ, ವಿವಿಧ ವಿನ್ಯಾಸದ, ವಿವಿಧ ಬಗೆಯ ಶಿಲಾವೃತ್ತಗಳು ಕಂಡುಬಂದಿವೆ.

ಗದ್ದೇಮಡಿನಕ್ಕಲು, ಸಾತನೂರಿನಿಂದ ಪಾದ್ವಾರೆ ಮಾರ್ಗವಾಗಿ ಮುತ್ತತ್ತಿಗೆ ಹೋಗುವ ಮಾರ್ಗದಲ್ಲಿ ೧೧ ಕಿ.ಮೀ. ದೂರದಲ್ಲಿದೆ. ಇಲ್ಲಿ ಬೃಹತ್ ಶಿಲಾಯುಗಕ್ಕೆ ಸೇರುವಂಥ ೧೦ ಶಿಲಾಗೋರಿಗಳ ವೃತ್ತಗಳಿವೆ. ಇವುಗಳನ್ನು ಜನರು ನೆಲಮೋರಿಗಳು ಎಂದು ಕರೆಯುತ್ತಾರೆ. ಅಲ್ಲದೇ ಪಾಂಡವರು ವಾಸಿಸುವ ಜಾಗ ಇದೆಂತಲೂ ನಂಬಿದ್ದಾರೆ. ಅವರು ಹಿಂದೊಮ್ಮೆ ಶಿಲಾಸಮಾಧಿಯೊಂದನ್ನು ಅಗೆದಿದ್ದು ಅದನ್ನು ವರ್ಣಿಸುವ ರೀತಿ ನೋಡಿದರೆ ಅವುಗಳು ಕೋಣೆ ಗೋರಿಗಳನ್ನು (ಸಿಸ್ಟ್ ಚೇಂಬರ್ಸ್) ಎಂದು ಊಹಿಸಬಹುದು.

ಈ ಜಾಗದಲ್ಲಿ ಕೆಂಪು, ಕಪ್ಪು ಬಣ್ಣದ ಹೊಳಪುಳ್ಳ ಮಡಕೆಯ ಚೂರು, ವಿವಿಧ ಬಗೆಯ ಗೆರೆಗಳುಳ್ಳ ಕೆಂಪು ಬಣ್ಣದ ಮಡಕೆಯ ಕಂಠಗಳು, ತೆಳುವಾದ ನಯವಲ್ಲದ ಕುಡಿಕೆಯ ಚೂರುಗಳು, ವಿವಿಧ ಬಗೆಯ ಗೆರೆಗಳುಳ್ಳ ಕಂಠದ ಕೆಳ ಭಾಗಗಳು ಗಟ್ಟಿಯಾದ ಜೇಡಿಮಣ್ಣಿನಿಂದ ಮಾಡಿದ ಮಡಕೆಯ ಚೂರುಗಳು, ಹೂಜಿಯೊಂದರ ಕೆಂಪು ಬಣ್ಣದ ಸಣ್ಣ ನಳಿಕೆ, ತೆಳುವಾದ ಕಪ್ಪು ಬಣ್ಣದ ಮಡಕೆ ಚೂರುಗಳು, ಕೆಂಪು ಬಣ್ಣದ ಮಡಕೆಯ ಚೂರುಗಳು ದೊರೆತಿವೆ. ಅಲ್ಲದೇ ಕಬ್ಬಿಣದ ವಿವಿಧ ಗಾತ್ರದ ಕಿಟ್ಟದ ಕಲ್ಲುಗಳು ಕಂಡುಬಂದಿವೆ.

---

* ನಂ. ೧, ೧೨ನೇ ಅಡ್ಡರಸ್ತೆ, ಮಾರಪ್ಪ ಬಿಲ್ಡಿಂಗ್, ಸಂಪಂಗಿರಾಮನಗರ, ಬೆಂಗಳೂರು-೫೬೦ ೦೨೭.

1 ಮುತ್ತುರಾಜು., ಸೂಳೆಕಲ್ ಮಠದ ಗುಹಾಚಿತ್ರಗಳು, ಇತಿಹಾಸ ದರ್ಶನ, ಸಂಪುಟ ೧೦ (೧೯೯೫), ಪುಟ ೭೧-೭೩.

2 ಮುತ್ತುರಾಜು., ಗೊಟ್ಟಿಗೆಹಳ್ಳಿಯಲ್ಲಿ ಬೃಹತ್ ಶಿಲಾಯುಗದ ಶಿಲಾಸಮಾಧಿಗಳು- ಹೊಸ ಶೋಧ, ಕರ್ನಾಟಕಲೋಚನ, ಸಂಪುಟ-೭, ಸಂಚಿಕೆ-೧, ಪುಟ ೪೩-೪೬.

ಈ ಶಿಲಾಗೋರಿಗಳು ಕಾವೇರಿ ನದಿಯ ದಂಡೆಯ ಮೇಲೆ ದೊರೆತಿರುವುದರಿಂದ ಮೀನುಗಾರಿಕೆ, ಬೇಟೆ, ವ್ಯವಸಾಯ, ಪಶುಪಾಲನೆಯು ಆಗಿನ ಕಾಲದ ಜನರ ಮುಖ್ಯ ಕಸಬುಗಳಾಗಿದ್ದವೆಂದು ಊಹಿಸಬಹುದಾಗಿದೆ.

ಬಂಡೆಗುಡಿಯು ಸಾತನೂರು ಹೋಬಳಿಯ ನಾಗರಸನ ಕೋಟೆ ಹಳ್ಳಿಯಿಂದ ಪಶ್ಚಿಮಕ್ಕೆ ಸುಮಾರು ಒಂದು ಕಿ.ಮೀ. ದೂರದಲ್ಲಿ ಬಸವೇಶ್ವರನ ದೇವಾಲಯವಿರುವುದರಿಂದ ಅದನ್ನು ಬಂಡೆಬಸಪ್ಪ ದೇವಾಲಯ ಎಂದು ಕರೆಯುತ್ತಾರೆ. ವಿಸ್ತಾರವಾದ ಬಂಡೆಯ ಎತ್ತರ ಸುಮಾರು ೮೦ ಅಡಿಗಳು ಈ ಬಂಡೆಯ ಮೇಲೆ ನೈಸರ್ಗಿಕವಾದ ಇಂದೂ ನೀರಿರುವ ದೊಣೆಯೊಂದಿದೆ. ಈ ಬಂಡೆಯಲ್ಲಿ ೬ ಸಣ್ಣ ಸಣ್ಣ ಕಲ್ಲಾಸರೆಗಳಿವೆ. ಮುಂದಿನ ಮಾನವರ ದಾಳಿಯಿಂದಾಗಿ ಈಗ ಯಾವ ಪ್ರಾಗೈತಿಹಾಸಿಕ ಕುರುಹುಗಳನ್ನು ಗುರುತಿಸಲು ಆಗುವುದಿಲ್ಲ.

ಈ ಬಂಡೆಯ ಮೇಲ್ಗಡೆ ೫ ಕೋಣೆಗೋರಿಗಳಿವೆ. ಒಂದು ಶಿಲಾಗೋರಿಯ ಮುಚ್ಚಳಿಕೆ ಕಲ್ಲು ನೆಲಕ್ಕೆ ಹೊಂದಿಕೊಂಡಂತೆಯೇ ಇದೆ. ಮುಂಭಾಗದಲ್ಲಿರುವ ವೃತ್ತಾಕಾರದ ಖಿಂಡಿಯುಳ್ಳ ಕಲ್ಲು ಹಲಗೆಯನ್ನು ಒಡೆದು ತೆಗೆದು ಬದಿಗಳಲ್ಲಿ ಇರಿಸಿದ್ದಾರೆ. ಈ ಕೋಣೆಗೋರಿಯ ಒಳ ಉದ್ದ ೭ ಅಡಿಗಳು, ಅಗಲ ೪ ಅಡಿಗಳು. ಉತ್ತರ ದಿಕ್ಕಿಗೆ ಮುಖ ಮಾಡಿರುವ ಈ ಶಿಲಾಗೋರಿಯ ಮುಚ್ಚಳಿಕೆ ಕಲ್ಲಿನ ದಪ್ಪ ೧೦ ಅಂಗುಲಗಳು, ಉದ್ದ ೯ ಅಡಿಗಳು, ಅಗಲ ೯ ಅಡಿಗಳು. ಭಾಗಶಃ ವೃತ್ತಾಕಾರವಾದ ಆಕಾರ ಈ ಮುಚ್ಚಳಿಕೆ ಕಲ್ಲಿಗಿದೆ. ನೆಲದ ಮೇಲಿನ ಹಾಸುಗಲ್ಲನ್ನು ಗುರುತಿಸಲು ಕಷ್ಟಸಾಧ್ಯ. ಮಣ್ಣು ತುಂಬಿ ಹೋಗಿದೆ. ಈ ಕೋಣೆಗೋರಿಯ ಸುತ್ತಲೂ ೩ ವೃತ್ತಗಳ ಒತ್ತಾಸೆ ಕಲ್ಲುಗಳಿವೆ. ಕೋಣೆಗೋರಿಗೆ ದಕ್ಷಿಣ ದಿಕ್ಕಿನಲ್ಲಿರಿಸಿರುವ ಕಲ್ಲಿನ ಹಲಗೆಯ ಅಗಲ ೪ ಅಡಿಗಳು, ಎತ್ತರ ೩ ಅಡಿಗಳು. ಎಡ ಮತ್ತು ಬಲ ಭಾಗಗಳಲ್ಲಿರುವ ಕಲ್ಲಿನ ಉದ್ದ ೬ ಅಡಿಗಳಾಗಿವೆ. ಇವುಗಳು ಸ್ಥಳೀಯವಾಗಿ ದೊರಕುವ ಕಲ್ಲುಗಳೇ ಆಗಿವೆ.

ಈ ಶಿಲಾಗೋರಿಯ ಹಿಂಬದಿಯಲ್ಲೇ ಮತ್ತೊಂದು ವೃತ್ತಾಕಾರದ ಶಿಲಾಗೋರಿ ಇದೆ. ಇದು ಸಹ ನೆಲದಲ್ಲಿ ಅಗೆದು ರಚಿಸಿರುವಂಥ ಸಮಾಧಿಯಾಗಿದ್ದು ಭೂಮಿಯ ಮೇಲ್ಮೈಯಲ್ಲಿ ವೃತ್ತಾಕಾರವಾಗಿ ಇರಿಸಿರುವ ಗುಂಡು ಕಲ್ಲುಗಳು ಮಾತ್ರ ಕಂಡು ಬರುತ್ತವೆ. ಈ ವೃತ್ತದ ವ್ಯಾಸ ೧೮½ ಅಡಿಗಳು ಆಗಿದೆ.

ಮತ್ತೊಂದು ಶಿಲಾಗೋರಿಯ ಮುಚ್ಚಳಿಕೆ ಕಲ್ಲಿಗೆ ಬಲ ಮಗ್ಗುಲಿನಿಂದ ಎರಡು ದಪ್ಪ ಕಲ್ಲುಗಳನ್ನು ಒಂದರ ಮೇಲೊಂದರಂತೆ ಮತ್ತು ಎಡ ಮಗ್ಗುಲಿಗೆ ಅದೇ ರೀತಿಯ ೩ ಕಲ್ಲುಗಳನ್ನು ಇರಿಸಿ ಆಸರೆ ನಿರ್ಮಿಸಿ ಪೂರ್ವ ಭಾಗಕ್ಕೆ ಮುಖ ಬರುವ ಹಾಗೆ ನಿರ್ಮಿಸಲಾಗಿದೆ. ಮುಚ್ಚಳಿಕೆ ಕಲ್ಲಿನ ದಪ್ಪ ೧ ಅಡಿ, ಉದ್ದ ೯ ಅಡಿಗಳು, ಅಗಲ ೮ ಅಡಿಗಳು. ಇದರ ಬಳಿಯಲ್ಲಿಯೇ ಮತ್ತೆರಡು ಚದುರಿಹೋಗಿರುವ ಮುಚ್ಚಳಿಕೆ ಕಲ್ಲುಗಳು ಬಿದ್ದಿವೆ.

ಮರಳೇಗವಿಮಠವು ಕನಕಪುರದಿಂದ ಸಂಗಮ ಮೇಕೆದಾಟುವಿಗೆ ಹೋಗುವ ಮಾರ್ಗದಲ್ಲಿದೆ. ಮುನೇಶ್ವರ ಬೆಟ್ಟವನ್ನೊಳಗೊಂಡಂತೆ ಸುತ್ತಲೂ ಬೆಟ್ಟಗಳಿಂದ ಆವರಿಸಲ್ಪಟ್ಟಿದ್ದು ಅಡವಿಯ ಮಧ್ಯದಲ್ಲಿದೆ. ಪ್ರಾಗೈತಿಹಾಸಿಕ ಮಾನವರಿಗೆ ತಕ್ಕ ವಾಸಸ್ಥಾನವಾಗಿದ್ದಂತೆ ತೋರುತ್ತದೆ. ಕ್ರಿ.ಶ. ಹದಿನೈದನೇ ಶತಮಾನದಲ್ಲಿ ಎಡೆಯೂರು ಸಿದ್ಧಲಿಂಗೇಶ್ವರರು ತಮ್ಮ ಸಂಚಾರ ಕಾಲದಲ್ಲಿ ಇಲ್ಲಿರುವ ಸಣ್ಣಗವಿಯೊಂದರಲ್ಲಿ ಸ್ವಲ್ಪ ಕಾಲ ಧ್ಯಾನಾಸಕ್ತರಾಗಿದ್ದರಂತೆ. ಸ್ಥಳೀಯ ಜನರು ಅವರನ್ನು ಇಲ್ಲಿಯೇ ಇರಲು ಕೋರಿಕೊಂಡಾಗ ತಮ್ಮ ಶಿಷ್ಯರಾದ ಕಾಲಾಗ್ನಿ ರುದ್ರಮುನಿಸ್ವಾಮಿಯವರನ್ನು ಇಲ್ಲಿಯೆ ನೆಲಸುವಂತೆ ಆದೇಶಿಸಿ ಮುನ್ನಡೆದರು.[3] ಅವರ ಪರಂಪರೆ ಮುನ್ನಡೆಯುತ್ತಾ ಬಂದಿದೆ. ಇಂತಹ ಐತಿಹಾಸಿಕವಾದ ಸ್ಥಳದಲ್ಲಿ ಪ್ರಾಕ್‌ಚಾರಿತ್ರಿಕ ಬೃಹತ್ ಶಿಲಾಯುಗದ ಕೋಣೇ ಗೋರಿಗಳು ಕಂಡುಬಂದಿವೆ.

ಮರಳೆಗವಿಮಠದ ಉತ್ತರಕ್ಕೆ ಅರ್ಧ ಕಿ.ಮೀ. ದೂರದಲ್ಲಿ ಇರುವ ಪರ್ವತ ಕೊಳದ ಬಳಿ ಮುನೇಶ್ವರನ ಬೆಟ್ಟದ ಪಕ್ಕದಲ್ಲಿ ೨೦ ಶಿಲಾಗೋರಿಗಳು ಕಂಡುಬಂದಿವೆ. ೨೦ ಅಡಿ ವೃತ್ತವ್ಯಾಸವಿರುವ ಶಿಲಾಗೋರಿಯ ಸುತ್ತಲೂ ೨೪ ದಪ್ಪ ದಪ್ಪ ಗುಂಡುಕಲ್ಲುಗಳಿಂದ ವೃತ್ತ ರಚಿಸಿದ್ದು ಮಧ್ಯದಲ್ಲಿರುವ ಕೋಣೆಗೋರಿಯ ಎಡಬಲ ಬದಿಗಳ ಕಲ್ಲು ಹಲಗೆಗಳು ಉಳಿದು ಬಂದಿವೆ.

3 ವೇಣುಗೋಪಾಲ ಸೊರಬ, ಕನಕಪುರ ತಾಲ್ಲೂಕು ದರ್ಶನ, ಐಬಿಎಚ್ ಪ್ರಕಾಶನ, ಬೆಂಗಳೂರು, ಪುಟ ೧೮ .

ಇದರ ಬಲಬದಿಯಲ್ಲಿ ಮತ್ತೊಂದು ಶಿಲಾಗೋರಿ ಇದ್ದು ನಾಲ್ಕೂ ದಿಕ್ಕಿನ ಕಲ್ಲು ಹಲಗೆಗಳ ಮೇಲೆ ಮುಚ್ಚಳಿಕೆ ಕಲ್ಲು ಉಳಿದುಬಂದಿದೆ. ಪೂರ್ವಭಾಗದ ಕಲ್ಲಿನಲ್ಲಿ ವೃತ್ತಾಕಾರದ ಖಿಂಡಿಯನ್ನು ಗಮನಿಸಬಹುದಾಗಿದೆ. ಈ ಶಿಲಾಗೋರಿಯ ಕಲ್ಲು ಹಲಗೆಗಳು ತೆಳುವಾಗಿದ್ದು ಮುಚ್ಚಳಿಕೆ ಕಲ್ಲು ಮಾತ್ರ ದಪ್ಪವಿದೆ. ಸುತ್ತಲೂ ಇರಬೇಕಾದ ವೃತ್ತಾಕಾರದ ಗುಂಡು ಕಲ್ಲುಗಳು ಇಲ್ಲವಾಗಿವೆ.

ಒಂದನೆಯ ಶಿಲಾಗೋರಿಯ ಎಡಬದಿಯಲ್ಲಿ ಮತ್ತೊಂದು ಶಿಲಾಗೋರಿಯಿದ್ದು ಭೂಮಿಯಿಂದ ಮೇಲು ಭಾಗಕ್ಕೆ ಮುಚ್ಚಳಿಕೆಯ ಕಲ್ಲುಹಲಗೆ ಕಂಡುಬರುತ್ತದೆ. ಈ ಶಿಲಾಗೋರಿಯ ವೃತ್ತವಿನ್ಯಾಸ ೨೩ ½ ಅಡಿಗಳು.

ಒಂದನೇ ಶಿಲಾಗೋರಿಯ ಹಿಂಬದಿಯಲ್ಲೊಂದು ಗೋರಿಯಿದ್ದು ವೃತ್ತಾಕಾರದ ಮಧ್ಯೆ ಭೂಮಿಯಲ್ಲಿ ಅರ್ಧ ಮುಚ್ಚಿರುವಂತೆ ಕಾಣುವ ನಾಲ್ಕು ದಿಕ್ಕಿನ ಕಡೆಯಿಂದಲೂ ಕಲ್ಲು ಹಲಗೆಯನ್ನು ನಿಲ್ಲಿಸಿ ನಿರ್ಮಿಸಿರುವ ಕೋಣೆಗೋರಿಯ



ಮರಳೇಗವಿ ಮಠದ ಬೃಹತ್ ಶಿಲಾಯುಗದ ಶಿಲಾಗೋರಿ

ಉದ್ದ ೫ ½ ಅಡಿಗಳು ಅಗಲ ೪ ಅಡಿಗಳು, ವೃತ್ತವ್ಯಾಸವು ಚಿಕ್ಕದಾಗಿದ್ದು ೧೩ ಅಡಿಗಳಷ್ಟೆ ಆಗಿದೆ.

ಈ ಶಿಲಾಸಮಾಧಿಯ ಹಿಂಬದಿಯಲ್ಲಿಯೇ ಭೂಮಿಯಿಂದ ಸುಮಾರು ೨ ಅಡಿ ಎತ್ತರಕ್ಕೆ ವೃತ್ತಾಕಾರವಾಗಿ ಕಲ್ಲುಗಳಿಂದ ನಿರ್ಮಿಸಿರುವ ೨೩ ½ ಅಡಿಗಳ ವೃತ್ತ ರಚನೆಯ ಮಧ್ಯದಲ್ಲಿ ಕೋಣೆಗೋರಿಯ ರಚನೆ ಇದೆ.

ಇದರ ಬಳಿಯಲ್ಲಿಯೇ ಇರುವ ಮತ್ತೊಂದು ಶಿಲಾಗೋರಿಯು ೨೩½ ಅಡಿಗಳ ವೃತ್ತವ್ಯಾಸದಿಂದ ಕೂಡಿದ್ದು ಭೂಮಿಯಲ್ಲಿ ಅರ್ಧ ಮುಚ್ಚಿರುವಂತೆ ಕಾಣುವ ೪ ಚಪ್ಪಡಿಯ ಕೋಣೆಯ ಪೂರ್ವಭಾಗದ ಕಲ್ಲು ಹಲಗೆಯಲ್ಲಿ ಖಿಂಡಿಯನ್ನು ಗಮನಿಸಬಹುದಾಗಿದೆ. ಈ ಕಲ್ಗೋರಿಯ ವೃತ್ತಕ್ಕೆ ದೊಡ್ಡ ದೊಡ್ಡ ಗುಂಡುಕಲ್ಲುಗಳನ್ನು ಬಳಸಿದ್ದಾರೆ. ಇಲ್ಲಿ ಎಲ್ಲಿಯೂ ವೃತ್ತಾಕಾರದಲ್ಲಿ ಬಳಸುವ ಗುಂಡುಕಲ್ಲುಗಳಿಗೆ ಬದಲಾಗಿ ಹಲಗೆಕಲ್ಲುಗಳನ್ನು ಬಳಸಿಲ್ಲ.

ಅದೇ ಪರ್ವತ ಕೊಳದ ಬಳಿಯ ಆಲದ ಮರದ ಕೆಳಗೆ ಇತ್ತೀಚೆಗೆ ಕಟ್ಟಿರುವ ಮುನೇಶ್ವರನ ದೇವಾಲಯದ ಬಳಿ ಭೂಮಿಯಿಂದ ಮೇಲ್ಭಾಗಕ್ಕೆ ರಚಿಸಲ್ಪಟ್ಟಿರುವ ಶಿಲಾಗೋರಿಯ ಉದ್ದ ೯ ಅಡಿಗಳು, ಎತ್ತರ ೪ ಅಡಿಗಳು, ಮೇಲ್ಭಾಗದ ಮುಚ್ಚಳಿಕೆ ಕಲ್ಲಿನ ಉದ್ದ ೧೦ ಅಡಿಗಳು, ಅಗಲ ೬ ½ ಅಡಿಗಳು ಆಗಿವೆ.

ಈ ಹಳ್ಳಿಯಿಂದ ಉತ್ತರ ದಿಕ್ಕಿಗೆ ತುಸುದೂರದಲ್ಲಿಯೇ ೧೦ ಕಲ್ಗೋರಿಗಳಿವೆ. ಇಲ್ಲಿ ಭೂಮಿಯಿಂದ ಮೇಲು ಭಾಗಕ್ಕೆ ಅರ್ಧ ಕಾಣುವಂತೆ ರಚಿಸಿರುವ ಗೋರಿಯೊಂದಿದ್ದು

ಸಂಬೇಗೌಡನದೊಡ್ಡಿಯ ನಿಲುವುಗಲ್ಲು



ಮರಳೇಗವಿಮಠದ ಬೃಹತ್‌ಶಿಲಾಯುಗದ ಶಿಲಾಗೋರಿ

ಬಳಿಯಲ್ಲೇ ೨½ ಅಡಿ ಎತ್ತರದ ಸಣ್ಣ ನಿಲುವುಗಲ್ಲು ಎರಡು ಭಾಗವಾಗಿ ಹೊಡೆದು ಹೋಗಿ ವಿಶಿಷ್ಟ ರೀತಿಯಲ್ಲಿದೆ.

ಈ ಹಳ್ಳಿಯ ಪೂರ್ವದಿಕ್ಕಿಗೆ ಮುನೇಶ್ವರನ ಬೆಟ್ಟದ ಮಗ್ಗುಲಲ್ಲಿ ೨೦ ಶಿಲಾಗೋರಿಗಳಿವೆ. ಅದರಲ್ಲಿ ಒಂದನ್ನು ಅಗೆದು ತೆಗೆಯಲಾಗಿದೆ. ಅದು ವೃತ್ತಾಕಾರದ ಗುಂಡು ಕಲ್ಲುಗಳ ವೃತ್ತವ್ಯಾಸದ ಮಧ್ಯೆ ಇದ್ದು ಚೌಕ ಆಕಾರವಾಗಿ ಭೂಮಿಯನ್ನು ಅಗೆದು ೪ ದಿಕ್ಕಿನಿಂದಲೂ ಒಳಗಡೆ ಕಲ್ಲು ಚಪ್ಪಡಿಯನ್ನು ಜೋಡಿಸಲಾಗಿದೆ. ಈ ಕಲ್ಲು ಚಪ್ಪಡಿಗಳ ಉದ್ದ ೬ ಅಡಿಗಳು, ಅಗಲ ೩ ಅಡಿಗಳು. ಅಡ್ಡವಾಗಿ ಪೂರ್ವ ಮತ್ತು ಪಶ್ಚಿಮವಾಗಿ ನಿಲ್ಲಿಸಿರುವ ಕಲ್ಲು ಹಲಗೆಗಳ ಉದ್ದ ೨½ ಅಡಿ, ಅಗಲ ೨½ ಅಡಿಗಳು. ಪೂರ್ವದಿಕ್ಕಿನಲ್ಲಿ ನಿಲ್ಲಿಸಿರುವ ಅಡ್ಡವಾದ ಕಲ್ಲಿನಲ್ಲಿ ಖಿಂಡಿ ಇದೆ. ಒಳಗಡೆ ನೆಲದ ಮೇಲೆ ಹಾಸುಗಲ್ಲಿದೆ. ಈ ಶಿಲಾಗೋರಿಯ ಒಳಗಡೆ ವಿವಿಧ ಬಗೆಯ ಮಣ್ಣಿನ ಮಡಕೆಯ ಚೂರುಗಳು ಸಣ್ಣ ಕುಡಿಕೆಯ ಚೂರುಗಳು ಬಟ್ಟಲುಗಳ ಚೂರುಗಳು ದೊರೆತಿವೆ. ಅವುಗಳು ಕಪ್ಪು ಮತ್ತು ಕೆಂಪು ಬಣ್ಣಗಳದ್ದಾಗಿದೆ. ಮಡಕೆಯ ತಳಭಾಗದಲ್ಲಿ ಮಣ್ಣಿನ ಕಾಲಿನ ಭಾಗವೊಂದು ದೊರೆತಿದ್ದು ಅದು ಕಪ್ಪು ಬಣ್ಣದ್ದಾಗಿದೆ. ಹೊಳಪುಳ್ಳ ಕಪ್ಪು, ಕೆಂಪು ಬಣ್ಣದ ಮಡಕೆಯ ಚೂರುಗಳು ದೊರೆತಿವೆ.

ಹಿಂದೆ ಈ ಬಗೆಯ ಶಿಲಾಗೋರಿಯನ್ನು ಸ್ಥಳೀಯ ಜನರು ಅಗೆದಿದ್ದಾಗ ಅದರೊಳಗೆ ಕಬ್ಬಿಣದ ಚಪ್ಪಲಿಗಳು (ಅಂದರೆ ಸ್ಥಳೀಯ ಜನಪದ ಭಾಷೆಯಲ್ಲಿ ಪಾಪಸ್ ಎಂದು ಕರೆಯುತ್ತಾರೆ), ಅಲ್ಲದೇ ಕಬ್ಬಿಣದ ತ್ರಿಶೂಲಾಕೃತಿಯ ಆಯುಧವು, ಹೊಳಪುಳ್ಳ ಕಪ್ಪು-ಕೆಂಪು ಬಣ್ಣದ ಮಡಕೆಗಳು ದೊರೆತಿದ್ದವಂತೆ.

ಐತಿಹಾಸಿಕವಾದ ಗವಿಮಠದ ಪ್ರಾಚೀನತೆಯು ಪ್ರಾಗೈತಿಹಾಸಿಕ ಕಾಲ ಅಂದರೆ ಬೃಹತ್ ಶಿಲಾಯುಗದ ಕಾಲ ಸುಮಾರು ಕ್ರಿ. ಪೂ. ೮೦೦ ಆಗಿದ್ದಿತೆಂದು ಹೇಳಬಹುದಲ್ಲದೇ ಅದಕ್ಕೂ ಹಿಂದಿನ ಕಾಲಗಳ ಅವಶೇಷಗಳು ಇರುವ ಸಾಧ್ಯತೆಗಳನ್ನು ಅಲ್ಲಗಳೆಯುವಂತಿಲ್ಲ.

ಮೇಕೆದಾಟುವಿಗೆ ಹೋಗುವ ಮಾರ್ಗದಲ್ಲೆ ಇರುವ ತಿಗಳರ ಹೊಸಹಳ್ಳಿಯ ಬಳಿ ಹತ್ತು ಶಿಲಾಗೋರಿಗಳಿವೆ. ಬಳಿಯಲ್ಲಿಯೇ ಇರುವ ಹುಲಿಕಲ್ಲುವಿನಲ್ಲಿಯೂ ಇದೇ ಬಗೆಯ ಶಿಲಾಗೋರಿಯನ್ನು ಅಗೆದಾಗ ಅದರಲ್ಲಿ ಉದ್ದನೆಯ ಬೂದು ಬಣ್ಣದ ಮೂರು ಕಾಲುಳ್ಳ ಮಣ್ಣಿನ ಮಡಕೆಯಲ್ಲಿ ಮನುಷ್ಯರ ಮೂಳೆಗಳು ದೊರೆತವಂತೆ.

ಸಂಬೆಗೌಡನ ದೊಡ್ಡಿಯು ಸಾತನೂರಿನಿಂದ ಸುಮಾರು ಮೂರು ಕಿ.ಮೀ. ದೂರದಲ್ಲಿದೆ. ಅಲ್ಲಿಂದ ಒಂದು ಕಿ.ಮೀ. ದೂರದಲ್ಲಿ ಬೋಳರೆ ಎಂಬಲ್ಲಿ ಪಾಂಡವರ ಒಡ್ಡುಗಳು ಎಂದು ಕರೆಯಲ್ಪಡುವ ೨೦ಕ್ಕೂ ಹೆಚ್ಚು ಶಿಲಾಗೋರಿಗಳಿವೆ. ೩೦ ಅಡಿಗಳಷ್ಟು ವೃತ್ತವ್ಯಾಸದ ವಿಸ್ತಾರವುಳ್ಳ ಶಿಲಾಗೋರಿಯೊಳಗೆ ಭೂಮಿಯಿಂದ ಅರೆ ಮುಚ್ಚಿದಂತೆ ರಚಿಸಿರುವ ನಾಲ್ಕು ಕಲ್ಲು ಹಲಗೆಗಳ ಕೋಣೆಯ ಕಲ್ಲುಗಳ ಎತ್ತರ ಎರಡು ಅಡಿಗಳು, ಉದ್ದ ಏಳುವರೆ ಅಡಿಗಳು, ಅಗಲ ನಾಲ್ಕು ಅಡಿಗಳು; ಮುಚ್ಚಳಿಕೆ ಕಲ್ಲು ಉಳಿದುಬಂದಿಲ್ಲ.

ಇದರ ಬದಿಯಿರುವ ಮತ್ತೊಂದು ಮೂವತ್ತು ಅಡಿಗಳ



ಬಂಡೆ ಬಸಪ್ಪದೇವಾಲಯದಬಳಿಯಬೃಹತ್ ಶಿಲಾಯುಗದ ಶಿಲಾಗೋರಿ

ಶಿಲಾವೃತ್ತ ವ್ಯಾಸದೊಳಗೆ ಕೋಣೆಗೋರಿ ಇದ್ದು ಇಲ್ಲಿಯೂ ಮುಚ್ಚಳಿಕೆ ಕಲ್ಲು ಇಲ್ಲವಾಗಿದೆ.

ಇಪ್ಪತ್ತು ಅಡಿಗಳ ಶಿಲಾವೃತ್ತ ವ್ಯಾಸದೊಳಗೆ ನಾಲ್ಕು ಕಲ್ಲು ಹಲಗೆಗಳಿಂದ ರಚಿಸಿರುವ ಕೋಣೆಗೋರಿಯೊಂದು ಭೂಮಿಯಿಂದ ಸ್ವಲ್ಪ ಮೇಲಿದೆ. ಕಲ್ಲು ಹಲಗೆಗಳು ತೀರಾ ತೆಳುವಾಗಿವೆ.

ಇಪ್ಪತ್ತೈದು ಅಡಿ ವೃತ್ತವ್ಯಾಸವುಳ್ಳ ಮತ್ತೊಂದು ಶಿಲಾಗೋರಿಯು ಭೂಮಿಯೊಳಗೆ ಮುಚ್ಚಿದೆ. ಭೂಮಿಯಿಂದ ಎರಡು ಅಡಿಗಳ ಮೇಲೆ ಇರುವ ಇನ್ನೊಂದು ಶಿಲಾಗೋರಿಯ ಉದ್ದ ಎಂಟು ಅಡಿಗಳು; ಅಗಲ ಆರು ಅಡಿಗಳಾಗಿವೆ.

ಒಂದು ಕೋಣೆಗೋರಿಯನ್ನು ಅಗೆಯಲಾಗಿದ್ದು ಅದರೊಳಗೆ ಖಿಂಡಿ ಇರುವುದು ಗಮನಾರ್ಹ.

ಈ ಸ್ಥಳದಿಂದ ಉತ್ತರಕ್ಕೆ ತುಸು ದೂರದಲ್ಲಿ ಕಾರರೆ ಮತ್ತು ಬೊಳರೆಗಳ ಮಧ್ಯೆ ಮಾದಮ್ಮರೆಯ ಸಮೀಪ ಒಂದು ನಿಲುವುಗಲ್ಲಿದೆ. ಇದರ ಉದ್ದ ೧೨ ಅಡಿಗಳು, ಅಗಲ ೮ ಅಡಿಗಳು; ೧೭ ಅಡಿಗಳ ಸುತ್ತಳತೆಯನ್ನು ಇದು ಹೊಂದಿದೆ.

ಕುಪ್ಪೆದೊಡ್ಡಿಯು ಹರಿಹರದಿಂದ ಪೂರ್ವಕ್ಕೆ ಒಂದು ಕಿ.ಮೀ. ದೂರದಲ್ಲಿದೆ. ಓರುಗಲ್ಲು ಸೂರೆ ಎಂಬ ಕಾವ್ಯದಲ್ಲಿ ಕುಪ್ಪೆದೊಡ್ಡಿ ನಿರ್ಮಾಣದ ಬಗ್ಗೆ ಕಥೆ ಇದೆ.[4] ಬಸವನ ಬೆಟ್ಟದ ಬುಡದಲ್ಲಿ ಇರುವ ಎತ್ತರವಾದ ವಿಸ್ತಾರವಾದ ಪ್ರದೇಶದಲ್ಲಿ ೫೦ ಕ್ಕಿಂತಲೂ ಹೆಚ್ಚು ವೃತ್ತಾಕಾರದ ಶಿಲಾಗೋರಿಗಳಿವೆ. ಬದಿಯಲ್ಲೇ ಪ್ರಾಚೀನತಮವಾದ ಕೆರೆಯೊಂದಿದ್ದು ಪ್ರಾಗೈತಿಹಾಸಿಕ ಮಾನವನ ವಾಸಸ್ಥಾನಕ್ಕೆ ತಕ್ಕುದಾದ ಪ್ರದೇಶವಾಗಿದ್ದಿತೆಂದು ತಿಳಿದುಬರುತ್ತದೆ. ಇಲ್ಲಿ ಅತಿ ದೊಡ್ಡ ಶಿಲಾಗೋರಿಯ ವೃತ್ತವಿನ್ಯಾಸ ೩೦ ಅಡಿಗಳದ್ದಾದರೆ ಅತಿ ಸಣ್ಣದು ಕೇವಲ ೩½ ಅಡಿಗಳ ವ್ಯಾಸವಾಗಿದ್ದು ೮ ದಪ್ಪ ದಪ್ಪ ಕಲ್ಲುಗಳಿಂದ ನಿರ್ಮಿಸಿದ್ದಾಗಿದೆ. ಇದು ಶವಕುಣಿ ಆಗಿರುವಂತೆ (ಪಿಟ್ ಬರಿಯಲ್) ಕಾಣುತ್ತದೆ. ಕೆಲವು ಶಿಲಾವೃತ್ತಗಳ ಮಧ್ಯೆ ಭೂಮಿಯಿಂದ ಮೇಲೆ ಕೋಣೆ ಗೋರಿಗಳು ಕಂಡುಬಂದರೆ ಕೆಲವು ಶಿಲಾವೃತ್ತಗಳ ಮೇಲ್ಭಾಗ ಕಾಣೆಯಾಗಿದೆ.

ಕನಕಪುರ ತಾಲೂಕಿನಲ್ಲಿ ಪತ್ತೆ ಮಾಡಿರುವ ಬೃಹತ್ ಶಿಲಾಯುಗದ ಶಿಲಾಗೋರಿಗಳ ಉತ್ಖನನವನ್ನು ಪುರಾತತ್ವ ಇಲಾಖೆಯವರು ಕೈಗೊಂಡರೆ ಹೊಸಬೆಳಕು ಚೆಲ್ಲುವ ಸಾಧ್ಯತೆ ಇದ್ದು ಆ ಮೂಲಕ ಪ್ರಾಗೈತಿಹಾಸಿಕ ಕಾಲದ ಇನ್ನೂ ಹಿಂದಿನ ಅವಶೇಷಗಳು ಬೆಳಕಿಗೆ ಬರುವ ಸಾಧ್ಯತೆ ಇದೆ.[5]

○

---

4 ಓರುಗಲ್ಲು ಸೂರೆ, (ಸಂ.) ಮ. ಮಲ್ಲಪ್ಪ, ಬೆಂ.ವಿ.ವಿ. ಪುಟ ೪೪.

5 ಈ ಲೇಖನವನ್ನು ಬರೆಯಲು ಸಲಹೆ ಸೂಚನೆಗಳನ್ನಿತ್ತ ನನ್ನ ಪೂಜ್ಯಗುರುಗಳಾದ ಲಕ್ಷ್ಮಣ್ ತೆಲಗಾವಿಯವರಿಗೆ ಕೃತಜ್ಞನಾಗಿದ್ದೇನೆ.

ವಿಲಾಸ ಮ. ಜೋಗುಳ *

# ತಾವರಗೇರಾದಲ್ಲಿ ಕಲ್ಲಾಸರೆಯ ವರ್ಣಚಿತ್ರಗಳ ಶೋಧನೆ

ಉತ್ತರ ಕರ್ನಾಟಕದಲ್ಲಿ ಕಾಡುಗಳಿಲ್ಲದ ಗುಡ್ಡಗಳೇ ಹೆಚ್ಚು. ಇಲ್ಲಿ ದೊಡ್ಡ ಬಂಡೆಗಳು ಅಗಲವಾಗಿ ಎತ್ತರದಲ್ಲಿ ಮುಂದಕ್ಕೆ ಚಾಚಿ ಕೆಳಗಡೆ ಒಳ್ಳೆಯ ಆಶ್ರಯವನ್ನು ನೀಡುತ್ತವೆ. ಇವುಗಳಿಗೆ ಉತ್ತರ ಕರ್ನಾಟಕದ ರಾಯಚೂರು ಪ್ರದೇಶದಲ್ಲಿ ''ವಬ್ಬು''ಗಳು ಎಂದು ಕರೆಯುತ್ತಾರೆ. ಇಂತಹ ವಬ್ಬುಗಳಲ್ಲಿ ಕೆಮ್ಮಣ್ಣಿನಲ್ಲಿ ದನ, ಎತ್ತು, ಜಿಂಕೆ, ಮನುಷ್ಯರ ಮೊದಲಾದ ರೇಖಾಚಿತ್ರಗಳನ್ನು ಸಾಂಕೇತಿಕವಾಗಿ ಬಿಡಿಸಿರುತ್ತಾರೆ. ಅಂದರೆ ಬರೇ ಬಾಹ್ಯ ರೇಖೆಗಳನ್ನು ಬಿಡಿಸಿ, ಒಳಗೆಲ್ಲ ಬಣ್ಣದಿಂದ ತುಂಬಿರುತ್ತಾರೆ. ಕಣ್ಣು, ಮೂಗು, ಮುಂತಾದವುಗಳನ್ನು ತೋರಿಸಿರುವುದಿಲ್ಲ. ಆದರೂ ಕೂಡ ರೇಖೆಗಳು ಸಹಜವಾಗಿದ್ದು ಒಳ್ಳೆಯ ನುರಿತ ಕಲಾವಿದನು ಚಿತ್ರಿಸಿದಂತೆ ಕಾಣುವುದು.

ರಾಯಚೂರು ಜಿಲ್ಲೆಯ ಕುಷ್ಟಗಿ ತಾಲೂಕಿನ ತಾವರಗೇರಾದಲ್ಲಿ ಇಂಥ ಕಲ್ಲಾಸರೆಯ ವರ್ಣಚಿತ್ರಗಳು ಬೆಳಕಿಗೆ ಬಂದಿವೆ. ಈಗಾಗಲೇ ಈ ಪ್ರದೇಶದಲ್ಲಿ ಅ. ಸುಂದರ ಅವರು ಸಂಶೋಧನೆಯನ್ನು ನಡೆಸಿ ಕುಟ್ಟಿದ ಚಿತ್ರಗಳನ್ನು ಬೆಳಕಿಗೆ ತಂದಿರುವರು. (ಸುಂದರ ಅ. ; ೧೯೯೫ : ೮-೯) ನನ್ನ ಒಂದು ಸಂಶೋಧನಾ ಕಾರ್ಯದಲ್ಲಿ ಏಳು ಸ್ಥಳಗಳಲ್ಲಿ ಕಲ್ಲಾಸರೆಯ ವರ್ಣಚಿತ್ರಗಳು ನನ್ನ ಗಮನಕ್ಕೆ ಬಂದಿವೆ. ತಾವರಗೇರಾದಿಂದ ಗಂಗಾವತಿಗೆ ಹೋಗುವ ಮಾರ್ಗದಲ್ಲಿ ಸುಮಾರು ೩ ಕಿ.ಮೀ. ದೂರದಲ್ಲಿ ಗಾಣಗಿತ್ತಿ, ಸಂತೆ ಬಝಾರ ಡೋಣಿ, ಮಾನಪ್ಪಯ್ಯ,ಒಂಟೆ, ಆನೆ ಎಂಬ ಎತ್ತರವಾದ ಕಡಿದಾದ ಬೆಟ್ಟಗಳಿವೆ. ಇಲ್ಲಿ ಕಲ್ಲಾಸರೆಯ ವರ್ಣಚಿತ್ರಗಳಿಗೆ ಬೆಳಕಿನ ಅಭಾವವಿರುವದರಿಂದ, ಛಾಯಾಚಿತ್ರ ಸೆರೆ ಹಿಡಿಯಲು ಬೇಕಾದ ಉಪಕರಣಗಳು ಇಲ್ಲದಿರುವದರಿಂದ ಅವುಗಳನ್ನು ಸರಿಯಾಗಿ ಪ್ರತಿ ಮಾಡಲು ಸಾಧ್ಯವಾಗಿಲ್ಲ. ಇಲ್ಲಿ ಗಾಣಗಿತ್ತಿ ಗುಡ್ಡದ ಉತ್ತರ ಭಾಗ ಹಾಗು ದಕ್ಷಿಣ ಭಾಗದಲ್ಲಿ ಕಲ್ಲಾಸರೆಯಲ್ಲಿ ವರ್ಣಚಿತ್ರಗಳಿವೆ. ಈ ಬೆಟ್ಟದ ಉತ್ತರ ಭಾಗದಲ್ಲಿ ದೊಡ್ಡ ಕಲ್ಲಾಸರೆಯಲ್ಲಿ ಅನೇಕ ವರ್ಣಚಿತ್ರಗಳಿವೆ.

೧) ಜಿಂಕೆಗಳ ಒಂದು ದೊಡ್ಡ ಸಮೂಹವಿದೆ. ಒಟ್ಟು ಹನ್ನೆರಡು ಜಿಂಕೆಗಳನ್ನು ಚಿತ್ರಿಸಲಾಗಿದ್ದು, ಅವೆಲ್ಲವುಗಳು ಒಂದರ ಹಿಂದೆ ಒಂದರಂತೆ ಮುಂದೆ ಸಾಗುತ್ತಿವೆ. ದೇಹದ ಬಾಹ್ಯ ರೇಖೆಯನ್ನು ಚಿತ್ರಿಸಿ ಅದರ ಒಳಮೈಯೆಲ್ಲಾ ಬಣ್ಣದಿಂದ ತುಂಬಿರುವರು. ಅವುಗಳ ಕೋಡುಗಳು ತುಂಬಾ ದೊಡ್ಡದಾಗಿದ್ದು ಇಂಗ್ಲೀಷ್ ಮೂಲಾಕ್ಷರದ "U" ಮತ್ತು "V" ಆಕಾರದಲ್ಲಿ ಇವೆ. ಇವುಗಳು ಪಿಕ್ಳಿಹಾಳದಲ್ಲಿ ಬೆಳಕಿಗೆ ಬಂದಿರುವ ಜಿಂಕೆ ಸಮೂಹಕ್ಕೆ ಹೋಲಿಕೆಯಾಗುತ್ತದೆ. (ನ್ಯೂಮೆಯರ್, ಎರ್ವಿನ್; ೧೯೯೩ : ೧೭೭-೧೮೬)

ಇದೇ ಕಲ್ಲಾಸರೆಯಲ್ಲಿ ಇನ್ನೂ ಹಲವಾರು ವರ್ಣಚಿತ್ರಗಳಿವೆ.

ಅ) ಒಂದು ಮಂಗನ ಚಿತ್ರವಿದ್ದು, ಅದು ತನ್ನ ಎರಡೂ ಕಾಲುಗಳನ್ನು ಮುಂದೆ ಚಾಚಿ ಗಿಡದಿಂದ ಜಿಗಿಯುತ್ತಿರುವಂತೆ ಚಿತ್ರಿಸಲಾಗಿದೆ. ಇದರ ಬಾಹ್ಯ ರೇಖೆಯನ್ನು ಮಾತ್ರ ಚಿತ್ರಿಸಲಾಗಿದ್ದು ಕಣ್ಣು, ಮೂಗು, ಬಾಯಿಯನ್ನು ತೋರಿಸಿರುವರು. ಇದು ಒಂದು ಅಪರೂಪದ ಚಿತ್ರವಾಗಿದೆ.

ಬ) ಮಂಗನ ಚಿತ್ರದ ಬದಿಯಲ್ಲಿಯೇ ಹುಲಿಯ (?) ಚಿತ್ರವನ್ನು ಚಿತ್ರಿಸಲಾಗಿದ್ದು, ಅದು ತನ್ನ ಬಾಲವನ್ನು ಸ್ವಲ್ಪ

* ಇತಿಹಾಸ ಉಪನ್ಯಾಸಕರು, ಶ್ರೀ ಹುಚ್ಚೇಶ್ವರ ಗ್ರಾಮೀಣ ಪದವಿ ಮಹಾವಿದ್ಯಾಲಯ, ಕಮತಗಿ, ಹುನಗುಂದ ತಾಲೂಕು ಬಿಜಾಪುರ ಜಿಲ್ಲೆ

ಮೇಲಕ್ಕೆತ್ತಿದ್ದಂತೆ ಚಿತ್ರಿಸಲಾಗಿದೆ. ಇದರ ದೇಹದ ಬಾಹ್ಯ ರೇಖೆಯನ್ನು ಚಿತ್ರಿಸಿ ಅದರ ಒಳಮೈಯನ್ನು ಬಣ್ಣದಿಂದ ತುಂಬಿರುವರು.

ಕ) ಇಬ್ಬರು ಮನುಷ್ಯರು ಒಬ್ಬರ ಬದಿಯಲ್ಲಿ ಮತ್ತೊಬ್ಬರು ನಿಂತು ತಮ್ಮ ಹೆಗಲ ಮೇಲೆ ಒಂದೇ ಉದ್ದವಾದ ಕೋಲನ್ನು ಎತ್ತಿಕೊಂಡು ತಮ್ಮ ಒಂದು ಕಾಲನ್ನು ಮೇಲಕ್ಕೆತ್ತಿ ಕುಣಿಯುತ್ತಿರುವಂತೆ ಚಿತ್ರಿಸಲಾಗಿದೆ. ಕುಣಿತದಲ್ಲಿ ಇಬ್ಬರು ಒಂದೇ ರೀತಿಯಾದ ಪದ್ಧತಿ, ಅನುಕರಣೆಯನ್ನು ಅನುಸರಿಸಿರುವುದು ಒಂದು ವಿಶೇಷ.

ಡ) ಈ ಎಲ್ಲ ಮೇಲಿನ ಚಿತ್ರಗಳ ಕೊನೆಯಲ್ಲಿ ಒಂದು ಜಲಪಾತದ ಚಿತ್ರವನ್ನು ಚಿತ್ರಿಸಿರುವರು. ಬೆಟ್ಟದಿಂದ ನೀರು ಕೆಳಕ್ಕೆ ದುಮುಕುತ್ತಿರುವಂತೆ ಚಿತ್ರಿಸಿರುವರು.

ಇನ್ನೂ ಗಾಣಗಿತ್ತಿ ಗುಡ್ಡದ ದಕ್ಷಿಣ ಭಾಗದಲ್ಲಿಯ ಕಲ್ಲಾಸರೆಯ ವರ್ಣಚಿತ್ರಗಳು:

೧) ಇಲ್ಲಿ ಒಂದು ದೊಡ್ಡ ಬಂಡೆಯ ತಳಭಾಗದಲ್ಲಿ ಮೂರು ಜಿಂಕೆಗಳನ್ನು ಚಿತ್ರಿಸಿರುವರು. ಅವು ಒಂದರ ಹಿಂದೆ ಒಂದು ಕೂಡಿಕೊಂಡು ಮುಂದೆ ಸಾಗುವಂತೆ ಚಿತ್ರಿಸಲಾಗಿದ್ದು, ಇವುಗಳ ಕೋಡುಗಳು ಇಂಗ್ಲೀಷ್ ಮೂಲಾಕ್ಷರದ "U" ಮತ್ತು "V" ಆಕಾರದಲ್ಲಿವೆ.

೨) ಇಲ್ಲಿಯೇ ಬೇರೊಂದು ಬಂಡೆಯ ತಳಭಾಗದಲ್ಲಿ ಇಬ್ಬರು ಬೇಟೆಗಾರರ ಚಿತ್ರವನ್ನು ಚಿತ್ರಿಸಲಾಗಿದೆ. ಒಬ್ಬನು ಬಿಲ್ಲಿಗೆ ಬಾಣವನ್ನು ಹೂಡಿ (ಪ್ರಾಣಿಗೆ) ಬೇಟೆಗಾಗಿ ಗುರಿ ಇಟ್ಟಿರುವಂತೆ, ಇನ್ನೊಬ್ಬನು ತನ್ನ ಎಡಭಾಗದ ಹೆಗಲ ಮೇಲೆ ಆಯುಧವನ್ನು ಹಿಡಿದಿದ್ದು ಬಲಗೈಯಲ್ಲಿ ಬೇಟೆಯಾಡಿದ (ಸತ್ತ) ಪ್ರಾಣಿಯನ್ನು ಎತ್ತಿಕೊಂಡು ಮುನ್ನಡೆಯುವಂತೆ ಚಿತ್ರಿಸಲಾಗಿದೆ.

೩) ಮತ್ತೊಂದು ಬಂಡೆಯ ಮೇಲೆ ನೀಳದೇಹದ ಒಬ್ಬ ವ್ಯಕ್ತಿಯನ್ನು ಚಿತ್ರಿಸಲಾಗಿದ್ದು ಆತನ ತಲೆಯು ಮಾತ್ರ ದುಂಡಾಗಿ ದೊಡ್ಡದಿದೆ. ಕೈ-ಕಾಲು ತಲೆಗಿಂತ ಚಿಕ್ಕದಾಗಿವೆ. ಈ ಚಿತ್ರದ ಬದಿಯಲ್ಲಿಯೇ ದ್ವಿರೇಖೆಯಲ್ಲಿ ಇನ್ನೊಬ್ಬ ವ್ಯಕ್ತಿಯನ್ನು ಚಿತ್ರಿಸಲಾಗಿದ್ದು, ಆತನ ತಲೆಯು ದುಂಡಗೆ, ಎರಡು ಕೈಗಳನ್ನು ಮೇಲಕ್ಕೆ ಎತ್ತಿದಂತೆ ಎರಡು ಕಾಲುಗಳನ್ನು ಅಗಲಿಸಿದಂತೆ ಇವೆ. ಇವುಗಳ ಬಾಹ್ಯ ರೇಖೆಯನ್ನು ಮಾತ್ರ ಚಿತ್ರಿಸಲಾಗಿದೆ.

೪) ಇಲ್ಲಿಯೇ ಬೇರೊಂದು ಸ್ಥಳದಲ್ಲಿ ಒಂದು ಮೇಜಿನಂಥ ಪೀಠೋಪಕರಣದ ಚಿತ್ರವನ್ನು ಚಿತ್ರಿಸಲಾಗಿದ್ದು, ಅದಕ್ಕೆ ಮುಂದಿನ ಎರಡು ಕಾಲುಗಳನ್ನು ಮಾತ್ರ ತೋರಿಸಲಾಗಿದೆ. ಒಂದು ಕಾಲಿಗೆ ಅಡ್ಡರೇಖೆಯನ್ನು ಎಳೆಯಲಾಗಿದೆ.

೫) ಈ ಬೆಟ್ಟದ ದಕ್ಷಿಣ ಭಾಗದ ಮತ್ತೊಂದು ಸ್ಥಳದಲ್ಲಿ ದೊಡ್ಡ ಬಂಡೆಯ ಬದಿಯಲ್ಲಿ ಎರಡು ದೊಡ್ಡ ಪಾತ್ರೆಗಳನ್ನು ಚಿತ್ರಿಸಲಾಗಿದೆ. ಎರಡು ಪಾತ್ರೆಗಳ ಸುತ್ತಲೂ ವಕ್ರರೇಖೆಯನ್ನು ಎಳೆಯಲಾಗಿದೆ. ಒಂದು ಪಾತ್ರೆಗೆ ಹಿಡಿಕೆಯನ್ನು ತೋರಿಸ ಲಾಗಿದೆ.

ಒಂಟೆಗುಡ್ಡದ ಪೂರ್ವ ಭಾಗದ ಅತೀ ಮೇಲುಗಡೆ ಒಂದು ಬಂಡೆಯಲ್ಲಿ ಎರಡು ಚಿಕ್ಕ-ಚಿಕ್ಕ ಮೀನುಗಳನ್ನು ಒಂದರ ಎದಿರು ಇನ್ನೊಂದನ್ನು ಚಿತ್ರಿಸಿರುವರು. ಅವುಗಳ ಬಾಹ್ಯ ರೇಖೆಯನ್ನು ಮಾತ್ರ ಎಳೆಯಲಾಗಿದೆ.

ಎಲ್ಲಾ ಕಲ್ಲಾಸರೆಯ ವರ್ಣ ಚಿತ್ರಗಳು ತಾವರ ಗೇರಾದಲ್ಲಿ ದೊರೆತಿವೆ. ಈ ಕಲ್ಲಾಸರೆಯ ವರ್ಣಚಿತ್ರಗಳೆಲ್ಲ ಮೊಟ್ಟ ಮೊದಲು ಶೋಧಿಸಲಾಗಿದೆ. ಈ ಹಂತದಲ್ಲಿ ಇನ್ನೂ ಹೆಚ್ಚಿನ ಕಾರ್ಯ ನಡೆಯಬೇಕಾಗಿದೆ.[3]

## ಆಧಾರ ಗ್ರಂಥಗಳು


ಸುಂದರ ಅ. ೧೯೮೭, *''ಪ್ರಾಗೈತಿಹಾಸಿಕ ಗವಿವರ್ಣ ಮತ್ತು ಬಯಲು ಬಂಡೆ ಚಿತ್ರಗಳು : ಕರ್ನಾಟಕ''* ಹರತಿಸಿರಿ, ವಾಲ್ಮೀಕಿ ಸಾಹಿತ್ಯ ಸಂಪದ, ಹರ್ತಿಕೋಟೆ

Neumayer, Erwin; 1983, *Protohiostoric Indian Rock Paintings,* Oxford University Press, Delhi



*ಈ ಲೇಖನವನ್ನು ಸಿದ್ಧಪಡಿಸುವಲ್ಲಿ ಮಾರ್ಗದರ್ಶನಗೈದ ನನ್ನ ಗುರುಗಳಾದ ಡಾ॥ ಅ. ಸುಂದರ ಅವರಿಗೆ ನನ್ನ ಕೃತಜ್ಞತೆಗಳು*

ಜೆ. ವಿಶ್ವನಾಥ್ *
ಎಂ. ಜಿ. ಮಂಜುನಾಥ **

# 'ಸಾಸಲು'ವಿನ ಬೃಹತ್ ಶಿಲಾಯುಗದ ಸ್ಮಾರಕಗಳು ಮತ್ತು ರೇಖಾಚಿತ್ರಗಳು

ಬೆಂಗಳೂರು ಗ್ರಾಮಾಂತರ ಜಿಲ್ಲೆಯಲ್ಲಿ ಬೃಹತ್ ಶಿಲಾಯುಗಕ್ಕೆ ಸೇರಿದ ಹಲವಾರು ನಿವೇಶನಗಳು ಪತ್ತೆಯಾಗಿದ್ದವು. ಅವುಗಳಲ್ಲಿ ಸಾವನದುರ್ಗದ ಇಟ್ಟಿಗೆ ಬೈಲು, ಹೂಜಿಗಲ್ಲು, ಸೋಲೂರು ಹೋಬಳಿಯ ಕಲ್ಯಾಣ ಪುರ, ಭಿಲ್ಲನಕೋಟೆ ಬಳಿಯ ಆಲದಹಳ್ಳಿ, ಮಹಿಮ ರಂಗನಬೆಟ್ಟ, ಮೈಲನಹಳ್ಳಿ, ಎಲೆಕ್ಯಾತನಹಳ್ಳಿ, ರಾಮನಗರದ ಹತ್ತಿರದಲ್ಲಿರುವ ಬಸವನಪುರ, ಗಂಗರಾಜರ ಹಳ್ಳಿ, ಕೆಂಜಿಗರಹಳ್ಳಿ, ವಡೇರಹಳ್ಳಿ, ಅರಳೀಮರದ ದೊಡ್ಡಿ ಮುಂತಾದ ಸ್ಥಳಗಳಲ್ಲಿ ನೂರಾರು ಬೃಹತ್ ಶಿಲಾಯುಗದ ಸಮಾಧಿಗಳು ಪತ್ತೆಯಾಗಿದ್ದವು.[1] ಇತ್ತೀಚೆಗೆ ಬೆಂಗಳೂರು ಗ್ರಾಮಾಂತರ ಜಿಲ್ಲೆಯ ದೊಡ್ಡಬಳ್ಳಾಪುರ ತಾಲ್ಲೂಕಿನ 'ಸಾಸಲು' ಎಂಬ ಗ್ರಾಮದ ಬಳಿ ಬೃಹತ್‌ಶಿಲಾಯುಗಕ್ಕೆ (ಮೆಗಾಲಿಥಿಕ್ ಏಜ್) ಸೇರಿದ ಐದು ನಿಲುವುಗಲ್ಲುಗಳು (ಮೆನ್‌ಹಿರ್) ಮತ್ತು ಹಲವಾರು ರೇಖಾಚಿತ್ರಗಳು ನಮ್ಮ ಕ್ಷೇತ್ರಕಾರ್ಯದ ವೇಳೆಯಲ್ಲಿ ಪತ್ತೆಯಾದವು.

ಸಾಸಲು ಗ್ರಾಮದ ಉತ್ತರ ದಿಕ್ಕಿನಲ್ಲಿ ಒಂದೂವರೆ ಕಿಲೋಮೀಟರ್ ದೂರದಲ್ಲಿ ಐದು ಅಡಿ ಎತ್ತರ ಹಾಗೂ ಎರಡೂವರೆ ಅಡಿ ಅಗಲದ ಒಂದು ನಿಲುವುಗಲ್ಲಿದೆ (ಮೆನಹಿರ್). ಈ ನಿಲುವುಗಲ್ಲಿನ ಮೇಲೆ ಹಲವಾರು ರೇಖಾಚಿತ್ರಗಳಿವೆ. ಅವುಗಳಲ್ಲಿ ಕೆಲವು ಯಾವುದೇ ಅರ್ಥವನ್ನು ಸೂಚಿಸದಂತಹ ವಿಚಿತ್ರವಾದ ಚಿತ್ರಗಳು, ಕೆಲವು ಶಂಕುವಿನ ಆಕಾರದ ಚಿತ್ರಗಳು, ವಿಚಿತ್ರವಾದ ದಳಗಳಂತಹ ಚಿತ್ರಗಳು,



ಆಲದಹಳ್ಳಿಯ ಬೃಹತ್ ಶಿಲಾಯುಗದ ಸಮಾಧಿಗಳು



ಸಾಸಲಿನ ಕದರಿಕಂಭದಗುಟ್ಟೆಯಲ್ಲಿನ ರೇಖಾಚಿತ್ರಗಳು

---

* ಸಾಸಲು, ದೊಡ್ಡಬಳ್ಳಾಪುರ ತಾಲೂಕು, ಬೆಂಗಳೂರು ಗ್ರಾಮಾಂತರ ಜಿಲ್ಲೆ
** ನಂ. ೨೧೫, ೪ನೇ ಮುಖ್ಯರಸ್ತೆ, ಕೆಂಗೇರಿ ಉಪನಗರ, ಬೆಂಗಳೂರು-೫೬೦ ೦೬೦

1 ಎಂ. ಜಿ. ಮಂಜುನಾಥ, ಬೆಂಗಳೂರು ಗ್ರಾಮಾಂತರ ಜಿಲ್ಲೆಯ ನವಶೋಧಿತತ ಬೃಹತ್ ಶಿಲಾ ನಿವೇಶನಗಳು ಇತಿಹಾಸ ದರ್ಶನ, ಸಂ. ೧೦, ಪುಟ ೧೮

ಮತ್ತು ಅವುಗಳ ಮೇಲ್ಭಾಗದಲ್ಲಿ ಚೌಕಳಿ ಮನೆಗಳ ಚಿತ್ರಗಳಿವೆ. ಈ ನಿಲುವುಗಲ್ಲು ಕೆಳಭಾಗದಲ್ಲಿ ಅಗಲವಾಗಿದ್ದು, ಮೇಲ್ಭಾಗದಲ್ಲಿ ಕ್ರಮೇಣ ಚಿಕ್ಕದಾಗಿದ್ದು ಕಠಾರಿಯ ಆಕಾರದಲ್ಲಿದೆ.



ಸಾಸಲಿನಲ್ಲಿ ಪತ್ತೆಯಾದ ಶಿಲಾಯುಗದ ನಿಲುವುಗಲ್ಲು

ಸಾಸಲಿನ ದಕ್ಷಿಣ ದಿಕ್ಕಿನಲ್ಲಿ ಸುಮಾರು ಒಂದೂವರೆ ಕಿಲೋಮೀಟರ್ ದೂರದಲ್ಲಿನ 'ತೋಡಲು ಬಂಡೆ' ಎಂಬ ಗುಡ್ಡದ ಪೂರ್ವ ದಿಕ್ಕಿನಲ್ಲಿ ಮೂರು ನಿಲುವುಗಲ್ಲುಗಳಿವೆ. ಇವುಗಳಲ್ಲಿ ಮೊದಲನೆಯದು ಹನ್ನೆರಡು ಅಡಿ ಎತ್ತರ, ಹಾಗೂ ಮೂರು ಅಡಿ ಅಗಲವಾಗಿದೆ. ಎರಡನೆಯದು ಹತ್ತು ಅಡಿ ಎತ್ತರ, ಎರಡೂವರೆ ಅಡಿ ಅಗಲವಾಗಿದೆ. ಮೂರನೆಯದು ಎಂಟು ಅಡಿ ಎತ್ತರ ಮೂರು ಅಡಿ ಅಗಲವಾಗಿದೆ. ಈ ಮೂರು ನಿಲುವುಗಲ್ಲುಗಳಲ್ಲಿ ಮೊದಲ ಎರಡು ನಿಲುವುಗಲ್ಲುಗಳು ಒಂದು ಮತ್ತೊಂದರಿಂದ ಆರು ಅಡಿಗಳಷ್ಟು ದೂರದಲ್ಲಿದೆ. ಇವುಗಳಿಂದ ಸುಮಾರು ಮೂವತ್ತೈದು ಅಡಿಗಳಷ್ಟು ದೂರದಲ್ಲಿ ಮೂರನೆಯ ನಿಲುವುಗಲ್ಲಿದೆ. ಇಲ್ಲಿಂದ ಉತ್ತರಕ್ಕೆ ಒಂದೂವರೆ ಕಿಲೋಮೀಟರ್ ದೂರದಲ್ಲಿ ಮತ್ತೊಂದು ನಿಲುವುಗಲ್ಲಿದೆ. ಇದು ಹತ್ತೊಂಬತ್ತು ಅಡಿ ಎತ್ತರ ಹಾಗೂ ಆರು ಅಡಿ ಅಗಲವಾಗಿದ್ದು ಸ್ವಲ್ಪ ಎಡಭಾಗಕ್ಕೆ ಬಾಗಿದೆ. ಮೇಲ್ನೋಟಕ್ಕೆ ಕಲ್ಲಿನಿಂದ ನಿರ್ಮಿಸಿದ ಖಡ್ಗದಂತೆ ಕಾಣುತ್ತದೆ. ಇದರ ಸಮೀಪದಲ್ಲಿಯೇ ಶಿಲಾವೃತ್ತಗಳುಳ್ಳ ೧೦ ಸಮಾಧಿಗಳಿವೆ. ಈ ಐದೂ ನಿಲುವುಗಲ್ಲುಗಳು ಕಣಶಿಲೆಯ (ಗ್ರಾನೈಟ್) ಚಪ್ಪಡಿಯಿಂದ ನಿರ್ಮಿಸಲ್ಪಟ್ಟಿವೆ.

ಕರ್ನಾಟಕದಲ್ಲಿ ಹಲವಾರು ಸ್ಥಳಗಳಲ್ಲಿ ಬೃಹತ್ ಶಿಲಾಯುಗಕ್ಕೆ ಸೇರಿದ ಸಮಾಧಿಗಳು ಪತ್ತೆಯಾಗಿದ್ದರೂ ಸಹ ನಿಲುವುಗಲ್ಲುಗಳು ಹೆಚ್ಚಿನ ಸಂಖ್ಯೆಯಲ್ಲಿ ಪತ್ತೆಯಾಗಿರಲಿಲ್ಲ. ಕತ್ತಿರಾಜಪುರ ಮುಂತಾಗಿ ಕ್ವಚಿತ್ತಾಗಿ ಅಲ್ಲೊಂದು ಇಲ್ಲೊಂದು ಪತ್ತೆಯಾಗಿದ್ದವು. ಕರ್ನಾಟಕದ ದಕ್ಷಿಣ ಭಾಗದಲ್ಲಿ ತೀರಾ ಅಪರೂಪವೆನ್ನಿಸುವಷ್ಟು ಕಡಿಮೆ ಸಂಖ್ಯೆಯಲ್ಲಿ ಇವು ಪತ್ತೆಯಾಗಿದ್ದವು. ಬೆಂಗಳೂರು ಜಿಲ್ಲೆಯಲ್ಲಿ ಇದುವರೆಗೂ ಒಂದೂ ನಿಲುವುಗಲ್ಲು ಪತ್ತೆಯಾಗಿರಲಿಲ್ಲ. ಮೊಟ್ಟಮೊದಲ ಬಾರಿಗೆ ಇದೀಗ ಸಾಸಲಿನಲ್ಲಿ ಪತ್ತೆಯಾಗಿರುವುದು ಗಮನಾರ್ಹ ಅಂಶ.

ಈ ನಿಲುವುಗಲ್ಲುಗಳು ದೊರೆತ ಸ್ಥಳದಿಂದ ಎರಡು ಕಿಲೋಮೀಟರ್ ದೂರದಲ್ಲಿ ಅಂದರೆ ಸಾಸಲುಗ್ರಾಮದ ಈಶಾನ್ಯ ದಿಕ್ಕಿನಲ್ಲಿರುವ 'ಕದರಿಕಂಭ'ದ ಗುಡ್ಡದಲ್ಲಿನ ಬಂಡೆಗಳ ಮೇಲೆ ಹದಿನಾಲ್ಕು ರೇಖಾಚಿತ್ರಗಳಿವೆ. ಇವು ಮೂರ್‍ನಾಲ್ಕು ಚದರಡಿಯ ಕಪ್ಪು ಬಂಡೆಗಲ್ಲುಗಳ ಮೇಲೆ



ಸಾಸಲಿನ ರೇಖಾಚಿತ್ರಗಳ ನಿಲುವುಗಲ್ಲು



ಅರಳೀಮರದ ದೊಡ್ಡಿಯಲ್ಲಿರುವ ಬೃ.ಶಿ. ಯುಗದ ರಂಧ್ರಕೋಣೆಗೋರಿ

ಕಲ್ಲಿನಿಂದಲೇ ಕುಟ್ಟಿ ಕುಟ್ಟಿ ರಚಿಸಿದಂತಹ ಚಿತ್ರಗಳಾಗಿವೆ. ಈ ಚಿತ್ರಗಳಲ್ಲಿ ನವಿಲು, ಆನೆ, ಜಿಂಕೆ, ಮನುಷ್ಯ, ನಕ್ಷತ್ರ ಮುಂತಾದ ಚಿತ್ರಗಳೇ ಅಲ್ಲದೆ ಕೆಲವು ನಾವು ಸರಿಯಾಗಿ ಅರ್ಥೈಸಲಾರದಂತಹ ಚಿತ್ರಗಳೂ ಇವೆ. ಶಿಲಾಯುಗಕ್ಕೆ ಸೇರಿದ ಹಲವಾರು ರೇಖಾಚಿತ್ರಗಳು ಹೊಳಲೂರು, ಕುರುಗೋಡು, ಹಿರೇಬೆಣಕಲ್, ಮಲ್ಲಾಪುರ, ಚಿಕ್ಕರಾಮಪುರ, ಜಟ್ಟಿಂಗರಾಮೇಶ್ವರ, ಬ್ರಹ್ಮಗಿರಿ, ಕೊಪ್ಪಳ, ಕಲ್ಲೂರು, ಪಿಕ್ಲಿಹಾಳ, ಸಂಗನಕಲ್ಲು, ನವಿಲುತೀರ್ಥ, ಚಂದ್ರವಳ್ಳಿ ಇತ್ಯಾದಿ ಸ್ಥಳಗಳಲ್ಲಿ ವಿಶೇಷವಾಗಿ ಉತ್ತರ ಕರ್ನಾಟಕದಲ್ಲಿ ಪತ್ತೆಯಾಗಿದ್ದವು. ಬೆಂಗಳೂರು ಜಿಲ್ಲೆಯಲ್ಲಿ ಇದುವರೆಗೆ ಒಂದೂ ರೇಖಾಚಿತ್ರಗವು ಪತ್ತೆಯಾಗಿರಲಿಲ್ಲ. ಇದೀಗ ಮೊಟ್ಟ ಮೊದಲನೆಯ ಬಾರಿಗೆ ನಿಲುವುಗಲ್ಲುಗಳು ಮತ್ತು ರೇಖಾಚಿತ್ರಗಳು ಒಂದೇ ನಿವೇಶನದಲ್ಲಿ ದೊರೆತಿವೆ. ಇವುಗಳೆಲ್ಲವೂ ಬೃಹತ್ ಶಿಲಾಯುಗ (ಮೆಗಾಲಿಥಿಕ್ ಏಜ್)ಕ್ಕೆ ಸೇರಿದ್ದುದೆಂದು ಹಾಗೂ ಇವು ಕ್ರಿ. ಪೂ. ಸುಮಾರು ಹತ್ತನೆಯ ಶತಮಾನಕ್ಕೆ ಸೇರಿದವುಗಳೆಂದು ತುಲನಾತ್ಮಕವಾಗಿ ನಿರ್ಧರಿಸಬಹುದು.

ಡಾ॥ ಆರ್.ಎಂ.ಷಡಕ್ಷರಯ್ಯ *

# ಗುಲ್ಬರ್ಗಾ ಜಿಲ್ಲೆಯ ಸೇಡಂ ತಾಲೂಕಿನ ಪ್ರಾಚ್ಯಾವಶೇಷಗಳು ( ಶೋಧನೆ )

ಗುಲ್ಬರ್ಗಾ ಜಿಲ್ಲೆಯ ಪ್ರಾಚ್ಯಾವಶೇಷಗಳ ಬಗ್ಗೆ ಈಗಾಗಲೇ ಹಲವಾರು ವಿದ್ವಾಂಸರು, ಸಾಹಿತಿಗಳು, ಸಂಶೋಧಕರು, ಉತ್ಸಾಹಿ ತರುಣರು ಸಂಶೋಧನೆ ಅಧ್ಯಯನ ಮಾಡಿದ್ದುಂಟು. ಆದರೂ ಈ ಜಿಲ್ಲೆಯ ಸಮಗ್ರ ಹಳ್ಳಿಗಳ ಪುರಾತತ್ವ ಅವಶೇಷಗಳ ಮಾಹಿತಿ ಲಭ್ಯವಿರುವುದಿಲ್ಲ. ಇದರಿಂದ ಈ ಜಿಲ್ಲೆಯ ಪ್ರಾಚೀನ ಇತಿಹಾಸ-ಸಂಸ್ಕೃತಿ ರಚಿಸಲು ಆಕರ ಸಾಮಗ್ರಿಗಳ ಕೊರತೆ ಇರುವುದು ಎದ್ದುಕಾಣುತ್ತದೆ.

ಶಿಲಾಯುಗ ಜನರ ಸಂಸ್ಕೃತಿಗೆ ಸೀಮಿತವಾದ ವಿವಿಧ ಸಮಸ್ಯೆಗಳಿವೆ. ಮೌರ್ಯ ಮತ್ತು ಶಾತವಾಹನರ ಕಾಲದ ಈ ಪ್ರದೇಶದ ಸಾಂಸ್ಕೃತಿಕ ಕೊಡುಗೆ ಅಪಾರ. ಆದರ ಬಗ್ಗೆ ಹೆಚ್ಚಿನ ಅನ್ವೇಷಣೆ -ಉತ್ಖನನ ಅತ್ಯವಶ್ಯ. ಏಕೆಂದರೆ ಕೃಷ್ಣಾ ಮೇಲ್ದಂಡೆಯ ನಿರ್ಮಾಣದಿಂದ ಮಹತ್ವದ ಪ್ರಾಚೀನ ನೆಲೆಗಳಲ್ಲಿ ಒಂದಾದ ಸನ್ನತಿ ನೀರಲ್ಲಿ ಮುಳುಗಲಿದೆ. ರಾಷ್ಟ್ರಕೂಟರ ರಾಜಧಾನಿ ಎನಿಸಿದ್ದ ಮಾನ್ಯಖೇಟ ಈಗಿನ ಈ ಜಿಲ್ಲೆಯ ಮಳಖೇಡ ಗ್ರಾಮವಾಗಿದ್ದಿತೇ? ಅಥವಾ ಬೇರೆ ಸ್ಥಳವಾಗಿತ್ತೇ? ಎಂಬುದರ ಬಗ್ಗೆ ನಿಖರವಾಗಿ ಸ್ಪಷ್ಟೀಕರಿಸಬೇಕಾಗಿದೆ. ಮಧ್ಯಯುಗೀನ ಕಾಲದಲ್ಲಿ ಈ ಪ್ರದೇಶದಲ್ಲಿ ಯಾವ ಕಾರಣಕ್ಕಾಗಿ ಹೆಚ್ಚಿನ ಸಂಖ್ಯೆಯ ವಿವಿಧ ವಿದ್ಯಾ ಸಂಸ್ಥೆಗಳು ಅಸ್ತಿತ್ವಕ್ಕೆ ಬಂದವು? ಆ ಶಿಕ್ಷಣ ಸಂಸ್ಥೆಗಳ ಸ್ಮಾರಕಗಳಾವುವು? ಅವುಗಳನ್ನು ಗುರುತಿಸುವ ಪ್ರಯತ್ನ ಆಗಬೇಕಿದೆ. ಕ್ರಿ.ಶ.೧೦ನೇ ಶತಮಾನದವರೆಗಿನ ದೇವಾಲಯ-ಶಿಲ್ಪಗಳ ಮಾಹಿತಿ ಅತಿ ಕಡಿಮೆ. ಕಲ್ಯಾಣ ಚಾಲುಕ್ಯ, ಕಳಚುರಿ, ಸೇವುಣರ ಕಾಲದ ದೇವಾಲಯಗಳ ವಿಶಿಷ್ಟ ಲಕ್ಷಣಗಳನ್ನು ಹಾಗೂ ಶಿವಶರಣರ ನೆಲಗಳನ್ನು ಗುರುತಿಸಬೇಕಾಗಿದೆ. ಹೀಗೆ ಹಲವಾರು ವಿಷಯಗಳಿಗೆ ಸೀಮಿತವಾದ ಅಧ್ಯಯನ ಕೈಕೊಳ್ಳಬೇಕಾಗಿದೆ. ಈ ಹಿನ್ನೆಲೆಯಲ್ಲಿ ಡಾ॥ ಪದ್ದಯ್ಯ ಅವರ ಬೂದಿ ದಿಬ್ಬಗಳ ಸಮಸ್ಯೆ ಬಗ್ಗೆ ನಡೆಸಿರುವ ಉತ್ಖನನ-ಅಧ್ಯಯನ, ಅದೇ ರೀತಿ ಕರ್ನಾಟಕ ಸರ್ಕಾರದ ಪ್ರಾಚ್ಯವಸ್ತು ನಿರ್ದೇಶನಾಲಯದಿಂದ ಸನ್ನತಿಯ ಸಮಗ್ರ ಸಾಂಸ್ಕೃತಿಕ ವಿಷಯ ಕುರಿತ ಅನ್ವೇಷಣೆ-ಉತ್ಖನನ ಕಾರ್ಯಗಳು ಮುಖ್ಯವೆನಿಸಿವೆ. ಹೀಗೆ ಈ ಜಿಲ್ಲೆಯ ಪ್ರಾಚೀನ ಇತಿಹಾಸ ಕುರಿತು ಹತ್ತಾರು ರೀತಿಯ ಸಮಸ್ಯೆಗಳ ಬಗ್ಗೆ ಯೋಜನೆಗಳನ್ನು ಹಾಕಿಕೊಂಡು ಅಧ್ಯಯನ ಕೈಕೊಳ್ಳಲು ಈ ಪ್ರದೇಶವು ಒಂದು ಪ್ರಮುಖ ತಾಣವೆನಿಸಿದೆ. ಈ ಹಿನ್ನೆಲೆಯಲ್ಲಿ ೧೯೯೪-೯೫ ರಿಂದ ಈ ಜಿಲ್ಲೆಯಲ್ಲಿ ಹಳ್ಳಿ-ಹಳ್ಳಿಗಳ ಪುರಾತತ್ವ ಅನ್ವೇಷಣೆಯನ್ನು ಕರ್ನಾಟಕ ವಿಶ್ವವಿದ್ಯಾಲಯದ ಕನ್ನಡ ಸಂಶೋಧನ ಸಂಸ್ಥೆಯಿಂದ ಲೇಖಕರು ಕೈಗೆತ್ತಿಕೊಂಡಿರುವರು.

ಈ ವರ್ಷದಲ್ಲಿ (೧೯೯೪-೯೫) ಈ ಜಿಲ್ಲೆಯ ಸೇಡಂ ತಾಲೂಕಿನಲ್ಲಿ ೨೩ ಹಳ್ಳಿಗಳನ್ನು ಹಾಗೂ ಚಿತಾಪುರ ತಾಲೂಕಿನ ತೆಂಗಳಿ ಗ್ರಾಮದ ಅನ್ವೇಷಣೆ ನಡೆಸಲಾಯಿತು. ಆ ಹಳ್ಳಿಗಳು ಸೇಡಂ ತಾಲೂಕಿನ ಸೇಡಂ, ತರನಹಳ್ಳಿ, ತೆಲಕೂರು, ಹಾಳಬಾಳ(ಟಿ), ಸುರವಾರ, ಮುಗನೂರ, ಕಾಚೂರು, ಉಡ್ಗಾ, ಕುಕ್ಕುಂದ, ಮೀನಹಬಾಳ, ಸಂಗಾವಿ, ಸೆಟ್ಟಿಉಡ, ಅರೆಬೊಮ್ಮನಹಳ್ಳಿ, ಕೊಂಕನಹಳ್ಳಿ, ಹೊಸಳ್ಳಿ, ನೀಲಳ್ಳಿ, ಬೀರನಹಳ್ಳಿ, ಹುಣಸನಹಳ್ಳಿ, ಬಿಜ್ಜನಹಳ್ಳಿ, ಹೂಡ(ದೊಡ್ಡದು), ಲಿಂಗನಹಳ್ಳಿ, ಹಂದರಕಿ ಮತ್ತು ಅಡಕಿ, ಚಿತಾಪುರ ತಾಲೂಕಿನ ತೆಂಗಳಿ ಗ್ರಾಮದ ಪ್ರಾಚ್ಯಾವಶೇಷಗಳನ್ನು ಬೇರೆ ಪ್ರಬಂಧದಲ್ಲಿ ವಿವರಿಸಲಾಗುವುದು.

---

* ನಿರ್ದೇಶಕರು, ಕನ್ನಡ ಸಂಶೋಧನ ಸಂಸ್ಥೆ, ಕರ್ನಾಟಕ ವಿ.ವಿ. ಪಾವಟೆ ನಗರ, ಧಾರವಾಡ ೫೮೦೦೦೩

ಆರಂಭದ ಈ ಕಾರ್ಯದಿಂದ ಈ ಭಾಗದಲ್ಲಿ ಮಧ್ಯ ಮತ್ತು ಅಂತ್ಯ ಶಿಲಾಯುಗದ ನೆಲೆಗಳು, ಇತಿಹಾಸ ಆರಂಭಕಾಲದ ನೆಲೆಗಳು, ಮಧ್ಯಯುಗೀನ ಕಾಲದ ಹಲವಾರು ದೇವಾಲಗಳು, ಶಿಲಾಶಾಸನಗಳು, ಶಿಲ್ಪಗಳು ಬೆಳಕಿಗೆ ಬಂದಿವೆ. ಈ ಅಧ್ಯಯನದಲ್ಲಿ ಕ್ರಮವಾಗಿ ಈ ಕೆಳಗಿನಂತೆ ಪ್ರಾಚೀನ ಜನವಸತಿ ನೆಲೆಗಳು ದೇವಾಲಯ-ಶಿಲ್ಪ ಮತ್ತು ಶಾಸನ ಭಾಗಗಳನ್ನಾಗಿ ವಿಂಗಡಿಸಲಾಗಿದೆ.

**ಪ್ರಾಚೀನ ನೆಲೆಗಳು**

ಈ ತಾಲೂಕಿನ ಅರೆಬೊಮ್ಮನಹಳ್ಳಿ ಮತ್ತು ಬದಿಗಿನ ಕಾಗಿನಾ ನದಿ ದಂಡೆ ಮಧ್ಯ ಪ್ರದೇಶದಲ್ಲಿ ಹಲವಾರು ಮಧ್ಯ ಮತ್ತು ಅಂತ್ಯ ಶಿಲಾಯುಗದ ಶಿಲೆಯ ಉಪಕರಣಗಳು ಚದುರಿಹೋಗಿವೆ. ಆ ನೆಲೆಯು ಸುಮಾರು ೨ ಹೆಕ್ಟೇರ್ ಕರಿ ಭೂ ಪ್ರದೇಶವನ್ನು ವ್ಯಾಪಿಸಿದೆ. ಅಲ್ಲಿ ಕೆಲವು ಸೂಕ್ಷ್ಮ ಕಲ್ಲಿನ ಉಪಕರಣಗಳು ಸಿಕ್ಕಿವೆ. ಇದಲ್ಲದೆ ಕೇವಲ ಅಲ್ಪ ಪ್ರಮಾಣದ ಮಡಿಕೆಗಳು ದೊರೆತಿದ್ದು ರಚನೆ, ನಮೂನೆ ಮತ್ತು ಬಣ್ಣಗಳಿಂದ ಅವುಗಳು ಇತಿಹಾಸ ಆರಂಭ ಕಾಲಕ್ಕೆ ಸೇರಿದವೆಂದು ತರ್ಕಿಸಬಹುದು. ಆ ನೆಲೆಯನ್ನು ಸಂಪೂರ್ಣ ಹೊಲವನ್ನಾಗಿ ಈಗ ಪರಿವರ್ತಿಸಲಾಗಿದೆ.

**ಕೊಂಕನಹಳ್ಳಿ:** ಈ ಹಳ್ಳಿಯ ಬದಿಗೆ ಇತಿಹಾಸ ಆರಂಭ ಕಾಲದ ನೆಲೆಯಿದ್ದು ಅಲ್ಲಿ ಗಡಿಗೆ-ಮಡಿಕೆ ಚೂರುಗಳು ದೊರೆತಿವೆ. ಅವುಗಳು ಇತಿಹಾಸ ಆರಂಭ ಕಾಲಕ್ಕೆ ಸೇರಿವೆ. ಇನ್ನಿತರ ಸ್ಥಳಗಳಂತೆ ಈ ಪ್ರದೇಶದಲ್ಲಿ ಅಲ್ಲಲ್ಲಿ ಮಧ್ಯ ಶಿಲಾಯುಗದ ಶಿಲೆಯ ಉಪಕರಣಗಳು ಚದುರಿ ಹೋಗಿರುವುದು ಕಂಡುಬಂದಿವೆ.

**ದೇವಾಲಯುಗಳು**

ಸೇಡಂ ನಗರ ಒಂದರಲ್ಲೇ ಹದಿನಾಲ್ಕಕ್ಕೂ ಹೆಚ್ಚಿನ ದೇವಾಲಯುಗಳಿವೆ. ಅದೇ ರೀತಿ ಹಂದರಕಿ ಗ್ರಾಮದಲ್ಲಿ ಎಂಟಕ್ಕೂ ಹೆಚ್ಚು ದೇವಾಲಯುಗಳಿವೆ. ಇನ್ನುಳಿದ ಸ್ಥಳಗಳಲ್ಲಿ ಕೆಲವೇ ದೇವಾಲಯುಗಳಿವೆ. ಶೈಲಿ ಲಕ್ಷಣಗಳಿಂದ ಈ ದೇವಾಲಯುಗಳನ್ನು ಎರಡು ಭಾಗಗಳನ್ನಾಗಿ ವಿಂಗಡಿಸಿಕೊಳ್ಳಲಾಗಿದೆ. ಮೊದಲನೆಯದು ಕ್ರಿ.ಶ. ೧೦ನೇ ಶತಮಾನದವರೆಗಿನ ದೇವಾಲಯುಗಳು ಮತ್ತು ಎರಡನೆಯದು ಕ್ರಿ.ಶ. ೧೧ ರಿಂದ೧೩ನೇ ಶತಮಾನದ ದೇವಾಲಯುಗಳು. ಈ ಲೇಖನದಲ್ಲಿ ೧೦ನೇಯ ಶತಮಾನದವರೆಗಿನ ದೇವಾಲಯುಗಳ ಸಮೀಕ್ಷೆ ಮಾತ್ರ ಮಾಡಲಾಗಿದೆ. ೧೧-೧೨ನೇಯ ಶತಮಾನ ದೇವಾಲಯುಗಳ ಪರಿಚಯಕ್ಕೆ ಪ್ರತ್ಯೇಕ ಲೇಖ ಬರೆಯಲಾಗುವುದು.

**ಕ್ರಿ.ಶ.೧೦ನೇ ಶತಮಾನದವರೆಗಿನ ದೇವಾಲಯುಗಳು**

**(೧) ಲಿಂಗದ ಗುಡಿ:** ಸೇಡಂ ಪಟ್ಟಣದ ಮಧ್ಯ ಒಂದ ವಿಶಾಲವಾದ ದೇವಾಲಯವಿದ್ದು ಅದನ್ನು ಲಿಂಗದ ಗು ಅಥವಾ ಬಾಣತೆವ್ವನ ಗುಡಿ ಎನ್ನುವರು. ಈ ದೇವಾಲಯ ಮೂಲ ರಚನೆಯು ಸಂಪೂರ್ಣವಾಗಿ ಜೀರ್ಣವಾಗಿದ ತಳಪಾಯದ ಭಾಗಗಳು ಅಲ್ಲಲ್ಲಿ ಕಾಣುತ್ತಿದ್ದು ಅವುಗಳಲ್ಲಿ ಕೇವಲ ಎರಡು ಕಡೆಗಳಲ್ಲಿದ್ದ ಮುಖ ಮಂಟಪಗಳ ಭಾಗಗಳ ಉಳಿದುಕೊಂಡಿವೆ.

ಈಗಿನ ದೇವಾಲಯಕ್ಕೆ ವಿಶಾಲವಾದ ಮಂಟಪದಲ್ಲಿ ೪೩ ಕಂಬಗಳಿವೆ. ಅದರ ಮಧ್ಯ ಹಿಂದುಗಡೆ ಒಂದು ಚಿ ಗರ್ಭಗೃಹವಿದ್ದು ಅದರಲ್ಲಿಯ ಶಿವಲಿಂಗವೂ ಇತ್ತೀಚಿ ಕಾಲದ್ದು. ಈ ಮಂಟಪ ದೇವಾಲಯದ ಕಂಬಗಳು ಮಾತ್ರ ಪ್ರಾಚೀನದ್ದಾಗಿವೆ. ಈ ದೇವಾಲಯದ ಎದುರಿಗೆ ಎ ಮೂಲೆಯಲ್ಲಿ ಒಂದು ಬೃಹತ್ ಮಾನಸ್ತಂಭವಿದೆ. ಈ ದೇವಾಲಯದಲ್ಲಿ ನಿಲ್ಲಿಸಿದ ಕಂಬಗಳು, ಎದುರಿಗಿನ ಮಾನಸ್ಥಂಭ ಹಾಗೂ ಅದರ ತಳಪಾಯದಲ್ಲಿ ಕಾಣು ದಕ್ಷಿಣ ದಿಕ್ಕಿನ ದ್ವಾರಗಳನ್ನು ಇಲ್ಲಿ ಅಧ್ಯಯನ ಮಾಡಲಾಗಿದೆ

ಅಲ್ಲಿಯ ೪೩ ಕಂಬಗಳನ್ನು ಮೂರು ಸಾಲಿನಲ್ಲಿ ನಿಲ್ಲಿಸಲಾಗಿದೆ. ಅವುಗಳು ವಿವಿಧ ಮಾದರಿಯಲ್ಲಿವೆ. ಎರಡು ಕಬ್ಬಿನ ದಂಡದಂತಿವೆ; ಐದು ಉದ್ದ ಕಂಬಗಳಾಗಿವೆ; ಹದಿನೈದು ಬೇರೆ ಬೇರೆ ಸಣ್ಣ ಚೌಕ ಪಟ್ಟಿಕೆಯುಳ್ಳ ಕಂಬಗಳು; ಇನ್ನೆರಡು ಉರುಳೆಯಾಕಾರದ ಉದ್ದ ಕಂಬಗಳು; ಮತ್ತು ಎಂಟು ಇತ್ತೀಚಿನ ಕಂಬಗಳಾಗಿವೆ. ಅವುಗಳಲ್ಲಿ ನಾಲ್ಕು ಬೋದುಗೆಗಳ ಸುಮಾರಾಗಿ ಆಯತಾಕಾರದಲ್ಲಿವೆ. ಅವುಗಳಿಗೆ ಮಧ್ಯ ಪಟ್ಟಿಕೆಗಳಿವೆ. ಇಪ್ಪತ್ನಾಲ್ಕು ಬೋದುಗೆಗಳಿಗೆ ನಾಲ್ಕು ಕೋನಾಕಾರದ ಭಾಗಗಳುಂಟು. ಈ ಕಂಭಗಳಲ್ಲಿ ಮೊದಲನೆ ಮಾದರಿಯ ದುಂಡಾದ ಕಂಬಗಳು ನಾಲ್ಕು, ಆಯತಾಕಾರದ ಬೋದುಗೆಗಳು ಸುಮಾರು ಕ್ರಿ.ಶ. ೧೦ನೇ ಶತಮಾನಕ್ಕೆ ಸೇರಿದ ಉಳಿದ ಕಂಬಗಳು ಸುಮಾರು ಕ್ರಿ.ಶ.೧೨ನೇ ಶತಮಾನದವು

ಈ ಮೇಲೆ ತಿಳಿಸಿದ ದೇವಾಲಯದ ಎದುರಿಗೆ ಎಡಗಡೆಯ ಮೂಲೆಯಲ್ಲಿ ನಾಲ್ಕು ಕಂಬಗಳುಳ್ಳ ಚೌಕಾ



ಚಿತ್ರ ೧. ಮಾನಸ್ಥಂಭ ಮಂಟಪ, ಸೇಡಂ

ತೆರೆದ ಮಂಟಪವಿದೆ. (ಚಿತ್ರ ನಂ.೧) ಈ ಮಂಟಪದ ಮಧ್ಯ ಬೃಹದಾಕಾರದ ಗ್ರಾನೈಟ್ ಶಿಲೆಯ ಒಂದು ಮಾನಸ್ತಂಭವನ್ನು ನಿಲ್ಲಿಸಲಾಗಿದೆ. ಈ ಮಾನಸ್ತಂಭವನ್ನು ಸ್ಥಳೀಯರು ಬಾಣೆ ಕಲ್ಲು ಎನ್ನುವರು. ಈ ಕಂಬದಕಾಂಡ ಭಾಗದಲ್ಲಿ ಎರಡು ಅಷ್ಟ, ಎರಡು ಉದ್ದವಾದ ಚೌಕ ಮುಖಗಳು, ವೃತ್ತಾಕಾರ ಭಾಗ ಮತ್ತು ಅಗಲ ಚೌಕದ ಭಾಗ ಹೊಂದಿದೆ. ಈ ಅಗಲ, ಅದರ ಮೇಲೆ ಮಧ್ಯ ಕಬ್ಬಿಣದ ಸಲಾಕೆಯನ್ನು ನಿಲ್ಲಿಸಲಾಗಿದೆ. ಈ ಮಾನಸ್ತಂಭ ಮಂಟಪದ ಬಲಭಾಗದಲ್ಲಿ ಕಕ್ಷಾಸನ ಪಟ್ಟಿಕೆಗಳಿವೆ. ಅವು ಸುಣ್ಣದ ಶಿಲೆಯದ್ದಾಗಿವೆ.

ಈ ಮೇಲಿನ ದೇವಾಲಯ ಬಲಗಡೆ ದಕ್ಷಿಣಕ್ಕೆ ಮುಖ ಮಾಡಿದ ದ್ವಾರವಿದೆ. ಅದರ ಮೂರು ಶಾಖೆಗಳಲ್ಲಿ ಒಂದು ಪತ್ರ ಉಳಿದವುಗಳು ಸರಳವಾಗಿವೆ. ಈ ಶಾಖೆಗಳು ಲಲಾಟದಲ್ಲೂ ಹರಿದಿವೆ.

೨) **ಈಶ್ವರ ಗುಡಿ:** ಸೇಡಂ ನಗರದ ಪಂಚಲಿಂಗೇಶ್ವರ ದೇವಾಲಯ ಸಂಕಿರಣದ ಉತ್ತರ ಕಡೆಯ ದೇವಾಲಯಕ್ಕೆ ಈಶ್ವರ ಗುಡಿ ಎಂದು ಹೆಸರು. ಈ ದೇವಾಲಯದ ತಳ ಪಾಯದಲ್ಲಿ ಒಂದು ಗರ್ಭಗೃಹ, ಅರ್ಧಮಂಟಪ ಮತ್ತು ನವರಂಗವಿದೆ. ನವರಂಗದ ಮಧ್ಯ ಗರ್ಭಗೃಹಕ್ಕೆ ಎದುರಾಗಿ ನಂದಿಯನ್ನು ಕೂಡಿಸಲಾಗಿದೆ. ಈ ಗುಡಿಯ ಭಿತ್ತಿಯಯಲ್ಲಿ ಸರಳ ಚೌಕಾದ ಅರ್ಧಗಂಬಗಳ ಒಂದು ಸಾಲಿದೆ. ಗರ್ಭಗೃಹದ ಭಿತ್ತಿ ಮೇಲೆ ಮತ್ತು ಕಪೋತ, ಕೆಳಗಡೆ ಹಂಸಪಕ್ಷಿಗಳ ಸಾಲಿರುವುದು. ಅದರಲ್ಲಿಯ ಗರ್ಭಗೃಹ ಕ್ರಿ.ಶ.೧೧ನೇ ಶತಮಾನದ್ದು, ಉಳಿದ ಭಾಗ ಕ್ರಿ.ಶ ೧೨ನೇ ಶತಮಾನ. ಅದಕ್ಕೆ ಇತ್ತೀಚೆಗೆ ಸುಣ್ಣ ಲೇಪಿಸಿದ್ದು ಅಲ್ಲಲ್ಲಿ ಚಿಕ್ಕಪುಟ್ಟ ಬದಲಾವಣೆ ಗಳನ್ನು ಮಾಡಲಾಗಿದೆ.

೩) **ಜೈನ ಬಸದಿ:** ಸೇಡಂ ಗ್ರಾಮ ಬದಿಯ ನದಿಯ ಉತ್ತರದ ದಂಡೆಯಲ್ಲಿ ಎರಡು ಜೈನ ಬಸದಿಗಳಿವೆ. ಮೊದಲನೇ ಬಸದಿಯ ಗರ್ಭಗೃಹ ಮತ್ತು ಅಂತರಾಳಗಳು ಸಂಪೂರ್ಣ ಹಾಳಾಗಿವೆ. ಅದರ ವಿಶಾಲ ನವರಂಗ ಉಳಿದುಕೊಂಡಿದೆ. ದಕ್ಷಿಣಾಭಿಮುಖವಾಗಿರುವ ಈ ಬಸದಿಯ ಅಂತರಾಳ ದ್ವಾರದ ತಲಾ ಒಂದು ಫಲಕದಲ್ಲಿ ಮೂರು ಶಾಖೆಗಳಿವೆ. ಅದರಲ್ಲಿ ಲತಾಸುರುಳಿ, ಅರ್ಧಗಂಭ ಮತ್ತು ಪತ್ರಣೆಗಳ ಸಾಲಿವೆ. ಉಳಿದ ಭಾಗ ಸರಳವಾಗಿದೆ. ನವರಂಗದಲ್ಲಿ ಒಂಭತ್ತು ಅಂಕಣಗಳು. ನವರಂಗ ದ್ವಾರದ ತಲಾ ಒಂದು ಫಲಕದಲ್ಲಿ ಮೂರು ಶಾಖೆಗಳಿದ್ದು ಅವುಗಳಲ್ಲಿ ಲತಾಸುರುಳಿ, ಅರ್ಧಗಂಭ ಮತ್ತು ಹೂಬಳ್ಳಿಗಳಿವೆ. ಮಂಗಳಪಟ್ಟಿ ಸರಳವಾಗಿದೆ. ಅದರ ಕಪೋತದ ಕೆಳಗಡೆ ಒಂದೇ ಸಾಲಿನಲ್ಲಿ ಆರು ಹಂಸಪಕ್ಷಿಗಳು, ಕಪೋತದ ಮುಂದುಗಡೆ ನಾಲ್ಕು ಚೈತ್ಯ ಮಾದರಿಗಳು, ಅದರ ಮೇಲೆ ರೇಖನಾಗರ ಶೈಲಿಯ

ಶಿಖರ ನಮೂನೆ. ಈ ಶಿಖರ ನಮೂನೆ ಮಧ್ಯೆ ರತ್ನಗಳಿವೆ. ಹೊಸ್ತಿಲ ಮಧ್ಯ ಮುಂಭಾಗದಲ್ಲಿ ಚಾಚಿದ ಪಟ್ಟಿಕೆಯಲ್ಲಿ ರತ್ನ, ಬದಿಗಳಲ್ಲಿ ಕೀರ್ತಿಮುಖ, ಉಳಿದೆಡೆ ಎರಡು ರತ್ನಗಳಿವೆ. ದ್ವಾರಫಲಕಗಳ ಕೆಳಗಡೆ ಚೌರಿ ಹಿಡಿದ ಸೇವಕ, ನಾಲ್ಕು ಕೈಗಳುಳ್ಳ ದ್ವಾರಪಾಲಕ, ಕೈಗಳಲ್ಲಿ ಐದು ಹೆಡೆ ನಾಗ ಎರಡು ಕೈಗಳಲ್ಲಿ ಗಧೆ ಮತ್ತು ಒಂದುಕೈ ಅಭಯಮುದ್ರೆಯಲ್ಲಿದೆ. ಈ ದ್ವಾರದ ಮುಂದೆ ತೆಗೆದ ಮುಖ ಮಂಟಪವಿದೆ. ಶೈಲಿಯಿಂದ ಈ ಬಸದಿ ಸುಮಾರು ಕ್ರಿ.ಶ.೧೧ನೇ ಶತಮಾನ ಕೊನೆಭಾಗ.

೪) ಜೈನ ಬಸದಿ: ಈ ಮೇಲಿನ ಬಸದಿ ಬದಿಗೆ ಮತ್ತೊಂದು ಜೈನ ಬಸದಿಯಿದ್ದು ಅದು ಸಹ ದಕ್ಷಿಣಾಭಿಮುಖವಾಗಿದೆ. ಈ ಬಸದಿಯ ತಳಪಾಯವನ್ನು ಪರಿಶೀಲಿಸಿದರೆ ಅದರ ಗರ್ಭಗೃಹ ಭಾಗ ಸಂಪೂರ್ಣ ಹಾಳಾಗಿದೆ. ಅದಕ್ಕೆ ಒಂದು ವಿಶಾಲ ಅರ್ಧಮಂಟಪ, ನವರಂಗ ಮತ್ತು ಮುಖ ಮಂಟಪವಿದ್ದು ಮುಖಮಂಟಪದ ಮುಂದಿನ ಭಾಗದಲ್ಲಿ ಎರಡು ಅಂಕಣಗಳಿವೆ. ಈ ಅಂಕಣಗಳನ್ನು ಮನೆಯನ್ನಾಗಿ ಪರಿವರ್ತಿಸಲಾಗಿದೆ.

ನವರಂಗದ ಹಿಂಬದಿಯ ಗೋಡೆಗೆ ಒಂದೇ ಸಾಲಿನಲ್ಲಿ ಮೂರು ದ್ವಾರಗಳು ಉಳಿದುಕೊಂಡಿವೆ. ಅವುಗಳು ಮೂರು ಗರ್ಭಗೃಹಗಳ ದ್ವಾರಗಳೆಂಬುದು ಗೊತ್ತಾಗುತ್ತದೆ. ಅದರ ಒಂದರಲ್ಲಿ ಮಾತ್ರ ತೀರ್ಥಂಕರನ ಶಿಲ್ಪವಿದೆ. ಒಂದು ದ್ವಾರ ಫಲಕ ಸಂಪೂರ್ಣ ಹಾಳಾಗಿದೆ. ಉಳಿದವುಗಳಲ್ಲಿ ಒಂದರ ದ್ವಾರಫಲಕದಲ್ಲಿ ಮೂರು ಶಾಖೆಗಳಿದ್ದು ಅಲ್ಲಿ ಸರಳ ಪಟ್ಟಿ, ಅಷ್ಟಮುಖ ಅರ್ಧಗಂಭ ಮತ್ತು ಸರಳಪಟ್ಟಿಯಿವೆ. ಈ ದ್ವಾರದಲ್ಲಿ ಕಪೋತದ ಕೆಳಗಡೆಯಿಂದ ಒಂದು ಸಾಲಿನಲ್ಲಿ ಹಂಸಪಕ್ಷಿಗಳು, ಅವುಗಳ ಮುಖದಲ್ಲಿ ಚೈತ್ಯಾಕೃತಿಗಳು ಅವುಗಳ ಮೇಲೆ ರತ್ನ ನಮೂನೆಗಳಿವೆ.

ಮಧ್ಯ ದ್ವಾರಫಲಕದಲ್ಲಿ ಮೂರು ಶಾಖೆಗಳಿದ್ದು ಅವು ಸರಳಪಟ್ಟಿ, ಅರ್ಧಗಂಭ ಮತ್ತು ಪತ್ರಗಳು. ಲಲಾಟದಲ್ಲಿ ಜಿನ; ಈ ದ್ವಾರ ಕಪೋತದ ಕೆಳಗೆ ಒಂದೇ ಸಾಲಿನಲ್ಲಿ ಹಂಸಗಳು; ಮುಖದಲ್ಲಿ ಮಧ್ಯ ಚೈತ್ಯ ನಮೂನೆ, ಅವುಗಳ ಮೇಲೆ ಐದು ರತ್ನ ಚಿಹ್ನೆಗಳು, ಹೀಗಾಗಿ ಒಂದೇ ಸಾಲಿನಲ್ಲಿ ಮೂರು ದ್ವಾರಗಳಿದ್ದುದರಿಂದ ಇದೊಂದು ತ್ರಿಕೂಟಮಾದರಿ ಬಸದಿಯಾಗಿತ್ತೆಂದು ತರ್ಕಿಸಬಹುದು. ಇದರ ಮುಂದೆ ವಿಶಾಲವಾದ ಆಯತಾಕಾರದ ಅರ್ಧಮಂಟಪವಿದೆ. ಅದರ ಛತ್ತಿನಲ್ಲಿ ಮೂರು ಅಂಕಣಗಳಿದ್ದು ಅಲ್ಲಿ ಅಲಂಕೃತ ಮೂರು ನಕ್ಷತ್ರಾಕಾರದ ಕಮಲದ ಭುವನೇಶ್ವರಿಗಳಿವೆ. ಈ ಮಂಟಪದ ಎಡ ಗೋಡೆಯಲ್ಲಿ ಒಂದು ಜಾಲಂಧರ ಹಾಗೂ ಒಂದು ಗೂಡಿದೆ. ಹಾಗೂ ಅದರ ಮುಂದೆ ಎರಡು ಕಂಭಗಳಿದ್ದು ಅದು ಅರ್ಧಗಂಭ ಮತ್ತು ಮುಂದಿನ ನವರಂಗವನ್ನು ವಿಭಾಗಿಸುತ್ತವೆ. ಇದರಿಂದ ಒಂದೇ ಸಾಲಿನಲ್ಲಿ ಮೂರು ಗರ್ಭಗೃಹಗಳಿಗೆ ಒಂದೇ ಅರ್ಧಮಂಟಪದ ಜೋಡಣೆ ವಿಶಿಷ್ಟವೆನಿಸಿದೆ.

ಈ ಅರ್ಧಮಂಟಪದ ಮುಂದೆ ವಿಶಾಲವಾದ ಆರು ಕಂಭಗಳ ಸಭಾಮಂಟಪ. ಅದರ ಮಧ್ಯದ ನಾಲ್ಕು ಕಂಭಗಳ ಮೇಲೆ ಛತ್ತಿನಲ್ಲಿ ಭುವನೇಶ್ವರಿ ಅದರಲ್ಲಿ ಅಲಂಕೃತ ಕಮಲವು ನಕ್ಷತ್ರಾಕಾರದಲ್ಲಿದೆ. ಉಳಿದ ಅಂಕಣಗಳ ಛತ್ತಿನಲ್ಲಿ ಯಾವ ಚಿತ್ರಗಳಿರುವುದಿಲ್ಲ. ನವರಂಗದ ಬದಿಯ ಗೋಡೆಗಳಲ್ಲಿ ತಲಾ ಎರಡು ಅರ್ಧಗಂಭಗಳು ಹಾಗೂ ಒಂದುಗೂಡುಗಳಿವೆ.

ನವರಂಗ ದ್ವಾರಫಲಕದಲ್ಲಿ ಐದು ಶಾಖೆಗಳಾದ ರತ್ನ, ಲತಾಸುರುಳಿ, ಅರ್ಧಗಂಭ, ಒಂದರ ಮೇಲೊಂದು ಸಿಂಹ ಮತ್ತು ಪತ್ರಗಳಿವೆ. ಕೆಳಗಡೆ ದ್ವಾರಪಾಲಕರು ತಲಾ ಒಂದು ಫಲಕದಲ್ಲಿರುವರು; ದ್ವಾರಪಾಲಕನ ಬದಿಗಳಲ್ಲಿ ದಂಪತಿಗಳಿರುವರು. ಈ ದ್ವಾರಪಾಲಕರ ಸಮೂಹ ಸುತ್ತಲೂ ಲತಾಸುರುಳಿಯ ಅಲಂಕಾರ ಲಲಾಟದಲ್ಲಿ ಜಿನ ಬಿಂಬದ ದ್ವಾರ ಫಲಕ, ಎರಡು ಫಲಕಗಳ ಲತಾ ಮತ್ತು ರತ್ನ ಶಾಖೆಗಳು ಬದಿಗೂ ಹರಿದಿವೆ. ಲಲಾಟದಲ್ಲಿ ಜಿನ ಬಿಂಬವಿದೆ. ಲಲಾಟದ ಮೇಲೆ ಮುಂಚಾಚಿದ ಕಪೋತ. ಅದರ ಛತ್ತಿನಲ್ಲಿ ಕಮಲದ ಅಲಂಕಾರ. ಅದರ ಮೇಲೆ ಮೂರು ಶಿಖರ ಮಾದರಿಗಳು. ಅವುಗಳ ಮಧ್ಯ ಕೀರ್ತಿಮುಖ. ಈ ದ್ವಾರದ ಬದಿಗಳಲ್ಲಿ ಎರಡು ಶಿಲಾಶಾಸನಗಳಿವೆ.

ಈ ಬಸದಿಯ ಭಿತ್ತಿಯಲ್ಲಿ ಸರಳ ಅರ್ಧಗಂಭಗಳ ಸಾಲಿದೆ. ಅದರ ಮೇಲೆ ಸರಳ ಕಪೋತ. ಈ ಬಸದಿಯು ಸುಮಾರು ಕ್ರಿ.ಶ.೧೧ನೇಯ ಶತಮಾನ ಕೊನೆಯ ಭಾಗದ್ದು.

೫) ತ್ರಿಲಿಂಗೇಶ್ವರ ದೇವಾಲಯ: ಸೇಡಂ ಗ್ರಾಮ ಮಧ್ಯ ತ್ರಿಲಿಂಗೇಶ್ವರ ದೇವಾಲಯವಿದೆ ಅದರ ತಳಪಾಯದಲ್ಲಿ ಎರಡು ಗರ್ಭಗೃಹಗಳು ಎದುರು ಬದಿರಾಗಿವೆ. (ಪೂರ್ವ-ಪಶ್ಚಿಮ). ಅವುಗಳಿಗೆ ತಲಾ ಒಂದು ಅರ್ಧ ಮಂಟಪ. ತಲಾ ಒಂದರ ಮುಂದೆ ಎರಡು ಕಂಬಗಳು ಮತ್ತು ಅವುಗಳ ಮಧ್ಯ ನವರಂಗವಿದೆ. ಪೂರ್ವಕ್ಕೆ ಮುಖಮಾಡಿದ ಗರ್ಭಗೃಹದಲ್ಲಿ ಶಿವಲಿಂಗ. (ಚಿತ್ರ ನಂ. ೨) ಅದರಲ್ಲಿಯ ಬ್ರಹ್ಮಸೂತ್ರ ವಿಶಿಷ್ಟವಾದದ್ದು. ಅದರ ದ್ವಾರ ಫಲಕದ ಶಾಖೆಗಳ ಕೆಳಗಡೆ



ಚಿತ್ರ ೨. ಶಿವಲಿಂಗ, ತ್ರಿಲಿಂಗೇಶ್ವರ ಗುಡಿ ಸೇಡಂ

ಬದಿಗಳಲ್ಲಿ ಸೇವಕ-ಸೇವಕಿಯರ ಉಬ್ಬು ಶಿಲ್ಪಗಳು. ಅದರ ಮುಂದಿನ ಎರಡು ಕಂಬಗಳುಳ್ಳ ಅರ್ಧ ಮಂಟಪ, ಈ ಅರ್ಧ ಮಂಟಪದ ಗೋಡೆಗಳಲ್ಲಿ ಬದಿಗೆ ಮತ್ತು ಎದುರು ಬದಿರು ತಲಾ ಎರಡು ಗೂಡುಗಳು. ಅವುಗಳು ಈಗ ಖಾಲಿ ಇವೆ. ಅದೇ ರೀತಿ ಪಶ್ಚಿಮಕ್ಕೆ ಮುಖಮಾಡಿದ ಗರ್ಭಗೃಹ ಮುಂದಿನ ಅರ್ಧಮಂಟಪದ ಬದಿಗಿನ ಗೋಡೆಗಳಲ್ಲಿ ಗೂಡುಗಳಿವೆ. ಈ ಅರ್ಧ ಮಂಟಪದ ಕಂಬಗಳು ದುಂಡಾಗಿ ನೀಳವಾಗಿವೆ.

ನವರಂಗದ ಮಧ್ಯದಲ್ಲಿ ನಾಲ್ಕು ಕಂಬಗಳಿದ್ದು ಅದರ ಭಾಗ ಸ್ವಲ್ಪ ಎತ್ತರವಾಗಿದೆ. ಈ ನವರಂಗಕ್ಕೆ ಒಂದು ಪ್ರವೇಶವಿದ್ದು ಅದು ಉತ್ತರಕ್ಕೆ ಮುಖವಾಗಿದೆ. ಅದರ ದ್ವಾರದ ತಲಾ ಒಂದು ಫಲಕದಲ್ಲಿ ಚತುರ್ಭುಜ ಧಾರಿ ತ್ರಿಭಂಗಿಯ ಶೈವ ದ್ವಾರಪಾಲಕರು, ಕೈಗಳಲ್ಲಿ ಅಭಯ ಢಮರು, ತ್ರಿಶೂಲ ಮತ್ತು ಗದೆ, ಅವರ ಬದಿಗೆ ಚೌರಿ ಹಿಡಿದ ಸೇವಕ ಮತ್ತು ಸೇವಕಿಯರು ನಿಂತಿರುವರು. ಈ ದೇವಾಲಯ ದ್ವಿಕೂಟ ಮಾದರಿಯಲ್ಲಿರುವುದು ವಿಶಿಷ್ಟ; ಹಾಗೂ ಒಂದರ ಅರ್ಧಮಂಟಪದ ಕಂಬಗಳು ಸುಮಾರು ಕ್ರಿ.ಶ.೧೧ನೇ ಶತಮಾನ.

೬) **ಮಾಧವ ದೇವಾಲಯ:** ಈ ಗ್ರಾಮದ ಮಾಧವ ದೇವಾಲಯ ಏಕಕೂಟದ್ದು, ಅದಕ್ಕೆ ಒಂದು ಚೌಕಾದ ಗರ್ಭಗೃಹ, ತೆರೆದ ಒಂದು ಆಯಾಕಾರದ ಅರ್ಧಮಂಟಪ ಮತ್ತು ವಿಶಾಲವಾದ ನವರಂಗ ಗರ್ಭಗೃಹದ ಮಧ್ಯ ಶಿವಲಿಂಗ. ಅದರ ಬ್ರಹ್ಮಸೂತ್ರ ಈ ಮೇಲೆ ತಿಳಿಸಿದ ತ್ರಿಲಿಂಗೇಶ್ವರ ದೇವಾಲಯದಂತಿರುವುದು. ಗರ್ಭಗೃಹ ಪೂರ್ವಕ್ಕೆ ಮುಖವಾಗಿದೆ. ಅದರ ದ್ವಾರದ ತಲಾ ಒಂದು ಫಲಕದಲ್ಲಿ ಮೂರು ಶಾಖೆಗಳಾದ ರತ್ನ, ಅರ್ಧಗಂಭ ಮತ್ತು ಪತ್ರಗಳ ಫಲಕಗಳು. ಕೆಳಗಡೆ ಚತುರ್ಭುಜಧಾರಿ ತ್ರಿಭಂಗಿಯಶೈವ ದ್ವಾರಪಾಲಕರ ಕೈಗಳಲ್ಲಿ ಅಭಯ, ಢಮರು, ತ್ರಿಶೂಲ ಮತ್ತು ಗದೆ. ಬದಿಗಳಲ್ಲಿ ಚೌರಿಹಿಡಿದು ನಿಂತ ಸೇವಕ ಸೇವಕಿ; ಲಲಾಟದ ಮಧ್ಯ ಗಜಲಕ್ಷ್ಮಿ. ಅರ್ಧಮಂಟಪದ ಎದುರು ಬದಿರು ಹಾಗೂ ಪಾರ್ಶ್ವ ಗೋಡೆಗಳಲ್ಲಿ ಒಟ್ಟು ನಾಲ್ಕು ಗೂಡುಗಳು, ಒಂದರಲ್ಲಿ ಮಾತ್ರ ಗಣೇಶ ಶಿಲ್ಪ ಉಳಿದಿದೆ.

ಈ ಅರ್ಧ ಮಂಟಪದ ಮುಂದೆ ವಿಶಾಲ ನವರಂಗ. ಅದರ ಪ್ರವೇಶ ದ್ವಾರ ದಕ್ಷಣಕ್ಕಿದೆ. ಮಧ್ಯದ ನಾಲ್ಕು ಕಂಬಗಳು ಛತ್ತಿನಲ್ಲಿರುವ ಭುವನೇಶ್ವರಿಯಲ್ಲಿ ನಕ್ಷತ್ರಾಕಾರದ ಕಮಲದ ಅಲಂಕರಣ ಛತ್ತಿನ ಎರಡು ಚೌಕಗಳ ಎಂಟು ಮುಖದ ಪಟ್ಟಿಕೆಗಳ ಕೆಳಗಡೆ ಎಂಟು ದಿಕ್‌ಪಾಲಕರ ಚಿತ್ರಗಳಿವೆ. ಈ ನವರಂಗಕ್ಕೆ ತೆರೆದ ಕಕ್ಷಾಸನವಿದೆ. ಶೈಲಿಯಿಂದ ಅದು ಸುಮಾರು ಕ್ರಿ.ಶ.೧೧ನೇ ಶತಮಾನದ ಆದಿಭಾಗ.

**ದ್ವಾರಪಟ್ಟಿ:** ಸೇಡಂ ಗ್ರಾಮದ ಚಿಕ್ಕ ಅಗಸಿ ಹಾಗೂ ಅಗಸಿಹಳ್ಳಿ ದಂಡೆಯಲ್ಲಿ ಒಂದು ಮಾರುತಿ ಗುಡಿಯಿದೆ. ಅದರ ದ್ವಾರಪಟ್ಟಿಕೆಯ ತಲಾ ಒಂದು ಫಲಕದಲ್ಲಿ ಮೂರು ಶಾಖೆಗಳು ; ಅವು ಸರಳಪಟ್ಟಿಕೆ, ಉರುಳೆಯಾಕಾರ ಅರ್ಧಗಂಭ ಮತ್ತು ಪತ್ರಗಳಿವೆ. ಫಲಕದ ಕೆಳಭಾಗದಲ್ಲಿ ಆಳೆತ್ತರದದ್ವಾರ ಪಾಲಕರ ಉಬ್ಬು ಪತ್ರಗಳಿವೆ. ಲಲಾಟ ಸರಳವಾಗಿದ್ದು ಯಾವ ಚಿತ್ರಗಳಿರುವುದಿಲ್ಲ. ಅದರ ಕಪೋತದ ಕೆಳಗಡೆ ಒಂದೇ ಸಾಲಿನಲ್ಲಿ ಹಂಸಪಕ್ಷಿಗಳಿವೆ. ಮುಂಚಾಚಿದ ಕಪೋತದ ಮೇಲೆ ಒಂದೇ ಸಾಲಿನಲ್ಲಿ ಚೈತ್ಯ ನಮೂನೆಗಳಿವೆ. ಶೈಲಿಯಿಂದ ಇದು ಸುಮಾರು ಕ್ರಿ.ಶ. ೧೧ನೇ ಶತಮಾನದ್ದು.

**ದೇಗುಲ:** ಈ ಮೇಲೆ ತಿಳಿಸಿದ ಮಾಧವ ಗುಡಿ ಹತ್ತಿರ ದೇಗುಲ ಎಂಬ ಹೆಸರಿನ ಚಿಕ್ಕಗುಡಿಯಿದೆ. ಚೌಕಾಕಾರದ ಒಂದು ಗರ್ಭಗೃಹ ಹಾಗೂ ಮುಚ್ಚಿದ ಅಂತರಾಳವಿದೆ. ಅದು ಪೂರ್ವಾಭಿಮುಖವಾಗಿದ್ದು ಗರ್ಭಗೃಹದಲ್ಲಿ ಮಧ್ಯ ಶಿವಲಿಂಗವಿದ್ದು, ಅದರ ಬ್ರಹ್ಮಸೂತ್ರ ಸುಮಾರು ಕ್ರಿ.ಶ.೮-

೯ನೇ ಶತಮಾನದ ಶೈಲಿಯಲ್ಲಿದೆ. ದ್ವಾರಪಟ್ಟಿಕೆಯ ಫಲಕಗಳಲ್ಲಿ ಚತುರ್ಭುಜಧಾರಿ ಶೈವ ದ್ವಾರಪಾಲಕರಿರುವರು. ಕೈಗಳಲ್ಲಿ ಅಭಯ, ತ್ರಿಶೂಲ,ಢಮರು,ಮತ್ತು ಗದೆಗಳಿವೆ. ಫಲಕಗಳಲ್ಲಿ ಐದು ಶಾಖೆಗಳಿದ್ದು ಅವು ರತ್ನ ಲತಾಸುರುಳಿ ಅರ್ಧಗಂಭ ಸಿಂಹ, ಮತ್ತು ಸರಳ ಪಟ್ಟಿಕೆ, ದ್ವಾರಪಾಲಕನ ಬದಿಗೆ ಸೇವಕ ಸೇವಕಿಯರಿರುವರು. ಹೊಸ್ತಿಲಿಗೆ ಮಧ್ಯ ರತ್ನಪಟ್ಟಿ, ಲಲಾಟ ಮಧ್ಯ ಗಜಲಕ್ಷ್ಮಿ. ಉತ್ತರಾಂಗದಲ್ಲಿ ಒಂದೇ ಸಾಲಿನಲ್ಲಿ ಐದು ರೇಖಾನಾಗರ ಶೈಲಿಯ ಶಿಖರ ಮಾದರಿಗಳು. ಅವುಗಳ ಮಧ್ಯದಲ್ಲಿ ಸಿಂಹಗಳಿವೆ. ಅಂತರಾಳ ಗೋಡೆಗಳಲ್ಲಿ ಗೂಡುಗಳು. ಅದರಲ್ಲಿ ಬೇರೆಡೆಯಿಂದ ತಂದು ಕೂಡಿಸಿದ ಶಿವಲಿಂಗದ ಬ್ರಹ್ಮಸೂತ್ರ ಮಾದರಿಯು ಸುಮಾರು ಕ್ರಿ.ಶ.೧೨ನೇ ಶತಮಾನದ್ದು. ಅಂತರಾಳ ದ್ವಾರಪಟ್ಟಿಯ ಫಲಕದಲ್ಲಿ ನಾಲ್ಕು ಶಾಖೆಗಳಿದ್ದು ಅವು ರತ್ನ, ಅರ್ಧಗಂಭ, ಲತಾಸುಳಿವುಗಳಿಂದ, ಸರಳವಾಗಿ ಅಲಂಕೃತವಾಗಿವೆ. ಉತ್ತರಾಂಗದಲ್ಲಿ ಮಕರ ತೋರಣವಿದ್ದು ಅದರಲ್ಲಿ ಮಧ್ಯನಟರಾಜ ಬದಿಗೆ ವಾದ್ಯ ಮೇಳವಿದೆ. ಅದು ಸುಮಾರು ಕ್ರಿ.ಶ. ೧೧ನೇ ಶತಮಾನ ಆದಿಭಾಗ.

೭ ) **ಗಣೇಶ ಗುಡಿ:** ಈ ಮೇಲಿನ ಗುಡಿ ಹತ್ತಿರ ಚಿಕ್ಕ ಗಣೇಶಗುಡಿಯಿದೆ. ಅದು ದಕ್ಷಿಣಾಭಿಮುಖವಾಗಿ ಏಕಕೂಟದಲ್ಲಿದ್ದು ಅದರ ಗರ್ಭಗೃಹ ಚೌಕಾಗಿದೆ. ಮಧ್ಯದಲ್ಲಿ ಚತುರ್ಭುಜವಾಗಿ ಗಣೇಶನ ಶಿಲ್ಪವಿದೆ. ದ್ವಾರ ಪಟ್ಟಿಯ ಫಲಕದಲ್ಲಿ ನಾಲ್ಕು ಶಾಖೆಗಳಿದ್ದು ಅವು ಸರಳ, ರತ್ನ, ಸರಳ ಮತ್ತು ಪತ್ರ ಅಲಂಕಾರವಿದೆ. ಅದು ಸುಮಾರು ಕ್ರಿ.ಶ.೧೧ನೇ ಶತಮಾನ ಆದಿಭಾಗ.

೮ ) **ಈಶ್ವರ ಗುಡಿ:** ಈಶ್ವರ ಗುಡಿಯು ಈ ಮೇಲಿನ ಗುಡಿ ಬದಿಗಿದೆ. ಅದಕ್ಕೆ ಒಂದು ಗರ್ಭಗೃಹ ಹಾಗೂ ಒಂದು ಅರ್ಧ ಮಂಟಪವಿದೆ. ಗರ್ಭಗೃಹದಲ್ಲಿ ಶಿವಲಿಂಗವಿದ್ದು, ಅದರ ಬ್ರಹ್ಮಸೂತ್ರ ಈ ಮೇಲೆ ತಿಳಿಸಿದ ತ್ರಿಲಿಂಗ ದೇವಾಲಯದಂತಿದೆ. ಅದರ ಛತ್ತಿನ ಭುವನೇಶ್ವರಿಯಲ್ಲಿ ಕಮಲದ ಅಲಂಕರಣವಿದೆ. ದ್ವಾರಪಟ್ಟಿಯ ಫಲಕದಲ್ಲಿ ಮೂರು ಸರಳ ಶಾಖೆಗಳಿವೆ. ಕೆಳಗಡೆ ಪೂರ್ಣ ಕುಂಭವಿದೆ. ಲಲಾಟದಲ್ಲಿ ಗಣೇಶನ ಚಿತ್ರವಿದೆ. ಅದರ ಮುಂದೆ ಅರ್ಧ ಮಂಟಪವಿದ್ದು ಅದು ಸುಮಾರು ಕ್ರಿ.ಶ. ೧೦ನೇ ಶತಮಾನದ್ದಾಗಿದೆ.

**ಹಂದರಕಿಯ ದೇವಾಲಯಗಳು**

ಸೇಡಂನಗರದಿಂದ ಸುಮಾರು ೨೦ಕಿ.ಮಿ ಅಂತರದ ಹಂದರಕಿ ಗ್ರಾಮ ಆಗ್ನೇಯಕ್ಕೆ ಸುಮಾರು ಎಂಟು ದೇವಾಲಯಗಳಿದ್ದು ಅವುಗಳು ಲೋಕೇಶ್ವರ, ಆನೇಶ್ವರ, ಜೋತಿರ್ಲಿಂಗ, ಇತ್ಯಾದಿ ಅವುಗಳ ಅಧ್ಯಯನ ಈ ರೀತಿಯಿದೆ.

೧ ) **ಲೋಕೇಶ್ವರ :** ಲೋಕೇಶ್ವರ ದೇವಾಲಯದ ಪಶ್ಚಿಮಕ್ಕೆ ಮುಖ ಮಾಡಿದ್ದು ಅದಕ್ಕೆ ಒಂದು ಗರ್ಭಗೃಹ, ಅರ್ಧ ಮಂಟಪ, ನವರಂಗ ಮತ್ತು ಮುಖ ಮಂಟಪ, ಎದುರಿಗೆ ನಂದಿ ಮಂಟಪವಿದೆ. ಆಯತಾಕಾರದ ಗರ್ಭಗೃಹ, ಒಂದೊಂದು ಗೋಡೆಯಲ್ಲಿ ಎರಡು ಅರ್ಧಗಂಭಗಳಿವೆ. ಮಧ್ಯ ಶಿವಲಿಂಗವಿದ್ದು ಅದರ ಶೈಲಿಯು ಸುಮಾರು ಕ್ರಿ.ಶ. ೧೨ನೇ ಶತಮಾನದ್ದು. ಛತ್ತು ಅಷ್ಟಾಕೃತಿಯಲ್ಲಿದ್ದು ಅದರಲ್ಲಿ ಎರಡು ಸುತ್ತಿನ ಕಮಲವನ್ನು ಅಲಂಕೃತಗೊಳಿಸಲಾಗಿದೆ. ದ್ವಾರಪಟ್ಟಿಯ ಫಲಕದ ಮೂರು ಶಾಖೆಗಳಲ್ಲಿ ಲತಾ, ಸುರುಳಿ, ಅರ್ಧಗಂಬ ಮತ್ತು ನೃತ್ಯಭಂಗಿಯಲ್ಲಿ ನಾಲ್ಕು ಗಣಗಳ ಚಿತ್ರಗಳಿವೆ. ಕೆಳಗಡೆ ದ್ವಾರಪಾಲಕರ ಚಿತ್ರಗಳಿರದೆ ಸರಳ ಪಟ್ಟಿಯಿದೆ. ಲಲಾಟ ಪಟ್ಟಿಕೆಯಲ್ಲೂ ಲತಾ ಸುರುಳಿ ಹರಿದಿದೆ. ಮೇಲೆ ಕಪೋತ, ಕೆಳಗಡೆ ಒಂದೇ ಸಾಲಿನಲ್ಲಿ ಹಂಸ ಪಕ್ಷಿಗಳಿವೆ. ಕಪೋತ ಪಟ್ಟಿಯಲ್ಲಿ ನಾಲ್ಕು ಚೈತ್ಯ ನಮೂನೆಗಳಿದ್ದು ನಡುವಿನ ಎರಡು ಚೈತ್ಯಗಳ ಮೇಲೇ ಗಜಲಕ್ಷ್ಮಿಯನ್ನು ಚಿತ್ರಿಸಿರುವುದು ವಿಶಿಷ್ಟವಾಗಿದೆ. ಹೊಸ್ತಿಲ ಅಂಚಿನಲ್ಲಿ ಆನೆಗಳು, ಹೊಸ್ತಿಲ ಮುಂದೆ ಚಂದ್ರಶಿಲೆಯಿದೆ.

ಗರ್ಭಗೃಹದ ಮುಂದಿನ ಅರ್ಧಮಂಟಪದಲ್ಲಿ ಸು.ಕ್ರಿ.ಶ.೧೦ನೇ ಶತಮಾನದ ಎರಡು ಕಂಬಗಳಿವೆ. ಅರ್ಧಮಂಟಪದ ಮಧ್ಯಛತ್ತಿನ ಭುವನೇಶ್ವರಿಯಲ್ಲಿ ಕಮಲದ ಚಿತ್ರವಿದೆ. ನವರಂಗ ಭಾಗ ತದನಂತರ ಕಾಲದಲ್ಲಿ ಜೋಡಿಸಲಾಗಿದೆ. ಮಧ್ಯದ ನಾಲ್ಕು ಕಂಬಗಳ ನೆಲಮಟ್ಟ ಎತ್ತರವಿದೆ. ಗೋಡೆಭಾಗ ಜೀರ್ಣೋದ್ಧಾರವಾಗಿದ್ದು, ಎರಡೂ ಕಡೆಗಳಲ್ಲಿ ಆಯತಾಕಾರದ ಜಾಲಂದ್ರಗಳಿವೆ. ನವರಂಗದಲ್ಲಿ ಎರಡು ಸುತ್ತಿನ ಗೋಲಾಕಾರ ಕಮಲದಿಂದ ಅಲಂಕರಣವಾಗಿದೆ. ನವರಂಗ ಮುಂದಿನ ಮುಖಮಂಟಪವು ಸು.ಕ್ರಿ.ಶ ೧೫ನೇ ಶತಮನದಲ್ಲಿ ಜಿರ್ಣೋದ್ಧಾರವಾಗಿದ್ದು, ಆ ಕಾಲದಲ್ಲಿ ನವರಂಗ ದ್ವಾರ ಬದಿಗಳಲ್ಲಿ ನಿಲ್ಲಿಸಿದ ಮನುಷ್ಯನಷ್ಟು ಎತ್ತರದ ಶೈವ ದ್ವಾರಪಾಲಕರಿರುವರು. ನವರಂಗದ ದ್ವಾರ ಪಟ್ಟಿಯು ಈ ಕಾಲದ್ದಾಗಿದೆ. ಚತುರ್ಭುಜಧಾರಿಗಳಾದ ದ್ವಾರಪಾಲಕರ ಕೈಗಳಲ್ಲಿ (ಬಲಗಡೆ) ಅಭಯ, ತ್ರಿಶೂಲ, ನಾಗ ಮತ್ತು ಗದೆಗಳಿವೆ. ಈ ದ್ವಾರಪಾಲಕರು ಕಿರೀಟ ಮುಕುಟ, ಕೊರಳಹಾರ, ಕುಂಡಲ, ಸೊಂಟಕ್ಕೆ ಹಗ್ಗ, ಪಟ್ಟಿ

ಇತ್ಯಾದಿ ವಸ್ತ್ರಾಭರಣಗಳನ್ನು ಧರಿಸಿರುವರು. ಇವರ ಕಾಲುಗಳು ಪ್ರತ್ಯೇಕ ಪೀಠದ ಮೇಲೆ ನಿಂತಿವೆ. ಎದುರಿಗೆ ನಂದಿಯನ್ನು ಕೂಡಿಸಿದ ತೆರೆದ ನಾಲ್ಕು ಕಂಬಗಳ ಮಂಟಪ. ನಂದಿಯು ಈ ದೇವಾಲಯದ ಎದುರಿಗೆ ಮುಖಮಾಡಿ ಕುಳಿತಿದೆ. ನಂದಿ ಕೊರಳಲ್ಲಿ ಹಾಕಿದ ಸರಗೆಜ್ಜೆಗಳು ತ್ರಿಕೋಣ ಆಕಾರದಂತಿವೆ. ಮುಖಮಂಟಪಕ್ಕೆ ಪ್ರವೇಶ ಎರಡು ಬದಿಗಳಲ್ಲಿದೆ.

ಎತ್ತರವಾದ ಅಧಿಷ್ಠಾನದಲ್ಲಿ ಜಗತಿ, ತ್ರಿಪಟ್ಟ ಕುಮುದ ಮತ್ತು ಕಂಠ, ಕಂಪ ಭಾಗಗಳಿವೆ. ಕಪೋತದಲ್ಲಿ ಸಾಲಾಗಿ ಚೈತ್ಯ ಮಾದರಿಗಳಿವೆ. ಈ ಅಧಿಷ್ಠಾನ ಸುಮಾರು ಒಂದು ಮೀಟರ್ ಎತ್ತರವಿದೆ.

**ಭಿತ್ತಿ:** ಈ ದೇವಾಲಯ ಹೊರಗೋಡೆ (ಭಿತ್ತಿ)ಯಲ್ಲಿ ಸರಳ ಅರ್ಧಗಂಬಗಳ ಸಾಲಿದೆ. ಗರ್ಭಗೃಹದಲ್ಲಿರುವ ಲಿಂಗಕ್ಕೆ ಅಭಿಷೇಕ ಮಾಡಿದ ನೀರು ಹೊರಹೋಗಲು ಒಂದು ಪ್ರನಾಳಿಕೆಯನ್ನು ಅಧಿಷ್ಠಾನದ ಮೇಲೆ ಕೂಡಿಸಿದ್ದು ಅದು ಉತ್ತರಕ್ಕೆ ಮುಖಮಾಡಿದೆ. ಗರ್ಭಗೃಹ ಹೊರಗೋಡೆಯು ತ್ರಿರಥ ದಲ್ಲಿದ್ದು, ಮಧ್ಯ ಮೂರು ಮುಖಗಳಲ್ಲಿ ಎರಡು ಅರ್ಧಗಂಬಗಳ ಮೇಲೆ ಭದ್ರಭಾಗವಿದೆ. ನವರಂಗ ಭಿತ್ತಿಯ ಮಧ್ಯ ಆಯತಾಕಾರ ಜಾಲಂಧ್ರಗಳನ್ನು ಅರ್ಧಗಂಬದ ಮೇಲಿಟ್ಟು ಕೂಡಿಸಲಾಗಿದೆ. ಗರ್ಭಗೃಹದ ಮೇಲೆ ಇತ್ತಿಚೆಗೆ ಬಹುಸುಂದರವಾದ ದ್ರಾವಿಡ ಮಾದರಿಯ ಶಿಖರವನ್ನು ನಿರ್ಮಿಸಲಾಗಿದೆ. ಗಾರೆ ಇಟ್ಟಿಗೆಯಿಂದ ಈ ಶಿಖರವನ್ನು ನಿರ್ಮಿಸಲಾಗಿದೆ.

ಈ ದೇವಾಲಯು ಅಧಿಷ್ಠಾನ, ಗರ್ಭಗೃಹ, ಅರ್ಧಮಂಟಪ, ನಂದಿಮಂಟಪ, ಮೂಲಕಟ್ಟಡ (ಸು.ಕ್ರಿ.ಶ.೯ನೇ ಶತಮಾನ) ನವರಂಗದ ಕಂಬಗಳು, ಗೋಡೆದ್ವಾರ, ತದನಂತರ ಕಾಲದಲ್ಲಿ ಬದಲಾವಣೆಯಾಗಿವೆ (ಸು.ಕ್ರಿ.ಶ. ೧೧ ರಿಂದ ೧೫ನೇ ಶತಮಾನ).

**೨) ಆನೇಶ್ವರ ದೇವಾಲಯ:** ಹಂದರಕಿ ಗ್ರಾಮದ ಈ ಮೇಲಿನ ಲೋಕೇಶ್ವರ ದೇವಾಲಯ ಪಕ್ಕದಲ್ಲಿ ಪಶ್ಚಿಮಾಭಿಮುಖವಾಗಿ ಆನೇಶ್ವರ ದೇವಾಲಯವಿದ್ದು ಆ ದೇವಾಲಯದ ತಳಪಾಯದಲ್ಲಿ ಗರ್ಭಗೃಹ, ತೆರೆದ ಅಂತರಾಳ ಮತ್ತು ನವರಂಗಗಳಿವೆ ಇದಕ್ಕೆ ಹೊಂದಿ ಉತ್ತರ ದಕ್ಷಿಣಾಭಿಮುಖಮಾಡಿದ ಇನ್ನೆರಡು ಗರ್ಭಗೃಹಗಳು ತಲಾ ಒಂದು ಅರ್ಧಮಟಪ, ಹಾಗೂ ಅದರ ಮುಂದೆ ವಿಶಾಲವಾದ ತೆರೆದ ಸಭಾಮಂಟಪ ಇವೆ. ಈ ದೇವಾಲಯ ಸುತ್ತಲೂ ಹೊರಗಡೆ ಪ್ರದಕ್ಷಿಣಾ ಪಥವಿದೆ.(ಚಿತ್ರ ನಂ.೩)



ಚಿತ್ರ ೩. ಮಂಚಬಂಧವುಳ್ಳ ಉಪಪೀಠ, ಲೋಕೇಶ್ವರ ಗುಡಿ ಹಂದರಕಿ,

ಗರ್ಭಗೃಹದ ಮಧ್ಯ ಸು.ಕ್ರಿ.ಶ.೧೨ನೇ ಶತಮಾನ ಶೈಲಿಯ ಶಿವಲಿಂಗವಿದೆ. ಗರ್ಭಗೃಹದ ತಳಪಾಯ ತ್ರಿರಥ ದಲ್ಲಿದೆ. ದ್ವಾರಪಟ್ಟಿಯವು ತಲಾ ಒಂದರ ಫಲಕಗಳಲ್ಲಿ ಆರು ಶಾಖೆಗಳಾದ ಲತಾಸುಳಿ, ಕುಬ್ಜರು ಒಬ್ಬರ ಮೇಲೆ ಒಬ್ಬರು, ಸ್ವಲ್ಪಜಾಗ ಬಿಟ್ಟು ಉದ್ದವಾಗಿ ಅರ್ಧಗಂಬ, ರತ್ನಗಳು, ಹಂಸಪಕ್ಷಿಗಳ ಸಾಲು ಮತ್ತು ಪತ್ರಗಳಿವೆ. ಕೆಳಗಡೆ ಚತುರ್ಭುಜಧಾರಿ ಶೈವ ದ್ವಾರಪಾಲಕರಿದ್ದು, ಕೈಗಳಲ್ಲಿ ಗದೆ, ನಾಗ, ತ್ರಿಶೂಲ ಮತ್ತುಅಭಯಮುದ್ರೆ ಇವೆ. ಲಲಾಟದಲ್ಲಿ ಮದ್ಯ ಗಜಲಕ್ಷ್ಮಿ, ಬದಿಗಳಲ್ಲಿ ಲತಾಸರುಳಿ ಹಾಗೂ ಹಂಸಪಕ್ಷಿಗಳ ಸಾಲುಗಳು ಹರಿದಿವೆ. ಅದರ ಮೇಲೆ ಕಪೋತದ ಮೇಲೆ ಐದು ರೇಖಾನಾಗರ ಶೈಲಿಯ ಶಿಖರ ಮಾದರಿಗಳಿವೆ. ಹೊಸ್ತಿಲ ಬದಿಗಳಲ್ಲಿ ಆನೆಗಳು ಹಾಗೂ ಮುಂದೆ ಚಂದ್ರ ಶಿಲೆಯಿವೆ. ತೆರೆದ ಅಂತರಾಳದಲ್ಲಿ ಎರಡು ಸಾಲಿನಲ್ಲಿ ನಾಲ್ಕು ಕಂಬಗಳಿವೆ. ಮುಂದಿನ ಸಾಲಿನ ಎರಡು ಕಂಬಗಳ ಕಾಂಡ ಭಾಗ ಉರುಳೆಯಾಕಾರವಿದ್ದು ವಿವಿಧ ಉಂಗುರಾಕಾರದ ಪಟ್ಟಿಕೆಗಳಿವೆ. ಎರಡನೇ ಸಾಲಿನ ಕಂಬಗಳಲ್ಲಿ ಕಾಂಡ ಭಾಗದಲ್ಲಿ ಚಿತ್ರವುಳ್ಳ ಎರಡು ಚೌಕ ಮುಖಗಳಿವೆ. ಒಂದರ ಕಂಬದಲ್ಲಿ ಕ್ರಮವಾಗಿ ೧)ನೃತ್ಯ ಗಣೇಶ, ವಾದ್ಯಮೇಳ. ೨)ಶಿವ-ಪಾರ್ವತಿ, ಅವರ ಬದಿಗಳಲ್ಲಿ ದೇವ-ದೇವತೆಯರು, ಶಿವನ ಪೀಠದ ಕೆಳಗಡೆ ನಂದಿ, ೩) ನಟರಾಜ-ಬದಿಯಲ್ಲಿ ವಾದ್ಯಮೇಳ ಮತ್ತು ೪) ನರಸಿಂಹ ಹಿರಣ್ಯ ಕಶ್ಯಪುವನ್ನು ತೊಡೆಯ ಮೇಲೆ ಹಾಕಿಕೊಂಡು ಹೊಟ್ಟೆ ಬಗೆಯುತ್ತಿರುವ ದೃಶ್ಯಗಳು ನಾಲ್ಕು ಮುಖಗಳಲ್ಲಿವೆ. ಇನ್ನೊಂದರ ಕಂಬದ ನಾಲ್ಕು ಮುಖಗಳಲ್ಲಿ ಕ್ರಮವಾಗಿ ೧) ನಂದಿಯ ಮೇಲೆ ಸವಾರಿಮಾಡುವ ಶಿವ, ಆತನ ನಾಲ್ಕು ಕೈಗಳಲ್ಲಿ ಅಭಯ (ಹಸ್ತ), ನಾಗ, ತ್ರಿಶೂಲ, ಮತ್ತು ಕೊನೆಯ ಕೈಯನ್ನು

ಮಂಡಿಯ ಮೇಲಿಟ್ಟಿರುವನು. ಆತನ ಎದುರಿಗೆ (ಎಡಗಡೆ) ಭಕ್ತ, ಬಲಗಡೆ ಚೌರಿ ಹಿಡಿದು ನಿಂತ ಸೇವಕಿ, ೨) ಶಿವ-ಅರ್ಜುನರ ಹೊಡೆದಾಟದ ಕಿರಾತಾರ್ಜುನೀಯ ದೃಶ್ಯ, ಶಿವ ಬೇಡನ ವೇಶದಲ್ಲಿ, ೩) ಶಿವ-ಪಾರ್ವತಿ ಬದಿಗೆ ಬಿಲ್ಲು ಹಿಡಿದು ನಿಂತ ಭಕ್ತ ಅರ್ಜುನ, ಶಿವಲಿಂಗ ಬದಿಗೆ ಹಂದಿ ಬೇಟೆ ಆಡುವ ವೇಷದಲ್ಲಿ ಶಿವ-ಪಾರ್ವತಿ ಮತ್ತು ಇನ್ನೊಬ್ಬರು. ೪) ಗಜಮರ್ದನ-ಸುರನ ಮೇಲೆ ನಿಂತ ನೃತ್ಯಗಳ ಚಿತ್ರಗಳಿವೆ.(ಚಿತ್ರ ನಂ ೪)

ಈ ಅಂತರಾಳ ಮುಂದೆ ಬದಿಗಳಲ್ಲಿ (ತಲಾ ಒಂದು ಕಡೆ)ಚಿಕ್ಕ ಗರ್ಭಗೃಹ ಮತ್ತು ಅರ್ಧ ಮಂಟಪಗಳನ್ನು ಜೋಡಿಸಲಾಗಿದೆ. ಈ ಗರ್ಭಗೃಹ ದ್ವಾರಪಟ್ಟಿಗಳಲ್ಲಿ ಸರಳ ಎರಡು ಶಾಖೆಗಳು, ಲಲಾಟದಲ್ಲಿ ಗಜಲಕ್ಷ್ಮಿ ಇರುವಳು.

ಈ ಮೂರು ಗರ್ಭಗೃಹಗಳಿಗೆ ಅಂತರಾಳ, ಎಡಗಡೆಯ ಕಂಬದ ಚೌಕಪಟ್ಟಿಕೆಯಲ್ಲಿ ಗಜಗಳಿದ್ದು ಅವುಗಳಲ್ಲಿ ಚೈತ್ಯ ಅಲಂಕಾರವಿದೆ. ಈ ಕಂಬಗಳಿಗೆ ಪೀಠಗಳಿವೆ.

ಅಂತರಾಳ ದ್ವಾರ ಪಟ್ಟಿಯ ತಲಾ ಒಂದು ಫಲಕದಲ್ಲಿ ಚತುರ್ಭುಜಧಾರಿ ಶೈವ ದ್ವಾರಪಾಲಕರಿರುವರು. ಕೈಗಳಲ್ಲಿ ಕಮಲ, ಡಮರು, ತ್ರಿಶೂಲ ಮತ್ತು ಗದೆ. ಬದಿಗಳಲ್ಲಿ ಚೌರಿಹಿಡಿದ ಸೇವಕಿ ಇರುವಳು. ಮೂರು ಶಾಖೆಗಳಿದ್ದು ಅವು ಎರಡು ಸರಳ ಪಟ್ಟಿಗಳು ಮತ್ತು ಒಂದು ಅರ್ಧಗಂಬ. ಈ ಪಟ್ಟಿಕೆಗಳ ಬದಿಗಳಲ್ಲಿ ಜಾಲಂಧ್ರಗಳು. ಲತಾ ಸುರುಳಿಯಿಂದ ಅಲಂಕೃತಗೊಂಡಿದೆ. ಅಂತರಾಳ ಬದಿಗೋಡೆಗಳಲ್ಲಿ ಗೂಡುಗಳಿದ್ದು, ಒಂದರಲ್ಲಿ ಮಾತ್ರ ಗಣೇಶ ಶಿಲ್ಪ ಉಳಿದಿದೆ. ಈ ಗೂಡುಗಳಿಗೆ ಶಿಖರ ಮಾದರಿಗಳಿವೆ. ಅಂತರಾಳ ದ್ವಾರದ ಉತ್ತರಾಂಗದಲ್ಲಿ ಎರಡು ಅರ್ಧಗಂಬಗಳ ಮಧ್ಯ ನಟರಾಜ ಮತ್ತು ಕಂಬ ಬದಿಗಳಲ್ಲಿ ಭಕ್ತರು ಮತ್ತು ಚೌರಿಬೀಸುವ ಸೇವಕರು. ಈ ದೃಶ್ಯ ಎರಡು ಮಕರಗಳ ಮಧ್ಯದಲ್ಲಿವೆ. ಮಕರಗಳ ಬದಿಗಳಲ್ಲಿ ನವಿಲುಗಳಿವೆ.



ಚಿತ್ರ ೪. ಕಥಾನಕ ಶಿಲ್ಪವುಳ್ಳ ಕಂಬಗಳು, ಆನೇಶ್ವರ ದೇವಾಲಯ, ಹಂದರಕಿ

ಎಂಟು ಕಂಬಗಳುಳ್ಳ ತೆರೆದ ನವರಂಗದ ಸುತ್ತಲೂ ಕಕ್ಷಾಸನವಿದೆ ಅದಕ್ಕೆ ದಕ್ಷಿಣ ಮತ್ತು ಪಶ್ಚಿಮ ಕಡೆಗಳಿಂದ ಪ್ರವೇಶ ದ್ವಾರಗಳಿವೆ. ವಿಶಾಲ ಭುವನೇಶ್ವರಿಯಲ್ಲಿ ನಾಲ್ಕು ಸುತ್ತಿನ ಗೋಲಾಕಾರದ ಕಮಲ. ಅದರ ಮಧ್ಯ ಇಳಿಬಿಟ್ಟ ಪದ್ಮ ಅದಕ್ಕೆ ಸುತ್ತ ಲತಾಸುರುಳಿಯ ಅಲಂಕಾರ. ಈ ಭುವನೇಶ್ವರಿ ನಾಲ್ಕು ಮೂಲೆಗಳಲ್ಲಿ ಕೀರ್ತಿಮುಖ. ಎಂಟು ಕಂಬಗಳಲ್ಲಿ ನಾಲ್ಕು ಕಂಬಗಳು ಬೇರೆ ಮಾದರಿಯಲ್ಲಿವೆ. ಕಕ್ಷಾಸನ ಫಲಕಗಳ ಹಿಂದಿನ ಬದಿಯ ಕೆಳಗಡೆ ಪಟ್ಟಿಕೆಯಲ್ಲಿ ರತ್ನ ಸಾಲು, ನಿಂತ ಆನೆ, ಕಮಲ, ಮೀನು ಮುಂತಾದ ಚಿತ್ರಗಳಿವೆ. ಈ ದೇವಾಲಯವು ಎತ್ತರದ ಉಪಜಗತಿಯ ಮೇಲೆ ಕಟ್ಟಲಾಗಿದೆ. ಪ್ರವೇಶದ್ವಾರ ಈ ಉಪಜಗತಿ ಉತ್ತರ ಕಡೆಯಿಂದ ಇದೆ. ಸುತ್ತಲೂ ರತ್ನ ಪಟ್ಟಸಾಲಿದೆ.

ಈ ದೇವಾಲಯ ಸುತ್ತಲೂ ಹೊರಗಡೆ ಪ್ರದಕ್ಷಿಣಾ ಪಥವಿರುವುದು. ಪಶ್ಚಿಮದ ಮುಖ್ಯ ಪ್ರವೇಶ ದ್ವಾರಕ್ಕೆ ಹೊಂದಿ ಅಧಿಷ್ಠಾನದಲ್ಲೂ ಪ್ರವೇಶದ್ವಾರವಿದೆ. ಅಲ್ಲಿಯೂ ಮೆಟ್ಟಲುಗಳಿದ್ದು ಬದಿಗಳಲ್ಲಿ ಕೈಪಿಡಿಗಳಿವೆ. ಅಧಿಷ್ಠಾನವು ಈ ಮೇಲೆ ವರ್ಣಿಸಿದ ಲೋಕೇಶ್ವರದಂತಿದೆ. ಅಂದರೆ ಜಗತಿ, ಉಪಾನ, ಕಂಪ, ಕಂಠ, ಕಂಪ, ತ್ರಿಪಟ್ಟ ಕುಮುದ ಮತ್ತು ಕಪೋತಗಳಿವೆ. ಅಧಿಷ್ಠಾನದ ಮೇಲಿನ ಕಪೋತದಲ್ಲಿ ಚೈತ್ಯ ನಮೂನೆಗಳ ಸಾಲಿದೆ. ಇದಕ್ಕೆ ಉಪಜಗತಿಯಿದೆ. ಬಿತ್ತಿ ಬಾಗ ಇತ್ತೀಚೆಗೆ ಜೀರ್ಣೋದ್ಧಾರಗೊಂಡಿದೆ. ಅದರ ತಳಪಾಯವು ತ್ರಿರಥ ಮಾದರಿಯಲ್ಲಿರುವುದು (ಗರ್ಭಗೃಹಕ್ಕೆ ಮಾತ್ರ). ಶಿಖರ ಭಾಗವು ಸಂಪೂರ್ಣ ಜೀರ್ಣೋದ್ಧಾರವಾಗಿದೆ.

೩) ಜೋತಿರ್ಲಿಂಗ : ಈ ಮೇಲೆ ತಿಳಿಸಿದ ಲೋಕೇಶ್ವರ ದೇವಾಲಯ ಬಲಬದಿಗೆ ಶಿಥಿಲಗೊಂಡಿದೆ. (ಚಿತ್ರ ನಂ.5) ತಳಪಾಯ ಉಳಿದುಕೊಂಡಿದ್ದು ಅದನ್ನು ಜೋತಿರ್ಲಿಂಗ ಗುಡಿ ಎನ್ನುವರು. ಅದರ ತಳಪಾಯ ಹಾಗೂ ದ್ವಾರ ಭಾಗಗಳು ಉಳಿದುಕೊಂಡಿವೆ. ಈ ದೇವಾಲಯಕ್ಕೆ ಚೌಕಾದ ಗರ್ಭಗೃಹ ಮತ್ತು ಅರ್ಧಮಂಟಪ ಹೊಂದಿದೆ. ತಳಪಾಯದ ಮೂರು ಕಡೆಗಳಲ್ಲಿ ತಲಾ ಒಂದರಂತೆ ತ್ರಿರಥ ಭಾಗಗಳಿದ್ದು



ಚಿತ್ರ ೫. ಅಧಿಷ್ಠಾನ, ಜ್ಯೋತಿರ್ಲಿಂಗ ಗುಡಿ, ಹಂದರಕಿ.

ಒಂದೊಂದರ ಮಧ್ಯದ ಭದ್ರಭಾಗವನ್ನು ಕಡಿಮೆ ಆಳದಲ್ಲಿ ಸೀಳಿದಂತೆ ರಚಿಸಲಾಗಿದೆ. ಆದರೆ ಉತ್ತರ ಕಡೆಗೆ ಸೀಳಿದ ಭಾಗದಲ್ಲಿ ನಳವನ್ನು ಕೂಡಿಸಲಾಗಿದೆ. ಈ ರೀತಿಯ ರಚನೆಯನ್ನು ಗರ್ಭಗೃಹ ಭಾಗಕ್ಕೆ ಮಾತ್ರ ಸೀಮಿತಗೊಂಡಿದೆ. ಅಲ್ಲಿ ಕ್ರಿ.ಶ. 12ನೇ ಶತಮಾನದ ಎರಡು ಶಿವಲಿಂಗಗಳನ್ನು ಪೀಠಗಳ ಮೇಲೆ ಕೂಡಿಸಲಾಗಿದೆ. ಹಾಗೂ ಸು.ಕ್ರಿ.ಶ ೧೧ನೇ ಶತಮಾನ ಶೈಲಿಯ ಚೌಕಾಕಾರದ ಒಂದು ಲಿಂಗಪೀಠವು ಅದರ ಮಧ್ಯವಿದೆ. ಅದರ ಲಿಂಗವು ಸ್ಥಾನಪಲ್ಲಟವಾಗಿದೆ. ದ್ವಾರದಲ್ಲಿ ಮೂರು ಶಾಖೆಗಳಿದ್ದು ಅದರಲ್ಲಿ ಲತಾಸುರುಳಿ, ಅರ್ಧಗಂಬ, ವಾದ್ಯ ಮಾಡುವ ಐದು ಹುಡುಗರು(?) ಒಬ್ಬರ ಮೇಲೆ ಮತ್ತೊಬ್ಬರಂತೆ ಸ್ವಲ್ಪ ಜಾಗಬಿಟ್ಟು (ಒಂದೇ ಸಾಲಿನಲ್ಲಿ) ಈ ಮೇಲೆ ತಿಳಿಸಿದ ದೇವಾಲಯಗಳ ದ್ವಾರದಲ್ಲಿರುವಂತೆ ಚಿತ್ರಿಸಲಾಗಿದೆ. ಮಂಗಳ ಫಲಕದಲ್ಲೂ ಈ ಶಾಖೆಗಳು ಅಡ್ಡವಾಗಿ ಹರಿದಿವೆ. ಕೆಳಗಡೆ ಚತುರ್ಭುಜಧಾರಿ ಶೈವ ದ್ವಾರಪಾಲಕರಿರುವರು. ಕೈಗಳಲ್ಲಿ ಅಭಯ, ನಾಗ, ತ್ರಿಶೂಲ ಮತ್ತು ಗದೆಗಳಿವೆ. ಆಯತಾಕಾರದ ತೆರೆದ ಅರ್ಧಮಂಟಪದ ಮುಂದೆ ಎರಡು ಕಂಬಗಳಿದ್ದು, ಅವುಗಳ ಕಾಂಡಭಾಗ ದುಂಡಾಗಿವೆ. ಆದರ ಮುಂದೆ ಪ್ರವೇಶಕ್ಕೆ ಮೆಟ್ಟಿಲುಗಳಿವೆ. ಅಧಿಷ್ಠಾನದಲ್ಲಿ ಉಪಾನ, ಜಗತಿ, ಕಂಪ, ಕಂಠ, ಕಂಪ, ತ್ರಿಪಟ್ಟಕುಮುದ ಹಾಗೂ ಕಪೋತಗಳಿದ್ದು ಮೇಲಿನ ತರದ(ಕಪೋತ)ಸುತ್ತಲೂ ಚೈತ್ಯ ನಮೂನೆಗಳಿವೆ. ಇಲ್ಲಿಯ ಎರಡು ಲಿಂಗಗಳನ್ನು ತದನಂತರ ಕೂಡಿಸಲಾಗಿದೆ. ಈ ದೇವಾಲಯ ಹಿಂಬದಿಯಲ್ಲಿ ಬಲಗಡೆಗೆ ಒಂದು ಮೆಟ್ಟಿಲುಳ್ಳ ಬಾವಿ ಹಾಗೂ ಎಡಗಡೆಗೆ ಒಂದು ಚಿಕ್ಕ ಗುಡಿಯಿದೆ. ಈ ಗುಡಿಯು ಒಂದು ಚೌಕಾಕಾರದ ಗರ್ಭಗೃಹವನ್ನು ಒಳಗೊಂಡಿದೆ.

ಳ ) **ಈಶ್ವರ ಗುಡಿ:** ಈ ಮೇಲಿನ ಜೋತಿರ್ಲಿಂಗ ಗುಡಿ ಎದುರಿಗೆ ಈಶ್ವರ ಗುಡಿಯಿದ್ದು, ಅದು ಪೂರ್ವಾಭಿಮುಖವಾಗಿದೆ. ಅದಕ್ಕೆ ಗರ್ಭಗೃಹ ತೆರೆದ ಅರ್ಧ ಮಂಟಪ ಮತ್ತು ಮುಖ ಮಂಟಪಗಳಿವೆ. ತಳಪಾಯವು ಈ ಮೇಲಿನ ಜೊತಿರ್ಲಿಂಗದಂತೆ ತ್ರಿರಥದಲ್ಲಿದ್ದು ಅದು ಗರ್ಭಗೃಹ ಮತ್ತು ಅರ್ಧ ಮಂಟಪಗಳಿಗೆ ಸೀಮಿತವಾಗಿದೆ. ಚೌಕಾದ ಗರ್ಭಗೃಹ ಮಧ್ಯ ಒಂದು ಶಿವಲಿಂಗವಿದೆ (ಕ್ರಿ.ಶ.೧೨ನೇ ಶತಮಾನ). ಗರ್ಭಗೃಹದ ದ್ವಾರಕ್ಕೆ ಐದು ಶಾಖೆಗಳಿದ್ದು ಅವುಗಳಲ್ಲಿ ಲತಾಸುರುಳಿ, ರತ್ನಪಟ್ಟಿ, ಅರ್ಧಗಂಭ, ನಿಂತು ವಾದ್ಯ ಮಾಡುವ ಐದು ಹುಡುಗರು ಮತ್ತು ಪತ್ರಗಳಿವೆ. ಮಕರಗಳಫಲಕದಲ್ಲೂ ಲತಾ, ರತ್ನಶಾಖೆಗಳು ಹರಿದಿವೆ. ಈ ಫಲಕದ ಮೇಲೆ ಮತ್ತು ಅದರ ಮುನ್ಚಾಚಿದ ಕಪೋತದ ಕೆಳಗಡೆ ಒಂದೇ ಸಾಲಿನಲ್ಲಿ ಹಂಸಪಕ್ಷಿಗಳಿವೆ. ಕಪೋತದಲ್ಲಿ ನಾಲ್ಕು ಚೈತ್ಯ ಮಾದರಿಗಳನ್ನು ಅಲಂಕರಿಸಲಾಗಿದೆ. ಉತ್ತರಾಂಗದಲ್ಲಿ ವಿಮಾನ ಮಾದರಿಗಳಿವೆ. ಬಾಗಿಲ ಫಲಕ ಕೆಳಗಡೆ ಚತುರ್ಭುಜಧಾರಿ ಶೈವ ದ್ವಾರಪಾಲಕರಿರುವರು. ಕೈಗಳಲ್ಲಿ ಅಭಯ, ತ್ರಿಶೂಲ, ನಾಗ ಮತ್ತು ಗದೆಗಳಿವೆ. ಭುಜಂಗ(ಹೊಸ್ತಿಲ)ದ ಅಂಚಿನಲ್ಲಿ ನಿಂತ ಆನೆಗಳಿವೆ.

ತೆರೆದ ಅರ್ಧಮಂಟಪ ಬದಿಯ ಗೋಡೆಗಳಲ್ಲಿ ಎರಡು ಗೂಡುಗಳಿದ್ದು, ಎಡಗಡೆಯ ಗೂಡು ಹಾಳಾಗಿದೆ. ಮುಂದೆ ಸಂಪೂರ್ಣ ತೆರೆದ ಚೌಕಾಕಾರದ ಮಂಟಪವಿದ್ದು ಅದರ ತಳಪಾಯವು ದ್ವಿರಥದಲ್ಲಿದೆ.

**ನಂದಿ ಮಂಟಪಗಳು:** ಎರಡು ಪ್ರತ್ಯೇಕ ನಂದಿ ಮಂಟಪಗಳು ಈ ಮೇಲಿನ ಗುಡಿಯ ದಕ್ಷಿಣಕ್ಕೆ, ಈ ದೇವಾಲಯಗಳ ಸಂಕೀರ್ಣದ ಮುಖ್ಯ ದ್ವಾರದಪೂರ್ವಕ್ಕೆ ಹಾಗೂ ಲೋಕೇಶ್ವರ ದೇವಾಲಯ ಪಶ್ಚಿಮಕ್ಕಿದ್ದು ಅವು ಲೋಕೇಶ್ವರ ದೇವಾಲಯದ ಕಡೆ ಮುಖ ಮಾಡಿವೆ. ಎತ್ತರದ ತೆರೆದ ಚೌಕಾದ ಮಂಟಪಗಳು ಮಂಚಬಂದದಲ್ಲಿದ್ದು ಮಧ್ಯೆ ನಂದಿವಿಗ್ರಹಗಳನ್ನು ಕೂಡಿಸಲಾಗಿದೆ. ಕೊರಳಲ್ಲಿ ತ್ರಿಕೋನಾಕಾರಾದ ಗೆಜ್ಜೆಸರಗಳನ್ನು ಧರಿಸಲಾಗಿದೆ.

**೫). ಕಾಳಿ ಗುಡಿ:** ಈ ಮೇಲಿನ ಆನೇಶ್ವರ ಗುಡಿ ಎದುರುಗಡೆ ಸಾಲಾಗಿ ಮೂರು ಪೂರ್ವಾಭಿಮುಖ ಮಾಡಿದ ಚಿಕ್ಕ ಗುಡಿಗಳಿದ್ದು, ಅದರಲ್ಲಿ ಕೊನೆಯದು ಕಾಳಿ ಗುಡಿಯಾಗಿದೆ. ಈ ಕಾಳಿ ಗುಡಿಯ ತಳಪಾಯದಲ್ಲಿ ಗರ್ಭಗೃಹ ಮತ್ತು ತೆರೆದ ಅರ್ಧಮಂಟಪ ಅಂಚು ತ್ರಿರಥದಲ್ಲಿದೆ. ಗರ್ಭಗೃಹ ಚೌಕಾಗಿದ್ದು ಅದರ ಮಧ್ಯ ದೀರ್ಘಚತುಸ್ರಾಕಾರದ ಸಪ್ತಾಶ್ವಗಳ ಸೂರ್ಯಪೀಠವಿದೆ. ಹಾಗೂ ಇತ್ತೀಚಿನ ಕಾಲದ ಕಾಳಿಕಾಮೂರ್ತಿ ಮತ್ತು ಕ್ರಿ.ಶ. 12ನೇ ಶತಮಾನದ ಒಂದು ಶಿವಲಿಂಗ ಇವೆ. ದ್ವಾರಕ್ಕೆ ನಾಲ್ಕು ಶಾಖೆಗಳಿದ್ದು, ಅವುಗಳಲ್ಲಿ ಲತಾಬಳ್ಳಿ, ಅರ್ಧಗಂಬ (ಉರುಳೆಯಾಕಾರದಾಗಿದ್ದು ಮಧ್ಯ ಮಧ್ಯ ಗಣ್ಣುಗಳಿವೆ). ಐದು ವಾದ್ಯ ಮಾಡುವ ನಿಂತಭಂಗಿಯ ಹುಡುಗರಿದ್ದು, ಎಡಗಡೆಯ ಫಲಕದಲ್ಲಿ ಒಂದು ಗಣೇಶನನ್ನು (ಗಣ) ಉಳಿದ ನಾಲ್ವರು ವಾದ್ಯ ಮತ್ತು ನೃತ್ಯ ಭಂಗಿ ಯಲ್ಲಿರುವರು. ಅವರು ಕುಬ್ಜಗಣಗಳಿರಬೇಕು. ಮಂಗಳ ಫಲಕದಲ್ಲೂ ಲತಾಬಳ್ಳಿ ಹರಿದಿವೆ. ಮಧ್ಯ ಗಜಲಕ್ಷ್ಮಿ ಶಿಲ್ಪವಿದೆ. ಮುಂದೆ ಚಾಚಿನ ಕಪೋತದ ಮೇಲೆ ಪತ್ರವುಳ್ಳ ಉತ್ತರಾಂಗವಿದೆ. ತೆರೆದ ಅರ್ಧಮಂಟಪದಲ್ಲಿ ಎರಡು (ನೀಳವಾದ)ಕಂಬಗಳು ಗೋಡೆಗಳ ಅಂಚಿನಲ್ಲಿವೆ. ಅಧಿಷ್ಠಾನವು ಸರಳವಾಗಿದ್ದು. ಅದರಲ್ಲಿ ಮೂರು ತರಗಳಿವೆ, ಸರಳ ಭಿತ್ತಿಯಲ್ಲಿ ತ್ರಿರಥ ಮಾದರಿಯಿದೆ. ಶಿಖರವು ಕದಂಬ ನಾಗರ ಮಾದರಿಯಲ್ಲಿದೆ.

**೬) ವಿಷ್ಣು ಗುಡಿ:** ಈ ಮೇಲಿನ ಕಾಳಿಗುಡಿ ಬಲಕ್ಕೆ ವಿಷ್ಣುಗುಡಿಯಿದೆ. ತಳಪಾಯದಲ್ಲಿ ಗರ್ಭಗೃಹ ಮತ್ತು ಅರ್ಧ ಮಂಟಪವಿದೆ. ಚೌಕಾದ ಗರ್ಭಗೃಹದಲ್ಲಿ ವಿಷ್ಣುವಿಗ್ರಹವಿದ್ದು ಸಮಭಂಗದಲ್ಲಿರುವ ಆತನ ನಾಲ್ಕು ಕೈಗಳಲ್ಲಿ ಅಭಯ ಮುದ್ರೆ, ಶಂಖ, ಚಕ್ರ ಮತ್ತು ಗದೆಗಳಿವೆ. ಕೆಳಗಡೆ ಬದಿಗಳಲ್ಲಿ ಗರುಡ ಮತ್ತು ಶ್ರೀ ದೇವಿ-ಭೂದೇವಿಯರಿದ್ದಾರೆ. ದ್ವಾರಕ್ಕೆ ಮೂರು ಸರಳ ಶಾಖೆಗಳಿವೆ. ಲಲಾಟದಲ್ಲಿ ಗಜಲಕ್ಷ್ಮಿಯನ್ನು ಚಿತ್ರಿಸಲಾಗಿದೆ ಕಪೋತ ಸರಳವಾಗಿದೆ. ಅರ್ಧಮಂಟಪ ತೆರೆದಿದೆ. ಅಧಿಷ್ಠಾನದಲ್ಲಿ ಸರಳ ಮೂರು ತರಗಳು ಮತ್ತು ಭಿತ್ತಿಯು ಸರಳವಾಗಿದೆ.

ಈ ಮೇಲಿನ ವಿಷ್ಣುಗುಡಿ ಬದಿಗೆ ಒಂದು ಚಿಕ್ಕ ಗುಡಿಯಿದೆ. ಅದಕ್ಕೆ ಗರ್ಭಗೃಹ ಮತ್ತು ಅರ್ಧಮಂಟಪವಿದೆ. ಗರ್ಭಗೃಹದಲ್ಲಿ ಈಗ ಯಾವ ಶಿಲ್ಪಗಳಿಲ್ಲ. ದ್ವಾರಕ್ಕೆ ಐದು ಶಾಖೆಗಳು, ಅವು ಸರಳ : ಒಂದೇ ಸಾಲಿನಲ್ಲಿ ನಿಂತ ಐದು ಹುಡುಗರು (ಈ ಮೇಲಿನಂತೆ), ಅರ್ಧಗಂಬ (ಕಾಳಿಗುಡಿಯ ದ್ವಾರಪಾಲಕರ ಅರ್ಧಗಂಬದಂತೆ), ನೆಗೆಯುವ ಸಿಂಹ (ಮುಂದಿನ ಕಾಲುಗಳನ್ನು ಮೇಲಕ್ಕೆತ್ತಿದ) ಮತ್ತು ಸರಳ ಮಾದರಿಗಳು. ಕೆಳಗಡೆ ಶೈವ ದ್ವಾರಪಾಲಕರಿದ್ದು ನಾಲ್ಕು ಕೈಗಳಲ್ಲಿ ಅಭಯ ಮುದ್ರೆ, ತ್ರಿಶೂಲ, ಢಮರು, ಮತ್ತು ಗದೆಗಳಿವೆ. ಬದಿಗೆ ಕಮಂಡಲ, ಚೌರಿ ಹಿಡಿದ ಸೇವಕಿ ಯರಿರುವರು. ತೆರೆದ ಅರ್ಧ ಮಂಟಪವಿದೆ. ಅದರ ಅಧಿಷ್ಠಾನ ಮತ್ತು ಭಿತ್ತಿ ಈ ಮೇಲಿನ ವಿಷ್ಣು ಕಾಳಿಗುಡಿಗಳಂತಿದೆ.

ಈ ಮೇಲಿನ ಎಲ್ಲ ದೇವಾಲಯಗಳ ಸಮೂಹ ಸುತ್ತಲೂ ಪ್ರಾಕಾರ ಗೋಡೆಯಿದ್ದು ಪಶ್ಚಿಮಕ್ಕೆ ಪ್ರವೇಶ ದ್ವಾರವಿದೆ. ಅಲ್ಲಿ ಕ್ರಿ.ಶ. ೧೦ನೇ ಶತಮಾನದ ಎರಡು ಕಂಬಗಳನ್ನು ಕೂಡಿಸಲಾಗಿದೆ. ಈ ದ್ವಾರ ಇತ್ತೀಚಿನ ವರ್ಷಗಳಲ್ಲಿ ಕಟ್ಟಲಾಗಿದೆ. ಈ ಪ್ರಾಕಾರ ಗೋಡೆ ಈಶಾನ್ಯಕ್ಕೆ ಒಂದು ಹತ್ತಿ ಇಳಿಯುವ ಬಾವಿಯಿದ್ದು ಅದು ಸು.ಕ್ರಿ.ಶ ೧೧ನೇ ಶತಮಾನದ್ದಾಗಿದೆ. ಈ ಮೇಲಿನ ಕಾಳಿಗುಡಿ ಎದುರಿಗೆ ಒಂದು ತೆರೆದ ಮಂಟಪವಿದೆ. ಅದರಲ್ಲಿ ಯಾವ ವಿಶೇಷತೆಯೂ ಈಗ ಕಾಣಿಸುವುದಿಲ್ಲ.

**ಪೂರ್ಣಕುಂಭ :** ಅಡಕಿ ಗ್ರಾಮ ಮಧ್ಯ ಒಂದು ಬೋರ್‌ವೆಲ್ ಹತ್ತಿರ ಒಂದು ಶಿಲ್ಪವಿದೆ. ಅದರಲ್ಲಿ ಒಂದು ಮಗ್ಗುಲಲ್ಲಿ ಪೂರ್ಣ ಕುಂಭ ಚಿತ್ರವಿದೆ. (ಸು. ಕ್ರಿ. ಶ. 10ನೇ ಶತಮಾನ). ಅದೊಂದು ಕಂಬದ ತುಣುಕಾಗಿದೆ.

**ಶಿಲ್ಪಗಳು:** ಸೇಡಂ ತಾಲೂಕಿನ ಹಲವಾರು ಸ್ಥಳಗಳಲ್ಲಿ ಈ ಕಾಲದ ಕೆಲವು ಶಿಲ್ಪಗಳು ಬೆಳಕಿಗೆ ಬಂದಿದ್ದು ಅವುಗಳಲ್ಲಿ ಶಿವಲಿಂಗ, ಗಣೇಶ, ಕಥಾನಕ ಶಿಲ್ಪಗಳು ಮುಖ್ಯವೆನಿಸಿವೆ.

**ಗಣೇಶ:** ದ್ವಿಭುಜ ಗಣೇಶ ಶಿಲ್ಪಗಳು ತೆಲಕೂರಿನ ಮಾರುತಿ ಮಂದಿರ ಮತ್ತು ಹಾಳಬಾಳ (ಟೆ)ದ ಹಾರಗೋಡ ಸ್ವಾಮಿ ಮಂದಿರದ ಮುಂದೆ ಮುಗನೂರಿನ ರಾಮಲಿಂಗೇಶ್ವರ ದೇವಾಲಯ, ಕಾಚೂರಿನ ಮಾರುತಿ ಗುಡಿಯಲ್ಲಿ ಗಣೇಶ ಕುಳಿತ ಭಂಗಿಯಲ್ಲಿದ್ದು ಕೈಗಳಲ್ಲಿ ದಂತ ಮತ್ತು ಫಲಗಳಿವೆ. ಮಿತವಾದ ವಸ್ತ್ರಾಭರಣಗಳನ್ನು ಧರಿಸಿರುವನು. ಮುಗನೂರಿನ

ಶಿಲ್ಪದಲ್ಲಿ ಗಣೇಶನ ಕೊರಳಲ್ಲಿ ಗೆಜ್ಜೆಹಾರ ಮತ್ತು ಹೊಟ್ಟೆಗೆ ನಾಗಬಂಧವನ್ನು ಧರಿಸಿರುವುದು ವಿಶೇಷವಾಗಿದೆ.

ಚತುರ್ಭುಜ ಗಣೇಶ ಶಿಲ್ಪವೊಂದು ಹಾಳಬಾಳ (ಟೆ) ಮಾರುತಿ ಮಂದಿರ ಮುಂದಿದೆ. ಕೈಗಳಲ್ಲಿ ದಂತ, ಪರಶು, ಕಮಲ ಮತ್ತು ಫಲಗಳಿವೆ. ವಸ್ತ್ರಾಭರಣಗಳನ್ನು ಧರಿಸಿದ್ದು ಅವುಗಳ ಅಲಂಕಾರ ಹಿಂಬದಿಯಲ್ಲೂ ಚಿತ್ರಿಸಿರುವುದು ವಿಶಿಷ್ಟವಾಗಿದೆ.

**ಶಿವಲಿಂಗ:** ಕ್ರಿ.ಶ. ೧೧ನೇ ಶತಮಾನ ಶೈಲಿಯ ಬ್ರಹ್ಮಸೂತ್ರವುಳ್ಳ ಶಿವಲಿಂಗಗಳು ಸೇಡಂನ ಮಾಧವ ಗುಡಿಯಲ್ಲಿದೆ. ಹಾಗೂ ಈ ಕಾಲಕ್ಕೆ ಸೇರಿದ ಚತುರಾಕಾರದ ಲಿಂಗ ಪೀಠಗಳು ಸೇಡಂನ ಹಲವಾರು ಕಡೆಗಳಲ್ಲಿ ಮತ್ತು ಕಾಚೂರಿನ ಮಾರುತಿ ಗುಡಿ, ಹಂದರಕಿಯ ಲೋಕೇಶ್ವರ ದೇವಾಲಯ ಸಂಕಿರಣದಲ್ಲಿವೆ.

**ಸಮುದ್ರಮಂಥನ ಶಿಲ್ಪ:** ಕೊಂಕನ ಹಳ್ಳಿಯ ಶರಣ ಬಸವೇಶ್ವರ ದೇವಾಲಯದ ಹೊರಗೋಡೆಯಲ್ಲಿ ಒಂದು ಸಮುದ್ರ ಮಂಥನ ಶಿಲ್ಪವನ್ನು ಕೂಡಿಸಲಾಗಿದೆ. ಈ ಶಿಲ್ಪದಲ್ಲಿ ಅಮೃತವನ್ನು (ಸಮುದ್ರವನ್ನು) ಕಡೆಯಲು ದಪ್ಪ, ಉದ್ದನೆಯ ನಾಗನನ್ನು ಕಡಗೋಲಿಗೆ ಸುತ್ತಲಾಗಿದೆ. ಅದರ ಒಂದು ಕಡೆ ಮೂವರು ದೇವತೆಗಳು ಇನ್ನೊಂದು ಕಡೆ ಮೂವರು ರಾಕ್ಷಸರು ಹಾವನ್ನು ಹಗ್ಗವನ್ನಾಗಿ ಮಾಡಿಕೊಂಡು ಎಳೆದಾಡುತ್ತಿರುವರು. ಇನ್ನೊಂದೆಡೆ ಗರುಡ ಹಾಗೂ ಕೈಗಳಲ್ಲಿ ಖಡ್ಗ ಮತ್ತು ಗುರಾಣಿ ಹಿಡಿದು ವೀರ ನಿಂತಿದ್ದಾರೆ. ಬದಿಗೆ ಚೌರಿಹಿಡಿದ ಸೇವಕಿ ಮತ್ತು ಹೊಡೆದಾಡುವ ಎರಡು ಮಂಗಗಳಿವೆ. ಕಡಗೋಲಿನ ಕೆಳಗೆ ಕೂರ್ಮ ಮತ್ತು ಮೇಲೆ ವಿಷ್ಣು ಕುಳಿತಿದ್ದಾನೆ. ಈ ರೀತಿಯ ಸಮುದ್ರ ಮಂಥನ ಶಿಲ್ಪ ಸುರಪುರ ತಾಲೂಕಿನ ಏವೂರಿನ ಶಿವ ದೇವಾಲಯದ ಪ್ರಾಕಾರ ಗೋಡೆಯಲ್ಲಿದೆ.

**ದುರ್ಗೆ (ಭವಾನಿ):** ಬೀರನಹಳ್ಳಿ, ಅರೆಬೊಮ್ಮನಹಳ್ಳಿ ಗ್ರಾಮಗಳಿಂದ ಸುಮಾರು ನಾಲ್ಕೈದು ಕಿ.ಮೀ. ಅಂತರದಲ್ಲಿ ಮತ್ತು ಮೀನಹಬಾಳ ಹತ್ತಿರ ಒಂದು ಪ್ರಸಿದ್ಧ ಭವಾನಿ ಗುಡಿಯಿದೆ. ಅದರಲ್ಲಿಯ ದುರ್ಗಾ ಶಿಲ್ಪ ಮುಖ್ಯವೆನಿಸಿದೆ. ಈ ಶಿಲ್ಪದಲ್ಲಿ ದೇವಿಗೆ ಅಷ್ಟಭುಜಗಳಿದ್ದು ಕೈಗಳಲ್ಲಿ ಬಲಗಡೆ ಕೆಳಗಿನ ಕೈಯಲ್ಲಿ ಹಿಡಿದ ತ್ರಿಶೂಲದಿಂದ ಸುರನನ್ನು ತಿವಿಯುತ್ತಿದ್ದಾಳೆ. ಇನ್ನೊಂದು ಕೈಯಲ್ಲಿ ತಿವಿಯುವ ಖಡ್ಗವನ್ನು ಹಿಡಿದಿದ್ದಾಳೆ. ಕೆಳಗೆ ಸಿಂಹವಿದೆ. ಇನ್ನೆರಡು ಬಲಗೈಗಳಲ್ಲಿ ಗುರಾಣಿ ಮತ್ತು ಬಾಣಗಳನ್ನಿಡುವ ಪಟ್ಟಿಯಿದೆ. ಎಡಗಡೆಗೆ ಮೇಲಿಂದ ಶಂಖ, ಬಿಲ್ಲು, ಗುರಾಣಿಯಿಂದ ಸುರನ ಸಂಹಾರ ಮತ್ತು ಸುರನ ಹೊಟ್ಟೆಯನ್ನು ಹಿಡಿದು ಜಗ್ಗುವುದು,



ಚಿತ್ರ ೬. ಮಹಿಷಾಸುರ ಮರ್ದಿನಿ, ಮೀನ ಹಬಾಳ ಸಮೀಪ

ಇಲ್ಲಿ ಕೋಣನ ಕುತ್ತಿಗೆಯಿಂದ ಸುರ ಹೊರಬರುತ್ತಿರುವನು. ದೇವಿ ತನ್ನ ಎಡಗಾಲನ್ನು ಕೋಣದ ತಲೆ ಮೇಲೆ ಮೆಟ್ಟಿರುವಳು. ಬಲಗಾಲು ನೆಲದ ಮೇಲಿದೆ. ಕಿರೀಟ ಮುಕುಟ, ಕುಂಡಲ, ಹಾರ(ಗೆಜ್ಜೆ), ವಸ್ತ್ರ, ಬಳೆ, ಕಡಗ ಮುಂತಾದ ಆಭರಣಗಳನ್ನು ದೇವಿಯು ಧರಿಸಿರುವಳು. (ಚಿತ್ರ ನಂ ೬).

**ದಂಪತಿಗಳ ಶಿಲ್ಪ:** ಅರೆಬೊಮ್ಮನಹಳ್ಳಿಯ ಮಲ್ಲಿಕಾರ್ಜುನ ದೇವಾಲಯದ ಮುಂದೆ ಒಂದು ವಿಶಿಷ್ಟಶಿಲ್ಪವಿದೆ. ಅದರಲ್ಲಿ ಒಬ್ಬ ರಾಜಕುಮಾರನು ಪೀಠದ ಮೇಲೆ ದಿಂಬಿಗೆ ವಾಲಿಕೊಂಡು ಕುಳಿತಿರುವನು. ಅವನ ಬಲಗಡೆ ಒಬ್ಬ ಹೆಂಗಸು ಬಲಗೈಯನ್ನು ಮೇಲಕ್ಕೆತ್ತಿ ನಿಂತಿದ್ದಾಳೆ. ಅವನ ಎಡಗಡೆ ಒಬ್ಬ ಹೆಂಗಸು ಪೀಠದ ಮೇಲೆ ಕುಳಿತಿದ್ದು ಬಹುಶ: ಆಕೆ ಆ ರಾಜಕುಮಾರನ ರಾಣಿಯಿರಬೇಕು. ಆಕೆ ಎಡಗೈಯಿಂದ ರಾಜಕುಮಾರನನ್ನು ಹಿಡಿದಿರುವಳು. ಈ ಶಿಲ್ಪ ಸು.ಕ್ರಿ.ಶ.೧೧ನೇ ಶತಮಾನದ ಆದಿಭಾಗ.

**ತಮಿಳ್ ಸೆಲ್ವಿ** *

# ಅರೆತಿಪ್ಪೂರಿನ ಜೈನ ಅವಶೇಷಗಳು

ತನ್ನೊಡಲಿನಲ್ಲಿ ಇತಿಹಾಸವನ್ನು ಅಡಗಿಸಿಕೊಂಡಿರುವ ಕರ್ನಾಟಕದ ಅನೇಕ ಹಳ್ಳಿಗಳಲ್ಲಿ ಮಂಡ್ಯ ಜಿಲ್ಲೆ, ಮದ್ದೂರು ತಾಲುಕಿಗೆ ಸೇರಿದ ಅರೆತಿಪ್ಪೂರು ಸಹ ಒಂದು. ಗಂಗರ ಗಂಗವಾಡಿ ೯೬೦೦೦ ದೊಳಗಿನ ಒಂದು ಸ್ಥಳ ಈ ತಿಪ್ಪೂರು. ತಿಪ್ಪೂರಿನಲ್ಲಿ ಶಾಸನಗಳ ಸಂಖ್ಯಾಬಾಹುಳ್ಯ ವಿಷಯ ವೈವಿಧ್ಯಗಳ ವೈಪುಲ್ಯವಿಲ್ಲದಿದ್ದರೂ ಜೈನ ಅವಶೇಷಗಳ ಸಮೃದ್ಧತೆಯಿದೆ. ಪ್ರಾಚೀನ ಕರ್ನಾಟಕದ ಪ್ರಮುಖ ಜೈನಕೇಂದ್ರಗಳಲ್ಲಿ ಇದೂ ಒಂದಾಗಿತ್ತು. ಅರೆತಿಪ್ಪೂರಿನ ಪ್ರಾಚೀನ ಉಲ್ಲೇಖವಿರುವ ಕ್ರಿ.ಶ. ೯೧೬ರಲ್ಲಿ ರಚಿತವಾದ ತಿಪ್ಪೂರಿನ ನೆರೆಯೂರಾದ ಕೂಲಿಗೆರೆ ಶಾಸನವು, ಈ ಬೆಟ್ಟದ ಮೇಲಿನ ಒಂದು ಬಸದಿಯನ್ನು ಗಂಗರ ನೀತಿಮಾರ್ಗ ಪೆರ್ಮಾನಡಿಯ ಸಾಮಂತನಾದ ಮಣಲೆಯಾರನು ನಿರ್ಮಿಸಿದನೆಂದು ತಿಳಿಸುತ್ತದೆ. ಶಾಸನಗಳಲ್ಲಿ ಇದನ್ನು ಕನಕಗಿರಿ ತೀರ್ಥ ಎಂದೇ ವರ್ಣಿಸಲಾಗಿದೆ. ಜೈನ ಸಂಪ್ರದಾಯದಲ್ಲಿ ಎಲ್ಲ ಪವಿತ್ರ ಕ್ಷೇತ್ರಗಳನ್ನೂ ಕನಕಗಿರಿ ತೀರ್ಥ ಎಂದು ಕರೆಯುವ ಸಂಪ್ರದಾಯವಿದೆ. ಜಂಬೂ ದ್ವೀಪದಲ್ಲಿ ೨೦೦ ಕನಕಗಿರಿ ತೀರ್ಥಗಳಿದ್ದವೆಂದು ಪಂಪ ಹೇಳುತ್ತಾನೆ. ಅರೆತಿಪ್ಪೂರು ಸಹ ಜೈನರ ಪವಿತ್ರ ಕ್ಷೇತ್ರಗಳಲ್ಲಿ ಒಂದಾಗಿತ್ತೆನ್ನಬಹುದು.

ಶ್ರೀ ಶುಭಚಂದ್ರರವರು[1] ಶ್ರವಣಬೆಳಗೊಳದಲ್ಲಿ ಚಾಮುಂಡರಾಯನಿಂದ ಗೊಮ್ಮಟೇಶ್ವರನ ಮಹಾನ್ ಮೂರ್ತಿಯ ನಿರ್ಮಾಣವಾದದ್ದೇ ಮುಂದಿನವರಿಗೆ ಸ್ಫೂರ್ತಿಯಾಗಿ ಅನೇಕ ಮೂರ್ತಿಗಳು ನಿರ್ಮಾಣವಾಗಿರಬಹುದೆನ್ನುತ್ತಾರೆ. ಆದರೆ ಕ್ರಿ.ಶ. ೯೧೬-೧೭ರ ವೇಳೆಗಾಗಲೇ ಕನಕಗಿರಿ ತೀರ್ಥವೆಂದು ತಿಪ್ಪೂರು ಪ್ರಖ್ಯಾತಿ ಹೊಂದಲು ಅಲ್ಲಿನ ದೊಡ್ಡಬೆಟ್ಟದ ಮೇಲಿರುವ ಸು. ೧೦ ಅಡಿ ಎತ್ತರದ ಗೊಮ್ಮಟ ಮೂರ್ತಿಯೇ ಕಾರಣವೆಂದು ನಿಸ್ಸಂಶಯವಾಗಿ ಹೇಳಬಹುದು. ಅರ್ಥಾತ್ ಈ ಗೊಮ್ಮಟ ವಿಗ್ರಹ ಶ್ರವಣಬೆಳಗೊಳಕ್ಕಿಂತ ಪ್ರಾಚೀನ ಅಂದರೆ ಸು. ೮-೯ನೇ ಶತಮಾನದ್ದಿರಬಹುದು.

ತಿಪ್ಪೂರಿನಲ್ಲಿ ಹಿಂದೆ ಹಲವಾರು ಬಸದಿಗಳಿದ್ದುದರ ಕುರುಹಾಗಿ ಇಲ್ಲಿನ ಚಿಕ್ಕಬೆಟ್ಟದ ಮೇಲೆ ಬಸದಿಗಳ ಅಡಿಪಾಯಗಳು, ಜಿನಬಿಂಬಗಳ ಅವಶೇಷಗಳು, ಗೋಡೆ, ಛಾವಣಿಬೋಧಿಗೆ, ಕಂಬ, ಇಟ್ಟಿಗೆಗಳ ರಾಶಿ, ಇತ್ಯಾದಿಗಳ ಅವಶೇಷಗಳಲ್ಲದೆ, ನಾಲ್ಕಾರು ತೀರ್ಥಂಕರರ, ಚಾಮರ ಧಾರಿಗಳ ಹಾಗೂ ಯಕ್ಷರ ವಿಗ್ರಹಗಳು ಇವೆ. ಈ ಸ್ಥಳದ ಬಗ್ಗೆ ಇದುವರೆಗೂ ಮೂರ್ನಾಲ್ಕು ಲೇಖನಗಳು ರಚನೆಯಾಗಿದ್ದರೂ ಸಹ ಅವುಗಳು ಯಾವುವೂ ಇಲ್ಲಿನ ಬಸದಿಗಳ ಬಗ್ಗೆ ಖಚಿತವಾದ ಸಮಗ್ರವಾದ ಮಾಹಿತಿಯನ್ನು ನೀಡಿಲ್ಲ. ಪ್ರಸ್ತುತ ಲೇಖನದಲ್ಲಿ ಆ ನಿಟ್ಟಿನಲ್ಲಿ ಒಂದು ಕಿರು ಪ್ರಯತ್ನವನ್ನು ಮಾಡಲಾಗಿದೆ.

ಅರೆತಿಪ್ಪೂರಿನಲ್ಲಿ ಎರಡು ಬಸದಿಗಳಿದ್ದುದಾಗಿ ವಿದ್ವಾಂಸರು ಅಭಿಪ್ರಾಯಪಟ್ಟಿದ್ದಾರೆ. ಹಾಗೂ ಆ ಬಸದಿಗಳು ಯಾವ ತೀರ್ಥಂಕರನಿಗಾಗಿ ನಿರ್ಮಿಸಲಾಗಿತ್ತೆಂದು ಹೇಳಲು ಆಗುವುದಿಲ್ಲವೆಂದೂ ಅಭಿಪ್ರಾಯಪಟ್ಟಿದ್ದಾರೆ. ಆದರೆ, ನನಗೆ ಸಿಕ್ಕಿರುವ ಆಧಾರಗಳ ಸಹಾಯದಿಂದ ಇಲ್ಲಿ ಐದು

* ನಂ. ೮೨, (ನವರಂಗ್ ಬಾರ್ ಸಮೀಪ), ಎರಡನೇ ಮುಖ್ಯರಸ್ತೆ, ಪ್ರಕಾಶನಗರ, ಬೆಂಗಳೂರು-೫೬೦ ೦೨೧

1 ಜೈನ ಸಾಹಿತ್ಯ ಮತ್ತು ಸಂಸ್ಕೃತಿ, ಕೆಲವು ಅಧ್ಯಯನಗಳು, ಪು. ೧೦೫-೧೦೬

ಬಸದಿಗಳಿದ್ದುದಾಗಿ ಖಚಿತವಾಗಿದೆ. ಚಿಕ್ಕಬೆಟ್ಟದ ಮೇಲೆ ನಾಲ್ಕು ಬಸದಿಗಳಿದ್ದುವು, ಹಾಗೂ ಊರೊಳಗೆ ಇರುವ ಇಂದಿನ ಜೈನೇಶ್ವರ ಗುಡಿಯು ಹಿಂದೆ ಜೈನ ಬಸದಿಯಾಗಿದ್ದುದಕ್ಕೂ ಆಧಾರಗಳಿವೆ. ಹೀಗಾಗಿ ಅರೆತಿಪ್ಪೂರಿನಲ್ಲಿ ಒಟ್ಟು ಐದು ಬಸದಿಗಳಿದ್ದುವೆಂದು ಖಚಿತವಾಗಿ ಗುರುತಿಸಬಹುದು.

ಊರಿನಲ್ಲಿರುವ ಜೈನೇಶ್ವರಿಗುಡಿಯು ಈಗ ಇರುವ ಸ್ಥಳದಲ್ಲಿಯೇ ಹಿಂದೆ ಬಸದಿ ಇತ್ತೆಂದು ಊಹಿಸಲು ಆಧಾರವಾಗಿ ಜೈನೇಶ್ವರಿ ಗುಡಿಯ ಎದುರಿನಲ್ಲಿಯೇ ಹಳೆಯ ಬಸದಿಯ ಅವಶೇಷಗಳಾದ ಕಂಭಗಳು, ಬೋದಿಗೆಗಳು ಇತ್ಯಾದಿಗಳು ಇಟ್ಟಾಡುತ್ತಿವೆ. ಹಿಂದೆ ಇದ್ದ ಬಸದಿಯನ್ನು ನೆಲಸಮ ಮಾಡಿ ಅದೇ ಸ್ಥಳದಲ್ಲಿಯೇ ಹಿಂದಿನ ಅಧಿಷ್ಠಾನದ ಮೇಲೆಯೇ ಹೊಸ ಗುಡಿಯನ್ನು ಕಟ್ಟಿರುವ ಕುರುಹುಗಳು ಕಂಡು ಬರುತ್ತವೆ. ಬಹುಶಃ ಆಗ ಆ ಬಸದಿಯಲ್ಲಿದ್ದಿರಬಹುದಾದ ಯಕ್ಷಿಯ ವಿಗ್ರಹವನ್ನು ಹೊಸ ಗುಡಿಯಲ್ಲಿಟ್ಟು ಪೂಜಿಸುತ್ತಿದ್ದರೆಂದು ಕಾಣುತ್ತದೆ. ಕೆಲವು ವರ್ಷಗಳ ಹಿಂದೆ ಇಲ್ಲಿನ ಗರ್ಭಗುಡಿಯಲ್ಲಿದ್ದ ವಿಗ್ರಹವನ್ನು ಮಂಡ್ಯದ ಕಡೆಯವರು ತೆಗೆದುಕೊಂಡು ಹೋದರೆಂದು ಸ್ಥಳೀಯರು ಕ್ಷೇತ್ರಕಾರ್ಯದ ಸಮಯದಲ್ಲಿ ತಿಳಿಸಿದರು. ಅವರು ಹೇಳುವುದು ಹಿಂದೆ ಇಲ್ಲಿದ್ದ ವಿಗ್ರಹದ ಕಿರೀಟದಲ್ಲಿ ತೀರ್ಥಂಕರನ ಶಿಲ್ಪವಿದ್ದು ಕಂಕುಳಿನಲ್ಲಿ ಮಗುವನ್ನು ಕೂಡಿಸಿಕೊಂಡು ಪಾದಗಳ ಬಳಿ ಸಿಂಹವಿದ್ದ ಸ್ತ್ರೀ ದೇವತೆಯು ಶಿಲ್ಪವನ್ನೂ ಜೈನೇಶ್ವರಿ ಎಂದು ಪೂಜಿಸುತ್ತಿದ್ದುದಾಗಿ ಸ್ಥಳಿಯರು ತಿಳಿಸುತ್ತಾರೆ. ಈ ಎಲ್ಲ ಲಕ್ಷಣಗಳನ್ನು ಗಮನಿಸಿದರೆ, ಅದು ಅಂಬಿಕಾಯಕ್ಷಿಯ ವಿಗ್ರಹ ಎಂದು ಗುರುತಿಸಬಹುದು. ಅಂಬಿಕಾಯಕ್ಷಿಯು ೨೨ನೆಯ ತಿರ್ಥಂಕರನಾದ ನೇಮಿನಾಥ ತೀರ್ಥಂಕರನ ಯಕ್ಷಿಯಾದುದರಿಂದ ಇಲ್ಲಿ ಹಿಂದೆ ನೇಮಿನಾಥ ತೀರ್ಥಂಕರನ ಬಸದಿ ಇತ್ತೆಂದು ಹೇಳಬಹುದು. ಈಗ ಈ ಗುಡಿಯಲ್ಲಿ ಹೊನ್ನೆ ಮರದಿಂದ ಮಾಡಿದ ಲಿಂಗದಾಕೃತಿಯ ಒಂದು ವಿಗ್ರಹವನ್ನು ಪ್ರತಿಷ್ಠಾಪಿಸಲಾಗಿದೆ. ಇದನ್ನೇ ಜೈನೇಶ್ವರಿ ಎಂದು ಕರೆಯಲಾಗುತ್ತಿದೆ. ಈ ಜೈನೇಶ್ವರಿ ಗುಡಿಯ ಎದುರಿನಲ್ಲಿರುವ ಒಂದು ದುಂಡನೆಯ ಆಕಾರದ ದೀಪಸ್ತಂಭವನ್ನು ಗಂಗ ಶೈಲಿಯ ಸ್ತಂಭ ಎಂದು ಸುಲಭವಾಗಿ ಗುರುತು ಹಿಡಿಯಬಹುದು. ಆದ್ದರಿಂದ ಹಿಂದೆ ಇಲ್ಲಿದ್ದ ನೇಮಿನಾಥ ತೀರ್ಥಂಕರರ ಬಸದಿಯು ಗಂಗರ ಕಾಲದಲ್ಲಿ ನಿರ್ಮಿತವಾಗಿತ್ತೆಂದು ಹೇಳಬಹುದು.



ಅರೆತಿಪ್ಪೂರಿನ ಏಕಶಿಲಾಗೊಮ್ಮಟೇಶ್ವರ

ಇನ್ನು ಚಿಕ್ಕಬೆಟ್ಟದ ಮೇಲೆ ಬಸದಿಗಳಿದ್ದುದಕ್ಕೆ ಸಾಕ್ಷಿಯಾಗಿ ಇಲ್ಲಿ ಬೇರೆ ಬೇರೆ ಕಡೆಗಳಲ್ಲಿ ದೊಡ್ಡ ದೊಡ್ಡದಾದ ಇಟ್ಟಿಗೆಗಳ ರಾಶಿಗಳಿವೆ. ಅವುಗಳ ಕೆಳಭಾಗದಲ್ಲಿ ಳ ಹಳೆಯ ಬಸದಿಗಳ ಪಾಯಗಳು ಸೂಕ್ಷ್ಮವಾಗಿ ಗಮನಿಸಿದರೆ ಮಾತ್ರ ಕಂಡುಬರುತ್ತವೆ. ಈ ಬಸದಿಗಳು ಯಾವ ತೀರ್ಥಂಕರನದ್ದೆಂದು ಸೂಕ್ಷ್ಮ ಪರಿಶೀಲನೆಯಿಂದ ತಿಳಿಯಬಹುದು. ಚಿಕ್ಕಬೆಟ್ಟದ ಮೇಲೆ ಒಂದು ಪಾರ್ಶ್ವದಲ್ಲಿರುವ ದೊಣೆಯ ಒಳಗೆ ಎರಡು ಪಾರ್ಶ್ವನಾಥ ತೀರ್ಥಂಕರರ ವಿಗ್ರಹ, ಹಾಗೂ ಒಂದು ರುಂಡರಹಿತ ತೀರ್ಥಂಕರರ ವಿಗ್ರಹ ಹಾಗೂ ದೊಣೆಯ ಮೇಲ್ಭಾಗದಲ್ಲಿ ಒಂದು ಸುಪಾರ್ಶ್ವನಾಥ ತೀರ್ಥಂಕರನ ವಿಗ್ರಹವಿದೆ. ಈ ತೀರ್ಥಂಕರ ಬಸದಿಗಳೇ ತಿಪ್ಪೂರಿನ ಬೆಟ್ಟದ ಮೇಲಿದ್ದವು ಎಂದು ಹೇಳಬಹುದು.

ರುಂಡರಹಿತ ತೀರ್ಥಂಕರ ಮೂರ್ತಿಯು ಪದ್ಮಾಸನ ಭಂಗಿಯಲ್ಲಿದ್ದು ಮಹಾವೀರನದ್ದೆಂದು ಗುರುತಿಸಬಹುದು. ಅಲ್ಲದೆ ಅಲ್ಲಿಯೇ ಇರುವ ಅವಶೇಷಗಳಲ್ಲಿ ಸಿಂಹಾಸನದ ಅಥವಾ ಸಿಂಹಪೀಠದಲ್ಲಿ ಸಿಂಹಲಾಂಛನವಿದೆ. ಈ



ಅರೆತಿಪ್ಪೂರಿನಲ್ಲಿನ ದೊಣೆಯಲ್ಲಿರುವ ತೀರ್ಥಂಕರರ ಮೂರ್ತಿಗಳು

ಆಧಾರದಿಂದ ಇಲ್ಲಿನ ಇನ್ನೊಂದು ಬಸದಿ ಮಹಾವೀರನದ್ದಾಗಿತ್ತೆನ್ನುವುದರಲ್ಲಿ ಸಂಶಯವಿಲ್ಲ.

ಅದೇ ರೀತಿ ಇಲ್ಲಿರುವ ಇನ್ನೆರಡು ಪಾರ್ಶ್ವನಾಥನ ವಿಗ್ರಹಗಳು ಎರಡು ಬೇರೆ ಬೇರೆ ಪಾರ್ಶ್ವನಾಥನ ಬಸದಿಗೆ ಸೇರಿದವುಗಳೆಂದು ಹೇಳಬಹುದು. ಬೆಟ್ಟದ ಮೇಲಿರುವ ನಾಲ್ಕು ಚಾಮರಧಾರಿಗಳು ಪ್ರತಿಯೊಂದೂ ಬೇರೆ ಬೇರೆ ರೀತಿಯದ್ದಾಗಿರುವುದರಿಂದ ಇವು ೪ ಬೇರೆ ಬೇರೆ ಬಸದಿಗಳ ಮುಂದಿದ್ದುವೆಂದು ಖಚಿತವಾಗುತ್ತದೆ.

ದೊಣೆಯ ಮೇಲಿರುವ ಸುಪಾರ್ಶ್ವನಾಥನ ಸುಂದರ ಮೂರ್ತಿ ಇಲ್ಲಿನ ಸುಪಾರ್ಶ್ವನಾಥನ ಬಸದಿಯದ್ದು, ಹಾಗೂ ಇಲ್ಲಿನ ಅವಶೇಷಗಳಲ್ಲಿ ದೊರೆತ ಎರಡು ತೀರ್ಥಂಕರರ ಉಬ್ಬುಶಿಲ್ಪಗಳು ಯಾವುದೋ ಬಸದಿಯ ದೇವಕೋಷ್ಠದಲ್ಲಿದ್ದುವೆಂದು ಊಹಿಸಬಹುದು. ಈ ಆಧಾರಗಳಿಂದ ತಿಪ್ಪೂರಿನ ಬೆಟ್ಟದ ಮೇಲೆ ಒಟ್ಟು ೪ ಬಸದಿಗಳಿದ್ದುದಾಗಿಯೂ ಅವುಗಳಲ್ಲಿ ಎರಡು ಪಾರ್ಶ್ವನಾಥನದ್ದಾದರೆ, ಒಂದು ಮಹಾವೀರನದ್ದು ಮತ್ತೊಂದು ಸುಪಾರ್ಶ್ವನಾಥನದು ಎಂದು ಖಚಿತಗೊಳ್ಳುತ್ತದೆ.

ದೊಣೆಯ ಒಂದು ಬದಿಯಲ್ಲಿ ಅರೆಯ ಮೇಲೆ ೨೪ ತೀರ್ಥಂಕರರನ್ನು ಕಡೆಯುವ ಪ್ರಯತ್ನ ನಡೆದಿದ್ದು ಅವು ಅಪೂರ್ಣವಾಗಿವೆ. ದೊಡ್ಡ ಬೆಟ್ಟದ ಮೇಲಿರುವ ಸು. ೧೦ ಅಡಿ ಎತ್ತರದ ಏಕಶಿಲಾ ಗೊಮ್ಮಟ ಮೂರ್ತಿಯು ಕಣಶಿಲೆಯಾಗಿದ್ದು ಶ್ರವಣಬೆಳಗೊಳದ ಮೂರ್ತಿಗಿಂತ ಪ್ರಾಚೀನವಾಗಿದೆ. ಇದೂ ಗಂಗರ ಕಾಲದ ಮತ್ತೊಂದು ಶ್ರೇಷ್ಠ ರಚನೆ ಎಂದೇ ಹೇಳಬಹುದು.

ಒಟ್ಟಾರೆಯಾಗಿ ಅರೆತಿಪ್ಪೂರು ಒಂದು ಪ್ರಾಚೀನ ಜೈನ ಕೇಂದ್ರವಾಗಿತ್ತು. ಅಲ್ಲಿ ಕನಿಷ್ಠ ಐದು ಬಸದಿಗಳಿದ್ದವು. ಅವು ಬಹುಮಟ್ಟಿಗೆ ಪಾರ್ಶ್ವ, ಸುಪಾರ್ಶ್ವ, ಮಹಾವೀರ ಮತ್ತು ನೇಮಿನಾಥ ತೀರ್ಥಂಕರರುಗಳಿಗೆ ಸೇರಿದವಾಗಿದ್ದವೆಂದು ಆಂತರಿಕ ಹಾಗೂ ಬಾಹ್ಯ ಪ್ರಮಾಣಗಳ ಆಧಾರದಿಂದ ಖಚಿತವಾಗಿ ಗುರುತಿಸಬಹುದಾಗಿದೆ.

ಡಾ|| ಕೆ. ವಸಂತಲಕ್ಷ್ಮಿ *

# ವಾಸಂತಿಕಾದೇವಿ-ಒಂದು ಚಿಂತನೆ

ಪ್ರಾಚೀನ ಕಾಲದಿಂದ ಇಂದಿನವರೆಗೂ ನಿರಂತರವಾಗಿ ದೇವಿ ಆರಾಧನೆಯು ನಡೆದುಬಂದಿದೆ. ಶಿಷ್ಟ/ಅಶಿಷ್ಟ ಜನರೆಲ್ಲರೂ ಆದಿಶಕ್ತಿಯಾದ ದೇವಿಯನ್ನು ವಿವಿಧ ರೂಪದಲ್ಲಿ, ನಾನಾ ರೀತಿಯಲ್ಲಿ ಪೂಜಿಸಿರುತ್ತಾರೆ, ಪೂಜಿಸುತ್ತಿದ್ದಾರೆ. ಜಗನ್ಮಾತೆಯುನ್ನು-''ದುರ್ಗಾ ಪರಮೇಶ್ವರಿ, ಚಾಮುಂಡೇಶ್ವರಿ, ಚೌಡೇಶ್ವರಿ, ಲಲಿತಾಪರಮೇಶ್ವರಿ, ವಸಂತಪರಮೇಶ್ವರಿ, ರಾಜರಾಜೇಶ್ವರಿ, ಬನಶಂಕರಿ, ಮಹಾಮಾಯೇ, ಮಹಾಮಾರಿಕಾಂಬ'' ಮೊದಲಾದ ಹೆಸರುಗಳಿಂದ ಆರಾಧಿಸುತ್ತಿದ್ದಾರೆ. ಇಲ್ಲಿ ಕರ್ನಾಟಕವನ್ನಾಳಿದ ಪ್ರಸಿದ್ಧ ರಾಜ ವಂಶಗಳಲ್ಲಿ ಒಂದಾದ ಹೊಯ್ಸಳ ರಾಜವಂಶದವರ 'ಆರಾಧ್ಯ ದೇವತೆ' ಎಂದು ಭಾವಿಸಿದ್ದ 'ವಾಸಂತಿಕಾದೇವಿ'ಯ (ವಸಂತ ಪರಮೇಶ್ವರಿ)ಯ ಸ್ವರೂಪವನ್ನು ತಿಳಿಯಲು ಆಶಿಸಲಾಗಿದೆ. ಆ ದೇವಿಗೆ ಸಂಬಂಧಿಸಿರುವ ವಿವರಗಳನ್ನು ಪೌರಾಣಿಕ ಹಿನ್ನೆಲೆಯಲ್ಲಿ, ಶಾಸನಗಳ ಹಿನ್ನೆಲೆಯಲ್ಲಿ ಮತ್ತು ಶಿಲ್ಪಗಳ ಹಿನ್ನೆಲೆಯಲ್ಲಿ ಗಮನಿಸಿ, ದೇವಿಯ ಸ್ವರೂಪವನ್ನು ಗುರುತಿಸಲು ಪ್ರಯತ್ನಿಸಲಾಗಿದೆ.

ಸುಮಾರು ಕ್ರಿ.ಶ. ೯-೧೦ನೇ ಶತಮಾನಕ್ಕೆ ಮೊದಲು ವಾಸಂತಿಕಾದೇವಿಯ ಆರಾಧನೆಯು ಕಾಣಬರುತ್ತಿಲ್ಲ. ಈ ದೇವಿಯನ್ನು ಮಲೆನಾಡಿನ ಜನರು ಪೂಜಿಸುತ್ತಿದ್ದರು. ಹೊಯ್ಸಳರ ಮೂಲ ಸ್ಥಳವೆನ್ನಿಸಿರುವ ಮೂಡಗೆರೆ ತಾಲೂಕಿನ (ಸೊಸೆವೂರು) 'ಅಂಗಡಿ' ಗ್ರಾಮದಲ್ಲಿ ಮತ್ತು ಚಿಕ್ಕ ಮಗಳೂರು ಜಿಲ್ಲೆಯ 'ಲಕ್ಕುಂದ'ವೆಂಬ ಗ್ರಾಮದಲ್ಲಿ ಈ ದೇವಿಗಾಗಿ ನಿರ್ಮಿಸಿದ್ದ ದೇವಾಲಯಗಳಿವೆ. ಈ ದೇವಿಯ ಸ್ವರೂಪವನ್ನೇ ಹೋಲುವ ಶಿಲ್ಪವುಳ್ಳ ಕೆಲವು ದೇವಾಲಯಗಳು ಹೊಯ್ಸಳರ ಕೇಂದ್ರವಾಗಿದ್ದ ಹಾಸನ ಜಿಲ್ಲೆಯಲ್ಲಿ ಕಂಡುಬಂದರೂ ಅಲ್ಲೆಲ್ಲ 'ಗ್ರಾಮದೇವತೆ' ಯೆಂಬಂತೆ ಬೇರೆ ಬೇರೆ ಹೆಸರುಗಳಿಂದ ಪೂಜೆಗೊಳ್ಳುತ್ತಲಿವೆ. 'ವಾಸಂತಿಕಾದೇವಿ' ಎಂಬ ದೇವಿಯ ದೇವಾಲಯಗಳು ಹೆಚ್ಚಿನ ಸಂಖ್ಯೆಯಲಿ ನಿರ್ಮಾಣವಾಗಿಲ್ಲ; ಹೀಗಿದ್ದರೂ ಮೂಲ ಸ್ಥಳವೆನ್ನಿಸಿದ ಅಂಗಡಿಯ ದೇವಾಲಯದಲ್ಲಿ ಸಪ್ತಮಾತೃಕೆಯರಲ್ಲಿ ಒಬ್ಬಳಾದ ವೈಷ್ಣವೀದೇವಿಯನ್ನು 'ವಾಸಂತಿಕಾದೇವಿ' ('ವಸಂತ ಪರಮೇಶ್ವರಿ') ಎಂದು ಪೂಜಿಸುತ್ತಿದ್ದಾರೆ. ಲಕ್ಕುಂದದ ದೇವಾಲಯದಲ್ಲಿ ವಾಸಂತಿಕಾದೇವಿಯ ಬಿಂಬವು ಚಾಮುಂಡೇಶ್ವರಿ ದೇವಿಯ (ಚೌಡೇಶ್ವರಿದೇವಿ) ಗುಡಿಯಲ್ಲಿ ಇದ್ದಂತಿದೆ. ಈ ದೇವಾಲಯದಲ್ಲಿ ಸಪ್ತಮಾತೃಕಾದೇವಿಯರ ಶಿಲ್ಪಗಳಿಲ್ಲದಿರುವುದು ಗಮನಾರ್ಹವಾಗಿದೆ. ಈ ಹಿನ್ನೆಲೆಯಲ್ಲಿ ವಾಸಂತಿಕಾದೇವಿಯ ಸ್ವರೂಪವು ಚಾಮುಂಡೇಶ್ವರಿ ಮತ್ತು ಸಪ್ತಮಾತೃಕೆಯರಿಗೆ ಸಂಬಂಧಿಸಿದ್ದಿರಬಹುದೇ ? ಎಂದು ಚಿಂತಿಸಿದಾಗ ಪೌರಾಣಿಕ ಸನ್ನಿವೇಶಗಳು ಹೀಗೆ ಕಾಣಿಸುತ್ತಿವೆ:

ವೈದಿಕ ಪುರಾಣಗಳ ಪ್ರಕಾರ ''ಆದಿಶಕ್ತಿ ಸ್ವರೂಪಿಯಾದ ಗಾಯತ್ರಿದೇವಿಯೂ ಸ್ವಯಂಭುವ ಮನ್ವಂತರದಲ್ಲಿ ಮಹಿಷಾಸುರನನ್ನು ಸಂಹರಿಸುವ ಸನ್ನಿವೇಶದಲ್ಲಿ ಚಂಡ ಮುಂಡರೆಂಬ ರಕ್ಕಸರನ್ನು ಕೊಂದು 'ಚಾಮುಂಡಿ' ಎನ್ನಿಸಿದ್ದಾಳೆ. ಇದೇ ದೇವಿಯು ವಿಂಧ್ಯ ಪರ್ವತದಲ್ಲಿ ನೆಲೆಸಿ ಕ್ಷಾಮ ಪೀಡಿತವಾಗಿದ್ದ ಆ ಪ್ರದೇಶದಲ್ಲಿ ಸಸ್ಯ ಸಂಪತ್ತನ್ನು ಕರುಣಿಸಿ ''ಶಾಕಾಂಬರಿ'' (ಬನಶಂಕರಿ) ಎನ್ನಿಸಿ ಪೂಜೆಗೊಂಡಳು. ಮುಂದೆ ಆ ಭಾಗದಲ್ಲಿ ನೆಲೆಸಿದ್ದ-''ದುರ್ಗಮ'' ಎಂಬ ರಕ್ಕಸನನ್ನು ವಧಿಸಿದಾಗ ಶಾಕಾಂಬರಿ ದೇವಿಯೇ 'ದುರ್ಗಾದೇವಿ' ಎಂಬ ಹೆಸರಿನಿಂದ ಪೂಜೆಗೊಂಡಳು''. ಇವಳು 'ವಿಷ್ಣುವಿನ ಸೋದರಿ'ಯೂ ಆಗಿದ್ದು

* ನಂ. ೧೬೪೩, ೨೧ನೇ ಮುಖ್ಯರಸ್ತೆ, ಬನಶಂಕರಿ ೧ನೇ ಹಂತ, ಬೆಂಗಳೂರು-೫೦

ಸಕಲ ಸಂಕಟಗಳ ಪರಿಹಾರಿಣಿ ಎಂಬರ್ಥದಲ್ಲಿ ಇವಳನ್ನು ಶಿವಾಲಯಗಳಲ್ಲೂ, ವೈಷ್ಣವದೇವಾಲಯಗಳಲ್ಲೂ ಪರಿವಾರ ದೇವತೆಯಾಗಿ ಪೂಜಿಸುತ್ತಿದ್ದರು.

ದುರ್ಗಾಸಪ್ತಶತಿಯು-''ಶಿವನ ಆಜ್ಞೆಯಂತೆ ಚಂಡಿಕೆಯು ಸಪ್ತಮಾತೃಕೆಯರ ಜೊತೆಯಲ್ಲಿ ಚಂಡಮುಂಡಾಸುರರನ್ನು ಸಂಹರಿಸುತ್ತಾಳೆ. ಈ ಚಂಡಿಕಾದೇವಿಯನ್ನೇ 'ಚಾಮುಂಡೇಶ್ವರಿ' ಎನ್ನುವರು. ಜನಬಳಕೆಯಲ್ಲಿ ಹಲವೆಡೆ 'ಚಾಮುಂಡೇಶ್ವರಿ'ಯೇ 'ಚೌಡೇಶ್ವರಿ' ಎನ್ನಿಸಿದ್ದಾಳೆ. ಹೀಗೆ ಆದಿಶಕ್ತಿಯಾದ ಪರಮೇಶ್ವರಿಯೇ 'ಬನಶಂಕರಿ' 'ದುರ್ಗಾದೇವಿ' 'ಭಗವತೀ' 'ಚೌಡೇಶ್ವರಿ' 'ಮಹಾಮಾಯೆ' 'ಕಾಲರಾತ್ರಿ' 'ಮಹಾಮಾರಿ' ಎಂದೂ ನಾನಾ ಹೆಸರಿನಲ್ಲಿ ಪೂಜೆಗೊಳ್ಳುತ್ತಿದ್ದಾಳೆ; ಮಹಾಮಾಯೆಯ ಇನ್ನೊಂದು ರೂಪವೇ 'ವಾಸಂತಿಕಾದೇವಿ' ಎನ್ನಿಸಿದ್ದಾಳೆ. ಶಾಕ್ತರ ಪೂಜಾ ವಿಧಿಗಳಲ್ಲಿ ಒಂದಾದ ಲಲಿತಾ ಸಹಸ್ರನಾಮದಲ್ಲಿ ಈ ದೇವಿಯನ್ನು ''ಕದಂಬವನ ವಾಸಿನೀ'' ಎಂದಿದೆ. ಭೈರವ ಯಾಮಳ ತಂತ್ರದಲ್ಲಿ ದೇವಿಯನ್ನು, 'ಮಹಾಪದ್ಮಾಟವೀ ಸಂಸ್ಥಾ' ಎಂದಿದೆ. ಶ್ಯಾಮಲಾದಂಡಕವೆಂಬ ದೇವಿ ಸ್ತುತಿಯು ನೇರವಾಗಿ ಆದಿಶಕ್ತಿ ಪರಮೇಶ್ವರಿಯನ್ನು ಸ್ತುತಿಸುವಲ್ಲಿ ''ಪ್ರೀತಿಭಾಜಾ ವಸಂತೇನ ಚಾನಂದಿತೇ ಭಕ್ತಿ ಭಾಜಾಂ ಪರಾಂಶ್ರೇಯಸೇ...ಪಾಹಿಮಾಂ'' ಎಂದಿದೆ. ಇಲ್ಲಿ ಆದಿಶಕ್ತಿಯನ್ನು ''ವಸಂತವಲ್ಲಭೆ'' ಎಂದು ಸ್ಪಷ್ಟವಾಗಿ ಉಲ್ಲೇಖಿಸಿದೆ. ಜಗನ್ಮಾತೆಯಾದ ಬನಶಂಕರಿದೇವಿಯ ಶಾಕಾಂಬರಿ ಸಹಸ್ರನಾಮದಲ್ಲಿ-''ವಾಸಂತ ಮಾತೃಕಾಯೈ ನಮಃ'' ಎಂದೇ ಉಲ್ಲೇಖಿತವಾಗಿದೆ. ಹೀಗೆ ಆದಿಶಕ್ತಿಯೇ 'ವಾಸಂತಿಕಾದೇವಿ' ಎಂದಿರುವಂತಿದೆ.

ಹೊಯ್ಸಳ ವಂಶದ ಅಧಿದೇವತೆಯಾಗಿ ಸೊಸೆವೂರಿನ (ಅಂಗಡಿಯ) ವಾಸಂತಿಕಾದೇವಿಯು ಪ್ರಸಿದ್ಧಳಾಗಿದ್ದಾಳೆ. ಆದರೆ ಇಲ್ಲಿಯ ದೇವಿಗೆ ಸಂಬಂಧಿಸಿದಂತೆ, ಆ ದೇವಾಲಯಕ್ಕೆ ಸಂಬಂಧಿಸಿದಂತೆ ಹೊಯ್ಸಳರ ಕಾಲದ ಯಾವ ಶಾಸನಗಳು ದೊರೆತಿರುವುದಿಲ್ಲ. ಹೊಯ್ಸಳ ವಂಶದ ಆರಂಭ ಕಾಲದ ಅರಸರು, ಸೊಸೆವೂರು, ಮೂಡಗೆರೆ ಭಾಗಗಳಲ್ಲಿದ್ದರೂ, ಅವರ ಕಾಲದ ಶಾಸನಗಳಲ್ಲೆಲ್ಲೂ ಈ ದೇವಿಯ ಉಲ್ಲೇಖವೂ ಕಾಣಬರುವುದಿಲ್ಲ. ಈ ದೇವಾಲಯಕ್ಕೆ ಸಂಬಂಧಿಸಿದಂತೆ, ಹೊಯ್ಸಳ ವಂಶದ ಉದಯವನ್ನು ಸಾರುವ ಜನಪ್ರಿಯ ದಂತಕಥೆಯೊಂದಿದೆ. ಈ ದಂತಕಥೆಯು ೧೨ನೇ ಶತಮಾನದ ಹಲವು ಶಾಸನಗಳಲ್ಲಿ ಹೀಗೆ ಉಕ್ತವಾಗಿದೆ : ಯದುವಂಶದಲ್ಲಿ ಅನೇಕ ಪ್ರಸಿದ್ಧರಾದ ರಾಜರು ಆಗಿಹೋದರು. ಅವರಲ್ಲಿ ಸಳನೂ ಒಬ್ಬ. ಸಳನು ಶಶಕಪುರದ ವಾಸಂತಿಕಾದೇವಿ ಆಲಯದಲ್ಲಿರಲು ಶಾರ್ದೂಲವೊಂದು ಮೇಲೆ ಬಿದ್ದುದರಿಂದ ಅಲ್ಲಿದ್ದ ಜೈನಮುನಿಯು ತನ್ನ ಕುಂಚವನ್ನೇ ಕೊಟ್ಟು 'ಪೊಯ್‌ಸಳ' ಎಂದುದರಿಂದ, ಮುನಿಯ ಆಜ್ಞೆಯಂತೆ ಅದನ್ನು ಕೊಂದು 'ಪೊಯ್‌ಸಳ' ನೆನ್ನಿಸಿದನು. ಇವನಿಂದ ಮುಂದೆ ಆ ವಂಶವು 'ಹೊಯ್ಸಳ ವಂಶ'ವೆನ್ನಿಸಿತೆಂದಿದ್ದು, ಪೊಯ್ಸಳ ವಂಶದ ಅಧಿದೇವತೆಯೂ 'ವಾಸಂತಿಕಾದೇವಿ' ಎನ್ನಿಸಿದೆ.

ಆದರೆ, ಹೊಯ್ಸಳರ ಆರಂಭ ಕಾಲಕ್ಕೆ ಸೇರಿದಂತೆ ವಿನಯಾದಿತ್ಯನ ಕಾಲದವರೆಗಿನ ಯಾವ ಶಾಸನದಲ್ಲೂ ಈ ಕಥೆಯಾಗಲೀ, ವಾಸಂತಿಕಾದೇವಿಯ ಉಲ್ಲೇಖವಾಗಲಿ ದೊರೆಯುವುದಿಲ್ಲ. ಬೇಲೂರಿನ ಒಂದು ಶಾಸನವು ವಿನಯಾದಿತ್ಯನು (ಕ್ರಿ.ಶ. ೧೧೦೧ ರಲ್ಲಿ) ಸೊಸೆವೂರಿಗೆ ಭೇಟಿ ಕೊಟ್ಟಿದ್ದನ್ನು ಉಲ್ಲೇಖಿಸುತ್ತಾ ಆ ದಾರಿಯಲ್ಲಿದ್ದ ಕೋಟೇಶ್ವರ ದೇವರಿಗೆ ಬಿಟ್ಟ ದಾನವನ್ನು ಉಲ್ಲೇಖಿಸಿದೆ (ಬೇ. ೧೯೦, ಎ.ಕ. ೯). ಆದರೆ ವಿನಯಾದಿತ್ಯನು ವಾಸಂತಿಕಾದೇವಿಗೆ ದಾನ ಬಿಟ್ಟ ವಿವರವಾಗಲಿ, ಭೇಟಿ ನೀಡಿದ್ದಕ್ಕಾಗಲ್ಕಿ ಸೊಸೆವೂರಿನ ದೇವಾಲಯದಲ್ಲಿ ಆಧಾರವಿಲ್ಲ. ಆದರೆ ಚಿಕ್ಕಮಗಳೂರು ತಾಲೂಕಿನ ಅಂಬಳೆ ಶಾಸನವು, ಸಳನು-''ಶಶಕಪುರದ ವಾಸಂತಿಕೆಯನ್ನು ಜಳಗಂಧಪುಷ್ಪಧೂಪದಿಂದ ಅರ್ಚಿಸುತ್ತಿದ್ದಾಗ ಆಡವಿಯ ಪುಲಿ ಹಾಯಲು ನಿರ್ಮಳ ಜಿನಮುನಿ ತನ್ನ ಕುಂಚವನ್ನು ಕೊಟ್ಟನೆಂದು ಹುಲಿಯನ್ನು ಕೊಂದು 'ಹೊಯ್ಸಳ'ನೆನ್ನಿಸಿದ''ನೆಂದು ತಿಳಿಸುತ್ತದೆ (ಚಿ.ಮ. ೨೦). ಜಿನಮುನಿಯು ವಾಸಿಸುತ್ತಿದ್ದ ಈ ದೇವಾಲಯದ ದೇವಿಯು ಜೈನಯಕ್ಷಿ ಇದ್ದಿರಬಹುದೇ ? ಎಂಬುದು ಗಮನಾರ್ಹವಾಗಿದೆ. ಆದರೆ ಜಿನಮುನಿಯು ಹುಲಿಯನ್ನು ಕೊಲ್ಲು ಎಂದು ಸೂಚಿಸಿದ್ದು ಕಲ್ಪಿತವಾದ ಅಂಶವಾಗಿದೆ. ಅಹಿಂಸೆ ಮಹಾವ್ರತವನ್ನು ಧರಿಸಿದ್ದ ಜಿನಮುನಿ ಹೀಗೆ ಹೇಳುವುದು ಅಸಾಧ್ಯದ ಮಾತಾಗಿದೆ. ಬದಲಾಗಿ ಇದೊಂದು ಸಳನ ಶೌರ್ಯವನ್ನು ಸಾಧಿಸಲು ರಚಿಸಿದ ಕಟ್ಟುಕಥೆಯಾಗಿದೆ. ಸುಮಾರು, ಹೊಯ್ಸಳ ವಿಷ್ಣುವರ್ಧನನು ಅನೇಕ ಯುದ್ಧಗಳಲ್ಲಿ ಜಯಗಳಿಸಿದ ಮೇಲೆ, ಹೊಯ್ಸಳರು ಮತ್ತು ಅವರ ಅಧಿಕಾರಿಗಳು ತಮ್ಮ ನಂಬಿಕೆಗೆ ತಕ್ಕಂತೆ, ಈ ದೇವಿಯ ಕೃಪೆಯಿಂದ ರಾಜನು ಮಹಾವೀರನಾಗಿ ಚಕ್ರವರ್ತಿಯಾದ ನೆಂಬಂತೆ ಭಾವಿಸಿದ್ದು, ನಂತರದ ಶಾಸನಗಳಲ್ಲಿ ''ಶಶಕಪುರ ನಿವಾಸ ವಾಸಂತಿಕಾದೇವಿ ವರಲಬ್ಧ ಪ್ರಸಾದ''-ಎಂದು ಉಲ್ಲೇಖಿಸಿದ್ದಾರೆ. ಹೊಯ್ಸಳ ವಂಶದ ಮೂಲಪುರುಷ ನಾಗಿರುವ ಸಳನ ಶೌರ್ಯವನ್ನು ಮೇಲಿನಂತೆ ಪೊಯ್ಸಳ-ಕಥೆಯಿಂದ ಸಾಧಿಸಿದ್ದು, ಹೊಯ್ಸಳ ವಂಶದವರ ಪ್ರತಾಪದ ಬಣ್ಣನೆ ಇದಾಗಿದೆ.

'ವಾಸಂತಿಕಾದೇವಿ'ಯನ್ನು ಉಲ್ಲೇಖಿಸಿರುವ ಮತ್ತೊಂದು ಶಾಸನವೆಂದರೆ-ಬೇಲೂರು ತಾಲೂಕಿನ ಲಕ್ಕುಂದದ ಶಾಸನ. ಈ ಶಾಸನವನ್ನು ಚೌಡೇಶ್ವರಿ ಅಮ್ಮನವರ ಪೀಠಶಾಸನವೆಂದು ಕರೆದಿರುತ್ತಾರೆ. ಶಾಸನವು-

1. ಶ್ರೀಮತ್ಸಕವರ್ಷ ೭೭೭ ಆನಂದ ಸಂವತ್ಸರದ ವೈಶಾಖ ಸು ೭ ವ
2. ವಾರ । ನೆಕುನಾಡ ನೆಕುಂದದ ಕಪಾಳೇಶ್ವರ ದೇವರ
3. ಆಮೂಲಿಗ ಬ್ರಹ್ಮಾದಿರಾಯ ಬ್ರಹ್ಮಕುಳತಿಳಕ
4. ಮಲ್ಲಿದೇವ ಮಾಡಿಸಿದ ವಾಸಂತಿಕಾದೇವಿ ಶ್ರೀ..

ಎಂದಿದೆ. ಈ ಶಾಸನದಿಂದ ವಾಸಂತಿಕಾದೇವಿ ಸ್ವರೂಪವನ್ನು ಸ್ಪಷ್ಟವಾಗಿ ತಿಳಿಯಬಹುದಾಗಿದೆ. ಈಶಾಸನವನ್ನು ಮೊದಲಿಗೆ ಮಾನ್ಯ ಎಂ. ಎಚ್. ಕೃಷ್ಣರವರು ಪ್ರಕಟಿಸಿದ್ದು, ಆಕಸ್ಮಿಕವಾಗಿ ಇಲ್ಲಿ ತೇದಿಯನ್ನು '೭೭೭' ಎಂದು ಓದಲಾಗಿದೆ. ಶಾಸನಕಲ್ಲು ಎಣ್ಣೆಯ ಜಿಡ್ಡಿನಿಂದ ಕೂಡಿದ್ದು ಕೆತ್ತನೆ ಆಳವಾಗಿಲ್ಲ ವಾದ್ದರಿಂದ ಓದುವಲ್ಲಿ ತೊಡಕಾಗಿದ್ದಿರಬೇಕು. ಆದರೆ ಶಾಸನದ ಲಿಪಿಸ್ವರೂಪವು ಸ್ಪಷ್ಟವಾಗಿ ಸು. ೧೨-೧೩ನೇ ಶತಮಾನದ್ದಾಗಿದ್ದು, ಶಾಸನದಲ್ಲಿ ಕಾಲವು ಸ್ಪಷ್ಟವಾಗಿ 'ಶ್ರೀ ಮತ್ಸಕವರ್ಷ ೧೨೨೦' ಎಂದಿದೆ. ಇದರಿಂದ ಈ ದೇವಿಯ ಆರಾಧನೆಯು ಸು. ೧೩ನೇ ಶತಮಾನದಲ್ಲೂ ಇತ್ತೆಂದು ತಿಳಿಯುತ್ತದೆ.

**ಶಿಲ್ಪಗಳ ಹಿನ್ನೆಲೆಯಲ್ಲಿ**

ವಾಸಂತಿಕಾದೇವಿಯ ಶಿಲ್ಪಗಳಲ್ಲೆಲ್ಲ ಅಂಗಡಿಯ ವಾಸಂತಿಕಾದೇವಿ ಶಿಲ್ಪವೇ ಪ್ರಾಚೀನವಾದದ್ದಾಗಿದೆ. ಸಪ್ತಮಾತೃಕೆಯರ ಶಿಲ್ಪಗಳ ಮಧ್ಯದ ಶಿಲ್ಪವಾದ ಈ ದೇವಿ ಶಿಲ್ಪದಲ್ಲಿ ಅಗಲವಾದ ಪ್ರಭಾವಳಿಯಲ್ಲಿ ಕೀರ್ತಿಮುಖವಿದ್ದು, ದೇವಿಯ ಶಿರದ ಮೇಲೆ ತ್ರಿಫಣಾವಳಿಯೂ ಇದೆ. ಪ್ರಧಾನ ಶಿಲ್ಪವಾದ ಈ ದೇವಿಗೆ ಮಾತ್ರ ಚತುರ್ಭುಜಗಳನ್ನು ಬಿಡಿಸಿದ್ದು, ಕ್ರಮವಾಗಿ ಖಡ್ಗ, ಚಕ್ರ, ಶಂಖ ಮತ್ತು ಪಾನಪಾತ್ರೆಯನ್ನು ಹೊಂದಿದ್ದಾಳೆ. ದೇವಿಯು ಆಯುಧಗಳನ್ನು ಕಟಕಮುದ್ರೆಯಲ್ಲಿ ಧರಿಸಿದ್ದಾಳೆ. ಎಲ್ಲಾ ದೇವಿ ಬಿಂಬಗಳ ಕೈಕೆಳಗೆ ಏಕಫಣಾವಳಿ ಇದೆ. ಉಳಿದ ದೇವಿಯರೂ ಭದ್ರಾಸನದಲ್ಲಿ ಕುಳಿತಿದ್ದು, ಪೀಠದ ಕೆಳಭಾಗದಲ್ಲಿ ರಕ್ಕಸನ ರುಂಡಗಳನ್ನು ಬಿಡಿಸಿದೆ. ಎಲ್ಲಾ ಬಿಂಬಗಳಿಗೂ ಬಣ್ಣವನ್ನು ಬಳಿದಿದ್ದಾರೆ. ವಾಸಂತಿಕಾ ದೇವಿಯು ಪ್ರಸನ್ನವದನ ಳಾಗಿದ್ದಾಳೆ. ಅಗಲವಾದ ಓಲೆಗಳು, ಉರಹಾರ, ಕಂಠಿಕೆ, ಕಡಗ ಮೊದಲಾದ ಆಭರಣಗಳಲ್ಲದೇ, ಕಟೀಬಂಧನದೊಂದಿಗೆ ವಸ್ತ್ರವನ್ನು ಬಿಡಿಸಿದೆ. ಸ್ತನಬಂಧವೂ ಇದೆ. ಈ ಬಿಂಬವು ವೈದಿಕ ಪರಂಪರೆಯ ದೇವಿಯ ಶಿಲ್ಪದಂತಿದೆಯೇ ಹೊರತು ಜೈನಶಿಲ್ಪದ ಲಕ್ಷಣಗಳಾವುವೂ ಈ ಶಿಲ್ಪದಲ್ಲಿ ಗೋಚರವಾಗುವುದಿಲ್ಲ. ಈ ವಾಸಂತಿಕಾದೇವಿ



ವಾಸಂತಿಕಾದೇವಿ -ಅಂಗಡಿ

ಶಿಲ್ಪವನ್ನು ಹೋಲುವ, ಆದರೆ ಚೌಡೇಶ್ವರಿ ಎಂದು ಪೂಜಿಸುತ್ತಿರುವ ಶಿಲ್ಪಗಳನ್ನು ಬೇಲೂರು, ಹಾಸನ ಮೊದಲಾದೆಡೆಗಳಲ್ಲಿ ಕಾಣಬಹುದು.

**ಲಕ್ಕುಂದದ ವಾಸಂತಿಕಾದೇವಿ ಶಿಲ್ಪ**

ಬೇಲೂರು-ಸಕಲೇಶಪುರ ಮಾರ್ಗದಲ್ಲಿರುವ ಲಕ್ಕುಂದಗ್ರಾಮದ ಕಾಪಾಲೇಶ್ವರ ದೇವಾಲಯವಿದ್ದ ಜಾಗದಲ್ಲಿ ಇಂದು ಮರದ ಕೆಳಗೆ ಇರುವ ಕಟ್ಟೆಯ ಮೇಲೆ ಈ ವಾಸಂತಿಕಾದೇವಿ ಶಿಲ್ಪವಿದೆ. ವಲ್ಲಿಪ್ರಭಾವಳಿಯ ಕೆಳಗೆ ಕರಂಡಮಕುಟ ಧರಿಸಿರುವ ದೇವಿಯು ವೀರಾಸನಭಂಗಿಯಲ್ಲಿ ಕುಳಿತಿದ್ದಾಳೆ. ದೇವಿಗೆ ಶಿರಶ್ಚಕ್ರ, ಅಗಲವಾದ ಓಲೆ, ಕಂಠಿಕೆ, ಎರಡು ಉರಹಾರಗಳಲ್ಲದೇ, ಯಜ್ಞೋಪವೀತವು ಎಡದಿಂದ ಬಲಕ್ಕೆ ಹಾದುಹೋಗಿದೆ. ಕೈಗಳಲ್ಲಿ ರತ್ನದ ಕಡಗಗಳನ್ನು, ಬೆರಳಿನಲ್ಲಿ ಉಂಗುರಗಳನ್ನು ಧರಿಸಿರುವ ದೇವಿಗೆ ಸುಂದರವಾದ ಕಟೀವಸ್ತ್ರವೂ, ಉದ್ದವಾದ ತೋರಹಾರವೂ ಇದೆ. ಕಾಲಿನಲ್ಲಿ ದಪ್ಪದಾದ ತೋಡ ಮತ್ತು ಕಾಲುಂಗುರ ಗಳಿವೆ. ಬಳಿಯಲ್ಲಿ ಚಾಮರಧಾರಿಯರಿದ್ದಾರೆ. ದೇವಿಯು ಚತುರ್ಭುಜಗಳಲ್ಲಿ ಖಡ್ಗ, ತ್ರಿಶೂಲ, ಡಮರು ಮತ್ತು ಬೀಜಪೂರಗಳನ್ನು ಧರಿಸಿದ್ದು, ಪೀಠದಲ್ಲಿ ಲಾಂಛನವಿಲ್ಲ, ಬದಲಿಗೆ ಪೀಠದ ಶಾಸನವು ದೇವಿಯನ್ನು ಸ್ಪಷ್ಟವಾಗಿ 'ವಾಸಂತಿಕಾದೇವಿ' ಎಂದು ಉಲ್ಲೇಖಿಸುತ್ತಿದೆ. ಆದರೆ ಸ್ಥಳೀಕರು ಇದನ್ನು 'ಚೌಡೇಶ್ವರಿ' ಎಂದೇ ಕರೆಯುತ್ತಾರೆ.

ಶ್ರೀಯುತ ಎಂ. ಹನುಮಂತರಾವ್‌ರವರು ಹಳೇಬೀಡಿನ ಬಳಿ ಇರುವ ಹುಲಿಕೆರೆ ಸಮೀಪದ ಚೌಡೇಶ್ವರಿ ಗುಡಿಯಲ್ಲಿ

ಇಂತಹದೇ ಚತುರ್ಭುಜೆಯಾದ ದೇವಿಯು ಕೈಗಳಲ್ಲಿ-ಪಾನಪಾತ್ರೆ,ಕತ್ತಿ, ತ್ರಿಶೂಲ ಮತ್ತು ಡಮರುವನ್ನು ಧರಿಸಿರುವ ಬಿಂಬವಿದೆ ಎಂದಿದ್ದು ಇವಳನ್ನು 'ವಾಸಂತಿಕೆ' ಎಂದು ಕರೆದಿರುತ್ತಾರೆ.(ದಿ ಹೋಯ್ಸಳ ಡಿನಸ್ಟಿ, ಪು. 43) ಇದರಂತೆ ಶ್ರೀ ಎಚ್. ಎಸ್. ಕಾಂಬಳೆಯವರು ಖಾನಾಪುರದಲ್ಲಿ ಶಕ್ತಿದೇವಾಲಯವನ್ನು ಗುರುತಿಸಿದ್ದು, ಇಲ್ಲಿರುವ ದೇವಿಯನ್ನು ಸ್ಥಾನಿಕ ಭಂಗಿಯ ಜೈನ ಯಕ್ಷಿ ಪದ್ಮಾವತಿದೇವಿ ಎಂದಿರುತ್ತಾರೆ. ಈ ದೇವಿಯ ಕೈಗಳಲ್ಲಿ ಪಾಶ, ಅಂಕುಶವಿದ್ದು ಮುಂದಿನ ಮುರಿದ ಕೈಗಳಲ್ಲಿ ಖಡ್ಗವಿದೆ. ಜಿನಬಿಂಬ ಕಿರೀಟವುಳ್ಳ ಇವಳು ಪದ್ಮಾವತಿಯಕ್ಷಿಯೇ ಆಗಿದ್ದರೂ, ಜನ ಇವಳನ್ನು 'ಶಂಕರಿ' ಎಂದು ಪೂಜಿಸುತ್ತಾರೆಂದು ತಿಳಿಸಿರುತ್ತಾರೆ (ಇತಿಹಾಸ ದರ್ಶನ, ಸಂ ೫. ಪು. ೭೧).

ಈ ಹಿನ್ನೆಲೆಗಳಲ್ಲಿ ಗಮನಿಸಿದಾಗ, ಸಮಯ ಪರೀಕ್ಷೆಯಲ್ಲಿ ಎಕ್ಕಲದೇವಿಯನ್ನು ಪೂಜಿಸುವವನು ಬನದ ಬಳರಿಯ ಜಾತ್ರೆಗೆ ಹೋಗುವವನು ಜೈನನಲ್ಲ ಕೌಳ, ಎಂದಿದೆ. ಇದರಿಂದ ಸು. ೧೧-೧೨ನೇ ಶತಮಾನಗಳಲ್ಲಿ ಜೈನರು ಶಕ್ತಿದೇವತೆಯನ್ನು ಪೂಜಿಸುತ್ತಿದ್ದರೆಂದು ತಿಳಿಯುತ್ತದೆ. ಲಕ್ಕುಂದದ ಶಾಸನವು ವಾಸಂತಿಕಾದೇವಿಯನ್ನು ಮೂಲಿಗ ಬ್ರಹ್ಮಾದಿರಾಯ, ಬ್ರಹ್ಮಕುಳತಿಲಕ ಮಲ್ಲಿದೇವ ಮಾಡಿಸಿದ್ದೆಂದು ತಿಳಿಸುತ್ತದೆ. ಇಲ್ಲಿ ದೇವಿಯನ್ನು ಪೂಜಿಸುತ್ತಿದ್ದವನು ಬ್ರಹ್ಮಕುಳತಿಲಕನಾಗಿದ್ದನೆಂದರೆ, ಡಾ|| ಹಂಪನಾರವರು ಬಿಜಾಪುರ ಜಿಲ್ಲೆಯ ಚಿನ್ನಾಪುರ ಎಸ್.ಟಿ. ಗ್ರಾಮದ ಶಾಸನವೊಂದನ್ನು ಪ್ರಕಟಿಸಿದ್ದು, ಅದು ಮೂಲಿಗ ಬೊಮ್ಮಗೌಡ, ಮಾಳಗೌಡ ಮೊದಲಾದವರು ಮಾಡಿಸಿದ-'ಮೂಲಿಗ ಬಸದಿ'ಯನ್ನು ಉಲ್ಲೇಖಿಸುತ್ತಿದೆ. ಇದರಿಂದ ಮೂಲಿಗರು, ಬಹುಶಃ ಮತಾಂತರ ಹೊಂದಿದ್ದ ಜೈನರಾಗಿದ್ದು, ಇವರು ರೌದ್ರರೂಪದ ಚಂಡಿಕೆಯನ್ನು (ಚಾಮುಂಡಿ) ಸೌಮ್ಯರೂಪಕ್ಕೆ ತಿರುಗಿಸಿದ ರೂಪಾಂತರವೇ 'ವಾಸಂತಿಕಾ ದೇವಿ'ಯಾಗಿರಬೇಕು. ಇದನ್ನು ಜೈನರ ಜೀವದಯಾಷ್ಟಮಿ ಕಥೆಯು ಬೆಂಬಲಿಸುತ್ತಿದ್ದು ಜನ್ನಕವಿಯು ತನ್ನ ಯಶೋಧರ ಚರಿತ್ರೆಯಲ್ಲಿ ಚಂಡಮಾರಿದೇವಿ ಅಹಿಂಸೆ ದೀಕ್ಷೆ ಪಡೆದಳೆಂದು ತಿಳಿಸಿದ್ದಾನೆ. ಇದನ್ನೇ ಶಿಲ್ಪವು ನಿರ್ದೇಶಿಸುತ್ತಿದ್ದು ಮಹಾಮಾಯೆ ಅಥವಾ ಮಹಾಕಾಳಿಯ ಶಿಲ್ಪವು ಚತುರ್ಭುಜಗಳಲ್ಲಿ ಖಡ್ಗ, ತ್ರಿಶೂಲ, ಡಮರು, ಪಾನಪಾತ್ರೆಗಳನ್ನು ಹೊಂದಿರುತ್ತಿದ್ದರೆ, ಇಲ್ಲಿ ಖಡ್ಗ, ತ್ರಿಶೂಲ, ಡಮರು ಮತ್ತು ಸಕಲ ಸಿದ್ಧಿಕಾರಕವಾದ 'ಬೀಜಪೂರ'ವನ್ನು ದೇವಿ ಧರಿಸಿದ್ದಾಳೆ. ಈ ಬೀಜಪೂರವು ಜೈನಯಕ್ಷಿಯ ಸಂಕೇತವೇ ಆಗಿರುವುದು ಗಮನಾರ್ಹ! ಇದರಂತೆ ಬೇಲೂರಿನ ಶಾಸನವೊಂದು ಪದ್ಮಾವತಿ ಯಕ್ಷಿಯ ಕೃಪೆಯಿಂದ ವಸಂತವು



ವಾಂತಿಕಾದೇವಿ ಲಕ್ಕುಂದ

ತಲೆದೋರಲಾಗಿ 'ವಾಸಂತಿಕೆ' ಎನಿಸಿದಳು (ಬೇ. ೩೨೦) ಎಂದಿದ್ದು, ಈ ದೇವಿಗೂ ಪದ್ಮಾವತಿ ಯಕ್ಷಿಗೂ ಇರುವ ಸಾಮ್ಯವನ್ನು ತ್ರಿಫಣಾವಳಿಯೂ ಎತ್ತಿ ತೋರುತ್ತಿದೆ. ಡಾ. ಹಂಪನಾರವರು ವೈದಿಕ ಪರಂಪರೆಯ ಸಪ್ತಮಾತೃಕೆಯರನ್ನು ಅಲ್ಪ ಬದಲಾವಣೆಗಳೊಂದಿಗೆ ಯಕ್ಷಿಯರಾಗಿಸಿದರು ಎಂದಿದ್ದಾರೆ (ಯಕ್ಷ ಯಕ್ಷಿಯರು). ಹೀಗಾಗಿ ಈ ಅಧ್ಯಯನದಿಂದ ಮೊದಲಿಗೆ ಅಂಗಡಿ ಗ್ರಾಮದಲ್ಲಿ ಗ್ರಾಮದೇವತೆಯಾಗಿದ್ದ ವೈಷ್ಣವಿದೇವಿಯೇ ವಾಸಂತಿಕಾ ಪರಮೇಶ್ವರಿ ಎನ್ನಿಸಿದ್ದು ಸು. ಕ್ರಿ. ಶ. ೧೨-೧೩ನೇ ಶತಮಾನದಲ್ಲಿ ಈ ದೇವಿ ಸ್ವರೂಪವು ಜೈನಮತದ ಪ್ರಭಾವದ ಹಿನ್ನೆಲೆಯಲ್ಲಿ ಅಲ್ಪ ಬದಲಾವಣೆಗೊಂಡಿದ್ದನ್ನು ಕಾಣುತ್ತೇವೆ. ಆದರೂ ೧೩ನೇ ಶತಮಾನದಲ್ಲೂ ವಾಸಂತಿಕಾದೇವಿ ಆರಾಧನೆ ಪ್ರಚಲಿತವಿದ್ದುದ್ದು ಸು. ೧೫ನೇ ಶತಮಾನದ ನಂತರದಲ್ಲಿ ಸ್ಥಗಿತಗೊಂಡಂತಿದೆ. ಮತ್ತೆ ಸು. ೧೯-೨೦ರಲ್ಲಿ ಅಂಗಡಿಯ ವಾಸಂತಿಕಾದೇವಿ ದೇವಾಲಯ ಜೀರ್ಣೋದ್ಧಾರಗೊಂಡಿದ್ದು ಇಂದು ಮತ್ತೆ ಗ್ರಾಮದೇವತೆಯಾಗಿ ಸುತ್ತಮುತ್ತಲಿನ ೧೧ ಗ್ರಾಮದವರ ಆರಾಧ್ಯ ದೇವತೆಯಾಗಿ ಪೂಜೆಗೊಳ್ಳುತ್ತಿರುವುದನ್ನು ಕಂಡಾಗ ಸಮಾಜದ ಸ್ಥಿತ್ಯಂತರದ ಬಗೆಗೂ ತಿಳಿಯಬಹುದಾಗಿದೆ. ○

ವಾಸುದೇವ ಬಡಿಗೇರ *

# ಬಾದುಬ್ಬೆ-ಬನಶಂಕರಿ ಶಿಲ್ಪಗಳು

ಪ್ರಾಚೀನ ಕಾಲದಿಂದಲೂ ಭಾರತದಾದ್ಯಂತ ಪ್ರತಿಯೊಂದು ಗ್ರಾಮದಲ್ಲಿಯೂ ಗ್ರಾಮದೇವತೆಯ ಆರಾಧನೆ ಪ್ರಚಲಿತವಿದೆ. ಬೇರೆ ಬೇರೆ ಹೆಸರಿನಿಂದ ಮತ್ತು ವಿಭಿನ್ನ ರೂಪಗಳಲ್ಲಿ ಕಾಣಿಸಿಕೊಳ್ಳುವ ಈ ದೇವತೆಗಳಲ್ಲಿ ಬಾದುಬೆ-ಬನಶಂಕರಿಶಿಲ್ಪಗಳು ಅಪರೂಪ. ವನದುಬ್ಬೆ-ಬನದುಬ್ಬೆ ಬಾದುಬ್ಬೆ-ಬಾದುಬೆ-ಬಾದುಂಬೆ-ಚೋದುಂಬೆ-ಬನಶಂಕರಿ-ಬಾದುಮಯ್ಯ-ಗಜಯ್ಯ ಮುಂತಾದ ಹೆಸರಿನಿಂದ ಗುರುತಿಸಲಾಗಿದೆ.

**ಬಾದುಬ್ಬೆ-ಗಜಲಕ್ಷ್ಮಿ :**

ಸೋಗಿ (ಹಡಗಲಿ ತಾ॥ ಬಳ್ಳಾರಿ ಜಿ.) ಗ್ರಾಮದ ಗಜಲಕ್ಷ್ಮಿಯ ಶಿಲ್ಪವು** ಪದ್ಮಾಸನದಲ್ಲಿ ಕುಳಿತು ದ್ವಿಬಾಹುಯುಕ್ತಳಾಗಿದ್ದು, ಕೈಗಳಲ್ಲಿ ಪದ್ಮಗಳು, ಆಚೆ-ಈಚೆ ನಿಂತ ಆನೆಗಳು ಸೊಂಡಿಲುಗಳಲ್ಲಿ ಕುಂಭಗಳನ್ನು ಹಿಡಿದು ಅಭಿಷೇಕ ಮಾಡುತ್ತಿವೆ. ಮೇಲೆ ಮಕರ ತೋರಣವಿದೆ. ಪೀಠದ ಮೇಲೆ "ಶ್ರೀ ಗಜಯ್ಯನ ಫಲಕಂ" ಎಂದು ಶಾಸನವಿದೆ. ಬಾಳೂರು (ಹಾನಗಲ್ ತಾ. ಧಾರವಾಡ ಜಿ.) ಗ್ರಾಮದಲ್ಲಿಯ ಗಜಲಕ್ಷ್ಮಿ ಶಿಲ್ಪವು ಪದ್ಮಾಸನದಲ್ಲಿ ಕುಳಿತ ಚತುರ್ಬಾಹು ಯುಕ್ತಳಾಗಿದ್ದು ಆಚೆ ಈಚೆ ನಿಂತ ಆನೆಗಳು ತಮ್ಮ ಸೊಂಡಿಲುಗಳಲ್ಲಿ ಕುಂಭಗಳನ್ನು ಹಿಡಿದು ಅಭಿಷೇಕ ಮಾಡುತ್ತಿವೆ. ಪೀಠದ ಮೇಲೆ "ಬರ್ವಗಾವುಂಡ ಬಾ(ದುಂ)ಬೆಯ ಪ್ರತಿಷ್ಠೆ ಮಾಡಿಸಿದ"[1] ಎಂದು ಶಾಸನವಿದೆ. ಕಂದಲಿ (ಕಲಘಟಗಿ ತಾ॥ ಧಾರವಾಡ ಜಿ.) ಗ್ರಾಮದಲ್ಲಿಯ ಸು. ಕ್ರಿ.ಶ. ೧೦೫೦ರ ಒಂದು ಶಾಸನದಲ್ಲಿ "ಎಡಹಳ್ಳಿ ಗಾಲಯ್ಯ(ನಣು)ಗ ಮಾರಯ್ಯ ಮಾಡಿಸಿದಂ ಕನ್ನಲೆಯ ಬಾದುಬ್ಬೆಯಂ"[2] ಈ ಶಾಸನದ ಸಮೀಪದಲ್ಲಿಯೇ ಬಾದುಬ್ಬೆಯ ಪ್ರತಿಮೆ ಇದೆ.[3]

ಕೆಲವು ಶಾಸನಗಳಲ್ಲಿ ಬಾದಮ್ಮ[4], ಬಾದುವೆ[5], ಬಾದುಬ್ಬೆ[6], ಬಾದುಬ್ಬೆಯ ಪರ್ವ[7], ಬಾದುಂಬೆ[8], ಬಾದುಂಬೆ (ಕೆರೆ)[9], ಚೋದುಂಬೆ[10], ಬಾದುವಯ್ಯ[11], ಮುಂತಾದ ಉಲ್ಲೇಖಗಳಿವೆ. ಹುಗಲೂರು, ಕತ್ತೆಬೆಣ್ಣೂರು, ಕೊಂಬಳಿ, ಬೂದನೂರು, ಕುರುವತ್ತಿ, ನಂದಗಾವಿ (ಬಳ್ಳಾರಿ ಜಿ) ಹೌಂಶಿ (ಧಾರವಾಡ ಜಿ)*** ಗ್ರಾಮಗಳಲ್ಲಿರುವ

* ವಸ್ತು ಸಂಗ್ರಹಾಲಯ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ-೫೮೩ ೨೨೧

** ಈ ಶಿಲ್ಪವು ಹಂಪಿ ಕನ್ನಡ ವಿಶ್ವವಿದ್ಯಾಲಯದ ವಸ್ತುಸಂಗ್ರಹಾಲಯದಲ್ಲಿದೆ

*** ನನ್ನ ಕ್ಷೇತ್ರಕಾರ್ಯದಲ್ಲಿ ಕಂಡುಬಂದ ಗಜಲಕ್ಷ್ಮಿಯ ಶಿಲ್ಪಗಳು

1 ಗುರುವ, ಆರ್.ಎನ್., "ಬಾದುಬ್ಬೆ", ಕರ್ನಾಟಕ ಭಾರತಿ, ೬:೨, ಪು. ೧೩೨-೪

2 ಅದೇ

3 ಚಿದಾನಂದಮೂರ್ತಿ ಎಂ. ೧೯೯೩, "ಬಾದುಬ್ಬೆ-ಬಾದುಮಯ್ಯ-ಬನಶಂಕರಿ ಪೆಟ್ಟಿಗೆ ಲಜ್ಜಾಗೌರಿ", ಹೊಸತು ಹೊಸತು; ಪು. ೭೯೫ ಕನ್ನಡ ವಿಶ್ವವಿದ್ಯಾಲಯ, ಹಂಪಿ

4 ಸೌಥ್ ಇಂಡಿಯನ್ ಇನ್‌ಸ್ಕ್ರಿಪ್ಶನ್ಸ್, IX, i, ನಂ. ೫೯

5 ಅದೇ, XV ನಂ. ೯೮ : ಕರ್ನಾಟಕ ಇನ್‌ಸ್ಕ್ರಿಪ್ಶನ್ಸ್, V ಪು. ೪೩

6 ಗುರುವ, ಆರ್.ಎನ್. 'ಬಾದುಬ್ಬೆ' ಕರ್ನಾಟಕ ಭಾರತಿ, ೬:೨, ಪು. ೧೩೨-೪

7 ಕನ್ನಡ ಇನ್‌ಸ್ಕ್ರಿಪ್ಶನ್ಸ್ ಆಫ್ ಆಂಧ್ರ ಪ್ರದೇಶ, ಪು. ೮೬

8 ಎಪಿಗ್ರಾಫಿಯಾ ಕರ್ನಾಟಿಕ, VII, ಪು. ೨೩೫ (ರೈಸ್ ಆವೃತ್ತಿ)

9 ಕರ್ನಾಟಕ ಇನ್‌ಸ್ಕ್ರಿಪ್ಶನ್ಸ್, IV, ಪು. ೩೦ ಮತ್ತು ೫೮

10 ಸೌಥ್ ಇಂಡಿಯನ್ ಇನ್‌ಸ್ಕ್ರಿಪ್ಶನ್ಸ್ IX, i. ಪು. ೩೨೭

11 ಅದೇ, ಪು. ೪೦೭



ಬನಶಂಕರಿ ವಿಗ್ರಹ, ದರೋಜಿ,(ಬಳ್ಳಾರಿ ಜಿಲ್ಲೆ)

ಗಜಲಕ್ಷ್ಮಿಯ ಶಿಲ್ಪಗಳನ್ನು ಬಾಣಂತಿ ಕಲ್ಲುಗಳೆಂದು ಜನರು ಕರೆಯುತ್ತಾರೆ ಹಾಗೂ ಹೆರಿಗೆಯಾಗುವ ವೇಳೆಯಲ್ಲಿ ಮುಖಕೆಳ ಮಾಡಿ ಮಲಗಿಸಿ ಹೆರಿಗೆಯಾದ ನಂತರ ಮೊದಲಿನಂತೆ ನಿಲ್ಲಿಸಿ ಪೂಜೆ ಮಾಡುತ್ತಾರೆ.

### ಬನಶಂಕರಿ

ದರೋಜಿ (ಬಳ್ಳಾರಿ ಜಿ) ಗ್ರಾಮದ ಗುಡ್ಡದ ಕೆಳಭಾಗ ಅದಕ್ಕೆ ಹೊಂದಿಕೊಂಡು ಒಂದು ಚಿಕ್ಕ ದೇವಾಲಯದಲ್ಲಿ ಬನಶಂಕರಿಯ ಶಿಲ್ಪವಿದೆ.* ಈ ಶಿಲ್ಪಕ್ಕೆ ಮುಖದ ಮೇಲೆ ಮೀಸೆ, ಎದೆಯ ಮೇಲೆ ಸ್ತನಗಳಿವೆ ಇಂಥ ಲಕ್ಷಣಗಳುಳ್ಳ ಶಿಲ್ಪಗಳು, ಕುಳಗಟ್ಟೆ (ಹೊನ್ನಾಳಿ ತಾ. ಶಿವಮೊಗ್ಗ ಜಿ.), ಆನವೇರಿ (ಚನ್ನಗಿರಿ ತಾ) ಗ್ರಾಮಗಳಲ್ಲಿವೆ. ಕುಳಗಟ್ಟ ಗ್ರಾಮದ ಬನಶಂಕರಿ ಶಿಲ್ಪಕ್ಕೆ ಎದೆಯ ಮೇಲೆ ಸ್ತನಗಳೂ ಮುಖದ ಮೇಲೆ ಮೀಸೆಯೂ ಇವೆ.[12] ಆನವೇರಿ ಗ್ರಾಮದ ಬಂದಳಿಕೆ ಅಮ್ಮ ಅಥವಾ ಬನಶಂಕರಿ ವಿಗ್ರಹಕ್ಕೆ ಎದೆಯ ಮೇಲೆ ಸ್ತನಗಳೂ, ಮುಖದ ಮೇಲೆ ಮೀಸೆಯೂ, ಕೈಯಲ್ಲಿ ಬಳೆಗಳೂ ಮತ್ತು ಗುಪ್ತಾಂಗದ ಮುಂದೆ ಸರ್ಪ ಹೆಡೆ ಎತ್ತಿ ನಿಂತಿದೆ.

### ಬಾದುಬ್ಬೆ-ಬನಶಂಕರಿ-ಬಾದುಮಯ್ಯ-ಗಜಯ್ಯ

ಬಾದುಮಯ್ಯ ಎಂಬ ವ್ಯಕ್ತಿಯ ಹೆಸರು ಒಂದು ಶಾಸನದಲ್ಲಿದ್ದರೆ, ಅದೇ ಹೆಸರಿನ ಪುರುಷ ಗ್ರಾಮ ದೇವತೆಯ ಹೆಸರು ಸಾಹಿತ್ಯಗಳಲ್ಲಿ ಕಂಡುಬರುತ್ತದೆ.[13] ಹೆಣ್ಣು ದೇವತೆಯಾದ ಗಜಲಕ್ಷ್ಮಿಯು ಪೀಠದ ಮೇಲೆ ಗಜಯ್ಯನೆಂಬ** ಪುರುಷ ದೇವತೆಯ ಹೆಸರು ಮತ್ತು ಬನಶಂಕರಿಯ ಶಿಲ್ಪದಲ್ಲಿ ಸ್ತ್ರೀ, ಪುರುಷ ಲಕ್ಷಣಗಳನ್ನು ಗಮನಿಸಿದರೆ ಸ್ತ್ರೀ ದೇವತೆಯೋ ? ಪುರುಷ ದೇವತೆಯೋ ? ಎಂಬುದು ಅನುಮಾನ ಉಂಟಾಗುತ್ತದೆ. ಬನಶಂಕರಿ ವಿಗ್ರಹಗಳಲ್ಲಿ ಮೀಸೆಯನ್ನು ಗಮನಿಸಿದರೆ ಬಾದುಮಯ್ಯ ಎಂಬ ಪುರುಷ ದೇವತೆ, ಎದೆಯನ್ನು ಗಮನಿಸಿದರೆ ಬಾದುಮ ಎಂಬ ಸ್ತ್ರೀ ದೇವತೆ; ಬಾದುಮಯ್ಯ ಎಂಬ ಪುರುಷ ದೇವತೆ ಎರಡು ಬೇರೆ ಬೇರೆ ದೈವಗಳಾಗಿರದೇ ಬನದಬ್ಬೆ ಅಥವಾ ಬನಶಂಕರಿಯೇ ಆಗಿದೆ ಎಂದು ಡಾ॥ ಎಂ. ಚಿದಾನಂದ ಮೂರ್ತಿಯವರ ಅಭಿಪ್ರಾಯ.[14] ಬನಶಂಕರಿಯ ಆರಾಧಕರ ಪ್ರಕಾರ ಅವಳೇ ಆದಿಶಕ್ತಿಯಾಗಿರುವುದರಿಂದ ಅವಳಿಂದ ಸೃಷ್ಟಿ ನಡೆದಿರುವುದರಿಂದ ಮತ್ತು ಸಂತಾನ ದೇವತೆ ಯಾಗಿರುವುದರಿಂದ ಅವಳು ಪುರುಷನೂ ಹೌದು, ಸ್ತ್ರೀಯೂ ಹೌದು.

ಬಾದುಬ್ಬೆ-ಬನಶಂಕರಿ-ಅಥವಾ ಗಜಲಕ್ಷ್ಮಿ; ಸಂತಾನ ದೇವತೆ, ಕಾಡಿನ ದೇವತೆ, ಆದಿಶಕ್ತಿ ಜೊತೆಗೆ ಸೃಷ್ಟಿಗೆ ಜನ್ಮದಾತೆಯೂ ಆಗಿರುವುದರಿಂದ ಗಂಡು, ಹೆಣ್ಣಿನ ಎರಡೂ ರೂಪಗಳನ್ನು ಅಳವಡಿಸಿಕೊಂಡಿರಬಹುದು. ○

---

* ನನ್ನ ಕ್ಷೇತ್ರ ಕಾರ್ಯದಲ್ಲಿ ಕಂಡುಬಂದ ಬನಶಂಕರಿ ಶಿಲ್ಪ

** ಈ ಶಿಲ್ಪದಲ್ಲಿ ಲಕ್ಷ್ಮಿಯ ಆಚೆ-ಈಚೆ ನಿಂತ ಗಜಗಳು ಸೊಂಡಿಲುಗಳಲ್ಲಿ ಕುಂಭಗಳನ್ನು ಹಿಡಿದು ಅಭಿಷೇಕ ಮಾಡುತ್ತಿರುವುದರಿಂದ ''ಗಜಯ್ಯನ ಫಲಕಂ'' ಅಥವಾ ಗಜಯ್ಯನೆಂಬ ವ್ಯಕ್ತಿ ಇದನ್ನು ನಿರ್ಮಿಸಿರುವುದರಿಂದ ಈ ರೀತಿ ಕರೆದಿರಬಹುದು

12 ಚಿದಾನಂದಮೂರ್ತಿ ಎಂ., ಹೊಸತು ಹೊಸತು

13 (ಸಂ.) ಎಸ್.ಎಸ್. ಮಾಳವಾಡ., ಹರಿಹರನ ಮೂರು ರಗಳೆಗಳು : ''ಭೈರವೇಶ್ವರ ಕಾವ್ಯದ ಕಥಾಮಣಿ ಸೂತ್ರ ರತ್ನಾಕರ''

14 ಚಿದಾನಂದಮೂರ್ತಿ ಎಂ., ಹೊಸತು ಹೊಸತು

ಆರ್. ಎಚ್. ಕುಲಕರ್ಣಿ *

# ಚಾಲುಕ್ಯಪೂರ್ವ ಕಾಲದ ಸುಡಾವೆ ಮಣ್ಣಿನ ದ್ವಿಬಾಹು ನರಸಿಂಹ ವಿಗ್ರಹ

ಚಾಲುಕ್ಯಪೂರ್ವ ಕಾಲದ ವಾಸ್ತು ಮತ್ತು ಶಿಲ್ಪಕಲೆಯನ್ನು ಕುರಿತಂತೆ ಹಲವಾರು ಸಂಶೋಧನೆಗಳು ಆಗಿವೆ. ಇದರಿಂದ ಸಾಕಷ್ಟು ಸಂಖ್ಯೆಯಲ್ಲಿ ಅಂದಿನ ಕಾಲಕ್ಕೆ ಸೇರಿದ ಶಿಲ್ಪಗಳು ಬೆಳಕಿಗೆ ಬಂದಿವೆ. ಉದಾಹರಣೆಗೆ; ಸನ್ನತಿಯ ಬೌದ್ಧ ಶಿಲ್ಪಗಳು, ಉತ್ತರ ಕನ್ನಡ ಜಿಲ್ಲೆಯಲ್ಲಿ ದೊರೆತ ದ್ವಿಬಾಹು ನರಸಿಂಹ, ವಿಷ್ಣು ಹಾಗೂ ಯಕ್ಷ ಮತ್ತು ಬುದ್ಧರ ಶಿಲ್ಪಗಳನ್ನು ಇಲ್ಲಿ ಹೆಸರಿಸಬಹುದು. ಇವುಗಳ ಕಾಲವನ್ನು ಅವುಗಳ ಶೈಲಿ ಆಧಾರದ ಮೇಲೆ ಮತ್ತು ಲಕ್ಷಣಗಳ ಮೇಲೆ ನಿರ್ಧರಿಸಬಹುದು. ಆದರೆ ಚಾಲುಕ್ಯರ ವಾಸ್ತು ಮತ್ತು ಶಿಲ್ಪಗಳ ತವರಾಗಿರುವ ಬಾದಾಮಿ, ಐಹೊಳೆ, ಮಹಾಕೂಟ ಮತ್ತು ಪಟ್ಟದಕಲ್ಲುಗಳಲ್ಲಿ ಅವರ ಕಾಲಕ್ಕೆ ಪೂರ್ವದ್ದು ಎನ್ನುವಂತಹ ಶಿಲ್ಪಗಳಿರುವುದು ವಿರಳ. ಆದರೆ ಈಗ ಹೊಸದಾಗಿ ಶೋಧಿಸಿದ ಪ್ರಸ್ತುತ ವಿಗ್ರಹ ಬಾದಾಮಿಗೆ ಸಮೀಪದಲ್ಲೀ ಇರುವ ನಿಲೋಗಲ್ ಎಂಬ ಗ್ರಾಮದಲ್ಲಿ (ತಾಲ್ಲೂಕು ; ಕುಷ್ಟಗಿ, ಜಿಲ್ಲಾ, ರಾಯಚೂರು) ದೊರೆತಿದೆ.[1] ಈ ವಿಗ್ರಹ ದ್ವಿಬಾಹುಗಳನ್ನು ಹೊಂದಿದ್ದು ಸುಡಾವೆ ಮಣ್ಣಿನಲ್ಲಿ ತಯಾರಿಸಿದ ಪ್ರಪ್ರಥಮ ಚಾಲುಕ್ಯ ಪೂರ್ವ ಕಾಲದ ನರಸಿಂಹನ ವಿಗ್ರಹವಾಗಿದೆ.

ಈ ವಿಗ್ರಹ ''ಸುಖಾಸನ''ದಲ್ಲಿ ಪದ್ಮಪೀಠದ ಮೇಲೆ ಕುಳಿತಿದ್ದು, ೨೨ ಅಂಗುಲ ಎತ್ತರ ೧೧.೫ ಅಂಗುಲದ ಅಗಲ, ಮತ್ತು ೪ ½ ಅಂಗುಲ ದಪ್ಪವಿದೆ. ವಿಗ್ರಹದ ಎಡಗೈ ಭಾಗ ಭುಜಸಮೇತವಾಗಿ ಒಡೆದುಹೋಗಿದೆ. ಈ ವಿಗ್ರಹಕ್ಕೆ ಪದ್ಮಪೀಠದ ಕೆಳಗೆ ಸುಮಾರು ೭"x ೬" ಅಗಲದ ಅಡಿಗೂಟವಿದೆ. ಇದರ ಉದ್ದೇಶ, ವಿಗ್ರಹವನ್ನು ಪ್ರತಿಷ್ಠಾಪಿಸಲು ಅಥವಾ ಪೀಠದ ಮೇಲೆ ಇಡಲು ಎಂದು ತಿಳಿದುಬರುತ್ತದೆ. ಈ ಸುಡಾವೆ ಮಣ್ಣಿನ ನರಸಿಂಹ, ಉಬ್ಬು ಶಿಲ್ಪದ ಹಾಗೆ ಮುಂಭಾಗ ಮಾತ್ರ ನಾಜೂಕಾದ ಮತ್ತು ಕಲಾತ್ಮಕವಾದ ಶರೀರ ಹೊಂದಿದ್ದು ಹಿಂಭಾಗ ಚಪ್ಪಟೆಯಾಗಿದೆ. ಬಹುಶಃ ಈ ವಿಗ್ರಹವನ್ನು ಒಂದೇ ಅಚ್ಚಿನಿಂದ ತಯಾರಿಸಿರುವ ಸಾಧ್ಯತೆ ಇದೆ.[2] ಇದು ದ್ವಿಬಾಹು ನರಸಿಂಹನ ವಿಗ್ರಹವೆಂದು ಮೊದಲೇ ಹೇಳಿದೆ. ಈ ವಿಗ್ರಹ ಬಲಗೈಯಲ್ಲಿ ಸುದರ್ಶನ ಚಕ್ರವನ್ನು ಹಿಡಿದಿದ್ದು ಅದನ್ನು ಪೀಠದ ಮೇಲೆ ಇಟ್ಟಿದೆ. ಇಲ್ಲಿ ಚಕ್ರವನ್ನು ಹಿಡಿದುಕೊಂಡಿರುವ ರೀತಿಯನ್ನು ವಿಶೇಷವಾಗಿ ಗಮನಿಸಬೇಕು. ಅದನ್ನು ಬಾಚಿ ಇಡಿಯಾಗಿ ಕೈಯೊಳಗೆ ಹುದುಗಿಸಿಕೊಂಡಂತೆ ಕಂಡುಬರುತ್ತದೆ. ಇನ್ನು ಎಡಗೈ ಭಾಗ. ಅದು ಮುರಿದುಹೋಗಿದೆ; ಎಡ ಹಸ್ತವು

* ಯು.ಜಿ.ಸಿ. ಹಿರಿಯ ಸಂಶೋಧನಾ ವಿದ್ಯಾರ್ಥಿ, ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ಇಲಾಖೆ, ಮಾನಸಗಂಗೋತ್ರಿ, ಮೈಸೂರು-೫೭೦ ೦೦೬

1 ಈ ವಿಗ್ರಹ ನನ್ನ ಕ್ಷೇತ್ರ ಕಾರ್ಯ ಸಮಯದಲ್ಲಿ ದೊರೆಯಿತು. ಇದು ನನ್ನ ಸ್ವಂತ ಊರಾದ ನಿಲೋಗಲ್‌ನಲ್ಲಿ ನಮಗೆ ಸಂಬಂಧಿಸಿದ ಸಾಗುವಳಿ ಜಮೀನಿನಲ್ಲಿ, ಮರವೊಂದರಡಿಯಲ್ಲಿಯ, ದೇವರ ಕಟ್ಟೆಯಲ್ಲಿ ಎಷ್ಟೋ ವರ್ಷಗಳಿಂದ ಪೂಜೆಯಲ್ಲಿತ್ತು. ಈ ವಿಗ್ರಹಕ್ಕೆ ಎಷ್ಟೋ ವರ್ಷಗಳಿಂದ ಸುಣ್ಣ ಬಳಿಯುತ್ತಿದ್ದರಿಂದ, ಸುಮಾರು ಒಂದು ಅಂಗುಲಕ್ಕಿಂತಲೂ ದಪ್ಪ ಸುಣ್ಣ ತುಂಬಿಹೋಗಿತ್ತು. ಇದನ್ನು ಆಕಸ್ಮಿಕವಾಗಿ ಮತ್ತು ಕುತೂಹಲದಿಂದ ಹೊರ ತೆಗೆದಾಗ ಕುಳಿತ ಭಂಗಿಯಲ್ಲಿರುವ ಇದನ್ನು ಮೊದಲು ವೈಷ್ಣವ ಪಂಥಕ್ಕೆ ಸೇರಿದ ವಿಗ್ರಹವೆಂದು ನಿಶ್ಚಯಿಸಿದರೂ ನಂತರ ಇದರ ಲಕ್ಷಣ ಮತ್ತು ಶೈಲಿಯನ್ನು ಸಂಪೂರ್ಣವಾಗಿ ಗಮನಿಸಿದ ಮೇಲೆ 'ಕೇವಲ ನರಸಿಂಹ' ಎಂದು ಗುರುತಿಸಲಾಯಿತು.

2 ಸುಡಾವೆ ಮಣ್ಣಿನ ವಿಗ್ರಹಗಳನ್ನು 'ಟೆರಾಕೋಟಾ' ಸಾಮಾನ್ಯವಾಗಿ ಅಚ್ಚಿನಿಂದಲೇ ತಯಾರಿಸುವ ರೂಢಿ ಬಹಳ ಹಿಂದಿನಿಂದಲೂ ಇದೆ. ಶಾತವಾಹನರ ಕಾಲದ ಚಿಕ್ಕ ಗೊಂಬೆಗಳೂ ಸಹ ಅಚ್ಚಿನಿಂದಲೇ ತಯಾರಿಸಿದವು. ಅಲ್ಲದೇ ಉತ್ತರದ ರಂಗಮಹಲ್, ಅಹಿಛತ್ರ ಮತ್ತು ಭೀತರ್‌ಗಾಂವ ಹಾಗೂ ಪಶ್ಚಿಮ ಬಂಗಾಳದ ವಿಷ್ಣುಪುರಿಯ ಶಿಲ್ಪಗಳು, ಅಚ್ಚಿನಿಂದಲೇ ತಯಾರಿಸಿದವು.

ಮಾತ್ರ ತಕ್ಕಮಟಿಗೆ ಕಾಣುತ್ತಿದ್ದು ಸೊಂಟಕ್ಕೆ ಹೊಂದಿಕೊಂಡಂತೆ ಕಟ್ಯಾವಲಂಬಿತ ಹಸ್ತದಂತೆ ಇದೆ. ಈ ಹಸ್ತದಲ್ಲಿ ಬಹುಶಃ ಶಂಖವನ್ನು ಹಿಡಿದಿರಬಹುದು. ಅದು ಒಡೆದುಹೋಗಿರುವುದರಿಂದ ಸರಿಯಾಗಿ ಕಾಣುವುದಿಲ್ಲ.[3] ವಿಗ್ರಹವು ಕೊರಳಹಾರ, ಚಪ್ಪಟೆ ವಿನ್ಯಾಸದ ಉದರಬಂಧ,ಕೇಯೂರಗಳಿಂದ ಮತ್ತು ಮುಂಗೈಗಳಲ್ಲಿ ದುಂಡನೆಯ ಕಡಗಗಳಿಂದ ಅಲಂಕೃತವಾಗಿದೆ. ಮೊಳಕಾಲ ವರೆಗೆ ಧೋತ್ರವಿದ್ದು, ಅದೂ ಕೂಡ ನಿರಿಗೆಗಳಿಂದ ಕೂಡಿದೆ. ಕಲಾವಿದ ಈ ವಿಗ್ರಹದಲ್ಲಿ ವಾಸ್ತವಿಕತೆಗೆ ಹೆಚ್ಚಿನ ಒಲವು ತೋರಿಸಿರುವುದನ್ನು ದೇಹದ ಉಬ್ಬು ತಗ್ಗುಗಳಿಂದ ಮತ್ತು ನೈಜತೆಗೆ ತೀರಾ ಸಮೀಪ ಎನಿಸುವಂತಹ ಕುಳಿತಿರುವ ಶೈಲಿ, ಹೊಟ್ಟೆಯ ಭಾಗ ಅಲ್ಲದೆ ಕೈಯ ಭಾಗಗಳಿಂದ ಗುರುತಿಸಬಹುದು.

ಈ ವಿಗ್ರಹವನ್ನು ನರಸಿಂಹನ ವಿಗ್ರಹವೆಂದು ಹೇಳಲು ಸಾಕಷ್ಟು ಪುರಾವೆಗಳಿವೆ. ಇದೇ ಶೈಲಿಯಲ್ಲಿರುವ ದ್ವಿಬಾಹು ನರಸಿಂಹನ ವಿಗ್ರಹಗಳು ಕರ್ನಾಟಕದಲ್ಲಿ, ಆಂಧ್ರದಲ್ಲಿ ಮತ್ತು ಮಹಾರಾಷ್ಟ್ರಗಳಲ್ಲಿ ದೊರೆತಿವೆ. ಇವೆಲ್ಲವೂ ಕಲ್ಲಿನಲ್ಲಿ ಕೆತ್ತಿ ಮಾಡಿದಂತಹ ಶಿಲ್ಪಗಳು. ಕಾಲಮಾನದ ದೃಷ್ಟಿಯಿಂದ ಮಹಾರಾಷ್ಟ್ರದ ನಾಗಪುರ ಸಮೀಪದ ರಾಮಟೇಕ್ ಎಂಬಲ್ಲಿಯ ನರಸಿಂಹನ ವಿಗ್ರಹಗಳು ಬಹಳ ಮುಖ್ಯವಾದವು. ಇವು ವಾಕಾಟಕರ ಕಾಲಕ್ಕೆ ಸೇರಿವೆ ಎಂದು ಎ.ಪಿ. ಜಾಮಖೇಡಕರ್‌ರು ಗುರುತಿಸಿದ್ದಾರೆ.[4] ಇದರ ಕಾಲ ಸುಮಾರು ಕ್ರಿ.ಶ. ೫ನೇ ಶತಮಾನದ ಪ್ರಾರಂಭಕಾಲ. ಅಂದರೆ, ಗುಪ್ತರ ಕಾಲದ ಸಮಕಾಲೀನ ಶಿಲ್ಪಗಳು ಇವು. ಕರ್ನಾಟಕದಲ್ಲಿ ಕೂಡ ಉತ್ತರ ಕನ್ನಡ ಜಿಲ್ಲೆಯ ಸಿದ್ದರ, ಮುಗ್ದುರು-ಸಂಪಿಕೇರಿ, ಬನವಾಸಿ ಮತ್ತು ದಕ್ಷಿಣ ಕನ್ನಡದ ಸಾಲಿಗ್ರಾಮ, ಪೊಳಲಿ, ಮತ್ತು ಗಂಗಾನಾಡುಗಳಲ್ಲಿಯೂ ಹಾಗೂ ಶಿವಮೊಗ್ಗ ಜಿಲ್ಲೆಯ ಕುಪ್ಪತ್ತೂರು, ಕುಪ್ಪುಗದ್ದೆ ಹಾಗೂ ಕೂಡಲಿ ಎಂಬಲ್ಲಿ ಕೂಡ ದ್ವಿಬಾಹು ನರಸಿಂಹನ ಕುಳಿತಿರುವ ವಿಗ್ರಹಗಳು ದೊರೆತಿವೆ. ಇವುಗಳನ್ನು ಶೈಲಿಯ ಆಧಾರದ ಮೇಲಿಂದ ಬನವಾಸಿಯ ಕದಂಬರ ಕಾಲಕ್ಕೆ ಸೇರಿಸಬಹುದಾಗಿದೆ.[5]

ದ್ವಿಬಾಹು ನರಸಿಂಹನ ವಿಗ್ರಹಗಳು ಸಾಮಾನ್ಯವಾಗಿ ಬಹುತೇಕ ಸೌಮ್ಯಮೂರ್ತಿಗಳೇ ಆಗಿವೆ. ಹೀಗಾಗಿ ಇವುಗಳನ್ನು "ಕೇವಲ ಅಥವಾ ಗಿರಿಜಾ" ವಿಗ್ರಹಗಳೆಂದು ಹೇಳಬಹುದು. ನಿಲೋಗಲ್‌ನ ವಿಗ್ರಹವೂ ಕೂಡ ಕೇವಲ ನರಸಿಂಹನ ವಿಗ್ರಹವಾಗಿದೆ. ಕೇವಲ ಭಂಗಿಯಲ್ಲಿರುವ ಈ ನರಸಿಂಹ ತನ್ನ ಅವತಾರದ ಮುಖ್ಯ ಕಾರ್ಯವನ್ನು ಸಂಪೂರ್ಣಗೊಳಿಸಿ ಸೌಮ್ಯರೂಪ ತಾಳಿ ಈಗ ಕೇವಲ ಭಕ್ತರ ಬಯಕೆಗಳನ್ನು ಈಡೇರಿಸುವವನಾಗಿ ಕುಳಿತಿದ್ದಾನೆ.[6]

ಪ್ರತಿಮಾ ಲಕ್ಷಣ ಮತ್ತು ಶೈಲಿಯ ದೃಷ್ಟಿಯಿಂದ ನಿಲೋಗಲ್‌ನ ವಿಗ್ರಹದ ಕಾಲವನ್ನು ಸುಮಾರು ಕ್ರಿ.ಶ. ೫ನೇ ಶತಮಾನಕ್ಕೆ ನಿರ್ಧರಿಸಬಹುದು. ಇದೇ ಸುಮಾರಿನ ಹಲವಾರು ಸುಡಾವೆ ಮಣ್ಣಿನ ವಿಗ್ರಹಗಳು ಇಟ್ಟಿಗೆ ದೇವಸ್ಥಾನಗಳಲ್ಲಿ ಅಲಂಕೃತವಾಗಿದ್ದದ್ದು ಕಂಡುಬಂದಿವೆ. ಇವುಗಳು ಮುಖ್ಯವಾಗಿ ಮಧ್ಯಪ್ರದೇಶದ ಅಹಿಛದ್ರ ಮತ್ತು ಭೀತರ್‌ಗಾಂವನಲ್ಲಿಯ ಭಿತ್ತಿ ಶಿಲ್ಪಗಳು, ಇವು ಗುಪ್ತರ ಕಾಲದಲ್ಲಿ ನಿರ್ಮಾಣವಾದವು.[7] ಪ್ರಸ್ತುತ ವಿಗ್ರಹವೂ ಕೂಡ ಇವುಗಳ ವಸ್ತು ಮತ್ತು ಶೈಲಿಯನ್ನು ಹೊಂದಿದೆ. ಹೀಗಾಗಿ ಇದನ್ನೂ ಕೂಡ ಚಾಲುಕ್ಯಪೂರ್ವ ಕಾಲಕ್ಕೆ, ಅಂದರೆ, ಕದಂಬರ ಕಾಲಕ್ಕೆ ಸೇರಿಸುವುದು ಸೂಕ್ತವಾಗಿದೆ.

---

3 ವೈಷ್ಣವ ಮೂರ್ತಿಗಳಲ್ಲಿ ಅಯುಧಗಳು ಸಾಕಷ್ಟು ವೈವಿಧ್ಯತೆಯನ್ನು ಹೊಂದಿವೆ. ಬಲಗೈಯಲ್ಲಿ ಚಕ್ರವಿದ್ದರೆ, ಎಡಗೈಯಲ್ಲಿ ಶಂಖವನ್ನು ಕಟಿ ಹಸ್ತದಂತೆ ಹಿಡಿದಿರುವ ಉದಾಹರಣೆಗಳು ಸಾಕಷ್ಟು ಸಿಕ್ಕುತ್ತವೆ. ಉದಾ : ರತನ್‌ಪರಿಮು : "ವಿಷ್ಣು'ಸ್ ವೆಪನ್ಸ್ ಅಂಡ್ ದೇರ್ ರೆಪ್ರುಸೆಂಟೇಷನ್ ಇನ್ ಇಂಡಿಯನ್ ಆರ್ಟ್" ಕಲಾಕ್ಷೇತ್ರ ಕ್ವಾರ್ಟರ್‍ಲಿ. ಸಂ. ೭-೪.

4 ಹೆಚ್ಚಿನ ವಿವರಗಳಿಗೆ : ಎ.ಪಿ. ಜಾಮಖೇಡಕರ್ "ವಾಕಾಟಕ ಸ್ಕಲ್ಪಚರ್ಸ್" ೧೯೯೧, ಪು. ೧೯೪-೨೧೨. ದಿ ಆರ್ಟ್ ಆಫ್ ಅಜಂತಾ ನ್ಯೂ ಪರ್ಸ್‌ಪೆಕ್ಟಿವ್ಸ್. ಸಂ: ರತನಪರಿಮು. ನ್ಯೂ ಡೆಲ್ಲಿ. ರಾಮಟೇಕ್‌ದಲ್ಲಿಯ ದ್ವಿಬಾಹು ನರಸಿಂಹನ ವಿಗ್ರಹ ದೇವಸ್ಥಾನದಲ್ಲಿರುವಂತದ್ದು. ಈ ದೇವಸ್ಥಾನವನ್ನು ಪ್ರಾಯಶಃ ಕ್ರಿ.ಶ. ೪೨೫ ರಷ್ಟೊತ್ತಿಗೆ ಕಟ್ಟಿರಬಹುದು ಎಂದು ಅಲ್ಲಿ ದೊರೆತ ಪ್ರಭಾವತಿ ಗುಪ್ತಳ ಶಾಸನ ಒಂದರ ಮೇಲೆ ಇದನ್ನು ನಿರ್ಧರಿಸಿದೆ

5 ಡಾ॥ ಅ. ಸುಂದರ ಅವರು ತಮ್ಮ ಹಲವಾರು ಲೇಖನಗಳಲ್ಲಿ ದ್ವಿಬಾಹು ನರಸಿಂಹನ ಶಿಲ್ಪಗಳನ್ನು ಕುರಿತಂತೆ ಚರ್ಚಿಸಿದ್ದಾರೆ. - ನರಸಿಂಹ ಸ್ಕಲ್ಪಚರ್ಸ್ ಫ್ರಂ ಮಹಾಕೂಟ ಅಂಡ್ ಕುಪ್ಪತ್ತೂರು ಆ್ಯಂಡ್ ಸಮ್ ಅರ್ಲಿಟೈಪ್ಸ್. ೧೯೭೭, ಪು. ೯-೧೨ ಜರ್ನಲ್ ಆಫ್ ಕರ್ನಾಟಕ ಹಿಸ್ಟಾರಿಕಲ್ ರೀಸರ್ಚ್ ಸೊಸೈಟಿ ನಂ. ೧೮, ಧಾರವಾಡ. - ಸಿದ್ಧರ ಮತ್ತು ಸುಂಕೇರಿ ಗ್ರಾಮದಲ್ಲಿಯ ಎರಡು ಅಪೂರ್ವ ಶಿಲ್ಪಗಳು. ೧೯೯೦. ಪುಟ ೧೨೬-೧೩೧. ಕರ್ನಾಟಕಭಾರತಿ. ನಂ. ೨೨-೩. ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ. -ಡಾ॥ ಪಿ. ಗುರುರಾಜಭಟ್ಟ, ಸ್ಟಡೀಸ್ ಇನ್ ತುಳುವಾ ಹಿಸ್ಟರಿ ಆ್ಯಂಡ್ ಕಲ್ಚರ್ ಉಡುಪಿ, ೧೯೭೫ : ಇದರಲ್ಲಿ ದಕ್ಷಿಣ ಕನ್ನಡ ಜಿಲ್ಲೆಯ ದ್ವಿಬಾಹು ನರಸಿಂಹನ ವಿಗ್ರಹಗಳನ್ನು ಕುರಿತಂತೆ ಚರ್ಚೆ ಇದೆ; ಅಲ್ಲದೇ ವಾಕಟಕರಿಗೂ ಮತ್ತು ಕದಂಬರಿಗೂ ವೈವಾಹಿಕ ಸಂಬಂಧಗಳಿದ್ದುದು ಕದಂಬರ ಕಾಲದ ಕೆಲವು ತಾಮ್ರ ಶಾಸನಗಳಿಂದ ತಿಳಿದುಬರುತ್ತದೆ.

6 ಡಾ॥ ಶ್ರೀನಿವಾಸ ವಿ. ಪಾಡಿಗಾರ, ದಿ ಕಲ್ಟ ಆಫ್ ವಿಷ್ಣು ಇನ್ ಕರ್ನಾಟಕ (ಪಿಹೆಚ್.ಡಿ. ಥೀಸೀಸ್, ಧಾರವಾಡ, ೧೯೮೩)

7 ಡಾ॥ ಜೋನಾವಿಲಿಯಮ್ಸ್. ೧೯೮೩, ದಿ ಆರ್ಟ್ ಆಫ್ ಗುಪ್ತಾ ಇಂಡಿಯಾ, ದಿ ಎಂಪಾಯರ್ ಆ್ಯಂಡ್ ಪ್ರಾವಿನ್ಸ್, ಪ್ರಿನ್ಸಿಟನ್, ಯು.ಎಸ್. ಎ.



ದ್ವಿಭುಜನರಸಿಂಹ (ಟೆರ್‍ರಾ ಕೊಟ್ಟ) ನಿಲೋಗಲ್‌ತಾ॥
ಕುಷ್ಟಗಿ.ಜಿ.ರಾಯಚೂರು,(ಸುಡಾವೆ ಮಣ್ಣು

ನಾವು ಮೊದಲೇ ಹೇಳಿದಂತೆ, ನಿಲೋಗಲ್ ಗ್ರಾಮವು ಬಾದಾಮಿ ಮತ್ತು ಪಟ್ಟದಕಲ್, ಐಹೊಳೆ ಹಾಗೂ ಮಹಾಕೂಟಗಳಿಗೆ ಅತ್ಯಂತ ಸಮೀಪದಲ್ಲಿದೆ. ಇಲ್ಲಿಗೆ ಪಟ್ಟದಕಲ್ ಕೇವಲ ೯ ಕಿ.ಮೀ. ದೂರದಲ್ಲಿದೆ. ಮಲಪ್ರಭಾ ನದಿಯ ಎಡದಂಡೆಯ ಮೇಲೆ ಪಟ್ಟದಕಲ್ ಇದ್ದರೆ ಬಲದಂಡೆಯ ಗುಡ್ಡಗಳಿಂದಾಚೆ ನಿಲೋಗಲ್ ಇದೆ. ಚಾಲುಕ್ಯರ ಸ್ಥಳಗಳ ಭೌಗೋಳಿಕ ವ್ಯಾಪ್ತಿಯಲ್ಲಿಯೇ ಬರುವ ಈ ಗ್ರಾಮದಲ್ಲಿ ಪ್ರಸ್ತುತ ನರಸಿಂಹನ ವಿಗ್ರಹವಲ್ಲದೇ ಇನ್ನೂ ಹಲವಾರು ಪುರಾತತ್ವ ಅವಶೇಷಗಳಿವೆ. ಇಲ್ಲಿನ ಅಚನೂರು ಮಲ್ಲಿಕಾರ್ಜುನ ದೇವಾಲಯು, ಪ್ರಸ್ತುತ ಮೂಲ ರೂಪದಲ್ಲಿರದಿದ್ದರೂ ಇದರ ಕಂಬಗಳ ಶೈಲಿಯ ಆಧಾರದ ಮೇಲಿಂದ ಮತ್ತು ಇಲ್ಲಿ ಇರುವ ನಟರಾಜನ ವಿಗ್ರಹ, ಸಪ್ತಮಾತೃಕೆಯರ ಶಿಲ್ಪ ಮತ್ತು ಸೂರ್ಯ ಹಾಗೂ ಇಲ್ಲಿಗೆ ಹತ್ತಿರದಲ್ಲೇ ಇರುವ ಕಲ್ಲು ಬಂಡೆಯ ಮೇಲೆ ಕೊರೆದಿರುವ ಸುಮಾರು ಕ್ರಿ.ಶ. ೯-೧೦ನೇ ಶತಮಾನದ ಶಾಸನದ ಆಧಾರದ ಮೇಲಿಂದ, ಪ್ರಸ್ತುತ ದೇವಾಲಯವು ಇದೇ ಕಾಲಕ್ಕೆ ಸೇರಿದೆ ಎಂದರೆ ತಪ್ಪಾಗಲಾರದು. ಇವನ್ನು ಮತ್ತು ನರಸಿಂಹನ ವಿಗ್ರಹವನ್ನು ಗಮನದಲ್ಲಿಟ್ಟುಕೊಂಡರೆ ಪ್ರಾಯಶಃ ಚಾಲುಕ್ಯ ಪೂರ್ವಕಾಲದಿಂದಲೂ ಇದೊಂದು ಪ್ರಮುಖ ಸ್ಥಳವಾಗಿದ್ದಿರಬಹುದೆಂದು ಊಹಿಸಬಹುದು.[8]

ಪಟ್ಟದಕಲ್ಲು ಮತ್ತು ಐಹೊಳೆಗಳಲ್ಲಿ ದೊರೆತಿರುವ ಇಟ್ಟಿಗೆಯ ಕಟ್ಟಡದ ಅವಶೇಷಗಳನ್ನು ಗಮನಿಸಿದರೆ ಚಾಲುಕ್ಯಪೂರ್ವ ಕಾಲದಲ್ಲಿ ಈ ಸ್ಥಳಗಳಲ್ಲಿ ಇಟ್ಟಿಗೆಯ ದೇವಸ್ಥಾನಗಳು ಇದ್ದಿರಬಹುದಾದ ಸಾಧ್ಯತೆ ಇದೆ.[9] ಬಹುಶಃ ಈ ದೇವಸ್ಥಾನಗಳಲ್ಲಿ ಸುಡಾವೆ ಮಣ್ಣಿನ ಮೂರ್ತಿಯನ್ನು ಪ್ರಮುಖ ದೇವತೆಯಾಗಿಯೂ, ಪರಿವಾರ ದೇವತೆಯಾಗಿಯೂ ಅಥವಾ ಭಿತ್ತಿಗಳಲ್ಲಿ ಕಂಡುಬರುವ ಅಲಂಕಾರಿಕ ಮೂರ್ತಿಗಳಂತೆ ಇದ್ದಿರಬಹುದು. ಈ ವಾದವನ್ನು ಪುಷ್ಟೀಕರಿಸಲು ಇನ್ನು ಸಾಕಷ್ಟು ಪುರಾವೆಗಳ ಅವಶ್ಯಕತೆ ಇದೆ.

ಚಾಲುಕ್ಯರ ಸ್ಥಳಗಳಲ್ಲಿರುವ ಕೇವಲ ನರಸಿಂಹ ಮೂರ್ತಿಯ ಉದಾಹರಣೆಗಾಗಿ ನೋಡಿದರೆ, ಮಹಾಕೂಟದಲ್ಲಿ ಮಾತ್ರ ಅಂತಹ ಒಂದೇ ಒಂದು ಶಿಲ್ಪ ಸಿಗುತ್ತದೆ.[10] ಇದೂ ಕೂಡ 'ಕೇವಲ' ಭಂಗಿಯಲ್ಲಿದ್ದು, ಪ್ರತಿಷ್ಠಾಪನೆಗೆ ನಿರ್ಮಿಸಿದ ಶಿಲ್ಪವಾಗಿದೆ. ಇದನ್ನು ಕಲ್ಲಿನಲ್ಲಿ ಕೆತ್ತಲಾಗಿದೆ. ಏಕೆಂದರೆ, ಇದಕ್ಕೂ ಕೂಡ ಅಡಿಗೂಟವಿದೆ. ಮಹಾಕೂಟದ ನರಸಿಂಹನ ವಿಗ್ರಹವನ್ನೂ ಕೂಡ ಚಾಲುಕ್ಯ ಪೂರ್ವ ಕಾಲಕ್ಕೆ ಅಂದರೆ ಸುಮಾರು ಕ್ರಿ.ಶ. ೫ನೇ ಶತಮಾನದ ಭಾಗಕ್ಕೆ ಸೇರಿಸಬಹುದಾಗಿದೆ. ಮಹಾಕೂಟದ ಮತ್ತು ನಿಲೋಗಲ್‌ನ ವಿಗ್ರಹಗಳಲ್ಲಿ-ಇವುಗಳನ್ನು ನಿರ್ಮಿಸಿದ ವಸ್ತುವನ್ನು ಬಿಟ್ಟರೆ ಹೆಚ್ಚಿನ ಬದಲಾವಣೆ ಇಲ್ಲ. ಇಲ್ಲಿ ಬಹುಶಃ ಇವುಗಳ ಉದ್ದೇಶವೂ ಒಂದೇ ಆಗಿದ್ದಂತೆ ತೋರುವುದರಿಂದ ಅಂದು ವೈದಿಕ ಸಂಪ್ರದಾಯದ ಅರ್ಚಮೂರ್ತಿಗಳು ಮತ್ತು ದೇವಾಲಯಗಳು ಇದ್ದಿರಬಹುದಾದ ಸಾಧ್ಯತೆ ಸಾಕಷ್ಟು ಇವೆ. ಈ ದಿಶೆಯಲ್ಲಿನ ಹೆಚ್ಚಿನ ಅಧ್ಯಯನ ಚಾಲುಕ್ಯ ಪೂರ್ವ ಕಾಲದ ಕಲೆಯ ಮೇಲೆ ಹೊಸಬೆಳಕು ಚೆಲ್ಲುವುದರಲ್ಲಿ ಸಂಶಯವಿಲ್ಲ.



8 ಈ ಮೇಲಿನ ಎಲ್ಲಾ ಪುರಾತತ್ವ ಅವಶೇಷಗಳನ್ನು ಮತ್ತು ಇನ್ನೂ ಹಲವಾರು ಹೊಸದಾಗಿ, ತೀರ ಇತ್ತೀಚೆಗೆ ಗಮನಿಸಿದ ಶಿಲ್ಪಗಳನ್ನು ಕುರಿತಾದ ವಿವರವಾದ ಲೇಖನವನ್ನು ನಾನು ಈಗ ಸಿದ್ಧಪಡಿಸುತ್ತಿದ್ದು ಸದ್ಯದಲ್ಲೇ ಪ್ರಕಟಿಸುತ್ತಿದ್ದೇನೆ

9 ಎಸ್.ಆರ್. ರಾವ್., ಎ ನೋಟ್ ಆನ್ ದಿ ಕ್ರೊನಾಲಜಿ ಆಫ್ ದಿ ಚಾಲುಕ್ಯ ಟೆಂಪಲ್ಸ್. ಲಲಿತಕಲಾ ಜರ್ನಲ್, ನಂ. ೧೫, ಪು. ೯-೧೮, ನ್ಯೂಡೆಲ್ಲಿ ೧೯೭೨ ; ಡಾ॥ ಅ. ಸುಂದರ., ದಿ ಅರ್ಲಿ ಕದಂಬ ಟೆಂಪಲ್ ಅರ್ಕಿಟೆಕ್ಚರ್, ರಿಸೆಂಟ್ ನೋಟೀಸಿಸ್, ೧೯೮೪, ಪು. ೨೬೦-೨೭೯, ಮಿಥಿಕ್ ಸೊಸೈಟಿ ಕ್ವಾರ್ಟರ್ಲಿ ಜರ್ನಲ್, ನಂ. ೭೫-೩, ಬೆಂಗಳೂರು

೧೦ ಡಾ॥ ಅ. ಸುಂದರ., ೧೯೭೭, ಪು. ೯-೧೨

ಎಂ.ಜಿ. ನಾಗರಾಜ್ *

# ಕೊಡಗಿನ ಎರಡು ಅಪೂರ್ವ ಜೈನ ಮತ್ತು ಬೌದ್ಧ (!) ಶಿಲಾ ಶಿಲ್ಪ ಫಲಕಗಳು

ಕೊಡಗಿನ ದಕ್ಷಿಣ ಹಾಗು ಉತ್ತರ ಭಾಗಗಳಲ್ಲಿ ಕ್ರಿ.ಶ. ೯ನೇ ಶತಮಾನಕ್ಕೆ ಮುನ್ನವೂ ಗಂಗರ ಆಳ್ವಿಕೆ ಇತ್ತು. ಇದು ಈಚಿನ ಅಪ್ರಕಟಿತ ಗಂಗರ ಕಾಲದ ಶಾಸನಗಳಿಂದಲೂ ಸ್ಪಷ್ಟವಾಗಿ ಕಂಡುಬಂದಿದೆ. ಪ್ರಕಟಿತ ಶಿಲಾ ಶಾಸನಗಳಲ್ಲಿ ಜೈನ ಬಸದಿಗಳ ಹಾಗು ಜೈನ ಗುರು-ಮುನಿಗಳ ಪ್ರಸ್ತಾಪವೂ ಬಂದಿವೆ; ಆ ಶಾಸನಗಳಲ್ಲಿ ಜೈನಶಿಲ್ಪಗಳು ಇವೆ. ಶಾಸನಗಳಿರುವ ಪ್ರದೇಶದಲ್ಲಿ ಜೈನಧರ್ಮದ ಪ್ರಭಾವವನ್ನೂ ಗುರುತಿಸಬಹುದು. ಉತ್ತರ ಕೊಡಗಿನ ಕಲ್ಕಂದೂರು (ಕ್ರಿ.ಶ.೧೩೭೦), ಮುಳ್ಳೂರು (ಕ್ರಿ.ಶ.೧೧ನೆಯಶತಮಾನ) ಹಾಗು ಅಂಜನಗಿರಿಯಲ್ಲಿ ಕ್ರಮವಾಗಿ ಚಂದ್ರನಾಥ, ಶಾಂತಿನಾಥ (ಶಾಂತೀಶ್ವರ), ಪಾರ್ಶ್ವನಾಥ ಬಸದಿಗಳಿದ್ದು ಶಾಸನೋಕ್ತವಾಗಿವೆ. ದಕ್ಷಿಣಕೊಡಗಿನ ಬಿಳಿಯೂರು, ಪೆಗ್ಗೂರು, ನಲ್ಲೂರು ಶಾಸನಗಳಲ್ಲಿ ಜಿನಾಲಯ ಹಾಗು ಬಸದಿಗಳಿಗೆ ದಾನ ದತ್ತಿ ನೀಡಿಕೆಗಳ ಹಾಗು ಆಳುತ್ತಿದ್ದ ರಾಜರ ಬಗ್ಗೆಯೂ ಉಕ್ತವಾಗಿವೆ.[1] 'ನಲ್ಲೂರು ಶಾಸನದಲ್ಲಿ ಚಾಂಗಳದ ಬಸದಿ', ಎಂದಿದ್ದು ಅದು ಕ್ರಿ.ಶ. ೧೦೫೦ರ ಸುಮಾರಿನ ಚಂಗಾಳ್ವರ ಸಂಬಂಧದ್ದೇ ಎಂಬುದನ್ನು ಸ್ಪಷ್ಟವಾಗಿ ಹೇಳಲು ಬಾರದು.

ಕ್ರಿ.ಶ. ೪೬೬ರ ಮಡಿಕೇರಿ ಶಾಸನವು ಪುನ್ನಾಡಿನ ಜಿನಾಲಯ ಸಂಬಂಧೀ ಶಾಸನವಾಗಿದೆ. ಸಿರಿಬಾಯಿ ದೊಡ್ಡ ವೀರಪ್ಪ ಒಡೆಯನು (ಕ್ರಿ.ಶ.೧೬೮೮-೯೦)ರ ಸಮಯದಲ್ಲಿ ಯುದ್ಧದಲ್ಲಿ ಮೈಸೂರಿನ ಸೈನ್ಯವನ್ನು ಸೋಲಿಸಿ ಹೆಗ್ಗಡದೇವನಕೋಟೆಯ ಬಳಿಯ ಹಂಪಾಪುರದ ವರೆಗೂ ಬೆನ್ನಟ್ಟಿಹೋದ.[2] ವಿಜಯದ ಸಂಕೇತವಾಗಿ ಅಲ್ಲಿ ವೀರಗಲ್ಲು ನೆಡಿಸುವ ಸಮಯದಲ್ಲಿ ಈ ಮಡಿಕೇರಿ ಶಾಸನವನ್ನು ಕಂಡು ಸೈನಿಕರು ತಂದು ಕೊಟ್ಟಿರುವಂತಿದೆ. ಈ ಶಾಸನವನ್ನು ಸೈನಿಕರು ಎಲ್ಲಿಂದಲೋ ತಂದು ಮಡಿಕೇರಿ ಖಜಾನೆಗೆ ಕೊಟ್ಟರು ಎಂಬ ಮಾತು ಇದೆ. ಅಂದರೆ ಶಾಸನ ಸಾಕ್ಷಿಗಳೂ ಇರುವಂತೆ ತೆರಕಣಾಂಬಿಯವರೆಗೆ ಕೊಡಗು ಚಾಚಿದ್ದು ಜೈನಧರ್ಮದ ಪ್ರಭಾವಕ್ಕೆ ಕ್ರಿ.ಶ.೫ನೇ ಶತಮಾನದಿಂದಲೂ ಒಳಗಾಗಿತ್ತು ಎನ್ನಬಹುದು. ಪುನ್ನಾಡಿನ ಈಸಂಬಂಧದ ಈ ಶಾಸನದಲ್ಲಿನ ಊರುಗಳ ಹೆಸರುಗಳು ಆ ಪ್ರದೇಶದಲ್ಲಿರುವಂತೆ ಕೊಡಗಿನ ಉತ್ತರ ಭಾಗಗಳಲ್ಲಿಯೂ ಕಾಣಿಸಿಕೊಳ್ಳುತ್ತವೆ (ನೀರ್ಗುಂದ, ಎಡೆನಾಡು, ಗಣಿಗನೂರು, ಮುಳ್ತಗಿ). ದಕ್ಷಿಣಕೊಡಗಿನ ಕ್ರಿ.ಶ.೯೭೮ರ ಪೆಗ್ಗೂರು ಶಾಸನದ ಗಂಗರಸ ರಕ್ಕಸಗಂಗನ ಆಳ್ವಿಕೆಯಲ್ಲಿ ಬಸದಿಯ ಸಂಬಂಧದಲ್ಲಿ ಶ್ರೀಪುರುಷ ಮಹಾರಾಜರ ದತ್ತಿಯ ರಕ್ಷಣೆಯ ಪ್ರಸ್ತಾಪ ಮಾಡಿದೆ. ಅಂದರೆ ಗಂಗರ ಖ್ಯಾತ ಅರಸ ಶ್ರೀಪುರುಷ (ಕ್ರಿ.ಶ.೭೨೫-೮೮)ನು ದತ್ತಿ ನೀಡಿದ ಸಂದರ್ಭದ ಸ್ಮರಣೆ ಇದಾಗಿದ್ದರೆ (ಬಹುಶಃ ರಾಷ್ಟ್ರಕೂಟ ೧ನೇ ಕೃಷ್ಣನನ್ನು ಸೋಲಿಸಿ ಮರಳಿ ನೀರ್ಗುಂದ ನಾಡನ್ನು ವಶಪಡಿಕೊಂಡ ಸಮಯದಲ್ಲಿ ಇದನ್ನು ನೀಡಿರಬಹುದೆ?) ಗಂಗರ ಕಾಲದ ದಕ್ಷಿಣ ಕೊಡಗಿನ ಜೈನಧರ್ಮದ ಪ್ರಭಾವದ ಸೂಚನೆಯಾಗುತ್ತದೆ. ಇದಕ್ಕೆ ಪೋಷಣೆಯಾಗಿ ಈಚೆಗೆ ದೊರೆತ ಬಸದಿಗೆ ದಾನದ ಸಂದರ್ಭದ

---

* ನಂ.೨೯ (ಮಹಡಿ) ೨ನೇ ಕ್ರಾಸ್, ಶ್ರೀರಾಮನಗರ, ಮಹಾಲಕ್ಷ್ಮೀಪುರ, ಬೆಂಗಳೂರು-೫೬೦ ೦೮೬

1. ಎ.ಕ. ೧(ಹೊಸತು), ಕೊಡಗು ಜಿಲ್ಲೆ,ಮೈಸೂರು ವಿಶ್ವವಿದ್ಯಾಲಯ, ೧೯೭೨, ಅಂಜನಗಿರಿ ೧೯ (ಕ್ರಿ.ಶ. ೧೫೪೪), ಮುಳ್ಳೂರು ೬೮-೭೦, ಬಿಳಿಯೂರು ೯೬, ಕೋತೂರು ೯೭, ಪೆಗ್ಗೂರು ೯೮.
2. ಡಿ. ಎನ್. ಕೃಷ್ಣಯ್ಯ; ಕೊಡಗಿನ ಇತಿಹಾಸ, ಮೈಸೂರು ವಿಶ್ವವಿದ್ಯಾಲಯ, ೧೯೭೮, ಪು. ೯೭.

ದ.ಕೊಡಗಿನ ಹುದಿಕೇರಿಯ ಉಲ್ಲೇಖದ ಅಪ್ರಕಟಿತ ಕ್ರಿ.ಶ.೭-ನೇ ಶತಮಾನದ ಶಾಸನವೂ,[3] ನಿಲ್ಲುವಂತಿದೆ. ಕ್ರಿ.ಶ. ೯೭೮ರ ದ.ಕೊಡಗಿನ ಪೆಗ್ಗೂರಿನ ಶಾಸನದಲ್ಲಿ ಉಕ್ತನಾದ ಗುಣಸೇನ ಪಣ್ಡಿತ ಭಟ್ಟಾರಕ, ಹಾಗು ಕ್ರಿ.ಶ. ೧೦೬೪ರ ಉ. ಕೊಡಗಿನ ಮುಳ್ಳೂರು ಶಾಸನದಲ್ಲಿ ಬರುವ ಗುಣಸೇನ ಪಣ್ಡಿತ ಇಬ್ಬರೂ ಒಂದೇ ಆಗಿರುವಂತಿದೆ. ಕೊಡಗಿನ ೭ ಶಾಸನಗಳಲ್ಲಿ ಉಕ್ತಗೊಂಡಿರುವ ಇವನನ್ನು ''....ರತ್ನತ್ರಯ ಸಕಳ ಮಹಾ ಶಬ್ದ ಶಾಸ್ತ್ರಾಗಮಾದಿ ಸ್ಥಿರ ಷಟ್ತರ್ಕ್ಕ ಪ್ರವೀಣರ್'' ಎಂದು ಹೊಗಳಿರುವಲ್ಲಿ, ವೇದಾಂತ, ಮೀಮಾಂಸ, ವೈಶೇಷಿಕ, ಭಾಟ್ಟ, ಪ್ರಾಭಾಕರ, ಇತ್ಯಾದಿ ಆರು ಶಾಸ್ತ್ರಗಳಲ್ಲಿ ಪಂಡಿತ ನಾಗಿದ್ದ ಎಂಬ ಸೂಚನೆ; ಶ್ರವಣಬೆಳಗೊಳದ ಶಾಸನ ವೊಂದರ ರೀತ್ಯಾ ಇವನು ಮುಕ್ತನಾದ ಸಂದರ್ಭದಲ್ಲಿ ಮುಳ್ಳೂರಿನ, ವೈಡೂರ್ಯ ಸಾರ ವಸದಿಯೇ ಕಳೆದು ಹೋಯಿತು, ಎಂದಿರುವುದು, ಇವೆಲ್ಲ ಕೊಡಗಿನ ದಕ್ಷಿಣ ಹಾಗು ಉತ್ತರ ಭಾಗಗಳಲ್ಲಿನ ಜೈನಧರ್ಮದ ಪ್ರಭಾವದ ಸ್ಪಷ್ಟ ಸಾಕ್ಷಿಗಳಾಗುತ್ತವೆ. ದಕ್ಷಿಣ ಕೊಡಗು ಕೆಲಕಾಲ ಚೆಂಗಾಳ್ವರಿಂದ ಗಂಗರ ನಂತರದಲ್ಲಿಯೂ ಜೈನಧರ್ಮದ ಉತ್ತೇಜನ ಕೇಂದ್ರವಾಗಿದ್ದಂತೆ, ಉತ್ತರ ಕೊಡಗು ಕೊಂಗಾಳ್ವರಿಂದ (ಬಹುಶಃ ಶೈವದಿಂದ ಜೈನಕ್ಕೆ ಅವರು ಬಂದ ಮೇಲೆ) ಜೈನಧರ್ಮದ ಉತ್ತೇಜನ ಕೇಂದ್ರ ವಾದಂತಿದೆ. ಇದಕ್ಕೆ ಈ ಗುಣಸೇನ ಪಂಡಿತನು ಕಾರಣನಾಗಿರ ಬೇಕು. ಕೊಡಗಿನ ಈ ಭಾಗಗಳ ಜೈನ ಸಂಪ್ರದಾಯವು 'ದಿಗಂಬರ'ಕ್ಕೆ ಸೇರಿದುದಾಗಿದೆ.[5]

ಈ ಎರಡು ಭಾಗಗಳ ನಡುವೆ 'ಮಧ್ಯದ ಕೊಡಗಿನಲ್ಲಿ' ಜೈನಧರ್ಮದ ಪ್ರಭಾವವು ೧೦-೧೧ನೇ ಶತಮಾನಗಳಲ್ಲಿ ಇದ್ದ ಬಗ್ಗೆ ಊಹಿಸಬಹುದಾದರೂ, ಪುರಾವೆಗಳು ಸ್ಪಷ್ಟವಿರಲಿಲ್ಲ. ಇದೀಗ ಅರಮೇರಿಯ ಭಗವತಿ ದೇವಾಲ ಯದಲ್ಲಿ ದೊರೆತ (೧ ೧/೨' × ೧ ೧/೨' × ೧/೨') ಪ್ರಮಾಣದ 'ಚತುರ್ವಿಂಶತಿ ತೀರ್ಥಂಕರ' ಶಿಲ್ಪದ ಶಿಲಾಫಲಕವು ಒಂದು ಪೂರಕ ಪುರಾವೆ ಆಗಿ ಇದಕ್ಕೆ ಒದಗಿದೆ ಎನಿಸುತ್ತದೆ. **ಚತುರ್ವಿಂಶತಿ ತೀರ್ಥಂಕರರ ಶಿಲಾಫಲಕ ಶಿಲ್ಪ:** ಶಿರ ಅರೆಚಂದ್ರಾಕೃತಿಯ ಈ ಪುಟ್ಟ ಫಲಕದ ಮೇಲೆ ೨೪ ತೀರ್ಥಂಕರರನ್ನು ಸರಳವಾದರೂ ಕಲಾತ್ಮಕ ಉಬ್ಬು ಶಿಲ್ಪದ ರೂಪದಲ್ಲಿ ಬಿಡಿಸಲಾಗಿದೆ. ಮೊದಲ ಪಟ್ಟಿಕೆಯ ಮೇಲು ಸಾಲಿನಲ್ಲಿ ಐದು ತೀರ್ಥಂಕರರು, ಎರಡನೆಯ ಪಟ್ಟಿಕೆಯ ಮೇಲು ಸಾಲಿನಲ್ಲಿ ಏಳು ತೀರ್ಥಂಕರರು, ಮೂರನೆಯ ಪಟ್ಟಿಕೆಯ ಮೇಲೆ ಒಂಬತ್ತು ತೀರ್ಥಂಕರರು-ಹೀಗೆ ಒಟ್ಟು ೨೧ ತೀರ್ಥಂಕರರು ಪದ್ಮಾಸನಸ್ಥ ಧ್ಯಾನಮುದ್ರೆಯಲ್ಲಿದ್ದಾರೆ. ಒಂದೇ ಪರಿಮಾಣದ, ಒಂದೇ ತೆರನಾದ ಮೂರ್ತಿ ಲಕ್ಷಣ ಹೊಂದಿದ ದಿಂಗಬರ ಆಕೃತಿಗಳಾಗಿವೆ. ಯಾರಿಗೂ ಪೀಠವಿಲ್ಲ. ಅನುಗುಣ ಪ್ರಾಣಿಲಾಂಛನಗಳು ಇವರಾರಿಗೂ ಇಲ್ಲಿಲ್ಲ. ಯಾರಿಗೂ ಇವರಲ್ಲಿ ಮುಕ್ಕೊಡೆಯ ಶಿಲ್ಪವಿಲ್ಲ. ಪಟ್ಟಿಕೆಯ ಮುಖಗಳಲ್ಲಿ ತ್ರುಟಿತ ಶಾಸನ ಲಿಪಿಗಳು ಇದ್ದು ಸುಮಾರು ೧೧ನೆಯ ಶತಮಾನದವೆನಿಸುತ್ತವೆ.

ಈ ಮೂರು ಪಟ್ಟಿಕೆಗಳ ಕೆಳಗೆ ಗಮನಾರ್ಹ ಐದು ಆಕೃತಿಗಳು ಬಿಡಾವಣೆಗೊಂಡಿವೆ. ಕೇಂದ್ರ ಮಧ್ಯದಲ್ಲಿ ಪದ್ಮಾಸನಸ್ಥ ಧ್ಯಾನಿಮುದ್ರಾ ತೀರ್ಥಂಕರನ ಶಿಲ್ಪ ಪೀಠದ ಮೇಲಿದೆ. ಪಟ್ಟಿಕೆಯ ಮೇಲಿನ ಆಕೃತಿಯ ಎರಡರಷ್ಟು ಪ್ರಮಾಣದ ಆಕೃತಿ ಇದಾಗಿದ್ದು, ಗುಂಗುರು ಕೇಶಗೊಂಡೆ ಗಳನ್ನು ಶಿರದಲ್ಲಿ ಹೊಂದಿದೆ, ಮೇಲೆ ಮುಕ್ಕೊಡೆ ಪಡೆದಿದೆ. ಪೀಠದ ಕೆಳಗೆ ಸಿಂಹಲಾಂಛನವಿರುವಂತೆ ಶಿಲ್ಪವಿದೆ (ಇದು ತುಸು ಅಸ್ಪಷ್ಟವಿರುವ ಕಾರಣ ವೃಷಭ ಲಾಂಛನ ವೆಂದರೆ ಈ ಆಸೀನ ಮೂರ್ತಿ ಆದಿನಾಥ ಋಷಭದೇವ ತೀರ್ಥಂಕರ ನೆನಿಸುತ್ತಾನೆ. ಋಷಭದೇವ ಹಾಗು ವರ್ಧಮಾನ ಮಹಾವೀರ ಶಿಲ್ಪಗಳಿಗೂ ಪಕ್ಕದಲ್ಲಿ ಪಾರ್ಶ್ವ-ಸುಪಾರ್ಶ್ವನಾಥರು ಖಡ್ಗಾಸನ ಭಂಗಿಯಲ್ಲಿರುವುದು ಕಾಣಬರುವಲ್ಲಿ,[5ಅ] ಹೀಗೆ ಊಹಿಸಬೇಕಾಗುತ್ತದೆ). ಹಾಗಿದ್ದರೆ ಈ ಮೂರ್ತಿಯು ವರ್ಧಮಾನ ಮಹಾವೀರನ ಶಿಲ್ಪವಾಗುತ್ತದೆ. ತೀರ್ಥಂಕರರ ಎದೆಯ ಮೇಲೆ ಎದ್ದು ಕಾಣುವಂತೆ ಬಹು ಪ್ರಾಚೀನದಿಂದಲೂ ಶ್ರೀವತ್ಸ ಚಿಹ್ನೆಯನ್ನು[5ಆ] ಮೂಡಿಸುವುದುಂಟು. ಇದು ಪುರುಷೋತ್ತಮತೆಯ ಸಂಕೇತವೂ ಹೌದು. ಕ್ರಿ.ಶ. ೫ನೇ

---

3. ಎಂ.ಜಿ. ನಾಗರಾಜ್ : ಹೈಸೂಡ್ಲೂರಿನಲ್ಲಿ ಕೊಡಗಿನ ಮೊದಲ ಕನ್ನಡ ಶಾಸನ, ಶಕ್ತಿಪತ್ರಿಕೆ (೨೪.೪.೧೯೯೪)ಮಡಿಕೇರಿ.
4. ಬಿ.ಎಸ್. ಕೃಷ್ಣಮೂರ್ತಿ : ಗುಣಸೇನ ಪಂಡಿತ, ಕನ್ನಡ ಸಾಹಿತ್ಯ ಪರಿಷತ್ಪತ್ರಿಕೆ, ಜನವರಿ ೧೯೨೨, ಪು. ೨೮೨ ಮತ್ತು ಎಂ. ಜಿ. ನಾಗರಾಜ್ : ಕೊಡಗಲ್ ಕನ್ನಡ ಪರಂಪರೆ, ಬ್ರಹ್ಮಗಿರಿ,ಕೊಡವ ಭಾಷಾ ವಾರ ಪತ್ರಿಕೆ (೩೧.೧.೯೪), ಪಾಳಿ.೯.
5. ಕರ್ನಾಟಕದ ದಿಂಗಬರ ಜಿನಮಂದಿರಗಳು : (ಸಂ) ಎಸ್.ಬಿ. ವಸಂತರಾಜಯ್ಯ, ಬೆಂಗಳೂರು, ೧೯೯೪, ಪು. ೧೨, ೯೭.

5ಅ. C. Shivarama Murthy : Panorama of Jaina Art, NewDelhi, 1983, p.150-Plate 205, p.294-plate 442 (Amminabhavi and Hanchalige of Gulbarga sculptures)

5ಆ. Ibid, p.27

ಶತಮಾನದ ಗುಪ್ತರ ಕಾಲದಲ್ಲಿ ಮಥುರಾಶೈಲಿಯಂತೆ ಮೂಡಿಬರುವ ಬೇರು-ಎಲೆಗಳ ಗೊಂಚಲಿನಂತಹ[6] ಆಕೃತಿಯ ಶ್ರೀ ವತ್ಸ ಚಿಹ್ನೆ ಅಥವಾ ನಕ್ಷತ್ರ ಸನಿಹ ರೂಪದ್ದೋ ಅಥವಾ ೧೦-೧೧ ನೇ ಶತಮಾನಗಳಲ್ಲಿ ಕಾಣಬರುವ ಅಡ್ಡ ಸಮತಲ ವಜ್ರಾಕೃತಿ ಅಥವಾ ಲಂಬಸಮತಲದ ವಜ್ರಾಕೃತಿಯ ರೂಪದ್ದೋ[6ಅ] ಆಗಿರುವ ಶ್ರೀವತ್ಸ ಚಿಹ್ನೆಯನ್ನು ಕೆತ್ತುವುದುಂಟು. ಪ್ರಸ್ತುತ ಅರಮೇರಿಯ ವರ್ಧಮಾನ ಶಿಲ್ಪದ ಎದೆಯ ಮೇಲೆ ವಜ್ರಾಕೃತಿ ಸ್ವರೂಪದಲ್ಲಿ ಶ್ರಿವತ್ಸ ಚಿಹ್ನೆ ಇರುವಂತೆ ಕಾಣುತ್ತದೆ. ಇಲ್ಲಿನ ಪಾರ್ಶ್ವನಾಥನ ಗುಂಗುರು ಕೇಶಗೊಂಡೆಗಳ ಶಿರದ ಮೇಲೆ ಏಳು ಹೆಡೆಯ ನಾಗನ (ನಾಗಾತಪತ್ರ) ಶಿಲ್ಪವಿದೆ. ಇದೇ ಮೂರ್ತಿಲಕ್ಷಣದಂತೆ ಸುಪಾರ್ಶ್ವನಾಥನಿಗೂ (೫ ಹೆಡೆ?) ನಾಗಾತಪತ್ರವು ಶಿರದ ಮೇಲಿದೆ. ಪಾರ್ಶ್ವನಾಥ ಹಾಗು ಸುಪಾರ್ಶ್ವನಾಥ ತೀರ್ಥಂಕರಗೆ ಮಾತ್ರ ನಾಗಾತಪತ್ರವಿರುವ ಕಾರಣ[7] ಈ ಶಿಲ್ಪದಲ್ಲಿ ಅವರನ್ನು ಗುರುತಿಸಬಹುದು. ಇವರ ಪಾದಗಳ ಕೆಳಗೆ ಪ್ರಾಣಿ ಲಾಂಛನಗಳು ಶೈಥಿಲ್ಯದ ಕಾರಣ ಅಸ್ಪಷ್ಟ ವಾಗಿದ್ದರಿಂದ ಕೂರ್ಮ ಹಾಗೂ ಗಜಲಾಂಛನಗಳೆಂದು ಪರಿಭಾವಿಸಬಹುದು. ಅದು ಶಾಸ್ತ್ರ ರೀತ್ಯಾ ನಿರ್ಧಾರಿತ ವಾದದ್ದೇ ತೀರ್ಥಂಕರರ ತಪಸ್ಸಿನ ಕಾಲದಲ್ಲಿ ಉಂಟಾಗುವ ಉಪಸರ್ಗಾದಿಗಳನ್ನು ನಿವಾರಿಸುವ ಹಾಗೂ ಅವರ ರಕ್ಷಕರಾಗಿ ಇರುವವರು ಯಕ್ಷಯಕ್ಷಿಯರು[8]. ಇವರನ್ನು ದಂಪತಿ ಯಕ್ಷಯಕ್ಷಿಯರಾದ ಶ್ರುತದೇವತೆಗಳು, ಶಾಸನದೇವ-ದೇವಿಯರೆನ್ನುತ್ತಾರೆ.[8ಅ] ಶಾಸನದೇವ ದೇವಿಯರಾಗಿ ಪ್ರಸ್ತುತ ಶಿಲ್ಪದಲ್ಲಿ ಧರಣೇಂದ್ರ ಯಕ್ಷ ಹಾಗು ಅವನ ಸತಿ ಪದ್ಮಾವತಿ ಯಕ್ಷಿ ಚತುರ್ಭುಜ ಸ್ಥಾನಕ ಕಿರೀಟಧಾರಿಗಳಾಗಿದ್ದಾರೆ. ಬಲಗೈಯಲ್ಲಿ ವಜ್ರ ಯಾ ಮಾತುಲಲಿಂಗ ಹಿಡಿದಯಕ್ಷ, ಅಂಕುಶ, ಕಮಲ ವರದದ ಅಲಂಕೃತ ಶಿಲ್ಪಗಳಾಗಿವೆ. ದಿಗಂಬರ ಸಂಪ್ರದಾಯದ ರೀತ್ಯಾ ೨೩ನೆಯ ಯಕ್ಷನಾದ ಧರಣೇಂದ್ರ ಯಕ್ಷನಿಗೆ ಕಿರೀಟದಲ್ಲಿ ವಾಸುಕೀ (ಸರ್ಪ) ಚಿಹ್ನೆ ಇರುತ್ತದೆ; ಆಚಾರದಿನಕರ ಎಂಬ ಶ್ವೇತಾಂಬರ ಸಂಪ್ರದಾಯದ ಕೃತಿಯ ರೀತ್ಯಾ ಇವನಿಗೆ ಮಸ್ತಕದ ಮೇಲೆ ಸರ್ಪಫಣದ ಛತ್ರವಿರುತ್ತದೆ[9] ಇಲ್ಲಿ ಯಕ್ಷನಿಗೆ ಸ್ಪಷ್ಟವಾಗಿ ಕಿರೀಟವು ಶಿಲ್ಪಸ್ಥವಾಗಿರುವಲ್ಲಿ

---

6. Jaina Art and Architecture (Vol.III) : (Ed) A. Ghosh, NewDelhi, 1975, P. 53 p. 492, and Vo.I, 1974, p. 128-plate 57 and 60A ಗಳ ರೀತ್ಯಾ ಶ್ರೀ ವತ್ಸ ಚಿಹ್ನೆಯ ಜಿನನ ಎದೆಯ ಮೇಲಿದ್ದಂತೆ ವಿಷ್ಣುವಿನಲ್ಲಿ ಕಂಡು ಬಂದರೂ ಕುಶಾಣರ ಕಾಲದ ಅದರ ಮೂಲದರ ಆಕಾರ ಮರೆತು ಹೋಗಿ ನಂತರ ರೈಜೋಮ್ (Ryzome) ರೂಪದಲ್ಲಿ ಮೂಡಿಸತೊಡಗಲಾಯಿತು. ಗುಪ್ತರ ಕಾಲದಲ್ಲಿ ಹೀಗೆಯೇ ಮೂಡಿಸಲಾಯಿತು. ಮಧ್ಯ ಭಾರತದ ದುರ್ಜನಪುರದ ತೀರ್ಥಂಕರ ಶಿಲ್ಪದಲ್ಲಿ ಹೀಗೆಯೆ ಇದೆ. ಉದಯಗಿರಿ ಗುಹಾಲಯದಲ್ಲಿ (ಗುಪ್ತರ ಕಾಲ) ಪಾರ್ಶನಾಥನ ಎದೆಯ ಮೇಲೆ ನಕ್ಷತ್ರ ಸನಿಹರೂಪದ ಚಿಹ್ನೆಯಂತೆ ಕಾಣುವುದಿದೆ.

6ಅ i) Umakanta Premananda Shah : ¬'Jain Bronzes-A brief Survey' Aspects of Jaina Art and Architecture, (Ed) U.P. Shah, M.A. Dhaky, Ahmedabad 1975, ಗಮನಿಸಿದರೆ ಚೌಕಾಕೃತಿಯ ನಾಲ್ಕೂಗಗಳಲ್ಲಿ ತ್ರಿಭುಜಾಕೃತಿ ಇಟ್ಟಾಗ ಕಾಣುವಂತಹ ನಕ್ಷತ್ರ ಸನಿಹದ ರೂಪ ಕಾಣಬರುತ್ತದೆ.

ii) Jaina Art and Architecture, Vol. II, p.254 ಗಮನಿಸಿದರೆ, ೧೧ನೇ ಶತಮಾನದ ತೀರ್ಥಂಕರ ಶಿಲ್ಪದಲ್ಲಿ ಅಡ್ಡ ಸಮತಲದ ವಜ್ರಾಕೃತಿ ರೂಪದಲ್ಲಿ ಹಾಗು ಪಶ್ಚಿಮ ಭಾರತದ ವರವನ್‌ನಲ್ಲಿಯ ತೀರ್ಥಂಕರ ಶಿಲ್ಪದಲ್ಲಿ ಲಂಬಸಮತಲದ ವಜ್ರಾಕೃತಿ (Vertical plained Rhombus) ಯ ರೂಪದಲ್ಲಿ ಶ್ರೀ ವತ್ಸ ಚಿಹ್ನೆ ಕಾಣಬರುತ್ತದೆ.

iii) Aspects of Jaina Art & Architectue : Op. cit., pp. 285, 286 288 ಗಮನಿಸಿದರೆ ೭ನೆಯ ಶತಮಾನದ ಬಾದಾಮಿ ಚಾಲುಕ್ಯರ ಜಿನಬಿಂಬದ ಎದೆಯ ಬಲಭಾಗದಲ್ಲಿ ವಿಶಿಷ್ಟ ರೂಪದ ಚಿಹ್ನೆಗಳು ಕಾಣುತ್ತವೆ. ಕ್ರಿ. ಶ. ೧೧೬೭ರ ಕಾಲದ ಪಶ್ಚಿಮ ಭಾರತದ ಎರಕದ ಜಿನಶಿಲ್ಪ ೧೬ನೆಯ ತೀರ್ಥಂಕರ ಶಾಂತಿನಾಥನಿಗೂ ಎದೆಯ ಮೇಲೆ ಶ್ರೀವತ್ಸ ಚಿಹ್ನೆ ಇದೆ. ದಕ್ಷಿಣ ಭಾರತದ ಬಹಳಹಳೆಯ ಜಿನಶಿಲ್ಪಗಳಲ್ಲಿ ಬಹಳ ಅಪರೂಪವಾಗಿ (ಇಲ್ಲವೇ ಇಲ್ಲ ಎನ್ನುವ ಮಟ್ಟಿಗೂ!) ಎದೆಯ ಮೇಲೆ ಉತ್ತರ ಭಾರತದ ಶಿಲ್ಪಗಳಲ್ಲಿನ ಶ್ರೀವತ್ಸ ಚಿಹ್ನೆಯಂತೆ ಕಾಣಬಾರದು. ಬದಲು ವಿಭಿನ್ನ ಸ್ವರೂಪದಲ್ಲಿ ದಕ್ಷಿಣ ಭಾರತದಲ್ಲಿ ಕಾಣಬರುವುದುಂಟು. ಈ ಮಾತಿಗೆ ಎದುರಾಗಿ (R. Nagaswamy : Jaina Art and Architecture under Pallavas, Panorama of Jaina Art ನಲ್ಲಿಯ ಲೇಖನದಲ್ಲಿ) ತಮಿಳುನಾಡಿನ ಕರೂರಿನ ಬಳಿಯ ಸೆನ್ನಕ್ಕನೂರು ಗುಹಾಲಯದ ಕ್ರಿ. ಶ. ಮೂರನೆಯ ಶತಮಾನದ ಜಿನಶಿಲ್ಪದಲ್ಲಿ ಸ್ವಸ್ತಿಕ ಹಾಗು ಶ್ರಿ ವತ್ಸ ಚಿಹ್ನೆ ಕಾಣಬರುವುದು ಗಮನಾರ್ಹ.

7. ಎಸ್. ಕೆ. ರಾಮಚಂದ್ರರಾವ್ : ಮೂರ್ತಿಶಿಲ್ಪ ನೆಲೆ ಹಿನ್ನೆಲೆ, ಬೆಂಗಳೂರು ವಿಶ್ವವಿದ್ಯಾಲಯ, ೧೯೭೫, ಪು. ೩೩೨.

8. ಹಂಪ. ನಾಗರಾಜಯ್ಯ : ಯಕ್ಷ ಯಕ್ಷಿಯರು, ಬೆಂಗಳೂರು, ೧೯೭೬, ಪು. ೨೭

8ಅ. ಈ ಯಕ್ಷ-ಯಕ್ಷಿಯ ಶಾಸನದೇವತೆಗಳ ಸಮುದಾಯವು ರಕ್ಷಿಸುವ ಚತುರ್ವಿಂಶತಿ ತೀರ್ಥಂಕರರು ಹೀಗಿದ್ದಾರೆ : ಋಷಭದೇವ, ಅಜಿತನಾಥ, ಸಂಭವನಾಥ, ಅಭಿನಂದನನಾಥ, ಸುಮತಿನಾಥ, ಪದ್ಮ ಪ್ರಭ, ಸುಪಾರ್ಶ್ವ ನಾಥ, ಚಂದ್ರ ಪ್ರಭ, ಪುಷ್ಪದಂತ, ಶೀತಲನಾಥ, ಶ್ರೇಯಾಂಸನಾಥ, ವಾಸುಪೂಜ್ಯ, ವಿಮಲನಾಥ, ಅನಂತನಾಥ, ಧರ್ಮನಾಥ, ಶಾಂತಿನಾಥ, ಕುಂಥುನಾಥ, 'ಅರನಾಥ', ಮಲ್ಲಿನಾಥ, ಮುನಿಸುವ್ರತ, ನೇಮಿನಾಥ. ಪಾರ್ಶ್ವನಾಥ, ಹಾಗೂ ವರ್ಧಮಾನ ಮಹಾವೀರ.

ಸರ್ಪಚಿಹ್ನೆ ಸಾಂಕೇತಿಕವಾಗಿ ಕಾಣು ವಂತಿದೆ. ಒಂದು ಅಟಿಕೆಯಷ್ಟು ಗಾತ್ರದ ಈ ಶಿಲ್ಪದಲ್ಲಿಸೂಕ್ಷ್ಮ ಕುಸುರಿ ಕೆಲಸವನ್ನು ಹೀಗೆ ಬಿಡಾವಣೆ ಮಾಡಿರುವುದೂ ಗಮನಾರ್ಹವೇ. ಜೈನ ಯಕ್ಷರು ಅತ್ತ ದೇವರೂ ಅಲ್ಲದೆ ಇತ್ತ ಮನುಷ್ಯರೂ ಅಲ್ಲದ ಸ್ಥಾನದವರು,[10] ಎಂಬುದಿದ್ದರೂ ಸಾಮಾನ್ಯರ ಬದುಕಿನಲ್ಲಿ ಅವರೂ ದೇವಸಮಾನರೇ ಆಗಿ ಕಾಣಬರುತ್ತಾರೆ ಎನಿಸುತ್ತದೆ. ೨೪ ತೀರ್ಥಂಕರರನ್ನು ಒಂದೇ ಶಿಲಾ ಫಲಕದ ಮೇಲೆ ಉಬ್ಬು ಶಿಲ್ಪವಾಗಿ ಕೆತ್ತಲಾಗಿದ್ದರೂ, ಸಾಮಾನ್ಯವಾಗಿ ಪಾರ್ಶ್ವನಾಥ ಸುಪಾರ್ಶ್ವನಾಥ ಆದಿನಾಥ ಅಥವಾ ಮಹಾವೀರರು ಪ್ರಾಮುಖ್ಯವಾಗಿ ಕಂಡು ಬರುವಂತೆ ಈ ಶಿಲ್ಪದಲ್ಲಿ ಮಹಾವೀರ, ಪಾರ್ಶ್ವ, ಸುಪಾರ್ಶ್ವನಾಥರು ಮುಖ್ಯರಾಗಿ ಕಾಣಬರುತ್ತಾರೆ. ಕಾರಣ ಇವರು ಬಹಳ ಬಳಕೆಯಲ್ಲಿರುವವರಾಗಿದ್ದಾರೆ.

ದಕ್ಷಿಣ ಭಾರತದಲ್ಲಿ ಸುಮಾರು ಕ್ರಿ. ಪೂ. ೨ನೆಯ ಶತಮಾನದಿಂದ ಜೈನ ಸಂಸ್ಕೃತಿಯ ಪ್ರಭಾವ ಕಾಣಬರುತ್ತದೆ. ಬೌದ್ಧ ಆರಂಭದ ಶತಮಾನದಲ್ಲಿ ಬುದ್ಧನ ಪ್ರತೀಕವಾಗಿ ಅವನ ಪಾದುಕೆಗಳನ್ನು ಶಿಲ್ಪದಲ್ಲಿ ಗ್ರಹಿಸಲಾಗಿತ್ತು. ಕ್ರಿ. ಪೂ. ೨ನೇ ಶತಮಾನಾಂತರದಲ್ಲಿ ಅದರ ಕವಲುಗಳು (ಹೀನಯಾನ, ಮಹಾಯಾನ, ವಜ್ರಯಾನ, ಸಹಜಯಾನ ಇತ್ಯಾದಿ) ಮೂಡುವಲ್ಲಿ ವಿದೇಶ ಪ್ರಭಾವದ ಗಾಂಧಾರ ಶೈಲಿಯ ಶಿಲ್ಪ, ಭಾರತೀಯ ಸಂಸ್ಕೃತಿಯ ಸ್ಪಂದನ ಶೈಲಿಯಾದ ಮಥುರಾ ಶೈಲಿಯು ಕುಷಾಣರ ಕಾಲದಲ್ಲಿ ಮೂಡಿಬಂತು. ಆ ಸಮಯದಲ್ಲಿಯೇ ಹೆಚ್ಚಾಗಿ ಶ್ರೀವತ್ಸ ಚಿಹ್ನೆಯು ಶಿಲ್ಪಗಳಲ್ಲಿ ಕಾಣಬರುತ್ತದೆ. ಅಂದರೆ ವಿದೇಶಿ ಪ್ರಭಾವದ ಗಾಂಧಾರ ಶೈಲಿ, ದೇಶೀಯ ಪ್ರಭಾವದ ಮಥುರಾಶೈಲಿ ಸಮ್ಮಿಳನಗೊಂಡ ಕಾರಣ, ಬೌದ್ಧ ಶಿಲ್ಪಗಳು ವೈಭವೀಕರಣಗೊಳ್ಳ ಹತ್ತಿದುವು. ಇದರಂತೆಯೆ ಜೈನರಲ್ಲಿಯೂ ಆಗಿ ತೀರ್ಥಂಕರ ಶಿಲ್ಪಗಳು ಮೂರ್ತಿರೂಪಗಳಲ್ಲಿ, ಫಲಕಗಳಲ್ಲಿ ಉಬ್ಬು ಶಿಲ್ಪಗಳಾಗಿ ಕಂಡರಣೆಗೊಂಡಿರಬೇಕು. ಜಿನಸಂಸ್ಕೃತಿ ಅದನ್ನು ತನ್ನಾದನ್ನಾಗಿ ಮಾಡಿಕೊಂಡಿತು. ಅದರಿಂದ ವಿವಿಧ ಬಗೆಗಳಲ್ಲಿ ಈ ಶಿಲ್ಪಗಳನ್ನು ಪ್ರತಿಮಿಸಿರುವುದನ್ನು ಗಮನಿಸಬೇಕು.

ಕುಷಾಣರ ನಂತರ ತೀರ್ಥಂಕರರ ಪ್ರತಿಮೆಗಳನ್ನು ಗುರುತಿಸಲು ಲಾಂಛನದ ಅಗತ್ಯವಾಗಿ ಜೊತೆಗೆ ಬೇರೆ ಬೇರೆ ಯಕ್ಷ-ಯಕ್ಷಿಯರನ್ನು ಕಲ್ಪಿಸಲಾಯಿತು. ಜೈನ ತೀರ್ಥಂಕರ ವಿಗ್ರಹಗಳ ಮೇಲೆ ವಿಶೇಷವಾಗಿ ಮಥುರಾಶೈಲಿಯ ಪ್ರಭಾವದ ಹೆಚ್ಚಳವಿದೆ. ಅಂದರೆ ೫ನೆಯ ಶತಮಾನದಿಂದ, ಬೌದ್ಧರ ಮೂರ್ತಿಶಿಲ್ಪಗಳ ಮೇಲೆ ಆದಂತೆ ಜೈನ ಶಿಲ್ಪಗಳ ಮೇಲೂ ಆಯಿತು.

ಈ ಹಿನ್ನೆಲೆಗಳಲ್ಲಿ ಪ್ರಸ್ತುತ ಅರಮೇರಿಯ ತೀರ್ಥಂಕರ ಶಿಲ್ಪ ತನ್ನ ಸರಳ ಹಾಗು ಕಲಾತ್ಮಕತೆಯಿಂದ ಗಮನ ಸೆಳೆಯುತ್ತದೆ. ತನ್ನ ಕಾಲವನ್ನು ೭ ರಿಂದ ೧೧ನೆಯ ಶತಮಾನದ ನಡುವೆ ಗುರುತಿಸಿಕೊಳ್ಳಲು ಸಹಾಯಕವಾಗಿದೆ. ಈಗಾಗಲೇ ತಿಳಿಸಿರುವಂತೆ ಗಂಗ ಶ್ರೀ ಪುರುಷನ ಕಾಲದಲ್ಲಿಯೋ ಅಥವಾ ಕ್ರಿ.ಶ. ೧೧೦೪ರ ವರೆಗಿನ ಕೊಡಗಿನಲ್ಲಿಯ ಗಂಗರ ಆಳ್ವಿಕೆಯಲ್ಲಿ ಚಂಗಾಳ್ವರ ಮಾಂಡಲಿಕತ್ವದ ಸಂದರ್ಭ ದಲ್ಲಿಯೋ ರೂಪುಗೊಂಡಂತಹ ಶಿಲ್ಪ ಇದಾಗಿರುವಂತಿದೆ. ಅದರ ಗಾತ್ರವನ್ನು ಗಮನಿಸಿದರೆ ಸಮಾಜೋ-ಧಾರ್ಮಿಕ ಮಾನಸಭಕ್ತಿಯ ಸ್ತರಗಳಲ್ಲಿ ಉತ್ತೇಜಿತವಾದ 'ಹರಕೆಯ ಶಿಲ್ಪ'ವಾಗಿ ಬಸದಿಗೆ ಅರ್ಪಿಸಿದ ಶಿಲ್ಪವಾಗಿರಬಹುದೆ ನಿಸುತ್ತದೆ. ಏಕೆಂದರೆ ಕೊಡಗಿನಲ್ಲಿ, ನಾಯಿ, ಆನೆ, ಕುದುರೆ ಇತ್ಯಾದಿಗಳ ಮೃಣ್ಮಯ ಹಾಗು ಶಿಲಾರೂಪಗಳನ್ನು, ಕಲ್ಲುಗಳ ಗುಡ್ಡೆಯನ್ನು ಹರಕೆಯಾಗಿ, ಹಿರಿಯರ ಸ್ಮಾರಕವಾಗಿ ದೇವರಿಗೆ ಅರ್ಪಿಸುವ ರೂಢಿ ಇಂದಿಗೂ ಪ್ರಚಲಿತದಲ್ಲಿದೆ. ಈಶ್ವರ ಅಯ್ಯಪ್ಪನಿಗೆ, ಪನ್ನಂಗಾಲತಮ್ಮೆಗೆ ಬೇಟೆನಾಯಿ, ಕುದುರೆಗಳ ಸರಳ ಕಲಾಕೃತಿಯಾದ ಮಣ್ಣು ಬೊಂಬೆಗಳನ್ನು ಅರ್ಪಿಸುವುದು, ಪುಷ್ಪಗಿರಿಯ ತಪ್ಪಲಿನ ಪಟ್ಟೆಪಾರಿ ಬಂಡೆಯ ಮೇಲಿನ ಕಲ್ಲುರಾಶಿಯ ಗೋಪುರವನ್ನು ಕಟ್ಟುವುದು, ಸುಗ್ಗಿಕಟ್ಟೆ ಹಬ್ಬದ ಹೆದ್ದೇವರು ಪೂಜಾಚರಣೆಯಲ್ಲಿ ಹುತ್ತಕೊಳವೆಗಳನ್ನು (ಸಿಲಿಂಡರಾಕೃತಿ) ಅರ್ಪಿಸುವುದು ಹರಕೆಯ ಶಿಲ್ಪಗಳ ಒಂದು ರೂಪವೆ ಆಗಿದೆ. ಇದು ಕೇವಲ ವ್ಯಕ್ತಿಗೆ ಸೀಮಿತವಾಗದೆ ಸಮುದಾಯದ ಅಥವಾ ಇಡೀ ಮನೆತನದ, ಅಥವಾ ಕುಟುಂಬದ ಪರವಾಗಿ ದೇವರಿಗೆ ಹರಕೆಯ ಶಿಲ್ಪವಾಗಿ (ಫಲಪಡೆವ ಮುನ್ನ ಹಾಗು ನಂತರ) ಅರ್ಪಿತವಾಗುವಂತಹುದಾಗಿದೆ.[11] ಪ್ರಾಚೀನದಿಂದ ಆಚರಣೆ ಗಳ ಪ್ರಭಾವದಿಂದಲೋ ಏನೋ ಅಲ್ಲಿನ ಜಿನಧರ್ಮೀಯ

9. ಹಂಪ ನಾಗರಾಜಯ್ಯ : ಯಕ್ಷ ಯಕ್ಷಿಯರು, ಅದೇ, ಪು. ೧೧೫

10. ಅದೇ, ಪು. ೩೭

11. ಎಂ. ಜಿ. ನಾಗರಾಜ್ : 'ಹರಕೆಯ ಶಿಲ್ಪಗಳು', ಶಿಲ್ಪಕಲಾ ಪ್ರಪಂಚ, (ಪ್ರ.ಸಂ) ಪಿ.ಆರ್. ತಿಪ್ಪೇಸ್ವಾಮಿ, (ಸಂ) ಡಾ॥ ಅ.ಲ. ನರಸಿಂಹನ್, ಎನ್. ಮರಿಶಾಮಾಚಾರ್, ಕರ್ನಾಟಕ ಲಲಿತ ಕಲಾ ಅಕಾಡೆಮಿ, ಬೆಂಗಳೂರು, ೧೯೯೪, ಪು. ೪೮೧, ೪೮೯, ೪೯೪

ರಲ್ಲಿ ಹರಕೆ ತೀರ್ಥಂಕರ ಶಿಲ್ಪವಾಗಿ ಪ್ರಸ್ತುತ ಶಿಲ್ಪವು ಆ ಕಾಲಕ್ಕೆ ಅರಮೇರಿಯಲ್ಲಿದ್ದಿರಬಹುದಾದ ಬಸದಿಗೆ ಅರ್ಪಿತ ವಾಗಿರಬೇಕು. ಅಂದರೆ ಭಗವತಿ ದೇಗುಲವಿದ್ದ ನೆಲ ಯಲ್ಲಿಯೋ ಅಥವಾ ಸನಿಹದಲ್ಲಿಯೋ ಬಸದಿ ಇದ್ದದ್ದು ಶಿಥಿಲವಾಗಿ ನೆಲಕಚ್ಚಿರಬೇಕು. ೨ನೇ ಲಿಂಗರಾಜ ಒಡೆಯನ ಕಾಲದಲ್ಲಿ ಈ ದೇಗುಲ ನಿರ್ಮಾಣವಾಯಿತೆಂಬುದು ರೂಢಿಯ ಮಾತಿನಲ್ಲಿದೆ. ಆದರೆ ಅರಮೇರಿಯ ಉತ್ತುನಾಯಕನು ಹಾಲೇರಿ ಅರಸ ಮುದ್ದುರಾಜ(ಕ್ರಿ.ಶ. ೧೬೩೩-೧೬೮೭)ನ ಆಳಿಯನಾಗಿ ಚನ್ನಬಸಪ್ಪನೆನಿಸಿ ಅರಮೇರಿ-ಬೆಪ್ಪುನಾಡಿನ ಅಧಿಕಾರಕ್ಕೆ ನೇಮಕಗೊಂಡಿದ್ದ. ಅಲ್ಲಿ ಹಾಲೇರಿ ಅರಸರ ಅರಮನೆ ಪನ್ನ ಜಮೀನು ಇತ್ತು. ಆನೆ ಕಟ್ಟುವ ನೆಲೆ ಇತ್ತು. ಅಂತಾಗಿ 'ಆನೆ ಬೆಪ್ಪುನಾಡು' ಎಂಬ ಹೆಸರೂ ಅದಕ್ಕಿದೆ[12]. ಅಂತಾಗಿ ಮುದ್ದರಾಜನ ಕಾಲಕ್ಕೆ ಈ ದೇಗುಲ ಸ್ಥಾಪನೆ ಗೊಂಡಿರಬೇಕು ಅಥವಾ ಜೀರ್ಣೋದ್ಧಾರ ಗೊಂಡಿರಬೇಕು. ಈ ದೇಗುಲದ ಶಿಲಾಭಿತ್ತಿಯ ಮೇಲೆ ಪೊಂಬಾಳೆಗರಿಯಿಂದ ಮಾಡಿದಂತಹ ಮುಡಿ ಹೊಂದಿರುವ ಸ್ತ್ರೀಶಿಲ್ಪವಿದೆ. ಇದು ಬಹುಶಃ ಯಕ್ಷಿಯೊಬ್ಬಳ ಶಿಲ್ಪವೆಂದು ಪರಿಭಾವಿಸಿದರೆ, ಈ ನೆಲೆಯಲ್ಲಿ ಬಸದಿಯೊಂದಿದ್ದುದರ ಸಂದರ್ಭವನ್ನು ಸೂಚಿಸಬಹುದು ಅಥವಾ ನೆರೆಯಲ್ಲಿದ್ದ ಬಸದಿಯೊಂದರ ಶಿಲಾಭಾಗವು ಇಂದಿನ ದೇಗುಲದ ನಿರ್ಮಾಣದ ಸಮಯದಲ್ಲಿ ಸೇರ್ಪಡೆಯಾಗಿರಬಹುದೆನಿಸುತ್ತದೆ.

ಅಂತಿಮವಾಗಿ 'ಅರಮೇರಿ' ರೂಪವು ಹಾಲೇರಿ ಅರಸರ ಕಾಲದಲ್ಲಿ ಚಾಲ್ತಿಗೊಂಡಿರು ವಂತಿದೆ. ಒಂದು ಕಾಲಕ್ಕೆ ಇಲ್ಲಿ ಜೈನ ಕುಟುಂಬಗಳಿದ್ದು ಅರನಾಥನ ಬಸದಿ ಇದ್ದು, ಜೈನಕೇಂದ್ರವಾಗಿದ್ದ ಊರನ್ನು ಅವು ತ್ಯಜಿಸಿ ಹೋದ ಮೇಲೆ ಬಸದಿ ಶಿಥಿಲಗೊಂಡು ನಾಶವಾಗಿರಬೇಕು. ಅವರು ಬಸದಿಗೆ ಅರ್ಪಿಸಿದ್ದ ತೀರ್ಥಂಕರ ಶಿಲ್ಪವು 'ಹರಕೆಯ ಶಿಲ್ಪ'ವಾಗಿಯೋ ಅಥವಾ ಅರನಾಥನ ಬಳಿ ಇಟ್ಟು ಪೂಜಿಸುತ್ತಿದ್ದ ಕಿರು ಶಿಲಾಫಲಕ ಶಿಲ್ಪವಾಗಿಯೋ ಇದ್ದಿರ ಬೇಕು. ಗುಡಿ ಜೀರ್ಣೋದ್ಧಾರವಾಗುವ ಸಮಯದಲ್ಲಿ ನೆಲದಲ್ಲೆಲ್ಲಿಯೋ ಹುದುಗಿದ್ದ ಅಥವಾ ಅನಾಥವಾಗಿ ಬಿದ್ದಿದ್ದ ಶಿಲ್ಪವನ್ನು ಇಂದಿನ ಭಗವತಿ ದೇಗುಲಕ್ಕೆ ದೇವಶಿಲ್ಪವೆಂದು ಭಾವಿಸಿ ಯಾರೋ ನೀಡಿರಬಹುದು. ಅರನಾಥನ ಬಸದಿ ಆಗಿತ್ತು ಎಂದರೆ ಹೆಚ್ಚು ಬಳಕೆಗೊಳ್ಳುವ ವೃಷಭನಾಥ, ಮಹಾವೀರ, ಪಾರ್ಶ್ವನಾಥ, ಸುಪಾರ್ಶ್ವನಾಥ, ಶಾಂತಿನಾಥ ಹಾಗು ನೇಮಿನಾಥ'ರ ಆರಾಧನೆಯ ಸಾಲಿಗೆ ಅಪರೂಪದ ಸೇರ್ಪಡೆಯಾಗಿ ಅರಮೇರಿಯು 'ಅರನಾಥ'ನದೂ ಒದಗು ತ್ತದೆ. ಶಿಲ್ಪದಲ್ಲಿ ಯಕ್ಷಿಯು ವಾಹನ 'ಹಂಸ'ದಂತೆ ಭಾಸವಾಗುತ್ತದೆ. ಅದು ಅರನಾಥನ ಯಕ್ಷಿಯಾದ ದಿಗಂಬರ ಸಂಪ್ರದಾಯದ ತಾರಾವತಿಯ ಲಾಂಛನವೂ ಹೌದು (ಅವಳಿಗೂ ಬಲಗೈಯಲ್ಲಿ ಮಾತುಲಿಂಗಕಮಲ ವಿರುತ್ತದೆ). ಅಂತಾದರೆ ಈ ಭಗವತಿ ದೇಗುಲ ಒಂದು ಕಾಲದ ತಾರಾವತಿ ಯಕ್ಷಿಯ ಆರಾಧನಾ ನೆಲೆಯಾಗಿತ್ತೆ? ಎಂಬ ಅನುಮಾನಕ್ಕೂ ಎಡೆಯಾಗುತ್ತದೆ. ಒಟ್ಟಾರೆ ಒಂದು ಅಪರೂಪದ 'ಹರಕೆಯ ತೀರ್ಥಂಕರ ಫಲಕಶಿಲ್ಪ' ಅಥವಾ ಚತುರ್ವಿಂಶತಿ ತೀರ್ಥಂಕರರ ಪೂಜಾ ಶಿಲಾಫಲಕ ಶಿಲ್ಪವೊಂದು ಕೊಡಗಿನಿಂದಲೂ ದೊರೆತ ವಿಶಿಷ್ಟ ಸಂದರ್ಭವಿದಾಗುತ್ತದೆ. ಅದು ತನ್ನ ಸರಳ ಕಲಾತ್ಮ ಕತೆಯಿಂದ ಕೂಡಿದ ಸುಮಾರು ೪ ಶತಮಾನಗಳಿಗೂ ಹಿಂದಿನ ಕೊಡಗಿನಲ್ಲಿಯ ಜೈನಧರ್ಮದ ಪ್ರಭಾವದ ಚರಿತ್ರೆಯನ್ನೂ ಸೂಚಿಸುತ್ತದೆ ಎನ್ನಬಹುದು.

ಅರಮೇರಿಯ ಭಗವತಿ ದೇಗುಲದ ಮುಖಮಂಟಪದ ಪಶ್ಚಿಮ ದ್ವಾರದ ಬಾಗಿಲುವಾಡದ ಲಲಾಟದ ಕೇಂದ್ರ ಭಾಗವನ್ನು ಒಡೆದು ಕಮಲದ ಬಿಡಾವಣೆ ಮಾಡಿರುವುದು; ಹಾಗು ಅದರ ಬಲ ಮೇಲ್ಬದಿಯಲ್ಲಿ ಧ್ಯಾನಿಮುದ್ರಾ ದಿಂಗಬರ ಮುನಿಯನ್ನು ಹೋಲುವಂತಹ ಶಿಲ್ಪವಿರುವುದು, ಇದೆಲ್ಲ ಅಲ್ಲಿ ಒಂದು ಕಾಲಕ್ಕೆ ಜೈನ ಆರಾಧನೆಯ ಗುಡಿಯ ಇದ್ದಿರಬಹುದೆಂಬ ಊಹೆಗೆ ದಟ್ಟವಾಗಿ ಅವಕಾಶಮಾಡಿ ಕೊಡುತ್ತದೆ.

### ಮುಚಲಿಂದ ಬುದ್ಧಪಾದ ನಾಗಶಿಲ್ಪ

ಬೌದ್ಧರ ಹೀನಯಾನ ಸಂಪ್ರದಾಯದಲ್ಲಿ ಅನೇಕ ಶಿಲ್ಪ ಫಲಕಗಳಲ್ಲಿ ಬುದ್ಧನ ಪ್ರತೀಕವಾಗಿ ಬೋಧಿವೃಕ್ಷ, ಸಿಂಹಾಸನ, ಛತ್ರ, ಪಾದ ಯುಗ್ಮಗಳನ್ನೂ ಸ್ತೂಪಗಳಲ್ಲಿಯೂ ಬಿಡಿಸ ಲಾಗುತ್ತಿತ್ತು. ಇವುಗಳನ್ನು ಉದ್ದೇಶಿತ ಧಾತುಗಳೆನ್ನು ವುದುಂಟು (ನೆನಪಿಗೆ ತರುವ ಸಂಕೇತಗಳು). ಇವುಗಳ ಜೊತೆಗೆ ಯಕ್ಷ ಯಕ್ಷಿ, ವೃಕ್ಷದೇವತೆ ಹಾಗು ನಾಗದೈವಗಳನ್ನೂ ಚಿತ್ರಿಸಲಾಗುತ್ತಿತ್ತು. ಅಶೋಕನ ಕಾಲಕ್ಕೆ ಬುದ್ಧಪಾದಯುಗಳ ಶಿಲ್ಪವನ್ನು ಪೂಜಿಸುವ ಪದ್ಧತಿ ಹೆಚ್ಚು ಪ್ರಚಲಿತಗೊಂಡಂತೆ

12. ಈ ಅಂಶವನ್ನು ತಿಳಿಸಿ, ಭಗವತಿ ದೇಗುಲವನ್ನು ನೋಡಲು ನೆರವಾದವರು, ಅರಮೇರಿಯ ಬಾಚಿರ ಯು.ಕಾವೇರಪ್ಪ ಹಾಗು ಕಂಡತಂತ್ರ ಸಿ. ಅಪ್ಪಾಜಿ ಅವರುಗಳಾಗಿದ್ದಾರೆ.

ಾಣುತ್ತದೆ. ಬುದ್ಧ ಪಾದಯುಗಳ ಶಿಲ್ಪದ ಸುತ್ತ ಸುತ್ತಿದ ಮೈಯ ನಾಗಹೆಡೆಯ ಶಿಲ್ಪ ಕ್ರಿ. ಪೂ. ೨ನೆಯ ಶತಮಾನದಿಂದ ರೂಢಿಗೊಂಡಂತಿದೆ. ಚೈತ್ಯ, ವಿಹಾರ, ಧಾತುಗರ್ಭದ ಬಳಿ ಬುದ್ಧನ ಪಾದಗಳ ಬಳಿ ಸ್ಥಾನಕ ನಾಗನಿರುವಂತೆ ಚಿತ್ರಿಸಲಾಗುತ್ತಿತ್ತು.[13] ಇದು ಬಹುಶಃ ಮುಚಲಿಂದನಾಗನ ಸಂಕೇತ ವಿರಬಹುದು. ಮುಚಲಿಂದ ನಾಗರ ದೊರೆ. ನಾಗ ವೃಕ್ಷಗಳ ಬೇರುಗಳ ನಡುವೆ ಇವನ ವಾಸ. ಬುದ್ಧ ಮುಚಲಿಂದ ನಾಗ ವೃಕ್ಷಗಳ ಕೆಳಗೆ ಕುಳಿತು ಮಹಾಶಾಂತಿ ಅನುಭವಿಸುವ ಸ್ಥಿತಿ (ಅರುಹಂತ ಸ್ಥಿತಿ) ಯಲ್ಲಿದ್ದ. ಅಕಾಲಿಕ ಕಾರ್ಮೋಡ ದಿಂದಾಗಿ ಕುಂಭದ್ರೋಣ ಮಳೆ ಬೀಳತೊಡಗಿತು. ಆಗ ಮುಚಲಿಂದನಾಗ ಬುದ್ಧನ ದೇಹವನ್ನು ಏಳುಬಾರಿ ಕುಂಡಲವಾಗಿ ಸುತ್ತಿ ಶಿರದ ಮೇಲೆ ತನ್ನ ಹೆಡೆ ಅರಳಿಸಿ ರಕ್ಷಿಸಿದ. ಬುದ್ಧನ ಈ ಬಗೆ 'ಮುಚಲಿಂದ ಬುದ್ಧ' ನೆನಿಸಿರಬೇಕು. ಇನ್ನೊಂದು ಕತೆಯ ರೀತ್ಯಾ ಯಾರೂ ಹೊಗದ ವಿಷಸರ್ಪವಿದ್ದ ಉರುವೇಲದ ಅಗ್ನಿದೇಗುಲವನ್ನು ಬುದ್ಧ ಹೊಕ್ಕು ಆ ನಾಗನನ್ನು ಮಣಿಸಿದ. ನಾಗ ದೈನ್ಯದಿಂದ ಬುದ್ಧನ ಭಿಕ್ಷಾಪಾತ್ರೆಯಲ್ಲಿ ಸುರುಳಿಯಾಗಿ ಸೇರಿತು.[14] ಅಂದರೆ ಬುದ್ಧನ ಪಾದಾಕ್ರಾಂತನಾದ ನಾಗನಕತೆಯ ಸಂಕೇತವಿದೆನ್ನಿಸುತ್ತದೆ. ಕ್ರಿ. ಶ. ೨-೩ನೇ ಶತಮಾನದ ಇಕ್ಷ್ವಾಕುಗಳ ಕಾಲದ ನಾಗಾರ್ಜುನಕೊಂಡದಲ್ಲಿ ಐದು ಹೆಡೆಯ ನಾಗಮುಚಲಿಂದ (ಮುಚಲಿಂದ ನಾಗನ ಶಿಲ್ಪ ಅರಳಿದ ಕಮಲದ ಮೇಲೆ ಬಿಡಾವಣೆಗೊಂಡಿದೆ),[15] ಬನವಾಸಿಯ ಮಧುಕೇಶ್ವರ ದೇಗುಲದಲ್ಲಿ ನಾಗನೂ ಇದೇ ಬಗೆಯ ಹೆಸರುಳ್ಳ ದ್ದಾಗಿರಬಹುದೆ? ಎನಿಸುತ್ತದೆ.

ಈ ಹಿನ್ನೆಲೆಯಲ್ಲಿ ದಕ್ಷಿಣ ಕೊಡಗಿನ ಪಶ್ಚಿಮ ಗಡಿಯ ಸನಿಹದ ಮಂಚಳ್ಳಿಯಲ್ಲಿ ಲಭ್ಯವಾದ ಪಾದಯುಗ್ಮ ನಾಗ ಶಿಲ್ಪ ಶಿಲಾಫಲಕವು ಗಮನಾರ್ಹವಾಗುತ್ತದೆ.[16] ಫಲಕದ ಅಂಚುಗಳಲ್ಲಿ ಚಾಚಿದ ಅರಳು ಕಮಲದ ದಳಗಳಂತಹ ರಚನೆ ಇದೆ. ನಂತರ ವೃತ್ತಾಕಾರದಲ್ಲಿ ಒಮ್ಮಡಿ ಮುಖ ಸನಿಹಕ್ಕೆ ಬಾಲದ ತುದಿ ಹೆಡೆಗೆ ತಾಗಿದಂತೆ ದುಂಡು ಮೈಯ ಪುಷ್ಪನಾಗವು ಸುತ್ತಿದಂತೆ ಉಬ್ಬು ಶಿಲ್ಪವಿದೆ. ಈ ವೃತ್ತದ ಕೇಂದ್ರದಲ್ಲಿ ಎಡ ಹಾಗು ಬಲ ಪಾದಯುಗ್ಮಗಳಿದ್ದು, ಇಡೀ ಉಬ್ಬು ಶಿಲ್ಪ ಕಲಾತ್ಮಕವಾಗಿ ಕಾಣಿಸುತ್ತದೆ; ಜೊತೆಗೆ ಇತಿಹಾಸದ ಪದರುಗಳನ್ನು ಹೆಕ್ಕಿದಾಗ ಬಿಡಿಸಿ ತೋರಿಸುವಂತೆಯೂ ಇದೆ. ಇದಕ್ಕೆ ತೌಲನಿಕ ಉದಾಹರಣೆ ಗಳನ್ನು ಗಮನಿಸಿದರೆ ಹೆಚ್ಚು ಸ್ಪಷ್ಟತೆ ಒದಗುತ್ತದೆ.

ಕ್ರಿ.ಪೂ. ೧ನೆಯ ಶತಮಾನದ ಮಹಾಯಾನ ಬೌದ್ಧಕೇಂದ್ರವಾದ ಭೀಮಾನದಿ ತೀರದ ಸನ್ನತಿಯಲ್ಲಿ ಹೀನಯಾನ ಪದ್ಧತಿಯ ಫಲಕಗಳಲ್ಲಿನ ಅನೇಕ ಉಬ್ಬು ಶಿಲ್ಪಗಳಲ್ಲಿ, ಹಾಗು ಸಾತವಾಹನರ ಕಾಲದ ದಾನ ದಾಖಲೆಗಳಲ್ಲಿ, ಕೆಲವು ಶಿಲ್ಪಗಳಲ್ಲಿ, ಬೌದ್ಧ ವಸ್ತು ಪ್ರತೀಕವಾಗಿ ಖಾಲಿ ಸಿಂಹಾಸನ ಪೀಠದ ಎದುರು ಬೋಧಿ ವೃಕ್ಷದ ಕೆಳಗೆ, ಪಾದಯುಗ್ಮದ ಉಬ್ಬುಶಿಲ್ಪ, ಚಿಹ್ನೆಗಳಿವೆ.[17]

ಅಮರಾವತಿಯ ಶಿಲ್ಪ (ಬುದ್ಧನ ಸಂಬೋಧಿಯ ನಂತರ ಪತ್ನಿ, ಪುತ್ರರ ಬಳಿ ಬಂದಾಗಿನ ಚಿತ್ರ)ವೊಂದರಲ್ಲಿ ಖಾಲಿ ಸಿಂಹಾಸನದ ಮುಂದೆ ಬುದ್ಧಪಾದಯುಗ್ಮ, ಅಗ್ನಿಧೂಪ, ಚಕ್ರ (ಧರ್ಮ ಚಕ್ರ) ಹಾಗು ತ್ರಿಶೂಲಗಳ ಬಿಡಾವಣೆ ಇದೆ. ಬೌದ್ಧರಲ್ಲಿ ತ್ರಿಶೂಲವನ್ನು 'ನಂದಿಪಾದ', 'ವಜ್ರ' ಎನ್ನುವುದುಂಟು. ಅವು ವೃತ್ತ ಆವೃತದಲ್ಲಿ ಕಂಡು ಬರುವುದುಂಟು. ತ್ರಿಶೂಲವನ್ನು 'ಮೂರುಸಿರಿ'ಗಳ (three treasures) ಪ್ರತೀಕವಾಗಿ ಪರಿಗಣಿಸವುದುಂಟು. ಮೊದಲಿಗೆ ಬುದ್ಧಪಾದಗಳು ಕೇವಲ ಸಾಂಕೇತಿಕವಾಗಿ ನೇರ ಪ್ರತಿನಿಧಿ ಸುವಂತೆ ಸಾಮಾನ್ಯವಾಗಿ ಬಿಡಾವಣೆಗೊಳ್ಳುತ್ತಿದ್ದುವು. ನಂತರ ಪಂಥಪ್ರತೀಕವಾಗಿ ಮಾರ್ಪಾಟುಗೊಂಡು ವೈಭವೀ ಕರಣ ಶಿಲ್ಪಗಳಂತೆ ಬಿಡಾವಣೆಗೊಳ್ಳಲಾರಂಭವಾದವು. ಪಾದಗಳ ಮೇಲ್ಮೈಯಲ್ಲಿ ಅರಳು ಕಮಲದಳ ಪತ್ರವ ನ್ನೊಳಗೊಡ ಧರ್ಮಚಕ್ರ, ತ್ರಿಶೂಲ ಚಿಹ್ನೆಗಳು, ಹಾಗೂ ಸ್ವಸ್ತಿಕ ಚಿಹ್ನೆಗಳು ಕೇಂದ್ರ ಹಾಗು ಒಮ್ಮಡಿ ಭಾಗಗಳಲ್ಲಿ ಮೂಡಿಬಂದುವು. ಹೆಬ್ಬೆಟ್ಟು ತಳಗಳಲ್ಲಿಯೂ ಸ್ವಸ್ತಿಕ ಚಿಹ್ನೆಗಳೂ ಕಾಣಬಂದುವು. ಇವುಗಳಲ್ಲಿ ಕೆಲವು ಚಿಹ್ನೆಗಳನ್ನೂ ವಿಶ್ವದ ಸಂದರ್ಭದ ಮಹತ್ತಿನ ಸಂಕೇತವೂ ಆಗಿದ್ದುವು. ಹಲಸಿಯ ವರಾಹ ದೇಗುಲದ ಹೊರಗೆ ಬಿದ್ದಿರುವ ಶಿಲ್ಪಫಲಕ

13. Myths and Symbols in Indian Art and Civilisation : (Ed) Joseph Campbell, Newyork, 1941, P.65.
14. Debal Mitra : Sanchi, A.S.I., New Delhi, 1984, P. 35.
15. C. Shivarama Murthy : Early Andhra Art and Iconography, Hyderabad, 1979, fig.22
16. ಈ ಶಿಲ್ಪ ವಿರುವ ಸ್ಥಳವನ್ನು ತೋರಿಕೊಟ್ಟವರು ಮಂಚಳ್ಳಿಯ ಕೈಪಳೀರ ಬಿ. ತಿಮ್ಮಯ್ಯ ಹಾಗು ಕುಮಟೂರು ಗ್ರಾಮದ ಬಾಚರಣಿಯಂದ ಕೆ. ಅಣ್ಣಯ್ಯ ಅವರು.
17. Debal Mitra : Buddhist Monuments, Calcutta, 1980, p.180

ವೊಂದರಲ್ಲಿ ಎರಡು ಜೋಡಿ ಪಾದಯುಗ್ಮಗಳು ಇವೆ. ಅವುಗಳ ಬೆರಳು ಮುಖಕ್ಕೆ ನಾಗಹೆಡೆಯ ಮುಖವಿದೆ. ನಾಗನ ಮೈ ಪಾದಗಳನ್ನು ಸುತ್ತುವರಿದಿದೆ. ಈ ಆವರಣದಲ್ಲಿ ನಗ್ನ ಭೈರವನ ಗುಡಿಯೂ ಇದೆ. ಗೊಡಚಿ ವೀರಭದ್ರನ ಗುಡಿ ಎದುರು ಇನ್ನೂ ವಿಶಿಷ್ಟವಾದ ಶಿಲ್ಪ ಫಲಕವೊಂದಿದೆ. ಈ ಫಲಕದಲ್ಲಿ ಪಾದಯುಗ್ಮವು ನಾಗನ ಮೈಯಿಂದ ಸುತ್ತುವರಿದು ಹೆಡೆ ಬೆರಳು ಮುಖಕ್ಕೆ ನಡುವೆ ಇದೆ. ಹೆಬ್ಬೆರಳುಗಳ ಹಿಡಿಪು ಇದೆ. ಪಾದಗಳ ನಡುಭಾಗದಲ್ಲಿ ಅರಳುಕಮಲದಳಗಳಿವೆ. ಹಿಮ್ಮಡಿ ಭಾಗದಲ್ಲಿ ಅರಳುಕಮಲವಿರುವ ಚಕ್ರಗೆತ್ತನೆ ಇದೆ. ಅವುಗಳ ಬದಿಗೆ ಸ್ವಸ್ತಿಕ ಹಾಗು ತ್ರಿಶೂಲ (ವಜ್ರ, ಎರಡೂ ಬದಿ ತ್ರಿಶೂಲ ಮುಖವಿರುವ ರಚನೆ) ಇವೆ. ಒಂದು ಪಾದದಲ್ಲಿ ವಜ್ರ ಸವೆದಂತಿದೆ. ಈ ಎರಡೂ ಪಾದಗಳ ಬಲಬದಿಗೆ ನಾಗನ ಬಾಲದ ನೇರದಲ್ಲಿ ಪ್ರತ್ಯೇಕತ್ರಿಶೂಲದ ಶಿಲ್ಪವಿದೆ. ಈ ಶಿಲ್ಪವು ಹೆಚ್ಚುಕಡಿಮೆ ಡೇವಿಡ್ ಅವರು ವರ್ಣಿಸಿರುವ ಬುದ್ಧನ ಪಾದ ಶಿಲ್ಪದ ಲಕ್ಷಣವನ್ನು ಹೋಲುತ್ತದೆ. ಗೊಡಚಿಯ ಈ ಶಿಲ್ಪವನ್ನು ಇಂದಿನ ವೀರಭದ್ರಗುಡಿಯ ಬಳಿಗೆ ಬೇರೆಡೆಯಿಂದ ತಂದಿಟ್ಟ ಬಗ್ಗೆ ಗುಡಿಯ ಹಿಂದಿನ ವ್ಯವಸ್ಥಾಪಕರಾದ ವೆಂಕಟೇಶ ಬಾ. ಜೋಶಿ ಅವರು ಹೇಳುತ್ತಾರೆ. ಕ್ರಿ.ಶ. ೫ನೆಯ ಶತಮಾನದಲ್ಲಿ ಚಾಲುಕ್ಯರ ಕೀರ್ತಿವರ್ಮ ಈ ದೇಗುಲಕ್ಕೆ ದಾನ ನೀಡಿದ ಬಗ್ಗೆ, 11ನೆಯ ಶತಮಾನದಲ್ಲಿ ಸ್ಥಳಾಂತರಗೊಂಡ ವೀರಭದ್ರನ ಬದಲು 12ನೆಯ ಶತಮಾನದಲ್ಲಿ ಮುದಿವೀರಣ್ಣ (ಶಿವ) ನ ಸ್ಥಾಪನೆಯ ದಿಗಂಬರ ಮುಕ್ತಿಮುನಿನಾಥರಿಂದ ಆದ ಬಗ್ಗೆ ಬರೆದಿದ್ದಾರೆ.[18] ಗೊಡಚಿಗೆ ಒಂದು ಕಾಲಕ್ಕೆ ನಾಜ್ಗಾಲ ಎಂಬ ಹೆಸರಿದ್ದ ಐತಿಹ್ಯವೂ ಇರುವುದರಿಂದ ಅದು ನಾಗಕಾಲ > ನಂಗಗಾಲ > ನಂಜ್ಗಾಲ ಆಗಿದ್ದಿರುವ ಸಾಧ್ಯತೆಯನ್ನು ಪರಿಭಾವಿಸಬಹುದು. ಬಹುಶಃ ಈ ಶಿಲ್ಪದ ಪ್ರಸಿದ್ಧ ಹಾಗು ಅಂದಿನ ಧಾರ್ಮಿಕ ನೆಲೆಯ 'ನಾಗಕಾಲ' ಎಂಬ ಹೆಸರೂ ಇದ್ದಿರಬಹುದು. ಕೊಡಗಿನಲ್ಲಿಯೂ ಈ ಹೆಸರಿನ ಗ್ರಾಮವುಂಟು.

ಬಿಜಾಪುರ ಜಿಲ್ಲೆ ಸಿಂದಗಿಯಲ್ಲಿ ಬೊಮ್ಮಲಿಂಗೇಶ್ವರ ಗುಡಿಯ ಆಸೀನ ಭೈರವನ ಸನಿಹದಲ್ಲಿ ಸರ್ಪಬಳಸಿದ ಪಾದಗಳಿವೆ. ಹಾಗು ರೊಟ್ಟಿ ಲಿಂಗಯ್ಯನ ಗುಡಿಯ ಬಳಿ ಇದೇ ರೀತಿ ಸರ್ಪ ಬಳಸಿದ ಪಾದಗಳಿವೆ. ಗುಲ್ಬರ್ಗಾ ಜಿಲ್ಲೆ ನೀರಡಗಿಯಲ್ಲಿನ ಲಕ್ಷ್ಮಿ ಗುಡಿಯ ಮುಂದೆ ಪಾದಗಟ್ಟೆಯಲ್ಲಿ ದೇವಿಪಾದುಕೆ ಇದ್ದು ಸರ್ಪಬಳಸಿದೆ. ಇದನ್ನು 'ಚೌಡವ್ವನ ಪಾದ' ವೆಂದು ಸ್ಥಳೀಕರ ಹೇಳಿಕೆ.[19] ಚಿತ್ರದುರ್ಗದಲ್ಲಿಯೂ ಇಂತಹುದೇ ಸರ್ಪ ಸುತ್ತುವರಿದ ಅನೇಕ ಪಾದಶಿಲ್ಪಗಳೂ ಇವೆ.[20] ಹೊಸಪೇಟೆ ಬಳಿಯ ಕಣಿವೆ ವೀರಭದ್ರನ ಗುಡಿಯಲ್ಲಿ ನಾಗ ಬಳಸಿದ ಪಾದ ಶಿಲ್ಪ ಫಲಕವಿದೆ. ಇದನ್ನು ತುಂಗಭದ್ರೆಯಿಂದ ಮುಳುಗಡೆ ಆದ ಪ್ರದೇಶದಿಂದ ತಂದು ಕಣವಿ ವೀರಭದ್ರ ಗುಡಿಯಲ್ಲಿ ಇಡಲಾಗಿದೆ[21]. ಡಾ. ಅ. ಸುಂದರ ಅವರು ಸೂಚಿಸಿರುವಂತೆ ಹಂಪೆಯ ಯಮ್ಮಿಗುಡ್ಡದಲ್ಲಿ ವೀರಭದ್ರನ ಭಗ್ನ ಶಿಲ್ಪವಿದೆ. ಈ ಗುಡ್ಡದಲ್ಲಿ ಸರ್ಪವು ಸುತ್ತುವರಿದ ಹಾಗು ಹೂವಿನ ಅರಳುಕಮಲಹೊಂದಿದ ಪಾದಶಿಲ್ಪ ಇರುವ ಬಗ್ಗೆ ತಿಳಿದು ಬಂದಿದೆ. ಇದನ್ನು ಸಂತಾನೋತ್ಪತ್ತಿಯ ಹರಕೆಗೆ ಅನ್ವಯಿಸಿ ಹೇಳಿರುವುದೂ ಉಂಟು.

ಹಂಪೆಯು ಕ್ರಿ.ಶ. ೧ನೆಯ ಶತಮಾನದಲ್ಲಿ ಒಂದು ಬೌದ್ಧಕೇಂದ್ರವೂ ಆಗಿತ್ತು ಎಂಬುದನ್ನು ಲಭ್ಯ ಬ್ರಾಹ್ಮಿಲಿಪಿಯ ಶಾಸನದ ಆಧಾರದ ಮೇಲೆ ವಿದ್ವಾಂಸರು ಹೇಳುತ್ತಾರೆ. ಈ ಮಾತು ಲಭ್ಯ ಶಿಲ್ಪದ ದೃಷ್ಟಿಯಿಂದಲೂ ಗಮನಾರ್ಹವಾಗುತ್ತದೆ.

ಅನಂತಪುರಜಿಲ್ಲೆ ಬುಕ್ಕರಾಯಸಮುದ್ರ ಗ್ರಾಮದ ಕ್ರಿ.ಶ. ೧೫೨೮ರ ಶಾಸನೋಕ್ತ ಕಾಶಿವಿಶ್ವೇಶ್ವರ ದೇಗುಲದ ಧ್ವಜಸ್ತಂಭದ ಬಳಿ ಪ್ರತ್ಯೇಕ ಹೆಡೆನಾಗ ಸುತ್ತುವರಿದ ಬಂಧದ ಪಾದಗಳ ಜೋಡಿಶಿಲ್ಪಗಳಿವೆ. ಜನರು ಇವುಗಳನ್ನು ವೀರಭದ್ರ, ಭದ್ರಕಾಳಿ ಪಾದಗಳು ಎಂದು ಕರೆಯುವ ಬಗ್ಗೆ ಅನಂತಪುರದ ಶ್ರೀ ಬಿ. ಆರ್. ಎಂ. ರುದ್ರಮುನಿಯವರು ಹೇಳುತ್ತಾರೆ. ಹಂಪೆಯ ಮತಂಗ ದೇವರ ಕೊತ್ತಳದ ಸನಿಹದಲ್ಲಿದ್ದ ಶಾಸನೋಕ್ತ ಗುರುಗುಹೇಶ್ವರಾಶ್ರಮದ ಬಂಡೆಗಳ ಬಳಿ ಭಿಕ್ಷಾಟನ ಮೂರ್ತಿ ಶಿವ ಭಿಕ್ಷಾಪಾತ್ರೆ ಹಿಡಿದಿರುವ ಸ್ತ್ರೀ ಮೂರ್ತಿಗಳಲ್ಲದೆ, ತ್ರಿಶೂಲಕಲ್ಲು ಹಾಗು ಹಾವು ಸುತ್ತುವರಿದ ಪಾದಗಳ ಭಗ್ನ ಶಿಲ್ಪ ಶಿಲೆಗಳು ಇರುವ ಬಗ್ಗೆ ಡಾ. ಎಂ.

---

18. The image of the Buddha : (Ed) David L. Snellgrove New Delhi, 1978, pp. 38, 43.
19. ವೆಂಕಟೇಶ ಬಾ. ಜೋಶಿ : ಶ್ರಿ ವೀರಭದ್ರ ಭಕ್ತಿ ರಸ ಮಾಲೆ, ಚಂದರಗಿ, ೧೯೨೮, ಪೀಠಿಕಾ, ಪು. ೫-೬
20. ಶ್ರೀ ಎಸ್. ರಾಜೇಂದ್ರಪ್ಪ ಹಾಗು ಬಿ. ರಾಜಶೇಖರಪ್ಪ ಅವರುಗಳು ಹೇಳಿದ ವಿಷಯಗಳಿವು.

ಚಿದಾನಂದಮೂರ್ತಿ ಬರೆದಿದ್ದಾರೆ (ಹೊಸತು ಹೊಸತು, ಪು. ೩೦೯) ವೀರಭದ್ರನು ಮನಃ ಕುಂಡಲಿನಿ ಯೋಗ ಸಾಧಕನೂ, ಸಿದ್ಧನೂ ಆಗಿರುವುದರಿಂದ, ಸರ್ಪಕ್ಕೂ ಅವನಿಗೂ ಸಂಬಂಧ ವಿರುವುದರಿಂದ, ಮನಃ ಸಂಯಮಿಯಾದ್ದರಿಂದ ಪುರವಂತರು ತಮ್ಮ ವಡಬುಗಳ ಮೂಲಕ 'ಅಹಹಾ ಸರ್ಪ' ಎಂದು ಅವನನ್ನು ಸಂಬೋಧಿಸುತ್ತಾರೆ. (ಡಾ. ಶ್ರೀ ಜಚನಿ: ಚಿಗುರಿಟ್ಟ ಚಿಂತನ, ಪು.೧೫೬) ಹಂಪೆಯ ಸಂದರ್ಭಕ್ಕೆ ಹೇಳುವುದಾದರೆ, ವಿರೂಪಾಕ್ಷನಿಗೆ 'ನಾಗನಾಥ' ಎಂಬ ಹೆಸರಿರುವುದು ಗಮನಾರ್ಹವಾಗುತ್ತದೆ. ಅದಾಗಿ ಬಹುಶಃ ಬೌದ್ಧ ಮೂಲವೊಂದು ನಾಥ ಹಾಗೂ ಜೈನ ಸಂಪ್ರದಾಯದ ಪ್ರಭಾವವನ್ನೂ ಹೊಂದಿ ರೂಪಾಂತರಗೊಂಡಿರುವ ಸಂದರ್ಭಗಳು ಇವಾಗಿರಲೂಬಹುದೆನಿಸುತ್ತದೆ. ಅಥವಾ ವಿಲೋಮವಾಗಿ ಶೈವ ಧರ್ಮದ ಪ್ರಭಾವವೆ ಬೌದ್ಧ ಮೂಲದ (ವಜ್ರಯಾನ?) ಶಿಲ್ಪವೊಂದರ ಮೇಲೆ ಬಿದ್ದು, ಶಿವಧರ್ಮದ ಶಿಲ್ಪವಾಗಿ ಆಡಕಗೊಂಡಿರಲೂ ಬಹುದು.

ಈ ಉದಾಹರಣೆಗಳನ್ನು ವಿಶ್ಲೇಷಿಸುವಲ್ಲಿ, ಬೌದ್ಧ ಪ್ರಭಾವವಿದ್ದ ಪ್ರದೇಶವಾದ ಬಳ್ಳಾರಿ, ಗುಲ್ಬರ್ಗ, ಬೆಳಗಾವಿ, ಬಿಜಾಪುರ, ಚಿತ್ರದುರ್ಗ ಜಿಲ್ಲೆಗಳ ಭಾಗಗಳಲ್ಲಿ ಈ ನಾಗಪಾದ ಶಿಲ್ಪಗಳು ಕಾಣಬರುತ್ತವೆ. ಕೆಲವೆಡೆ ಭೈರವ, ವೀರಭದ್ರ ಹಾಗು ವೀರಭದ್ರನ ಸೋದರಿ ಚೌಡವ್ವನ ಗುಡಿ ಬಳಿ ಪ್ರತ್ಯೇಕ ಶಿಲ್ಪವಾಗಿ ಕಾಣಬರುತ್ತವೆ. ಅಂದರೆ ಬೌದ್ಧ (ಸಿದ್ಧ)ರಿಂದ ಮೂಲಗೊಂಡು ನಂತರ ಶೈವ ಅವಧೂತ ವೀರಶೈವರಿಂದಾಗಿ ವೀರಭದ್ರ ಭೈರವದೊಡನೆ ಕಾಲಾಂತರದಲ್ಲಿ ಸಂಬಂಧ ಕಲ್ಪಿಸಿರುವಂತಿದೆ.

ಸಾಮಾನ್ಯವಾಗಿ ಬೇರೆಡೆಯಲ್ಲಿಯೂ ಕಾಣಬರುವಂತೆ ಕೊಡಗಿನ ಪಾದನಾಗಶಿಲ್ಪವೂ, ಅರಳುಕಮಲಪತ್ರದ ಮೇಲಿರುವುದರಿಂದ ತಾಂತ್ರಿಕ ಬೌದ್ಧದ ಸಂಬಂಧವನ್ನು ಹೊಂದಿರುವಂತಿದೆ. ಮಹಾಯಾನದಿಂದ ತಾಂತ್ರಿಕ ಬೌದ್ಧ ಅಥವಾ ಗುಹ್ಯಪರಂಪರೆ ಎನಿಸುವ ಮಂತ್ರಯಾನ ಉದಿಸಿತು. ಅದರ ಕವಲಾದ ವಜ್ರಯಾನವು ಮಹಾಯಾನ ಬೌದ್ಧದ ಅಂತಿಮ ಹಾಗೂ ಗುಪ್ತ ಸ್ವರೂಪವಾಗಿದೆ. ಬೌದ್ಧಧರ್ಮದ ಚೌಕಟ್ಟಿನಲ್ಲಿ ತಂತ್ರ ಒದಗಿದುದು ಬುದ್ಧನ ಕಾಲದಿಂದಲೇ ಎಂಬುದು ವಜ್ರಯಾನಿ ಪಂಥದವರ ನಂಬಿಕೆ.[22] ಅದೇನೇ ಇದ್ದರೂ ಬೌದ್ಧ ಧರ್ಮದ ಚೌಕಟ್ಟಿನಲ್ಲಿ ತಂತ್ರವನ್ನು ಅಳವಡಿಸುವ ಸಾಹಸವನ್ನು ಐತಿಹಾಸಿಕವಾಗಿ ಕ್ರಿ.ಶ. ೬-೧೨ನೆಯ ಶತಮಾನದವರೆಗೆ ಅಸ್ತಿತ್ವದಲ್ಲಿದ್ದ ಚತುರ ಶೀತಿಸಿದ್ಧರೂ ಅಂದರೆ ೮೪ ಬೌದ್ಧಸಿದ್ಧರ ಪೈಕಿ ಸರಹಪಾದನಿಂದ ಆಗಿ ವಜ್ರಯಾನ ರೂಪುಗೊಂಡಿತು.[23] ಶ್ರೀ ಶೈಲ ಪರ್ವತದ ಬಳಿ ಈ ಸಿದ್ಧರ ಪೈಕಿ ಇದ್ದ ಕೃಷ್ಣಪಾದ ಕಣಪಾ ಅಥವಾ ಕಣ್ಣಪ್ಪ ಎಂಬುವನು ಕರ್ನಾಟಕದ ಮೂಲದವರಾಗಿದ್ದವರು ಪ್ರಸ್ತುತ ಲಭ್ಯ ಶಿಲ್ಪದ ಅಸ್ತಿತ್ವಕ್ಕೆ ಹೇಗೆ ಈ ಅಂಶಗಳಲ್ಲಿ ಪೋಷಕವಾಗುತ್ತವೆ ಎಂಬ ಕಾರಣದಿಂದಾಗಿ ಸ್ಥೂಲವಾಗಿ ಹೇಳಲಾಗಿದೆ, ಅಷ್ಟೆ.

ಮೊದಲನೆಯದಾಗಿ ಕೇರಳದ ಗಡಿಗೆ ಹೊಂದಿಕೊಂಡ ಗಿರಿಶ್ರೇಣಿಯ ಬದಿಗೆ ಮಂಚಳ್ಳಿಗ್ರಾಮವಿದ್ದು ಕೊಡಗು-ಕೇರಳಗಳಿಗೆ ಸುಲಭವಾಗಿ ದಾಟಿಬರುವ ಹಾದಿಯ ಗ್ರಾಮವಾಗಿದೆ. ಕೇರಳದಲ್ಲಿ ಜೈನ ಹಾಗು ಬೌದ್ಧಧರ್ಮ ಪ್ರಸಾರವಿದ್ದುವು. ಅವುಗಳಲ್ಲಿನ ಆರಾಧನಾ ಕೇಂದ್ರಗಳಿಗೆ 'ಪಳ್ಳಿ' ಹಾಗು ಬೋಧನಾಕೇಂದ್ರಗಳಿಗೆ, 'ಎಜತುಪಳ್ಳಿ' ಎಂಬ ಹೆಸರುಗಳಿದ್ದುವು.[24] ಇಂದಿಗೂ ಕೊಡಗಿನಲ್ಲಿ 'ಪಳ್ಳಿ'ಯು ಅನೇಕ ಆರಾಧನಾ ಕೇಂದ್ರಗಳ ಹೆಸರಾಗಿರುವುದಿದೆ. ನಾಗವರ್ಮನು ಕರ್ನಾಟಕ ಕಾದಂಬರಿಯಲ್ಲಿ 'ಮಾತಂಗರ ಪಳ್ಳಿ' ಎಂದೂ ಬಳಸಿದ್ದಾನೆ. ಕೇರಳದ ಪದ್ಮನಾಭಪುರದ ಬಳಿಯ ಮನಲಿಕ್ಕರ ಮಠದಲ್ಲಿ 'ವಜ್ರಯಾನ'ದ ಮೂಲ ಗ್ರಂಥಗಳಲ್ಲಿ ಒಂದಾದ ಮಂಜು ಶ್ರೀ ಹಾಗು ಬೋಧಿಸತ್ವರ ಪೂಜಾವಿವರಗಳಿರುವ ಮಂಜುಶ್ರೀ ಮೂಲ ಕಲ್ಪದ ಹಸ್ತಪ್ರತಿ ದೊರೆತಿದೆ.[25] ಇವುಗಳ ತಾಂತ್ರಿಕ ಆಚರಣಾ ವಿಷಯಗಳ ಪ್ರಭಾವ ಕೊಡಗಿನಲ್ಲಿ ಸಹಜವಾಗಿ ಆಗಿರುವಂತಿದೆ. ಎರಡನೆಯದಾಗಿ ಕೊಡಗಿನಲ್ಲಿ 'ಗುಹ್ಯ' ಎಂಬ ಸ್ಥಳನಾಮವೂ ಇರುವಂತೆ, 'ಮಂಚಳ್ಳಿ' ಎಂಬ ಪ್ರಸ್ತುತ ಶಿಲ್ಪದ ನೆಲೆಯ ಸ್ಥಳನಾಮವೂ ವಜ್ರಯಾನ ಪ್ರಭಾವಿತ ಮಂಜುಗುಳಿ,

---

21. ಈ ಶಿಲ್ಪವನ್ನು ಹೋಗಿ ನೋಡಲು ನೆರವಾದವರು ಡಾ. ಮೃತ್ಯುಂಜಯ ರುಮಾಲೆ.
22. ಎಸ್. ಕೆ. ರಾಮಚಂದ್ರರಾವ್ : 'ಟಿಬೆಟ್ಟಿನಲ್ಲಿ ತಾಂತ್ರಿಕ ಸಂಪ್ರದಾಯ', ಶ್ರೀಕಂಠತೀರ್ಥ, ಬೆಂಗಳೂರು, ೧೯೭೬, ಪು. ೮೦೪
23. ಮ.ಸು. ಕೃಷ್ಣಮೂರ್ತಿ : 'ನಾಥಪಂಥ', ಶ್ರೀಕಂಠತೀರ್ಥ, ಅದೇ, ಪು.೮೨೧, ೮೩೧
24. K. Mammen : Kerala culture, Trivandrum, 1942,p.154
25. ಎಸ್. ಕೆ. ರಾಮಚಂದ್ರರಾವ್ : ಅದೇ, ಪು. ೮೦೫

ಮಂಜಲ್ತೊಣೆ ಇತ್ಯಾದಿ ಸ್ಥಳನಾಮಗಳಂತೆ ಗಮನಾರ್ಹವಾಗುತ್ತದೆ. ಈ ದೃಷ್ಟಿಯಿಂದ ಮಂಜುಪಳ್ಳಿ > ಮಂಜುವಳ್ಳಿ > ಮಂಜಳ್ಳಿ > ಮಂಚಳ್ಳಿ ಎಂಬ ರೂಪಾಂತರಗಳಾಗಿರಬಹುದೆನಿಸುತ್ತದೆ. ಕೊಡಗಿನ ಸೂರ್ಲಬಿ ಮುಟ್ಲು ಗ್ರಾಮದಲ್ಲಿ (ಮಂಜುಳು) ಮಂಜುನಾಥನ ನೆಲೆಯೂ ಇದೆ. ಪ್ರಾಕೃತ ಶಾಸನದ ಶಬ್ದವಾದ 'ಪನುಮಸ' ದಿಂದ 'ಪೆರ್ಮಾಡಿ' ಶಬ್ದ ಸಿದ್ಧಿಸುತ್ತದೆ ಎಂಬ ವಾದವೂ ಇದೆ. ಅದನ್ನೊಪ್ಪಿದರೆ, ದಕ್ಷಿಣ ಕೊಡಗಿನ ೯ನೇ ಶತಮಾನದ ಕೋತೂರು (ಮಂಚಳ್ಳಿಯಿಂದ ಸುಮಾರು ೧೦ ಮೈಲಿ) ಶಾಸನದಲ್ಲಿ ಬರುವ 'ಪೆರ್ಮಡಿವಟ್ಟಂ' ಎಂಬ ಶಬ್ದ[26] ಬೌದ್ಧ ಮೂಲದ್ದಿರಬಹುದೆ? ಎನಿಸುತ್ತದೆ.

ಮುಂದಿನದಾಗಿ, ಈ ಪಾದನಾಗ ಶಿಲ್ಪದ ಸನಿಹದಲ್ಲಿ ನಗ್ನ ಭೈರವನೆಂದು (ಜಮಾಬಂದಿಯಲ್ಲಿ ಭೈರವ ದೇವರ ಕಾಡು ಎಂದು ಈ ನೆಲೆಗೆ ನಿರ್ದೇಶನವಿದೆ) ಗ್ರಾಮೀಣರು ಆರಾಧಿಸುವ ಭಿನ್ನ ಶಿಲ್ಪ ಏದೆ. ಈ ಶಿಲ್ಪವನ್ನು 'ಕೋಟೆಚಾ ವುಂಡಿ' ಎಂದೂ ಗ್ರಾಮೀಣರು ಸಾಂಪ್ರದಾಯಿಕ ಮಾರ್ಪಾಡು ಗಳ ಪ್ರಭಾವವನ್ನೂ ಅಳವಡಿಸಿಕೊಂಡು ಕರೆಯುತ್ತಾರೆ.

ಈ ಗ್ರಾಮದ ನೆರೆಗಿರುವ ಕುರ್ಚಿಗ್ರಾಮದಲ್ಲಿ 'ಗಂಧರ್ವಭೈರವ' ನೆನಿಸಿಕೊಳ್ಳುವ ಮೂರ್ತಿ ಶಿಲ್ಪವಿತ್ತು. ಗಂಧರ್ವ, 'ಯಕ್ಷ', ಇವರೆಲ್ಲ ದೇವಜಾತಿಯವರು ಎಂಬ ನಂಬಿಕೆ ಗ್ರಾಮೀಣರಲ್ಲಿದೆ. ಬಹುಶಃ ಈ ಕಾರಣದಿಂದಲೋ ಏನೋ, ಬೌದ್ಧ ಮೂಲದಲ್ಲಿಯೂ ಬರುವ ಯಕ್ಷ ಮೂರ್ತಿಯನ್ನು 'ಗಂಧರ್ವ ಭೈರವ'ನೆಂದು ಅವರು ಇಲ್ಲಿ ಸಮೀಕರಣಗೊಳಿಸಿಕೊಂಡಿರಬಹುದೆ? ಕುರ್ಚಿ ಗ್ರಾಮದ ಗುಡಿಯಲ್ಲಿ ಇಂದು ಮೂಲಮೂರ್ತಿಯಂತು ಕಾಣಬರದು. ಆದರೆ ಕೊಡಗು ಜಿಲ್ಲಾ ಗ್ಯಾಸೆಟಿಯರ್[27] ಉತ್ಸವ ಮೂರ್ತಿಯ (ಲೋಹಶಿಲ್ಪ) ಗಂಧರ್ವ ಭೈರವನ ಅಶ್ವಾರೋಹಿ ಚಿತ್ರಗಳನ್ನು ನೀಡಿದೆ. ಅವು ಕೇರಳ ಶೈಲಿಯ ಶಿರಮುಡಿ ದಪ್ಪ ಹೊಟ್ಟೆಯ ಯಕ್ಷ (ಸ್ತನ ಲಕ್ಷಣವುಳ್ಳ ಧರ್ಮದೇವತೆ ಯಕ್ಷಿ?) ಹಾಗು ಜಟಾಧರ, ಖಡ್ಗಧಾರಿ, ಸ್ಥಾನಕ ಮೂರ್ತಿಗಳಂತೆ ತೋರುತ್ತವೆ. ಅವು ಬೌದ್ಧ ಮೂಲದ ಯಕ್ಷ-ಯಕ್ಷಿಯರೋ ಅಥವಾ ವೀರಭದ್ರ, ಭದ್ರಕಾಳಿಯರ, ರೂಪಾಂತರಿತ ಶಿಲ್ಪಗಳೋ ಎಂಬುದು ಸ್ಪಷ್ಟವಿಲ್ಲ. ಪ್ರಸ್ತುತ ವಿವೇಚನೆಯ ಹಿನ್ನೆಲೆಯಲ್ಲಿ ಕೇರಳ ಕೊಡಗುಗಳ ನಡುವಣ ಬೌದ್ಧ-ಜೈನ-ಶೈವ ಪ್ರಭಾವದ ಸಂಕೇತಗಳಾಗಿ ಅವು ಇಂದಿಗೆ ಕಾಣುತ್ತಿರಬಹುದೆ? ಎನಿಸುತ್ತದೆ. ಬೆಳ್ಳಿಯ ಮೂರ್ತಿ ಶಿಲ್ಪದ ಕೈಗಳಲ್ಲಿ ಖಡ್ಗ, ಹಲಗೆ, ಕಪಾಲಗಳು ಕಾಣಬರುತ್ತವೆ. ರುಂಡಮಾಲಾಧರ, ದಿಗಂಬರನಾಗಿದ್ದು ಹಣೆಗಣ್ಣು (ಫಾಲಮೂರ್ತಿ), ಕೋರೆದಾಡೆ, ಮೇಲ್ಮುಖ ಮೀಸೆ, ನಾಗಕುಂಡಲ ಇತ್ಯಾದಿಗಳು ಕಾಣಬರುತ್ತವೆ. ಶಿರೋವೇಷವೂ ವಿಶಿಷ್ಟ ಬಗೆಯದಾಗಿ ಕಾಣುತ್ತದೆ. ಶಿಲ್ಪವು ಬಹಳಷ್ಟು ಭಿನ್ನ ಭಾಗಗಳನ್ನು ಹೊಂದಿರುವ ಕಾರಣ ಸ್ಥೂಲವಾಗಿ ಇಷ್ಟನ್ನು ಗುರುತಿಸಬಹುದಾಗಿದೆ ಈ ಶಿಲ್ಪವು ನೋಡುವುದಕ್ಕೆ ಪ್ರಾಥಮಿಕವಾಗಿ ಗ್ರಾಮೀಣರ 'ಭೈರವ'ನೆಂದು ಕಾಣಬಹುದು. ಆದರೆ ಬೌದ್ಧ ಮೂಲದ ಇತರ ಅವಶೇಷ ಸಂದರ್ಭಗಳಿಂದಾಗಿ ಅವಲೋಕಿತೇಶ್ವರನಾಗಿರಬಹುದೇ? ಎಂಬ ಅನುಮಾನವೂ ಮುಂದಾಗುತ್ತದೆ.

ಆಗಾಮಿ ಬುದ್ಧರಾದ ಬೋದಿಸತ್ವರಲ್ಲಿ ಒಬ್ಬನಾದ ಅವಲೋಕಿತೇಶ್ವರ ಸಾಮಾನ್ಯವಾಗಿ ಸೌಮ್ಯ ಮುಖ ಮುದ್ರೆ ಜನಪ್ರಿಯ ಮೂರ್ತಿ. ಆದರೆ ಅವನ ಉಗ್ರರೂಪದ 'ಮಾಯಾಜಾಲಕ್ರಮ ಅವಲೋಕಿತೇಶ್ವರ' ಮೂರ್ತಿ ಇದ್ದು, ಕಪಾಲ, ಡಮರು, ಖಟ್ವಾಂಗ, ಅಂಕುಶ, ಪಾಶ ಇತ್ಯಾದಿ ಆಯುಧಗಳನ್ನೂ ಹೊಂದಿರುತ್ತದೆ. ದಿಂಗಬರ, ತ್ರಿನಯನ, ಕಪಾಲಮಾಲಾಧರ, ಕೋರೆ ದಾಡೆ ಹೊಂದಿದ ಮೂರ್ತಿ ಆಗಿರುತ್ತದೆ. ಅಂದರೆ ಇಲ್ಲಿ ಶೈವ ಪ್ರಭಾವ ಸೂಚಿತವಾಗುತ್ತದೆ. ತಾಂತ್ರಿಕ ಶೈವದ ಪ್ರಭಾವದಿಂದ ವಜ್ರಯಾನ ಉಗಮ ಎನ್ನಲೂ ಅನುವಾಗುತ್ತದೆ. ಈ ಲಕ್ಷಣಗಳು ಪ್ರಸ್ತುತ ಶಿಲ್ಪದಲ್ಲಿರುವ ಕಾರಣ ಮೊದಲಿಗೆ ಬೌದ್ಧಮೂಲದ 'ಮಾಯಾಜಾಲ ಕ್ರಮ ಅವಲೋಕಿತೇಶ್ವರ' ಮೂರ್ತಿ ಇದಾಗಿದ್ದು ನಂತರ ಭೈರವನೆಂದು ಪ್ರಚಲಿತಗೊಂಡಿರಬಹುದೆನಿಸುತ್ತದೆ. ಬೌದ್ಧಸಿದ್ಧರು ಕಾಲಕ್ರಮೇಣ ನಾಥ'ಪಂಥ'ದ ಶೈವ ಅವಧೂತರಾಗಿ ನಂತರ ವೀರಶೈವದಲ್ಲಿ ಐಕ್ಯವಾದರು ಎಂದೂ ಹೇಳಲಾಗಿದೆ.[28] ಇದಲ್ಲದೆ ನಾಥಸಂಪ್ರದಾಯದ ಗುರು ಪೀಠವಾದ ಬಂಟ್ವಾಳ ತಾಲೂಕು ವಿಟ್ಲದ ಯೋಗೀಶ್ವರ ಮಠದ ಪ್ರಧಾನದೇವರು ಶ್ರೀ ಮಂಜುನಾಥ. ಉಪದೇವರಾಗಿ ಇರುವ ಶ್ರೀ ಕಾಶೀಕಾಳ ಭೈರವೇಶ್ವರ, ಪಿಲಿಚಾವುಂಡಿ ಕಲ್ಲುರ್ಟಿ ಮತ್ತು ಕಲ್ಕುಡ ಅವರಿಗೆ ಪ್ರತ್ಯೇಕ ಮಂದಿರದಲ್ಲಿ ಆರಾಧನೆ ನಡೆಯುತ್ತದೆ. ಈ ಅಂಶವೂ ಬೌದ್ಧಮೂಲದ ಸಂದರ್ಭಗಳು

---

26. ಎ.ಕ.೧ (ಹೊಸತು), ಕೊಡಗು ಜಿಲ್ಲೆ, ಅದೇ, ಕೋತೂರು ೯೭ (೩)

ಸ್ವೀಕೃತ ಗೊಂಡ ಸಂಗತಿಯನ್ನು ಸೂಚಿಸುವಂತಿದೆ. ಇದು ಬೌದ್ಧ ಸಿದ್ಧರಲ್ಲಿ ಪ್ರಚಲಿತವಾಗಿತ್ತು ಎಂದರೆ, ಅವರಲ್ಲಿ ಅನೇಕರು ಕೆಳವರ್ಗದಿಂದ ಬಂದವರೆಂದು, ಜಾತೀಭೇದ ವಿರೋಧಿ ಗಳೆಂದೂ ಹೇಳುವುದಿದೆ. ಬಹುಶಃ ಈ ಕಾರಣವಾಗಿಯೂ ದಲಿತವರ್ಗದಲ್ಲಿ ಇಂದಿಗು ಪಿ(ಪು)ಲಿ ಚಾವುಂಡಿಯು ಜಾನಪದ ಆರಾಧನೆಗೆ ಅನುವಾಗಿದೆ ಎನಿಸುತ್ತದೆ.[29]

ಒಟ್ಟಿನಲ್ಲಿ ವಜ್ರಯಾನದಲ್ಲಿ ಸ್ತ್ರೀ-ಪುರುಷತತ್ವಗಳ ಮೈಥುನ ಅಥವಾ ಕಾಮಕಲೆಗೆ ಪ್ರಾಮುಖ್ಯವಿರುವುದರಿಂದ, ಹಾಗು ಪೂಜೆಗೂ ಪ್ರಾಮುಖ್ಯವಿರುವುದರಿಂದ[30] ಪ್ರಸ್ತುತ ಪಾದ ನಾಗಶಿಲ್ಪವು, ಸರ್ಪಸಂಕೇತದಿಂದ ಮಿಥುನವನ್ನು ಸೂಚಿಸಿ ಫಲಂತಿಕೆಯ ಪ್ರತೀಕವಾಗಿರುವಂತಿದೆ. ಬೌದ್ಧಸಿದ್ಧರು ತಿಬೆಟ್ಟಿಗೆ ಹೋಗಿ ಪ್ರಸಿದ್ಧರಾದಂತೆ, ಕನ್ನಡ ಮೂಲದ ಬೌದ್ಧಸಿದ್ಧರು ಕರ್ನಾಟಕದಲ್ಲಿ ಬುದ್ಧಪಾದನಾಗ ಶಿಲ್ಪದಲ್ಲಿ ಕಮಲ, ತ್ರಿಶೂಲ, ಸ್ವಸ್ತಿಕ ಸಂಕೇತಗಳಿರುವ ಶಿಲ್ಪವನ್ನು ಪ್ರಚುರಗೊಳಿಸಿರುವಂತಿದೆ. ಬುದ್ಧನಿಗೆ ಮುಚಲಿಂದ ನಾಗ ಸುತ್ತು ರಕ್ಷಣೆ ನೀಡಿದ್ದರಿಂದ ಮುಚಲಿಂದಬುದ್ಧಪಾದ ನಾಗಶಿಲ್ಪವಾಗಿ ಕ್ರಿ.ಪೂರ್ವದ ಸಂಕೇತವನ್ನು ಪೂಜೆಗೆ ಕ್ರಿ.ಶ. ೬ನೇ ಶತಮಾನದಲ್ಲಿ ಬೌದ್ಧಸಿದ್ಧರು ಹೆಚ್ಚು ಪ್ರಚಲಿತ ಗೊಳಿಸಿದಂತೆ ತೋರುತ್ತದೆ. ಅವರು ಶೈವ ಅವಧೂತರಾಗಿ ವೀರಶೈವದಲ್ಲಿ ಐಕ್ಯರಾದರೆನ್ನುವುದಾದರೆ ಆ ಹೊತ್ತಿಗೆ ವೀರಭದ್ರ ಹಾಗು ಭೈರವ ಪೂಜಾ ನೆಲೆಗಳಲ್ಲಿ ಆ ಶಿಲ್ಪಗಳು ಜನತೆಯಿಂದ ಮಾನ್ಯಗೊಂಡಿರಬೇಕು. ಸಂಚಾರಕ್ಕೆ ತೀರ ಹತ್ತಿರವಾಗಿರುವ ಕೇರಳ ಹಾಗು ಕೊಡಗುಗಳಲ್ಲಿಯೂ ಬೌದ್ಧಸಿದ್ಧರು, ವಜ್ರಯಾನ ಪಂಥವನ್ನು ಪ್ರಚುರಗೊಳಿಸು ವಲ್ಲಿ ಅನುಗುಣ ಸಾಹಿತ್ಯದ ಹಸ್ತಪ್ರತಿಗಳನ್ನು ಶಿಲ್ಪಗಳನ್ನು ಅವಲೋಕಿತೇಶ್ವರ ರೂಪಗಳನ್ನು ಜನರಲ್ಲಿ ಬಳಕೆಗೆ ತಂದಿರಬೇಕು. ಇಂತಾದರೆ ಕೊಡಗಿನಲ್ಲಿಯೂ ಬೌದ್ಧ ಧರ್ಮದ ಪ್ರಚಾರ ಅದರ ದಕ್ಷಿಣ ಭಾಗದಲ್ಲಿ ಜೈನಧರ್ಮದ ಪ್ರಚಾರಕ್ಕೆ ಮುನ್ನಾವೋ ಅಥವಾ ಸಮಕಾಲೀನವಾಗಿಯೋ ಬೌದ್ಧ ಸಿದ್ಧರಿಂದ ಕ್ರಿ.ಶ. ೬ನೇ ಶತಮಾನದಲ್ಲಿರಬಹುದು. ಅದಕ್ಕೆ ಮಂಚಳ್ಳಿ ಎಂಬ ಸ್ಥಳನಾಮ, ಮುಚಲಿಂದ ಬುದ್ಧ ಪಾದನಾಗಶಿಲ್ಪ, ಮಾಯಾಜಾಲಕ್ರಮ ಅವಲೋಕಿತೇಶ್ವರ (ಇಂದಿನ ಭೈರವ), ಹಾಗು 'ಗುಹ್ಯ' ಎಂಬ ಸ್ಥಳನಾಮವೂ ಸಾಕ್ಷಿ ಹೇಳಬಹುದೆನ್ನಿಸುತ್ತದೆ. ಅಲ್ಲದೆ ಪಾದನಾಗಶಿಲ್ಪವನ್ನು ಮಂಚಳ್ಳಿಯ ಗ್ರಾಮೀಣರು 'ಮಕ್ಕಳಪಾದ' ಎಂದು ಪೂಜಿಸುವುದು ಅವರ ಒಳ ಆಕಾಂಕ್ಷೆಯ ಒಂದು ಮುಖವಾಗಿರಬಹುದೆನಿಸುತ್ತದೆ.

ಬೌದ್ಧಸಿದ್ಧರಲ್ಲಿ ಆದಿ ಪ್ರಮುಖರಲ್ಲಿ ಗೋರಖ ನಾಥನೂ ಒಬ್ಬನಾಗಿರುವ ಕಾರಣ ಬೌದ್ಧ ತಾಂತ್ರಿಕ ಮೂಲದ ಈ ಶಿಲ್ಪದ ಮೇಲೆ ನಾಥಸಂಪ್ರದಾಯವೂ ಪ್ರಭಾವ ಬೀರಿರಬಹುದು. ಅಂತಾಗಿ ತ್ರಿಶೂಲ, ಹಾಗು ನಾಗ ಶಿಲ್ಪಗಳೂ ಪಾದಗಳ ಜೊತೆಯಲ್ಲಿಯೋ ಅಥವಾ ಸ್ವಸ್ತಿಕದ ಜೊತೆಯೋ ಸಹವಾಗಿ ಬಂದಿರುವಂತಿದೆ. ಶಾಕ್ತೇಯ ಪ್ರಭಾವವು ಅಳವಡಿಕೆಯಾಗಿರಬಹುದೆನಿಸುತ್ತದೆ.

**ಅನ್ವಯಿಕ ಪರಿಣಾಮಗಳು**

ಕೆಲವು ಜೈನ ಯಕ್ಷರಲ್ಲಿ ದಪ್ಪ ಹೊಟ್ಟೆ ಒಂದು ಲಕ್ಷಣ. ಬಹುಶಃ ಉತ್ತರ ಕೊಡಗಿನ ನಾಲಡಿಗ್ರಾದಲ್ಲಿ ಪರದಂಡ ಮನೆತನದಲ್ಲಿ 'ಧರ್ಮದೇವತೆ' ಎಂಬ ದಪ್ಪ ಹೊಟ್ಟೆಯ ಶಿಲ್ಪಕ್ಕೆ (ಯಕ್ಷ) ಪೂಜಾದಿಗಳುಂಟು. ಈ ಮನೆತನ ಕೇರಳದಿಂದ ಕೊಡಗಿಗೆ ಬಂದುದಾಗಿದೆ. ಈ ಗ್ರಾಮದ ಪೂರ್ವದ ನಾಪೋಕ್ಲು ಬೇತುಗ್ರಾಮದಲ್ಲಿ ದಲಿತ ಕೆಂಬಟ್ಟಿಗಳಲ್ಲಿ 'ಪಳ್ಳಿವಿಯ್ಯಪ್ಪ'ನ ಆರಾಧನೆ ಇದೆ. ಹಾಗು ಶಾಸನಗಳಲ್ಲಿ ನಿಸದಿಶಿಲ್ಪದ ಬಾಗಿಲಿನ ರಚನೆಯಂತೆ, ಈ ವೀಯ್ಯಪ್ಪನ ಪರಿವಾರ ದೇವತೆ ಚಾಮುಂಡಿ ನೆಲೆಯಲ್ಲಿ ಬಿದಿರುಕಡ್ಡಿ ಬಾಗಿಲು ನಿಲ್ಲಿಸಿ ಸಾತ್ವಿಕ ಮೀದಿ (ಎಡೆ) ಇಡುವ ವಿಭಾಗ ತೋರಿಸಲಾಗುತ್ತದೆ. ಬೇತುವಿನ ಮುಕ್ಕಿಶಾಸ್ತಾವು (ಅಯ್ಯಪ್ಪ) ಕೇರಳದಿಂದ ಕೊಡಗಿಗೆ ಕರೆದು ತಂದವರು ಮೊದಲು ಜೈನರಾಗಿದ್ದ ಇಂದಿನ ಕೊಡವ ಕೊಂಡಿರ ಮನೆತನದವರಾಗಿದ್ದಾರೆ. ಇದನ್ನು ನೋಡಿದರೆ 'ಶಾಸ್ತಾವು' ಸಹ ಮೊದಲಿಗೆ ಜೈನಯಕ್ಷ ಅಥವಾ ವೃಷಭನಾಥನ ಒಂದು

---

27. ಕೊಡಗು ಜಿಲ್ಲಾ ಗ್ಯಾಸೆಟಿಯರ್ : (ಸಂ) ಸೂರ್ಯನಾಥ ಯು. ಕಾಮತ್, ಬೆಂಗಳೂರು ೧೯೬೩ ಪು. ೩೧
28. ಎಸ್. ಕೆ. ರಾಮಚಂದ್ರರಾವ್ ; ಮೂರ್ತಿಶಿಲ್ಪ ನೆಲೆ-ಹಿನ್ನೆಲೆ, ಅದೇ, ಪು. ೩೧೪
29. ಡಾ. ತಾಳ್ತಜೆ ವಸಂತಕುಮಾರ್ : ಕರ್ನಾಟಕದಲ್ಲಿ ಬೌದ್ಧ ಸಂಸ್ಕೃತಿ, ಬೆಂಗಳೂರು, ೧೯೮೮, ಪು. ೧೬೦, ೧೮೪
30. ಎಸ್. ಕೆ.ರಾಮಚಂದ್ರರಾವ್ : ಅದೇ, ಪು. ೩೦೭
31. ಬಂಟ್ವಾಳ-ವಿಟ್ಲದ ಶ್ರೀ ಯೋಗೀಶ್ವರ ಮಠದ ಶ್ರೀ ಮಂಜುನಾಥ ದೇಗುಲ : ಪ್ರಜಾವಾಣಿ (೮-೩-೧೯೯೬)



(ಮಚಲಿಂದಬುದ್ಧ !)ಪಾದನಾಗ ಶಿಲ್ಪ ಫಲಕ, ಮಂಚಳ್ಳಿ



ಮಾಯಾಜಾಲ ಕ್ರಮ ಅವಲೋಕಿತೇಶ್ವರ (?) ಮಂಚಳ್ಳಿ



ಚತುರ್ವಿಂಶತಿ ತೀರ್ಥಂಕರರ ಶಿಲ್ಪ, ಶಿಲಾಫಲಕ
ಅರಮೇರಿ(ಭಗವತಿ ದೇಗುಲದಲ್ಲಿ)

ರೂಪವಿರಬಹುದೇ ಎನಿಸುತ್ತದೆ. ಚಾಮುಂಡಿ ಇಂದು ಆಹಾರ ದೇವತೆಯಾಗಿ ಕೊಡವರು ಹಾಗು ದಲಿತ ಕೆಂಬಟ್ಟಿಗಳಲ್ಲಿ ಆರಾಧನೆಗೊಳ್ಳುವ[32] ಹಾಗು 'ತೆರೆ' ಕಟ್ಟಿಸಿಕೊಳ್ಳುವ ದೈವವಾಗಿದೆ. ಸುಗ್ಗಿಕಟ್ಟೆ ಹಬ್ಬಗಳಲ್ಲಿ ಜೈನಿಗರಾಗಿದ್ದು ಇಂದು ಗೌಡಜನಾಂಗದ ವಡೆಕಾರರಾಗಿ ಬಾಯಿಗೆ ಬಟ್ಟೆಕಟ್ಟಿಕೊಂಡು ಸಬತಾಯಿ (ಸುಗ್ಗಿದೇವತೆ ಪಾರ್ವತಿ)ಯ ಆರಾಧನೆ ನಡೆಸುತ್ತಾರೆ. ಈ ಸಂದರ್ಭದಲ್ಲಿ ಲೊಕ್ಕಿ (ಲಕ್ಕಿ) ಸೊಪ್ಪು ಹಾಗು ಹೂವುಗಳನ್ನು ವಿಶೇಷ ಹರಕೆಯಾಗಿ 'ಮೊದ್ನೆ' (ಮೊದಲಿನವ-ಆದಿನಾಥ?) ಎಂಬ ಮೃದಂಗ ಸ್ವರೂಪದ ಪ್ರತೀಕಕ್ಕೆ ಸಲ್ಲಿಸಿ, ಪ್ರಸಾದವಾಗಿ ಪಡೆಯುತ್ತಾರೆ. ಇವೆಲ್ಲ ಜೈನ ಹಾಗು ಬೌದ್ಧ ಧರ್ಮದ ಪ್ರಭಾವಗಳು ಸಾಂಸ್ಕೃತಿಕ ಚಾಲನೆಯನ್ನು ಕೊಡಗಿನ ಜನತೆಯಲ್ಲಿ ಆ ಧರ್ಮಗಳನ್ನು ಎಲ್ಲರೂ ಅನುಸರಿಸದಿದ್ದರೂ, ಹೇಗೆ ಪರ್ಯಾಯರೂಪದಲ್ಲಿ ಹಾಸು ಹೊಕ್ಕಾಗಿಸಿವೆ ಎಂಬುದನ್ನು ನಿದರ್ಶಿಸಿವೆ ಎನ್ನಬೇಕು, ಸಾಂಸ್ಕೃತಿಕ ಇತಿಹಾಸವನ್ನು ಬದಲಾದ ರೂಪದಲ್ಲಿಯಾದರೂ ಸಂರಕ್ಷಿಸಿವೆ ಎನ್ನಬೇಕು. ○

32. ಎಂ. ಜಿ. ನಾಗರಾಜ್ : ಕೆಂಬಟ್ಟಿ ಸಂಸ್ಕೃತಿ, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು ೧೯೯೩, ಪು. ೪೯೭-೫೦೧

ವಕುಮಾರ್ ಸುಬ್ಬಯ್ಯ *

# ಒಂದು ಅಪೂರ್ವ ಮಾತೃ ಶಿಲ್ಪ

೧

ನೆಗವಾಡಿ ಸುಮಾರು ೧೫೦ ಮನೆಗಳಿರುವ ಒಂದು ಹಳ್ಳಿ. ಶಿರಾಳ ಕೊಪ್ಪದಿಂದ ಆನವಟ್ಟಿಗೆ ಹೋಗುವ ದಾರಿಯಲ್ಲಿ ಇಳಿದು ಸುಮಾರು ೨ ಕಿ.ಮೀ. ಪಶ್ಚಿಮಕ್ಕೆ ನಡೆದರೆ ನೆಗವಾಡಿ ಸಿಗುತ್ತದೆ. ಈ ಊರ ಹೊರಗೆ ಇರುವ ಪ್ರಸ್ತುತ ಶಿಲ್ಪದ ವಿಚಿತ್ರ ಸಂವಿಧಾನವನ್ನು ಕಂಡು ಐತಿಹಾಸಿಕವಾಗಿ, ಧಾರ್ಮಿಕವಾಗಿ, ಜಾನಪದೀಯವಾಗಿ, ಭಾಷಾಶಾಸ್ತ್ರದ ಕೋನಗಳಿಂದ ಗಮನಿಸಿ, ಅಪರೂಪದ ಈ ಸಂಗತಿಯನ್ನು ತಮ್ಮ ಗಮನಕ್ಕೆ ತರುತ್ತಿದ್ದೇನೆ.

ಕಲ್ಲಿನ ಈ ಶಿಲ್ಪದ ಗರಿಷ್ಟ ಎತ್ತರ ೩೬ ಇಂಚುಗಳು, ಅಗಲ ಗರಿಷ್ಟ ೪೮ ಇಂಚುಗಳು. ದಪ್ಪ ೫ ಇಂಚುಗಳು. ತಳಭಾಗ ಅಗಲವಾಗಿದ್ದು ಮೇಲಕ್ಕೆ ಹೋದಂತೆ ಕಿರಿದಾಗಿದೆ. ಅಧ್ಯಯನದ ಅನುಕೂಲಕ್ಕಾಗಿ ಇಡಿಯ ಶಿಲಾಫಲಕವನ್ನು ಮೂರು ವಿಭಾಗ ಮಾಡಿಕೊಳ್ಳಬಹುದು. ಫಲಕದ ಮಧ್ಯಭಾಗ, ಎಡಭಾಗ, ಬಲಭಾಗ. ಶಿಲ್ಪದ ಮಧ್ಯ ಭಾಗದಲ್ಲಿ ಮೇಲು ನೋಟಕ್ಕೆ ಲಜ್ಜಾಗೌರಿ ಎನ್ನಿಸುವ ನಗ್ನ ಸ್ತ್ರೀಯ ಶಿಲ್ಪವಿದೆ. ನೀಳವಾದ ಮುಖ, ದೊಡ್ಡಗಲ್ಲ, ದೊಡ್ಡ ಕಣ್ಣುಗಳು, ದಪ್ಪ ಮೂಗು, ದೊಡ್ಡಕುಂಡಲಗಳು ಕಿವಿಗಳಲ್ಲಿ (ಪ್ರಾಯಶ: ಕವಡೆ), ಎತ್ತರವಾದ ಕಿರೀಟ, ಸೌಮ್ಯವಲ್ಲದ ಮುಖಭಾವ. ಮುಖದ ಮತ್ತು ದೇಹದ ಅವಯವಗಳು ಸೂಕ್ಷ್ಮ ಕೆತ್ತನೆಗೆ ಒಳಗಾಗಿಲ್ಲ. ಕತ್ತಿನಲ್ಲಿ ಹಾರ, ಅಸ್ಪಷ್ಟವಾಗಿ ತೋಳಬಂದಿ, ಬಳೆಗಳು, ಸುಪುಷ್ಟ ಸ್ತನಗಳು, ಕಿರಿದಾದ ಟೊಂಕ. ಈಕೆ ಕಾಲನ್ನು ಅಗಲಿಸಿ 'ವಿಪರೀತ ರತಿಯ ಆಸನ'ದಲ್ಲಿ ಕುಳಿತಿದ್ದಾಳೆ ಅಥವಾ ಮಲಗಿದ್ದಾಳೆ. ಇವೆರಡರ ನಡುವಿನ ವ್ಯತ್ಯಾಸ ಸ್ಪಷ್ಟವಿಲ್ಲ. ತನ್ನೆರಡು ಕೈಗಳಿಂದಲೂ ಎರಡು ತೊಡೆಗಳನ್ನು ಅಗಲಿಸಿ ಕೂಟಕ್ಕೆ ಆಹ್ವಾನಿಸುವ ಭಂಗಿಯಲ್ಲಿ ಇದನ್ನು ಕೆತ್ತಲಾಗಿದೆ. ಸಹಜತೆಗೆ ಗಮನ ಕೊಡುವ ಉದ್ದೇಶದಿಂದಲೋ ಏನೋ ಜನನಾಂಗದ ಭಾಗಗಳನ್ನು ಉಬ್ಬಿಸಿ ಕಂಡರಿಸಲಾಗಿದೆ.

ಯೋನಿಭಾಗದ ಕೆಳಗೆ ಎಂಟು ದಳಗಳಿರುವ ಕಮಲ ವೊಂದನ್ನು ಕೆತ್ತಲಾಗಿದ್ದು ಇದರ ದೇಟು ಕಾಣುವುದಿಲ್ಲ. ಕಮಲದ ದಳಗಳ ಮೇಲೆ ಅಸ್ಪಷ್ಟವಾದ ರೇಖೆಗಳು ಇದ್ದು ತೀರಾ ಸಂದಿಗ್ಧ ಸ್ಥಿತಿಗೆ ಸಿಲುಕಿಸುತ್ತದೆ.

ಈ ಕಮಲದ ಕೆಳಭಾಗದಲ್ಲಿ ಕತ್ತರಿಸಿದ ಕೋಣದ ತಲೆಯನ್ನು ಕೆತ್ತಲಾಗಿದೆ. ಶಿಲ್ಪದ ಈ ಇಡೀ ಮಧ್ಯ ಭಾಗವನ್ನು ಕೂದಲು ಇಳಿಬಿದ್ದ ವ್ಯಕ್ತಿಯ ಶಿರದ ರೀತಿಯಲ್ಲಿ ಕಂಡರಿಸಿದೆ. ಉಳಿದಂತೆ ಮೂರು ಸಾಲಿನ ದಿಂಡುಗಳನ್ನು ಕೆತ್ತಿ ಉಳಿದ ಎಡ ಮತ್ತು ಬಲ ಭಾಗಗಳಿಂದ ಪ್ರತ್ಯೇಕಿಸಲಾಗಿದೆ.

ಈ ಸ್ತ್ರೀಯ ಎಡಗಡೆ ಮತ್ತು ಬಲಗಡೆಯಲ್ಲಿ ಎರಡೆರಡು ಗಜಗಳಿದ್ದು ಅವುಗಳ ಜೊತೆ ಪರಿಚಾರಕಿಯರೋ, ಸ್ತ್ರೀಗಣಗಳೋ ಇವೆ. ಇವರು ಚಾಮರ ಸೇವೆ ಮಾಡುತ್ತಿದ್ದಾರೆ. ಗಜಗಳು ಕುಂಭಗಳನ್ನು ಎತ್ತಿ ಹಿಡಿದಿವೆ.

ಮೇಲು ನೋಟಕ್ಕೆ ತಟ್ಟನೆ ಲಜ್ಜಾಗೌರಿಯಂತೆ ಕಾಣುವ ಈ ಶಿಲ್ಪ ಮುಖದಲ್ಲಿ ಕಮಲವನ್ನು ಹೊಂದಿರುವ ಲಜ್ಜಾಗೌರಿಯ ಲಕ್ಷಣವನ್ನು ಹೊಂದಿಲ್ಲ. ಮುಖವನ್ನೇ ಕಂಡರಿಸಿರುವುದು ಇದನ್ನು ಸಮರ್ಥಿಸುತ್ತದೆ. ಗಜಗಳಿಂದಾಗಿ ಗಜಲಕ್ಷ್ಮಿ ಇರಬಹುದೆಂಬ ಸಂದೇಹ ಬಂದರೂ ನಗ್ನ ಪ್ರತಿಮೆಯಾಗಿರುವುದರಿಂದ ಅದು ಸಂಭವನೀಯವಾಗಿಲ್ಲ. ಈ ಶಿಲ್ಪ ದುರ್ಗಿ ಅಥವಾ ಕಾಳಿಯದೇ ಎಂದು ತಿಳಿಸಲು ಶಿಲ್ಪದ ಕೆಳಭಾಗದ ಕೋಣದ ತಲೆ ಸಹಕಾರಿಯಾಗಿದೆ.

* ಅಧ್ಯಾಪಕರು,ನಂ. ೧೧೩(ಬಿ), ಮುನಿಸಂಜೀವಪ್ಪ ಲೇ-ಔಟ್,ಜೆ. ಪಿ.ನಗರಅಂಚೆ, ಬೆಂಗಳೂರು-೫೬೦೦೭೮

ಎಂಟುದಳಗಳ ಕಮಲ ರೇಖೆಗಳನ್ನು ಎಳೆದರೆ ಕರಾರುವಾಕ್ಕಾಗಿ ತ್ರಿಕೋನಗಳಾಗಬಲ್ಲ ರೀತಿಯಲ್ಲಿ ಕೆತ್ತಲಾಗಿರುವ ಈ ಶಿಲ್ಪ ಶಾಕ್ತ ಪಂಥವೊಂದಕ್ಕೆ ಸೇರಿದ್ದು ಎಂಬುದು ಖಚಿತವಾಗುತ್ತದೆ. ಫಲಕದ ಕೆಳ ಬಲಗಡೆ ತುದಿಯಲ್ಲಿ ಅಸ್ಪಷ್ಟ ಬರಹವಿದೆ.

-೨-

ತಾಂತ್ರಿಕ ಪಂಥಗಳಲ್ಲಿ ಕೇರಳ ಪಂಗಡ, ಕಾಶ್ಮೀರ ಪಂಗಡ, ಗೌಡ ಪಂಗಡ, ವಿಲಾಸ ಮೊದಲಾದ ವಿಭಾಗಗಳಿವೆ. ಇವುಗಳಲ್ಲೇ ಮತ್ತೆ ದಕ್ಷಿಣಾಚಾರ, ವಾಮಾಚಾರ, ಕೌಳಾಚಾರ ಎಂದು ಮೂರು ವಿಭಾಗಗಳಿವೆ. ಕೌಳಾಚಾರ ತೀರಾ ಕಟ್ಟುನಿಟ್ಟಾದುದು ಎನ್ನಲಾಗಿದೆ. ಮಹಾನಿರ್ವಾಣ ತಂತ್ರದ ಪ್ರಕಾರ ಶಿವ ತನ್ನ ಉಪಾಸಕರಿಗೆ ಮಾಂಸ, ಮದ್ಯ, ಮತ್ಸ್ಯ, ಮುದ್ರೆ ಮತ್ತು ಮೈಥುನವನ್ನು ಐದು ತತ್ವಗಳಾಗಿ ನೀಡಿದ್ದಾನೆ. ಕೌಳ ಪಂಥದ ಅನುಯಾಯಿಗಳು ಜನವಸತಿಯಿಂದ ದೂರವಾಗಿ, ಹಗಲಿನಲ್ಲಿ ಪೂಜೆ ಮತ್ತು ರಾತ್ರಿ ತಾಂತ್ರಿಕ ವಿಧಾನಗಳಿಂದ ಯಂತ್ರಗಳನ್ನು ಬರೆದು ಪೂಜಿಸಬೇಕಿತ್ತು[1] ಇದರಲ್ಲಿ ಸ್ತ್ರೀಯ ಜೊತೆಗಿನ ಮೈಥುನ ಪೂಜಾ ವಿಧಿಯ ಪ್ರಮುಖವಾದ, ಅಂತಿಮ ಹಾಗೂ ಕಡ್ಡಾಯದ ವಿಧಿಯಾಗಿದ್ದು 'ವೀರಸಾಧಕಸ್ಥಿತಿ'ಯನ್ನು ಪಡೆಯಲು ಸಹಕಾರಿಯಾಗುತ್ತಿತ್ತು. ಹೀಗೆ ಮೈಥುನದ ಪೂಜೆಗೆ ಸಹಕರಿಸುತ್ತಿದ್ದ ಸ್ತ್ರೀಯನ್ನೇ 'ಶಕ್ತಿ' ಎಂದು ಕರೆದು ಈ ಕ್ರಿಯೆಯನ್ನು ಧಾರ್ಮಿಕ ಪರಿಕಲ್ಪನೆಗೆ ಒಳಪಡಿಸಲಾಯಿತು. ಇದನ್ನು 'ಲಾಠಸಂಧಾನ' ಎಂದೂ ಕರೆಯಲಾಗಿದೆ.[2]

'ಕೌಳವಲ್ಲಿ ನಿರ್ಣಯ ಗ್ರಂಥ'ದ ಪ್ರಕಾರ ಅಂತಿಮ ಸಿದ್ಧಿಯನ್ನು ಕೇವಲ ಮೈಥುನ ಮಾತ್ರದಿಂದ ಪಡೆಯಬಹುದಾಗಿದ್ದು ವೀರಸಿದ್ಧಿಯನ್ನು ಪಡೆದ ಗುರುವಿನ ಪತ್ನಿಯನ್ನು ಮಾತ್ರವೇ ಹೊರತು ಪಡಿಸಿ ಉಳಿದೆಲ್ಲ ಸ್ತ್ರೀಯರನ್ನು ತಮ್ಮ ಅವರ ರಕ್ತ ಸಂಬಂಧವನ್ನು ಪರಿಗಣಿಸದೆ ಇದಕ್ಕೆ ಬಳಸಿಕೊಳ್ಳಬಹುದು ಎಂದು ಹೇಳಿದೆಯಂತೆ. (ಗಮನಿಸಿ: 'ಹೊಲತಿಯರನರ್ಚಿಪಿರಿ ಪ್ರಾಣಿಯ ಕೊಲುವಿರಿ. ಅನುಜೆ, ಭಗಿನಿ, ಜನನಿ, ಸುತೆಗೆಳಸುವಿರಿ'-ಶಂಕರ ದಾಸಿಮಯ್ಯನ ಪುರಾಣ, ೧೪-೨೪). ಕಾಳೀ ವಿಲಾಸತಂತ್ರ, ಪಾರಾನಂದ ಸೂತ್ರಗಳು ಈ ರೀತಿಯ ಪೂಜೆಯನ್ನು ಮತ್ತಿಷ್ಟು ವಿಷದೀಕರಿಸುತ್ತವೆ. ಸ್ತ್ರೀಯ ಯೋನಿಭಾಗಕ್ಕೆ ಈ ತಾಂತ್ರಿಕದಲ್ಲಿ ಹೆಚ್ಚಿನ ಪ್ರಾಶಸ್ತ್ಯವಿದೆ. ಬರೆಯುವ ಯಂತ್ರಗಳು, ವಿನ್ಯಾಸಗಳು, ಸಂಕೇತಗಳು ಇದನ್ನೇ ಮೂಲದಲ್ಲಿ ಆಧರಿಸಿವೆ. ತೀರಾ ಪ್ರಾಚೀನ ಕಾಲದಲ್ಲಿ ಇದನ್ನೇ 'ಭಗಯಾಗ' ಎಂದು ಕರೆಯಲಾಗುತ್ತಿದ್ದು ಶಾಕ್ತ ಪಂಥೀಯರಲ್ಲಿ ತ್ರಿಕೋನ ಯೋನಿಯನ್ನು ಪ್ರತಿನಿಧಿಸುತ್ತದೆ.

-೩-

ಈ ಹಿನ್ನೆಲೆಗಳಿಂದ ನೋಡಿದರೆ ಪ್ರಾಯಶ: ನೆಗವಾಡಿಯ ಪ್ರಾಂತ್ಯ ಒಂದು ಕಾಲದಲ್ಲಿ ಶಾಕ್ತರ ನಿವಾಸ ಸ್ಥಾನವಾಗಿದ್ದು ಈ ಶಿಲ್ಪ ಈ ಪಂಥಕ್ಕೆ ಸೇರಿದವರ ಪೂಜಾ ದೇವತೆಯಾಗಿರ ಬಹುದು ಎಂದು ತೋರುತ್ತದೆ. ಇದಕ್ಕೆ ಮೊದಲನೇ ಆಧಾರ ಶಿಲ್ಪದಲ್ಲಿ ಇರುವ ಕಮಲ. ಚಕ್ರವನ್ನು ಕಮಲದಿಂದಲೂ ಸಾಂಕೇತಿಸಲಾಗುತ್ತದೆ. ಎಂಟು ದಳಗಳಿರುವ ಕಮಲವನ್ನು ಇಲ್ಲಿ ಕೆತ್ತಲಾಗಿದ್ದು ಇದನ್ನು ತಾಂತ್ರಿಕ ಪರಿಭಾಷೆಯಲ್ಲಿ 'ಆನಂದ ಕಾಂಡ' ಎಂದು ಕರೆಯಲಾಗಿದೆ.[3] ಈ ಆನಂದ ಕಾಂಡದಲ್ಲಿನ ಚಕ್ರದ ಹೆಸರು 'ಅನಾಹತ ಚಕ್ರ'[4] ಶಾಕ್ತರ-ಕೌಳರ ಪೂಜೆಗಳಲ್ಲಿ ಚಕ್ರ ಅಥವಾ ಅದನ್ನು ಸಾಂಕೇತಿಸುವ ಪದ್ಮಗಳೇ ಪೂಜೆಯ ಮತ್ತೊಂದು ಹೆಸರಾಗುವುದರಿಂದ ಈ ಶಿಲ್ಪ ಕೌಳರ ಪಂಥಕ್ಕೆ ಸೇರಿದ್ದು ಎಂಬುದು ಸಮಂಜಸವಾಗಿ ತೋರುತ್ತದೆ.

ಈ ಶಿಲಾ ಫಲಕದ ಕೆಳಭಾಗದಲ್ಲಿ ಗ್ರಂಥಲಿಪಿಯಲ್ಲಿ ಬರಹವಿದೆ. ಇದು ಮಲೆಯಾಳದ ಮೂಲ ಎಂದು ಈ ಲಿಪಿಯನ್ನು ನೋಡಿದ ಲಿಪಿತಜ್ಞರು ಅಭಿಪ್ರಾಯ ಪಡುತ್ತಾರೆ. ತಾಂತ್ರಿಕ ಪಂಗಡದಲ್ಲಿ ಕೇರಳ ಪಂಗಡವೂ ಒಂದಾಗಿದ್ದು. ಈ ಫಲಕದಲ್ಲಿ ಮಲೆಯಾಳದ ಮೂಲವಿರುವುದರಿಂದ ಈಕೆ ಕೇರಳ ಕಾಳಿಯಾಗಿರಬಹುದು ಎಂದು ತೋರುತ್ತದೆ.

ಭೈರವಿ ಚಕ್ರಪೂಜೆ ಮತ್ತು ಕೇರಳ ಕಾಳಿಯ ಪೂಜೆಯಲ್ಲಿ ಗಂಡು ಹೆಣ್ಣುಗಳು ತಮ್ಮ ಜಾತಿಭೇದಗಳನ್ನು ಮರೆತು ತೊಡಗಬೇಕಲ್ಲದೆ, ಪೂಜೆಗೆ ಪ್ರಧಾನವಾಗಿ ಕುಂಭಗಳನ್ನು ಬಳಸಲು ತಂತ್ರಶಾಸ್ತ್ರ ವಿಧಿಸುತ್ತದೆ. ನಿರ್ವಾಣ ಸ್ಥಿತಿಯಲ್ಲಿ ಪೂಜೆಗೆ ತೊಡಗುತ್ತಿದ್ದ ಅಂದಿನ ಹಂತವೇ ಮುಂದುವರಿದು ಇಂದು ಬದಲಾದ ರೀತಿಯಲ್ಲಿದೆ. ಈ ಪ್ರಾಂತದ ಆದಿವಾಸಿಗಳು

---

1) ಮಹಾಸಾಂಖ್ಯ

2) ಮಹಾನಿರ್ವಾಣ.

3) History of Tantrik Religion - Bhattcharya, page 406

೪) ಅದೇ



ಅಪರೂಪದಮಾತೃಶಿಲ್ಪ

ಇಂದಿಗೂ ಮಣ್ಣಿನ ಮಡಕೆಗಳನ್ನೇ ಮದುವೆಗಳಲ್ಲಿ ಬಳಸುತ್ತಾರೆ. ಇವುಗಳ ಮೇಲೆ ತ್ರಿಕೋನಗಳಿಂದ ಕೂಡಿದ ಚಿತ್ರಗಳು ಮುದ್ರೆಗಳಿರುತ್ತವೆ. ವಿಭೂತಿ ಇಲ್ಲಿ ಕಡ್ಡಾಯ. ಇದು ಹಿಂದಿನಿಂದ ನಡೆದು ಬಂದಿದ್ದು ಆಧುನಿಕ ರೀತಿ ರಿವಾಜುಗಳಿಗೆ ಸಿಲುಕಿರುವ ಶಾಕ್ತರ ಕೌಳ ಪಂಥದ ಪಳೆಯುಳಿಕೆ ಎಂದು ನನ್ನ ಖಚಿತವಾದ ನಂಬಿಕೆ. ನೆಗವಾಡಿಯಲ್ಲಿ ಹಿಂದಿನಿಂದ ಈ ದೇವತೆಗೆ ನಡೆದುಕೊಳ್ಳುವವರು ಸಮಾಜದ ಕೆಳವರ್ಗದವರು. ಈ ನೆಲೆಯಲ್ಲಿ ಕಾಳೀಪೂಜೆಯ ಅಂಗವಾಗಿದ್ದ ನಗ್ನಪೂಜೆ, ಮುಕ್ತ ಮೈಥುನ ಮುಂತಾದುವು ಕಾಲ ಕಳೆದಂತೆಲ್ಲ ಕೆಲವೇ ಸಮುದಾಯಗಳಿಗೆ ಅಂಟಿಕೊಂಡು ಚಂದ್ರಗುತ್ತಿಯನ್ನು ಸುತ್ತಿಕೊಂಡಂತೆ ತೋರುತ್ತದೆ. ಸೊರಬ, ಶಿರಾಳಕೊಪ್ಪ, ಆನವಟ್ಟಿ, ನೆಗವಾಡಿ ಇತ್ಯಾದಿಗಳು ಚಂದ್ರ ಗುತ್ತಿಯಿಂದ ದೂರವಿಲ್ಲದಿರುವುದೂ ಹಾಗೂ ಇಲ್ಲಿನ ಜನತೆ ಚಂದ್ರಗುತ್ತೆವ್ವನಿಗೆ ನಡೆದು ಕೊಳ್ಳುವುದು-ಬೆತ್ತಲೆ ಸೇವೆ ಇತ್ಯಾದಿ ಇತ್ಯಾದಿಗಳು ಏನೋ ಆಂತರಿಕ ಸಂಬಂಧವನ್ನು ಹೊಂದಿರುವಂತಿದೆ. ಒಂದು ಕಾಲದಲ್ಲಿ ಕೌಳರ ಜಾಗವಾಗಿರ ಬಹುದಾಗಿದ್ದ ನೆಗವಾಡಿ ಕಾಲಕಳೆದಂತೆ ನಶಿಸಿ, ನೈಸರ್ಗಿಕವಾಗಿ ಅನುಕೂಲಕರವಾಗಿದ್ದ ಚಂದ್ರಗುತ್ತಿ ತಲೆ ಎತ್ತಿರ ಬಹುದೆಂದು ತೋರುತ್ತದೆ. ಚಂದ್ರಗುತ್ತೆವ್ವ-ಪಾರ್ವತಿ ಶಕ್ತಿ-ಕಾಳಿ-ಈ ಪ್ರತ್ಯೇಕವಾದ ಘಟಕಗಳಲ್ಲಿ ಸಮರೂಪವಾಗಿರುವ ಅಂಶಗಳನ್ನು ಗಮನಿಸಿ ಆನುಷಂಗಿಕವಾಗಿ ಹೇಳುವುದಾದರೆ ಚಂದ್ರಗುತ್ತೆವ್ವ ಸಹಾ ಇಂಥ ಪ್ರತಿಮೆಯೊಂದರಿಂದಲೇ ಮೂಲದಲ್ಲಿ ಹುಟ್ಟಿರುವ ಸಾಧ್ಯತೆಗಳಿವೆ

ಈ ಪ್ರಮುಖ ಶಿಲ್ಪದ ಜೊತೆಯಲ್ಲಿಯೇ ಅರ್ಧಕ್ಕೆ ಭಿನ್ನವಾಗಿರುವ ಇನ್ನೊಂದು ಬೆತ್ತಲೆ ಶಿಲ್ಪವೂ ಇದೆ. ಇದೂ 'ವಿಪರೀತ ರತಿಯ' ಆಸನದಲ್ಲೇ ಇದೆ.

ಮೇಲಿನ ಎರಡೂ ಶಿಲ್ಪಗಳು ಪ್ರಾಯಶಃ ಯಾವುದೋ ಒಂದು ದೊಡ್ಡ ಪ್ರಮುಖ ದೇವಾಲಯದ ಭಿನ್ನ ಭಾಗಗಳಿರಬೇಕು. ಈ ಮಾತೃಶಿಲ್ಪ ಸಿಕ್ಕಿರುವ ಜಾಗದಿಂದ ಅರ್ಧ ಕಿ.ಮೀ. ಉತ್ತರದಲ್ಲಿ ದುರ್ಗಿ ತನ್ನ ಪರಿವಾರದೊಡನೆ ಒಡ್ಡೋಲಗ ನಡೆಸುತ್ತಿರುವ ಇನ್ನೊಂದು ಉಬ್ಬುಶಿಲ್ಪವಿದೆ. ಇಲ್ಲಿ ಭೂತ ಪ್ರೇತಗಣ ಇವೆ. ಪರಿಚಾರಿಕೆಯರಿದ್ದಾರೆ. ಕೌಳರ ಸಾಧನೆಯ ಅಂಗವಾಗಿ ಒಂದೇ ದೇವಸ್ಥಾನದಲ್ಲಿದ್ದ ಈ ಎಲ್ಲಾ ಪ್ರತಿಮೆಗಳೂ ಕಾಲ ಕಳೆದಂತೆ ಪ್ರತ್ಯೇಕವಾಗಿರ ಬಹುದು. ಶಿವ-ಪಾರ್ವತಿ ಇತ್ಯಾದಿ ಗೌರವಾನ್ವಿತ ದೇವ ದೇವತೆಯರ ಜೊತೆಗೆ ಬೆತ್ತಲೆ ಪ್ರತಿಮೆಗಳಿಗೆ ಪೂಜೆ ಮಾಡುವುದು ಅನಾಗರಿಕ ಲಕ್ಷಣ ಎನ್ನಿಸಿ ಅವನ್ನು ಊರ ಹೊರಗೆ ಸಾಗಿಸಿದಂತಿದೆ.

ನಾಗಾರ್ಜುನ ಕೊಂಡ, ಭೀತ, ಕೌಶಾಂಬಿ ಮೊದಲಾದ ಕಡೆಗಳಲ್ಲಿ ಸಿಕ್ಕಿರುವ ಶಾಕ್ತ ಪಂಥದ ಬೆತ್ತಲೆ ಶಿಲ್ಪಗಳು ಕ್ರಿಸ್ತ ಶಕದ ಪ್ರಾರಂಭದ ವೇಳೆಯವಾಗಿವೆ. ಬೆತ್ತಲೆ ಶಿಲ್ಪಗಳಿಗೆ ಅಲಂಕಾರ ಮಾಡುವ ಪ್ರವೃತ್ತಿ, ಸುತ್ತಣ ಅಲಂಕಾರದ ವಿನ್ಯಾಸ ರೂಢಿಗೆ ಬಂದಾಗ ಕ್ರಿ.ಶ.೯೦೦ರ ವೇಳೆ ಆಗಿತ್ತು. ಶಕ್ತಿಯ ಅಥವಾ ಶೃಂಗಾರದ ಬೆತ್ತಲೆ ಶಿಲ್ಪಗಳನ್ನು ಸುಂದರವಾಗಿ ಕಂಡರಿಸುವ ಪ್ರವೃತ್ತಿ ಈ ಕಾಲದಿಂದ ಪ್ರಾರಂಭವಾಯಿತು[5] ಹಾಗೆಯೇ ಗ್ರಂಥ ಲಿಪಿ ಬಿಡಿಯಾಗಿ ಬರೆಯಲಾರಂಭ ವಾದುದೂ ೧೧ನೇ ಶತಮಾನದ ನಂತರ. ಇದೆಲ್ಲದರ ಆಧಾರದಿಂದ ಹೇಳುವುದಾದರೆ ಈ ಉಬ್ಬುಶಿಲ್ಪ ೧೧ನೇ ಶತಮಾನದ ಆಸುಪಾಸಿನದ್ದು.

೫) ಅದೇ ಪುಟ ೫೮೦.

ಈ ಊರಿನ ಹೆಸರು ನೆಗವಾಡಿ. ಇದು ನಗ್ನವಾಟಿಕಾ ಇದ್ದು ನಗವಾಟಿಕಾ > ನಗವಾಡಿಕ > ನಗವಾಡಿ > ನಗ್ವಾಡಿ > ನೆಗವಾಡಿ ಆಗಿರುವ ಸಾಧ್ಯತೆಗಳಿವೆ.

ಕೊನೆಯದಾಗಿ ಆಸಕ್ತರಲ್ಲಿ ಒಂದು ಮಾತು: ಬಾದುಬ್ಬೆ ಹಾಗೂ ವಿಗ್ರಹದ ಲಕ್ಷಣಗಳನ್ನು ಮಾತೃಶಿಲ್ಪದ ಲಕ್ಷಣಗಳನ್ನು ಏಕಕಾಲದಲ್ಲಿ ಹೊಂದಿರುವ ಈ ಶಿಲ್ಪದ ಹಲವಾರು ಸಂಗತಿಗಳು ಗಂಭೀರವಾಗಿ ಸಂಶೋಧಕರನ್ನು ಆಹ್ವಾನಿಸಿದೆ: ಇವುಗಳನ್ನು ಕತ್ತಲಿನಿಂದ ಬೆಳಕಿಗೆ ತರಬೇಕಾಗಿದೆ.



ಮಾತೃಶಿಲ್ಪದಿಂದಸ್ವಲ್ಪ ದೂರದಲ್ಲಿಬಿದ್ದಿರುವ ಶಕ್ತಿಶಿಲ್ಪ

## ಆಕರಗ್ರಂಥಗಳು


೧) ಮಾರ್ಗ-ಡಾ॥ ಎಂ.ಎಂ.ಕಲಬುರ್ಗಿ

೨) ಎನ್ಸೈಕ್ಲೋಪೀಡಿಯಾ ಆಫ್ ರಿಲಿಜಿಯನ್ ಎಂಡ್ ಎಥಿಕ್ಸ್-ಜೇಮ್ಸ್ ಹೇಸ್ಟಿಂಗ್ಸ್-Vol-II, ೬ನೇ ಮುದ್ರಣ ೧೯೬೭.-Vol-5, ದ್ರಾವಿಡರು-೧೯೬೪.

೩) ರಿಫ್ಲೆಕ್ಷನ್ಸ್ ಆನ್‌ದಿ ತಂತ್ರಾಸ್ - ಸುಧಾಕರ ಚಟ್ಟೋಪಾಧ್ಯಾಯ - 1978

೪) ಶಕ್ತಿ ಐಕನೋಗ್ರಫಿ-ಡಿ.ಆರ್.ರಾಜೇಶ್ವರಿ.



ಕೃತಜ್ಞತೆಗಳು : ಡಾ॥ ಎಂ. ಚಿದಾನಂದ ಮೂರ್ತಿ, ಡಾ॥ ಸೂ. ಕಾಮತ್ ಡಾ॥ ಎಚ್. ಎಸ್. ಗೋಪಾಲರಾವ್ ಮತ್ತು ಮಿಥಿಕ್ ಸೊಸೈಟಿ.

ಕಲ್ಲನಗೌಡ ತಿಪ್ಪನಗೌಡ ಪಾಟೀಲ *

# ಅಪರೂಪದ ನಂದಿ ವಿಗ್ರಹ

ಧಾರವಾಡ ಜಿಲ್ಲೆಯ ಗದಗ ತಾಲೂಕಿನ ಬೆಳಧಡಿ ಗ್ರಾಮದಲ್ಲಿ ಇರುವಂತಹ ನೀರಿನ ಚಿಕ್ಕ ಕೆರೆಗೆ ಹೊಂದಿಕೊಂಡಂತಹ ಗದಗ ಮಾರ್ಗದ ಪಕ್ಕದಲ್ಲಿ ಈ ಶಿಲ್ಪವಿದೆ.

ಇದು ಎಷ್ಟೋ ವರುಷಗಳಿಂದ ತನ್ನ ಅಂದವನ್ನು ಕಳೆದುಕೊಂಡು ಅನಾಥವಾಗಿ ಕಲ್ಲುವಡ್ಡಿನಲ್ಲಿ ಸಿಕ್ಕಿಕೊಂಡ ಪ್ರಾಚೀನ ಶಿಲಾಶಿಲ್ಪ. ಇದನ್ನು ನೋಡಲಾಗಿ ಮಾರುತಿರಾಯನೆಂಬ ಹಾಗೆ ಕಾಣಿಸಿಕೊಳ್ಳುತ್ತದೆ. ಇಲ್ಲಿ ಸಮಿಪದಲ್ಲಿ ಇರತಕ್ಕ ಕಲ್ಯಾಣ ಚಾಲುಕ್ಯರ ೧೨ನೇ ಶತಮಾನದ ಕೆಲವು ಅವಶೇಷಗಳನ್ನು ನೋಡಲಾಗಿ ಇದು ಕೂಡಾ ಅಂದಿನ ಕಾಲದ್ದೆಂದು ಹೇಳಬೇಕಾಗುತ್ತದೆ. ಯಾಕೆಂದರೆ ಊರ ಮಧ್ಯೆ ಇರುವ[1] ಈಶ್ವರ ದೇವಾಲಯವು ೧೧ನೇ ಶಮಾನದ್ದೆಂದು ಇತಿಹಾಸ ತಜ್ಞರು ಊಹಿಸಿದ್ದಾರೆ.[1] ಕಾರಣ ಅದೇ ಈಶ್ವರನ ಮುಂದೆ ಬಸವೇಶನು ಇರತಕ್ಕವನೇ. ಈತನ ಈ ಆಕಾರ ಚಿತ್ರವನ್ನು ಶಿಲ್ಪಿ ಕೆತ್ತಿ ಯುದ್ಧ ಯೋಧನನ್ನು ಮಾಡಿ ನಿಲ್ಲಿಸಿದ್ದಾನೆ.

## ವಿಗ್ರಹದ ವರ್ಣನೆ

ಕಲ್ಲು ಕಪ್ಪು ಹಸಿರು ಮಿಶ್ರಿತವಾದ ಮೃದು ಶಿಲೆಯಾಗಿದೆ. ಉದ್ದವು ೫ ಅಡಿ ಇದ್ದು ೪ ಅಡಿ ಅಗಲವಾಗಿದೆ. ಶಿಲ್ಪವು ಓಡುವ ಭಂಗಿಯಲ್ಲಿ ಇದ್ದು ಒಳ್ಳೆ ಚಿತ್ರವಿಚಿತ್ರವಾಗಿದ್ದು ಪ್ರಭಾವಳಿ ತ್ರುಟಿತವಾಗಿದ್ದರೂ ವಿಗ್ರಹವು ಚೆನ್ನಾಗಿ ಇದೆ. ಅದರ ಮೋರೆ ಮಾತ್ರ ಒಡೆದು ಹಾಕಿದ್ದಾರೆ. ಮಾರುತಿ ಹಾಗೆ ಎದ್ದು ನಿಂತ ಭಂಗಿಯಲ್ಲಿ ಓಡುವ ರೀತಿಯಲ್ಲಿ ಇದ್ದು ಎಡಗಾಲಿನಿಂದ ಒಬ್ಬ ವೈರಿಯನ್ನು ಮೆಟ್ಟಿ ಸಂಹಾರ ಮಾಡಿದ ರೀತಿಯಲ್ಲಿ ಇದೆ. ಇನ್ನು ಬಲಕಾಲು V ಆಕಾರ ಉಳ್ಳದ್ದಾಗಿದ್ದು ಓಡುವ ರೀತಿ ಇದೆ. ಎಡ ಭಾಗಕ್ಕೆ ಹೊರಳಿನಿಂತು ಬಲಕೈ ಮೇಲಕ್ಕೆ ಮಾಡಿ ಹೆಬ್ಬೆರಳು ಮುದುಡಿಕೊಂಡು ರುದ್ರಾಕ್ಷಿ ಸರ ಜಪಮಾಲೆ ಹಿಡಿದುಕೊಂಡು ಅಭಯ ಹಸ್ತವನ್ನು ತೋರಿಸಿದ್ದಾನೆ. ಎಡಕೈಯನ್ನು ಡೊಂಕಾಗಿ ಮಾಡಿ ಕೈಯಲ್ಲಿ ಆಯುಧ ಹಿಡಿದುಕೊಂಡ ಹಾಗೆ ಇದೆ. ಇದು ತ್ರುಟಿತವಾಗಿದೆ. ಮೋರೆಯು ಎಡಕ್ಕೆ ಹೊರಳಿ ನಿಂತಭಾವದಲ್ಲಿ ಇದೆ. ತಲೆ ಮೇಲೆ ಎರಡು ಕೊಂಬುಗಳು ಹಿಂದಕ್ಕೆ ಬಾಚಿವೆ.[2] ನಮ್ಮ ರೈತರು ಇದಕ್ಕೆ 'ಗುಂಡ ಬಸವಣ್ಣ' ಎನ್ನುತ್ತಾರೆ. ಕಿವಿಗಳು ಚಿಕ್ಕ ಆಕಳ ಕಿವಿಯ ಆಕಾರದಲ್ಲಿದ್ದು ಕಿವಿಯೊಳಗೆ ಚಿಕ್ಕ ರುದ್ರಾಕ್ಷಿ ಸರಗಳ ಗೊಂಚಲನ್ನು ಕಟ್ಟಲಾಗಿದೆ. ಕುತ್ತಿಗೆ ಗಗ್ಗರಿಯಾಕಾರವಾಗಿ ಇದ್ದು ರುದ್ರಾಕ್ಷಿ ಸರವನ್ನು ಕಟ್ಟಲಾಗಿದೆ. ಅದರಂತೆ ಕೊರಳಿನಿಂದ ಎದೆಯವರೆಗೆ ಕೆಲವು ಮುತ್ತಿನ ಸರದ ಮಧ್ಯೆ ಲಿಂಗಾಕಾರದ ವಸ್ತು ಶೋಭಿಸುತ್ತಿದೆ. ಹಾಗೂ ಕೊರಳಿನಿಂದ ಹೊಟ್ಟೆಯವರೆಗೆ ರುದ್ರಾಕ್ಷಿಯ ದೊಡ್ಡ ಆಕಾರದ ಜೋಡುಸರಗಳು ಸುಂದರವಾಗಿ ಕಾಣಿಸುತ್ತವೆ. ಕೈಗಳ ಮುಂದಿನ ಭಾಗ ಹಾಗು ರಟ್ಟೆಗಳಿಗೆ ರುದ್ರಾಕ್ಷಿ ಸರಗಳನ್ನು ಸುತ್ತಲಾಗಿದೆ. ನಡಕ್ಕೆ ಒಂದು ಚಿಕ್ಕಪಟ್ಟಿ, ಅದು ಪೈಲವಾನರ ಚಡ್ಡಿ ಹೋಲುತ್ತದೆ. ಅದಕ್ಕೆ ಪಕ್ಕದಲ್ಲಿ ಚಿಕ್ಕ ಕಠಾರಿ ಧರಿಸಿರುತ್ತಾನೆ. ಕಾಲುಗಳ ಹಿಂಬದಿ ಮೇಲ್ಭಾಗ ಕಡಗ, ಕಡಗಕ್ಕೆ ಗೆಜ್ಜೆಕಟ್ಟಲಾಗಿದೆ. ಈತನ ಬಾಲವಂತೂ

---

* ಬೆಳಧಡಿ, ಗದಗ ತಾ||, ಧಾರವಾಡ ಜಿಲ್ಲೆ.

1 ಕರ್ನಾಟಕ ಗ್ಯಾಜೆಟಿಯರ್, ಇತಿಹಾಸ ಭಾಗ ೩, ೧೯೬೫ (ಬೆಳಧಡಿ ನೋಡಿರಿ).

2 ಜಾನಪದ ಸುಗ್ಗಿಹಾಡಿನಲ್ಲಿ ಬರುತ್ತೆ. ನಮ್ಮ ಪೂರ್ವಜರು ಸುಗ್ಗಿಕಾಲದಲ್ಲಿ ಹಾಡುತ್ತಿದ್ದರು.

ಹಿಂಭಾಗದಿಂದ ಸಾಗಿ ಮೇಲ್ಭಾಗಕ್ಕೆ ಪ್ರಭಾವಳಿಯವರೆಗೂ ಹೋಗಿದೆ. ಗಂಟೆಯನ್ನು ತುದಿಬಾಲಕ್ಕೆ ಕಟ್ಟಲಾಗಿದೆ. ಬಾಲದಲ್ಲಿ ಈಶ್ವರ ಲಿಂಗಗಳ ಚಿತ್ರಗಳು. ತುದಿಯವರೆಗೂ ಸಾಲುಸಾಲಾಗಿ ವಿಚಿತ್ರವಾಗಿ ಕೆತ್ತಲಾಗಿದೆ. ಈತನ ಬಲ ಭುಜದಲ್ಲಿ ಹಕ್ಕಿ ಚಿತ್ರವಿದ್ದು ಇದರ ಪಕ್ಕಕ್ಕೆ ಮೇಲ್ಭಾಗಕ್ಕೆ ನಾಗರಹಾವಿನ ಹೆಡೆ ಕಂಡುಬರುತ್ತದೆ.

ಕಣ್ಣುಗಳು ಚಿಕ್ಕವಾಗಿದ್ದು ಮಾನವರ ಕಣ್ಣುಗಳನ್ನೇ ಹೋಲುತ್ತದೆ. ಕೈ ಹಾಗು ಕಾಲುಗಳು ಸುಂದರವಾಗಿ ನುಣುಪಾಗಿ ಕೆತ್ತಲಾಗಿದೆ. ಇಲ್ಲಿನಂದೀಶನು ತನ್ನ ಎಡಗಾಲಿನಿಂದ ಮೆಟ್ಟಿದ ಶಿಲ್ಪ ತಲಕೆಳಗಿದ್ದು ಶಿಂಶುಮಾರನದಾಗಿದೆ. ನಂದೀಶನು ಜಂಬಾಸುರ ಹಾಗೂಶಿಂಶುಮಾರರೆಂಬ ರಾಕ್ಷಸರನ್ನು ಸಂಹಾರಮಾಡಿದ 'ನೆಂದು ತಿಳಿದುಬರುತ್ತದೆ. ಈ ಮೆಟ್ಟಿದ ವಿಗ್ರಹಕ್ಕೆ ಎರಡು ನಾಯಿಗಳು ಎಡಬಲಕ್ಕೆ ಇದ್ದು ತಲೆ ಕೆಳಗೆ ಇದ್ದು ಇವನನ್ನೇ ಕಚ್ಚಿದ ರೀತಿಯಲ್ಲಿ ಇರುತ್ತದೆ.

ಈ ಪುರಾಣಕಥೆಯ ಚಿರಸ್ಮರಣೆ[3] ಸಲುವಾಗಿ ಈ ನಂದೀಶ ಮೂರ್ತಿಯನ್ನು ಕೆತ್ತಲಾಗಿರಬಹುದೆಂದು ಊಹಿಸಲಾಗಿದೆ. ಅದರಂತೆ ಈ ನಂದಿ ವಿಗ್ರಹದ ಹಿಂದೆ ಚಿತ್ರಗಳನ್ನು ಬಿಡಿಸಲಾಗಿದೆ. ಅವುಗಳ ವಿವರ : (೧) ಈಶ್ವರ ಲಿಂಗವಿದ್ದು ಇದರ ಮುಂದೆ ಬಸವಣ್ಣನ ಭಾವಚಿತ್ರ ಕೂಡಾ ಇದೆ. ಮೊದಲು ಹೇಳಿದ ನಂದೀಶನು ಬಾಲಬಸವನಾಗಿ ಕೈಯಲ್ಲಿ ಗಂಟೆ ಹಾಗೂ ದೂಪಾರತಿಗಳನ್ನು ಹಿಡಿದುಕೊಂಡು ಭಕ್ತಿಭಾವವುಳ್ಳವನಾಗಿ ಲಿಂಗಪೂಜೆ ಮಾಡಲು ಸಿದ್ಧನಾಗಿದ್ದಾನೆ. ಈ ಉಬ್ಬು ಶಿಲ್ಪದಲ್ಲಿ ರೇಖಾಚಿತ್ರಗಳು ಇವೆ. (೨) ಇದೇ ನಂದೀಶನು ವೀರಯೋಧನಾ
ಗಜಾರೂಢನಾಗಿ ಬಲಕೈಯಲ್ಲಿ ತ್ರಿಶೂಲಧಾರಿಯು
ಜಂಭಾಸುರನನ್ನು ತ್ರಿಶೂಲದಿಂದ ಎದೆಗೆ ತಿವಿದು ಕೆಡ
ಸಂಹಾರ ಮಾಡಿರುತ್ತಾನೆ. ಈತನ ಎಡಬಲಕ್ಕೆ ಸೂರ್ಯ ಚಂದ್ರ
ಕಲ್ಲಾಮೆಗಳ ಚಿತ್ರವಿದ್ದು ಪಕ್ಕದಲ್ಲಿ ಇರುತ್ತವೆ. ಹಾಗು ಈ
ಚಿತ್ರಗಳ ಪಕ್ಕದಲ್ಲಿ ಕುಳಿತ ಭಂಗಿಯಲ್ಲಿ ಜೈನ ತೀರ್ಥಂಕ
ಶಿಲ್ಪ ಇದ್ದು ಇದು ಕೂಡಾ ಸುಂದರವಾಗಿದೆ.

ಬೆಳಧಡಿಯಲ್ಲಿ ಇರುವಂಥಾ ಇತರ ಅವಶೇಷಗಳನ
ನೋಡಿದರೆ ಇದು ಒಂದು ಪ್ರಾಚೀನ ಕ್ಷೇತ್ರವೆಂದ
ಹೇಳಬೇಕಾಗುತ್ತದೆ. ಈಗಲೂ ಈ ಬಾಲ ಬಸವನ ಗು
ಇದ್ದು ಹೊಸದಾಗಿ ನಿರ್ಮಿಸಲಾಗಿದೆ. ಇಲ್ಲಿ ವೃಷಭಾರೂ
ಬಸವಣ್ಣದ ಶಿಲ್ಪ ಇದ್ದು ವೀರಕಲ್ಲು, ನಾಗರಹಾವಿನ ಶಿಲಾಶಿ
ಕೂಡಾ ಇರುತ್ತದೆ. ಸದ್ಯ ಈ ಗುಡಿಯನ್ನು ಬೈ
ಬಸವೇಶನೆಂದು ಕರೆಯಲಾಗುತ್ತದೆ. ಊರ ಮಧ್ಯೆ ಈಶ್ವ
ದೇವಾಲಯವಿದ್ದು ಅದು ಕಲ್ಯಾಣ ಚಾಲುಕ್ಯರ ಕಾಲದ್ದು
ಈ ಗುಡಿ ಮುಂದೆ ಮತ್ತೊಂದು ಗುಡಿ ನೂರು ವರುಷಗ
ಹಿಂದೆ ಗುರುಬ್ರಹ್ಮಾನಂದರು ಬಂದು ಇಲ್ಲಿ ಒಂದು ರಾ
ಮಂದಿರವನ್ನು ಸ್ಥಾಪನೆ ಮಾಡಿದ್ದಾರೆ. ಗರ್ಭಗುಡಿ ಯಲ
ಬಿಲ್ವೇಶ್ವರನಿದ್ದು ನಂದಿ ಮಂಟಪದಲ್ಲಿ ರಾಮ ಸೀತ
ಲಕ್ಷ್ಮಣರ ಮೂರ್ತಿ ಪ್ರತಿಷ್ಠಾಪನೆ ಮಾಡಲಾಗಿದೆ.

(ನನ್ನ ಶೋಧನ ಕಾರ್ಯದಲ್ಲಿ ಭಾಗಿಗಳಾ
ಮೂರ್ತಿಯನ್ನು ಮೇಲಕ್ಕೆ ಎತ್ತಿ ಸಹಾಯ ಸಲ್ಲಿಸಿದ ಶ್ರ
ಹೊಳೆಯಪ್ಪನಾಯ್ಕರ, ಬೆಳಧಡಿ ಹಾಗೂ ಗದುಗಿನ ಅ. ಧ
ಕಟ್ಟಿಮನಿ ಅವರಿಗೂ ನಾನು ಚಿರಋಣಿಯಾಗಿದ್ದೇನೆ).

-:ಬೆಳಧಡಿ ಆವರಣದ ನಂದಿ ವಿಗ್ರಹ:





3 ತ. ಸು. ಶಾಮರಾಯ., ಶಿವಶರಣರ ಕಥಾರತ್ನಕೋಶ.(ಮೈಸೂರು.1767) ಪುಟ ೨೦೬-೨೦೭ ರಲ್ಲಿ (ನಂದಿಕೇಶ್ವರ) ಈ ಚರಿತ್ರೆ

ಪ್ರೊ॥ ಕ. ವೆಂ. ರಾಜಗೋಪಾಲ *

# ಆದಿತ್ಯರು

- ೧ -

ದ್ವಾದಶಾದಿತ್ಯರಲ್ಲಿ ಮೊದಲ ಹೆಸರು ಸೂರ್ಯ ಮತ್ತು ಕೊನೆಯದು ವಿಷ್ಣು. ಈತನ ರಥಚಕ್ರಕ್ಕೆ ಹನ್ನೆರಡು 'ಅರ'ಗಳು ಮತ್ತು ಅವುಗಳ ಮಧ್ಯೆ ಆದಿತ್ಯರು - ಕಮಲಗಳನ್ನೇ 'ಗದೆ' ಎಂಬಂತೆ ಆದಿತ್ಯರ ಚೌಕಟ್ಟಾಗಿಸಿದ್ದಾರೆ.

ಈತನ ರಥಕ್ಕೆ ಸಪ್ತಾಶ್ವಗಳು ಬಿಳಿಯವಿರಬಹುದು; ಸಾರಥಿ ಅರುಣ. ಈತನದು ಸೂರ್ಯೋದಯದ ಬಣ್ಣಗಳು; ಅಂದರೇ ಅರುಣ ವರ್ಣ.

ಸೂರ್ಯನ ದಿಕ್ಕು ಪೂರ್ವವಾದರೂ ಅದರ ಅಧಿಕಾರ ಇಂದ್ರನಿಗೆ ಮೀಸಲು. ಎಂಟು ದಿಕ್ಕಿನ ದೇವತೆಗಳಿಗೆ ಅಗ್ನಿ, ಯಮ, ನಿರುತಿ, ವರುಣ, ವಾಯು, ಸೋಮ ಮತ್ತು ಇಶಾನ ಹೀಗೆ ಕ್ರಮವಾಗಿ ಸ್ಥಾನಮಾನ. ಸೂರ್ಯನಿಗೆ ಮಾತ್ರ ಬೇರೆ, ಕೇಂದ್ರದಂತೆ ಆದರೂ ದಿಕ್ಕಿಲ್ಲ! ಆದ್ದರಿಂದ 'ಯಜ್ಞ'ದಲ್ಲಿ ಸೂರ್ಯನಿಗೆ 'ಅಗ್ನಿರೂಪ'ದಲ್ಲಿ ಗೌರವ, ಅಷ್ಟೆ! ಕೇವಲ ಎರಡು ಋಕ್ಕುಗಳು ಮಾತ್ರ. ಆದರೆ ಯಜ್ಞದ ನಿಜವಾದ ಅಧಿಕಾರಿ ಇಂದ್ರ!

ಹೀಗೆ ವೈದಿಕ ಸಂಪ್ರದಾಯವನ್ನು ಬಿಟ್ಟಲ್ಲಿ ಅಥವಾ ಕಂಡಲ್ಲಿ ಕಾಲಮಾನಕ್ಕೆ ಸೂರ್ಯ ಸಿದ್ಧಾಂತವೇ ಮುಖ್ಯ. ವಾರಕ್ಕೆ ಏಳು ದಿನವೆಂದರೆ ಮೊದಲ ವಾರವೇ 'ಆದಿತ್ಯ'ನದು. ಉಳಿದವಲ್ಲಿ ಆರು; ಸೋಮ, ಮಂಗಳ, ಬುಧ, ಗುರು, ಶುಕ್ರ ಮತ್ತು ಶನಿ ದೇವತೆಗಳಿಗೆ ಮೀಸಲು. ನಕ್ಷತ್ರ ಮಂಡಲಗಳು ಹನ್ನೆರಡು, ಒಂದೊಂದರಲ್ಲೂ ಸೂರ್ಯನ ಮುಖ್ಯ ಪ್ರವೇಶ; ಹೀಗೆ ವರ್ಷ! ಆದ್ದರಿಂದ ಜಾತಕಗಳಿಗೆ ಸೂರ್ಯ ಕೇಂದ್ರ ರಾಶಿಕುಂಡಲಿ ಮತ್ತು ಜನ್ಮಕುಂಡಲಿಯಲ್ಲಿ ಕೂಡ. ಕುಂಟ ತೈಮೂರನ ಸಮಾಧಿಮಂಟಪದಲ್ಲಿ ತನ್ನ ರಾಶಿ ಮತ್ತು ಜನ್ಮ ಕುಂಡಲಿಗಳನ್ನು ಚಿತ್ರಿಸಿಕೊಂಡಿದ್ದಾನೆ. ಪಂಚಾಂಗಕ್ಕೆ ಸೂರ್ಯನ ಉತ್ತರ-ದಕ್ಷಿಣಾಯನಗಳು ಮುಖ್ಯ. ಮಕರ ಸಂಕ್ರಾಂತಿಯಿಂದ ಕರ್ಕಾಟಕ ಸಂಕ್ರಾಂತಿಯ ಗುರುತುಗಳು ಬಹುಮುಖ್ಯ. ರಾಹುಕಾಲ, ಗುಳಿಕಕಾಲಗಳಲ್ಲಿಯೂ ಸೂರ್ಯ ಮುಖ್ಯ. ಸೂರ್ಯನ ಕಾಲ ಮಂಗಳದಾಯಕ. ಆದ್ದರಿಂದ ಸೂರ್ಯ ಸಿದ್ಧಾಂತದಿಂದ ಪಂಚಾಂಗದ 'ದೃಗ್ಗಣಿತ' ಮೊದಲಾದ ಲೆಕ್ಕಾಚಾರ. ಇತಿಹಾಸಕ್ಕೆ ಸಂಕ್ರಮಣಗಳು ಹಾಗೂ ಗ್ರಹಣಗಳು ಬಹುಮುಖ್ಯ. ಮಹಾದಾನಗಳಿಗೆಲ್ಲಾ ಇಂಥ ಸಮಯ ಮೀಸಲು. ಇದರಿಂದ ಪಿತೃದೇವತೆಗಳು ಸಂತೃಪ್ತರಾಗುತ್ತಾರೆ. ತಮ್ಮ ತಮ್ಮ ಮುಕ್ತಿ ಮಾರ್ಗ ಹಿಡಿಯುತ್ತಾರೆ. ಉತ್ತರಾಯಣ ಸಂಕ್ರಮಣ (ಪುಣ್ಯಕಾಲ) ಯಾವಾಗಲೂ ಜನವರಿ ೧೪. ಅಂದರೆ ಆಂಗ್ಲ ಪದ್ಧತಿಯ ಕಾಲಮಾನವೂ ಹೊಂದಿಕೆಯಾಗುತ್ತದೆ. ಉತ್ತರ ಭಾರತದಲ್ಲಿ ಕಾಲಮಾನಕ್ಕಾಗಿ ಜಂತರ್-ಮಂತರ್‌ಗಳು ೧೬ನೇ ಶತಮಾನದಿಂದ ಹುಟ್ಟಿಕೊಂಡಿವೆ. ಬನಾರಸ್, ಉಜ್ಜಯನಿ, ಮಥುರ, ಡೆಲ್ಲಿ ಮತ್ತು ಉದಯಪುರಗಳು ಕೇಂದ್ರಗಳಾಗಿವೆ. ಉಜ್ಜಯನಿಯ ಪಂಚಾಂಗವು ಐತಿಹಾಸಿಕವಾಗಿ ಪುರಾತನವಾದುದು; ಇಂದಿಗೂ ಅದರ ಪಂಡಿತರಿದ್ದಾರೆ. ಅವರ ದೃಗ್ಗಣಿತದ, ಸೂರ್ಯ ಸಿದ್ಧಾಂತದ, ಪಂಚಾಂಗ ರಚನೆಯಾಗುತ್ತಿದೆ.

ದಕ್ಷಿಣಭಾರತದಲ್ಲಿ ಶಂಕರಾಚಾರ್ಯರು 'ಪಂಚಾಯತನ'ಗಳಲ್ಲಿ ಸೂರ್ಯನನ್ನು ಸೇರಿಸಿದ್ದಾರೆ. ಅಂದರೆ ಗಣೇಶ, ಅಂಬಿಕೆ, ವಿಷ್ಣು, ಶಿವ ಮತ್ತು ಸೂರ್ಯ ಆರಾಧನೆಗೆ ತಕ್ಕವರು ಎಂದು ಶೃಂಗೇರಿ ಮಠದ 'ಶಂಕರರು' ಸೂರ್ಯ

* ನಿವೃತ್ತ ಪ್ರಾಧ್ಯಾಪಕರು, ಎಂ.ಐ.ಜಿ. ៤೧, ಎಂಬತ್ತು ಅಡಿ ರಸ್ತೆ, ಕೆಂಗೇರಿ ಉಪನಗರ, ೨ನೇ ಹಂತ, ಬೆಂಗಳೂರು - ೫೬೦ ೦೫೬

ಸಿದ್ಧಾಂತಿಗಳೆಂದು ಶಾಸನಗಳು ಹೇಳುತ್ತವೆ. ಒಟ್ಟಿನಲ್ಲಿ 'ಆದಿತ್ಯಾರಾಧನೆ'ಯನ್ನು ಗುರುತಿಸಬಹುದಾಗಿದೆ. ಇದರ ಆರಾಧನಾ ವಿಧಿಯೂ ಇದ್ದದ್ದೇ ಆಗಿದೆ. ಆದರೂ ಸೂರ್ಯನು ಲೌಕಿಕದೇವತೆ; ಉಳಿದ ದೇವತೆಗಳಂತೆ ಈವನು 'ಮುಕ್ತಿ' ದಾಯಕನಲ್ಲ; ಪಂಚಾಯತನಕ್ಕೆ ಸೇರಿದ್ದರೂ ಉಳಿದ ನಾಲ್ವರಂತೆ ಅಲ್ಲ. ಅಂದರೆ ಈತನು ಅಧ್ಯಾತ್ಮಿಕ ದೇವತೆಯಲ್ಲ. ಆದಿತ್ಯಹೃದಯದಿಂದ ಶತ್ರುರಾಹಿತ್ಯ (ಅಥವಾ ನಾಶ); ಫಲದಾಯಕ (ಮತ್ತು) ಸಂತಾನ ಪ್ರಾಪ್ತಿಗೆ ಒಡೆಯ ಮತ್ತು ರೋಗ ನಿವಾರಕ.

ಆದಿತ್ಯ ಕಲ್ಪನೆಯು ಶಿಲ್ಪರೂಪದಲ್ಲೂ ಇದೆ. ಇದರ ಆರಾಧನೆಗೆ ಒಂದು ಗೋಪ್ಯ ಮಂತ್ರವಾಗಿ 'ಆದಿತ್ಯ ಹೃದಯಂ' ಬಳಕೆಯಿದೆ. ಸೂರ್ಯ ನಮಸ್ಕಾರಕ್ಕೆ ಇದು ಆಧಾರವಾಗಿದೆ!

ಆದಿತ್ಯ ಹೃದಯಂ – ಅಗಸ್ತ್ಯ ಪ್ರಣೀತವೂ ರಾಮಾಯಣದಲ್ಲಿ ಶ್ರೀರಾಮನು ರಾವಣನನ್ನು ಗೆಲ್ಲುವ ಒಂದು ಶಕ್ತಿಯಂತೆ ಬಳಕೆಯಾಗಿದೆ. ರಾಮನೇ ಈ ಮಂತ್ರ ಶಕ್ತಿಯನ್ನು ಅಗಸ್ತ್ಯನಿಂದ ಪಡೆದು ವಿಜಯಶಾಲಿಯಾಗುತ್ತಾನೆ. (ವಿವರಗಳಿಗೆ ದಿವಂಗತ ಜಿ.ಪಿ. ರಾಜರತ್ನಂ ಅವರ ಆದಿತ್ಯಹೃದಯಂ, ಅನುವಾದ ಮತ್ತು ವ್ಯಾಖ್ಯಾನ ಸಹಿತ ದೊರಕುತ್ತದೆ.) ಇದರಿಂದ ಸೂರ್ಯನನ್ನು 'ದ್ವಾದಶಾತ್ಮಾನ್' ನಮೋಸ್ತುತೆ! ಎಂಬುದನ್ನು ದ್ವಾದಶಾದಿತ್ಯರ ಮೂಲವು ಇದೇ ಎಂಬುದನ್ನು ಗುರುತಿಸಬಹುದು. ಆದರೂ ಈ 'ಆದಿತ್ಯಹೃದಯಂ' ರಾಮಾಯಣಕ್ಕೆ ಪ್ರಕ್ಷಿಪ್ತವಾದುದು. ಶೈಲಿಯಂತೂ ಹೊಂದುವುದೇ ಇಲ್ಲ; ರಾಮಾಯಣಂ (ಸಂಸ್ಕೃತ) ಕೃತಿಗೆ ಇದು ಹೊರಗಿನಿಂದ ಸೇರಿದುದು.

ಅಮರಕೋಶದಲ್ಲಿ ಆದಿತ್ಯ ಮೊದಲಾಗಿ ಸೂರ್ಯನಿಗೆ ನಲವತ್ತೊಂಬತ್ತು 'ನಾಮ'ಗಳಿವೆ. ಶಂಭು ಎಂಬುದು ಅವುಗಳಲ್ಲೊಂದು ಕೂಡ. ಉಪಪುರಾಣಗಳಲ್ಲಿ 'ಆದಿತ್ಯ ಪುರಾಣಂ' ಸೇರಿದೆ. ಇದಕ್ಕೆ ಸಾಂಬಪುರಾಣಂ ಎಂದೂ ಹೇಳಿಕೆಯಿದೆ. ಡಾ॥ ಆರ್.ಸಿ. ಹಜ್ರಾ (ಕಲ್ಕತ್ತಾ ಸಂಸ್ಕೃತ ಮಹಾವಿದ್ಯಾಲಯ) ಅವರ ಪ್ರಕಾರ ಸೂರ್ಯಾರಾಧನೆಯು ಭಾರತಕ್ಕೆ 'ಸಿಥಿಯನ್' ರಾಜರುಗಳ ಆಳ್ವಿಕೆಯಲ್ಲಿ 'ಮಾಗಿ' ಎಂಬ ಒಂದು ಬುಡಕಟ್ಟು ಜನಾಂಗದವರಿಂದ ಬಳಕೆಗೆ ಬಂದಿರುತ್ತದೆ. ವರಾಹಮಿಹಿರನು ತನ್ನ 'ಬೃಹತ್ ಸಂಹಿತೆ' ಯಲ್ಲಿ ಇದರ ವಿವರಗಳನ್ನು ಅಂದರೆ 'ಆದಿತ್ಯ'ರ ಬಗ್ಗೆ ತಿಳಿಸುತ್ತಾನೆ.

ಡಾ॥ ಆರ್. ಸಿ. ಹಜ್ರಾ-ಅವರು The Magian influence ಎಂದು a comparative study of the features common to the Samba Purana and Bhavisya Purana has revealed the division of the Sun worshipping Magas into the two groups of Magas and Bhojakas and the deteoriation of the latter as temple priests; the differences between the sun worshipping Magas and the fire-worshipping Magas of the Zoroastrian school; and the comparatively lower status enjoyed by the latter in the society. The origin of the Samba Purana is traced to the Punjab and the claims of Orissa for the same are disapproved : (Puranam : Purana Vol. No. July 1959.

ಡಿ.ಡಿ. ಕೊಸಾಂಬಿಯವರು ಹರ್ಷನ ಬಗ್ಗೆ - 'his clan deity was the Sun God, popular in Punjab since Persian influence entered again with the Kushanas and created a new sect of "Maga brahmins, presumably of Magain origin" (pp 182, **The Culture and Civilization of Ancient India in Historical outline**-D.D. Kosambi) ಎಂದು ತಿಳಿಸಿದ್ದಾರೆ. ಇಂತಹ ವರ್ಗವೊಂದು ಕ್ಷತ್ರಿಯ ಬ್ರಾಹ್ಮಣರೆನಿಸಿಕೊಂಡರು. ಇವರೇ ಸೂರ್ಯನ ಪ್ರತಿಮೆಗೆ ಕಾರಣಕರ್ತರೆನ್ನಬಹುದು. ವರಾಹಮಿಹಿರನು ಬೃಹತ್ ಸಂಹಿತೆಯಲ್ಲಿ ಸೂರ್ಯನ ಪ್ರಾರ್ಥನೆಯನ್ನೂ ರಚಿಸಿದ್ದಾನೆ ಮತ್ತು ಆದಿತ್ಯರು ಸೂರ್ಯನ ಶಿಲ್ಪಿಗಳೆಂದೂ ತಿಳಿಸಿದ್ದಾನೆ. (ನೋಡಿ : ಬೃಹತ್ ಸಂಹಿತೆ)

* * *

– ೨ –

ವಾಸ್ತವವಾಗಿ ಸೂರ್ಯನ ಪ್ರತಿಮೆಯು 'ಕಾಲದ ಪ್ರತಿಮೆ'ಯಾಗಿದೆ. ಹಗಲು-ರಾತ್ರಿ, ಎಂಟು ದಿಕ್ಕುಗಳು, ತಾರಾಮಂಡಲಗಳಲ್ಲಿ 'ಚಾಲನ'-ಇಂತಹ ವಿಚಾರಕ್ಕೆ ವೈದ್ಯ, ಜ್ಯೋತಿಷ, ವಾಸ್ತು, ಖಗೋಳಶಾಸ್ತ್ರ ಮೊದಲಾದವು, ಪುರಾಣಗಳು, ಕಾಮಶಾಸ್ತ್ರ ಕೂಡ, ಹೊಂದಿಕೊಂಡು ರಚಿತವಾಗಿರುವಂತೆ ತೋರುತ್ತದೆ. ಏಕೆಂದರೆ ಇದೆಲ್ಲದರ ಸಂವಹನವನ್ನು ಸೂರ್ಯಶಿಲ್ಪ ಮತ್ತು ದೇಗುಲಗಳಲ್ಲಿ ಕಾಣಬಹುದಾಗಿದೆ. ಕನ್ನಡದಲ್ಲಿ 'ಮಾಗಿ' ಎಂದರೆ ಹಣ್ಣಾಗಿ ಎಂದು ಅಲ್ಲದೆ ಪ್ರಕೃತಿಯ (ಕಾಲಚಕ್ರದಲ್ಲಿ) ಒಂದು 'ಋತು' ವನ್ನೂ ಗುರುತಿಸುತ್ತದೆ. ಇದಕ್ಕೆ ಸೂರ್ಯ ಸಂಬಂಧವಿದೆ ಕಟಕರಾಶಿಯಿಂದ ಮಿಥುನಕ್ಕೆ ಸೂರ್ಯ ಚಲಿಸುತ್ತಾನೆ. ಹಾಗೇ

ಮುಂದೆ ಮುಂದೆ ಒಂದು ವೃತ್ತ. ಈ ನಾಡಿನಲ್ಲಿ ಸೂರ್ಯ ದೇಗುಲಗಳು ಜನಪ್ರಿಯವಾಗಿದ್ದಂತೆ ತೋರುತ್ತದೆ. (ಎಲ್ಲೆಲ್ಲೂ ಸೂರ್ಯ ಮತ್ತು ತಾವರೆ ಕೆರೆಗಳಿವೆ!) ವಾಸ್ತವವಾಗಿ ಬಾದಾಮಿ ಮತ್ತು ಕಲ್ಯಾಣಿ ಚಾಲುಕ್ಯರಿಂದಲೂ 'ಸೂರ್ಯಾರಾಧನೆ' ಪ್ರಸಿದ್ಧಿ ಪಡೆದಿದೆ. ಕಲ್ಯಾಣ ಚಾಲುಕ್ಯರಿಗೂ ಚೋಳರಿಗೂ ನಡೆದ ಘರ್ಷಣೆಯಲ್ಲಿ ತಮಿಳುನಾಡಿಗೂ ಹೋಗಿದೆ. ಗಂಗೈಕೊಂಡ ಚೋಳಪುರಂ ನಂತರವೇ ಅಥವಾ ಆ ಮೂಲಕ ಸೂರ್ಯಾರಾಧನೆ ಹರಡಿದೆ. ಅಲ್ಲಿ ಮೊಟ್ಟ ಮೊದಲಿಗೆ ಸೂರ್ಯನು ದ್ವಾರಪಾಲಕ ನಾದಂತಿದೆ. - ಕ.ವೆಂ. ರಾಜಗೋಪಾಲ - ಸ್ವಂತ ವೀಕ್ಷಣೆ.

ಗುಪ್ತರ ಕಾಲದ ಸೂರ್ಯಾರಾಧನೆ - C.I.G. Vol III No. 37 ಗ್ವಾಲಿಯರ್ ಕೋಟೆಯಲ್ಲಿನ ಗುಹೆಯಲ್ಲಿ ಮಿಹಿರಕುಲನ ಶಾಸನವನ್ನು ದಾಖಲಿಸಲಾಗಿದೆ. ಇದು ಒಂದು ಪುರಾತನ (!) ಸೂರ್ಯ ದೇಗುಲಕ್ಕೆ ಸಂಬಂಧಿಸಿದ್ದು. ಪ್ರಾಯಶಃ ಇದೇ ಮೊಟ್ಟ ಮೊದಲ ಸೂರ್ಯದೇಗುಲ. ಇದೊಂದು ಗುಹೆ; ಇದರ ಮುಂದಿನ ಒಂದು ಕೊಳದ 'ಜಲ'ವು ಚರ್ಮರೋಗಕ್ಕೆ ಸಿದ್ಧೌಷಧವಾಗಿ ಪ್ರಸಿದ್ಧಿಗೆ ಬಂದುದಾಗಿದೆ. ಈ ಬೆಟ್ಟವನ್ನು 'ಗೋಪ' ಎಂದು ಕರೆದು ಒಬ್ಬ ಹಳ್ಳಿಗ (=ಗವಾಲಿ)ನ ನೆನಪಿನಿಂದಾಗಿ 'ಗ್ವಾಲಿಯರ್' ಆಗಿದೆಯೆಂದಿದ್ದಾರೆ. ಇದರ ಕಾಲ ಕ್ರಿ. ಶ. ಸುಮಾರು ೨-೩ನೇ ಶತಮಾನವೆಂದು ವಿದ್ವಾಂಸರು ಅಭಿಪ್ರಾಯ ಪಟ್ಟಿರುತ್ತಾರೆ.

ಈ ಗ್ರಂಥದ C.I.G. Vol IIIರ ಸೂಚಿ, ಪು. ೩೨೦ ರಲ್ಲಿ ಗುಪ್ತರ ಕಾಲದ ಶೀಲಾದಿತ್ಯರ ವಂಶಾವಳಿಯನ್ನೂ ಆನಂದ ಪುರದ ಗುಹಸೇನನಿಂದ ಮೊದಲಾಗಿ ಅಂದರೆ ಧರ್ಮಾದಿತ್ಯ ಅಥವಾ ಶೀಲಾದಿತ್ಯ I, II, III, IV, V, VI ಕೊನೆಗೆ ಶೀಲಾದಿತ್ಯ VIIನವರೆಗೂ ಪಟ್ಟಿ ಮಾಡಿದೆ; ಅವರ ಧ್ವಜವಾದ ಕಾರ್ತಿಕೇಯನ (Peacock) ವಿಷಯವೂ ಇದೆ.

ಇಷ್ಟು ಮಂದಿ ಶೀಲಾದಿತ್ಯ ಎಂಬ ಉಪನಾಮವನ್ನು ಬಳಸುವುದಕ್ಕೆ ಮುಖ್ಯ ಕಾರಣವೆಂದರೆ ಪ್ರತಿಯೊಬ್ಬರೂ ಸೂರ್ಯದೇಗುಲದ ನಿರ್ಮಾತೃಗಳಿದ್ದಾರೆ. ಅಲ್ಲದೆ ಗುಪ್ತರು (ಕುಮಾರಗುಪ್ತ ಕ್ರಿ. ಶ. ೩೨೦ ರಿಂದ) ಎಲ್ಲರೂ ಸೂರ್ಯಾರಾಧಕರಾಗಿದ್ದಾರೆ ಎಂದು ತಿಳಿದುಬರುತ್ತದೆ.

ಇದೇ ಗ್ರಂಥದ No. 42, XXVIII - ಭಾಗದಲ್ಲಿ ಆದಿತ್ಯಸೇನನು ಮಗಧದರಾಜನಾಗಿ ಕ್ರಿ. ಶ. ೬೭೨-೭೩ರಲ್ಲಿ ಆಳುತ್ತಿದ್ದು ವಿಷ್ಣು ದೇಗುಲವೊಂದನ್ನು ನಿರ್ಮಿಸಿದ ವಿಷಯವು ಬೆಳಕಿಗೆ ಬರುತ್ತದೆ.

ಇವರ, ಅಂದರೆ, ಗುಪ್ತರ ಕಾಲದಲ್ಲಿ ಕಾಶ್ಮೀರದ ಮಾರ್ತಾಂಡ ದೇಗುಲವೂ ಕಾಥೇವಾರದ ಮೊಡೇರ ದೇಗುಲವೂ ನಿರ್ಮಾಣವಾಗಿವೆ. ಕಾಶ್ಮೀರದ ದೇಗುಲವನ್ನು ರಾಜಾದಿತ್ಯ ಮತ್ತು ಲಲಿತಾದಿತ್ಯ ಎಂಬುವರಿಂದ ಸುಮಾರು ಒಂದು ಶತಮಾನದ ಅಂತರದಲ್ಲಿ ಅಂದರೆ ಕ್ರಿ. ಶ ೫-೬ ಶತಮಾನಗಳಲ್ಲಿ ಸೂರ್ಯದೇಗುಲವೊಂದು ನಿರ್ಮಾಣವಾಗಿ ವೈಭವದಿಂದ ಮೆರೆದದ್ದಾಗಿ ಕಡೆಗೆ ಅವಶೇಷವಾಗಿದೆ. (ನಾಲಂದದಲ್ಲಿ ಕೂಡ ಚಂದ್ರಾದಿತ್ಯ ಮತ್ತು ಬಾಲಾದಿತ್ಯರಿಂದ ನಿರ್ಮಿತವಾದ ಸೂರ್ಯದೇಗುಲವು ಈಗ ಅವಶೇಷವೇ ಆಗಿದೆ (ಸ್ವಂತ ಪರಿಚಯ ಕ.ವೆಂ). ಇದನ್ನೆಲ್ಲಾ ಕನ್ನಿಂಗ್ ಹ್ಯಾಮ್ ಮತ್ತು ಬುಹ್ಲರ್ ಮೊದಲಾದ ವಿದ್ವಾಂಸರು ಗುರುತಿಸಿದ್ದಾರೆ.

ಗುಪ್ತರ ಕಾಲದಲ್ಲಿ ಸೂರ್ಯ ಸಿದ್ಧಾಂತವು ವಿಕಾಸವಾದಂತೆ ೩೬೫ ದಿನ-೧೭ ಘಂಟೆ-ಒಂದು ವರ್ಷ-೬೦ ಸಂವತ್ಸರ- ಹೀಗೆ ೬೦ ಕಾಲಮಾನ ಚಕ್ರವೂ ದ್ವಾದಶ ರಾಶಿಯಲ್ಲಿ ಸೂರ್ಯಸಂಚಾರ, ಸುಮಾರು ೩೦ ಹಗಲಿನ ಒಂದು ತಿಂಗಳು ೩೬೧ ದಿನಗಳು-ಹೀಗೆ ಜ್ಯೋತಿಷದ ಮೂಲ ಸೂತ್ರಾಂಶಗಳೆಲ್ಲಾ ಖಚಿತವಾದಂತೆ ಕಂಡುಬರುತ್ತದೆ.

ಗುಪ್ತರ 'ಲಿಚ್ಛವಿ'ಗಳು, ಸೂರ್ಯವಂಶಿಗಳು, ಸೂರ್ಯ ದೇಗುಲಗಳ ನಿರ್ಮಾತೃಗಳಾಗಿ 'ಮಾರ್ತಾಂಡ'ದ ಸೂರ್ಯವೈಭವಕ್ಕೆ ಕಾರಣರೆಂದೂ ತಿಳಿಯುತ್ತದೆ. ಮೊದಲಿಗೆ ರಾಜಾದಿತ್ಯನು ನಿರ್ಮಿಸಿದ ಸೂರ್ಯ ದೇಗುಲವನ್ನು ಲಲಿತಾದಿತ್ಯನು ಹೊರಚೌಕಟ್ಟಿನಿಂದ ವೃದ್ಧಿಪಡಿಸಿ ಸೂರ್ಯನ 'ಐಸಿರಿ'ಯನ್ನು ಹೆಚ್ಚಿಸಿದನೆಂದೂ ತನ್ನ ದಿಗ್ವಿಜಯಗಳಿಂದ ಪ್ರಸಿದ್ಧನಾಗಿದ್ದನೆಂದೂ ಇತಿಹಾಸವು ದಾಖಲಿಸಿದೆ.

ಗುಪ್ತರಲ್ಲಿ 'ಶೀಲಾದಿತ್ಯ' ಎಂಬುದು ಕೂಡಿಕೊಂಡದ್ದೇ ಹೊರತು ಹುಟ್ಟು ಹೆಸರಲ್ಲ. ಇದಕ್ಕಾಗಿ ಅವರು ಸೂರ್ಯ ದೇಗುಲಗಳನ್ನು ಕಟ್ಟಿಸಿ 'ಕುಲದೇವತೆ'ಯನ್ನಾಗಿ ಮೆರೆಸಿ ತಮ್ಮ ವಿಕ್ರಮಗಳಿಗೆ 'ಆದಿತ್ಯಹೃದಯಂ' ಬಳಸುತ್ತಿದ್ದುದೇ ಆದಂತಿದೆ. ಆರನೆಯ ಶೀಲಾದಿತ್ಯನಾದ ಮೇಲೆ ಹರ್ಷವರ್ಧನನು ಒಂದು ಸೂರ್ಯದೇಗುಲವನ್ನು ನಿರ್ಮಿಸಿ (ಇದು 'ಮೊಡೇರ' ಇರಬಹುದು) 'ಶೀಲಾದಿತ್ಯ'ನಾದನೆಂಬುದನ್ನು ಹ್ಯೂಯಂತ್ಸಾಂಗನು ಖಚಿತಪಡಿಸಿದ್ದಾನೆ. ಇದಾದ ನಂತರವೇ ಹರ್ಷನು ಥಾನೇಶ್ವರದ ಬಳಿ ನರ್ಮದೆಯ ದಂಡೆಯ ಮೇಲೆ

ಚಾಲುಕ್ಯ ಪುಲಿಕೇಶಿ-II ನ್ನು ಎದುರಿಸಿ ನಿಂತು ಆತನೊಡನೆ ಒಪ್ಪಂದ ಮಾಡಿಕೊಂಡಿರಬೇಕು - ಎನ್ನುವುದಕ್ಕೆ ಶೀಲಾದಿತ್ಯ ಎಂಬುದು ಸಮರ್ಥಿಸುತ್ತದೆ - ಇದರಲ್ಲಿ 'ಪಂಚಶೀಲ'ದ ಪರಿಪಾಲನೆಯು ಸೇರಿದ್ದಿರಬೇಕು. ಅದುದರಿಂದ ಇಬ್ಬರಲ್ಲಿಯೂ 'ಸಂಧಿ'ಯು ಅವಕಾಶವಾಗಿರುವಂತಿದೆ. ಇದರಂತೆ ಇಮ್ಮಡಿ ಪುಲಿಕೇಶಿಯು 'ದಕ್ಷಿಣಾ ಪಥೇಶ್ವರ' ಎಂಬ ಬಿರುದನ್ನು ಪಡೆದುಕೊಂಡು ನರ್ಮದೆಯನ್ನು ದಾಟದೇ ಬಂದನೆಂದು ತೋರುತ್ತದೆ. ಇದು ಒಂದು ಪ್ರಮುಖ ಐತಿಹಾಸಿಕ ದಾಖಲೆಯೂ ಆಗಿದೆ.

ಒಟ್ಟಿನಲ್ಲಿ ಹರ್ಷವರ್ಧನನ ಸಂಬಂಧವಾದ ನಂತರವೇ ಬಾದಾಮಿಯ ಚಾಲುಕ್ಯ ಮನೆತನದಲ್ಲಿ 'ಆದಿತ್ಯ' ಬಳಕೆಯಾಗಿರುವುದನ್ನು ಕಾಣುತ್ತೇವೆ. ಅದಕ್ಕಿಂತಲೂ ಮುಂಚೆ ದಕ್ಷಿಣದಲ್ಲಿ ಸೂರ್ಯನ ದೇಗುಲಗಳಾಗಲಿ ಆದಿತ್ಯರಾಗಲಿ ಇದ್ದಿರುವಂತಿಲ್ಲ.

* * *

- ೩ -

ಬಾದಾಮಿಯ ಚಾಲುಕ್ಯರು 'ನರಸಿಂಹ' ವಂಶದವರಾಗಿದ್ದುದಲ್ಲದೆ ಊರ್ಧ್ವರೇತೇಶ್ವರ Totem, Worshippers ಅಥವಾ ಲೈಂಗಿಕ ಸಂಕೇತಾರಾಧಕರೂ ಆಗಿದ್ದಿರಬೇಕು. ಮುಂದೆ ಎರಡನೇ ಪುಲಿಕೇಶಿಗೂ ಹರ್ಷವರ್ಧನನಿಗೂ ಒದಗಿದ ಸಂಪರ್ಕದಿಂದಾಗಿ ಪುಲಿಕೇಶಿಯ ಮಕ್ಕಳು ವಿಕ್ರಮಾದಿತ್ಯ! ಮೊದಲಾಗಿ ತಮ್ಮ ಉಳಿವಿಗಾಗಿ ಸೂರ್ಯಾರಾಧನೆಯನ್ನು ಸ್ವೀಕರಿಸಿರುವಂತೆ ಕಂಡುಬರುತ್ತಿದೆ. ಅಂದರೆ 'ಕೀರ್ತಿಮುಖ'ದ ಆರಾಧನೆಯಿಂದ 'ಪಾಶುಪತ' ಪಂಥದ ಹೆಗ್ಗುರುತಾದಂತೆಯೇ 'ನರಸಿಂಹ' ವಿಗ್ರಹವೂ ಕಂಡು ಬರುತ್ತದೆ.

ಇಂದಿಗೂ 'ನರಸಿಂಹ' ದೇಗುಲಗಳು ಬುಡಕಟ್ಟು ಜನಾಂಗಗಳ ಆರಾಧನೆಯಲ್ಲಿ ಉಳಿದಿರುವುದನ್ನು (ಬ್ಯಾಡರು ಮೊದಲಾಗಿ ನರಸಿಂಹ-ಸಾಲಗ್ರಾಮದ ರೂಪದ ಆರಾಧಕರಾಗಿದ್ದು ಅದಕ್ಕೆ ನರಸಿಂಹ ಜಯಂತಿಯಲ್ಲಿ ರಕ್ತಬಲಿಯನ್ನು ನೀಡುತ್ತಾರೆ.) ಕಾಣುತ್ತಿದ್ದೇವೆ. ಈ ವಿಗ್ರಹದ ಒಂದು ಪಾಶುಪತ ರೂಪವು - ಸಿಂಹವು ಕುಳಿತಂತೆ ತನ್ನ ಲೈಂಗಿಕ ಸಂಕೇತವನ್ನು ತೋರುತ್ತಿರುವುದನ್ನು ನರಸಿಂಹ ದೇಗುಲಗಳಲ್ಲೆಲ್ಲಾ ಕಾಣಬಹುದಾಗಿದೆ. ಇದೇ ಟೋಟೆಂ ಇಮೇಜ್ ಅಂದರೆ ಒಂದು ಹಳೆಯ ಲೈಂಗಿಕ ಸಂಕೇತ ರೂಪವಾಗಿದ್ದು ನಾಗರಿಕತೆಯ ದೆಸೆಯಿಂದ ಅದನ್ನು ಕೇವಲ ಅಲಂಕಾರವೆನ್ನುವಂತೆ ಬಳಸುತ್ತಿರಬಹುದಾಗಿದೆ. ಮೊದಲಿಗೆ ಇದರ ಸಂಗಡ ಉಗ್ರ ನರಸಿಂಹ ರೂಪ ಕೂಡ ಇಂತಹ ಸೂಚನೆಗಳುಳ್ಳದ್ದಾಗಿದ್ದು ರಾಮಾನುಜಾಚಾರ್ಯರ ನಂತರ ಯೋಗಾ ನರಸಿಂಹ ರೂಪದ ಆರಾಧನೆಯು ಪ್ರಧಾನವಾಗಿ ಬಂದಿರುವಂತಿದೆ. ಒಟ್ಟಿನಲ್ಲಿ ವಿರೂಪಾಕ್ಷ ಎಂಬುದು ಇದೇ ರೂಪವಾಗಿದ್ದು ಪಕ್ಕಕ್ಕೆ ಸರಿಸಿದಂತೆ ಆಗಲು ಪುಲಿಕೇಶಿಯ ಮಕ್ಕಳಿಗೆ ಸೂರ್ಯ ಆರಾಧನೆಯು ಉಪಯುಕ್ತವೂ ಸಾಧಕವೂ ಆಗಿರುವಂಥದೇ ಮುಖ್ಯವಾಗಿರುತ್ತದೆ.

ಸೂರ್ಯನ ಪ್ರತಿಮೆಯನ್ನು ಆದಿತ್ಯವೇ ರಚಿಸಬೇಕು ಮತ್ತು ದಿಗ್ವಿಜಯಕ್ಕೆ ರಾಜನು ಹೊರಡುವಲ್ಲಿ ಸೂರ್ಯಾರಾಧನೆಯಿರಬೇಕೆಂದು ವರಾಹಮಿಹಿರನು ತನ್ನ ಬೃಹತ್ ಸಂಹಿತೆಯಲ್ಲಿ ತಿಳಿಸಿರುತ್ತಾನೆ.

ಸೂರ್ಯನೆಂದರೆ ಒಂದು ತಾವರೆಯ ಕೊಳ (ವೈದ್ಯಕೀಯ ಅಥವಾ ರೋಗ ಪರಿಹಾರಕ ಗುಣಗಳುಳ್ಳ ಸರಸ್ಸು)ವೊಂದು ಸೇರಿರುತ್ತದೆ. ಕಾಶ್ಮೀರದ ಮಾರ್ತಾಂಡದಿಂದ ಮೊದಲಾಗಿ ಎಲ್ಲಾ ಸೂರ್ಯಕ್ಷೇತ್ರಗಳಲ್ಲೂ ತಾವರೆಯ ಕೊಳವು ಕಂಡು ಬರುತ್ತಿದೆ. ನಾಲಂದದ ಸೂರ್ಯದೇಗುಲಕ್ಕೆ ಕೂಡ ಈ ರೀತಿಯು ಖಚಿತವಾಗಿದೆ. ಆದುದರಿಂದ ಸೂರ್ಯ ವಿಗ್ರಹಕ್ಕೆ ಎರಡೂ ಕೈಗಳಲ್ಲಿ ತಾವರೆಯ (ಅರೆ) ಮೊಗ್ಗುಗಳೂ ಆತನು ಯುದ್ಧದ ದೇವತೆಯಾದುದಕ್ಕೆ ಬೂಟುಕಾಲಿನ ರಕ್ಷಣೆಯೂ ಆತನ ಪ್ರಭಾವಳಿಯಲ್ಲಿ ದ್ವಾದಶ ಆದಿತ್ಯರೂ ಸೇರಿರುತ್ತಾರೆ. ಆತನ ದೇಗುಲದಲ್ಲಿ ಪ್ರಧಾನವಾಗಿ ಕಾಣುವಂತೆ ನವಗ್ರಹಗಳು ಕಂಡುಬರುತ್ತವೆ. ಸೂರ್ಯನಿಗೆ ಅರುಣನ ಸಾರಥ್ಯದಲ್ಲಿ ಸಪ್ತಾಶ್ವಗಳು ಇದ್ದು ಅಂದಿನ ಕಾಲದ ರಣರಂಗಕ್ಕೆ ರಥವು ಮುಖ್ಯ ಸಾಧನವಾಗಿದ್ದುದನ್ನೂ ಸೂಚಿಸುತ್ತದೆ.

ಸೂರ್ಯ ಸಿದ್ಧಾಂತವು ಕ್ರಿ.ಶ. ೪೦೦ರ ವೇಳೆಗೆ ಸೇರಿದುದ್ದಾಗಿದ್ದು ಅದರ ಸಂಬಂಧದಲ್ಲಿ ಪಂಚಾಂಗ ರಚನೆ ಮತ್ತು ಜನ್ಮಕುಂಡಲಿಯ ಜಾತಕ ರಚನೆಗಳೂ ಬಳಕೆಗೆ ಬಂದು ವರ್ಷವೆಂಬ ಕಾಲದ ಒಂದು 'ಗಣನೆ'ಯನ್ನು ದ್ವಾದಶರಾಶಿ (ನಕ್ಷತ್ರಗಳ ಗುಂಪುಗಳ)ಗಳೂ ಸೂರ್ಯನೂ ಕಾಲಮಾಪನೆಗೆ ಸೇರಿದವರಾಗಿರುತ್ತಾರೆ - ಸೂರ್ಯನಿಗೆ ಪಾದಗಳ ಸೇವೆಯಲ್ಲಿರುವಂತೆ ಎರಡು ಸ್ತ್ರೀ ವಿಗ್ರಹಗಳೂ ಛಾಯಾ-ಪ್ರತಿಛಾಯಾ (ಬೇರೆ ಹೆಸರೂ ಇರುವಂತಿದೆ) ಎಂಬ ರೂಪಗಳೂ ಸೇರುತ್ತವೆ. ೧೨ನೇ ಶತಮಾನದವರೆಗೂ ಆಳಿದ ಕಲ್ಯಾಣಿ ಚಾಲುಕ್ಯರು ಕಟ್ಟಿಸಿದ ಸೂರ್ಯದೇಗುಲಗಳಲ್ಲಿ ಈ ಅಂಶಗಳೆಲ್ಲವೂ ಪ್ರಧಾನವಾಗಿ ಕಂಡುಬರುತ್ತಿವೆ.

ಸೂರ್ಯ ಪ್ರತಿಮೆಗೆ ಅಶ್ವಗಳಿಲ್ಲದವೆಂದರೆ ಕೇವಲ ಸೂರ್ಯಸಿದ್ಧಾಂತದ ಬಳಕೆಗಾಗಿ ಮತ್ತು ಸಂತಾನ ಪ್ರಾಪ್ತಿಗಾಗಿ ನಿಲ್ಲಿಸಿರಬಹುದಾದ 'ಆದಿತ್ಯ' ವಿಗ್ರಹಗಳಿರಬಹುದಾಗಿವೆ- ಇವು ಇಂದಿಗೆ ಶೈವದೇಗಲುಗಳ ಪ್ರಾಕಾರಗಳಲ್ಲಿ ಅನಾಥವಾದಂತೆ ಕಂಡು ಬರುತ್ತಿವೆ.

ಒಟ್ಟಿನಲ್ಲಿ ಬಾದಾಮಿ ಚಾಲುಕ್ಯರಲ್ಲಿ ಸುಮಾರು ಕ್ರಿ.ಶ. ೬೦೬ರ ನಂತರದಲ್ಲಿ ಸೂರ್ಯರಾಧನೆಯು ಪ್ರಧಾನವಾಗಿ ವಿಕ್ರಮಾದಿತ್ಯನಿಂದ ಮುಂದುವರಿದು ಬಂದು ಪ್ರಮುಖ 'ಆರಾಧನಾ' ವಿಧಿ-ವಿಧಾನವಾಗಿ ಬಳಕೆಯಲ್ಲಿ ಬಂದಂತೆ ಕಂಡುಬರುವುದನ್ನು ನಮ್ಮ ಇತಿಹಾಸಕ್ಕೆ ಗುರುತಿಸಬೇಕಾಗಿದೆ.

ಮುಂದೆ ಕರ್ನಾಟಕದಲ್ಲಿ ರಾಷ್ಟ್ರಕೂಟರ ಸಂಬಂಧದಲ್ಲಿ ಮಣ್ಣೆ ಮೊದಲಾಗಿ ಅನೇಕ ಕಡೆ ಸೂರ್ಯದೇಗುಲಗಳಿವೆ. ಇವುಗಳೆಲ್ಲಾ ತಾವರೆಕೊಳದ ಸಮೀಪವೂ ವೀರಗಲ್ಲುಗಳ ಸಂಬಂಧವೂ ಉಳ್ಳವಾಗಿವೆ. ಉದಾ : ಹಲಸಿಯಲ್ಲಿ ಸೂರ್ಯನ ಪ್ರತಿಮೆಯನ್ನು ಯೋಗನಾರಾಯಣ ದೇಗುಲದ ಗರ್ಭಗುಡಿಗೆ ವರ್ಗಾಯಿಸಿರುವುದನ್ನು ಹಳೆಯ ಸೂರ್ಯ ದೇಗುಲದ ಮುಂದೆ ಅಭಿಮುಖವಾಗಿ ವೀರಗಲ್ಲುಗಳೂ ಮಾಸ್ತಿಕಲ್ಲುಗಳೂ ಇರುವುದನ್ನು ಗಮನಿಸಬಹುದು. ಅಂದರೆ ದೊರೆಯ ದಿಗ್ವಿಜಯದಲ್ಲಿ ಪಾಲುಗೊಳ್ಳುವ ವೀರರ ವೀರಗಲ್ಲುಗಳೂ ಅವರನ್ನು ಅನುಸರಿಸಿದಂತೆ ಚಿತೆಯೇರಿದ ಮಾಸ್ತಿಯವರನ್ನು ಸೂರ್ಯಾರಾಧನೆಯ ಸಂಬಂಧದಲ್ಲಿಯೆ ಗುರುತಿಸಬೇಕಾಗುತ್ತಿದೆ. ಬಳ್ಳಿಗಾವೆಯಾಗಲಿ ಬಾಗಳಿ ಯಾಗಲಿ ಬೇಗೂರಾಗಲಿ ಮೇಲೆ ಹೇಳಿದ ಸೂಚನೆಗಳು ಸೂರ್ಯ ಪ್ರತಿಮೆಗಳ ಸಂಬಂಧದ ಅವಶೇಷಗಳಲ್ಲಿ ಕಂಡು ಬರುತ್ತಿವೆ. ಇಂತಹ ಒಂದು ಪ್ರಧಾನವಾದ ಮತ್ತು ರಾಷ್ಟ್ರಕೂಟರ ಕಾಲದ ದೇಗುಲದ ಚೌಕಟ್ಟು ಇಂದಿಗೂ 'ಮಾಗಳ'ದಲ್ಲಿ ಉಳಿದಿರುವುದಂತೂ ನಮ್ಮ ಇತಿಹಾಸದ ಅದೃಷ್ಟವೆನ್ನುವಂತಿದೆ. ಇದರಲ್ಲಿ ಮಿಥುನ ಶಿಲ್ಪಗಳಲ್ಲದೆ 'ತ್ರೈಪುರುಷ' ದೇಗುಲವೆಂಬ ಸಂಸ್ಕೃತ ಶಾಸನವೊಂದೂ ಸುತ್ತಲ (ಹೊರಗಡೆ) ಗೋಡೆಯಲ್ಲಿ ಯುದ್ಧದ ಚಿತ್ರಗಳ ಶಿಲ್ಪ ಕೆತ್ತನೆಗಳೂ (ಇವು ಮುಖ್ಯವಾಗಿ ರಾಮಾಯಣದ ನೆನಪು ತರುವಂಥವು. ಪಟ್ಟದಕಲ್ಲಿನ ದೇಗುಲಗಳಲ್ಲೂ ಇಂಥವೇ ಕೆತ್ತನೆಗಳು ರಾಮಾಯಣದ ನೆನಪು ತರುತ್ತವೆಯಷ್ಟೆ!) ಗೋಪುರ ರಹಿತವಾದ ಚಚ್ಚೌಕದ ಕಟ್ಟಡವಾಗಿಯೂ ಇರುವ ರಚನೆಯಲ್ಲಿ ಕಾಣುತ್ತೇವೆ. ಈ ದೇಗುಲ ಮಾತ್ರ ಇನ್ನೂ ಸುರಕ್ಷಿತವಾಗಿರುವುದು ಕೂಡ ಆಶ್ಚರ್ಯವಾಗಿದೆ.

ಒಟ್ಟಿನಲ್ಲಿ ಚಾಲುಕ್ಯ-ರಾಷ್ಟ್ರಕೂಟ ಕಾಲದ ದೇಗುಲ ಗಳಲ್ಲಿ ಸೂರ್ಯಾರಾಧನೆಯು ಮುಖ್ಯವಾಗಿದ್ದು ಅದಕ್ಕೆ ಗುಪ್ತರ ಕಾಲದ ಪ್ರಭಾವವೆನ್ನುವಂತೆ ಹರ್ಷಚಕ್ರವರ್ತಿಯ ಸಂಬಂಧದಲ್ಲಿ ಕರ್ನಾಟಕದ ಸೂರ್ಯದೇಗುಲಗಳು ವಿಫುಲವಾಗಿ ರೂಪತಾಳಿ ಸುಮಾರು ೧೨ನೇ ಶತಮಾನದ ಅಂತ್ಯದ ಸಮಯಕ್ಕೆ ಇವುಗಳೆಲ್ಲಾ ಬಹುಪಾಲು ನಾಶವಾಗಿ ರುವ ಸಾಧ್ಯತೆಯು ಐತಿಹಾಸಿಕ ದಾಖಲಾಗಬಹುದಾಗಿದೆ.

* * *

- ೪ -

ಕ್ರಿ. ಶ. ಹತ್ತನೆಯ ಶತಮಾನದ ವೇಳೆಗೆ ಅಂದರೆ ರಾಷ್ಟ್ರಕೂಟ ಕೃಷ್ಣ III ಆದಮೇಲೆ ಒದಗಿಬಂದ ಅನುಕೂಲದಲ್ಲಿ ಕೋಗಳಿ ಶಾಸನ ಕ್ರಿ. ಶ. ೯೯೨ರಲ್ಲಿ ಆದಿತ್ಯ ವರ್ಮ ಎಂಬ ಸೌಂದತ್ತಿ ನಾಡಪ್ರಭು - ಈತನ ಕಾಲದಲ್ಲಿ ಮಾಗಳದ ಸೂರ್ಯದೇಗುಲವು ಹೆಚ್ಚು ವೈಭವದಿಂದ ಮೆರೆದಿರಲು ಸಾಕು. ಇದರ ಜೊತೆಗೆ ಬಾಗಳಿಯ ಅಗ್ರಹಾರವು ಕಲ್ಲೇಶ್ವರ-ನರಸಿಂಹ-ಕಲಿದೇವ ಮತ್ತು ಸೂರ್ಯ ದೇಗುಲಗಳ ಒಂದು ಸಂಕೀರ್ಣ ಕ್ಷೇತ್ರವಾಗಿದ್ದಿತು. ಇಲ್ಲಿಂದ ಮುಂದೆ ಅಬ್ಬಲೂರು, ಹಾವೇರಿ ಮೊದಲಾದೆಡೆಗಳಲ್ಲಿ ಸೂರ್ಯ ದೇಗುಲಗಳು ಮೂಡಿರಬಹುದು.

ವಾಸ್ತವವಾಗಿ ಕಲ್ಯಾಣ ಚಾಲುಕ್ಯರು ಸೂರ್ಯ ದೇಗುಲಗಳಿಗೆ ನೀಡಿದ ದತ್ತಿ ಶಾಸನಗಳು, ವೀರಗಲ್ಲುಗಳು ಮತ್ತು ಮಾಸ್ತಿಕಲ್ಲುಗಳು ಅಧಿಕ ಸಂಖ್ಯೆಯಲ್ಲಿ ಗಮನ ಸೆಳೆಯುತ್ತವೆ. ಅಲ್ಲದೆ ಕಾಳಾಮುಖ ವರ್ಗವೊಂದು ಪೂಜಾವಿಧಿಗಳ ಹಾಗೂ ರಾಜಕೀಯದ ನಡೆವಳಿಕೆಗಳಲ್ಲೂ ಕೈವಾಡವಿರಿಸಿದ್ದು ಪ್ರಭಾವಶಾಲಿಯಾಗಿರಬೇಕೆಂಬುದನ್ನು ಬಾಗಳಿ (ಇಂದಿನ ಅವಶೇಷಗಳು)ಯಿಂದ ಗುರುತಿಸ ಬಹುದಾಗಿದೆ. ಇಲ್ಲಿಯ ವೀರಗಲ್ಲುಗಳಲ್ಲಿ ಕಾಳಾಮುಖರ ಗುರುತನ್ನು ಗಮನಿಸುವಂತೆ ವೀರರನ್ನು ಶಿವನ ಸನ್ನಿಧಿಗೆ ಮುಟ್ಟಿಸುವ ಅಧಿಕೃತ ಪೂಜಾರಿಗಳಂತೆ ಕೆತ್ತನೆಗಳಲ್ಲಿ ಸೂಚನೆಯಿದೆ. ಈ ದೇಗುಲ ಸಂಕೀರ್ಣದ ಮತ್ತೊಂದು ಮಹತ್ವದ ಶಿಲ್ಪಗಳೆಂದರೆ ಮಿಥುನ ಹಾಗೂ ಲೈಂಗಿಕ ಪ್ರತಿಮೆಗಳ ಪಟ್ಟಿಕೆಗಳೇ ಆಗಿವೆ. ಈ ಕೇಂದ್ರಗಳು ಸೂರ್ಯನ ಸಂಬಂಧದಲ್ಲಿ ಇಂತಹ 'ತೆರೆದ' ರೀತಿಯ ಲೈಂಗಿಕ ಧರ್ಮವನ್ನು ತೋರುವಲ್ಲಿ ಬಹುಶಃ ಇವು ಕಾಮಸೂತ್ರಗಳ ಕೇಂದ್ರಗಳೂ ಆಗಿದ್ದಿರಬಹುದು. ಅಂದರೆ ಸಾಮಾನ್ಯ ಜನತೆಗೆ 'ಲೈಂಗಿಕ

ವಿದ್ಯೆ' (Sex Education)ಯನ್ನು ತಿಳಿಯಪಡಿಸುವ ಕೇಂದ್ರಗಳಾಗಿದ್ದಿರಬಹುದು. ಶ್ಲೀಲಾಶ್ಲೀಲತೆಯ ಕಟ್ಟುಗಳನ್ನು ಸಡಿಲಿಸುವ ಇಂಥ ಪ್ರಯತ್ನಗಳಿದ್ದದ್ದೇ ಆದರೆ ಅಂದಿನ ಸಮಾಜದಲ್ಲಿ ಪರಾಕ್ರಮ ಮತ್ತು ಭೋಗದ ಅನುಭವಗಳಿಗೆ ಇದ್ದ ಸದವಕಾಶಗಳನ್ನು ಒದಗಿಸುತ್ತಿದ್ದಿರಬೇಕೆನ್ನಿಸುತ್ತದೆ. ಇಲ್ಲಿ ಪಂಪನು ಹೇಳುವ 'ಭೋಗದ ಗೊಟ್ಟಿ'ಗಳ ನೆನಪಾಗಬಹುದು!

ಕಲ್ಯಾಣ ಚಾಲುಕ್ಯರಲ್ಲಿ ಮೂವರು ವಿಕ್ರಮಾದಿತ್ಯರನ್ನು ಗುರುತಿಸಲಾಗಿದೆ. ಸೂರ್ಯನನ್ನು ದಿಗ್ವಿಜಯದ ಗೆಲುವಿಗೂ ಸಂತಾನ ಪ್ರಾಪ್ತಿಯ ಶುಭಕ್ಕೂ ಶರಣು ಹೋಗುತ್ತಿದ್ದಿರ ಬೇಕೆಂಬ ವಿಷಯವನ್ನು ಈ ಮೂಲಕ ಅರ್ಥಮಾಡಿ ಕೊಳ್ಳಬಹುದಾಗಿದೆ. ಅಲ್ಲದೆ ಸೂರ್ಯಸಿದ್ಧಾಂತದ ಗಣಿತವನ್ನು ಕಾಲಸೂಚಕವಾದ ಸಂಕ್ರಮಣಗಳಲ್ಲದೆ ಗ್ರಹಣಗಳು ಹುಣ್ಣಿಮೆ ಅಮಾವಾಸ್ಯೆಗಳು ಋತುಮಾನಗಳ ಲಕ್ಷಣಗಳು ಇತ್ಯಾದಿ ಪಂಚಾಂಗ ವಿಚಾರಗಳಿಗೆ ಈ ಕೇಂದ್ರಗಳು ಹೆಸರುವಾಸಿಯಾಗಿದ್ದಿರಬಹುದು - ಸಂಕ್ರಾಂತಿಯ ನಡುಹಗಲಿಗೆ ಸೂರ್ಯನ ಕಿರಣವು ಶಿವಲಿಂಗದ ಮೇಲೆ ಬೀಳುವುದನ್ನು ಕುರಿತಂತೆ ಅದ್ಭುತ ನಂಬಿಕೆಗಳಿದ್ದರೂ ಅದು ಕೇವಲ ಸಂಕ್ರಮಣದ ಕಾಲವನ್ನು ಗುರುತಿಸುವ ಒಂದು ದಿವ್ಯ ಸಾಧನವಾಗಿದ್ದಿತ್ತಷ್ಟೆ.

ಮಾಗಳದ ೨೦ ಕಂಬಗಳ ಮುಖಮಂಟಪವು ಗರ್ಭಗುಡಿಯಿಂದ ಸಹಜವಾಗಿ ಹೊಂದಿಕೊಂಡಂತೆ ಉಳಿದಿರುವುದಲ್ಲದೆ (ಅಂತರಾಳದ ಕಲ್ಪನೆಯಿಲ್ಲದೆ) ಈ ಕಂಬಗಳ ಮೇಲೆ ಸೂರ್ಯಕಿರಣಗಳು ೪ ಸಾಲಿನ ೬೪ ರಂಧ್ರಗಳ ಮೂಲಕ ಬೀಳುವಂತೆ ಮುಂಬಾಗಿಲ ಗೋಡೆಯಲ್ಲಿ ಅನುಕೂಲ ಮಾಡಲಾಗಿದೆ. ಇದರ ವೈಜ್ಞಾನಿಕತೆಯನ್ನು ಕಾಲವು ನುಂಗಿದಂತೆ ಆಗಿದೆ. ಈ ಬಗೆಯ ಕಂಬಗಳಿಂದ ಕೂಡಿದ ಮಂಟಪವೊಂದು ಶೃಂಗೇರಿಯಲ್ಲಿ ಇಂದಿಗೂ ೧೨ ರಾಶಿಗಳ ಸಮಯವನ್ನು ಸೂರ್ಯನ ಕಿರಣಗಳಿಂದ ಗುರುತಿಸುವ ಒಂದು ಪ್ರಯೋಗಶಾಲೆಯಿದೆ. ಈ ಮಠದ ಅಧಿಪತಿಗಳು ಸೂರ್ಯ ಸಿದ್ಧಾಂತಿಗಳೆಂಬುದನ್ನು ಪಂಚಾಂಗ ರಚನೆಗೆ ಈ ಮಠದಲ್ಲಿ ಅನುಕೂಲ ಸ್ಥಾನವಿದೆಯೆಂದೂ ತಿಳಿದುಬರುತ್ತದೆ. ಇದೊಂದು ಕಾಲಮಾಪನದ ಪ್ರಯೋಗಶಾಲೆಯೆಂದರೆ ತಪ್ಪಾಗಲಾರದು. ಇಲ್ಲೊಂದು ಸೂರ್ಯ ಪ್ರತಿಮೆಯಿದ್ದಿರ ಬೇಕು. ಈಗ ಅದು ಕಾಣುತ್ತಿಲ್ಲ-ಶಾರದೆಯ ವಿಗ್ರಹ ಮಾತ್ರ ಈ ಮಠದಲ್ಲಿದೆ. (ಮೂಲಸ್ಥಾನದಲ್ಲಿ ವಿದ್ಯಾಶಂಕರ ಪ್ರತಿಮೆಯಿದೆ!) ಇಂದಿನ ಈ ಮಠದ ಮೂಲ ಸ್ಥಾನವು ಕೂಡಲಿ ಮಠಕ್ಕೆ ಸೇರಿದಂತೆ ಶಾಸನವು ಹೇಳುತ್ತದೆ. ಇಂಥ ಬದಲಾವಣೆಯು ಕಲ್ಯಾಣ ಚಾಲುಕ್ಯರ ಕಾಲದಲ್ಲೇ ಆಗಿದ್ದಿರಬಹುದು.

ಸೂರ್ಯಸಿದ್ಧಾಂತದ ಪೂರ್ಣ ಪ್ರಯೋಜನವನ್ನು 'ಚಾಲುಕ್ಯ ವಿಕ್ರಮರ'ದ ಗಣನೆಯಲ್ಲಿ ಕಾಣಬಹುದಾಗಿದೆ. ಆರನೆಯ ವಿಕ್ರಮಾದಿತ್ಯನು ಕ್ರಿ. ಶ. ೧೦೭೬ರಲ್ಲಿ ತನ್ನ 'ಶಕ'ವನ್ನು ಪ್ರಾರಂಭಿಸುವಲ್ಲಿ ಕಳಚೂರ್ಯರ ನೆರವು ಇದ್ದಿರಬೇಕೆಂಬುದನ್ನು ಗುರುತಿಸಬಹುದು. ಏಕೆಂದರೆ ಕಳಚೂರ್ಯರೂ ಕಲ್ಯಾಣ ಚಾಲುಕ್ಯರೂ ರಕ್ತ ಸಂಬಂಧಿಗಳು. ಈತನು ಪಟ್ಟಕ್ಕೆ ಬರುವಲ್ಲಿ ತನ್ನ ಅಣ್ಣನನ್ನು ನಿವಾರಿಸಿದಂತೆ ವಿಕ್ರಮಾಂಕಚರಿತ (ಬಿಲ್ಹಣಕೃತ-ಸಂಸ್ಕೃತ ಕಾವ್ಯ)ವು ಸೂಚಿಸುತ್ತದೆಂದು ಕರಮರಕರರು ಆರನೇ ವಿಕ್ರಮಾದಿತ್ಯ ಎಂಬ ಲೇಖನದಲ್ಲಿ ಖಚಿತಪಡಿಸಿದ್ದಾರೆ. (ನೋಡಿ : ಕನ್ನಡ ಸಾಹಿತ್ಯ ಪರಿಷತ್ಪತ್ರಿಕೆ - ತ್ರಿಭುವನಮಲ್ಲ ವಿಕ್ರಮಾದಿತ್ಯನ ಚರಿತ್ರೆ - ಅಕ್ಟೋಬರ್ ೧೯೨೫, ದತ್ತಾತ್ರೇಯ ಪರಶುರಾಮ ಕರಮರಕರ). ಅಲ್ಲದೆ ಪಟ್ಟಕ್ಕೆ ಬರುವ ವೇಳೆಗೆ ಈತನ ರಾಣಿಯೊಬ್ಬಳು ಮಾಳಲದೇವಿ-ಶಾನುಭೋಗನ ಮಗಳು ಸೂರ್ಯ ಪ್ರತಿಷ್ಠೆ ಮಾಡಿಸಿದ ಶಾಸನವೂ ಇದೆ. ಅದೇ ದೇಗುಲಕ್ಕೆ ಆರನೆಯ ವಿಕ್ರಮಾದಿತ್ಯನು ದಾನ ಮಾಡಿರುತ್ತಾನೆ. ಇಷ್ಟೆಲ್ಲಾ ವಿವರಗಳು ಅಂದಿನ ಸೂರ್ಯ ಮಹಿಮೆ ಯನ್ನು ಸಾರಿ ಹೇಳುತ್ತಿವೆ. ಆದುದರಿಂದ ಮಾಗಳದ ಮಹಿಮೆಯೂ ಇಂತಹುದೇ ಆದೀತು. ಅಗ್ರಹಾರಗಳಲ್ಲಿ ಸೂರ್ಯಾರಾಧನೆ ವಿಶೇಷವಿದ್ದಿರಬೇಕೆಂಬುದನ್ನು ಹಲವಾರು ಶಾಸನಗಳಿಂದ ಗುರುತಿಸಬಹುದಾಗಿದೆ.

ಹೀಗೆ ಸೂರ್ಯನು ವೈದ್ಯ ಮತ್ತು ಕಾಲಗತಿಯ ಜೀವನಾಡಿಯಿದ್ದಂತೆ ಎನ್ನುವಲ್ಲಿ ಸುಖಸಂತಾನಗಳಿಗೂ ಅಧಿದೇವತೆಯೆಂದು ಪರಿಗಣಿತನಾಗಿದ್ದವನು-ಕಳಚೂರ್ಯರ ಅವನತಿಯಲ್ಲಿ ಸೂರ್ಯದೇಗುಲ ಮತ್ತು ಆರಾಧನೆಯ ಅವನತಿಯೂ ಅಡಗಿರುವಂತಿದೆ.

* * *

- ೫ -

ಆರನೆಯ ವಿಕ್ರಮಾದಿತ್ಯನ ಅಂತ್ಯದಿಂದ ತಲೆಯೆತ್ತಿದ ಕಳಚೂರ್ಯರು ಸೂರ್ಯ ವಂಶದವರೆಂಬುದನ್ನು ಮಧ್ಯ ಪ್ರದೇಶದ ಕಾಳಂಜರಪುರವರಾಧೀಶ್ವರ ಎಂಬ ಬಿರುದು ಬಿಜ್ಜಳನಿಗೆ ಸೇರುವಲ್ಲಿ ಅಲ್ಲಿಯ ರಾಜವಂಶಕ್ಕೆ ಈತನು

ೇರಿದ್ದವನಾಗಿರಬೇಕೆಂಬುದನ್ನು ಅಲ್ಲಿಯ ಮತ್ತು ಅಂದಿನ ತಿಹಾಸಿಕ ವಿವರಗಳನ್ನು ಅರಿತಲ್ಲಿ ಖಚಿತವಾಗುತ್ತದೆ. ಾಸ್ತವವಾಗಿ ಕಳಂಜರಪುರದ ಕಳಚೂರ್ಯರಲ್ಲಿ ಕರ್ಣನೆಂಬ ಕಪುರುಷನೇ ಆಗಿಹೋಗಿದ್ದಾನೆ. ಅದರ ಸ್ಫೂರ್ತಿಯಿಂದ ೆನ್ನುವಂತೆ ಆರನೆಯ ವಿಕ್ರಮಾದಿತ್ಯನು 'ವಿಕ್ರಮ ಶಕ' ವನ್ನು ಪ್ರಾರಂಭಿಸುತ್ತಾನೆ.

ಕಳಚೂರಿ, ಕಳಚೂರ್ಯ-ಪದಗಳಲ್ಲಿ 'ಕಿರಣ ಸೂರ್ಯ' ಎಂಬ ಅರ್ಥ ಬರುತ್ತದೆ. ಬಿಜ್ಜಳನು 'ವಿದ್ಯುಜ್ಜಳ' ಎಂದಾಗುತ್ತಾನೆ. ಈತನ ಮಗನಾದ ಸೋಯಿದೇವ ಕೂಡ 'ಸೂರ್ಯದೇವ' ಎಂಬುದನ್ನು ತಿಳಿಸುತ್ತದೆ. ಅಲ್ಲದೆ ಬಿಜ್ಜಳ-ಬಸವಣ್ಣನವರ ಸ್ನೇಹವು ಪ್ರಸಿದ್ಧವಾಗಿ ಕಲ್ಯಾಣ ಚಾಲುಕ್ಯರ ಪಾಶುಪತ ಮೂಲ ನಂಬಿಕೆಗಳನ್ನು ಬಯಲು ಮಾಡಿದಂತೆ 'ಕಲ್ಯಾಣ ಕ್ರಾಂತಿ'ಯು ಒಡಮೂಡಿತೆನ್ನಬಹುದು.

ಬಿಜ್ಜಳನು ಬಳ್ಳಿಗಾವೆಯ ಸೂರ್ಯ ದೇಗುಲಕ್ಕೆ ದಾನ ಮಾಡಿದ್ದಲ್ಲದೆ ನಡೆದುಕೊಳ್ಳುತ್ತಿದ್ದಿರಬೇಕೆಂಬುದಕ್ಕೆ ಆತನ ಶಾಸನಗಳಲ್ಲಿ 'ಸೂರ್ಯಾಯ ನಮಃ' ಎಂಬ ಒಕ್ಕಣೆ ಕೂಡ ದೊರಕುತ್ತದೆ.

ಒಟ್ಟಿನಲ್ಲಿ ೧. ಆದಿತ್ಯ - ಆರಾಧನೆಯು ಬಾದಾಮಿ ಚಾಲುಕ್ಯರಿಗೆ ಸಾಂದರ್ಭಿಕವಾಗಿ ಒದಗಿ ಬಂದು ರಾಷ್ಟ್ರ ಕೂಟರು ಮತ್ತು ಕಲ್ಯಾಣಚಾಲುಕ್ಯರ ಹಾಗೂ ಕಳಚೂರಿಗಳ ಕಾಲಗಳಲ್ಲಿ ಪ್ರಸಿದ್ಧಿ ಪಡೆದಿರಬೇಕೆಂಬುದನ್ನು ಶಾಸನಗಳ ಆಧಾರದಿಂದ ಗುರುತಿಸಬಹುದಾಗಿದೆ.

೨. ಆದಿತ್ಯ ಹೃದಯಂ - ಮಂತ್ರಭಾಗವು ಅಗಸ್ತ್ಯರ ದಾಗಿದ್ದು ಅದನ್ನು ವಾಲ್ಮೀಕಿ ರಾಮಾಯಣಕ್ಕೆ ಸೇರಿಸಿದಂತೆ ಕಂಡುಬರುತ್ತದೆ. ಈ ಮಂತ್ರವನ್ನು ಮಾಂತ್ರಿಕ ರೀತಿ ನೀತಿಯಲ್ಲೇ ಇಂದಿಗೂ ಉಳಿಸಿಕೊಂಡು ಬರಲಾಗಿದೆ.

೩. ನಮ್ಮ ವಿಕ್ರಮಾದಿತ್ಯರಿಗೂ ಸೂರ್ಯಾರಾಧನೆಗೂ ಇದ್ದಿರಬಹುದಾದ ಸಂಬಂಧವನ್ನು ಶಾಸನಗಳ ಅಧ್ಯಯನದಿಂದ ಖಚಿತ ಪಡಿಸಬಹುದಾಗಿದೆ.

೪. ಸೂರ್ಯನೆಂದರೆ ವೈದ್ಯಕ್ಕೆ ಯುದ್ಧಕ್ಕೆ ಸಂತಾನ (ಜ್ಞಾನ)ಕ್ಕೆ ಮತ್ತು ಕಾಲಮಾನದ ಲೆಕ್ಕಾಚಾರಕ್ಕೆ ಅಲ್ಲದೆ ಜನ್ಮಕುಂಡಲಿ-ರಾಶಿಕುಂಡಲಿಗಳನ್ನು ರಚಿಸಿ ಮಾನವ ಸ್ವಭಾವಗಳನ್ನು ಅರ್ಥೈಸುವುದಕ್ಕೆ ಎಂದು ಆರೇಳು ಬಗೆಯಲ್ಲಿ ಲೌಕಿಕ ಪ್ರಯೋಜನಗಳಿಗೆ ಅಧಿದೇವತೆಯೆನ್ನಬಹುದಾಗಿದೆ.

೫. ವೀರಗಲ್ಲುಗಳು ಮತ್ತು ಮಾಸ್ತಿಕಲ್ಲುಗಳು ಸೂರ್ಯ ಆರಾಧನೆಗೆ ಸೇರಿದ ಆಚರಣೆಗಳಾಗಿದ್ದು ಕರ್ನಾಟಕದಲ್ಲಿ ಅಂಥ ಪ್ರಾಮುಖ್ಯವೂ ಸೇರಿರುತ್ತದೆ.

## ಗ್ರಂಥಋಣ


1. Indian Architecture - Percy Brown
2. The Culture & Civilisation of Ancient India in Historical Outline - D.D. Kosambi
3. Indian History - D. D. Kosambi, 2nd revised edition
4. Karnataka Inscriptions, Vol V. Edited by Dr. B. R. Gopal, Kannada Research Institute, Dharwad.
5. S II Vol. IX, X, & XI, Bombay Karnataka Inscriptions
6. Inscriptions of Dharwar Taluka- (Ed.) Dr. M. M. Kalaburgi. 1976, Karnataka Viswavidyalaya, Dharwar.
7. Indian Empire, Imperial Gazeteer. Vol. II
8. The Chalukyas of Kalyana and the Kalachuris (1981) - Dr. B. R. Gopal, Karnataka University Dharwad.
9. PURANA, Bulletin of the Purana Department (Vyasa Purnima Number) All-India Kasiraja Trust, Varanasi .
10. Royal Conquests and Cultural Migrations in South India and the Deccan, C. Sivaramamurti, The Trustees of the Indian Museum, Calcutta.
11. Pandrethan, Avantipur & Martand (1977) by Debala Mitra, Archaelogical Survey of India, New Delhi.

12. I.C.C. Vol III & IV
13. ಆದಿತ್ಯಹೃದಯಂ - ಸಂ. ಜಿ. ಪಿ. ರಾಜರತ್ನಂ, ಶಾಕ್ಯ ಸಾಹಿತ್ಯ ಮಂಟಪ, ಬೆಂಗಳೂರು - ೫೬೦ ೦೫೫
14. ತಲಕಾಡಿನ ಗಂಗರ ದೇವಾಲಯಗಳು ಒಂದು ಅಧ್ಯಯನ, ಡಾ. ದೇವರಕೊಂಡಾರೆಡ್ಡಿ, ಕ.ಸಾ.ಪರಿಷತ್ತು, ಬೆಂಗಳೂರು-೧೮.
15. Collected papers (Studies in Tamil Culture) : Natana Kasinathan, Madras 1994.
16. Vijayanagar Progress of Research 1987-88 Editors : D. V. Devaraj & Channabasappa. Patil, Dept of Archaeology And Museums.
17. Elements of Hindu Iconography, T.A. Gopinatha Rao
18. March of Karnataka,Surya Worship in Karnataka by Dr. Suryanatha Kamath Vol. 32 Jan 1994 No.1
19. ಕರ್ನಾಟಕದ ಇತಿಹಾಸ - ಲೇ. ಆರ್. ಎಸ್. ಪಂಚಮುಖಿ, ಕ.ಇ.ಸಂ. ಮಂಡಲ, ಧಾರವಾಡ - ೧೯೬೭
20. ತರ್ದವಾಡಿನಾಡು - ಒಂದು ಅಧ್ಯಯನ, ಡಾ. ಎಸ್. ಕೆ. ಕೊಪ್ಪಾ, ಪ್ರತಿಭಾ ಪ್ರಕಾಶನ, ಇಂಡಿ. ೧೯೯೦
21. ಶಿಲ್ಪಕಲಾಪ್ರಪಂಚ, ಕರ್ನಾಟಕ ಲಲಿತಕಲಾ ಅಕಾಡೆಮಿ, ಬೆಂಗಳೂರು -
22. ವಾಸ್ತುಪುರುಷ-ನೆಲ ಹಿನ್ನೆಲೆ - ಜಿ. ಜ್ಞಾನಾನಂದ, ಕೆ. ಜಿ. ಎಫ್. - ೫೬೩ ೧೧೫, ಕರ್ನಾಟಕ
23. Vastusutra Upanisad, (1986) A Boner, S.A. Sarma, & B. Biumer Motilal Banarasidass, Delhi Varanasi-Patna-Madras.
24. ಕನ್ನಡ ಶಾಸನಗಳು ಸಾಂಸ್ಕೃತಿಕ ಅಧ್ಯಯನ - ಡಾ. ಎಂ. ಚಿದಾನಂದಮೂರ್ತಿ, ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು.
25. Introduction to Archaeological Remains in Madhya Pradesh, (in Hindi) 1954 Dr. Moreswar G. Dikshit.
26. ಬೃಹತ್ ಸಂಹಿತೆ - ವರಾಹಮಿಹಿರ - ಭಟ್ಟೋತ್ಪಲನ ವ್ಯಾಖ್ಯಾನ ಕೂಡಿ, ಎಮ್. ರಾಮಕೃಷ್ಣ ಭಟ್, ಎರಡು ಭಾಗಗಳಲ್ಲಿ, Publishers: Motilal Banarasidass Pvt. Ltd, Delhi (1982 and 1993)

ಡಾ|| ಚನ್ನಬಸಪ್ಪ ಎಸ್. ಪಾಟೀಲ *

# ಟೀಪು ಸುಲ್ತಾನನ ಖಡ್ಗಗಳು

ಟೀಪು ಸುಲ್ತಾನನ ರಾಜಧಾನಿಯಾಗಿದ್ದ ಶ್ರೀರಂಗಪಟ್ಟಣದಲ್ಲಿ ಟೀಪುಸುಲ್ತಾನ ಮತ್ತು ಬ್ರಿಟಿಷರ ನಡುವೆ ನಡೆದ ಯುದ್ಧದಲ್ಲಿ ೪ನೇ ಮೇ ೧೭೯೯ ರಂದು ಟೀಪುಸುಲ್ತಾನ ಒಬ್ಬ ಸಾಮಾನ್ಯ ಸಿಪಾಯಿಯಂತೆ ಹೋರಾಡುತ್ತ ವೀರ ಮರಣವನ್ನು ಹೊಂದಿದನು. ಶ್ರೀರಂಗಪಟ್ಟಣದ ಪತನವಾದ ಮೇಲೆ ಬ್ರಿಟಿಷರು ವಶಪಡಿಸಿಕೊಂಡ ವಸ್ತುಗಳಲ್ಲಿ ಮೂರು ಖಡ್ಗಗಳು ಪ್ರಮುಖವಾಗಿವೆ. ವಶಪಡಿಸಿಕೊಂಡ ವಸ್ತುಗಳನ್ನು ಹಂಚಲು ಜನರಲ್ ಫ್ಲ್ಲೆಯ್ಡ್ ನೇತೃತ್ವದಲ್ಲಿ ಪಾರಿತೋಷಕ ಸಮಿತಿಯನ್ನು ರಚಿಸಲಾಯಿತು.[1]

ಟೀಪುಸುಲ್ತಾನನ ಮಲಗುವ ಕೊಠಡಿಯಿಂದ ವಶಪಡಿಸಿಕೊಂಡ ಪಟ್ಟದ ಕತ್ತಿಯನ್ನು ಜನರಲ್ ಡೇವಿಡ್ ಬೇರ್ಡ್‌ಗೆ ಕೊಡಲಾಯಿತು. ಒಂದು ವಜ್ರದ ನಕ್ಷತ್ರ ಮತ್ತು ಟೀಪುವಿನ ಒಂದು ಖಡ್ಗವನ್ನು ಬ್ರಿಟಿಷ್ ಸೈನ್ಯವು ಲಾರ್ಡ್ ವೆಲ್ಲಸ್ಲಿಗೆ ಕೊಟ್ಟಿತು.[2] ಹಿರಿಯರಾದ ಲಾರ್ಡ್ ಕಾರ್ನ್‌ವಾಲಿಸ್ ಟೀಪುವಿನ ಒಂದು ಖಡ್ಗ, ಮುರಾರಿರಾವ್‌ನ ಒಂದು ಖಡ್ಗ ಮತ್ತು ಟೀಪು ಯುದ್ಧದಲ್ಲಿ ಧರಿಸುತ್ತಿದ್ದ ಶಿರಸ್ತ್ರಾಣವನ್ನು ಪಡೆದನು.[3]

**1 ಲಾರ್ಡ್ ವೆಲ್ಲಸ್ಲಿಗೆ ಕೊಟ್ಟ ಖಡ್ಗ :** ಕರ್ನಲ್ ಆರ್ಥರ್ ವೆಲ್ಲಸ್ಲಿಯು ಗವರ್ನರ್ ಜನರಲ್ ಆಗಿದ್ದ ರಿಚರ್ಡ್ ವೆಲ್ಲಸ್ಲಿಯ ಸಹೋದರ. ಈತನೇ ಡ್ಯೂಕ್ ಆಫ್ ವೆಲ್ಲಿಂಗ್‌ಟನ್. ಟೀಪುವಿನ ವಿರುದ್ಧವಾದ ಸೈನ್ಯ ಕಾರ್ಯಾಚರಣೆಯಲ್ಲಿ ಈತನು ಹೈದರಾಬಾದ್ ಕಡೆಯಿಂದ ಬಂದ ೧೦,೦೦೦ ಕಾಲಾಳು ಮತ್ತು ೬,೦೦೦ ಕುದುರೆ ಸವಾರರು ಇದ್ದ ಸೈನ್ಯದ ನೇತೃತ್ವವನ್ನು ವಹಿಸಿದ್ದನು.[4]

ವೆಲ್ಲಸ್ಲಿಗೆ ಕೊಟ್ಟಿದ್ದ ಖಡ್ಗವನ್ನು ಡಿಸೆಂಬರ್ ೧೯೮೫ರಲ್ಲಿ ಮೈಸೂರಿನಲ್ಲಿ ಕಾನೂನು ಬಾಹಿರವಾಗಿ ಮಾರಾಟ ಮಾಡಲು ಹವಣಿಸುತ್ತಿರುವಾಗ ಕೇಂದ್ರ ಅಪರಾಧ ತನಿಖಾ ದಳದವರು (ಸಿಬಿಐ) ವಶಪಡಿಸಿಕೊಂಡರು. ಇದು ಈಗ ಈ ದಳದ ವಶದಲ್ಲಿ ಬೆಂಗಳೂರಿನಲ್ಲಿದೆ. ಈ ಖಡ್ಗದ ದೊಡ್ಡ ವರ್ಣಛಾಯಾ ಚಿತ್ರಗಳನ್ನು ಮೈಸೂರ ಅರಮನೆಯಲ್ಲಿ ಪ್ರದರ್ಶಿಸಲಾಗಿದೆ. ಖಡ್ಗದ ಮರದ ಪೆಟ್ಟಿಗೆಯ ಮೇಲೆ ಮೂರು ಗುರುತಿನ ಚೀಟಿಗಳನ್ನು ಅಂಟಿಸಲಾಗಿದೆ. ಈ ಚೀಟಿಗಳು ಖಡ್ಗದ ಇತಿಹಾಸದ ಮೇಲೆ ಬೆಳಕು ಚೆಲ್ಲುತ್ತವೆ.

**ಗುರುತಿನ ಚೀಟಿ ೧ :** ಬೆರಳಚ್ಚು ಮಾಡಿದ ಈ ಚೀಟಿಯ ಪಾಠ ಹೀಗಿದೆ :

"In 1798 the Marquis Wellesly became Governor of India, and in the war that year with the famous Tippoo Sahib, his brother Colonel Sir Arthur Wellesly, (the future hero of the Peninsular Campaign), came to the front in India. After a month's siege, the war ended with the

---

* ಉಪನಿರ್ದೇಶಕರು, ಕರ್ನಾಟಕ ರಾಜ್ಯ ಪುರಾತತ್ವ ಮತ್ತು ವಸ್ತು ಸಂಗ್ರಹಾಲಯಗಳ ನಿರ್ದೇಶನಾಲಯ, ಅರಮನೆ ಆವರಣ, ಮೈಸೂರು

1 ಪ್ರಾಕ್ಸಿ ಫರ್ನಾಂಡಿಸ್, ೧೯೬೯, ಸ್ಟಾರ್ಮ್ ಓವರ್ ಸೆರಿಂಗಪಟಮ್, ದಿ ಇನ್‌ಕ್ರೆಡಿಬಲ್ ಸ್ಟೋರಿ ಆಫ್ ಹೈದರ್ ಅಲಿ ಅಂಡ್ ಟಿಪ್ಪುಸುಲ್ತಾನ, ಥ್ಯಾಕರ್ಸ್, ಬಾಂಬೆ, ಪು. ೧೯೯

2 ಅದೇ, ಪು. ೨೦೧

3 ಅದೇ, ಪು. ೨೦೧

4 ಅದೇ, ಪು. ೧೮೨



ಟೀಪು ಸುಲ್ತಾನನ ಖಡ್ಗ, ಲಾರ್ಡ್ ವೆಲ್ಲಸ್ಲಿಗೆ ಕೊಟ್ಟ ಈ ಖಡ್ಗ ಈಗ ಬೆಂಗಳೂರಿನಲ್ಲಿ ಪೋಲೀಸರ ವಶದಲ್ಲಿದೆ.

capture of Seringapatam in May 1799. As Tippoo and his suite, were endeavouring to escape through a small gate into the town, a light company of the 12th Foot East Suffolk Regt.under Captain Woodhall fired upon them with such effect, that the gateway was choked with killed and wounded, Captain Woodhall was cut across the thigh by the Sultan's sword, and Tippo Sahib fell fiercely fighting after the city was entered".

ಗುರುತಿನ ಚೀಟಿ ೨ : ಕೈಬರಹದ ಈ ಚೀಟಿಯ ಪಾ ಹೀಗಿದೆ :

"From Gordon Castle, A Sword of Tipp Saib given by Sir Arthur Wellesly KCB to Cha les 4th Duke of Richmond."

ಗುರುತಿನ ಚೀಟಿ ೩ : ಬೆರಳಚ್ಚು ಮಾಡಿದ ಈ ಚೀಟಿಯ ಪಾಠ ಹೀಗಿದೆ :

"ORIENT SWORD with curved inscribe blade and grip in beautifully engrave damscened scabbard. Belonged to [Tippo Sahib, Sultan of Mysore and given by Sir Arthu Wellesly K.C.B. to Charles 4th Duke of Richmon Sword was purchased from Gordon Castl Focr....er...ayshire from His grace the Duke Richmond and....August 1938".

ವಕ್ರಾಕಾರದ ಅಲಗಿನ ಮೇಲೆ ಪರ್ಷಿಯನ್ ಲಿಪಿ ಶಾಸನವಿದೆ. ಹಿತ್ತಾಳೆಯ ಹಿಡಿಯ ಮೇಲೆ ರೇಖಾ ಚಿತ್ರಗಳಿ ಖಡ್ಗದ ಒರೆಯು ಲೋಹದ್ದಾಗಿದೆ. ಒರೆಯ ಹೊರಮ್ಮ ಚಿನ್ನದ ತಗಡನ್ನು ಹೊದಿಸಲಾಗಿದೆ. ಒರೆಯ ತುದಿ ಭಾಗವನ್ನು ಹೂವಿನ ಚಿತ್ರಗಳಿಂದ ಅಲಂಕರಿಸಿದೆ.

೨. ಜನರಲ್ ಡೇವಿಡ್ ಬೇರ್ಡ್‌ಗೆ ಕೊಟ್ಟ ಖಡ್ಗ : ಳ



ಟೀಪ್ಪು ಸುಲ್ತಾನನ ಖಡ್ಗ, ಸ್ಕಾಟಿಷ್ ಯುನೈಟೆಡ್ ಸರ್ವಿಸ್ ಮ್ಯೂಸಿಯಂ ಎಡಿನ್‌ಬರಾ



ಟೀಪು ಸುಲ್ತಾನನ ಖಡ್ಗ, ವಿಕ್ಟೋರಿಯಾ ಅಂಡ್ ಅಲ್ಬರ್ಟ್
ಮ್ಯೂಸಿಯಂ ಲಂಡನ್

ಮೇ ೧೭೯೯ ರಂದು ಶ್ರೀರಂಗಪಟ್ಟಣದ ಕೋಟೆಯನ್ನು ಭೇದಿಸಲು ನೇಮಿಸಿದ ೨೪೯೪ ಆಂಗ್ಲರ ಮತ್ತು ೧೮೮೨ ಸಿಪಾಯಿಗಳ ನೇತೃತ್ವವನ್ನು ಲೆಫ್ಟಿನೆಂಟ್ ಜನರಲ್ ಡೇವಿಡ್ ಬೇರ್ಡ್‌ಗೆ ವಹಿಸಲಾಗಿತ್ತು. ಇದಕ್ಕೆ ಕಾರಣ ಕೋಟೆಯ ವಿವರಗಳನ್ನು ಬೇರ್ಡ್ ಚೆನ್ನಾಗಿ ಅರಿತಿದ್ದನು. ಅಂದಿಗೆ ಮೂವತ್ತು ವರ್ಷಗಳ ಹಿಂದೆ ಆತ ಯುವ ಲೆಫ್ಟಿನೆಂಟ್ ಆಗಿ ಕರ್ನಲ್ ಬೇಲಿಯಡಿಯಲ್ಲಿ ಕಾರ್ಯ ನಿರ್ವಹಿಸುತ್ತಿದ್ದಾಗ ಹೈದರ್ ಆಲಿ ಮತ್ತು ಟೀಪುಸುಲ್ತಾನರ ಕೈಯಲ್ಲಿ ಸೆರೆಯಾಳಾಗಿ ಎರಡು ವರ್ಷಗಳ ಕಾಲ ಶ್ರೀರಂಗಪಟ್ಟಣದ ಡಂಜನ್‌ನಲ್ಲಿ (ಸೆರೆಮನೆಯಲ್ಲಿ) ಬೇಲಿಯೊಂದಿಗೆ ಇದ್ದನು.[5] ತನಗೆ ಮತ್ತು ತನ್ನ ಮೇಲಾಧಿಕಾರಿಗೆ ಆದ ಅವಮಾನದ ಸೇಡು ತೀರಿಸಿಕೊಳ್ಳಲು ಈಗ ಆತನಿಗೆ ಅವಕಾಶ ಒದಗಿತ್ತು. ಶ್ರೀರಂಗಪಟ್ಟಣದ ಕೋಟೆಯನ್ನು ಭೇದಿಸುವಲ್ಲಿ ಯಶಸ್ವಿಯಾದ ಬೇರ್ಡ್‌ಗೆ ಟೀಪುಸುಲ್ತಾನನ ಪಟ್ಟದ ಕತ್ತಿಯನ್ನು ಕೊಡಲಾಯಿತು.

ಈ ಖಡ್ಗವು ಈಗ ಸ್ಕಾಟ್‌ಲ್ಯಾಂಡಿನ ರಾಜಧಾನಿಯಾದ ಎಡಿನ್‌ಬರೋದ ಕ್ಯಾಸಲ್‌ನಲ್ಲಿರುವ ಸ್ಕಾಟಿಷ್ ಯುನೈಟೆಡ್ ಸರ್ವಿಸ್ ಮ್ಯೂಜಿಯಮ್‌ನಲ್ಲಿದೆ. ಖಡ್ಗದ ಅಲಗಿನ ಮೇಲೆ ಕೆತ್ತಿರುವ ಶಾಸನದ ಪಾಠ ಹೀಗಿದೆ : "The sword of Tippo Sultan found in his bed chamber after Seringpatam was taken by storm 4th May 1799 and presented by the army to Major General Baird through their commander Lieut. General Harris, as a token of their high opinion of his courage and conduct in the assault which he commanded, and in which Tippo Sultaun was slain".

ಈ ಖಡ್ಗದ ಅಲಗು ಅಗಲವಾಗಿ ನೇರವಾಗಿದೆ. ಹಿತ್ತಾಳೆಯ ಹಿಡಿಯ ಮೇಲೆ ಪರ್ಶಿಯನ್ ಅಕ್ಷರಗಳಿವೆ. ಹಿಡಿಯ ತುದಿಗೆ ಒಂದು ಚಿಕ್ಕ ಉಂಗುರವಿದೆ. ಖಡ್ಗದ ಒರೆಗೆ ವೆಲ್ವೆಟ್ ಬಟ್ಟೆಯನ್ನು ಹೊದಿಸಲಾಗಿದೆ. ಒರೆಯ ತುದಿಭಾಗಗಳನ್ನು ಚಿನ್ನ ಲೇಪಿತ ಲೋಹದಿಂದ ಅಲಂಕರಿಸಲಾಗಿದೆ. ಮೇಲಿನ ತುದಿಯ ಹತ್ತಿರ ನೇತುಹಾಕಿಕೊಳ್ಳಲು ಎರಡು ಉಂಗುರಗಳಿವೆ.

**3. ಲಾರ್ಡ್ ಕಾರ್ನ್‌ವಾಲಿಸ್‌ಗೆ ಕೊಟ್ಟ ಖಡ್ಗ :** ಲಾರ್ಡ್ ಕಾರ್ನ್‌ವಾಲಿಸ್‌ನು ರಿಚರ್ಡ್ ವೆಲ್ಲಸ್ಲಿಗಿಂತ ಹಿಂದೆ ಗವರ್ನರ್ ಜನರಲ್ ಆಗಿದ್ದನು. ಟೀಪುವಿನ ಬಲವನ್ನು ಕುಗ್ಗಿಸುವಲ್ಲಿ ಕಾರ್ನ್‌ವಾಲಿಸ್ ಯಶಸ್ವಿಯಾಗಿದ್ದನು.

ಲಂಡನ್ನಿನ ವಿಕ್ಟೋರಿಯಾ ಆಂಡ್ ಆಲ್ಬರ್ಟ್ ಸಂಗ್ರಹಾಲಯದಲ್ಲಿ ಟೀಪುವಿಗೆ ಸಂಬಂಧಿಸಿದ ಅನೇಕ ವಸ್ತುಗಳೊಂದಿಗೆ ಒಂದು ಖಡ್ಗವಿದೆ. ಈ ಖಡ್ಗವೇ ಕಾರ್ನ್‌ವಾಲಿಸ್‌ಗೆ ಕೊಟ್ಟ ಖಡ್ಗವಾಗಿರಬಹುದು. ವಕ್ರಾಕಾರದ ಅಲಗುಳ್ಳ ಈ ಖಡ್ಗದ ಹಿಡಿಯ ಮೇಲೆ ಚಿನ್ನದ ಲೇಪವಿದೆ. ಖಡ್ಗದ ಮೇಲೆ ಟೀಪುವಿನ ವೈಯುಕ್ತಿಕ ಖಡ್ಗವೆಂದು ಪರ್ಶಿಯನ್ ಭಾಷೆಯಲ್ಲಿ ಬರೆಯಲಾಗಿದೆ.

---

5 ಅದೇ, ಪು. ೧೮೬

ಡಾ॥ ಎನ್.ಹವಳಯ್ಯ *

# ಬಾದಾಮಿ ಚಲುಕ್ಯರ ಎರಡು ಹೊಸ ನಾಣ್ಯಗಳು

ಬಾದಾಮಿ ಚಲುಕ್ಯರ ನಾಣ್ಯಗಳು ಹೆಚ್ಚಿನ ಸಂಖ್ಯೆಯಲ್ಲಿ ಪತ್ತೆಯಾಗಿಲ್ಲವೆಂಬುದು ಇತಿಹಾಸಕಾರರಿಗೆ ತಿಳಿದಿರುವ ವಿಷಯ. ಪ್ರೊಫೆಸರ್ ಎ. ವಿ. ನರಸಿಂಹ ಮೂರ್ತಿಯವರು ಇಮ್ಮಡಿ ವಿಕ್ರಮಾದಿತ್ಯನಿಗೆ ಸೇರಿದ ಚಿನ್ನದ ನಾಣ್ಯಗಳನ್ನು ತಮ್ಮ ಗ್ರಂಥದಲ್ಲಿ ವರದಿ ಮಾಡಿದ್ದಾರೆ[1]. ಇತರ ರಾಜರ ನಾಣ್ಯಗಳು ದೊರೆತಿಲ್ಲವೆಂದು ತಿಳಿಸಿದ್ದಾರೆ. ಆದರೆ ಇತ್ತೀಚೆಗೆ ಎರಡು ಗಮನಾರ್ಹ ತಾಮ್ರದ ನಾಣ್ಯಗಳು ಬೆಳಕಿಗೆ ಬಂದಿವೆ. ಅವುಗಳನ್ನು ಇತಿಹಾಸಕಾರರ ಗಮನಕ್ಕೆ ತರುವುದೇ ಮುಖ್ಯ ಉದ್ದೇಶ.

ಮೊದಲನೆಯದಾಗಿ ಪ್ರಖ್ಯಾತ ಗುಹಾ ದೇವಾಲಯವಾದ ಎಲಿಫಾಂಟಾದಲ್ಲಿ ಕೆಲವು ತಾಮ್ರದ ನಾಣ್ಯಗಳು ಪತ್ತೆಯಾದವು.[2] ಇವುಗಳ ವಿವರ ಹೀಗಿದೆ: ಇದೊಂದು ಆಯತಾಕಾರದ ತಾಮ್ರದ ನಾಣ್ಯವಾಗಿದ್ದು ಮುಮ್ಮುಖದಲ್ಲಿ ಆರನೆಯ ಶತಮಾನದ ಪ್ರಾಚೀನ ಕನ್ನಡ ಲಿಪಿಯ ಎರಡು ಸಾಲಿನ ಬರಹವಿದೆ. ಈ ಬರಹವು ಶ್ರೀ ಸತ್ಯಾಶ್ರಯ ಎಂದಿದೆ. ಈ ನಾಣ್ಯಗಳು ಎಲಿಫಾಂಟಾದ ಬೌದ್ಧ ಸಂಸ್ಕೃತಿಯ ಅವಶೇಷಗಳಲ್ಲಿ ಪತ್ತೆಯಾಗಿವೆ. ಸತ್ಯಾಶ್ರಯ ಎಂಬುದು ಚಲುಕ್ಯರಲ್ಲಿ ಒಂದು ಸಾಮಾನ್ಯವಾದ ಬಿರುದಾಗಿದ್ದು ಒಂದನೇ ಪುಲಿಕೇಶಿ, ಮಂಗಳೇಶ ಮತ್ತು ಎರಡನೇ ಪುಲಿಕೇಶಿ ರಾಜರು ಈ ಬಿರುದನ್ನು ಹೊಂದಿದ್ದರು. ಹೀಗಾಗಿ ಈ ನಾಣ್ಯವನ್ನು ಈ ಮೂವರಲ್ಲಿ ಯಾರಿಗಾದರೊಬ್ಬರಿಗೆ ಅನ್ವಯಿಸಬಹುದು. ಆದರೆ ಈ ನಾಣ್ಯ ದೊರಕಿರುವುದು ಎಲಿಫಾಂಟಾದಲ್ಲಿ. ಇದು ಮುಖ್ಯವಾದ ಅಂಶವಾಗಿ ಪರಿಗಣಿಸಿರುವುದರಿಂದ ಇದನ್ನು ಎರಡನೇ ಪುಲಿಕೇಶಿಗೆ ಸೇರಿದ್ದೆಂದು ಹೇಳಬಹುದಾಗಿದೆ. ಕ್ರಿಸ್ತಶಕೆಯ ಪ್ರಾರಂಭದ ಶತಮಾನಗಳ ಶಾಸನಗಳಲ್ಲಿ ಎಲಿಫಾಂಟಾವನ್ನು 'ಪುರಿ' ಅಥವಾ ಘಾರಾಪುರಿ ಎಂದು ಉಲ್ಲೇಖಿಸಲಾಗಿದೆ. ಎರಡನೇ ಪುಲಿಕೇಶಿಯ ಐಹೊಳೆಯ ಶಾಸನದಲ್ಲಿ ಈ ರಾಜನು ಕೊಂಕಣದ ಮೌರ್ಯರನ್ನು ಸೋಲಿಸಿ ಪುರಿಯನ್ನು ವಶಪಡಿಸಿಕೊಂಡುದ್ದಾಗಿ ಹೇಳಲಾಗಿದೆ. ನೂರಾರು ಹಡಗುಗಳು ಸಂಚರಿಸಬಹುದಾಗಿದ್ದ ಈ ಪುರಿಯನ್ನು ಪಶ್ಚಿಮ ಸಾಗರದ ಸೌಭಾಗ್ಯವೆಂದು ವರ್ಣಿಸಲಾಗಿದೆ. ಈ ವರ್ಣನೆಯಿಂದ ನಮಗೆ ಸ್ಪಷ್ಟವಾಗಿ ತಿಳಿಯುವುದೇನೆಂದರೆ ಪುರಿಯು ಮಹಾರಾಷ್ಟ್ರದ ಕರಾವಳಿಯಲ್ಲಿತ್ತು ಎಂದು. ಈ ರೇವು ಪಟ್ಟಣವನ್ನು ಎಲಿಫಾಂಟಾ ಎಂದು ಗುರುತಿಸಲಾಗಿದೆ.[3] ಹಾಗೆಂದರೆ ಎರಡನೇ ಪುಲಿಕೇಶಿಯು ಕೊಂಕಣದ ಮೌರ್ಯರನ್ನು ಸೋಲಿಸಿ ಪುರಿ ಅಥವಾ ಎಲಿಫಾಂಟಾ ದ್ವೀಪವನ್ನು ವಶಪಡಿಸಿಕೊಂಡನು. ಪ್ರಸ್ತಾಪಿತ ನಾಣ್ಯವು ಎಲಿಫಾಂಟಾದಲ್ಲಿ ದೊರೆತಿರುವುದರಿಂದ ಈ ದ್ವೀಪಕ್ಕೆ ಚಲುಕ್ಯರ ಸಂಪರ್ಕ ಎರಡನೇ ಪುಲಿಕೇಶಿಯ ಕಾಲದಲ್ಲಿ ಮಾತ್ರವೇ ಇತ್ತೆಂದು ಸ್ಪಷ್ಟವಾಗಿ ತಿಳಿದುಬರುತ್ತದೆ. ಸತ್ಯಾಶ್ರಯ ಎಂಬ ಬಿರುದನ್ನು ಹೊಂದಿದ್ದ ಬೇರೆ ರಾಜರುಗಳಾದ ಒಂದನೇ ಪುಲಿಕೇಶಿ ಮತ್ತು ಮಂಗಳೇಶರ ವ್ಯಾಪ್ತಿ ಎಲಿಫಾಂಟಾದವರೆಗೆ ಹರಡಿರಲ್ಲಿಲ್ಲವಾದ್ದರಿಂದ ಈ ಸ್ಥಳದೊಡನೆ ಅವರಿಗೆ ಯಾವ

*ಅಧ್ಯಾಪಕ, ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ವಿಭಾಗ, ಮಾನಸಗಂಗೋತ್ರಿ, ಮೈಸೂರು-೫೭೦೦೦೬

1. ಎ.ವಿ.ನರಸಿಂಹಮೂರ್ತಿ: ಕಾಯಿನ್ಸ್ ಆಫ್ ಕರ್ನಾಟಕ
2. ಎ.ವಿ.ನರಸಿಂಹಮೂರ್ತಿ (ಸಂ) : ಸ್ಟಡೀಸ್ ಇನ್ ಸೌತ್ ಇಂಡಿಯನ್ ಕಾಯಿನ್ಸ್, ಸಂಚಿಕೆ ೩, ಪುಟ ೪೯-೯೬
3. ಜರ್ನಲ್ ಆಫ್ ದಿ ಎಪಿಗ್ರಾಫಿಕಲ್ ಸೊಸೈಟಿ ಆಫ್ ಇಂಡಿಯಾ, ಸಂಚಿಕೆ ೧೭, ಪುಟ ೨೧

ಸಂಬಂಧವು ಇರಲಿಲ್ಲ. ಆದ್ದರಿಂದ ಈ ಸಂಬಂಧದಲ್ಲಿ ಸತ್ಯಾಶ್ರಯ ಎನ್ನುವ ಚಲುಕ್ಯ ರಾಜನು ಬೇರಾರೂ ಅಲ್ಲದೆ ಎರಡನೇ ಪುಲಕೇಶಿ ಮಾತ್ರವೇ ಎಂಬುದಾಗಿ ಹೇಳಬೇಕಾಗುತ್ತದೆ. ಹೀಗಾಗಿ ಪ್ರಸ್ತುತ ತಾಮ್ರದ ನಾಣ್ಯಗಳು ಎರಡನೇ ಪುಲಕೇಶಿಗೆ ಸೇರಿದ್ದಾಗಿತ್ತೆಂದು ಪರಿಗಣಿಸಬೇಕಾಗಿದೆ.

ಆದರೆ ಸಾಮಾನ್ಯವಾಗಿ ಎಲ್ಲರೂ ನಿರೀಕ್ಷಿಸುವಂತೆ ಇದರ ಹಿಮ್ಮುಖದಲ್ಲಿ ವರಾಹದ ಗುರುತು ಇಲ್ಲದೆ ನಂದಿಯ ಗುರುತು ಇದೆ; ಹಾಗೆಂದ ಮಾತ್ರಕ್ಕೆ ಚಲುಕ್ಯ ವಂಶದವರು ತಮ್ಮ ಲಾಂಛನವಾದ ವರಾಹದ ಬದಲಿಗೆ ನಂದಿಯ ಚಿತ್ರವಿರುವ ನಾಣ್ಯಗಳನ್ನು ಚಲಾವಣೆಗೆ ತರಬಾರದೆಂಬ ಯಾವ ನಿಯಮವೂ ಇಲ್ಲ.[4] ಬಹುಶಃ ಅವರು ವರಾಹ ಮತ್ತು ನಂದಿಯು ಚಿತ್ರವಿರುವ ನಾಣ್ಯಗಳನ್ನು ಹೊರಡಿಸಿದ್ದಿರಬಹುದು ಮತ್ತು ಚಿನ್ನದ ನಾಣ್ಯಗಳು ವರಾಹ ಲಾಂಛನವನ್ನು, ತಾಮ್ರದ ನಾಣ್ಯಗಳು ನಂದಿಯ ಚಿತ್ರವನ್ನು ಹೊಂದಿದ್ದವೆಂದು ಹೇಳಬಹುದು. ಈ ತಾಮ್ರದ ನಾಣ್ಯಗಳ ಮೇಲೆ ಕಂಡು ಬರುವ ಕನ್ನಡ ಪ್ರಾಚೀನ ಲಿಪಿಯು ಎರಡನೇ ಪುಲಕೇಶಿಯ ಕಾಲಕ್ಕೆ ಬಹುಮಟ್ಟಿಗೆ ಸರಿಹೊಂದುತ್ತದೆ. ಆದ್ದರಿಂದ ಈ ತಾಮ್ರದ ನಾಣ್ಯಗಳನ್ನು ಎರಡನೇ ಪುಲಕೇಶಿಯು ಹೊರಡಿಸಿದ್ದಾಗಿ ಊಹಿಸಬಹುದಾಗಿದೆ. ಇಂತಹ ಮೂರು ನಾಣ್ಯಗಳು ಎಲಿಫಾಂಟಾದ ಶೇಖರಣೆಯ ರಾಶಿಯಲ್ಲಿ ಪತ್ತೆಯಾಗಿರುವುದು ಗಮನಾರ್ಹವಾಗಿದೆ.

ಈಗ ಇನ್ನೊಂದು ನಾಣ್ಯವನ್ನು ಪ್ರಸ್ತಾಪಿಸಬಹುದು. ಈ ನಾಣ್ಯವು ಸೀಸ ಮಿಶ್ರಲೋಹಕ್ಕೆ ಸೇರಿದ್ದಾಗಿದ್ದು ಅದರ ವಿವರಗಳು ಹೀಗಿವೆ.[5] ಅದೊಂದು ವೃತ್ತಾಕಾರದ ನಾಣ್ಯವಾಗಿದ್ದು ೧.೮ ಸೆಂ.ಮೀ. ವ್ಯಾಸವುಳ್ಳದ್ದಾಗಿ, ೪ ಗ್ರಾಂ ತೂಗುತ್ತದೆ. ಇದರ ಮುಮ್ಮುಖದಲ್ಲಿ ಬಲಕ್ಕೆ ಮುಖ ಮಾಡಿಕೊಂಡಿರುವ ನಂದಿಯ ಚಿತ್ರವಿದ್ದು ಹಿಮ್ಮುಖದಲ್ಲಿ ಕುಂಭ ಮತ್ತು ಎರಡು ದೀಪ ಸ್ತಂಭಗಳೂ, ಜೊತೆಗೆ ಎರಡು ಸಾಲಿನ 'ಶ್ರೀ ಕೃತರಾಜ' ಎನ್ನುವ ಕನ್ನಡ ಬರಹವಿದೆ. ಕ್ರಿತರಾಜ ಎನ್ನುವ ಈ ಬರಹವು 'ಕೀರ್ತಿರಾಜ' ಎಂಬುದನ್ನು ಸೂಚಿಸುತ್ತದೆ. ಈ ಕೀರ್ತಿರಾಜನು ಬೇರಾರೂ ಅಲ್ಲದೆ ಚಲುಕ್ಯ ವಂಶದ ಕೀರ್ತಿವರ್ಮನೇ ಎಂಬುದು ಸಂಭವನೀಯ. ಕೀರ್ತಿರಾಜ ಎನ್ನುವ ಪದವು ಚಲುಕ್ಯ ಶಾಸನಗಳಲ್ಲಿ ಕಂಡು ಬಂದಿದ್ದು, ಕ್ರಿತರಾಜ ಎನ್ನುವ ಪದವು ಚಲುಕ್ಯ ಶಾಸನಗಳಲ್ಲಿ ಕಂಡು ಬಂದಿರುವುದಿಲ್ಲ. ಆದಾಗ್ಯೂ ಕ್ರಿತರಾಜ ಎನ್ನುವ ಪದವು 'ಕೀರ್ತಿರಾಜ' ಎನ್ನುವ ಪದಕ್ಕೆ ಸಮಾನವಾಗಿಸ ಬಹುದು. ಈ ಊಹೆಯ ಆಧಾರದ ಮೇಲೆ ಈ ನಾಣ್ಯವನ್ನು ಕೀರ್ತಿವರ್ಮನ ಕಾಲಕ್ಕೆ ಸೇರಿದ್ದೆಂದು ಹೇಳಬಹುದು.

ಕೀರ್ತಿವರ್ಮ ಎಂಬ ಹೆಸರಿನ ಇಬ್ಬರು ದೊರೆಗಳಿದ್ದುದರಿಂದ ಪ್ರಸ್ತುತ ನಾಣ್ಯ ಯಾರು ಹೊರಡಿಸಿದ್ದೆಂಬುದು ಈಗ ಸಮಸ್ಯೆಯಾಗಿ ಉಳಿದಿದೆ. ಒಂದನೇ ಕೀರ್ತಿವರ್ಮನು ಚಲುಕ್ಯರ ಪ್ರಾಬಲ್ಯವನ್ನು ಬೆಳೆಸಿದವನಾಗಿದ್ದುದರಿಂದ, ಎರಡನೇ ಕೀರ್ತಿವರ್ಮನ ಬದಲಾಗಿ ಇವನೇ ಈ ನಾಣ್ಯವನ್ನು ಹೊರಡಿಸಿದವನೆಂದು ಹೇಳಬಹುದು. ಏಕೆಂದರೆ ಎರಡನೇ ಕೀರ್ತಿವರ್ಮನು ಪಲ್ಲವರ ಮತ್ತು ಇತರರ ಪ್ರಾಬಲ್ಯಕ್ಕೆ ಸಿಲುಕಿ ಅನೇಕ ಕಷ್ಟಗಳನ್ನು ಎದುರಿಸಬೇಕಾಯಿತು. ಆದರೆ ಈ ನಾಣ್ಯವೂ ಸಹ ವರಾಹದಬದಲಿಗೆ ನಂದಿಯು ಚಿತ್ರವನ್ನು ಹೊಂದಿರುವುದನ್ನು ಗಮನಿಸಬಹುದಾಗಿದೆ. ಈ ಎಲ್ಲಾ ಪರಿಶೀಲನೆಗಳಿಂದ ಈ ನಾಣ್ಯವು ನಿಗದಿತವಾಗಿ ಕೀರ್ತಿವರ್ಮನಿಗೆ ಸೇರಿದ್ದೆಂದು ತಾತ್ಕಾಲಿಕವಾಗಿ ಹೇಳಬೇಕಾಗುತ್ತದೆ.

ಈಗ ಎರಡು ರೀತಿಯ ನಾಣ್ಯಗಳನ್ನು ಗಮನಿಸಿ ಈ ರೀತಿ ತೀರ್ಮಾನಿಸಬಹುದು:

೧) ಇವೆರಡೂ ಮೊಟ್ಟ ಮೊದಲನೆಯ ಬಾದಾಮಿ ಚಲುಕ್ಯರ ತಾಮ್ರದ ನಾಣ್ಯಗಳು.

೨) ಮೊದಲನೆಯದು ಇಮ್ಮಡಿ ಪುಲಕೇಶಿಗೆ ಸೇರಿದ್ದೆಂದು, ಎಲಿಫಾಂಟಾದ ತಾಮ್ರದ ನಾಣ್ಯಗಳ ಆಧಾರದ ಮೇಲೆ ಹೇಳಬಹುದು.

೩) ಕೀರ್ತಿವರ್ಮನ ನಾಣ್ಯದಲ್ಲಿ ಖಚಿತತೆಯಿಲ್ಲ ದಿದ್ದರೂ, ಸಾಂದರ್ಭಿಕವಾಗಿ ಅದು ಆತನಿಗೆ ಸೇರಿದ್ದೆಂದು ಹೇಳಬೇಕಾಗುತ್ತದೆ.

೪) ಈ ನಾಣ್ಯಗಳ ಮೇಲೆ ಬಾದಾಮಿ ಚಲುಕ್ಯರ ರಾಜ ಚಿಹ್ನೆಯಾದ ವರಾಹವಿಲ್ಲದಿರುವುದು ಒಂದು ಗಮನಾರ್ಹ ಅಂಶ.

---

4. ವರಹಗಳೆಂದು ಕರೆಯಲ್ಪಡುವ ನಾಣ್ಯಗಳ ಮೇಲೆ ವರಾಹದ ಚಿತ್ರವಿಲ್ಲದೇ ಇರುವ ಹತ್ತಾರು ನಾಣ್ಯಗಳು ನಮಗೆ ತಿಳಿದಿವೆ
5. ಜರ್ನಲ್ ಆಫ್ ದಿ ನ್ಯೂಮಿಸ್‌ಮ್ಯಾಟಿಕ್ ಸೊಸೈಟಿ ಆಫ್ ಇಂಡಿಯಾ, ಸಂಚಿಕೆ ೫೦, ಪುಟ ೩೭-೩೮.

ಡಾ॥ ಎಸ್. ಕೆ. ಜೋಶಿ *

# ಬೆಳಗಾವಿಯ ರಕ್ಷಣಾ ಗೋಡೆಗಳು

ಕರ್ನಾಟಕ ಉತ್ತರ-ದಕ್ಷಿಣ ಭಾರತಗಳೆರಡನ್ನೂ ಜೋಡಿಸುವ ಸಾಂಸ್ಕೃತಿಕ ಸಂಗಮದ ನೆಲ. ಸಾಂಸ್ಕೃತಿಕ ಸಂಪದ್ ಕೊಡುಗೆಯೊಂದಿಗೆ, ಈ ನಾಡ ಜನ ಅಸಾಮಾನ್ಯ ಯೋಧರೂ ಹೌದು. ''ಶೂರ ಭಟಾಃ ಕರ್ನಾಟಾಃ'' ಎಂದು ಪ್ರಾಚೀನ ಮಿಥಿಲಾ ಸಾಹಿತ್ಯ ಮೊಳಗುತ್ತಿದ್ದರೆ, ''ಸಮರ ಕರ್ಮಾಣಿ ನಿಸರ್ಗೋದ್ಧಟಾಃ ಏವ ಕರ್ನಾಟಾಃ'' ಎಂದು 'ವಿದ್ದಸಸಾಲಭಂಜಿಕಾ'ದಲ್ಲಿ ಕವಿ ರಾಜಶೇಖರನು ಹೇಳಿದರೆ, ''ಸಾಧುಂಗೆ ಸಾಧು, ಮಾಧೂರ್ಯಂಗೆ ಮಾಧೂರ್ಯಂ, ಬಾಧಿಪ್ಪ ಕಲಿಗೆ ಕಲಿಯುಗ ವಿಪರೀತನ್'', ಎಂದು ಬಾದಾಮಿಯ ಕಪ್ಪೆ ಅರಭಟ್ಟನ ಶಿಲಾಲೇಖನವು ಕರ್ನಾಟಕ ಜನಮನದ ಧೀರೊದಾತ್ತ ಗುಣಗಳನ್ನು ಎತ್ತಿ ತೋರಿಸುತ್ತದೆ. ಉತ್ತರ ಕರ್ನಾಟಕದ ಗಂಡು ಮೆಟ್ಟಿನ ನಾಡಾದ ಬೆಳಗಾವಿ ಪ್ರದೇಶವೂ, ಅದರ ಜನಸಾಗರವೂ ಈ ನಿಯಮಗಳಿಗೆ ಬಾಹಿರವಿಲ್ಲ.

ಬೆಳಗಾವಿಯಂತೂ ಮೂರು ಸಂಸ್ಕೃತಿಗಳ ತ್ರಿವೇಣಿ ಸಂಗಮ. ಗೋವೆಯ ಆಧುನಿಕ ಜೀವನ, ಮಹಾರಾಷ್ಟ್ರದ ಚೊಕ್ಕಟ ಶಿಸ್ತು, ಕರ್ನಾಟಕದ ಧೀರತೆಯ ಕೆಚ್ಚು, 'ವೇಣುಗ್ರಾಮ'ವೆಂದು ಶಿಲಾಲೇಖನಗಳಲ್ಲಿ ನಾಮಕರಣ ಗೊಂಡ ಬೆಳಗಾವಿಯು ವಿವಿಧ ಮತ ಧರ್ಮಗಳ ಭಾವೈಕ್ಯ ಸಂಗಮ. ಇತಿಹಾಸದಲ್ಲಿ ಇಣುಕಿ ನೋಡಿದಾಗ, ಈ ನೆಲದಲ್ಲಿ ಶಾತವಾಹನರ ಬೌದ್ಧಗುಣ ಮೌಲ್ಯ, ಕದಂಬರ ಹರಿಹರ ಪ್ರೀತಿ, ಸುಗಂಧವರ್ತಿ (ಸೌಂದತ್ತಿ) ರಟ್ಟರ ಜೈನ ಜೀವನ ಜೈತ್ರ, ಆದಿಲ್‌ಶಹರ ಮುಸ್ಲೀಮ್ ಸಮತಾಭಾವ, ಮರಾಠರ ಹಿಂದುತ್ವ ಜೀವನಗಳು ಉತ್ತಿ ಬಿತ್ತಿ ಫಲ ಕಂಡಿವೆ. ಸಾಮಾಜಿಕ ಉಲ್ಬಣಗಳಲ್ಲಿ ''ಪೀಸ್ ಆರ್ ಪಾಯಿಜನ್''ಗಳೆರಡರಲ್ಲಿ ಅನಿರ್ವಚನೀಯವಾದ ಪೀಸ್ ಒಂದನ್ನು ಆಯ್ದುಕೊಂಡಿದೆ ಈ ನಾಡ ಜನ. ಅದಾಗಿ, ಎಲ್ಲ ಪಂಥಗಳಿಗೆ ಇಂಬಿತ್ತ ನಾಡು, ಬೆಳಗಾವಿಯ ನಾಡು, 'ವೇಣುಗ್ರಾಮದ' ಬೀಡು.

ಈ ಎಲ್ಲ ಪಂಥಗಳಿಗೆ ನೀಳವಾಗಿ ಇಂಬಿತ್ತ ಬೆಳಗಾವಿಯ ಐತಿಹಾಸಿಕ ಜೀವನವು ಬರಿದಾದ ಬಟ್ಟ ಬಯಲಲ್ಲಿ ಬೆಳೆಯಲಿಲ್ಲ. ಸಾಹಿತ್ಯ, ಶಿಲ್ಪ, ಸಂಸ್ಕೃತಿಗಳು ನಿರಾತಂಕವಾಗಿ ಬೆಳೆಯಲು ಜನವಸತಿಯ ರಕ್ಷಣಾ ಕವಚ, ರಕ್ಷಣಾ ಗೋಡೆಗಳು ಬೇಕೇ ಬೇಕು. ಅಂತಾಗಿ, ಈ ಬೆಳಗಾವಿಯ ಪರಿಭೂತಿಯಲ್ಲಿ ರಕ್ಷಣಾ ಗೋಡೆಗಳ ಅಳವಡಿಕೆ ಶಾತವಾಹನರಿಂದ (ಕ್ರಿ.ಶ. ೨೦೦) ಬ್ರಿಟಿಶರವರೆಗೂ (ಕ್ರಿ.ಶ. ೧೮೫೭) ಕೈಕೊಳ್ಳಲಾದ ಬಗ್ಗೆ, ಐತಿಹಾಸಿಕ ವಿವರಗಳು ದೃಢೀಕರಿಸುತ್ತವೆ. ಇಲ್ಲಿಯು ಉತ್ಖನನಗಳು, ದೇವಾಲಯ ಗಳು, ಬಸದಿಗಳು, ಶಿಲಾಲೇಖಗಳು, ಶಿಲ್ಪಗಳು, ಇನ್ನುಳಿದ ಅವಶೇಷಗಳು ವಿವರಣೆಯ ಇದರ ಆಕರಗಳಾಗಿವೆ.

**ಡಾ॥ ಅ. ಸುಂದರ** ಅವರ ವಡಗಾಂವ್-ಮಾಧವಪುರ ಉತ್ಖನನವು (೧೯೭೪-೮೦) ಬೆಳಗಾಂವಿನ ಪರಿಸರದಲ್ಲಿ, ಶಾತವಾಹನರ ಪ್ರಥಮ ಪ್ರಾಯೋಗಿಕ ರಕ್ಷಣಾಗೋಡೆಯನ್ನು ಹೊರತಂದಿದೆ. ಈ ತಾಣವು ಈಗಿನ ಬೆಳಗಾವಿ ನಗರದ ದಕ್ಷಿಣಕ್ಕೆ ಸುಮಾರು ಎರಡು ಕಿಲೋಮೀಟರ್ ದೂರದಲ್ಲಿದೆ. ಉತ್ಖನನದಲ್ಲಿ ಬೆಳಕಿಗೆ ಬಂದ ವಿವರಗಳು ಉಪಮಾ ಸದೃಶ. ಅಗಲವಾದ ಬೀದಿ, ಎರಡೂ ಬದಿಗೆ ಸಾಲಾಗಿ ವ್ಯವಸ್ಥಿತವಾಗಿ ನಿರ್ಮಿಸಿದ ಮನೆಗಳ ಪಾಯಾ-ಗೋಡೆಗಳು, ನೀರಿನ ಬಾವಿಗಳು, ಹಾಗೂ ನೀರು ಸರಬರಾಜು ವ್ಯವಸ್ಥೆ, ನಾಲೆಗಳು,

---

* ನಿವೃತ್ತ ಅಸಿಸ್ಟೆಂಟ್ ಸುಪರಿಂಟೆಂಡಿಂಗ್ ಆರ್ಕಿಯಾಲಜಿಸ್ಟ್, ಧಾರವಾಡ

ಉಗ್ರಾಣಗಳು ಇವುಗಳೆಲ್ಲವುಗಳನ್ನು ಸುತ್ತುವರಿದು ಧೈರ್ಯವಾಗಿ ಕಾಯುವ ರಕ್ಷಣಾಗೋಡೆ (ಚಿತ್ರ ನಂ. ೧) ಸಂಶೋಧಕರ ಲಕ್ಷ್ಯವನ್ನು ಸೆಳೆಯುತ್ತವೆ. ಈ ಗೋಡೆಯು ಇಟ್ಟಿಗೆ ಹಾಗೂ ಮೃತ್ತಿಕಾ ಪದಾರ್ಥಗಳಿಂದ ರಚಿಸಲ್ಪಟ್ಟಿದ್ದು, ಪ್ರಾಚೀನ ಮೃತ್ತಿಕಾದುರ್ಗ (Mud Fort) ಗಳಲ್ಲಿ ಒಂದಾಗಿದೆ. ದುರ್ದೈವದಿಂದ ಈ ಎಲ್ಲ ಪ್ರದೇಶವು ಆಧುನಿಕ ಬೆಳವಣಿಗೆಯ ಆಘಾತಕ್ಕೆ ಸಿಲುಕಿ ನಾಶವಾಗಿದೆ. ಈಗ ಉತ್ಖನನದಲ್ಲಿ ದೊರೆತಿರುವುದು ಅಲ್ಲಲ್ಲಿ ಅಳಿದು ಉಳಿದ ಉಳಿಕೆಗಳು ಮಾತ್ರ. ಈ ಚಿಕ್ಕ ಹರಕು ಮುರುಕಾದ ರಕ್ಷಣಾ ಗೋಡೆಗಳ ಉಳಿಕೆಗಳು, ಶಾತವಾಹನ ಸಮಕಾಲೀನ ರಕ್ಷಣಾ ಕೋಟೆಗಳಾದ ಪ್ರತಿಷ್ಠಾನಪುರ (ಪೈಠಣ), ನಾಸಿಕ (ಮಹಾರಾಷ್ಟ್ರ), ಸನ್ನತಿ, ಬನವಾಸಿ, ಮುಂತಾದವುಗಳನ್ನು ನೆನಪಿಗೆ ತರುತ್ತವೆ. ಆದಾಗಿ, ಬೆಳಗಾವಿಯ ಪರಿಸರದ ಈ ಶಾತವಾಹನ ನಗರ ವಸತಿಯ ಕೋಟೆಯು, ಕರ್ನಾಟಕದ ರಕ್ಷಣಾವಾಸ್ತುವನ್ನು ಕ್ರಿ.ಶ. ಎರಡುನೂರು ವರುಷಗಳಿಗೆ ಜೋಡಿಸುತ್ತದೆ. ಈ ವಡಗಾಂವ-ಮಾಧವಪುರ ಕೋಟೆಯಿಂದ ಬೌದ್ಧ ಗುಣ ಮೌಲ್ಯಗಳು ಸುತ್ತಲೂ ಪಸರಿಸಿರಲು ಸಾಕು. ಶಾತವಾಹನರ ಕರೆ ಬೌದ್ಧ ಕರೆ.

ಇನ್ನು ಬೆಳಗಾವಿ ಜಿಲ್ಹೆಯ ಖಾನಾಪುರ ತಾಲೂಕಿನ 'ಹಲಸಿ'. ಇದು 'ಹಲಸಿ ಕದಂಬ'ರೆಂದು ಹೆಸರು ಪಡೆದ, ಪಲಾಸಿಕಾ-೧೨೦೦' ಪ್ರದೇಶದ ಕದಂಬರ ರಾಜಧಾನಿ. ಬನವಾಸಿ ಕದಂಬರು ಸಿಡಿದು ವಿಭಜನಗೊಂಡ ಕದಂಬ ರಾಜ್ಯದ ನಾಡು (ಕ್ರಿ. ಶ. ೬೦೦-೧೨೦೦). ಅಂತಾಗಿ, ವೇಣುಗ್ರಾಮವು ಪಲಾಸಿಕಾ-೧೨೦೦ ಪ್ರಾಂತ್ಯದ ಪ್ರಮುಖ ಆಡಳಿತ ಕೇಂದ್ರವಾಗಿರಲು ಸಾಕು. (ಪ್ರೊ. ಕುಂದಣಗಾರ). ಅಲ್ಲದೆ, ವಡಗಾಂವ-ಮಾಧವಪುರ ನಗರದ ಶಾತವಾಹನರ ಕೋಟೆ ಹಾಗೂ ವಸತಿಗಳು ಸಂಪೂರ್ಣ ನಿರುಪಯೋಗ ಹೊಂದಿ, ಹೊಸ ರಕ್ಷಣಾ ಗೋಡೆಯು ಈಗಿನ ಬೆಳಗಾವಿಯ ಮುಖ್ಯ ಕೋಟೆಯ ತಾಣಕ್ಕೆ ಬದಲಾಗಿರಲಿಕ್ಕೆ ಸಾಕು. ಏಕೆಂದರೆ, ಈ ಮುಖ್ಯ ಕಲ್ಲಿನ ಕೋಟೆಯು ಮೂರು ಸ್ತರಗಳಲ್ಲಿ ರಚಿತವಾಗಿದ್ದು, ಅತ್ಯಂತ ಕೆಳಗಡೆ, ಕದಂಬ ರಚನಾ ಶೈಲಿ, ಮಧ್ಯದಲ್ಲಿ ಕಲ್ಯಾಣ ಚಾಳುಕ್ಯರ ಮಾಂಡಲೀಕರಾದ ಸುಗಂಧವರ್ತಿಯ ರಟ್ಟರ ರಕ್ಷಣಾ ಶೈಲಿ, ತದನಂತರ ವಿಜಾಪುರ ಆದಿಲ್‌ಶಹರ ಕೋಟೆಯ ಅಳವಡಿಕೆಯ ಇಸ್ಲಾಮೀ ಶೈಲಿಗಳು ಸ್ಥಳ ನಿದರ್ಶನಗಳಾಗಿವೆ. (ಡಾ॥ ಎಸ್. ಕೆ. ಜೋಶಿ), (ಚಿತ್ರ-೨ ನೋಡಿ).

ಹಲಸಿಯ ಕದಂಬರ ರಕ್ಷಣಾ ವಾಸ್ತುಕಲೆಯು ಬೆಳಗಾವಿಯ ಮುಖ್ಯ ಕೋಟೆಯಲ್ಲಿ ಸ್ವಲ್ಪ ಮಸುಕಾಗಿ ಕಂಡರೂ, ಕಲ್ಯಾಣ ಚಾಳುಕ್ಯರ ಸಮಕಾಲೀನರೂ ಹಾಗೂ ಅವರ ಮಾಂಡಲೀಕರೂ ಆದ ಸುಗಂಧವರ್ತಿ (ಸೌಂದತ್ತಿ) ರಟ್ಟರು ('ರಾಷ್ಟ್ರ'ರೆಂದೂ ಶುದ್ಧ ಅಂಕಿತ, ೯-೧೦ ಶತಮಾನಗಳು) ಮಾತ್ರ ಈ ಕೋಟೆಗೆ ಮಹತ್ತರ ಕೊಡುಗೆ ನೀಡಿದ್ದಾರೆ. ಅದನ್ನು ಹೆಚ್ಚು ಭದ್ರವಾಗಿ ಮಾಡುವದಲ್ಲದೆ, ಅದರ ಸೌಂದರ್ಯವನ್ನೂ ಮತ್ತು ಧಾರ್ಮಿಕ ಮಹತಿಯನ್ನೂ ವೃದ್ಧಿಸಿದ್ದಾರೆ. ಕದಂಬ ನಿರ್ಮಿತ ರಕ್ಷಣಾ ಗೋಡೆಯನ್ನು ವಿನ್ಯಾಸದಲ್ಲಿ ಮೂಲಾಧಾರವಾಗಿಟ್ಟುಕೊಂಡು, ಅಲ್ಲಲ್ಲಿ ಆಯಕಟ್ಟಿನ ತಾಣಗಳಲ್ಲಿ ಹೊಸ ಕಲ್ಲುಗಳಿಂದ ಭದ್ರವಾದ ಗೋಡೆಯನ್ನು ಎತ್ತರಿಸಿದ್ದಾರೆ. ನೀರಿನ ಕೊಳಗಳೂ, ವೀಕ್ಷಣಾಲಯಗಳೂ, ರಕ್ಷಣಾ ಕಿಂಡಿಗಳೂ ಅಳವಡಿಸಲ್ಪಟ್ಟಿವೆ.

ರಾಜ್ಯದಾಡಳಿತ ಕೇಂದ್ರಗಳ ಕೋಟೆಗಳ ಸುತ್ತ ನೀರಿನ ಅಗಳಗಳನ್ನು (Moats) ನಿರ್ಮಿಸುವ ಪ್ರಥಮ ರಾಷ್ಟ್ರಕೂಟರ ರಾಜಧಾನಿ ಮಾನ್ಯಖೇಟ (ಈಗಿನ ಗುಲಬರ್ಗಾ ಜಿಲ್ಲೆಯ ಮಳಖೇಡ)ದಿಂದ ಪ್ರಾರಂಭವಾಗಿದೆ. ಅಲ್ಲಿಯ ಕಾಗಿನಾ ನದಿಯ ನೀರನ್ನು ಕಾಲುವೆಯ ಮೂಲಕ ಕೋಟೆಯ ಸುತ್ತಲಿನ ಅಗಳಕ್ಕೆ ವರ್ಷಗಳಿಡಿಯಾಗಿ ಪೂರೈಕೆಯಾಗುವಂತೆ ಮಾಡಲಾಗಿದೆ. ಅದೇ ತರಹದ ಸ್ಥಳ ದುರ್ಗದ ಅಗಳ ವ್ಯವಸ್ಥೆಯನ್ನು, ಬೆಳಗಾವಿನ ಕೋಟೆಯ ಉತ್ತರಕ್ಕೆ ಅನತಿ ದೂರದಲ್ಲಿ ಸ್ವಾಭಾವಿಕವಾದ ಕೊಳ್ಳ ಪ್ರದೇಶದಲ್ಲಿ ನೀರನ್ನು ಸಂಗ್ರಹಿಸಿ, (ಈಗ ಅದಕ್ಕೆ ಗಣೇಶ ಕೆರೆ ಎನ್ನುತ್ತಾರೆ) ಕೈಕೊಳಲಾಗಿದೆ. ಕ್ರಿ.ಶ. ೯-೧೦ ಶತಕಗಳಲ್ಲಿ ಕರ್ನಾಟಕದ ಪ್ರಧಾನ ಕೋಟೆಗಳಲ್ಲಿ ಒಂದಾಗಿತ್ತು, ಈ ರಾಷ್ಟ್ರಕೂಟ ಕೋಟೆ (ಚಿತ್ರ ೨ ನೋಡಿ).

ಸತ್ಯ, ಅಹಿಂಸೆ, ಅಚೌರ್ಯ, ಅಪರಿಗ್ರಹ ಹಾಗೂ ಜೀವದಯೆ ಮೊದಲಾದ ಸಾತ್ವಿಕ ಆದರ್ಶ ಗುಣಗಳಿಗೆ ಪ್ರಾಧಾನ್ಯತೆ ನೀಡಿದ ಜೈನ ಧರ್ಮವು, ಸುಗಂಧವರ್ತಿಯ ಜೈನ ಅರಸುಗಳಾದ ರಟ್ಟರ ಜೀವನಾಡಿ: ಆದಾಗಿ, ಬೆಳಗಾಂವಿಯ ಕೋಟೆಯಾವರಣದಲ್ಲಿ ಚತುರ್ಮುಖ ಬಸದಿ, ಕಮಲ ಬಸದಿ, ಪಾರ್ಶ್ವನಾಥ ಬಸದಿ ಮುಂತಾದವು ಕರ್ನಾಟಕ ವಾಸ್ತುಕಲೆಯ ಸಂಪದಗಳಲ್ಲದೆ, ಕೋಟೆಯ ಧಾರ್ಮಿಕ ಶ್ರದ್ಧೆಯನ್ನೂ ವೃದ್ಧಿಸಿವೆ. ಪರಿಸರದ ಸೌಂದರ್ಯ ಹೆಚ್ಚಿಸಿವೆ. ಈ ಬಸದಿಗಳೆಲ್ಲ ಈಗ ಸಂರಕ್ಷಿತ ರಾಷ್ಟ್ರೀಯ ಸ್ಮಾರಕಗಳು.




ಪ್ರಾಚೀನ ಹಾಗೂ ಪೂರ್ವ ಮಧ್ಯಯುಗಕ್ಕೆ ಸಮಕಾಲೀನವಾದ ಈ ಕೋಟೆಯು ವಿನ್ಯಾಸದಲ್ಲಿ ಅಂಡಾಕೃತಿಯಾಗಿದೆ. ಕೌಟಿಲ್ಯನ ಅರ್ಥಶಾಸ್ತ್ರದಂತೆ ಇದೊಂದು ಸ್ಥಲದುರ್ಗ. ಮಯಮತ, ಮಾನಸಾರರಂತೆ ಇದೊಂದು ದ್ರೋಣದುರ್ಗ, ಅಕ್ಷಕ್ಕೆ ಸಂಬಂಧಿದ (Axial) ಅಳತೆಯಂತೆ, ಪೂರ್ವಪಶ್ಚಿಮವಾಗಿ ೭೫೦ ಮೀ. ಹಾಗೂ ದಕ್ಷಿಣ-ಉತ್ತರವಾಗಿ ೧೦೦೦ ಮೀ. ಇದ್ದು, ಎತ್ತರ ಸಾಧಾರಣವಾಗಿ ೧೦ ರಿಂದ ೧೫ ಮೀ. ಇದ್ದು, ಹುರುಬರಕಾದ, ವಿಸ್ತೃತ, ಚೌಕಾದ ಅಡಿಕಲ್ಲುಗಳ ಮೇಲೆ ಇದರ ಗೋಡೆ ಕಟ್ಟಲಾಗಿದೆ. ವಾಯವ್ಯದಲ್ಲಿ ಮುಖ್ಯ ಪ್ರವೇಶ ದ್ವಾರವೂ ಪಶ್ಚಿಮದಲ್ಲಿ ಉಪಮುಖ್ಯ ದ್ವಾರವೂ ಅಳವಡಿಸಲಾಗಿವೆ. ಈ ಸಂಪದ್ಭರಿತ ಕಟ್ಟಡ ಕೋಟೆಯು, ದೇವಗಿರಿಯ ಯಾದವರ ಮಾಂಡಲಿಕನಾದ ಪಲಾಸಿಕದ ಶಿವಚಿತ್ತನ ಆಡಳಿತಕ್ಕೂ ಸಂಬಂಧಿಸಿದ್ದು, ಇದು ಯಾದವ ಪ್ರದೇಶವೆಂದೂ, ಸೇವುಣರ ಪ್ರದೇಶದ ಭಾಗವಾಗಿತ್ತೆಂದೂ (ಡಾ॥ ಎಸ್. ಆರ್. ರಾವ್) ಪ್ರತೀತಿ. (ಚಿತ್ರ ೧ ನೋಡಿ).

ಅಲ್ಲಾಉದ್ದೀನ ಖಿಲಜಿಯ ದಂಡನಾಯಕ ಮಲೀಕ್ ಕಾಫುರ್ ಕ್ರಿ.ಶ. ೧೩೧೦ ರಲ್ಲಿ ಔರಂಗಾಬಾದ್ ಜಿಲ್ಲೆಯಲ್ಲಿರುವ ದೌಲತಾಬಾದನ್ನು ಉಧ್ವಸ್ಥಗೊಳಿಸಿ, (ದೇವಗಿರಿ), ದಕ್ಷಿಣಕ್ಕೆ ತಿರುಗಿ, ನಾಂದೇಡ್, ಸೊನ್ನಾಲಾಪುರ, ರಾಯಬಾಗ್, ದ್ವಾರವಾಡ, ಹಾನುಂಗಲ್ಲು, ಬಂಕಾಪುರಗಳ ಕೋಟೆಗಳ ಜೊತೆಗೆ, ವೇಣುಗ್ರಾಮದ ಈ ಕೋಟೆಯನ್ನೂ, ದೇವಾಲಯಗಳನ್ನೂ ನಾಶಗೊಳಿಸಿ ಹೇರಳ ಲೂಟಿಯೊಂದಿಗೆ ದಿಲ್ಲಿಗೆ ಮರಳಿ ಹೋದನು. ಈ ಐತಿಹಾಸಿಕ ಹೆದ್ದರೆಯ ಹೊಡೆತಕ್ಕೆ ಈ 'ಹಿಂದು ಕೋಟೆ' ನಾಶ ಹೊಂದಿತ್ತು. ದೀರ್ಘ ಸಮಯದವರೆಗೆ ನಿರುಪಯೋಗಿಯಾಗಿತ್ತು.

ಬಿಜಾಪುರದ ಆದಿಲ್‌ಶಾಹಿಗಳ ಕಾಲ ಈ ಕೋಟೆಯ ಪುನರ್ಜನ್ಮ. ಮುಹಮ್ಮದ ಆದಿಲ್‌ಶಹನ (ಕ್ರಿ.ಶ. ೧೬೨೭-೧೬೫೬) ಕಾಲದಲ್ಲಿ ಈ ಬೆಳಗಾವಿ ಕೋಟೆಯು

ಪುನರ್‌ನಿರ್ಮಾಣ. ಕೋಟೆಯಲ್ಲಿಯ ಪರ್ಶಿಯನ್ ಶಿಲಾಲೇಖ ಹೇಳುವಂತೆ, ಅಸದ್‌ಖಾನ್‌ನೆಂಬ ಆದಿಲ್‌ಶಾಹಿ ರಾಜ್ಯದ ಪ್ರಮುಖನು ಕ್ರಿ.ಶ. ೧೬೩೫ ರಲ್ಲಿ ಈ ಕೋಟೆಯನ್ನು ಗಟ್ಟಿಮುಟ್ಟಾಗಿ, ಭದ್ರವಾಗಿ ನವೀಕರಿಸಿದನು. ಈ ಸಮಯದಲ್ಲಿ ಬಿಜಾಪುರದ ರಕ್ಷಣಾ ವಾಸ್ತುಕಲೆಯನ್ನು ಉಪಯೋಗಿಸಲಾಗಿದೆ. ಪ್ರಾಯಶಃ ಈ ಕೋಟೆಯ ನವೀಕರಣದಲ್ಲಿ ಬಿಜಾಪುರ ಕೋಟೆ ನಿರ್ಮಿಸಿದ ಅಭಿಯಂತರ ಅನುಭವ ಪಡೆದಿರಲು ಸಾಕು ಎಂದು ತುಲನಾತ್ಮಕವಾಗಿ ನಿಷ್ಕರ್ಶಿಸಬಹುದು. ಗೇಟ್ಸ್, ವಾಲ್‌ವಾಕ್, ಬ್ಯಾಟಲ್‌ಮೆಂಟ್ಸ್, ಬ್ಯಾಶ್ಚನ್ಸ್, ಗನ್‌ಸ್ಲಿಟ್ಸ್, ಲಾಂಗ್ ರೇಂಜ್ ಗನ್ಸ್, ಡ್ರಾ ಬ್ರಿಜ್, ಮುಂತಾದವುಗಳನ್ನು ವ್ಯವಸ್ಥಿತವಾಗಿ ಅಳವಡಿಸಲಾಯಿತು. ಸುತ್ತಲಿನ ಅಗಳವನ್ನು ಆಳ ಹಾಗೂ ವಿಸ್ತಾರಗಳಲ್ಲಿ ಹೆಚ್ಚುವರಿಸಲಾಯಿತು. ದಲಾನ್ಸ್, ಮುಸಾಫಿರ್‌ಖಾನಾ, ಬುರ್ಜಗಳು ಅಸ್ತಿತ್ವದಲ್ಲಿ ಬಂದವು. ಜಿನನಿಲ್ಲದ ಚತುರ್ಮುಖ ಬಸದಿಯು ಸೈನಿಕರ ಕಾವಲು ನಿಲ್ದಾಣವಾಯಿತು. ಇನ್ನೊಂದು ನಾಶವಾದ ಜಿನಾಲಯವು ನವೀಕೃತವಾಗಿ ಜುಮ್ಮಾ ಮಸೀದೆಯಾಯಿತು. ಕೇವಲ ಕಮಲ ಬಸದಿಯು ಮಾತ್ರ ಇನ್ನೂ ಹೇಗೋ ಜೀವ ಹಿಡಿದು, ಜೈನ ಧಾರ್ಮಿಕ ಕ್ರಿಯೆ ಪೂಜೆ ಪುನಸ್ಕಾರಗಳಲ್ಲಿ ಉಪಯೋಗಿಸಲ್ಪಡುತ್ತಿದೆ. ಶಾಹಿ ಇಮಾರತುಗಳೆಲ್ಲ ಇಲ್ಲವಾಗಿವೆ. ಇದು ಆಗ ಸಂಪೂರ್ಣ ''ಇಸ್ಲಾಮಿಕ್ ಕೋಟೆ'' (ಚಿತ್ರ ೧ ನೋಡಿ).

ಮರಾಠರ ಪ್ರಾಬಲ್ಯ ಕಾಲ. ಕ್ರಿ.ಶ. ೧೬೫೦ರ ಸುತ್ತಮುತ್ತ. ಶಿವಾಜಿ ಛತ್ರಪತಿಯು ದಕ್ಷಿಣದ ಮರಾಠಾ ರಾಜ್ಯ ವಿಸ್ತಾರದ ಹುಮ್ಮಸ್ಸಿನಲ್ಲಿ, ಹೊರಟು, ಸಾವಂತವಾಡಿ, ಗೋವೆಯ ಈಶಾನ್ಯ ಭಾಗ, ಸಪ್ತಕೋಟೇಶ್ವರ (ಗೋವೆ), ಹಲಸಿ, ಬೆಳಗಾಂವಿ, ರಾಯಬಾಗ, ಬೆಳವಡಿ, ಧಾರವಾಡ, ಬಂಕಾಪುರ ಮುಂತಾದವುಗಳನ್ನು ಕೈವಶ ಮಾಡಿಕೊಳ್ಳುತ್ತ ಈಗಿನ ತಮಿಳ್ ನಾಡಿನ ತಂಜಾವೂರ್‌ವರೆಗೂ ದಿಗ್ವಿಜಯ ಗಳಿಸಿದ. ಕೆಲಕಾಲ ಈ ಬೆಳಗಾವಿ ಕೋಟೆಯು ಮರಾಠಾ ರಾಜ್ಯದ ದಕ್ಷಿಣ ಆಡಳಿತ ಕೇಂದ್ರವಾಗಿತ್ತು, (ಡಾ॥ ಪಿ ಎಮ್. ಜೋಶಿ). ಇದೇ ಠಾವು ಪೇಶವೆಯರ ಆಡಳಿತದ (೧೮ನೇ ಶತಮಾನ)ವರೆಗೂ ಮುಂದುವರೆಯಿತು. ಮುಖ್ಯ ದ್ವಾರದ ಗಣೇಶ ಪೇಶವೆಯ ಕಾಲದ್ದು.

ಮರಾಠರ ಅವನತಿ ಬ್ರಿಟಿಶರ ಉನ್ನತಿ. ಬ್ರಿಟಿಶ್ ಇಂಡಿಯಾದಲ್ಲಿ ಬೆಳಗಾವಿ ಕೋಟೆ ಮಿಲಿಟರಿ ಕ್ಯಾಂಪ್ ಆಯಿತು. ಇಲ್ಲಿ ಹೊಸದಾಗಿ ಮಿಲಿಟರಿ ಬ್ಯಾರ್‍ಯಾಕ್ಸ್, ಹಾಗೂ ಇನ್ನುಳಿದ ಮಿಲಿಟರಿ ಆಡಳಿತ ಕಚೇರಿಗಳು ನಿರ್ಮಾಣವಾದವು ಮಿಲಿಟರಿ ಟ್ರೇನಿಂಗ್ ಕ್ಯಾಂಪ್ ಕೂಡ ಆಯಿತು (೧೯ ನೆಯ ಶತಕ).

೧೯೪೭ ಸ್ವತಂತ್ರ ಭಾರತ. ಬೆಳಗಾವಿ ಕೋಟೆ ಕರ್ನಾಟಕ ರಾಜ್ಯ ರಕ್ಷಿತ ಸ್ಮಾರಕವಾಗಿದೆ, ಈಗ ಪ್ರವಾಸಿ ಕೇಂದ್ರವೂ ಕೂಡ ಆಗಿದೆ.

ಆದಾಗಿ ವೇಣುಗ್ರಾಮವು ತನ್ನ ಜೀವನದುದ್ದಕ್ಕೂ ಶಾತವಾಹನರಿಂದ ಹಿಡಿದು ಬ್ರಿಟಿಶ ಇಂಡಿಯದವರೆಗೆ, ತನ್ನ ರಕ್ಷಣಾ ಗೋಡೆಗಳಲ್ಲಿ ಪರಿವರ್ತನಗೊಳ್ಳುತ್ತ ಹೋಗಿ, ಇತಿಹಾಸದ ಉದ್ದಕ್ಕೂ ವಿವಿಧ ಪಂಥಗಳಿಗೆ ಇಂಬಿತ್ತು, ರಾಷ್ಟ್ರೀಯ ಸಹಜೀವನದಲ್ಲಿ ಸಹಭಾಗಿಯಾಗಿದೆ. ಇದರ ರಕ್ಷಣಾ ಗೋಡೆಗಳು, ಈ ನೆಲದ ಜನರ ಶೌರ್ಯದ, ಕ್ರೌರ್ಯದ, ಒಲವಿನ, ನಲಿವಿನ, ಆನಂದದ, ದುಃಖದ ಅಳುವಿನ, ನಗುವಿನ, ತ್ಯಾಗದ, ಭೋಗದ, ಬಲಿದಾನದ, ಸ್ವಾಮಿನಿಷ್ಠೆಯ, ಸತ್ಯದ, ಸೌಂದರ್ಯದ ಹಾಗೂ ಸಾಕ್ಷಾತ್ಕಾರದ ಭಾವನೆಗಳ ಕಥೆ ಹೇಳುತ್ತಿವೆ.

## ಆಕರ ಗ್ರಂಥಗಳು


ಎಚ್ಚೆಸ್ಕೆ (ಪ್ರೊ॥ ಎಚ್. ಎಸ್. ಕೃಷ್ಣಸ್ವಾಮಿ ಐಯಂಗಾರ್) ಸಂ. ಕರ್ನಾಟಕ ಪರಂಪರೆಯ ಸಮೀಕ್ಷೆ, ಬೆಂಗಳೂರು, ೧೯೮೫

ಡಾ॥ ಎಮ್. ಚಿದಾನಂದಮೂರ್ತಿ : ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಮೈಸೂರು, ೧೯೬೬

ಡಾ॥ ಎಸ್. ಕೆ. ಜೋಶಿ : ಡಿಫೆನ್ಸ್ ಆರ್ಕಿಟೆಕ್ಚರ್ ಇನ್ ಅರ್ಲಿ ಕರ್ನಾಟಕ, ನ್ಯೂ ದಿಲ್ಲಿ, ೧೯೭೫

ಲೇಖಕನ ಸ್ವತಃ ಸ್ಥಳ ಸಮೀಕ್ಷೆ, ಹಾಗೂ ವಿವಿಧ ವಿದ್ವಾಂಸರೊಂದಿಗೆ ಚರ್ಚೆ, ಪ್ರಾಮುಖ್ಯವಾಗಿ ಡಾ॥ ಎಚ್. ಆರ್. ರಘುನಾಥಭಟ್ ಹಾಗೂ ಡಾ॥ ಎಮ್. ಷಡಕ್ಷರಯ್ಯ

ನಕ್ಷೆ ಚಿತ್ರಗಳು : ಲೇಖಕನವು

ಾ॥ ದೇವರ ಕೊಂಡಾರೆಡ್ಡಿ *

# ಶಿವಮಾಂಧಾತೃವರ್ಮ್ಮಣನ ಮುತ್ತೂರ ತಾಮ್ರ ಶಾಸನ

ಬ್ಯಾಡಗಿ ತಾಲೂಕಿನ ಮುತ್ತೂರು ಗ್ರಾಮದ ಶಿವಪ್ಪ ಬಸಪ್ಪ ಅಂಗಡಿ ಎಂಬುವರ ಬಳಿ ಈ ತಾಮ್ರ ಪಟಗಳಿದ್ದುವು. ಇವರಿಗೆ ಇವು ಮುತ್ತೂರು ಹಾಗೂ ಅದೇ ತಾಲೂಕಿನ ತಡಸದ ಮಧ್ಯೆಇರುವ ಪಾಳುಗ್ರಾಮು ನಿವೇಶನದಲ್ಲಿ ಸಿಕ್ಕಿದ್ದುದ್ದಾಗಿ ತಿಳಿಯುತ್ತದೆ. ಈ ಶಾಸನವು ಎರಡು ಹಲಗೆಗಳನ್ನು ಹೊಂದಿದ್ದು, ಪ್ರಾರಂಭದ ಹಲಗೆ ಮತ್ತು ಮುದ್ರೆ ಇಲ್ಲ. ದೊರಕಿರುವ ಹಲಗೆಗಳಲ್ಲಿ ಒಂದನೆಯ ಹಲಗೆಯ ಎರಡು ಮಗ್ಗುಲಲ್ಲಿ. ಎರಡನೆಯ ಹಲಗೆಯ ಒಳಭಾಗದಲ್ಲಿ ಬರವಣಿಗೆ ಇದೆ. ಪ್ರತೀಮುಖದಲ್ಲೂ ನಾಲ್ಕು ಸಾಲುಗಳನ್ನು ಹೊಂದಿದ್ದು ಒಟ್ಟು ೧೨ ಸಾಲುಗಳನ್ನು ಒಳಗೊಂಡಿದೆ.

ಶಾಸನದ ಲಿಪಿಗಳು ಕದಂಬರ ಕಿಱುಕುಪ್ಪಟೂರು ಶಾಸನದ (ಕೆ.ಐ. ೨) ಲಿಪಿಗಳನ್ನು ಹೋಲುತ್ತದೆ. ತಾಳಗುಂದ ಶಿಲಾಶಾಸನಕ್ಕಿಂತ ಲಿಪಿ ಸ್ವಲ್ಪ ಅಗಲವಾಗಿದೆ. ತಲೆಯ ಮೇಲೆ ಇರುವ ಪೆಟ್ಟಿಗೆಗಳು ಆಳವಾಗಿ ಸ್ಪಷ್ಟವಾಗಿವೆ. 'ತ'ಕಾರ, 'ನ'ಕಾರಕ್ಕೆ ಇರುವ ವ್ಯತ್ಯಾಸ ಅತ್ಯಲ್ಪ. ಅಕ್ಷರಗಳು ನೀಳವಾಗಿವೆ. ಅನೇಕ ಕಡೆ ಅನುಸ್ವಾರಗಳನ್ನು ಸ್ಪಷ್ಟವಾಗಿ ತೋರಿಸಿಲ್ಲ. ಕೆಲವೆಡೆ ವರ್ಗಾಕ್ಷರಗಳ ಮಧ್ಯೆ ಬರಬೇಕಾದ ಅನುನಾಸಿಕಗಳನ್ನು ಬಳಸದೆ ಅಲ್ಲಿಯೂ ಅನುಸ್ವಾರಗಳನ್ನೇ ಬಳಸಿರುತ್ತಾರೆ. ಕೆಲವೆಡೆ ಕೆತ್ತುವಾಗ ಅಕ್ಷರ ಸ್ಖಾಲಿತ್ಯಗಳು ಉಳಿದಿವೆ. ಉದಾ : ಎರಡನೆಯ ಸಾಲಿನಲ್ಲಿ ಬರುವ ಗುರು ಶಬ್ದದ 'ಗು'ಕಾರ ಮತ್ತು 'ರು'ಕಾರ.

ಶಾಸನದಲ್ಲಿ ಮೊದಲ ಹಲಗೆ ಕಳೆದಿರುವುದರಿಂದ ಶಾಸನೋಕ್ತ ರಾಜನ ವಂಶವಾಗಲೀ, ವಂಶಾವಳಿಯಾಗಲೀ ಎಲ್ಲಿಂದ ರಾಜ್ಯವಾಳುತ್ತಿದ್ದನೆಂಬ ಉಲ್ಲೇಖವಾಗಲೀ ದೊರೆಯುವುದಿಲ್ಲ. ಶಾಸನದಲ್ಲಿ 'ಶ್ರೀ ವಿಜಯ ಶಿವ ಮಾಂಧಾತೃವರ್ಮ್ಮಣ' ಎಂದಿರುವುದರಿಂದ ಕದಂಬ ವಂಶದವನೆಂದು ಹೇಳಬಹುದಾಗಿದೆ. ಶಿವಮೊಗ್ಗ ಜಿಲ್ಲೆಯಲ್ಲಿ ದೊರೆತಿರುವ ಶಾಸನದಲ್ಲಿ (ಎ. ಕ., ೭, ೮, ಶಿಕಾ ೧೨೯ ಸಪ್ಲಿ) ಇವನು ಕದಂಬ ರಾಜನೆಂದು ಹೇಳಿಕೊಂಡಿರುವುದರಿಂದ, ಇವನೂ ಅದೇ ಮಾಂಧಾತೃವರ್ಮ್ಮಣನಾಗಿರಬೇಕು. ಶಾಸನದ ಲಿಪಿ ತಾಳಗುಂದ ಶಾಸನದ ಲಿಪಿಗಳಿಗಿಂತ ಸ್ವಲ್ಪ ಹೆಚ್ಚಿನ ಬೆಳವಣಿಗೆಯನ್ನು ತೋರಿಸುತ್ತಿರುವುದರಿಂದ ಈತನು ಕಾಕುಸ್ಥವರ್ಮನ ನಂತರ ರಾಜನಾಗಿರ ಬೇಕು.

ಶಾಸನದಲ್ಲಿ ರಾಜನನ್ನು 'ಧರ್ಮಮಹಾರಾಜೇನ ಸತ್ಯವ್ರತೇನಾ ಕ್ಲಿಷ್ಟ ಕರ್ಮ್ಮಣ' ಎಂಬ ವಿಶೇಷಣಗಳಿಂದ ಕರೆದಿದೆ. ಕದಂಬವಂಶಾವಳಿಯನ್ನು ಗುರುತಿಸುವ ವಿದ್ವಾಂಸರು ಮಾಂಧಾತೃವರ್ಮನು ಐದರಿಂದ ಏಳು ವರ್ಷಗಳಕಾಲ ರಾಜ್ಯಭಾರಮಾಡಿದಂತೆ ತಿಳಿಸಿರುತ್ತಾರೆ ಆದರೆ ಈ ಶಾಸನದಲ್ಲಿ ಆಳ್ವಿಕೆಯ ೧೩ನೆಯ ವರ್ಷದ ಉಲ್ಲೇಖ ವಿರುವುದರಿಂದ ಈತ ಸುಮಾರು ೧೫ ವರ್ಷಗಳ ಕಾಲ ರಾಜ್ಯಭಾರ ಮಾಡಿರಬೇಕು.

ಶಾಸನದಲ್ಲಿ ಕಾಲದ ಸ್ಪಷ್ಟ ಉಲ್ಲೇಖವಿಲ್ಲ. 'ತ್ರಯೋದಶೇ ಹೇಮನ್ತ ಪಕ್ಷೇ ಪ್ರಥಮೇ ದಿವಸೇ ಪಂಚದಶೇ' ಎಂದಿದ್ದು ಆಳ್ವಿಕೆಯ ೧೩ನೆಯ ವರ್ಷದಲ್ಲಿ ಹೇಮಂತಮಾಸದ ಮೊದಲ ಪಕ್ಷದ ೧೫ನೇ ದಿನದಂದು ದಾನನೀಡಿದಂತೆ ಹೇಳಿದೆ. ಶಕವರ್ಷದ ಉಲ್ಲೇಖವಿಲ್ಲ. ಈ ಶಾಸನದ ಕಾಲವನ್ನು ಕ್ರಿ.ಶ.ಸು ೪೫೦ ರಿಂದ ೫೦೦ಕ್ಕೆ ನಿಗದಿ ಪಡಿಸಬಹುದಾಗಿದೆ. ವಿದ್ವಾಂಸರು ಮೃಗೇಶವರ್ಮನ ನಂತರ ಇವನು ರಾಜ್ಯಭಾರಮಾಡಿರ ಬೇಕೆಂದು ಊಹಿಸುತ್ತರಾದರೂ ಶಾಸನದ ಲಿಪಿದೃಷ್ಟಿಯಿಂದ ಮಾಂಧಾತೃವರ್ಮನು ಮೃಗೇಶನಿಗಿಂತ ಮೊದಲು ರಾಜ್ಯಭಾರಮಾಡಿರ ಬೇಕು. ಈ ಉಪಲಬ್ಧ ಶಾಸನವು ಸದ್ಯಕ್ಕೆ ಇವನ ಎರಡನೆಯ ಶಾಸನವಾಗಿದೆ. (ಮೊದಲನೆಯದು ಎ.ಕ. ೭ ಶಿ.ಕಾ. ೨೯, ಕೂಡಗೆರೆ ತಾಮ್ರ ಪಟಗಳು).

* ರೀಡರ್, ಶಾಸನ ವಿಭಾಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಕಮಲಾಪುರ ೫೮೩೨೨೧

ಶಾಸನದಲ್ಲಿ ಮಾಂಧಾತೃವರ್ಮನು ಮೂಕುನ್ದಹಾರಕ್ಕೆ ಸೇರಿದ 'ವಲಶಟ್ಟ' ಎಂಬ ಗ್ರಾಮವನ್ನು 'ತೈತ್ತರೀಯ ದ್ರೋಣಾರ್ಯ್ಯವಲಾರ್ಯ್ಯ'ನಿಗೆ ದಾನನೀಡಿದಂತೆ ಹೇಳಿದೆ. ಇವನಿಗೆ ಇಪ್ಪತ್ತು ನಿವರ್ತ್ತನದಷ್ಟು ಹಲಕ್ಷೇತ್ರವನ್ನು ರಾಜನು ನೀಡುತ್ತಾನೆ. ಶಾಸನದಲ್ಲಿ ಉಲ್ಲೇಖಿತವಾಗಿರುವ ಮೂಕುನ್ದಹಾರ, ವಲಶಟ್ಟಿಗ್ರಾಮಗಳು ಯಾವುವೆಂದು ಗುರುತಿಸುವುದು ಕಷ್ಟ. ಆದರೂ ಈ ಶಾಸನ ದೊರೆತ ಸ್ಥಳಕ್ಕೆ ಸನಿಹದಲ್ಲಿರುವ ಈಗಿನ ಚಿನ್ನ ಮುಳಗುಂದ ಮೂಕುನ್ದಹಾರವೆಂದು ಗುರುತಿಸಬಹುದಾಗಿದೆ. ಮೂಕುನ್ದ ಮುಂದೆ ಮುಳಗುಂದ ಅಥವಾ ಮುಟಗುಂಡವೇ ಸಂಸ್ಕೃತೀಕರಣವಾಗಿ ಮೂಕುನ್ದವಾಗಿರ ಬಹುದು. ಈಗಿನ ಚಿನ್ನ ಮುಳಗುಂದದಲ್ಲಿ ಕದಂಬರಕಾಲದ ಅವಶೇಷಗಳು ಕಾಣಬರದಿದ್ದರೂ, ರಾಷ್ಟ್ರಕೂಟರಕಾಲದ ಅವಶೇಷಗಳಾಗಿ ವೀರಗಲ್ಲು ದೊರೆತಿದೆ. ವಲಶಟ್ಟಿಗ್ರಾಮವು ಈಗಿನ ಶಾಸನ ದೊರೆತ ಪಾಳುಗ್ರಾಮವಾಗಿರಬಹುದು.

ಈ ಶಾಸನವನ್ನು ಬರೆದವನು ರಹಸ್ಯಾಧಿಕಾರಿಯಾಗಿದ್ದ ದಾಮೋದರದತ್ತ ಎಂಬುವವನು. ಇದೇ ರಾಜನ ಕೂಡಿಗೆರೆ ಶಾಸನವನ್ನು ಬರೆದವನೂ ಸಹ ಇವನೇ ಆಗಿರುತ್ತಾನೆ. ಲಿಪಿಯ ಹಾಗೂ ವಿಷಯದ ದೃಷ್ಟಿಯಿಂದ ನೈಜಶಾಸನ'ವಾಗಿದ್ದು ಕದಂಬರ ಇತಿಹಾಸದ ಮೇಲೆ ಹೆಚ್ಚಿನ ಬೆಳಕನ್ನು ಬೀರಬಲ್ಲದುದಾಗಿದೆ.

**ಶಾಸನ ಪಾಠ**

**ಮೊದಲಹಲಗೆಯ ಮುಂಭಾಗ**

೧. ತ್ರಯೋದಶೇ ಹೇಮನ್ತ ಪಕ್ಷೇ ಪ್ರಥಮೇ ದಿವಸೇ ಪ [೦]ಚದಶೇ ಆಹವಾರ್ಜ್ಜಿತ
೨. ವಿಪುಲ ಪರಮ ದೃಢಿ ಸತ್ಯೇನ ॥ ದೇವ ಬ್ರಾಹ್ಮಣ (ಗುರೂ) ಶುಶ್ರುಷ ಭಿರೇತೇನ
೩. ವಿದಿತ ಧರ್ಮಾರ್ತ್ಥ ಸದ್ಭಾದತ ॥ ಧರ್ಮ್ಮ ಮಹಾ(ರಾ)ಜೇ[ನ] ಸತ್ಯವ್ರತೇನಾ ಕ್ಲಿಷ್ಟ
೪. ಕರ್ಮಣಾ ಶ್ರೀ ವಿಜಯ ಶಿವ ಮಾನ್ಧಾತೃವರ್ಮಣಾ ॥ ಮೂಕುನ್ದಹಾರೇ ವಲಶಟ್ಟಿಗ್ರಾಮೇ

**ಮೊದಲ ಹಲಗೆಯ ಹಿಂಭಾಗ.**

೫ ..... ಸದಕ್ಷಣಂ ಸರ್ವಪರಿಹಾರ ಸ(೦)ಯುಕ್ತ[೦]ತೈತ್ತರೀಯಸಶ್ರೀಹು
೬ ವಾರಿಭ್ಯಾಮ್... ಕರಸ ಗೋತ್ರಾಭ್ಯಾಮ್ ॥ದತ್ತಾನು ಯೋಗಾಭ್ಯಾಮ್ ॥ದ್ರೋಣಾರ್ಯ್ಯವಲಾರ್ಯ್ಯಭ್ಯಾಮ್ ॥
೭ ವಿಂಶ[ತಿ]ನಿವರ್ತಾನಿ ಹಲಕ್ಷೇ(ತ್ರಂ) ದತ್ತಂ॥ ಪ್ರಮಾದದ ಧರ್ಮಾ ಧ್ವಯೋಸ್ಯಾಭಿಹನ್ತಿ
೮ ಸಪ[೦]ಚ ಮಹಾಪಾತಕ ಸ[೦]ಯುಕ್ತೋ ಭವತಿ ॥ ಯೋಸ್ಯಾಭಿರಕ್ಷಿತಾ ಸತತ್ಪಲ...

**ಎರಡನೆಯ ಹಲಗೆಯ ಮುಂಬದಿ**

೯ ಭವತಿ ॥ ಅಪಿಚ ॥(ಸ್ವ) ದತ್ತಾ[೦] ಪರದತ್ತಾ[೦] ವಾಯೋಹರೇತ ವಸುನ್ಧರಾ ಷ[ಷ್ಟಿ]
೧೦ [ವ]ರ್ಷ ಸಹಸ್ರಾಣಿ ನರಕೇ ಪಚ್ಯತೇ ತುಸ: ॥ ಬಹುಭಿರ್ವ್ವಸುಧಾಭುಕ್ತಾ
೧೧ ರಾಜಜಭಿಸ್ಸಗರಾಧಿಭಿ:ಯಸ್ಯಯಸ್ಯಯದಾ ಭೂಮಿ ಸ್ತಸ್ಯತಸ್ಯತದಾಪಲಮ್
೧೨ ದಾಮೋದರದತ್ತೇನ ರಹಸ್ಯಾಧಿಕೃತೇನ ಲಿಖಿತೇಯಂ ಪಟ್ಟಿಕೇ...

ಸಾರಾಂಶ:- (ರಾಜನ ಆಡಳಿತದ ) ೧೩ನೆಯ ವರ್ಷದ ಹೇಮಂತದ ಮೊದಲ ಪಕ್ಷದ ೧೫ನೆಯ ದಿವಸದಲ್ಲಿ ಸತ್ಯವಂತನಾದ, ದೇವಬ್ರಾಹ್ಮಣಗುರುಗಳ ಸೇವೆ ಮಾಡುವವನಾದ, ಧರ್ಮಾರ್ತ್ಥಗಳನ್ನು ಪಾಲಿಸುತ್ತಿದ್ದ, ಧರ್ಮಮಹಾರಾಜನಾದ, ಸತ್ಯವ್ರತನಾದ, ಕ್ಲಿಷ್ಟಕರ್ಮನಾದ ಶ್ರೀವಿಜಯಶಿವ ಮಾಂಧಾತೃವರ್ಮನು ಮೂಕುಂದ ಹಾರಕ್ಕೆ ಸೇರಿದ ವಲಶಟ್ಟಿಗ್ರಾಮದಲ್ಲಿ ತೈತ್ತರೀಯ (ಚರಣನಾದ)ದತ್ತಾನು ಸೂತ್ರಗಳನ್ನು ಚೆನ್ನಾಗಿ ಅಭ್ಯಾಸಮಾಡಿದ್ದ ದ್ರೋಣಾರ್ಯ ಮತ್ತು ವಲಾರ್ಯರಿಗೆ ಇಪ್ಪತ್ತು ನಿವರ್ತನ ವಿಸ್ತೀರ್ಣದ ಉಳಲು ಯೋಗ್ಯವಾದ ಭೂಮಿಯನ್ನು ಸರ್ವಬಾಧಾ ಪರಿಹಾರವಾಗಿ ನೀಡುತ್ತಾನೆ. (ಶಾಪಾಶಯ ಶ್ಲೋಕಗಳಾದ ಮೇಲೆ) ಈ ಪಟ್ಟಿಕೆಗಳನ್ನು ರಹಸ್ಯಾಧಿಕಾರಿಯಾದ ದಾಮೋದರದತ್ತನು ಬರೆದಿರುತ್ತಾನೆ.

(ಈ ಶಾಸನವನ್ನು ಶೋಧಿಸುವಲ್ಲಿ ನೆರವಾದ ಡಾ॥ ಸೂರ್ಯನಾಥ ಯು.ಕಾಮತ್ ಅವರಿಗೂ ಶ್ರೀ ಶಿ.ರಾಜೇಂದ್ರಪ್ಪ ಅವರಿಗೂ ನನ್ನ ಕೃತಜ್ಞತೆಗಳು.)

ಡಾ॥ ಎಚ್.ಎಸ್.ಗೋಪಾಲರಾವ್ *

# ಧರ್ಮಪುರಿ ಜಿಲ್ಲೆಯ ಮೂರು ಶಾಸನಗಳು

ಇತ್ತೀಚೆಗೆ ನನ್ನ ಗುರುಗಳಾದ ಡಾ॥ಬಾ.ರಾ. ಗೋಪಾಲ್ ಅವರಿಂದ ಧರ್ಮಪುರಿ ಜಿಲ್ಲೆಯ ಕನ್ನಡ ಶಾಸನಗಳ ಸುಮಾರು ೨೮೦ ಪಡಿಯಚ್ಚುಗಳು ನನ್ನ ವಶಕ್ಕೆ ಬಂದವು. ಅವುಗಳನ್ನು ಓದಿ ಸೂಕ್ತವಾಗಿ ಸಂಪಾದಿಸ ಬೇಕೆಂಬುದು ನನ್ನ ಗುರುಗಳ ಆದೇಶವಾಗಿತ್ತು. ಈಗ ತಮಿಳುನಾಡಿಗೆ ಸೇರಿಹೋಗಿರುವ, ಹಿಂದೆ ಬಹುಕಾಲ ಕರ್ನಾಟಕದ ಅಭಿನ್ನಭಾಗವಾಗಿದ್ದ ಧರ್ಮಪುರಿ ಜಿಲ್ಲೆಯಲ್ಲಿ ಕನ್ನಡ ಶಾಸನಗಳು ಅಧಿಕ ಸಂಖ್ಯೆಯಲ್ಲಿ ದೊರೆಯುವುದು ಆಶ್ಚರ್ಯದ ಸಂಗತಿಯೇನಲ್ಲ.

ದೊರೆತಿರುವ ಸುಮಾರು ೨೮೦ ಶಾಸನ ಪಡಿಯಚ್ಚು ಗಳಲ್ಲಿ ಈವರೆಗೆ ಕೆಲವನ್ನು ಮಾತ್ರ ಓದಲಾಗಿದ್ದು. ಅವುಗಳಲ್ಲಿ ಮೂರು ಶಾಸನಗಳ ಬಗೆಗೆ ಇಲ್ಲಿ ಪ್ರಸ್ತಾಪಿಸುತ್ತಿದ್ದೇನೆ.

ಮೊದಲ ಶಾಸನವು ಧರ್ಮಪುರಿ ಜಿಲ್ಲೆಯ ಹೊಸೂರು ತಾಲ್ಲೂಕಿನ ಮಾಸಿನಾಯಕನಪಲ್ಲಿ ಗ್ರಾಮಕ್ಕೆ ಸೇರಿದ್ದು. ಇದೊಂದು ವೀರಶಾಸನ. ಶಿಲೆಯ ಎಡಭಾಗದಲ್ಲಿ ವೀರನ ಶಿಲ್ಪವೂ ಬಲಭಾಗದಲ್ಲಿ ಶಾಸನವೂ ಕೆತ್ತಲ್ಪಟ್ಟಿವೆ.

ಶಾಸನದ ಪಾಠ ಕೆಳಕಂಡಂತಿದೆ :

೧ ಸ್ವಸ್ತಿಶ್ರೀ ಶಿವಮಾರ
೨ ಮಹಾರಾ
೩ ಜ್ಜ ಪ್ರಿಥಿ
೪ ವೀರ (ರಾ *) ಜ್ಯಂಗೆಯೆ
೫ ಬಯ್ಯುಗ್ಮಪ್ಪು ರಾಮರಾ
೬ ಜರಾಶರಾ ತೊ(ತು *) ಱು ಕೊ
೭ ಳು ಎಱಿದು ವಿಟ್ಟಿ

ಶುಭವಾಗಲಿ. ಶಿವಮಾರ ಮಹಾರಾಜ ಪೃಥುವಿಯನ್ನು ಆಳುತ್ತಿದ್ದಾಗ ಬಯ್ಯುಗ್ಮಪ್ಪದ ರಾಮರಾಜರಸರು ತುಱುಗೊಳುವಿನಲ್ಲಿ ಕಾದಾಡಿ ಸತ್ತ. ಇದು ಶಾಸನದ ಆಶಯ.

ಲಿಪಿ ಸ್ವರೂಪದ ಆಧಾರದ ಮೇಲೆ ಕ್ರಿ.ಶ.ಸು.೮ನೆಯ ಶತಮಾನಕ್ಕೆ ಸೇರುವ ಈ ಶಾಸನದಲ್ಲಿ ಉಕ್ತನಾಗಿರುವ ಶಿವಮಾರನು ಗಂಗವಂಶಕ್ಕೆ ಸೇರಿದವನೇ ಆಗಿರಬೇಕು. ಶಾಸನ ಲಭಿಸಿರುವ ಪ್ರದೇಶವು ಗಂಗವಾಡಿಗೇ ಸೇರಿತ್ತು ಎಂಬುದರಲ್ಲಿ ಅನುಮಾನವಿಲ್ಲ. ಆದರೆ ಶಾಸನೋಕ್ತ ಶಿವಮಾರನು ಗಂಗವಂಶದ ಇಬ್ಬರು ಶಿವಮಾರರಲ್ಲಿ ಯಾರು ಎಂಬುವುದು ಸ್ಪಷ್ಟವಾಗಿಲ್ಲ. ಒಂದನೆಯ ಶಿವಮಾರ (ಶ್ರೀ ಪುರುಷನ ತಾತ)ನು ಕ್ರಿ.ಶ.೬೭೯-೭೨೫ರ ಅವಧಿಯಲ್ಲೂ ಎರಡನೆಯ ಶಿವಮಾರ (ಶ್ರೀಪುರುಷನ ಮಗ) ನು ಕ್ರಿ.ಶ.ಸು. ೭೮೮-೮೧೬ರ ಅವಧಿಯಲ್ಲೂ ಆಳಿದ್ದಂತೆ ತಿಳಿಯಲಾಗಿದೆ. ಗಂಗ ವಂಶದಲ್ಲಿ ಬೇರೆ ಬೇರೆ ಕಾರಣಗಳಿಂದ ಪ್ರಖ್ಯಾತನಾದರೂ ತನ್ನ ಜೀವಿತಾವಧಿಯ ಬಹುಕಾಲವನ್ನು ರಾಷ್ಟ್ರಕೂಟರ ಬಂಧನದಲ್ಲೇ ಕಳೆದ ಇಮ್ಮಡಿ ಶಿವಮಾರನ ಅಲ್ಪಕಾಲದ ಆಳ್ವಿಕೆಯ ಕಾಲಕ್ಕಾಗಲೀ ಅಥವಾ ಆ ಮೊದಲು ಆಳಿದ ಒಂದನೆಯ ಶಿವಮಾರನ ಆಳ್ವಿಕೆಯ ಕಾಲಕ್ಕಾಗಲೀ ಈ ಶಾಸನವನ್ನು ಸೇರಿಸಬಹುದಾದರೂ ಲಿಪಿ ಸ್ವರೂಪದ ದೃಷ್ಟಿಯಿಂದ ೮ನೆಯ ಶತಮಾನದ ಆರಂಭಕಾಲಕ್ಕೆ ಸೇರಿಸಿದರೆ ತಪ್ಪಾಗಲಾರದು. ಶಾಸನದಲ್ಲಿ ಬಳಕೆಯಾಗಿರುವ ಜ, ಱ, ಟ, ಯ, ಬ, ಇವುಗಳು ಕ್ರಿ.ಶ.೮ನೆಯ ಶತಮಾನದ ಆರಂಭಕಾಲದ ಸ್ವರೂಪದಲ್ಲೇ ಇವೆ. 'ಱ' ಕಾರವು ಹೊಂದಿಕೊಂಡ ಎರಡು ಸೊನ್ನೆಗಳ ಮಧ್ಯೆ ಅಡ್ಡವಾಗಿ ಎಳೆದ ಒಂದು ಗೆರೆಯನ್ನು ಹೊಂದಿದ್ದರೆ, ಟಕಾರವು ಹೊಂದಿಕೊಂಡ

* ಸ್ವಸ್ತಿಶ್ರೀ ಸ್ಕಂದ, ಅರಿಶಿನಕುಂಟೆ, ನೆಲಮಂಗಲ ತಾ॥ ಬೆಂಗಳೂರು ಗ್ರಾಮಾಂತರ ಜಿಲ್ಲೆ -೫೬೨೧೨೩

ರಡು ಸೊನ್ನೆಗಳ ಸ್ವರೂಪದಲ್ಲೇ ಇದೆ. 'ಯ' ಕಾರವು ಈಗಿನ ಲಕಾರದ ಮಧ್ಯಭಾಗವು ಸ್ವಲ್ಪ ಮಟ್ಟಿಗೆ ಹೊಕ್ಕುಳನ್ನು ಪಡೆದಿದೆ. ಬಕಾರದ ಎಡಭಾಗವು ಪೂರ್ಣವಾಗಿ ಕೂಡಿ ಕೊಂಡಿಲ್ಲ. ಲಿಪಿಸ್ವರೂಪದ ಆಧಾರದ ಮೇಲೆ ಒಂದನೆಯ ಶಿವಮಾರನ ಕಾಲಕ್ಕೆ ಸೇರಬಹುದಾದ ವೀರಗಲ್ಲು ಶಾಸನವು ತುಱುಗೋಳ್‌ನಲ್ಲಿ ರಾಮರಾಜರಾಶನು ಹೋರಾಡಿ ಸತ್ತದ್ದನ್ನು ದಾಖಲಿಸಿದೆ. ಬಯ್ಯುಗ್ಮ್ಮ ಎಂದು ಪ್ರಸ್ತಾಪಿತವಾದ ಊರು ಯಾವುದೆಂದು ಗುರುತಿಸಲಾಗಿಲ್ಲ. ಭಾಷಿಕವಾಗಿ ಅರಸನ ಬದಲಿಗೆ ಅರಶ (ರಾಮರಾಜರಾಶ) ತುಱುಗೊಳು ವಿನ ಬದಲಿಗೆ ತೊಱುಕೊಳು ಇತ್ಯಾದಿ ದೋಷಗಳು ಉಳಿದಿವೆ.

ಈ ವೀರಗಲ್ಲು ಶಾಸನದ ಮತ್ತೊಂದು ವೈಶಿಷ್ಟ್ಯವೆಂದರೆ, ಶಾಸನದ ಎಡಪಾರ್ಶ್ವದಲ್ಲಿ ಕೆತ್ತಿರುವ ವೀರನ ಶಿಲ್ಪ. ಆಲೀಢ ಭಂಗಿಯಲ್ಲಿ ನಿಂತಿರುವ ವೀರ ತನ್ನ ಎಡಕೈನಲ್ಲಿ ಬಿಲ್ಲನ್ನೂ, ಬಲಕೈಯಲ್ಲಿ ಬಾಣವನ್ನೂ ಹಿಡಿದಿದ್ದಾನೆ. ಅವನ ಸೊಂಟದ ಭಾಗಕ್ಕೊಂದು ಮತ್ತು ತೊಡೆಯ ಭಾಗಕ್ಕೊಂದು ಬಾಣ ನಾಟಿವೆ. ಅವೆರಡೂ ವಿರುದ್ಧ ದಿಕ್ಕಿನಿಂದ, ಅಂದರೆ ಶತ್ರು ಪಕ್ಷದಿಂದ ಬಂದು ವೀರನನ್ನು ನಾಟಿವೆ. ವೀರಗಲ್ಲು ಶಿಲ್ಪವೂ ಸಹ ಈಗಾಗಲೇ ಊಹಿಸಿರುವ ಶಾಸನದ ಕಾಲಕ್ಕೆ ಸರಿ ಹೊಂದುತ್ತದೆ.

ಪ್ರಸ್ತಾಪಿಸಲಿರುವ ಮತ್ತೊಂದು ಶಾಸನವು ಧರ್ಮಪುರಿ ಜಿಲ್ಲೆಯ ಅದೇ ತಾಲ್ಲೂಕಿನ ಮೊದಕೇರಿ ಗ್ರಾಮದ ಒಂದು ಕಂಬದ ನಾಲ್ಕೂ ಪಾರ್ಶ್ವಗಳಲ್ಲಿ ಇರುವಂತಹುದು. ಶಾಸನದ ಪಾಠ ಕೆಳಕಂಡಂತಿದೆ.

**ಮೊದಲ ಭಾಗ:**

೧ [ರಾ] [ಜ].......
೨ ಸ್ಸ ಕೊಂಗುಣಿವರ್ಮ್ಮ ದ (ರ್ಮ್ಮ)
೩ ಮಹಾರಾಜಾಧಿರಾಜ ನ
೪ ನ್ದಿಗಿರಿನಾಥ ಕೊವಳಾಲ
೫ ಪುರವರೇಶ್ವರ ಶ್ರೀ ರಾಚಮ
೬ ಲ್ಲ ಪೆರ್ಮ್ಮಾಡಿಗಳ್ಗಂ ಮಹಾದೇ
೭ ...(ಪದಿದಳಖ)ಳ

**ಎರಡನೆಯ ಭಾಗ:**

೮ (ಹಾ) ದೇವಿಯುಗ್ಗೆ ಪುಟ್ಟಿದ
೯ ಸಮಧಿಗತ ಪಞ್ಚೂಮ
೧೦ ಹಾಶಬ್ದ ಪಲ್ಲವಾನ್ವಯ
೧೧ ಶ್ರೀ ಪೃಥುವೀ ಪಲ್ಲವ
೧೨ ಪಲ್ಲವ ಕುಲತಿಲಕ ನ
೧೩ ನ್ನಿಗಾಶ್ರಯ ಶ್ರೀ (ಮ)ದಯ್ಯ

**ಮೂರನೆಯ ಭಾಗ:**

೧೪ ...(ದು) ಗಮ್ಮಣ್ಣಂಪ
೧೫ ಡೆದು ಕೊಟ್ಟರು ನಾಲ್ಕು ಕ
೧೬ ಲ್ಲನ್ನಿಱಿಸ ಇದಕ್ಕೆ
೧೭ ಸಾಕ್ಷಿ ನಾಲ್ಕು ಸಮಯಿ
೧೮ ಗಳು ನಕರ ಮುನ್ನಾಳು॥
೧೯ ವಸುಭಿರ್ವ್ವಸ್ಸುಧಾಭ.
೨೦ ರಾಜ......

**ನಾಲ್ಕನೆಯ ಭಾಗ**

೨೧ [ಈ]ನುಕ್ಷರವ ನೊಟಿ
೨೨ ಮ್ಮಾಚಾರಿ ಬರೆದಂ

ಒಂದು ಮತ್ತು ಮೂರನೆಯ ಭಾಗಗಳಲ್ಲಿ ತಲಾ ಏಳು ಸಾಲು, ಎರಡನೆಯ ಭಾಗದಲ್ಲಿ ಆರು ಸಾಲು ಮತ್ತು ನಾಲ್ಕನೆಯ ಭಾಗದಲ್ಲಿ ಕೇವಲ ಎರಡು ಸಾಲು-ಒಟ್ಟು ೨೨ ಸಾಲುಗಳ ಈ ಶಾಸನದ ಒಂದು ಮತ್ತು ಮೂರನೆಯ ಭಾಗದ ಮೊದಲ ಮತ್ತು ಕೊನೆಯ ಸಾಲುಗಳ ಕೆಲವು ಅಕ್ಷರಗಳು ಕಲ್ಲು ಒಡೆದು ಹಾಳಾಗಿವೆ. ಉಳಿದಂತೆ ಶಾಸನವು ಸ್ಪಷ್ಟವಾಗಿಯೇ ಇದೆ.

ಗಂಗವಂಶದ ಮೊದಲ ದೊರೆ ಎಂದು ಪರಿಗಣಿತ ನಾಗಿರುವ ಕೊಂಗಣಿ ವರ್ಮನನ್ನು ಧರ್ಮ ಮಹಾರಾಜಾಧಿ ರಾಜನೆಂದು ಆರಂಭದಲ್ಲಿ ಪರಿಚಯಿಸಿ ನಂತರ ನನ್ದಿ ಗಿರಿನಾಥನೂ ಕೊವಳಾಲ ಪುರವರೇಶ್ವರನೂ ಆದ ರಾಚಮಲ್ಲ ಪೆರ್ಮಾಡಿ ಮತ್ತು ಆತನ ಹೆಂಡತಿಗೆ ಹುಟ್ಟಿದ (ಮಗಳ ಮಗು) ನನ್ನಿಗಾಶ್ರಯ ಶ್ರೀಮದಯ್ಯ [ಪ]ದೇವನು ಭೂಮಿಯನ್ನು ಪಡೆದು ಕಲ್ಲನ್ನಿಱಿಸಿ ಕೊಟ್ಟದ್ದನ್ನು ಉಲ್ಲೇಖಿಸುವ ಶಾಸನವು ದಾನಕ್ಕೆ ನಾಲ್ಕೂ ಸಮಯಿಗಳು ನಕರ ಮುನ್ನಾಳುಗಳು ಸಾಕ್ಷಿಯಾಗಿದ್ದರೆಂದು ಸೂಚಿಸುತ್ತದೆ. ಈ ಶಾಸನವನ್ನು ಬರೆದವನು ನೊಟಿಮ್ಮಾಚಾರಿ.

ಶಾಸನವು ಪ್ರಸ್ತಾಪಿಸಿರುವ ರಾಚಮಲ್ಲ ಪೆರ್ಮಾಡಿಯು ಎರಡನೆಯ ರಾಚಮಲ್ಲ ಎಂದೇ ಭಾವಿಸಬೇಕಾಗಿದೆ. ಶಾಸನದ ಏಳನೆಯ ಸಾಲು ಅಸ್ಪಷ್ಟವಾಗಿರುವುದರಿಂದ ರಾಚಮಲ್ಲನ ಮಗಳ ಮಗ ನನ್ನಿಗಾಶ್ರಯ ಅಯ್ಯಪದೇವ ಎಂದೇ

ಅನುಮಾನಿಸಬೇಕಾಗಿದೆ. ನನ್ನಿಗ, ನನ್ನಿಗಾಶ್ರಯ ಇತ್ಯಾದಿ ಬಿರುದು ಗಳಿದ್ದ ಅಯ್ಯಪದೇವನು ಮಹೇಂದ್ರನ ಮಗ. ಮಹೇಂದ್ರನು ಗಂಗಮನೆತನದ ಗಾಮಬ್ಬೆಯನ್ನು ವಿವಾಹ ವಾಗಿದ್ದ. ಈ ಗಾವುಬ್ಬೆಯು ಬಹುಶಃ ಎರಡನೆಯ ರಾಚಮಲ್ಲನ ಮಗಳಾಗಿರಬೇಕು. ರಾಚಮಲ್ಲನ ಮಗಳು ಗಾಮಬ್ಬೆಯ ಮಗನೇ ನನ್ನಿಗಾಶ್ರಯ ಅಯ್ಯಪದೇವ ಎಂದು ಭಾವಿಸಲು ಅನುಮಾನವಿಲ್ಲ. ಈ ಅಯ್ಯಪದೇವನು ನೊಳಂಬ ವಂಶಕ್ಕೆ ಸೇರಿದವನು. ಗಂಗ-ನೊಳಂಬರ ಸ್ನೇಹ ಬಹಳ ವರ್ಷಗಳ ಕಾಲ ಸುಸ್ಥಿರವಾಗಿತ್ತು. ನೊಳಂಬರ ವಂಶಾವಳಿ ಯಲ್ಲಿ ಅವರನ್ನು ಪಲ್ಲವ ಕುಲತಿಲಕರು ಎಂದು ಉಲ್ಲೇಖಿ ಸುವುದು ಸಾಮಾನ್ಯ. ಪ್ರಸ್ತುತ ಶಾಸನವು ನನ್ನಿಗಾಶ್ರಯ ಅಯ್ಯಪದೇವನ ಕಾಲಕ್ಕೆ ಸೇರಿರುವುದರಿಂದ ಇದನ್ನು ಕ್ರಿ.ಶ. ಹತ್ತನೆಯ ಶತಮಾನದ ಆರಂಭಕಾಲಕ್ಕೆ ಸೇರಿಸಬಹುದು ಅಯ್ಯಪನ ಆಳ್ವಿಕೆಯ ಕಾಲ ಕ್ರಿ.ಶ. ೮೬೭ ರಿಂದ ೯೩೪ ಎಂದು ನಿರ್ಧಾರಿತವಾಗಿದೆ.

ಪ್ರಸ್ತಾಪಿಸಲಿರುವ ಮೂರನೆಯ ಶಾಸನವು ಧರ್ಮಪುರಿ ಜಿಲ್ಲೆಯ ಹೊಸೂರು ತಾಲ್ಲೂಕಿನ ಮುತ್ತುಕಾನತಪಲ್ಲಿಗೆ ಸೇರಿದ್ದು ಶಾಸನದ ಪಡಿಯಚ್ಚು ಅರ್ಧವೃತ್ತಾಕಾರದಲ್ಲಿ ರುವುದರಿಂದ ಬಹುತೇಕ ಇದು ಬಂಡಿಯೊಂದರ ಚಕ್ರದ ಮೇಲೆ ಕೊರೆದಿರುವ ಶಾಸನವಾಗಿರಬೇಕು. ಈ ಶಾಸನದ ಕಾಲ ಕ್ರಿ.ಶ.೧೯೦೩ ಡಿಸೆಂಬರ್ ೪. ಶಾಸನವು ಕಾಲವನ್ನು ಶಕವರ್ಷದಲ್ಲೂ ಉಲ್ಲೇಖಿಸಿದೆ (ಶಾಲೀವಾಹನ ಶ. ೧೮೨೫ನೆ ಶೋಭಕೃತು ಸಂ॥ ಮಾರ್ಗಶಿರ ಶು॥ ೧೫). ಎರಡು ಗೆರೆಗಳ ನಡುವೆ ಎರಡು ಸಾಲಿನ ಈ ಶಾಸನವನ್ನು ಬರೆಯಲಾಗಿದೆ. ಶಾಸನದ ಪಾಠ ಹೀಗಿದೆ :

೧ ಸ್ರ್ ೧೯೦೩ನೆ ಯಿಸವಿ ಡಿಸೆಂಬರು ತಾರೀಕು ೪ನೆ ಬೃಗುವಾರದಲು

೨ ತ್ತು ಸಾಬರು ಮಾಡಿದ ಬಂಡಿಗಳು। ಶಾಲಿವಾಹನ ಶ। ೧೮೨೫ನೆ ಶೋಭಕೃತು ಸಂ॥ ಮಾರ್ಗಶಿರ ಶು॥ ೧೫ ರಲ್ಲು ಶಿಲಿಪಿ ರಾಮಾಚಾರಿಯ

ಶಾಸನದ ಪಾಠವು ಅಪೂರ್ಣವಾಗಿದೆ. ಬಹುತೇಕ ಬಂಡಿಯ ಚಕ್ರದ ಉಳಿದ ಭಾಗ ಹಾಳಾಗಿರಬೇಕು. ಬಂಡಿಯನ್ನುಯಾರೋ ಒಬ್ಬ ಮುಸಲ್ಮಾನ್ ವ್ಯಕ್ತಿ ಮಾಡಿದ್ದು. ಅದಕ್ಕೆ ಶಿಲ್ಪಿ ರಾಮಾಚಾರಿಯು ಏನೋ ನೆರವು ನೀಡಿರಬೇಕು.

೧೯೦೩ರಲ್ಲೂ ಹೊಸೂರು ತಾಲ್ಲೂಕಿನಲ್ಲಿ ಕನ್ನಡ ಭಾಷೆಯ ಬಳಕೆ ಚೆನ್ನಾಗಿಯೇ ಆಗುತ್ತಿದ್ದುದರ ಸುಳಿವು ಈ ಶಾಸನದಿಂದ ದೊರೆಯುತ್ತದೆ.

## ನೆರವಿಗೆ ಪಡೆದ ಗ್ರಂಥಗಳು


೧. **A History of Karnataka** Ed. Dr. P.B.Desai, Dr. S.H.Ritti, Dr. B.R.Gopal Dharwad, 1981

೨. **ಕರ್ನಾಟಕದ ಅರಸುಮನೆತನಗಳು:** ನೆಲಮಂಗಲ ಲಕ್ಷ್ಮೀನಾರಾಯಣರಾವ್, ಆರ್.ಎಸ್, ಪಂಚಮುಖಿ. ಧಾರವಾಡ, 1946



**ಕೃತಜ್ಞತೆಗಳು:** ಶಾಸನದ ಪಡಿಯಚ್ಚುಗಳನ್ನು ನೀಡಿ ಸಂಪಾದನೆಗೆ ಆದೇಶ ನೀಡಿದ ಗುರುಗಳಾದ ಡಾ॥ಬಾ.ರಾ. ಗೋಪಾಲ್ ಅವರಿಗೆ.

ಂ.ಜಿ. ಮಂಜುನಾಥ*

# ಹೂಜಿಗಲ್ಲಿನ ನಿಷಧಿ ಶಾಸನಗಳು

ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಮಾಗಡಿ ತಾಲ್ಲೂಕಿನ ಕಲ್ಯ ಗ್ರಾಮವು ಮಾಗಡಿಯಿಂದ ೪ ಕಿ.ಮೀ. ದೂರದಲ್ಲಿದೆ. ಇಂದಿನ ಕಲ್ಯಗ್ರಾಮವು ಹಿಂದೊಂದು ಕಾಲದಲ್ಲಿ ಕಲ್ಲೆಹ ಅಥವಾ ಕಲಾವತಿ ಎಂದು ಪ್ರಸಿದ್ಧವಾಗಿದ್ದ ಪಟ್ಟಣವಾಗಿತ್ತು. ಕಲ್ಯವು ಪ್ರಾಚೀನ ಕರ್ನಾಟಕದ ಒಂದು ಪ್ರಮುಖ ಜೈನಕೇಂದ್ರವಾಗಿತ್ತೆಂಬುದು ಎಲ್ಲರಿಗೂ ತಿಳಿದ ವಿಷಯವಾಗಿದೆ. ಕಲ್ಯದಿಂದ ಸುಮಾರು ಮೂರು ಕಿ.ಮೀ.ದೂರದಲ್ಲಿರುವ ಹೂಜಿಗಲ್ಲು ಎಂಬ ಹಳ್ಳಿಯಲ್ಲಿನ ಅಪ್ರಕಟಿತ ಶಾಸನಗಳ ಬಗ್ಗೆ ಈ ಸಂಪ್ರಬಂಧವನ್ನು ರಚಿಸಲಾಗಿದೆ.

ಹೂಜಿಗಲ್ಲಿನ ಎರಡು ನಿಷಧಿಶಾಸನಗಳು ಈ ಹಿಂದೆ ಪ್ರಕಟವಾಗಿದ್ದವು.[1] ಅಲ್ಲಿ ಇನ್ನೂ ಹಲವಾರು ನಿಷಧಿಶಾಸನಗಳಿದ್ದು ಅವು ಸವೆದಿರುವುದರಿಂದ ಅವುಗಳನ್ನು ಓದಲಾಗುವುದಿಲ್ಲವೆಂದು ವಿದ್ವಾಂಸರು ಅಭಿಪ್ರಾಯ ಪಟ್ಟಿದ್ದರು.[2] ಇಲ್ಲಿ ನಿಷಧಿಶಾಸನಗಳಿರುವುದನ್ನು ಡಾ. ಎಂ. ಚಿದಾನಂದಮೂರ್ತಿಯವರು ಸಹಾ ಗುರುತಿಸಿದ್ದರು.[3] ನಾನು ಈ ಪ್ರದೇಶದಲ್ಲಿ ಕ್ಷೇತ್ರಕಾರ್ಯ ನಡೆಸಿ ಸೂಕ್ಷ್ಮವಾಗಿ ಪರಿಶೀಲಿಸಿದಾಗ ಈ ಶಾಸನಗಳನ್ನು ಓದಬಹುದೆಂದು ತಿಳಿಯಿತು. ತತ್ಫಲವಾಗಿ ಇಲ್ಲಿಯ ಅಪ್ರಕಟಿತ ನಿಷಧಿಶಾಸನಗಳು ಹಾಗೂ ೮ ಶಾಸನರಹಿತ ನಿಷಧಿ ಶಿಲ್ಪಗಳ ಬಗ್ಗೆ ಪ್ರಸ್ತುತ ಸಂಪ್ರಬಂಧ ರೂಪುಗೊಂಡಿತು.

ಈ ಶಾಸನಗಳು ಹೂಜಿಗಲ್ಲಿನ ಹೊರವಲಯದಲ್ಲಿರುವ ಮುತ್ತರಾಯನಗುಡ್ಡ ಹಾಗೂ ಕಂಭದ ಅರೆಗಲ್ಲು ಎಂಬ ಗುಡ್ಡದಲ್ಲಿನ ಬೃಹದಾಕಾರದ ಹುಟ್ಟು ಬಂಡೆಗಳ ಮೇಲಿವೆ.

**ಶಾಸನಗಳ ಶಿಲ್ಪ:** ಇಲ್ಲಿಯ ಎಲ್ಲ ಶಾಸನಗಳ ಮೇಲ್ಭಾಗದಲ್ಲಿಯೂ ಸುಮಾರು ಎಂಟು ಅಂಗುಲಗಳಷ್ಟು ಎತ್ತರವಾದ ಸ್ಥಾನಿಕ ಭಂಗಿಯಲ್ಲಿರುವ (ಖಡ್ಗಾಸನ) ಮುಕ್ಕೊಡೆ ಸಹಿತವಾದ ತೀರ್ಥಂಕರನ ಪಾದಗಳ ಬಳಿಯಲ್ಲಿ ಪರ್ಯಂಕಾಸನದಲ್ಲಿ (ಪಲ್ಯಂಕಾಸನ) ಕೈಗಳನ್ನು ಮುಗಿದು ಕುಳಿತಿರುವ ವ್ರತಧಾರಿಯ ಎದುರಿನಲ್ಲಿ ಎಡಗೈಯ್ಯಲ್ಲಿ ತಾಳೆಯೋಲೆಯ ಗ್ರಂಥವನ್ನು ಹಿಡಿದು ವ್ಯಾಖ್ಯಾನ ಮುದ್ರೆಯಲ್ಲಿ ಕುಳಿತು ಸಲ್ಲೇಖನ ವ್ರತ ಬೋಧಿಸುತ್ತಿರುವ ಜಿನಮುನಿಗಳ ರೇಖಾಚಿತ್ರಗಳಿವೆ. ಈ ಚಿತ್ರಗಳ ಕೆಳಗೆ ಶಾಸನ ಪಾಠಗಳಿವೆ.

**ಇತರ ಅಂಶಗಳು:** ಇಲ್ಲಿಯ ಯಾವುದೇ ಶಾಸನದಲ್ಲಿಯೂ ಸಮಗ್ರವಾಗಿ ಕಾಲದ ಉಲ್ಲೇಖ ವಿಲ್ಲದಿರುವುದರಿಂದ ಲಿಪಿಸ್ವರೂಪದ ಆಧಾರದಿಂದ ಇವುಗಳ ಕಾಲನಿರ್ಣಯ ಮಾಡಬೇಕಾಗಿದೆ. ಈ ಶಾಸನಗಳ ಭಾಷೆ ತೀರಾ ಸರಳವಾಗಿದ್ದು, ಯಾವುದೇ ರೀತಿಯ ಪಾರಿಭಾಷಿಕ ಶಬ್ದಗಳನ್ನು ಬಳಸದೆ ತೀರಾ ಸರಳವಾಗಿ ಅದು ಯಾವವ್ಯಕ್ತಿಯ ನಿಷಧಿ ಎಂಬಷ್ಟನ್ನು ಮಾತ್ರ ಈ ಶಾಸನಗಳು ತಿಳಿಸುತ್ತವೆ.

* ಸಂ. ೭೧೫ ೪ನೇ ಮುಖ್ಯ ರಸ್ತೆ, ಕೆಂಗೇರಿ ಉಪನಗರ, ಬೆಂಗಳೂರು ೫೬೦೦೬೦

1. ಎ. ಕ. ಸಂ. ೯, ಬೆಂಗಳೂರು ಜಿಲ್ಲೆ ಮಾಗಡಿ ೪೦, ೪೧, ಪುಟ. ೧೧೫
2. ಡಾ|| ಎಚ್. ಎಸ್. ಗೋಪಾಲರಾವ್., ಬೃಹತ್ ಶಿಲಾಯುಗದಿಂದ ೧೬ ನೇ ಶತಮಾನದವರೆಗೆ ಹೂಜಿಗಲ್ಲು, ಇತಿಹಾಸ ದರ್ಶನ, ಸಂ. ೯ ಪುಟ ೩.
3. ಡಾ|| ಚಿದಾನಂದಮೂರ್ತಿ, ಹೊಸತು ದೊಸತು, ಪುಟ ೨೬೨

ಈಗ ಶಾಸನ ಪಾಠಗಳನ್ನು ಗಮನಿಸೋಣ:

(೧) ೧ ಅನಂತನಾಥ

೨ ದೇವರ ಸಿಶ್ಯರು ಪದುಮ

೩ ನಂದಿದೇವರ ನಿಸಿದ್ಧಿ ಶ್ರೀ ಶ್ರೀ.

ಇದು ಅನಂತನಾಥ ದೇವ ಎಂಬ ಜಿನಮುನಿಗಳ ಶಿಷ್ಯರಾದ ಪದ್ಮನಂದಿದೇವರ ನಿಷಧಿ ಶಾಸನವಾಗಿದೆ. ಈ ಶಾಸನದ ಲಿಪಿಸ್ವರೂಪದಿಂದ ಇದು ಸು.೧೫ನೆಯ ಶತಮಾನದ್ದೆಂದು ನಿರ್ಧರಿಸಬಹುದು. ಈಶಾಸನೋಲ್ಲೇಖಿತ ರಾದ ಅನಂತನಾಥದೇವರು, ಹಾಗೂ ಪದ್ಮನಂದಿದೇವರ ಬಗ್ಗೆ ಸಮಕಾಲೀನ ಶಾಸನಗಳಲ್ಲಿ ಮತ್ತಾವುದೇ ಮಾಹಿತಿ ಉಪಲಬ್ಧವಾಗಿಲ್ಲ.

(೨) ೧ ಜಯನನ್ದಿಸೇನ ದೇವರ ಗುಡ್ಡ

೨ ನನ್ದಿಸೇನ ದೇವರ

೩ ನಿಸಿದ್ಧಿ

ಇದು ಜಯನಂದಿಸೇನದೇವ ಎಂಬುವರ ಶ್ರಾವಕ ಶಿಷ್ಯನಾದ ನಂದಿಸೇನದೇವರ ನಿಷಧಿಶಾಸನ. ಲಿಪಿ ಸ್ವರೂಪದ ಆಧಾರದಿಂದ ಇದು ೧೫ನೆಯ ಶತಮಾನದ್ದೆಂದು ನಿರ್ಧರಿಸಲಾಗಿದೆ.

(೩) ೧ ಯುವನಾಮ ಸಂವತ್ಸರದ. . . . . .

೨ . . . . . . ಗುಣಸೇನದೇವರ ಗುಡ್ಡನ ನಿಸಿದ್ಧಿ.

ಇದು ಗುಣಸೇನದೇವ ಎಂಬ ಜಿನಮುನಿಯೊಬ್ಬರ ಶ್ರಾವಕ ಶಿಷ್ಯನೊಬ್ಬನ ನಿಷಧಿ. ಶಾಸನದಲ್ಲಿ ಆ ಶ್ರಾವಕನ ಹೆಸರಿನಭಾಗ ತ್ರುಟಿತವಾಗಿದೆ. ಕಾಲದ ಉಲ್ಲೇಖವಿದ್ದರೂ ಅದು ಸಮಗ್ರವಾಗಿ ಉಪಲಬ್ಧವಾಗಿಲ್ಲ. ಯುವನಾಮ ಸಂವತ್ಸರದ ಉಲ್ಲೇಖ ಮಾತ್ರ ದೊರೆತಿದೆ. ಉಳಿದ ವಿವರಗಳು ದೊರೆತಿಲ್ಲದಿದ್ದರೂ ಲಿಪಿಯ ಆಧಾರದಿಂದ ಇದು ೧೪ನೆಯ ಶತಮಾನದ ಕೊನೆಯ ಕಾಲದ್ದೆಂದು ನಿರ್ಣಯಿಸಲಾಗಿದೆ.

(೪) ೧ ನಿಸಿದ್ಧಿ.

ಇದು ಕೇವಲ ಮೂರು ಅಕ್ಷರಗಳುಳ್ಳ ಒಂದೇ ಸಾಲಿನ ನಿಷಧಿ. ಇದರಲ್ಲಿ ಕೇವಲ ನಿಸಿದ್ಧಿ ಎಂಬ ಉಲ್ಲೇಖಮಾತ್ರ ಇದೆ. ಆದರೆ ಯಾವ ವ್ಯಕ್ತಿಯ ನಿಷಧಿ ಎಂಬ ಉಲ್ಲೇಖವಿಲ್ಲ. ಶಾಸನಶಿಲ್ಪದ ಆಧಾರದಿಂದ ಇದು ಶ್ರಾವಕನೊಬ್ಬನ ನಿಷಧಿ ಎಂದು ಗುರ್ತಿಸಲಾಗಿದೆ. ಇದೂಸಹ ೧೪ನೆಯ ಶತಮಾನದ ಶಾಸನ.

(೫) ೧ . . . . . . . .

೨ . . . . . . . . .ನಿಸಿದ್ಧಿ

ಈ ಶಾಸನದಲ್ಲಿ ೨ ಸಾಲುಗಳಿದ್ದರೂ ಸಹ ಮೊದಲ ಸಾಲು ಹಾಗೂ ೨ ನೇ ಸಾಲಿನ ಬಹುಭಾಗದ ಬರಹ ಸವೆದುಹೋಗಿದೆ. ಅಲ್ಲಿ ಅಕ್ಷರಗಳಿರುವುದು ಗೊತ್ತಾದರೂ ಸಹ ಅವು ಯಾವ ಅಕ್ಷರಗಳೆಂದು ತಿಳಿಯುವುದಿಲ್ಲ. ಎರಡನೆಯ ಸಾಲಿನ ಅಂತ್ಯದಲ್ಲಿರುವ ನಿಸಿದ್ಧಿ ಎಂಬ ಮೂರು ಅಕ್ಷರವಮಾತ್ರ ಓದಲಾಗುವಂತಿದೆ. ಶಾಸನ ಶಿಲ್ಪದ ಸಹಾಯದಿಂದ ಶ್ರಾವಕನೊಬ್ಬನ ನಿಷಧಿ ಇದೆಂದು ಗುರ್ತಿಸಲಾಗಿದೆ. ಹಾಗೂ ಇದು ೧೪ನೆಯ ಶತಮಾನದ್ದೆಂದು ನಿರ್ಧರಿಸಲಾಗಿದೆ.

(೬) ೧ . . . . . . . .

೨ . . . . . . . .

೩ . . . . . . ನಿಸಿದ್ಧಿ.

ಈ ಶಾಸನದಲ್ಲಿ ಮೂರು ಸಾಲುಗಳಿದ್ದರೂ ಸಹ ಮೊದಲ ಎರಡು ಸಾಲು ಹಾಗೂ ಮೂರನೆಯ ಸಾಲಿನ ಬಹುಭಾಗ ನಾಶವಾಗಿದೆ. ಇದು ಯಾರ ನಿಷಧಿ ಎಂದೂ ಸಹ ಹೇಳಲಸಾಧ್ಯವಾಗಿದ್ದರೂ ಚಿತ್ರದ ಸಹಾಯದಿಂದ ಶ್ರಾವಕನೊಬ್ಬನ ನಿಷಧಿ ಎಂದು ಗುರುತಿಸಬಹುದಾಗಿದೆ. ಇದೂ ಸಹ ೧೪ನೆಯ ಶತಮಾನದ ನಿಷಧಿ.

(೭) ೧ ಆನಂದ ಸಂವತ್ಸರದ . . . . . .

೨ . . . . . . . . . . . . . .ಶಿಷ್ಯ

೩ . . . . . . ನಿಸಿದ್ಧಿ

ಮೂರು ಸಾಲುಗಳ ಈ ಶಾಸನದಲ್ಲಿಯೂ ಸಹ ಸಮಾಧಿಮರಣಹೊಂದಿದ ವ್ಯಕ್ತಿಯ ಹೆಸರಾಗಲೀ ಅಥವಾ ವ್ರತಬೋಧಿಸಿದ ಮುನಿಗಳ ಹೆಸರಾಗಲೀ ಉಪಲಬ್ಧವಾಗಿಲ್ಲ. ಆನಂದಸಂವತ್ಸರ, ಶಿಷ್ಯ, ನಿಸಿದ್ಧಿ, ಎಂಬುದಾಗಿ ಮಾತ್ರ ದೊರೆತಿದ್ದು ಉಳಿದ ಭಾಗ ಉಪಲಬ್ಧವಾಗಿಲ್ಲ. ಲಿಪಿಯ ಆಧಾರದಿಂದ ಇದು ೧೬ನೆಯ ಶತಮಾನದ್ದೆಂದು ನಿರ್ಧರಿಸಲಾಗಿದೆ.

(೮) ೧ . . . . . . . . . .

೨ ದ. . . ವಿ. .ಸ. . .

೩ ಕ. . . . ಹಿ. . . .

೪ ................ನಿಸಿದ್ಧಿ.

ಇದು ಶ್ರಾವಕಿಯೊಬ್ಬಳ ನಿಷಧಿ. ಶಾಸನ ಪಠ್ಯದಲ್ಲಿ ಯ ಹೆಸರು ದೊರೆತಿಲ್ಲವಾದರೂ ಶಿಲ್ಪದ ಸಹಾಯದಿಂದ ಮು ಶ್ರಾವಕಿಯೊಬ್ಬಳ ನಿಷಧಿಯೆಂದು ಗುರುತಿಸಬಹುದು. ದು ೧೩ನೆಯ ಶತಮಾನದ ಶಾಸನ ವೆಂದು ಪಿಸ್ವರೂಪದಿಂದ ನಿರ್ಣಯಿಸಲಾಗಿದೆ. ನಾಲ್ಕುಸಾಲುಗಳ ಶಾಸನದಲ್ಲಿ ಕೇವಲ ಅಲ್ಲೊಂದು ಇಲ್ಲೊಂದು ಅಕ್ಷರಗಳು ಮಾತ್ರ ಗುರುತಿಸಲು ಸಾಧ್ಯವಾಗುವಂತಿವೆ. ಉಳಿದ ಕ್ಷರಗಳೆಲ್ಲಾ ಸವೆದಿದ್ದು ತೀರಾ ಅಸ್ಪಷ್ಟವಾಗಿವೆ.

ಂಭದ ಅರೆಗಲ್ಲು ಗುಡ್ಡದ ಬಂಡೆಯ ಮೇಲೆ

೯) ೧ ಶ್ರೀ ಚಂದಪ್ಪ ಸಿದ್ಧಪ್ಪನ ಮಗ

೨ ............ಜಿನದೇವರಗುಡ್ಡ [ನ ನಿಸಿದ್ಧಿ]

ಇದು ಸಿದ್ಧಪ್ಪನ ಮಗ ಹಾಗೂ ಜಿನದೇವರ ಶ್ರಾವಕ ಷ್ಯನಾದ ಚಂದಪ್ಪನ ನಿಷಧಿಶಾಸನ. ಇದು ಸುಮಾರು ೧೫ನೆಯ ಶತಮಾನದ್ದೆಂದು ಲಿಪಿಸ್ವರೂಪದ ಆಧಾರದಿಂದ ಗುರ್ತಿಸಲಾಗಿದೆ.

(೧೦) ೧ ನಿಸಿ

೨ ದ್ಧಿ

ಈ ಶಾಸನದಲ್ಲಿ ಕೇವಲ ನಿಸಿದ್ಧಿ ಎಂಬ ಬರಹವನ್ನು ಮಾತ್ರ ಬರೆಯಲಾಗಿದೆ. ಆದರೆ ಸಮಾಧಿಮರಣಹೊಂದಿದ ವ್ಯಕ್ತಿಯ ಹೆಸರಾಗಲಿ ಅಥವಾ ವ್ರತ ಬೋಧಿಸಿದ ವ್ಯಕ್ತಿ ಹೆಸರಾಗಲೀ ಬರೆದಿಲ್ಲದಿದ್ದರೂ ವ್ರತಧಾರಿಯ ಮತ್ತು ದೀಕ್ಷಾಗುರುವಿನ ಹಾಗೂ ತೀರ್ಥಂಕರರ ಚಿತ್ರವನ್ನು ಮಾತ್ರ ಕಂಡರಿಸಲಾಗಿದೆ. ಇದು ೧೫ನೆಯ ಶತಮಾನಕ್ಕೆ ಸೇರಿದ ಶಾಸನವಾಗಿದೆ.

(೧೧) ೧ ಮಾಯಪ್ಪನ

೨ ನಿಸಿದ್ಧಿ.

ಎರಡು ಸಾಲುಗಳ ಈ ಶಾಸನವು ಮಾಯಪ್ಪ ಎಂಬ ಶ್ರಾವಕನೊಬ್ಬನ ನಿಷಧಿಯಾಗಿದೆ. ಪ್ರಸ್ತುತ ಶಾಸನದಲ್ಲಿ ಉಲ್ಲೇಖಿತನಾದ ಮಾಯಪ್ಪನಿಗೇ ಸಂಬಂಧಿಸಿದ ಮತ್ತೊಂದು ನಿಷಧಿಶಾಸನವು ಈ ಶಾಸನದ ಸನಿಹದಲ್ಲಿಯೇ ಇದೆ. ಅದು ಎಪಿಗ್ರಾಫಿಯಾ ಕರ್ನಾಟಿಕಾದಲ್ಲಿ ಈಗಾಗಲೇ ಪ್ರಕಟವಾಗಿದೆ.

೧ [ನಂ]ದನ ಸಂವತ್ಸರದ...

೨ ಬ.ಲು ಚಂದ್ರಸೇನ [ಸೂ]ರಿ

೩ ಗಳ ಗುಡ್ಡಮಾಯ[ಪ್ಪ]ನ

೪ ನಿಸಿದ್ಧಿ.[4]

ಈ ಶಾಸನದಲ್ಲಿ ಚಂದ್ರಸೇನ ಸೂರಿಗಳ ಗುಡ್ಡನಾದ ಮಾಯಪ್ಪನು ಸಲ್ಲೇಖನ ವ್ರತದಿಂದ ಸಮಾಧಿಮರಣ ಹೊಂದಿದ ಉಲ್ಲೇಖವಿದೆ. ಒಬ್ಬನೇ ವ್ಯಕ್ತಿಯನ್ನು ಕುರಿತಂತೆ ಎರಡೆರಡು ನಿಷಧಿಶಾಸನಗಳನ್ನು ಬರೆದಿರುವ ಅನೇಕ ಉದಾಹರಣೆಗಳಿವೆ. ಅದೇ ರೀತಿ ಇಲ್ಲಿಯೂ ಮಾಯಪ್ಪನ ಬಗ್ಗೆ ಎರಡು ನಿಷಧಿ ಶಾಸನವನ್ನು ಹಾಕಿಸಿರುವುದನ್ನು ಗಮನಿಸಬಹುದು.

ಪ್ರಸ್ತುತ ಶಾಸನದಲ್ಲಿ ಉಲ್ಲೇಖಿತರಾದ ಚಂದ್ರಸೇನ ಸೂರಿಗಳ ಉಲ್ಲೇಖವಿರುವ ಮತ್ತೊಂದು ಶಾಸನವು ಹೂಜಿಗಲ್ಲಿನ ಇದೇ ಗುಡ್ಡದಲ್ಲಿಯೇ ಇದೆ. ಇದು ಎ.ಕ.ದಲ್ಲಿ ಪ್ರಕಟವಾಗಿದೆ.[5]

೧ ತಾರಣ ಸಂವತ್ಸರ

೨ ಮಾರ್ಗಶಿರ ಶು.ಲು

೩ ಚಂದ್ರಸೇನ ಸೂರಿಗಳ ಗು

೪ ಡ್ಡ . . . . . ನಿಸಿದ್ಧಿ.

ಈ ಶಾಸನದಲ್ಲಿ ಸಲ್ಲೇಖನ ವ್ರತದಿಂದ ಸಮಾಧಿ ಮರಣಹೊಂದಿದ ವ್ಯಕ್ತಿಯ ಹೆಸರಿನ ಭಾಗ ನಷ್ಟವಾಗಿದ್ದರೂ ವ್ರತಬೋಧಿಸಿದ ಮುನಿಗಳಾದ ಚಂದ್ರಸೇನಸೂರಿಗಳ ಹೆಸರು ದೊರೆತಿದೆ. ಮೇಲಿನ ಈ ಮೂರೂಶಾಸನಗಳು ೧೫ನೆಯ ಶತಮಾನಕ್ಕೆ ಸೇರಿವೆ.

ಹೂಜಿಗಲ್ಲಿನ ಈ ನಿಷಧಿಶಾಸನಗಳಲ್ಲಿ ಅನಂತನಾಥದೇವರು, ಪದ್ಮನಂದಿ ದೇವರು, ಜಯನಂದಿಸೇನ ದೇವರು, ನಂದಿಸೇನದೇವರು, ಗುಣಸೇನದೇವರು, ಜಿನದೇವರು, ಚಂದ್ರಸೇನಸೂರಿಗಳು, ಮುಂತಾದ ಜಿನಮುನಿಗಳ ಉಲ್ಲೇಖವಿದೆ. ಈ ಜೈನಮುನಿಗಳ ಸಂಘಗಣ ಗಚ್ಛ, ಅನ್ವಯ, ಬಳಿ,ಮುಂತಾದವುಗಳ ಬಗ್ಗೆ ಈ ಶಾಸನಗಳು ಯಾವುದೇ ವಿವರಗಳನ್ನು ನೀಡುವುದಿಲ್ಲ. ಅಲ್ಲದೆ ಈ

4.ಎ.ಕ.೯, ಮಾಗಡಿ ೪೦, ಪುಟ.೧೧೫

5. ಎ.ಕ. ೯, ಮಾಗಡಿ ೪೧, ಪುಟ ೧೧೫

ಶಾಸನಗಳಲ್ಲಿ ಉಲ್ಲೇಖಿತರಾದ ಯಾವ ವ್ಯಕ್ತಿಗಳಿಗೂ ಸಂಬಂಧಿಸಿದ ಮತ್ತಾವುದೇ ವಿವರಗಳು ಸಮಕಾಲೀನ ಶಾಸನಗಳಲ್ಲಿ ದೊರೆಯುವುದಿಲ್ಲ.

ಹೂಜಿಗಲ್ಲಿನಲ್ಲಿ ಈ ಹಿಂದೆ ದೊರೆತಿದ್ದ ಎರಡು ನಿಷಧಿಶಾಸನಗಳು ಮತ್ತು ಈಗ ಪ್ರಕಟವಾಗುತ್ತಿರುವ ೧೧ ನಿಷಧಿಶಾಸನಗಳು, ಹಾಗೂ ೮ ಶಾಸನ ರಹಿತ ನಿಷಧಿಗಳು ಸೇರಿದಂತೆ ಒಟ್ಟು ೨೧ ನಿಷಧಿಗಳು ದೊರೆತಿರುವುದು ಅತ್ಯಂತ ಗಮನಾರ್ಹ ಅಂಶವಾಗಿದೆ. ಶ್ರವಣಬೆಳ್ಗೊಳ, ಕೊಪ್ಪಳ, ಮುಂತಾದ ಅತ್ಯಂತ ಪ್ರಾಚೀನ ಹಾಗೂ ಅತ್ಯಂತ ಪ್ರಮುಖ ಜೈನ ಕೇಂದ್ರಗಳಲ್ಲಿ ಮಾತ್ರ ಈ ರೀತಿ ಒಂದೇ ಕಡೆ ಇಪ್ಪತ್ತಕ್ಕಿಂತಲೂ ಹೆಚ್ಚು ನಿಷಧಿಶಾಸನಗಳು ದೊರೆತಿರುವುದನ್ನು ಗಮನಿಸಿದರೆ ಹೂಜಿಗಲ್ಲಿನ ಮಹತ್ವ ನಮಗೆ ಅರಿವಾಗುತ್ತದೆ. ಆದರೆ ಇಲ್ಲಿ ಬಸದಿಗಳಾಗಲಿ ಅಥವಾ ಬಸದಿಗಳ ಅವಶೇಷಗಳಾಗಲೀ ದೊರೆತಿಲ್ಲದಿರುವುದು ತೀರಾ ಆಶ್ಚರ್ಯಕರವಾಗಿದೆ.

ಪ್ರಾಯ: ಪ್ರಾಚೀನ ಕಲ್ನೆಹ ಪಟ್ಟಣವು ಇಂದಿನ ಹೂಜಿಗಲ್ಲು ಗ್ರಾಮದವರೆಗೂ ವ್ಯಾಪಿಸಿಕೊಂಡಿದ್ದಿರಬೇಕು. ಹೂಜಿಗಲ್ಲಿನಲ್ಲಿ ಈಗ ನಿಷಧಿಗಳು ದೊರೆತ ಸ್ಥಳವಾದ ಕಂಭದಕಲ್ಲುಗುಡ್ಡೆಯಲ್ಲಿ ಬಹುಶ:ಒಂದು ಬಸದಿಯಿದ್ದಿರಲೇಬೇಕು. ಆ ಬಸದಿಯ ಬ್ರಹ್ಮಸ್ತಂಭ ಅಥವಾ ಮಾನಸ್ತಂಭವು ಇಂದಿನ 'ಕಂಭದ ಕಲ್ಲು ಗುಡ್ಡ' ಎಂಬ ಹೆಸರಿಗೆ ಕಾರಣವಾಗಿದ್ದಿರಬಹುದೆಂದು ಕಾಣುತ್ತದೆ. ಬಹುಶ: ಜೈನರ ಹಾಗೂ ವೈಷ್ಣವರ ನಡುವಿನ ಧಾರ್ಮಿಕ ಕಲಹದ ಕಾರಣದಿಂದ ಇಲ್ಲಿಯ ಬಸದಿಗಳು ನಾಶ ಹೊಂದಿರಬಹುದು. ಆ ಗಲಭೆಗಳಿಂದ ನೊಂದು ಬೆಂದ ಜೈನರು ಕಲ್ಯವನ್ನು ತೊರೆದು ಸುತ್ತಮುತ್ತಲ ಹಳ್ಳಿಗಳಿಗೆ ಹೋಗಿ ನೆಲಸಿರಬಹುದು. ಇಂದಿಗೂ ಕಲ್ಯದ ಸುತ್ತಮುತ್ತಲ ಗ್ರಾಮಗಳಲ್ಲಿ (೮-೧೦ ಕಿ.ಮೀ. ದೂರದಲ್ಲಿ) ಜೈನರು ನೆಲೆಸಿದ್ದಾರೆ.[6]

ಹೂಜಿಗಲ್ಲಿನ ನಿಷಧಿಶಾಸನಗಳ ಶೋಧದಿಂದ ಪ್ರೇರಿತನಾಗಿ ಕಲ್ಯದಗುಡ್ಡಗಳಲ್ಲಿಯೂ ಹೊಸ ಶಾಸನಗಳು ದೊರೆಯ ಬಹುದೆಂದು ಸೂಕ್ಷ್ಮವಾಗಿ ಪರಿವೀಕ್ಷಣೆ ನಡೆಸಿದಾಗ ಕಲ್ಯದ ಹೊರವಲಯದಲ್ಲಿರುವ ಗುಡ್ಡದಲ್ಲಿನ ಅಡಿಗಲ್ ಗುಂಡಿನ ಬಳಿಯಿರುವ ಒಂದು ದೊಡ್ಡ ಬಂಡೆಯ ಮೇ ಒಂದು ಶಾಸನ ಪತ್ತೆಯಾಯಿತು.

ಈ ಶಾಸನದ ಮೇಲ್ಭಾಗದಲ್ಲಿ ಮುಕ್ಕೊಡೆ ಸಹಿತವಾ ತೀರ್ಥಂಕರನ ಉಬ್ಬುಶಿಲ್ಪದ ಮುಂದೆ ಸಲ್ಲೇಖನ ಪ್ರ ಬೋಧಿಸುತ್ತಿರುವ ಗುರುವಿನ ಎದುರಿನಲ್ಲಿ ಕೈಗಳನ್ನು ಮುಗಿದ ಪದ್ಮಾಸನದಲ್ಲಿ ಕುಳಿತಿರುವ ವ್ರತಧಾರಿಯ ಶಿಲ್ಪವಿದ ಮಧ್ಯದಲ್ಲಿ ವ್ಯಾಸಪೀಠವಿದೆ.

**ಶಾಸನ ಪಾಠ**

೧ ಪರೀಧಾವಿ ಸಂವತ್ಸರದ ಚೈ ಸು . . . .

೨ . . . . . . ತ . . ಬ ಹೆಗ್ಗಡೆ

3 . . . . . . . . ನಿಸ[ದಿ]

ತೀರಾ ತ್ರುಟಿತವಾಗಿರುವ ಈ ಶಾಸನವು ಹೆಗ್ಗ ಯೊಬ್ಬನ ನಿಷದಿಯಾಗಿದೆ. ಆ ಹೆಗ್ಗಡೆಯ ಹೆಸರಿನ ಉಳಿ ಭಾಗವು ತ್ರುಟಿತವಾಗಿದೆ. ಶಾಸನದಲ್ಲಿ ಕಾಲದ ಉಲ್ಲೇಖವಿದ್ದರೂ ಅದು ಅಸಮಗ್ರವಾಗಿ ದೊರೆತಿದ್ದು ಪರಿಧಾವಿಸಂವತ್ಸರದ ಚೈತ್ರ ಶುದ್ಧ ಎಂಬ ಉಲ್ಲೇಖ ಮಾತ್ರವಿದೆ. ಲಿಪಿಯ ಆಧಾರದಿಂದ ಇದು ಸು.೧೨ನೆಯ ಶತಮಾನದ ಶಾಸನವೆಂದು ಹೇಳಬಹುದು. ಈ ಶಾಸನದಲ್ಲಿ ಉಲ್ಲೇಖವಾಗಿರುವ ಹೆಗ್ಗಡೆಯು ಆ ಪ್ರದೇಶದಲ್ಲಿ ಅಧಿಕಾರಿಯಾಗಿದ್ದಿರಬಹುದು.

ಮೇಲಿನ ಶಾಸನವೇ ಅಲ್ಲದೆ ಕಲ್ಯದಲ್ಲಿ ಮತ್ತೊಂದು ನಿಷದಿ ಶಾಸನವಿದೆ. ಅದು 'ದೇವಿಸೆಟ್ಟಿ' ಎಂಬಪಾಠವನ್ನು ಮಾತ್ರ ಹೊಂದಿದ್ದು ಮುಕ್ಕೊಡೆಯ ಶಿಲ್ಪದ ಕೆಳಗ ಬರೆಯಲ್ಪಟ್ಟಿದೆ.[7] ಇದೇ ಪಾಠವುಳ್ಳ ಮತ್ತೊಂದು ಶಾಸನವ ಅದೇ ಗುಡ್ಡದ ಮತ್ತೊಂದು ಬಂಡೆಯ ಮೇಲೂ ಬರೆಯಲ್ಪಟ್ಟಿದೆ. ಕಲ್ಯಗ್ರಾಮದ ಸರ್ಕಾರಿ ಪ್ರಾಥಮಿಕ ಶಾಲೆಯ ಆವರಣದಲ್ಲಿ ಒಂದು ನಿಷಧಿ ಶಿಲ್ಪವಿದೆ. ಶ್ರಾವಕನೊಬ್ಬನು ತೀರ್ಥಂಕರನ ಪಾದಗಳ ಬಳಿಯಲ್ಲಿ ಪದ್ಮಾಸನದಲ್ಲಿ ಧ್ಯಾನಾಸಕ್ತನಾಗಿ ಕುಳಿತಂತೆ ಉಬ್ಬುಶಿಲ್ಪವನ್ನು ಕೆತ್ತಲಾಗಿದ್ದು ಈ ನಿಷಧಿಯು ಶಾಸನರಹಿತವಾಗಿದೆ.

---

6. ಹರತಿ, ಗುಡೇಮಾರನ ಹಳ್ಳಿ, ಸಂಕಿಘಟ್ಟ, ಬಿಸ್ಕೂರು, ಕೊಂಡಳ್ಳಿ, ಕೆಂಪಸಾಗರ, ಕೆಂಪ ಚಿಕ್ಕನಹಳ್ಳಿ, ಸೊಂಡೇಕೊಪ್ಪ, ಹೊನ್ನಸಂದ್ರ, ಬಾರಾಸವಾಡಿ, ಕಿತ್ತನಹಳ್ಳಿ, ಪಣ್ಣಯ್ಯನ ಪಾಳ್ಯ, ಮರಿಕುಪ್ಪೆ, ಮುಂತಾದ ಊರುಗಳಲ್ಲಿ ಜೈನರು ಈಗಲೂ ನೆಲೆಸಿದ್ದಾರೆ. ಕೆಲವರು ಮತಾಂತರ ಹೊಂದಿ ಸಾದರಾಗಿದ್ದಾರೆ.

7. ಎ.ಕ. ೯. ಅನುಬಂಧ ಸಂಪುಟ, ಮಾಗಡಿ, ೧೦೦.



ಹೆಗ್ಗಡೆಯ ನಿಷಧಿ ಶಾಸನ

ವಾಸ್ತವವಾಗಿ ಕಲ್ಯದಲ್ಲಿ ಇನ್ನೂ ಒಂದು ದೊಡ್ಡ ನಿಷಧಿ ಶಾಸನ ಇರಬೇಕಾಗಿತ್ತು. ನಂಜನಗೂಡು ತಾಲ್ಲೂಕಿನ ಹುಲ್ಲಹಳ್ಳಿಯ ಒಂದು ಶಾಸನದ ಪ್ರಕಾರ[8] ಕ್ರಿ.ಶ.೧೩೫೮ರ ದುರ್ಮುಖಿ ಸಂವತ್ಸರದ ಚೈತ್ರ ಮಾಸದ ಪಂಚಮಿ ಶನಿವಾರದಂದು ಕಲ್ನೆಹ ಪಟ್ಟಣದಲ್ಲಿ ಶ್ರುತಮುನಿಗಳ ಶಿಷ್ಯರಾದ ಚಂದ್ರಕೀರ್ತಿ ವ್ರತೀಂದ್ರರು ಸಲ್ಲೇಖನ ವ್ರತದಿಂದ ಮರಣವನ್ನು ಪಡೆದರು ಎಂಬುದಾಗಿ ತಿಳಿದು ಬರುತ್ತದೆ. ಈ ಮೇಲಿನ ಶಾಸನದಲ್ಲಿ ಚಂದ್ರ ಕೀರ್ತಿಗಳು ಕೊಂಡಕುಂದಾನ್ವಯದ ಮೂಲಸಂಘ, ದೇಶಿಯಗಣ, ಪುಸ್ತಕಗಚ್ಛಕ್ಕೆ ಸೇರಿದವರೆಂದು ತಿಳಿಸಲಾಗಿದೆ. ಮೂಲತ: ಇದು ಶ್ರುತಮುನಿಗಳ ನಿಷಧಿಶಾಸನವಾಗಿದ್ದು ಪ್ರಾಸಂಗಿಕವಾಗಿ ಅವರ ಶಿಷ್ಯನಾದ ಚಂದ್ರಕೀರ್ತಿ ಮುನಿಯ ಬಗ್ಗೆ ಹೇಳಲಾಗಿದೆ.

ಚಂದ್ರಕೀರ್ತಿ ಮುನಿಯ ನಿಷಧಿಶಾಸನವು ಕಲ್ನೆಹದಲ್ಲಿ ಸಿಗಬಹುದೆಂದು ಕಲ್ಯದ ಗುಡ್ಡಗಳಲ್ಲಿ ಕ್ಷೇತ್ರಪರಿವೀಕ್ಷಣೆ ನಡೆಸಿದಾಗ ಮೂರು ಬೇರೆ ಅಪ್ರಕಟಿತ ಶಾಸನಗಳು ಹಾಗೂ ಎರಡು ಲಜ್ಜಾಗೌರಿಯ ರೇಖಾಚಿತ್ರಗಳು ದೊರೆತವು[9]. ಇಲ್ಲಿ ಹೊಸದಾಗಿ ದೊರೆತ ೩ ಶಾಸನಗಳೂ ನಿಷಧಿಶಾಸನಗಳಲ್ಲ, ಅವುಗಳಲ್ಲಿ ಮೊದಲನೆಯದು

೧) 'ವಂಮುಸಿಸಂವಿಸೆ'.

ಈ ಶಾಸನದ ಅರ್ಥ ಸ್ಪಷ್ಟವಾಗುವುದಿಲ್ಲ. ಇದರ ಲಿಪಿಸ್ವರೂಪದಿಂದ ಇದು ೧೨ನೆಯ ಶತಮಾನದ್ದೆಂದು ಹೇಳಬಹುದು.

೨)'ಆದೆ ಕಲನಆ' ಈ ಬರಹದ ಅರ್ಥವೂ ಸಹ ಸ್ಪಷ್ಟವಾಗುವುದಿಲ್ಲ.

೩)'ಅವಿಗ' ಇದು ಪ್ರಾಯಃ ವ್ಯಕ್ತಿಯೊಬ್ಬನ ಹೆಸರು. ಈ ಎರಡೂ ಶಾಸನಗಳು ೧೫ನೆಯ ಶತಮಾನದವುಗಳೆಂದು ಅವುಗಳ ಲಿಪಿ ಸ್ವರೂಪದಿಂದ ನಿರ್ಧರಿಸಲಾಗಿದೆ.

ಒಟ್ಟಾರೆ ಹಿಂದಿನ ಕಲ್ನೆಹ ಪಟ್ಟಣವು ಇಂದಿನ ಕಲ್ಯ ಮತ್ತು ಹೂಜಿಗಲ್ ಗ್ರಾಮಗಳವರೆಗೂ ವ್ಯಾಪಿಸಿಕೊಂಡಿದ್ದ ದೊಡ್ಡ ಪಟ್ಟಣವಾಗಿತ್ತು. ಹಾಗೂ ಹೆಚ್ಚಿನ ಸಂಖ್ಯೆಯಲ್ಲಿ ಜೈನ ಧರ್ಮೀಯರನ್ನು ಹೊಂದಿತ್ತು. ಮತೀಯ ಘರ್ಷಣೆಗಳಿಂದಾಗಿ ಇಲ್ಲಿನ ಜೈನರು ಅಕ್ಕ ಪಕ್ಕದ ಊರುಗಳಿಗೆ ವಲಸೆ ಹೋದ ಕಾಲದಲ್ಲಿ ಇಲ್ಲಿಯ ಜೈನ ಸ್ಮಾರಕಗಳು ಹಾಗೂ ದೇವಾಲಯಗಳು ಅಪಾರ ಹಾನಿ ಅನುಭವಿಸಿದವು ಎಂದು ಹೇಳಬಹುದು. ಪ್ರಾಯಃ ಹಿಂದೊಂದು ಕಾಲದಲ್ಲಿ ಕಲ್ಯವು ಶ್ರವಣಬೆಳ್ಗೊಳದ ದಕ್ಷಿಣದಲ್ಲಿದ್ದ ಅತ್ಯಂತ ದೊಡ್ಡ ಜೈನ ಕೇಂದ್ರವಾಗಿದ್ದಿರಬಹುದೆಂದು ಊಹಿಸಬಹುದು.

8. ಎ.ಕ.೩. ನಂಜನಗೂಡು, ಮೈ ಜಿಲ್ಲೆ. ನಂಜನಗೂಡು ತಾಲ್ಲೂಕಿನ ಹುಲ್ಲಹಳ್ಳಿ ೧೩೭. ಕ್ರಿ.ಶ.೧೩೫೮, ಪುಟ ೨೫೯.
9. ಈ ರೇಖಾಚಿತ್ರಗಳ ಬಗ್ಗೆ ಬೇರೊಂದು ಸಂಪ್ರಬಂಧವನ್ನು ಇಷ್ಟರಲ್ಲಿಯೇ ಪ್ರಕಟಿಸಲಿದ್ದೇನೆ.

ವೀಣಾ.ಎಂ.ಪಿ. *

# ಹೂವಿನ ಹಡಗಲಿಯ ಕಲ್ಯಾಣ ಚಾಲುಕ್ಯರ ಒಂದು ಅಪ್ರಕಟಿತ ಶಾಸನ

ಬಳ್ಳಾರಿ ಜಿಲ್ಲೆಯ ಹೂವಿನ ಹಡಗಲಿಯೂ ಪ್ರಾಚೀನ ಚಾರಿತ್ರಿಕ ನೆಲೆಗಳಲ್ಲಿ ಒಂದು. ಕ್ರಿ.ಶ.೧೧ನೆಯ ಶತಮಾನದಲ್ಲಿ ಕಲ್ಯಾಣ ಚಾಲುಕ್ಯರ ಆಳ್ವಿಕೆಗೆ ಒಳಪಟ್ಟಿದ್ದ ಕೋಗಳಿ-೫೦೦ ಪ್ರದೇಶದ ಅಗ್ರಹಾರವಾಗಿತ್ತು ಹೂವಿನ ಹಡಗಲಿ. ಇಲ್ಲಿ ಚಾಲುಕ್ಯರ ಕಾಲದ ದೇವಾಲಯಗಳು, ಶಾಸನಗಳು ಕಂಡು ಬರುತ್ತವೆ. ಕಲ್ಲೇಶ್ವರ ದೇವಾಲಯದಲ್ಲಿಯ ಕ್ರಿ.ಶ.೧೦೭೧ರ ಮತ್ತು ಕೇಶವ ದೇವಾಲಯದ ಕ್ರಿ.ಶ.೧೯೦ರ ಶಾಸನಗಳು ಚಾಲುಕ್ಯರ ಪ್ರಮುಖ ದೊರೆ ಆರನೆಯ ವಿಕ್ರಮಾದಿತ್ಯನ ಆಡಳಿತದ ಮಾಹಿತಿಯನ್ನು ನೀಡುತ್ತವೆ. ಇವೆರಡೂ ಶಾಸನಗಳಲ್ಲದೆ ಕಲ್ಯಾಣ ಚಾಲುಕ್ಯರ ಕಾಲದ ಇನ್ನೊಂದು ಅಪ್ರಕಟಿತ ಶಾಸನವು ಹಡಗಲಿಯಲ್ಲಿ ಕಲ್ಲೇಶ್ವರ ದೇವಾಲ ಯದ ಹಿಂದೆ, ನೈರುತ್ಯ ದಿಕ್ಕಿನಲ್ಲಿ ಇರುವ ಪಾಂಡುರಂಗನ ದೇವಾಲಯದ ಮುಂದಿನ ಬಾವಿಯ ಪಕ್ಕದಲ್ಲಿ ದೊರೆಯಿತು. ದಿನನಿತ್ಯ ಗುಡಿ ಸುತ್ತಮುತ್ತಲಿನ ಜನ ಕಲ್ಲಿನ ಮೇಲೆ ಬಟ್ಟೆಗಳನ್ನು ತೊಳೆಯುತ್ತಿದ್ದರು. ಕಲ್ಲಿನ ಕೆಳಭಾಗದಲ್ಲಿಯ ಅಕ್ಷರಗಳು ಯಾರಿಗೂ ಕಂಡುಬಂದಿರಲ್ಲಿಲ್ಲ. ಹಾಗೂ ಗುಡಿಯ ಅಕ್ಕಪಕ್ಕದಲ್ಲಿ ಮನೆಗಳಿರುವುದರಿಂದ ಈ ಶಾಸನವು ಯಾರ ಕಣ್ಣಿಗೂ ಬೀಳದೆ ಮರೆಯಾಗಿತ್ತು. ಕುತೂಹಲದಿಂದ ಕಲ್ಲನ್ನು ತಿರುವು (ಮಗುಚಿ) ಹಾಕಿದಾಗ ಶಾಸನವಿರುವುದು ತಿಳಿದುಬಂತು. ಇದು ಕಲಿದೇವನಿಗೆ ನೀಡಿದ ದಾನಶಾಸನ ವಾಗಿದೆ.

ಪ್ರಸ್ತುತ ಶಾಸನವು ೪೪ ಸಾಲುಗಳನ್ನು ಒಳಗೊಂಡಿದೆ. ಶಾಸನವು ಸುಮಾರು ೫ ಅಡಿ ಎತ್ತರ ಮತ್ತು ೨½ ಅಡಿ ಅಗಲವಾಗಿದೆ. ಇದರಲ್ಲಿ ಬೇರೆ ಬೇರೆ ಕಾಲದ , ಬೇರೆ ವ್ಯಕ್ತಿಗಳಿಗೆ ಸಂಬಂಧಿಸಿದ ಒಟ್ಟು ಐದು ದಾಖಲೆಗಳಿವೆ. ಆದರೆ ಲಿಪಿಯ ಶೈಲಿಯನ್ನು ಗಮನಿಸಿದರೆ ಒಂದೇ ಕಾಲದಲ್ಲಿ ಒಬ್ಬನೇ ವ್ಯಕ್ತಿ ಈ ಶಾಸನವನ್ನು ಕಂಡರಿಸಿದ ಎಂಬುದು ತಿಳಿದು ಬರುತ್ತದೆ. ಒಬ್ಬ ಲಿಪಿಕಾರನೇ ಬೇರೇ ಬೇರೇ ಕಾಲದ ದಾಖಲೆಗಳನ್ನು ಈ ರೀತಿ ಕಂಡರಿಸಿರುವುದು ಕುತೂಹಲಕಾರಿಯಾದ ಹಾಗೂ ಗಮನಾರ್ಹವಾದ ಅಂಶವಾಗಿದೆ. ಇದೇ ಶಾಸನದ ಎಡ ಪಕ್ಕದ ಗೋಡೆಯಲ್ಲಿ ಇನ್ನೊಂದು ಶಾಸನವನ್ನು ಬರೆಯ ಲಾಗಿದೆ. ಇದು ೩೦ ಸಾಲುಗಳನ್ನು ಒಳಗೊಂಡ ಸಣ್ಣ ಶಾಸನ. ಇದರ ಎತ್ತರ ಸುಮಾರು ೩ ಅಡಿ, ಅಗಲ ೮ ಇಂಚು. ಈ ಶಾಸನವು ಅಸ್ಪಷ್ಟವಾಗಿದೆ. ಕೆಲವು ಸಾಲುಗಳನ್ನು ಮಾತ್ರ ಓದಬಹುದಾಗಿದೆ.

## ದಾಖಲೆ-೧ ( ೧ ರಿಂದ ೧೧ ಸಾಲುಗಳು )

ಆರಂಭದ ಈ ದಾಖಲೆಯಲ್ಲಿ ಚಾಲುಕ್ಯರ ದೊರೆ ಶ್ರೀಮತ್ ತ್ರೈಲೋಕ್ಯ ಮಲ್ಲದೇವ (ಒಂದನೇ ಸೋಮೇಶ್ವರ)ನು ಕಲ್ಯಾಣದಲ್ಲಿ ಆಳ್ವಿಕೆ ನಡೆಸಿದ್ದಾಗ ಇವನ ಮಗ ಸಮದಿಗತ ಪಂಚಮಹಾಶಬ್ದ ಮಹಾ ಮಣ್ಡಳೇಶ್ವರ, 'ಸರ್ವಲೋಕಾಶ್ರಯ', 'ಸಮಸ್ತಬುಧ ಜನಾಶ್ರಯ', 'ಚಾಳುಕ್ಯ ಮಾಣಿಕ್ಯಂ' 'ಜನನಾಥ ಚಿನ್ತಾಮಣಿ', 'ಮಂಡಳಿಕ ಮಕುಟ ಚೂಡಾಮಣಿ', ಶ್ರೀ ಮನ್ವಿಷ್ಣುವರ್ಧನ ಮಹಾರಾಜ ವಿಜಯಾದಿತ್ಯರು ವೆಂಗಿ ಮಂಡಳಿಕ ಪದವಿಯನ್ನು ಮತ್ತು ನೊಳಂಬವಾಡಿ ೩೨೦೦೦ದ ಪ್ರದೇಶವನ್ನು ಪಡೆದು ಕಂಬಳಿಯ (ಕಂಪಲಿ) ನೆಲವೀಡಿನಲ್ಲಿ ಆಳುತ್ತಿದ್ದ ವಿವರಣೆಯನ್ನು ಕಾಣಬಹುದು. ಕಲ್ಯಾಣ ಚಾಲುಕ್ಯರ ಇತಿಹಾಸದ ಪ್ರಕಾರ ಒಂದನೇ ಸೋಮೇಶ್ವರನ ಕಾಲ ಕ್ರಿ.ಶ. ೧೦೪೨ ರಿಂದ ೧೦೬೮ರ ವರೆಗೆ, ಇವನು ಕ್ರಿ.ಶ.೧೦೬೮ ರಲ್ಲಿ ಹಡಗಲಿ ತಾಲೂಕಿನ ಕುರುವತ್ತಿಯ ಬಳಿ ತುಂಗಭದ್ರಾ ನದಿಯಲ್ಲಿ

* ಸಂಶೋಧನ ವಿದ್ಯಾರ್ಥಿ, ಚರಿತ್ರೆ ವಿಭಾಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ -೫೮೩ ೨೨೧

ಜಲ ಸಮಾಧಿಯಾದ. ಹೀಗಾಗಿ ಮೇಲಿನ ವಿವರಣೆಯು ಕ್ರಿ.ಶ ೧೦೬೯ಕ್ಕಿಂತ ಹಿಂದಿನದು. ಅಂದರೆ ಸೋಮೇಶ್ವರನ ಆಳ್ವಿಕೆಯ ಕಾಲಕ್ಕೆ ಸಂಬಂಧಿಸಿದಾದರೂ ಇದನ್ನು ನಂತರದ ಕಾಲದಲ್ಲಿ ದಾಖಲಿಸಲಾಗಿದೆ ಎಂಬುದು ಸ್ಪಷ್ಟ.

ಇಲ್ಲಿ ಉಲ್ಲೇಖಿತವಾದ ಶ್ರೀಮನ್ ವಿಷ್ಣುವರ್ಧನ ಮಹಾರಾಜ ವಿಜಯಾದಿತ್ಯನು ಒಂದನೇ ಸೋಮೇಶ್ವರನ ಮಗನೇ, ಅಲ್ಲವೇ ಎಂಬುದರ ಬಗ್ಗೆ ವಿದ್ವಾಂಸರಲ್ಲಿ ಭಿನ್ನಾಭಿಪ್ರಾಯಗಳಿವೆ. ಬಿಲ್ಹಣನು ತನ್ನ ವಿಕ್ರಮಾಂಕ ದೇವಚರಿತದಲ್ಲಿ ಇವನನ್ನು ಉಲ್ಲೇಖಿಸಿರುವುದಿಲ್ಲ. ಇದರಲ್ಲಿ ಒಂದನೇ ಸೋಮೇಶ್ವರನ ಮೂವರು ಮಕ್ಕಳ ಪ್ರಸ್ತಾಪವಿದೆ. ಆದರೆ ಫ್ಲೀಟ್ ಅವರು ಎರಡು ಶಾಸನಗಳಲ್ಲಿ ಇವನನ್ನು ತ್ರೈಲೋಕ್ಯಮಲ್ಲನ ಮಗ (ತನಯ, ನಂದನ) ಎಂದು ಕರೆದಿರುವುದನ್ನು ಗುರುತಿಸಿದ್ದಾರೆ. ಇವರು ವಿಜಯಾದಿತ್ಯನನ್ನು ಒಂದನೇ ಸೋಮೇಶ್ವರನ ನಾಲ್ಕನೆಯ ಮಗನೆಂದು ಹೇಳಿರುವರು. ವಿಜಯಾದಿತ್ಯನು ಕ್ರಿ.ಶ. ೧೦೬೪ರಲ್ಲಿ ನೊಳಂಬ ವಾಡಿ ೩೨,೦೦೦ ವನ್ನಾಳುತ್ತಿದ್ದ ಉಲ್ಲೇಖ ದೊರೆಯುತ್ತದೆ. (ಕರ್ನಾಟಕ ಪರಂಪರೆ, ಪು. ೩೨೮). ಹಡಗಲಿಯ ಈ ಶಾಸನದ ಸಾಲುಗಳಲ್ಲಿಯೂ ವಿಜಯಾದಿತ್ಯನು ನೊಳಂಬ ವಾಡಿ ೩೨೦೦೦ ಪ್ರದೇಶವನ್ನು ಪಡೆದು ಕಂಬಳಿ ಅಂದರೆ ಕಂಪಲಿ ನೆಲವೀಡಿನಲ್ಲಿ ಆಳುತ್ತಿದ್ದ ಮಾಹಿತಿ ದೊರೆಯುತ್ತದೆ. ಆದರೆ ಕೆಲವು ಶಾಸನಗಳಲ್ಲಿ ಇವನನ್ನು ಕೇವಲ ತ್ರೈಲೋಕ್ಯ ಮಲ್ಲನ ತತ್ಪಾದಪದ್ಮಾರಾಧಕ ಎಂದು ಕರೆಯಲಾಗಿದೆ. ವಿಜಯಾದಿತ್ಯನ ಕುರಿತು ಭಿನ್ನಾಭಿಪ್ರಾಯಗಳು ಏನೇ ಇರಲಿ ಫ್ಲೀಟರು ಗುರುತಿಸಿದ ಎರಡು ಶಾಸನಗಳ ಜತೆ ಹಡಗಲಿಯ ಈ ಶಾಸನವೂ ವಿಜಯಾದಿತ್ಯನನ್ನು ಸೋಮೇಶ್ವರನ ಮಗನೆಂದೆ ಕರೆದಿದೆ.

ದಾಖಲೆ-೨ (೧೧ ರಿಂದ೧೬ರ ವರೆಗೆ)

"ಶಕ ೯೯೪(ಕ್ರಿ.ಶ.೧೦೭೨) ಮಾರ್ಗಶಿರ ಪುಣ್ಣಮಿ ಮ(೦)ಗಳವಾರ ಸೋಮಗ್ರಹಣದಂದು ಪೂವಿನ ಪಡಂಗಿಲಿಯ ಕಲಿದೇವಸ್ವಾಮಿದೇವರುಪಭೋಗಕಂ ಸತ್ರಕ್ಕಂ ಕೊಗಳಿ ಐಯ್ನೂಱಱ ಕಂಪಣಂ ಮಂಗೋಳ ಪನ್ನಿರದವಿ ಬಳಿಯ ಬಾಡಮಗ್ರಹಾರಂ ಪುಲಿ (ತ್ರುಟಿತ)ಯನ್ನು ಬಿಟ್ಟು ಕೊಟ್ಟ ಧರ್ಮ ಇದನ್ನು ಪೂವಿನ ಪಡಂಗಿಲಿಯ ೨೦೦ ಮಹಾಜನರು ಉಳಿಸಿಕೊಂಡು ಬರಬೇಕು ಎಂದು ಹೇಳಿದೆ. ಈ ದಾಖಲೆಯಲ್ಲಿ ದಾನ ಬಿಟ್ಟ ವರ್ಷ ಮತ್ತು ಗ್ರಾಮದ ಹೆಸರು ಮಾತ್ರ ದೊರೆಯುತ್ತದೆ. ಆದರೆ ದಾನಬಿಟ್ಟ ವ್ಯಕ್ತಿಯ ಹೆಸರು ಉಲ್ಲೇಖಿತವಾಗಿಲ್ಲ.

ದಾಖಲೆ-೩ (೧೭ರಿಂದ೨೧)

ಇಲ್ಲಿ 'ಬನವಾಸಿ ಪುರವರೇಶ್ವರ', 'ವೀರಮಹೇಶ್ವರ', 'ಕದಂಬರಾಭರಣ', ಶ್ರೀ ಸಾಮಂತ ಗರುಡ ಪಾದಪಂಕಜ ಭ್ರಮರಂ, ಶ್ರೀಮನ್ಮಹಾಸಾಮಂತ ಮನ್ನೆಯ ಘಟ್ಟಿಯ ರಸನು-(ತ್ರುಟಿತ) ಗಿಲಿಯ ಕೆರಿಯ ಮನ್ನೆಯ ಸ್ವಾಮ್ಯವನ್ನು ಕಲಿದೇವ ಸ್ವಾಮಿದೇವರ ಉಪಭೋಗಕ್ಕೆ ಬಿಟ್ಟುಕೊಟ್ಟ ಕುರಿತು ವಿವರಣೆಯಿದೆ. ಕೋಗಳಿನಾಡಿನ ಕದಂಬ ವಂಶಕ್ಕೆ ಸೇರಿದ ಘಟ್ಟಿಯರಸನು ಮಹಾಮಂಡಳೇಶ್ವರ ತ್ರಿಭುವನಮಲ್ಲ ಪಾಂಡ್ಯದೇವನಿಗೆ (ಉಚ್ಚಂಗಿಯ ಪಾಂಡ್ಯರು) ಅಧೀನನಾಗಿ, ಕೊಟ್ಟೂರಿನಲ್ಲಿದ್ದು ಆಡಳಿತ ನಿರ್ವಹಿಸುತ್ತಿದ್ದ ಬಗ್ಗೆ ಶಾಸನಗಳಲ್ಲಿ ಮಾಹಿತಿ ದೊರೆಯುತ್ತದೆ.

ಕ್ರಿ.ಶ.೧೦೭೧ ರಲ್ಲಿ ಇದೇ ಘಟ್ಟಿಯರಸನು ಪೂವಿನ ಪಡಂಗಿಲಿಯ ಕಲಿದೇವಸ್ವಾಮಿ ದೇವರಿಗೆ ಕೊಟ್ಟಿಗನ್ನೂರ ಮನ್ನೆಯ ಸಾಮ್ಯವನ್ನು ಬಿಟ್ಟುಕೊಟ್ಟ ವಿವರಣೆ ಹಡಗಲಿಯ ಕಲ್ಲೇಶ್ವರ ದೇವಾಲಯದಲ್ಲಿನ ಶಾಸನದಿಂದ ತಿಳಿದು ಬರುತ್ತದೆ. ಮತ್ತು ಹಡಗಲಿಯ ಕೇಶವ ದೇವಾಲಯದ ಕ್ರಿ.ಶ.೧೯೯೦ರ ಶಾಸನದಲ್ಲಿ ಘಟ್ಟಿಯರಸನು ಕೇಶವ ದೇವರ ರಂಗಭೋಗಕ್ಕಾಗಿ ಗದ್ಯಾಣವನ್ನು ನೀಡಿದ ದಾಖಲೆಯಿದೆ.

ದಾಖಲೆ-೪ (೨೧ ರಿಂದ ೩೬ರ ವರೆಗೆ)

'ಸುಭಟ ಶಿರೋಮಣಿ', 'ದಯಾಭ್ಯ ಸಂಹರಣಂ', 'ಬಚ್ಚರಾಭರಣಂ', 'ಚಲದಂಕರಾಮಂ', 'ಸಂಗ್ರಾಮ ಭೀಮಂ', 'ವಿಜಯ ಲಕ್ಷ್ಮೀಶ್ವರಂ', 'ಬೀಣ್ಣೆಶ್ವರಪುರವರೇಶ್ವರಂ' ಶ್ರೀಮನ್ಮನ್ನೆಯ ಮಲ್ಲಪ್ಪರಸರು ಕಲಿದೇವರಿಗೆ ಪೂಲಿಯಕೆರೆಯ ತಮ್ಮ ಮನ್ನೆಯ ಸಾಮ್ಯವನ್ನು ಬಿಟ್ಟುಕೊಟ್ಟ ವಿವರಣೆಯಿದೆ. ಅಲ್ಲದೆ ಈ ಧರ್ಮವನ್ನು ಮಹಾಜನರು ಮತ್ತು ಸಂತರಾಸಿ ಪಂಡಿತರು ನಡೆಸಿಯಿಸಿಕೊಂಡು ಹೋಗಬೇಕೆಂದು ಹೇಳಲಾಗಿದೆ. ಮುಂದಿನ ಸಾಲುಗಳಲ್ಲಿ ಶಾಪಾಶಯ ಮತ್ತು ಶ್ಲೋಕದೊಂದಿಗೆ ಶಾಸನ ಮುಕ್ತಾಯವಾಗುತ್ತದೆ.

ಕಲ್ಯಾಣ ಚಾಲುಕ್ಯರ ಆಳ್ವಿಕೆಯ ಅವಧಿಯಲ್ಲಿ ಮಲ್ಲರಸ, ಮಲ್ಲಪರಸ, ಮಲ್ಲರಾಜ ಮುಂತಾದ ಅನೇಕ ವ್ಯಕ್ತಿಗಳು ಸಾಮಂತರಾಗಿ, ಮಾಂಡಲಿಕರಾಗಿ, ಸಂಧಿವಿಗ್ರಹಿ

ಗಳಾಗಿ ಅದಳಿತದಲ್ಲಿ ಸೇವೆ ಸಲ್ಲಿಸಿದ ಮಾಹಿತಿಗಳಿವೆ. ಶಾಸನದಲ್ಲಿ ಬರುವ ಮಲ್ಲಪರಸನ ಬಿರುದುಗಳ ಮತ್ತು ಅವನ ಆಳ್ವಿಕೆಯ ಪ್ರದೇಶವನ್ನು ಗಮನಿಸಿದಾಗ ಕೊಟ್ಟೂರಿನ ಕಲ್ಲೇಶ್ವರ ದೇವಾಲಯದಲ್ಲಿರುವ ಶಾಸನ (S.I.I., IX(1), No.135)ವನ್ನು ಬರೆದ ಘಟ್ಟಿಯರಸನ ಸಂಧಿವಿಗ್ರಹಿ ಮಲ್ಲಪರಸನೇ ಇವನಾಗಿರಬೇಕು ಎಂದು ಊಹಿಸಬಹುದು.

ಇಲ್ಲಿ ಉಲ್ಲೇಖಿತವಾಗಿರುವ ಮಲಿಯಾಳಿ ಪಂಡಿತರ ಸಂತತಿಗೆ ಸೇರಿದ ಸಂತರಾಸಿ ಪಂಡಿತರು ಮತ್ತು ಕಲೇಶ್ವರ ದೇವಾಲಯದ ನವರಂಗದ ಅರ್ಧ ಕಂಬದ ಮೇಲಿನ ಶಾಸನದಲ್ಲಿ ಹೆಸರಿಸಿರುವ ಗೌರವಚ್ಚಿಯ ತಂದೆ ಸಂತಿರಾಸಿ ಪಂಡಿತ ಇಬ್ಬರು ಬೇರೆಯಲ್ಲ, ಒಬ್ಬನೇ ಆಗಿರಬೇಕು.

## ದಾಖಲೆ-೫ ( ೩೭ ರಿಂದ೪೪ ರ ವರೆಗೆ )

ದಾಖಲೆ ನಾಲ್ಕು ಶಾಪಾಶಯ ಮತ್ತು ಶ್ಲೋಕದಿಂದ ಮುಕ್ತಾಯಗೊಂಡ ನಂತರ ಶಾಸನದ ಕೆಳಭಾಗದ ಕಲ್ಲಿನ ಪಟ್ಟಿಯ ಮೇಲೆ ೮ ಸಾಲುಗಳನ್ನು ಒಳಗೊಂಡಿದೆ ಈ ದಾಖಲೆ. ಈ ಭಾಗದ ಲಿಪಿಯು ನಾಶಗೊಂಡಿದ್ದು ಅರ್ಥೈಸಿಕೊಳ್ಳಲು ಕಷ್ಟಕರವಾಗಿದೆ. ಕಲ್ಕುಟಿಗ 'ಮಾರೊಜ' ಎಂಬ ವ್ಯಕ್ತಿಯ ಹೆಸರು ಇಲ್ಲಿ ಉಲ್ಲೇಖಿತವಾಗಿದೆ. ಕೊನೆಯಲ್ಲಿ ಶಾಪಾಶಯದೊಂದಿಗೆ ಶಾಸನ ಮುಕ್ತಾಯವಾಗಿದೆ.

## ಎಡಗೋಡೆಯ ಮೇಲಿರುವ ಇನ್ನೊಂದು ಶಾಸನ

ಮೊದಲೇ ಹೇಳಿದಂತೆ ಈ ಶಾಸನವು ೩೯ ಸಾಲುಗಳನ್ನು ಒಳಗೊಂಡಿದೆ. ಸ್ವಸ್ತಿ ಸಮಧಿಗತ ಪಂಚ ಮಹಾಶಬ್ದ ಮಹಾಮಣ್ಡಳೇಶ್ವರ ಪರಮಭಟ್ಟರಕ ಎಂದು ಶಾಸನವು ಆರಂಭವಾಗುತ್ತದೆ. ಆದರೆ ಸೀಮೆಂಟು, ನೀರು, ಸಾಬೂನು ಇತ್ಯಾದಿಗಳ ಕಾರಣದಿಂದಾಗಿ ಶಾಸನದ ಅಕ್ಷರಗಳು ಅಸ್ಪಷ್ಟವಾಗಿದೆ. ಇದರಿಂದಾಗಿ ಶಾಸನದ ಪಾಠವನ್ನು ಓದುವುದು ಮತ್ತು ಅರ್ಥೈಸುವುದು ಕಷ್ಟವಾಯಿತು.

## ಶಾಸನ ಪಾಠ

೧ ಸ್ವಸ್ತಿ ಸಮಸ್ತಭುವನಾಶ್ರಯ ಶ್ರೀ ಪೃಥ್ವಿವಲ್ಲಭ ಮಹಾರಾಜದಿ ರಾಜ ಪರಮೇಶ್ವರ ಪರಮ
೨ ಭಟ್ಟಾರಕಂ ಸತ್ಯಾಶ್ರಯ ಕುಳತಿಲಕಂ ಚಾಲುಕ್ಯಾಭರಣಂ ಶ್ರೀಮತ್ತ್ರೈಲೋಕ್ಯ ಮಲ್ಲ ದೇವರ ವಿಜಯ
೩ ರಾಜ್ಯ ಮುತ್ತರೋತ್ತರಾಭಿವೃದ್ಧಿ ಪ್ರವರ್ಧಮಾನ ಮಾಚಂದ್ರರ್ಕತಾರಭರಂ ಸಲುತಮಿರೆ
೪ ತತ್ತನಯಂ ಸಮದಿಗತ ಪಂಚ ಮಹಾಶಬ್ದ ಮಹಾಮಣ್ಡಳೇಶ್ವರಂ ಸರ್ವಲೋಕಾಶ್ರಯಸ
೫ ಮಸ್ತ ಬುದಜನಾಶ್ರಯನಾಹವಮಲ್ಲನಂಕ ಕಾವಿಪರಮಂಡಳ ಸೂಮಕಾವಿಂ ರಡ್ಡಿಕು
೬ ---ರಂ ವನ್ನಿಜನಾದಾರಂ ವೈರಿ ಬಳಮರ್ಧನಂ ಪ್ರತಾಪ ಜನಾರ್ದನನರ್ಚಿತವಾಕ್ಯಂ ಚಾಲುಕ್ಯಮಾಣಿ
೭ ಕ್ಯಂ ವಿಜಯಶ್ರೀ ಕೋಟಿ ಸಮನನಭಿನವ ಮದನಂ ವಿಪಕ್ಷ ಕುಳಕಾಳದಂಡಂವೀರಮಾರ್ತಂಡಂರಿಪು
೮ ಕಾಯಕುಮರ ಹೃದಯ ಗೆಲ್ಲಂ ಸಹಾಸ ಮಲ್ಲನಂ ಜನನಾಥ ಚಿನ್ತಾಮಣಿ ಮಂಡಳಿಕಮ
೯ ಕುಟ ಚುಡಾಮಣಿ ಶ್ರೀಮನ್ನಿಷ್ಣುವರ್ಧನ ಮಹಾರಾಜ ವಿಜಯಾದಿತ್ಯದೇವರ್ಬ್ಬೆಂಗಿ ಮಂಡಲಿಕ
೧೦ ಪದವಿಯುಮಂ ನೊಳಂಬವಾಡಿ ಮೂವತ್ತಿ ರ್ಚಾಸಿರಮುಮಂ ಪಡೆದು ಸುಖಸಂಕಥದಿನೊಡದಿ
೧೧ ರಾಜ್ಯಂಗೆಯುತ್ತಿಮಿರೆ ಕಂಬಳಿಯ ನೆಲವೀಡಿನಲ್। ಸಕನೃಪ ಕಾಳಾಕ್ರಾನ್ತ ಸಂವತ್ಸರ ಸತ
೧೨ ಕಂಗಳ್ ೯೪ನೆಯ ಸುಭಕೃತ್ಸವಂತ್ಸರಂ ಪ್ರವರ್ತ್ತಿಸಿ ತದ್ವತಿಪಾತ್ಯನ್ತರದ ಮಾರ್ಗಶಿರದ ಪುಣ್ಣಮಿಯ (೦)
೧೩ ಗಳವಾರಂ ಸೋಮಗ್ರಹಣದಂದಂದು ಪೂವಿನ ಪಡಂಗಿಲಿಯ ಕಲಿದೇವ ಸ್ವಾಮಿ ದೇವರುಪಭೋಗ
೧೪ ಕಂ ಸತ್ರಕ್ಕಂ ಕೋಗಳಿ ಐಯ್ನೂಱಱ ಕಂಪಣಂ ಮಂಗೋಳ ಪನ್ನಿರದಱ ಬಳಿಯ ಬಾಡಮಗ್ರ
೧೫ ಹಾರಂ ಪುಲಿ-ಱುಯ ನಾಚನ್ನಕ ಸೂರ್ಯಮಾಗಿ ಸರ್ವನಮಸ್ಯಂ ಮಾಡಿ ಬಿಟ್ಟರೀ ಧರ್ಮ
೧೬ ಈ ಪೂವಿನ ಪಡಂಗಿಲಿಯ ಮಹಾಜನಂ ನೂಱುರ್ಪ್ವ ದಿಮಂ ಬರುಂದಾತಾರರಾಗಿ ಕಿಡವಿಯದೇ
೧೭ ನಡೆಯಿಸುವರು। ಸ್ವಸ್ತಿ ಸಮದಿಗತ ಪಂಚಮಹಾ ಶಬ್ದ ಮಹಾಸಮಸ್ತ ವೀರಶ್ರೀಕಾನ್ತಂಬ

೧೮ ನವಾಸಿ ಪುರವರೇಶ್ವರ ವೀರಮಹೇಶ್ವರಂ ಕದಂಬರಾ ಭರಣಂ ವೈರಿಮದ ನಿವಾರಣಂ ಶ್ರೀಸಾ
೧೯ ಮನ್ತ ಗರುಡ ಪಾದಪಂಕಜ ಭ್ರಮರಂ ಶ್ರೀಮನ್ಮ ಹಾಸಾಮಂತಮನ್ನೆಯಂ ಘಟ್ಟಿಯರಸ
೨೦ -ಗಿಲಿಯ ಕೆರಿಯ ಮನ್ನೆಯ ನಾಮ್ಮಮಂ ಕಲಿದೇವಸ್ವಾಮಿ... ಗೋಪಭೋಗಕ್ಕೆ ಬಿಟ್ಟುಕೊ
೨೧ ಟ್ಟರ್ ಅದಂಕನ್ನ ॥ ಸ್ವಸ್ತಿ ಸಮಸ್ತ ಗುಣಗಣೋದ್ದಾರಂ ಸುಜನಕಯ್ವಾರಂ ಗೋತ್ರ ಚಿನ್ತಾಮ
೨೨ ಣಿ ಸುಭಟ ಶಿರೋಮಣಿ ಹಯವತ್ಸ ರಾಜಂಕಾನ್ತಾ ಮನೋಜಂ ಭೃಗುಮತ ಚತುರಾನನಂ ವೈ
೨೩ ರಿ ಪಂಚಾನನಂದಯಾಟ್ಯಸಂಹರಣಂ ಬಚ್ಚರಾಭರಣಂ ವಿನಯ ಸಮೇತ ಬಿನಿದೊಪ್ಪುವಾತಂ
೨೪ ಚಲದಂಕರಾಮಂ ಸಾಂಗ್ರಮ ಭೀಮಂಸರನಾಗತವಜ್ರ ಪಂಜರರಿಪುಕಂಟಕುಂಜರ ಸಮ್ಮನಗನೃಪಾ
೨೫ ರಣನದಟ ಪುರಟ್ಟಂಮಚ್ಚರಿಪಮನ್ನೆಯದಿಶಾ ಪಟ್ಟಂಸುಜನ ಪ್ರಸಂಗಂ ಬೂತನಸಿಂಗಮಜಿೀಗಿ
೨೬ ಪ್ಪಗೆ ಕೊಲ್ಲುಂ ಪೊರೆದಾಳಿನಲ್ಲಂ ವಿಜಯ ಲಕ್ಷ್ಮೀಶ್ವರಂ ಬಿಣ್ಣೆಶ್ವರಪುರವರೇಶ್ವರಂ ಶ್ರೀ ಮನ್ಮನ್ನೆಯಂ
೨೭ ಮಲ್ಲಪರಸರೆ ಕಲಿದೇವಸ್ವಾಮಿದೇವರ್ಗ್ಗೆ ಪೂಲಿಯ ಕೆಱಿಯ ತಮ್ಮ ಮನ್ನೆಯ ನಾದ್ಮುದುಂಬಿ
೨೮ ಟ್ಟು ಕೊಟ್ಟರೆ ಇನ್ತಿಧರ್ಮಕೆ ಮಹಾಜನಮುಂ ಮಲುಯಾಳಪಣ್ಣಿತರ ಸನ್ತತಿಸ್ಥಾನಾ ಪತ್ಯದಲ್ಲಿಂದಸ
೨೯ ನ್ತರಾಸಿ ಪಣ್ಣಿತರುಂ ದಾತಾರರಾಗಿ ನಡೆಯಿಸುವ ಶ್ರಿಧರ್ಮ ಮ(ಂ) ಕಾದವರ್ಗ್ಗೆಗಂಗಾ ಪ್ರಯಾಗೆಬ
೩೦ ರಣಾಸಿಗೈತೀರ್ತ್ಥಿಂ ಕುರುಕ್ಷೇತ್ರಮಂ ಬಿವಜೊಳ್ಸಾಸಿರ ಕವಿಲೆಯ ಕೊಡ್ನಂ ಕೊಳಗು ಮಂ...ನ್ನ(ಲ)
೩೧ ಪಂಚರತ್ನದಲೂಂ ಕಟ್ಟಿಸಿ ಚತುರ್ವೇದ ಪರಗರಪ್ಪ ಬ್ರಾಹ್ಮಣಗ್ಗುೆಭಯ ಮುಖಿಗೊಟ್ಟ ಫಲಮಕ್ಕುಂ
೩೨ ಇದನಳಿದವನಾತೀರ್ತ್ಥಂಗಳೊಳು ಬ್ರಾಹ್ಮಣರುಮಂ ತಪೋಧನರುಮಂ ಕವಿಲೆಗಳ್ನಮನಳಿದ ಮಹಾ
೩೩ ಪತನಕ್ಕುಂ ॥ ಶ್ಲೋಕಂ ॥ ಸಾಮಾನ್ಯೋಯಂ ಧಮ್ಮಂ ಸೇತುರ್ನ್ನೃ ಪಾಣಾಂ ಕಾಲೇ ಕಾಲೇ ಪಾಲನೀಯೋ ಭವ
೩೪ ದ್ವಿಃಸೆರ್ನಾನೇತಾನ್ ಭಾಗಿನಃ ಪಾರ್ತ್ಥಿವೇಂದ್ರಾನೆ ಭಯೋ ಭಯೋ ಮಾಡತೇ ರಾಮ ಭದ್ರಃ
೩೫ ಸ್ವದತ್ತಂಪರದತ್ತರವಾಯೋ ಹರೇತವಸುಂಧರಾಂ ಶಷ್ಟಿರ್ವರ್ಷಸಹಶ್ರಾಣಿ ವಿಷ್ಟಾಯಾ
೩೬ ಜಯತೆ ಕ್ರಿ ಮಿಃ (ಕಲ್ಲಿನ ಪಟ್ಟಿಯ ಮೇಲಿನ ಸಾಲುಗಳು)
೩೭ ....ನ..... ಹನಸು-ನೊಜಪಸ
೩೮ ..... ಮತ್ತೊವಿನ ಪಡಂಗಿಲಿಯೂರೊಡಯ ಪ್ರಮುಖ ಮಹಾ
೩೯ ..... ಜಿ ಪ್ಪದಿಂ ಬರುನೆರೆದಿದ್ದು ಶ್ರೀ ಕಲಿದೇವ ಸ್ವಾಮಿದೇವರ ದೇಗು-ಕ್ಕೆ ಕೆಸಲು ಕಲ್ಲಿಕ್ಕು
೪೦ -ವ-ಕಲ್ಕುಟಿಗ ಮಾರೊಜನಂ ನಿಲಿಸಿದ ಕ್ರಮವಿನ್ತಿಂ-ದೇ ಆದೇಗುಲಕ್ಕೆ ಕೆಲಸ ಗೆಯ್ದು ಕಮ್ಮಾ
೪೧ ನೊಳಗೋಗಿ ಕಲ್ಕುಟಿಗರ್ಗ್ಗೆಲ್ಲಂ ಸರ್ವ ಬಾದ್ದ ಪರಿಹಾರಂ ಬಾವಿ... ಪನೆಪೂಗ.ಸಲ್ಲಕೆರೆಯ
೪೨ .... ಬಂಗಂ ಮನ್ನೆಯ-ನ್ದವಸದ ಕಂಬಳಕ್ಕೆ ನೀರವಪ್ಪರ ಈ ಧರ್ಮಮಂ ಪ್ರತಿ ಪಾಧಿಸಿದವರ್ಗ್ಗೆವಾರಣ
೪೩ ಸಿ ಕುರುಕ್ಷೇತ್ರದೂಳ್ ಸಾಸಿರ್ಪ್ಪುರು ಬ್ರಾಹ್ಮಣರ್ಗ್ಗೆ-ಕವಿಲೆಗಳಂ ಕೊಟ್ಟಫಲಮಕ್ಕಮಿ ಇದನಳಿದಾತ ಸಾ....
೪೪. ನದೊಳು ಬ್ರಾಹ್ಮಣರು ಕವಿಲೆಯು ಮನೆಳಿದ ಪಾತಕನಕ್ಕುಂ ॥ ಮಂಗಳಮಹಾಶ್ರೀ ಶ್ರೀ

( ಈ ಲೇಖನವನ್ನು ಸಿದ್ಧಪಡಿಸಲು ಸಹಾಯ ಮಾಡಿದ ಕಲ ವೀರ ಮನ್ಸಾಚಾರ್ (ಅಧ್ಯಾಪಕರು, ಕನ್ನಡ ವಿಶ್ವವಿದ್ಯಾಲಯ, ಹಂಪಿ), ಪ್ರೊ: ಲಕ್ಷ್ಮಣ್ ತೆಲಗಾವಿ (ಮುಖ್ಯಸ್ಥರು, ಚರಿತ್ರೆ ವಿಭಾಗ, ಕ.ವಿ.ಹಂ) ಮತ್ತು ಹಂಸಾಚಾರಿ (ಶಿಲ್ಪಿ, ಹೂವಿನ ಹಡಗಲಿ) ಅವರಿಗೆ ಕೃತಜ್ಞಳಾಗಿದ್ದೇನೆ.)

ಪ್ರೊ|| ಎಚ್.ಆರ್.ರಘುನಾಥ ಭಟ್ *

# ಸ್ವಾದಿಯಲ್ಲಿ ಮತ್ತೊಂದು ಶಿಲಾಶಾಸನ ಶೋಧನೆ

'ಸ್ವಾದಿ ಅರಸುಮನೆತನ' ಕನ್ನಡನಾಡಿನ ಅದರಲ್ಲೂ ಉತ್ತರಕನ್ನಡ ಪ್ರದೇಶದ ಪ್ರತಿಷ್ಠಿತ ರಾಜವಂಶಗಳಲ್ಲಿ ಒಂದಾಗಿದ್ದು, ವಿಜಯನಗರ, ಆದಿಲ್‌ಶಾಹಿ, ಮತ್ತು ಪ್ರಾದೇಶಿಕ ಸಂಸ್ಕೃತಿಗಳನ್ನು ಸಮನ್ವಯಿಸಿ ಸಕಲ ಸಮಾಜೋ-ಧಾರ್ಮಿಕ ಮೌಲ್ಯಗಳನ್ನು ಎತ್ತಿಹಿಡಿದದ್ದು ಶಾಸನ ಮತ್ತು ಸಾಹಿತ್ಯಕ ಆಧಾರಗಳಿಂದ, ವಾಸ್ತು ಶಿಲ್ಪ ಕಲಾಕೃತಿಗಳಿಂದ ರುಜುವಾತಾಗುತ್ತದೆ. ಈ ಮನೆತನದ ಸಾಂಸ್ಕೃತಿಕ ಮುದ್ರೆ ಆ ಪ್ರದೇಶದ ಮೇಲೆ ಅದೆಷ್ಟು ಚೆನ್ನಾಗಿ ಅಚ್ಚೊತ್ತಿದೆ ಎಂಬುದನ್ನು ನೋಡಬೇಕಾದರೆ ಸ್ವಾದಿ  ಬನವಾಸಿ ಸುತ್ತಮುತ್ತಣ ಶಾಸನಗಳನ್ನು ವ್ಯಾಸಂಗಮಾಡಬೇಕು, ಗುಡಿಗುಂಡಾರಗಳನ್ನು ನೋಡಬೇಕು. ಹಾಗೆ ಸಾಹಿತ್ಯ, ಜಾನಪದ, ಕೈಫಿಯತ್ತು ಮತ್ತಿತರ ಆಕರಗಳನ್ನು ಪರಿಶೋಧಿಸಬೇಕು.

ಸ್ವಾದಿ ಅರಸುಮನೆತನಕ್ಕೆ ಸಂಬಂಧಿಸಿದಂತೆ, ಸ್ವಾದಿ ಮತ್ತು  ಅದರ ಸುತ್ತಮುತ್ತಲಿನ ಸ್ಥಳಗಳಲ್ಲಿ ಈವರೆಗೆ ಇಪ್ಪತ್ತೊಂಬತ್ತು ಶಾಸನಗಳು ಲಭ್ಯವಿದ್ದು, ಅವನ್ನು ಭಾರತ ಶಾಸನ ತಜ್ಞರ ಇಲಾಖೆಯ ನಿರ್ದೇಶಕರಾದ ಶ್ರೀ ಎಂ. ಎನ್. ಕಟ್ಟಿಯವರು ಈಗಾಗಲೇ ಪ್ರಕಟಿಸಿದ್ದಾರೆ. ಅವುಗಳ ಪಾಠ ಹಾಗೂ ಸಾರಾಂಶಗಳನ್ನು 'ಸ್ವಾದಿ ಅರಸುಮನೆತನ' ಎಂಬ ಕೃತಿಯಲ್ಲಿ ಪ್ರಕಟಮಾಡಿ ಉಪಕರಿಸಿದ್ದಾರೆ. ಈಚಿನ ನಮ್ಮ ಸ್ವಾದಿ ಕ್ಷೇತ್ರಕಾರ್ಯದಲ್ಲಿ ಒಂದು ಶಿಲಾಶಾಸನವನ್ನು ಗದ್ದುಗೆ ಮಠ/ಮನೆಯೆಂದು ಹೇಳಲಾದ ಐತಿಹಾಸಿಕ ಸ್ಥಳದಿಂದ ತೀರ ದೂರವಿಲ್ಲದ 'ನಾಗಜೆರಿ' ಎಂಬ ನೀರಾವರಿ ನೆಲೆಯಲ್ಲಿ ಪರಿಶೋಧಿಸಲಾಯಿತು. ಜೊತೆಗೆ ಆ ಭೂಮಿಗೆ ಸಂಬಂಧಿಸಿದಂತೆ ನಾಲ್ಕು ಮೂಲೆಗಳಲ್ಲಿ ನಾಲ್ಕು ಸುಂದರವಾದ

ಲಿಂಗಮುದ್ರೆ ಕಲ್ಲುಗಳನ್ನು ಪತ್ತೆಮಾಡಲಾಗಿದೆ. ಅಷ್ಟೇಅಲ್ಲ
ಈಗ ಬೆಳೆಸಿರುವ ತೋಟದ ಒಂದು ಮೂಲೆಯಲ್ಲಿ ಸ್ವಾ
ಅರಸರಕಾಲದ ಒಂದು ಪುಟ್ಟ ಗುಡಿಯನ್ನು, ಸಂಪೂರ್ಣವಾ
ಶಿಲಾಮಯ ಕಟ್ಟಡವನ್ನು, ಅದರ ಎಲ್ಲ ವಿವರಗಳೊಂದಿ
ಗೊತ್ತು ಹಚ್ಚಲಾಯಿತು.

ಪ್ರಸ್ತುತ ಸುಮಾರು ಇಪ್ಪತ್ನಾಲ್ಕು ಸಾಲುಗಳುಳ್ಳ ಕನ್ನ
ಶಾಸನವನ್ನು ಈಶ್ವರ ಸಂವತ್ಸರದ ಭಾದ್ರಪದ ಬಹು
ಹನ್ನೆರಡರಲ್ಲಿ ನಾಗಜೆರಿ ಚೌಕಿಯ ಚೆನ್ನಬಸಪ್ಪನವರ
ಹೊರಡಿಸಿದ್ದು ಸ್ಪಷ್ಟವಾಗಿ ದಾಖಲಿಸಲಾಗಿದೆ. ಇದ
ಮುಖ್ಯವಾಗಿ ನಾಗಜೆರಿ ನೀರನ್ನು ಸಾರ್ವಜನಿಕರ
ಬಳಸುವುದಕ್ಕೆ ಸಂಬಂಧಿಸದಂತೆ ಕೆಲ ಸಂಗತಿಗಳನ್ನು, ಪ್ರಾಯಶ
ಎದ್ದ ಸಮಸ್ಯೆಗಳನ್ನು ಎತ್ತಿ ಹೇಳುತ್ತದೆ. ಅದೇ ಧ್ವನಿಯಲ್ಲಿ
ಆ ಸಮಸ್ಯೆಗಳಿಗೆ ಪರಿಹಾರವನ್ನು ಸೂಚಿಸುತ್ತದೆ. ಆದ
ಶಾಸನಪಾಠದ ಕೊನೆಯಭಾಗ, ಮುಖ್ಯವಾ
ಹತ್ತೊಂಬತ್ತನೆಯ ಸಾಲಿನಿಂದ ಇಪ್ಪತ್ತನಾಲ್ಕನೆಯ
ಸಾಲಿನವರೆಗೆ  ತ್ರುಟಿತವೂ ಅಸ್ಪಷ್ಟವೂ ಆಗಿರುವುದರಿಂ
ಅದರ ಆಶಯ ಗೊತ್ತಾಗುತ್ತಿಲ್ಲ.

ಶಾಸನದ ಶಿರೋಶಿಲ್ಪದಲ್ಲಿ ಲಿಂಗ ನಂದಿ, ಸೂರ್
ಚಂದ್ರ ಮುಂತಾದ ಉಬ್ಬುಶಿಲ್ಪಗಳನ್ನು ನೋಡಬಹುದು
ಶಾಸನ ಶಿಲೆಯಾಗಲಿ, ಅದರ ಮೇಲೆ ಕಂಡರಿಸಿದ
ಅಕ್ಷರಗಳಾಗಲಿ ಹೇಳಿಕೊಳ್ಳುವಷ್ಟು ಸುಂದರವಾಗಿಲ್ಲ
ವಾಸ್ತವಿಕವಾಗಿ ವಿಜಯನಗರೋತ್ತರ ಕಾಲದ ಹೆಚ್ಚಿನ
ಶಿಲಾಶಾಸನಗಳು ಈ ಭಾಗದಲ್ಲಿ ಕಂಡುಬರುವಂ
ಲಿಪಿಸೌಂದರ್ಯಕ್ಕಾಗಲಿ, ಶಾಸನ ಪಾಠ ಸೌಂದರ್ಯಕ್ಕಾಗಲಿ

*ಪ್ರಾಧ್ಯಾಪಕರು, ಪ್ರಾಚೀನ ಇತಿಹಾಸ ಮತ್ತು ಶಾಸನ ಶಾಸ್ತ್ರ ವಿಭಾಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ-೩

ಸರುವಾಸಿ ಆಗಿಲ್ಲ. ಅಕ್ಷರ ಸ್ಖಾಲಿತ್ಯ, ವ್ಯಾಕರಣದೋಷ, ಾಷಿಕ ದೋಷಗಳು ಅಲ್ಲಲ್ಲಿ ಕಂಡುಬರುತ್ತವೆ. ಸಾಲದಕ್ಕೆ ಳಸಿದ ಶಿಲೆಕೂಡ ಅಷ್ಟು ಪರಿಶುದ್ಧವಾಗಿಲ್ಲ. ಸ್ಥಳೀಯವಾಗಿ ಭ್ಯವಿರುವ ಹೊಳೆಕಲ್ಲನೇ ಬಳಸಲಾಗಿದೆ. ಇಷ್ಟಾಗಿಯೂ ಾಸನಗಳು ಸಮಕಾಲೀನ, ಅಧಿಕೃತ, ದಾಖಲೆಗಳಾಗಿರುವ ನ್ನೆಲೆಯಲ್ಲಿ ಹದಿನೆಂಟನೆಯ ಶತಮಾನದಲ್ಲೂ ಈ ಮಾತಿಗೆ ಪುಷ್ಟಿನೀಡುವ ಮಾತಿಗೆ ಪೂರಕವಾಗಿ ಈ ಶಾಸನ ನಮಗೆ ಈಗ ಭ್ಯವಾಗಿದೆ. ಅದರ ಸದ್ಯಕ್ಕೆ ಓದಿದ ಪಾಠವನ್ನು ಈ ಕೆಳಗೆ ೀಡಲಾಗಿದೆ.

### ಶಾಸನ ಪಾಠ

೧ ಯೀಶ್ವರ ಸಂವತ್ಸರದ ಭಾದ್ರಪದ ಬ ೧೨ಲ್ಲು ನಾಗ
೨ ಜೆರಿ ಚಉಕಿ ಚೆಂನಬಸಪ್ಪನವರೂ ಬರಸಿದ ಸಿಲಾ
೩ ಶಾಸನಾ ಯೀ ನಾಗಜೆರಿ ಉದುಕಉ ಅನಾದಿ ಲಾರ
೪ ಭ್ಯ ಸಕಲ ಜಾತಿಯು ಉದಕ ಬಳಸುತಿತ್ತು(ದ್ದು) ಆ ಮೇಲೆ
೫ ನಾಉ ಚಉಕಿ ಕಟ್ಟಿಕೊಂಡೆಉಯಂತ ಅರಸು
೬ ಗಳಿಗೆ ಹೇಳಿಕೊಂಡಲ್ಲಿ ಆ ನಾಗಜರಿ ಉದುಕ
೭ ಉ ಮಂದಿಬಳಸುವದಕೆ ಬಿಟ್ಟು ಲಿಂಗಮುದ್ರೆ ಸ್ಥಾ
೮ ಪಿತ ಮಾಡಿಕೊಡೆಯಂತ ಸಮಸ್ತು ಗುರಕಾರರಿ
೯ ಗೂ ಹೇಳಿದರು. ಆ ಮೇಲೆ ನಾಉಸ್ಥಳಸ್ವಲ್ಪವಾಗು
೧೦ ತ್ತದೆಯಂಬದರಿಂದ ಸಕಲ ಜಾತಿಯು ಉದಕವ(ಸ)
೧೧ ರ್ವ ಪ್ರಮಾಣು ಬಳಸಬಹುದು ಅಗಣೆವೈವರಿಗೆ
೧೨ ನಿರ್ಬ್ಬಂದಾ ಮಾಡಿದವರೂ ಗುರುದ್ರೋಹಿಗಳು ಯಂ
೧೩ ತನಾವಾಗಿ ಹೇಳಿದರಿಂದ ಆಗ ಲಿಂಗಮುದ್ರೆ ಸ್ಥಾಪಿ
೧೪ ತಕೆ ಸರಪಾರದಾರ ಮಹಲಿಂಗಯ್ಯನ ಕಳುಹಿ
೧೫ ಹಾಕಿಸಿಕೊಟ್ಟರು ಹೀಗೆ ಮಾಡಿ, ಮುಂದೆ ಚೆಂದ್ರ
೧೬ ಸೂರ್‍ಯ್ಯ ಯಿಹಾ ಪರಿಯಂತ್ರ ಯಾರಾದರೂ
೧೭ ಹಸ್ತಾಂತರ ಯಾಚಉಕಿ ಅಧಿಕಾರಪ್ಪ ಮಾಡುವಲ್ಲಿಯಾರಾ
೧೮ ದರೂನಾಗ ಜೆರಿಯ ಉದಕವ ಸರ್ವಜಾತಿದರ್ಬ್ಬದ
೧೯ ವರು . . . . . . . . . . . . . . .
೨೦ . . . . . . . . . . . . . . .
೨೧ . . . . . . . . . . . . . . .
೨೨ . . . . . . . . . . . . . . .
೨೩ . . . . . . . . . . . . . . .
೨೪ . . . . . . . . . . . . . . .(ತ್ರುಟಿತ)

ಈ ಶಾಸನಪಾಠದ ಆಶಯ, ತ್ರುಟಿತಭಾಗವನ್ನು ಬಿಟ್ಟು, ಸರಳವೂ ಆಗಿರುವಂತೆ ಸ್ಪಷ್ಟವಾಗಿದೆ. ಚೌಕಿಚನ್ನಬಸಪ್ಪನವರು ಹೊರಡಿಸಿದ ಖಾಸಗಿ ಶಿಲಾಶಾಸನ ಇದಾಗಿದೆ. ಸ್ಥಳೀಯವಾಗಿ ಇಂದಿಗೂ ನೋಡಸಿಗುವ 'ನಾಗರಝುರಿ' ಜಲಾಶಯದ ನೀರಿನ ಬಳಕೆಗೆ ಸಂಬಂಧಿಸಿದೆ. ಸಕಲ ಜಾತಿಧರ್ಮದವರೂ ಅದನ್ನು ಬಹುಕಾಲದಿಂದಲೂ ಬಳಸುತ್ತ ಬಂದಿದ್ದರು. ಅದಕ್ಕೊಂದು ಚೌಕಿ ಕಟ್ಟಿಕೊಂಡಾಗ ತುಸು ಅನನುಕೂಲವಾಗಿರ ಬಹುದು. ನಾಗಜರಿ ನೀರನ್ನು ಮಂದಿ (ಜನಸಾಮಾನ್ಯರು) ಬಳಸುವುದಕ್ಕೆ ಬಿಟ್ಟು ಉಳಿದ ಜಾಗಕ್ಕೆ ಲಿಂಗಮುದ್ರೆ ಹಾಕಿ ಕೊಡಿರೆಂದು ಸಮಸ್ತಗುರಿಕಾರರಿಗೆ ಹೇಳಿದರು. ಆಮೇಲೆ ಸ್ಥಳ ಸ್ವಲ್ಪವಾಗುತ್ತದೆ ಯೆಂಬುದರಿಂದಾಗಿ ಸಕಲ ಜಾತಿಯವರೂ ನೀರನ್ನು ಬಳಸ ಬಹುದೆಂದು ತೀರ್ಮಾನಿಸಿದರು. ಇದು ತುಂಬ ಸ್ವಾರಸ್ಯಕರ ಸಂಗತಿ. ಸಾಂಸ್ಕೃತಿಕ ಇತಿಹಾಸದಲ್ಲಿ ಈ ಬಗೆಯ ಸಂಗತಿಗಳು ನಮ್ಮ ಕುತೂಹಲವನ್ನು ಇನ್ನಷ್ಟು ಕೆರಳಿಸುತ್ತದೆ.

ಡಬ್ಲ್ಯು.ವಿ.ಎಸ್.ನರಸಿಂಹಮ್ *

# ಬಯಕಾರ ರಾಮಪ್ಪನ ೧೬ನೇ ಶತಮಾನದ ಕೆಲವು ಹೊಸ ಶಾಸನಗಳು

ಭಾರತೀಯ ಪುರಾತತ್ವ ಸರ್ವೇಕ್ಷಣ ಇಲಾಖೆಯ ಪರವಾಗಿ ನಡೆಸಿದ ಕ್ಷೇತ್ರ ಕಾರ್ಯದಲ್ಲಿ ಹೊಸಪೇಟೆ ತಾಲೂಕು ಮರಿಯಮ್ಮನ ಹಳ್ಳಿ ಫಿರ್ಕಾದಲ್ಲಿಯ ಐದು ಗ್ರಾಮಗಳಲ್ಲಿ, ಆ ಗ್ರಾಮಗಳ ಕೆರೆ ಕೋಡಿಯ ಹತ್ತಿರ ಕೆರೆಗಳ ಬಗ್ಗೆ ವಿವರಿಸುವ ಐದು ಅಪ್ರಕಟಿತ ಶಾಸನಗಳು ನನಗೆ ಕಂಡು ಬಂದಿವೆ. ಆ ಶಾಸನಗಳು ಬಯಕಾರ ರಾಮಪ್ಪನೆಂಬುವ ಒಬ್ಬನೇ ವ್ಯಕ್ತಿಯು, ಅವರ ರಕ್ತ ಸಂಬಂಧಿಕರ ಹೆಸರಿನಲ್ಲಿ ಅವರಿಗೆ ಪುಣ್ಯವಾಗಬೇಕೆಂದು ಶಕ ವರ್ಷ ೧೪೬೧ (ಕ್ರಿ.ಶ. ೧೫೩೯)ರಲ್ಲಿ ಕಟ್ಟಿಸಿದ ಕೆರೆಗಳ ಪ್ರಸ್ತಾವನೆ ಇದೆ. ಪ್ರತಿಯೊಂದು ಶಾಸನದಲ್ಲಿ ಎರಡು ಭಾಗಗಳಿದ್ದು, ಮೊದಲನೆಯ ಭಾಗದಲ್ಲಿ ಕೆರೆಯ ಬಗ್ಗೆ ವಿವರಗಳು ಕನ್ನಡದಲ್ಲಿದೆ. ಎರಡನೆಯ ಭಾಗದಲ್ಲಿ ಬಯಕಾರ ರಾಮಪ್ಪನ ವಂಶಾವಳಿ ಮತ್ತು ಅವನ ಧರ್ಮ ಕಾರ್ಯಗಳ ವಿವರಣೆ ಇದೆ. ಎಲ್ಲಾ ಶಾಸನಗಳ ಎರಡನೆಯ ಭಾಗವು ಒಂದೇ ಮಾದರಿಯಲ್ಲಿ ಇದ್ದು ಕನ್ನಡ ಲಿಪಿಯಲ್ಲಿ ಬರೆದ ಸಂಸ್ಕೃತ ಭಾಷೆಯನ್ನು ಕಾಣಬಹುದು.

ಬಯಕಾರ ರಾಮಪ್ಪನು ಅಚ್ಯುತದೇವರಾಯನ ಕಾಲದಲ್ಲಿ ಕೊಂಡವೀಡು ರಾಜ್ಯದ ಅಧಿಪತಿಯಾಗಿದ್ದನು. ಶಾಸನಗಳು ಎರಡನೇ ಭಾಗವಾದಂತಹ ಪ್ರಶಸ್ತಿಯಲ್ಲಿ ಈತ ಕೆಲವು ಬ್ರಾಹ್ಮಣ ಅಗ್ರಹಾರಗಳನ್ನು ಸ್ಥಾಪಿಸಿದನೆಂದು, ಅವುಗಳಲ್ಲಿ ದೇವಸ್ಥಾನಗಳನ್ನು, ಕೆರೆಗಳನ್ನು ಕಟ್ಟಿಸಿದನೆಂದು ತಿಳಿದು ಬರುತ್ತದೆ.

ಈತ ಒಟ್ಟು ೧೬ ಕೆರೆಗಳನ್ನು ಕಟ್ಟಿಸಿದನಂತೆ, ಅವುಗಳು ಈ ರೀತಿಯಾಗಿವೆ:

೧ ಬಾಚ ಸಮುದ್ರಂ
೨ ರಾಮ ಸಮುದ್ರಂ
೩ ಅಕ್ಕ ಸಮುದ್ರಂ
೪ ಕಾಮ ಸಮುದ್ರಂ
೫ ಅಮ್ಮ ಸಮುದ್ರಂ
೬ ವೀರ ಸಮುದ್ರಂ
೭ ಅಚ್ಯುತೇಂದ್ರ ಸಮುದ್ರಂ
೮ ವೆಂಕಟೇಂದ್ರ ಸಮುದ್ರಂ
೯ ಪಿನಲಕ್ಕ ಸಮುದ್ರಂ
೧೦ ಚಿನತಿಪ್ಪ ಸಮುದ್ರಂ
೧೧ ಪೆದಲಕ್ಕ ಸಮುದ್ರಂ
೧೨ ಅಚ್ಯುತಮ್ಮ ಸಮುದ್ರಂ
೧೩ ಲಿಂಗಾಲಯ್ಯ ತಟಾಕಂ
೧೪ ವೆಂಕಟಯ್ಯ ತಟಾಕಂ
೧೫ ಪೆದತಿಮ್ಮ ಸಮುದ್ರಂ
೧೬ ಚಿನಬಾಚ ಸಮುದ್ರಂ

ಈವರೆಗೆ ಪ್ರಕಟಿತವಾದ ಬಯಕಾರ ರಾಮಪ್ಪ ಶಾಸನಗಳಿಂದ ಈಗಾಗಲೇ ತಿಳಿದು ಬಂದ ಮಾಹಿತಿಗಳು:

ಸಂಡೂರು ತಾಲೂಕಿನ ಚಿಕ್ಕಕೆರೆಯಾಗಿನ ಹಳ್ಳಿಯ ಕೆರೆ, ಅವನ ತಾಯಿ ಹಿರಿಯ ಲಕ್ಕರಸಮ್ಮನಿ ಪುಣ್ಯವಾಗಬೇಕೆಂದು ಅವರ ಹೆಸರಿನಲ್ಲಿ ಕಟ್ಟಿಸಿದ ಹಿರಿಯಲ ಸಮುದ್ರದ ಕೆರೆಯೆಂದು,[2] (ಕ್ರಿ.ಶ. ೧೫೩೯) ಸಂಡೂರ

* ಅಸಿಸ್ಟೆಂಟ್ ಆರ್ಕಿಯಲಾಜಿಸ್ಟ್, ಆರ್ಕಿಯಲಾಜಿಕಲ್ ಸರ್ವೆ ಆಫ್ ಇಂಡಿಯಾ, ಕಮಲಾಪುರ

1. ಎ.ಆರ್.ಐ.ಇ., ೧೯೧೫, ಭಾಗ II ಪ್ಯಾರಾ. ೫೧.ಮತ್ತು ಎಸ್.ಐ.ಐ., ಸಂಪುಟ IX, ಭಾಗ II ಸಂ. ೫೯೩ ಮತ್ತು ೬೬೦
2. ಎಸ್.ಐ.ಐ; ಸಂಪುಟ IX, ಭಾಗ II ಸಂ. ೫೯೩

ತಾಲೂಕಿನ ಹುಲಿಕುಂಟ ಗ್ರಾಮದ ಕೆರೆ, ಅವನ ಮಗಳು ಅಚ್ಯುತಮ್ಮನಿಗೆ ಪುಣ್ಯವಾಗಬೇಕೆಂದು ಆಕೆಯ ಹೆಸರಿನಲ್ಲಿ ಕಟ್ಟಿಸಿದ. ಅಚ್ಯುತಮ್ಮಸಮುದ್ರದ ಕೆರೆಯೆಂದು,[3] ಹೊಸಪೇಟೆ ತಾಲೂಕಿನ ಮಂಗಿಮಾವಿನಹಳ್ಳಿ ಶಾಸನದಿಂದ ಅವನ ಮಗಳು ರಾಮಮ್ಮನಿಗೆ ಪುಣ್ಯವಾಗಬೇಕೆಂದು ಆಕೆಯ ಹೆಸರಿನಲ್ಲಿ ಕಟ್ಟಿಸಿದ ರಾಮಸಮುದ್ರದ ಕೆರೆ ಎಂದು[4] (ಕ್ರಿ.ಶ.೧೫೪೪) ತಿಳಿದು ಬರುತ್ತದೆ.

ಮೇಲೆ ಕಂಡು ಬಂದ ಅಪ್ರಕಟಿತ ಶಾಸನಗಳಿಂದ ಬಯಕಾರ ರಾಮಪ್ಪನು ಕಟ್ಟಿಸಿದ ೧೬ ಕೆರೆಗಳಲ್ಲಿ ಇನ್ನು ನಾಲ್ಕು ಕೆರೆಗಳ ಬಗ್ಗೆ ವಿವರಗಳು ತಿಳಿದು ಬರುತ್ತದೆ. ಪೋತಲಕಟ್ಟೆ ಗ್ರಾಮದ ಕೆರೆ ಶಾಸನದಿಂದ ಅದು ಅವನ ಮಗ ಅಕಪ್ಪನಿಗೆ ಪುಣ್ಯವಾಗಬೇಕೆಂದು, ಅವನ ಹೆಸರಿನಲ್ಲಿ ಕಟ್ಟಿಸಿದ ಅಕಸಮುದ್ರದ ಕೆರೆ ಎಂದು (ಕ್ರಿ.ಶ.೧೫೩೯), ತಿಮ್ಮಲಾಪುರದ ಜಂಭಯ್ಯನಕೆರೆ ಶಾಸನದಿಂದ ಅದು ಅವನ ಚಿಕ್ಕಪ್ಪ ಬಾಚರಸಯ್ಯನಿಗೆ ಪುಣ್ಯವಾಗಬೇಕೆಂದು ಅವರ ಹೆಸರಿನಲ್ಲಿ ಕಟ್ಟಿಸಿದ ಬಾಚಸಮುದ್ರದ ಕೆರೆ ಎಂದು, (ಕ್ರಿ.ಶ.೧೫೩೯), ಒಂಟಿಗೋಡು ತಾಂಡದ ಕೆರೆ ಶಾಸನದಿಂದ ಅದು ಅವನ ಹೆಂಡತಿ ವೀರಮ್ಮನಿಗೆ ಪುಣ್ಯವಾಗಬೇಕೆಂದು ಅವರ ಹೆಸರಿನಲ್ಲಿ ಕಟ್ಟಿದ ವೀರಸಮುದ್ರದ ಕೆರೆ ಎಂದು (ಕ್ರಿ.ಶ.೧೫೩೯), ಮತ್ತು ನಂದಿಬಂಡೆಯ ಕೆರೆಯ ಶಾಸನದಿಂದ ಅದು ಅವನ ತಂದೆ ಹಿರಿಯ ತಿಮ್ಮರಸಯ್ಯನಿಗೆ ಪುಣ್ಯವಾಗಬೇಕೆಂದು ಅವರ ಹೆಸರಲ್ಲಿ ಕಟ್ಟಿಸಿದ ತಿಮ್ಮಸಮುದ್ರದ ಕೆರೆ (ಕ್ರಿ.ಶ.೧೫೩೯) ಎಂದು ತಿಳಿದುಬರುತ್ತದೆ.

ಹೊಸಪೇಟೆ ತಾಲೂಕಿನ ಹರಪನಹಳ್ಳಿಯ ಮಾರುತಿ ಕೆರೆಯ ಸಮೀಪ ದೊರೆತ ಶಾಸನದ ಮೇಲ್ಭಾಗವು ತುಂಡಾಗಿದ್ದು ಕೆಳಭಾಗದ ೧೯ ಸಾಲುಗಳು ಮಾತ್ರ ಲಭ್ಯವಿರುವುದರಿಂದ ಆ ಶಾಸನದಿಂದ ಆ ಕೆರೆಯ ಕುರಿತು ಮಾಹಿತಿಗಳು ತಿಳಿದು ಬರುತ್ತಾ ಇಲ್ಲ.

ಬಯಕಾರ ರಾಮಪ್ಪನ ವಂಶಾವಳಿ ಬಗ್ಗೆ ಎರಡು ವಿಷಯಗಳು ಬೆಳಕಿಗೆ ಬರುತ್ತಿವೆ. ಒಂಟಿಗೋಡು ತಾಂಡಾದ ಶಾಸನದಿಂದ ಅವನ ಹೆಂಡತಿಯ ಹೆಸರು ವೀರಮ್ಮ ಎಂದು ಪೋತಲಕಟ್ಟೆಯ ಕೆರೆಯ ಶಾಸನದಿಂದ ಅಕಪ್ಪ ಅವನ ಇನ್ನೊಬ್ಬ ಮಗ ಎಂದು ತಿಳಿದು ಬರುತ್ತದೆ.

ಅಕ್ಕಪಕ್ಕದ ಹಳ್ಳಿಗಳಲ್ಲಿ ಕ್ಷೇತ್ರಕಾರ್ಯ ಮುಂದುವರೆಸಿದಾಗ ಬಯಕಾರ ರಾಮಪ್ಪ ಕಟ್ಟಿಸಿದ ಉಳಿದ ಕೆರೆಗಳ ಬಗ್ಗೆ ವಿವರಿಸುವ ಶಾಸನಗಳು ಲಭ್ಯವಾಗುವ ಸಾಧ್ಯತೆ ಇದೆ.

(ಈ ಪ್ರಬಂಧವನ್ನು ಮಂಡಿಸಲಿಕ್ಕೆ ಅನುಮತಿಕೊಟ್ಟ ಭಾರತೀಯ ಪುರಾತತ್ವ ಸರ್ವೇಕ್ಷಣ ಇಲಾಖೆಯ ಬೆಂಗಳೂರು ವಲಯದ ಪುರಾತತ್ವ ಅಧೀಕ್ಷಕರಿಗೆ (ಎಸ್.ಎ.) ನನ್ನ ಕೃತಜ್ಞತೆಗಳು).

3. ಅದೇ, ಸಂ. ೬೬೦
4. ಎ.ಆರ್.ಐ.ಇ., ೧೯೧೪, ಭಾಗ I ಸಂ.ಬಿ ೫೧೪ ಮತ್ತು ೫೧೬.

ಎ.ಜಯಂತಿ *

# ಗುಮ್ಮನಾಯಕನ ಪಾಳೆಯದ ಪಾಳೆಯಗಾರರ ಬಾಗೇಪಲ್ಲಿ ತಾಮ್ರಶಾಸನ

ಕೋಲಾರ ಜಿಲ್ಲೆಯ ಬಾಗೇಪಲ್ಲಿಯ ಶ್ರೀ ನಂಜುಡ ರೆಡ್ಡಿ ಯವರಲಿದ್ದ ಒಂದು ತಾಮ್ರ ಶಾಸನವು ಇತ್ತೀಚೆಗೆ ನನಗೆ ದೊರೆಯಿತು. ಆ ತಾಮ್ರಶಾಸನವು ೧೫ ಸೆಂ.ಮಿಾ. ಅಗಲ ೨೫ ಸೆಂ.ಮಿಾ ಉದ್ದವಾಗಿದೆ. ಅದರ ಎರಡೂ ಕಡೆಗಳಲ್ಲಿ ಅಕ್ಷರಗಳನ್ನು ಕೊರೆಯಲಾಗಿದೆ. ಮೊದಲ ಭಾಗದಲ್ಲಿ ೩೩ ಸಾಲುಗಳು ಹಾಗೂ ಎರಡನೆಯ ಭಾಗದಲ್ಲಿ ೧೦ ಸಾಲುಗಳಿವೆ. ಶಾಸನದ ಮೇಲ್ಭಾಗದಲ್ಲಿ ಸೂರ್ಯ ಹಾಗೂ ಚಂದ್ರರ ಚಿತ್ರಗಳಿವೆ. ಕೊನೆಯಲ್ಲಿ ಶ್ರೀ ನಾರಸಿಂಹಾ ಎಂಬ ಒಪ್ಪವಿದೆ

ಈ ತಾಮ್ರಶಾಸನದ ಲಿಪಿ ಹಾಗೂ ಭಾಷೆ ತೆಲುಗು. ಕಾಲ ಶಕ ವರ್ಷ ೧೬೪೭ ಕ್ರೋಧಿನಾಮ ಸಂವತ್ಸರ, ಕಾರ್ತಿಕ ಶುದ್ಧ ೧೨. ಅಂದರೆ ಕ್ರಿ.ಶ.೧೭೨೪, ಅಕ್ಟೋಬರ್ ೧೮ ಭಾನುವಾರಕ್ಕೆ ಸರಿಹೊಂದುತ್ತದೆ. ಈ ಶಾಸನವು ಕೋಲಾರದ ಕಡೆಯ ಬಾಗೇಪಲ್ಲಿ, ಕಂದಕೂರು, ಗೋರಂಟಲ, ಮುಂತಾದ ಪ್ರದೇಶಗಳನ್ನು ಆಳುತ್ತಿದ್ದ ಗುಮ್ಮನಾಯಕನ ಪಾಳೆಯದ ಪಾಳೆಯಗಾರರಾದ ಕದಿರಪ್ಪ ನಾಯಕನ ಮಗನಾದ ನಾರಸಿಂಹ ನಾಯಕರು ನೀಡಿದ ದಾನದ ವಿವರಗಳನ್ನು ನೀಡುತ್ತದೆ.

**ಶಾಸನ ಪಾಠ**

**ಮೊದಲನೆಯ ಭಾಗದ ಬರಹ.**

೧. ಸ್ವಸ್ತಿ ಶ್ರೀ ವಿಜಯಾಭ್ಯುದಯ ಶಾಲಿವಾಹ
೨. ನ ಶಕವರ್ಷಂಬ್ಬುಲು ೧೬೪೭ ಅಗುನ ನೇಟಿ
೩. ಕ್ರೋಧಿ ನಾಮಸಂವ್ವತ್ಸರ ಕಾರ್ತಿಕ ಶುದ್ಧ
೪. ೧೨ ಪುಣ್ಯಕಾಲ ಮಂದ್ದು ಶ್ರೀಮದ್ವೇದ ಮಾರ್ಗಪ್ರ
೫. ತಿಷ್ಠಾಪನಾ ಚಾರ್ಯುಲಯಿನವುಭಯ ವೇದಾಂತಾ
೬. ಚಾರ್ಯುಲಯಿನ ಆತ್ರೇಯ ಗೋತ್ರ ಪವಿತ್ರುಲಯಿನ
೭. ಯಜುಶ್ಶಾಖಾಧ್ಯಯುಲಯಿನ ಕೊಳ್ಳಾರು ವೆಂಕ
೮. ಟಾದ್ರಯ್ಯಂಗಾರಿ ಪೌತ್ರುಲಯಿನ ತಿರುಮಲಾ ಚಾ
೯. ರ್ಯುಲಯ್ಯವಾರ್ಲ್ಲಿ ಪುತ್ರುಲಯಿನ ವೆಂಕಟಾಚಾರ್ಯುಲ
೧೦. ಯ್ಯವಾರ್ಲ್ಲುಕು ಶ್ರೀಮನ್ಮಹಾ ನಾಯಂಕಾ ಚಾರ್ಯುಲಯಿ

*ನಂ.೫/೧, ೬ನೇ ಅಡ್ಡರಸ್ತೆ, ಆಜಾದ್ ನಗರ, ಬೆಂಗಳೂರು ೫೬೦೦೧೮,

೧೧. ನ ಅಚ್ಯುತ ಗೋತ್ರ ಪವಿತ್ರುಲಯಿನ ಧನುಶ್ಯಾಖಾಧ್ಯ

೧೨. ಯುಲಿಯಿನ ಗುಂಮ್ಮಿನಾಯನಿ ಕದಿರಪ್ಪ ನಾಯನಿ

೧೩. ಮ್ಮಾ ನಾಯನಿವಾರಿ ಪೌತ್ರುಲಯಿನ ಕದಿರಪ್ಪ ನಾಯನಿ

೧೪. ವಾರಿ ಪುತ್ರುಲಯಿನ ನಾರಸಿಂಹನಾಯನಿವಾರು ಸಮ

೧೫. ರ್ಪಿಂಚ್ಚಿನ ಗ್ರಾಮ ಭೂದಾನ ಧರ್ಮ ತಾಮ್ರಶಾಸನ ಕ್ರಮ ಮೆಲ್ಲ

೧೬. ನ್ನನು ಮಾ ನಾಯಂಕಾನಕೂ ಚೆಲ್ಲೆ ಬಾಗೆಪಲ್ಲೆ ಸ್ಥಳಂ

೧೭. ಊ ನಡುಸ್ತಾವುನ್ನ ದಾಸಯಗಾರಿಪಲ್ಲೆನು ಇಂದ್ಯುರಾ

೧೮. ಚವಾರಿಪಲ್ಲೆ ಚೆರುವು ಕಿಂದ್ದ ನೀರಾರಂಭಂ ಮಡಿ

೧೯. ಖ/೧ ಸಹಿತಮುಗಾ ಸಹಿರಣ್ಯೋದಕ ದಾನಧಾರಾ

೨೦. ಪೂರ್ವಕಮುಗಾ ಮಾ ಇಷ್ಟ ದೈವಂ ಖಾದ್ರಿ ನೃಸಿಂಹ್ಯರ್ಪಿ

೨೧. ತಮುಗಾ ಸಮರ್ಪಿಂಚ್ಚಿ ನಾರಂಗನುಕ ಇಪಲ್ಲೆಕು ಚೆಲ್ಲೆ

೨೨. ನಿಧಿ ನಿಕ್ಷೇಪ ಜಲಪಾಷಾಣ ಆಕ್ಷೇಣ ಅಗಾಮಿ ಸಿದ್ದ

೨೩. ಸಾಧ್ಯಂ ಬ್ಬುಲಿ ನೇಟಿ ಅಷ್ಟಭೋಗ ತೇಜಸ್ವಾಮ್ಯ ಮು

೨೪. ಲು ಫಲವೃಕ್ಷಮುಲು ಸಕಲ ಸುವರ್ಣದಾಯ

೨೫. ಮುಲು ದಾನಾಧಿ ವಿಕ್ರಯ ವಿನಿಮಯ ಭೋಗ್ಯ

೨೬. ಯೋಗ್ಯ ಮೋನಟ್ಟುಗಾನು ಆಚಂದ್ರಾರ್ಕ ಸ್ಥಾಯಿಗಾನು

೨೭. ಮೀ ಪುತ್ರ ಪೌತ್ರ ಪಾರಂಪರ್ಯಂಗಾ ಅನುಭವಿಂಚಗಲ

೨೮. ವಾರನಿತ್ರಿಪುರುಷೋದ್ದೇಶ ಮುಗಾ ತ್ರಿಕರಣ ಶುದ್ಧಿಗಾ

೨೯. ತ್ರಿವಾಚಕಂಗಾ ಸಮರ್ಪಿಂಚ್ಚಿನ ಗ್ರಾಮ ಭೂದಾನಧ

೩೦. ರ್ಮ ತಾಮ್ರ ಶಾಸನಂ॥ ದಾನ ಫಾಲನ ಯೋರ್ಮಧ್ಯೇ ದಾ

೩೧. ನಾ ಚ್ಛ್ರೇಯೋನು ಫಾಲನಂ । ದಾನಾತ್ಸರ್ಗ

೩೨. ಮ ವಾಪ್ನೋತಿ ಫಾಲನಾದಚ್ಯುತಂಪದಂ

೩೩. ಸ್ವದತ್ತಾದ್ವಿಗುಣಂ ಪುಣ್ಯಂ ಪರದತ್ತಾನು ಪಾಲನಂ ।

**ಎರಡನೆಯ ಭಾಗದ ಬರಹ**

೩೪. ಪರದತ್ತಾಪ ಹಾರೇಣ ಸ್ವದತ್ತಂ ನಿಷ್ಫಲಂ ಭವೇತ್

೩೫. ಸ್ವದತ್ತಾಂಪರದತ್ತಾಂ ವಾಯೋಹರೇಚ್ಚ ವಸುಂ

೩೬. ಧರಾಂ । ಷಷ್ಟಿರ್ವರ್ಷ ಸಹಸ್ರಾಣಿ ವಿಷ್ಟಾಯಾ

೩೭. ಂ ಜಾಯತೇ ಕ್ರಿಮಿಃ । ಏಕೈವ ಭಗಿನೀ ಲೋಕೇ ಸರ್ವೆ

೩೮. ಷಾ ಮೇವ ಭೂಭುಜಾಂ । ನಭೋಜ್ಯಾನ ಕರ

೩೯. ಗ್ರಾಹ್ಯಾವಿಪ್ರದತ್ತಾವಸುಂಧರಾ । ಮದ್ಯಂ

೪೦. ಶಜಾಪ್ಪರ ಮಹೀಪತಿ ವಂಶಜಾ ವಾಯೋ

೪೧. ಭೂಮಿ ಫಾಸ್ಸತತಮುಜ್ವಲ ಧರ್ಮ ಚಿತ್ತಾಃ

೪೨. ಮದ್ಧರ್ಮ ಮೇವ ಸತತಂ ಪರಿಫಾಲಯಂತಿಃ

೪೩. ತತ್ಪಾದುಕದ್ವಯ ಮಹಂ ಶಿರಸಾನಮಾಮಿ। ಶ್ರೀ ನಾರಶಿಂಹ್ಯಾ

**ಶಾಸದ ಸಾರಾಂಶಃ**

ಶಾಲಿವಾಹನ ಶಕವರ್ಷ ೧೬೪೭ ಕ್ರೋಧಿನಾಮ ಸಂವತ್ಸರ ಕಾರ್ತಿಕ ಶುಧ್ದ ೧೨(ಅಂದರೆ ಕ್ರಿ.ಶ. ೧೭೨೪ ಅಕ್ಟೋಬರ್ ೧೮) ಭಾನುವಾರದಂದು ಶ್ರೀಮದ್ ವೇದ ಮಾರ್ಗ ಪ್ರತಿಷ್ಠಾಪನಾಚಾರ್ಯ, ಉಭಯ ವೇದಾಂತಾ ಚಾರ್ಯ, ಆತ್ರೇಯ ಗೋತ್ರ ಪವಿತ್ರನಾದ ಯಜುಶ್ಶಾಖೆಗೆ ಸೇರಿದ ಕೊಳ್ಳಾರು ವೆಂಕಟಾದ್ರಿ ಅಯ್ಯಂಗಾರಿಯ ಮೊಮ್ಮಗ ತಿರುಮಲಾಚಾರ್ಯನ ಮಗನಾದ ವೆಂಕಟಾಚಾರ್ಯರಿಗೆ ಶ್ರೀ ಮನ್ಮಹಾನಾಯಕಾಚಾರ್ಯರೂ ಅಚ್ಯುತ ಗೋತ್ರ ಧನುಶ್ಶಾಖೆಗೆ ಸೇರಿದ ಗುಮ್ಮಿನಾಯಕ ಕದಿರಪ್ಪನಾಯಕ ತಿಮ್ಮಾನಾಯಕರ ಮೊಮ್ಮಗ ಕದಿರಪ್ಪನಾಯಕನ ಮಗ ನಾರಸಿಂಹನಾಯಕರು ಸಮರ್ಪಿಸಿದ ಭೂದಾನ ಧರ್ಮ ತಾಮ್ರ ಶಾಸನದ ಕ್ರಮವೆಂತೆಂದರೆ,ನಮ್ಮ ಪಾಳೆಯಪಟ್ಟಿಗೆ ಸೇರಿದ ಬಾಗೇಪಲ್ಲಿ ಸ್ಥಳದ ದಾಸಯುಗಾರಿಹಳ್ಳಿಗೆ ಸೇರಿದ ರಾಚವಾರಿಹಳ್ಳಿಯ ಕೆರೆಯ ಕೆಳಗಿರುವ ಗದ್ದೆ ೧ ಖಂಡುಗ ಬೆಳೆ ಬರುವ ಗದ್ದೆಯನ್ನು ಹಿರಣ್ಯೋದಕ ಸಹಿತವಾಗಿ, ದಾನ ಧಾರಾಪೂರ್ವಕವಾಗಿ ನಮ್ಮ ಇಷ್ಟದೈವ ಖಾದ್ರಿ ನರಸಿಂಹನಿಗೆ ಸಮರ್ಪಿಸಿದ್ದೇನೆ. ಅದಕ್ಕೆ ಸೇರಿಥ ನಿಧಿ ನಿಕ್ಷೇಪ ಜಲಪಾಷಾಣ. ಆಕ್ಷೀಣ ಅಗಾಮಿ ಸಿದ್ಧ ಸಾಧ್ಯವೂ ಸೇರಿದಂತೆ ಅದನ್ನು ದಾನ, ಮಾರಾಟ, ವಿನಿಮಯ, ಭೋಗ್ಯ ಮುಂತಾದ ಯಾವುದನ್ನು ಬೇಕಾದರೂ ಮಾಡಿಕೊಳ್ಳಬಹುದೆಂಬಂತೆ.ಆ ಚಂದ್ರಾರ್ಕ ಸ್ಥಾಯಿಯಾಗಿ ನೀವು ನಿಮ್ಮ ಪುತ್ರ, ಪೌತ್ರ ಪಾರಂಪರ್ಯವೂ ಅನುಭವಿಸಿ ಕೊಳ್ಳಬಹುದು ಎಂದು, ತ್ರಿಪುರುಷ, ತ್ರಿಕರಣ (ಮನಸ್ಸು, ಮಾತು, ಮತ್ತು ದೇಹ) ತ್ರಿವಾಚಕ (ತನು, ಮನ, ಧನ) ಪೂರ್ವಕವಾಗಿ ಸಮರ್ಪಿಸಿದರು. ಮುಂದೆ ಶಾಪಾಶಯಗಳಿವೆ. ಕೊನೆಯಲ್ಲಿ ನಾರಸಿಂಹಾ ಎಂದು ನಾರಸಿಂಹನಾಯಕರ ಬಪ್ಪ ಅಂದರೆ (ಹಸ್ತಾಕ್ಷರ)ಸಹಿ ಇದೆ.

**ಐತಿಹಾಸಿಕ ಅಂಶಗಳು.**

ಈ ಶಾಸನದಲ್ಲಿ ಉಲ್ಲೇಖಿತವಾಗಿರುವ ಗುಮ್ಮಿನಾಯಕನ ಪಾಳೆಯಗಾರರು ಬಾಗೇಪಲ್ಲಿ, ಗೋರಂಟಲ, ಕಂದಕೂರು ಮುಂತಾದ ಪ್ರಾಂತ್ಯಗಳನ್ನು ಆಳುತ್ತಿದ್ದರು. ಈ ಪಾಳೆಯ ಪಟ್ಟಿನ ರಾಜಧಾನಿ ಕಲ್ಯಾಣನಗರವೆಂದು ಹೆಸರಾಗಿತ್ತು. ಈ ಪಾಳೆಯಗಾರರ ವಂಶದಲ್ಲಿ ಒಟ್ಟು ೨೫ಜನ ಪಾಳಯಗಾರರು ಸುಮಾರು ೫೬೦ ವರ್ಷಗಳ ಕಾಲ ಕ್ರಿ.ಶ.೧೨೪೩ ರಿಂದ ೧೮೦೩ರ ವರೆಗೆ ಆಳ್ವಿಕೆ ನಡೆಸಿದರೆಂದು ತಿಳಿಯುತ್ತದೆ. ಈ ವಂಶದ ೪ನೆಯ ಪಾಳೆಯಗಾರನಾದ ಗುಮ್ಮಿನಾಯಕನ ಕಾಲದಿಂದ ಇವರು ವಿಜಯ ನಗರದ ಮಾಂಡಳಿಕರಾಗಿ ಆಳ್ವಿಕೆ ನಡಸಿದರು. ಈ ವಂಶದ ಏಳನೆಯ ದೊರೆಯಾದ ಹಿರೀಕದಿರಪ್ಪ ನಾಯಕನ ಕಾಲದಲ್ಲಿ. ಈ ಪಾಳೆಯಕ್ಕೆ ಒಂದು ಸಂಸ್ಥಾನದ ಗೌರವ ಲಭಿಸಿತು. ವಿಜಯನಗರದ ಪತನಾನಂತರದ ಕಾಲದಲ್ಲಿ ಈ ಪಾಳಯವು ಹೈದರಾಬಾದ್‌ನ ನಿಜಾಮ, ಮರಾಠರು, ಮೈಸೂರ್‌ನ ಹೈದರಾಲಿ, ನಂತರ ಬ್ರಿಟೀಷರು ಮುಂತಾದವರ ಆಕ್ರಮಣ ಕ್ಕೊಳಗಾಗಿ ಸಂಪೂರ್ಣವಾಗಿ ಹರಿದು ಹಂಚಿ ಹೋಯಿತು.

ಈ ಶಾಸನದಲ್ಲಿ ಉಲ್ಲೇಖಿತವಾಗಿರುವ ದಾಸಯಗಾರಿ ಪಲ್ಲಿ, ರಾಚವಾರಿಪಲ್ಲಿ, ಮುಂತಾದ ಊರುಗಳನ್ನು ಈಗಲೂ ನಾವು ಬಾಗೇಪಲ್ಲಿಯ ಬಳಿ ನೋಡಬಹುದು. ಈ ಶಾಸನದ ಪ್ರಕಾರ ದಾನವನ್ನು ಪಡೆದ ವೆಂಕಟಾಚಾರ್ಯರ ವಂಶಜರು ಈಗಲೂ ದಾಸಯಗಾರಿ ಪಲ್ಲಿಯಲ್ಲಿದ್ದಾರೆ. ಅವರು ತಮ್ಮ ಪೂರ್ವಿಕರು ದಾನವಾಗಿ ಪಡೆದಿದ್ದ ಗದ್ದೆಯನ್ನು ನಂಜುಂಡ ರೆಡ್ಡಿಯವರಿಗೆ ಮಾರಿದಾಗ, ಈ ತಾಮ್ರ ಶಾಸನವನ್ನೂ ಸಹ ಕೊಟ್ಟಿದ್ದರಿಂದ ಆ ಶಾಸನವು ನಂಜುಂಡರೆಡ್ಡಿಯವರ ಬಳಿಯಲ್ಲಿ ಸೇರಿತೆಂಬುದಾಗಿ ತಿಳಿದುಬರುತ್ತದೆ.

(ನನ್ನ ಅಧ್ಯಯನಕ್ಕಾಗಿ ತಾಮ್ರಶಾಸನವನ್ನು ನೀಡಿದ ಶ್ರೀ ನಂಜುಂಡ ರೆಡ್ಡಿಯವರಿಗೆ ಮತ್ತು ಶಾಸನ ಪರಿಷ್ಕರಿಸುವಲ್ಲಿ ನೆರವು ನೀಡಿದ ಎಂ. ಜಿ. ಮಂಜುನಾಥ್‌ರವರಿಗೆ ನನ್ನ ಕೃತಜ್ಞತೆಗಳು).

ವೇಮಗಲ್ ಸೋಮಶೇಖರ್ *

# ಬೆಂಗಳೂರಿನ ದೊಡ್ಡ ಬಸವಣ್ಣ ದೇವಾಲಯ ಮುಂದಿನ ಎರಡು ಅಪ್ರಕಟಿತ ಶಾಸನಗಳು

ಬೆಂಗಳೂರು ನಗರದ ಬಸವನಗುಡಿಯಲ್ಲಿರುವ ದೊಡ್ಡ ಬಸವಣ್ಣನ ದೇವಾಲಯದ ಮುಂಭಾಗದಲ್ಲಿ ಸಾಕಷ್ಟು ಸಂಖ್ಯೆಯಲ್ಲಿ ನೈಸರ್ಗಿಕವಾದ ಕಪ್ಪು ಬಣ್ಣದ ಕಲ್ಲುಬಂಡೆಗಳು ಕಂಡುಬರುತ್ತವೆ. ಇವುಗಳಲ್ಲಿ ಕೆಲವು ಬೃಹದಾಕಾರವಾದವು. ಈ ಬಂಡೆಗಳ ಮೇಲೆ ತಟ್ಟೆಯಾಕಾರದ ಕುಳಿಗಳು ಇರುವುದು ಇಲ್ಲಿಯ ವಿಶೇಷ. ಒಂದೇ ಬಂಡೆಗಳ ಮೇಲೆ ಸುಮಾರು ಇಪ್ಪತ್ತು ಕುಳಿಗಳಿರುವುದನ್ನು ಇಲ್ಲಿ ಕಾಣಬಹುದು. ಈ ಎಲ್ಲಾ ಕುಳಿಗಳ ವ್ಯಾಸ ಸುಮಾರು ಒಂದು ಅಡಿ, ಆಳ ಮೂರು ಅಂಗುಲ. ಗಮನಾರ್ಹ ಸಂಗತಿಯೆಂದರೆ ಈ ಕುಳಿಗಳ ಮಧ್ಯದಲ್ಲಿ ಎರಡು ಅಂಗುಲ ಆಳವುಳ್ಳ ಒಂದು ಸಣ್ಣ ಕುಳಿ ಇರುವುದು. ಒಂದು ಅಡಿಗಿಂತ ಹೆಚ್ಚು ಅಂತರವಿರುವ ಈ ಎಲ್ಲಾ ಕುಳಿಗಳು ಇಂದಿಗೂ ಸ್ವಲ್ಪವೂ ಸವೆಯದೆ ಕೆತ್ತಲು ಬಳಸಲಾಗಿರುವ ಕಬ್ಬಿಣದ ಉಳಿಗಳ ಗುರುತುಗಳನ್ನು ಕಾಣಬಹುದು.

## ಒಂದನೆಯ ಶಾಸನ

ಈ ಬಂಡೆಗಳ ಸಮೂಹದಲ್ಲಿರುವ ಎತ್ತರವಾದ ಒಂದು ಬಂಡೆಯ ಮೇಲೆ ಕೆಂಪೇಗೌಡರ ಕಾಲದಲ್ಲಿ ಕಹಳೆ ಊದುತ್ತಿದ್ದರಿಂದ ಇದಕ್ಕೆ 'ಕಹಳೆ ಬಂಡೆ' ಎಂದು ಹೆಸರು ಬಂದಿದ್ದು ಈಗಲೂ ಇದೇ ಹೆಸರು ಮುಂದುವರೆದಿದೆ. ಈ ಬಂಡೆಯ ಪಕ್ಕದಲ್ಲಿ ಪೂರ್ವಾಭಿಮುಖವಾಗಿ ಒಂದು ಸಾಲಿನ ಶಾಸನವಿದೆ. "ದೀವಟಿಗೆ ಸೋಮನು......ಕುಲ ಗುರುಲಿಂಗ" ಎಂಬುದು ಇದರ ಪಾಠ. ಅಕ್ಷರಗಳ ಲಕ್ಷಣಗಳಿಂದ ಇದು ಹದಿನಾರನೇ ಶತಮಾನವೆನ್ನಬಹುದು. ಈ ಶಾಸನದ ಕೆಲವೇ ಅಡಿಗಳ ಎದುರಿಗೆ ಹುಟ್ಟು ಬಂಡೆಯಲ್ಲಿಯೇ ಒಂದು ವೇದಿಕೆಯನ್ನು ನಿರ್ಮಿಸಲಾಗಿದೆ. ಸುಮಾರು ನಾಲ್ಕು ಜನ ಕುಳಿತುಕೊಳ್ಳಬಹುದಾದ ೧೨ ಅಡಿ ಉದ್ದ ೬ ಅಡಿ ಅಗಲವಿರುವ ಪೀಠ ಇದು. ಸುತ್ತಲೂ ಹೂವಿನ ಬಳ್ಳಿಯ ರೇಖಾಚಿತ್ರಗಳನ್ನು ಹೊಂದಿದ್ದು ಸುಂದರವಾಗಿ ತೋರುತ್ತದೆ. ಮೇಲ್ಭಾಗದಲ್ಲಿ ವೃತ್ತಾಕಾರದ ರೇಖಾಚಿತ್ರವನ್ನು ಹೊಂದಿದೆ.

ಕುಳಿಗಳ ಬಳಿ ಸುತ್ತಲೂ ಎಣ್ಣೆಯ ಜಿಡ್ಡಿನ ಕಪ್ಪಾದ ಗುರುತುಗಳು ಕಾಣಬರುವುದರಿಂದ ಇವುಗಳು ನಾನಾ ಬಗೆಯಲ್ಲಿ ಕುತೂಹಲವನ್ನು ಕೆರಳಿಸುತ್ತದೆ. ಇವುಗಳ ಸ್ವರೂಪ ಮತ್ತು ಇಲ್ಲಿಯೇ ದೊರೆತ ಹಾಗೂ ಮೇಲೆ ಪ್ರಸ್ತಾಪಿಸಿದ ಶಾಸನದ ಹಿನ್ನೆಲೆಯಲ್ಲಿ ಈ ಕುಳಿಗಳೆಲ್ಲವೂ ದೀವಟಿಗೆ (ದೀಪ)ಗಳಿಗೆ ಉಪಯೋಗಿಸುತ್ತಿದ್ದರೆಂಬುದಾಗಿ ಹೇಳಬಹುದು. ಈ ಕುಳಿಗಳ ಮಧ್ಯೆ ಇರುವ ಚಿಕ್ಕ ಕುಳಿಯಲ್ಲಿ ಬತ್ತಿಯನ್ನು ಉದ್ದದ ಕೊಳವೆಯ ಆಧಾರದಿಂದ ನಿಲ್ಲಿಸುವುದಕ್ಕೆ ಅನುಕೂಲವಾಗಲು ಕೆತ್ತಿರುವುದು ಇದನ್ನು ಸಮರ್ಥಿಸುತ್ತದೆ. ಇದೊಂದು ಬಯಲು ಸಂಸ್ಕೃತಿಗೆ ಸಂಬಂಧಿಸಿದ ವಿಶಿಷ್ಟ ಆಚರಣೆಯ ಕುಳಿಗಳು.

ಕೆಂಪೇಗೌಡರ ಕಾಲದಲ್ಲಿ ಶತ್ರುಗಳು ಬರುವುದನ್ನು ಗುರುತಿಸುವುದಕ್ಕಾಗಿ ಬಹು ಎತ್ತರವಾಗಿದ್ದ ಈ ಪ್ರದೇಶದಲ್ಲಿ ಒಂದು ಪಡೆಯನ್ನು ಇರಿಸಲಾಗಿದ್ದಿತು. ಈ ಪಡೆಯ ನಾಯಕನಾಗಿದ್ದವನು ಗುಜ್ಜಲನಾಯಕ ಎಂಬುವನು. ಈತ ತನ್ನ ಜನಾಂಗ (ಬೇಡ)ದ ಕುಲದೇವರಾದ ಬೇಡರಕಣ್ಣಪ್ಪನ ದೇವಾಲಯವನ್ನು ನಿರ್ಮಿಸಿರುವುದು ಕಾಣಬಹುದು. ಈ ಬೇಡ ಪಡೆಯವರೇ ಇಲ್ಲಿನ ದೀಪಗಳನ್ನು ಹಚ್ಚುತ್ತಿದ್ದರೆನ್ನಬಹುದು. ಇದೇ ರೀತಿಯಾದಂಥ ಒಂದು ಕುಳಿಯು

*ಕಛೇರಿ ಕಾರ್ಯದರ್ಶಿ, ಕರ್ನಾಟಕ ಇತಿಹಾಸ ಅಕಾದೆಮಿ, ಗೋಖಲೆಸಾರ್ವಜನಿಕ ಸಂಸ್ಥೆ,ನರಸಿಂಹರಾಜ ಕಾಲೋನಿ, ಬೆಂಗಳೂರು-೫೬೦೦೧೯

ಬಸವನಗುಡಿಯ ದೊಡ್ಡ ಬಸವಣ್ಣದೇವಾಲಯದ
ಮುಂಭಾಗದಲ್ಲಿರುವ ಬಂಡೆಗಳ ಮೇಲಿರುವ ಕುಳಿಗಳು



ದೊಡ್ಡಬಸವಣ್ಣನ ದೇವಸ್ಥಾನದ ಮುಂಭಾಗದ ಬಂಡೆಯ
ಮೇಲಿರುವ ಶಾಸನ



ದೀವಟಿಗೆ ಸೋಮನ ಶಾಸನ

ಂಪಾಂಬುಧಿ ಕೆರೆಯ ಬಳಿ ಇರುವ ನಂಜಾಂಬ ಅಗ್ರಹಾರದ ಂಡೆ ಪ್ರದೇಶದಲ್ಲಿನ ಎತ್ತರವಾದ ಒಂದು ಬಂಡೆಯ ಮೇಲಿನ ಹಳಿ (ಕಾವಲು)ಗೋಪುರದ ಬಳಿ ಕಾಣ ಬಹುದಾಗಿದೆ.

ರಡನೆಯ ಶಾಸನ

ಬಸವಣ್ಣನ ದೇವಾಲಯ ಹೊರಭಾಗದಲ್ಲಿನ ಮೆಟ್ಟಲುಗಳ ಬಲಭಾಗದಲ್ಲಿರುವ ೫ ಅಡಿ ಅಗಲ ೧½ ಅಡಿ ಎತ್ತರದ ಬಂಡೆಯ ಮೇಲೆ ಮೂರು ಸಾಲಿನ ಶಾಸನವೊಂದು ಇದೆ. ಇದು ಈಗಾಗಲೇ ಬಸವನ ಪೀಠದಲ್ಲಿರುವ, ಪ್ರಕಟಿತ ಶಾಸನ ಪಾಠವನ್ನು ಹೋಲುತ್ತದೆ. ಆ ಶಾಸನ ''ಯೀ ಬಸವೇಶ್ವರನ'' ಎಂದು ಪ್ರಾರಂಭವಾದರೆ ಬಂಡೆಯ ಮೇಲಿರುವ ಅಪ್ರಕಟಿತ ಶಾಸನ '' ದೊಡ್ಡ ಬಸವೇಶ್ವರ'' ಎಂಬ ನಾಮದಿಂದ ಪ್ರಾರಂಭಗೊಳ್ಳುತ್ತದೆ. ಈ ಶಾಸನದ ಪಾಠ ಇಂತಿದೆ :

೧ ದೊಡ್ಡ ಬಸವೇಶ್ವರನ ಪಾ

೨ ದದಲಿ । ವ್ರಿಶಭಾವತಿಯೆಂಬ ನದಿ ಹು

೩ ಟ್ಟಿ । ಪಶ್ಚಿಮ ವಾಹಿನಿಯಾಗಿ ನಡೆಯಿತು.

ಈ ಶಾಸನವನ್ನು ದೇವಾಲಯ ನಿರ್ಮಾಣವಾದ ನಂತರದಲ್ಲಿ ದೇವಾಲಯಕ್ಕೆ ಭೇಟಿ ಕೊಡುವ ಜನರಿಗೆ ಸೂಚನೆ ನೀಡುವ ನಾಮಫಲಕದಂತೆ ಹಾಕಿಸಿರಬಹುದು ಎಂದು ಕಂಡು ಬರುತ್ತದೆ. ಅನೇಕ ರೇಖಾಚಿತ್ರಗಳನ್ನು ಬಂಡೆಗಳ ಮೇಲೆ ಕಾಣಬಹುದು. ಈ ಪರಿಸರದಲ್ಲಿ ಅಲ್ಲಲ್ಲಿ ಇದ್ದ ಅನೇಕ ವೀರಗಲ್ಲುಗಳನ್ನು ಈಗ ಒಂದು ಕಡೆ ಸಾಲಾಗಿ ಇರಿಸಲಾಗಿದ್ದು ಅವುಗಳಿಗೆ ಪೂಜೆಯನ್ನು ಸಲ್ಲಿಸಲಾಗುತ್ತಿದೆ.

ಇಲ್ಲಿಯ ದೊಡ್ಡ ಬಸವಣ್ಣನ ಎತ್ತರ ೧೧ ಅಡಿ ಇದ್ದರೆ, ಸನಿಹದಲ್ಲೇ ಇರುವ ಕಾರಂಜಿ ಆಂಜನೇಯ ವಿಗ್ರಹ ೧೨ ಅಡಿ ಇದ್ದು, ಗಣೇಶನ ವಿಗ್ರಹ ೧೩ ಅಡಿ ಇದೆ. ಅನುಕ್ರಮವಾಗಿರುವುದು ಗಮನಾರ್ಹ. ''ಕಾರಂಜಿ ಆಂಜನೇಯ'' ಹೆಸರಿನಿಂದ ಈ ಪರಿಸರದಲ್ಲಿ ಹುಟ್ಟುವ ವೃಷಭಾವತಿ ನದಿಯು ಉಕ್ಕಿದ ನೀರಿನಿಂದ ಕಾರಂಜಿಯ ಹಾಗೆ ಹೊರ ಚಿಮ್ಮಿ ಹರಿಯುತ್ತಿದ್ದಿತೆಂದು ತಿಳಿದುಬರುತ್ತದೆ.

ಇಲ್ಲಿ ಕೆಂಪೇಗೌಡರ ಕಾಲದಲ್ಲಿ ''ಬಸವನಹಳ್ಳಿ'' ಎಂಬ ಹೆಸರಿನಿಂದ ಒಂದು ಹಳ್ಳಿ ಪ್ರಾರಂಭವಾಗಿ ಕ್ರಮೇಣ ''ಬಸವನಪುರ'' ಆಗಿ ಈಗ ಬಸವನಗುಡಿ ಎಂಬ ಹೆಸರು ಪಡೆದಿರುವುದು ಪ್ರಸ್ತುತ ಅಧ್ಯಯನದಿಂದ ವ್ಯಕ್ತಪಟ್ಟಿದೆ. ಡಾ|| ಎಸ್.ಆರ್.ರಾವ್ ಅವರು ಈ ಬಂಡೆ ಪ್ರದೇಶವನ್ನು ''ಚರಿತ್ರಾರ್ಹ ಪೂರ್ವ ಕಾಲದ ನೆಲೆ'' ಎಂದು ಅಭಿಪ್ರಾಯ ಪಟ್ಟಿರುವರು. ಸಾಂಸ್ಕೃತಿಕವಾಗಿ ಕೆಂಪೇಗೌಡರ ಕಾಲದಲ್ಲಿ ಹಬ್ಬ, ಹರಿದಿನ ಮತ್ತು ಜಾತ್ರೆಯ ಸಂದರ್ಭಗಳಲ್ಲಿ ಇಲ್ಲಿನ ಬಂಡೆಗಳ ಮೇಲಿನ ಕುಳಿಗಳು ಯಾವ ಪಾತ್ರ ವಹಿಸಿದ್ದವೆಂಬುದನ್ನು ಅಧಿಕ ಅಧ್ಯಯನದಿಂದ ಅರಿಯಲು ಅವಕಾಶವಿದೆ. ಈ ಎಲ್ಲಾ ಕುಳಿಗಳಲ್ಲಿನ ದೀಪಗಳನ್ನು ಹಚ್ಚಿಸಿದಾಗ ಈ ಪ್ರದೇಶ ಅದೆಷ್ಟು ಸುಂದರವಾಗಿ ಕಾಣುತ್ತಿದ್ದಿರಬಹುದೆಂಬುದೂ ಕುತೂಹಲಕರ ಸಂಗತಿ. ಕೆಂಪೇಗೌಡರ ವಂಶಸ್ಥರಿಂದ ಬಸವನಗುಡಿ ಮತ್ತು ಗವಿಪುರದ ಪ್ರದೇಶದಲ್ಲಿ ಅನೇಕ ದೇವಾಲಯಗಳು, ಮಠಗಳು, ನಿರ್ಮಾಣ ಹೊಂದಿ ಉತ್ತಮ ಧಾರ್ಮಿಕ ನೆಲೆಯಾಗಿದ್ದಿತೆಂದು ಹೇಳಬಹುದು.

ಈ ಬಯಲು ಬಂಡೆ ಕುಳಿಗಳನ್ನು ದಾಖಲಿಸಿಕೊಳ್ಳುವಲ್ಲಿ ಅನೇಕ ಸೂಚನೆ, ಸಲಹೆಗಳನ್ನು ನೀಡಿದ ಶ್ರೀ ಲಕ್ಷ್ಮಣ್ ತೆಲಗಾವಿ, ಮತ್ತು ಕ್ಷೇತ್ರಕಾರ್ಯದಲ್ಲಿಸಹಾಯ ಮಾಡಿದ ಶ್ರೀ ಮುತ್ತುರಾಜು ಅವರ ಉಪಕಾರ ಸ್ಮರಣಾರ್ಹ.

## ಗ್ರಂಥ ಋಣ

೧) ಕರ್ನಾಟಕ ದೇವಾಲಯಗಳು, (ಸಂ) ಸು.ರಂಗಸ್ವಾಮಿ., ಹಂಸಧ್ವನಿ ಪ್ರಕಾಶನ, ೧೯೯೪.

೨) ಬೆಂಗಳೂರಿನ ಇತಿಹಾಸ, (ಸಂ) ಬ.ನ.ಸುಂದರರಾವ್, ೧೯೮೫.

೩) ಕರ್ನಾಟಕ ಕನ್ನಡ ವಿಷಯ ವಿಶ್ವಕೋಶ.

೪) ಎ.ಕ. ಸಂಪುಟ ೯, ಬೆಂಗಳೂರು ೭೦.

೫) ಲಕ್ಷ್ಮಣ್ ತೆಲಗಾವಿ., 'ಚರಿತ್ರಾರ್ಹ ಪೂರ್ವ ಕಾಲದ ನೆಲೆಗಳು' ಕನ್ನಡಪ್ರಭ, ೧೮.೯.೯೪.

ಡಾ॥ ಜಿ. ವಿ. ಕಲ್ಲಾಪುರ *

# ಕೆಳದಿ ವೀರಭದ್ರನಾಯಕನ ಅಪ್ರಕಟಿತ ಶಾಸನ

ಪ್ರಸ್ತುತ ಪ್ರಬಂಧದಲ್ಲಿ ತಾಳೆಯೋಲೆ ಗ್ರಂಥವೊಂದರಲ್ಲಿ ಪ್ರತಿ ಮಾಡಲ್ಪಟ್ಟಿರುವ ಶಾಲಿವಾಹನ ಶಕ ೧೫೦೬ ಕ್ಕೆ ಸಂಬಂಧಿಸಿದ, ಕೆಳದಿ ವೀರಭದ್ರವಾಯಕನ ಅಪ್ರಕಟಿತ ಶಾಸನವನ್ನು ಮೂಲ ಪಾಠದೊಂದಿಗೆ ಪರಿಚಯಿಸಲಾಗಿದೆ.

ಶಾಸನವು ತಾಳೆಯೋಲೆಯಲ್ಲಿ ಪ್ರತಿಮಾಡಲ್ಪಟ್ಟಿದ್ದು, ಶಿವಮೊಗ್ಗದ ಮಲ್ನಾಡ್ ರೀಸರ್ಚ್ ಅಕಾಡೆಮಿ (ರಿ) ಯಲ್ಲಿದೆ. ಕನ್ನಡ ಭಾಷೆಯಲ್ಲಿರುವ ಈ ಶಾಸನವನ್ನು ನಾಗರಿ ಹಾಗೂ ತಿಗಳಾರಿ ಲಿಪಿಯಲ್ಲಿ ಬರೆಯಲಾಗಿದೆ. ಶಾಸನವನ್ನು ಎರಡು ಗರಿಗಳಲ್ಲಿ ಬರೆಯಲಾಗಿದ್ದು, ಇದರ ಅಳತೆ ೩೬.೫×೫.೫ ಸೆಂ.ಮೀ. ಆಗಿದ್ದು, ಒಟ್ಟು ಹದಿನೆಂಟು ಸಾಲುಗಳಿಂದ ಕೂಡಿದೆ. ಮೊದಲನೇ ಗರಿಯ ಮುಂಭಾಗದಲ್ಲಿ ಹತ್ತು ಸಾಲುಗಳು, ಹಿಂಬದಿಯಲ್ಲಿ ಐದು ಸಾಲುಗಳು ಹಾಗೂ ಎರಡನೇ ಗರಿಯ ಮುಂಭಾಗದಲ್ಲಿ ಮೂರು ಸಾಲುಗಳಲ್ಲಿ ಬರೆಯಲಾಗಿದೆ. ಪ್ರತೀ ಸಾಲಿನಲ್ಲಿ ಐವತ್ತೇಳು ಅಕ್ಷರಗಳಿವೆ. ತಾಳೆಯೋಲೆಯು ಉತ್ತಮ ಸ್ಥಿತಿಯಲ್ಲಿದೆ. ಕೊಡಚಾದ್ರಿ ಯಲ್ಲಿರುವ ಭದ್ರಕಾಳಿ ದೇವಾಲಯಕ್ಕೆ ಸಂಬಂಧಿಸಿದ ಶಾಸನವಾಗಿದ್ದು ಅದರ ವಿವರಗಳನ್ನು ಇಲ್ಲಿ ಕೊಡಲಾಗಿದೆ.

**ಶಾಸನ ಪಾಠ**

**ಮೊದಲನೆ ಗರಿ ಮುಂಭಾಗ ( ನಾಗರಿ ಲಿಪಿಯಲ್ಲಿದೆ )**

೧. ಸ್ವಸ್ತಿ ನಿರ್ವಿಘಮಸ್ತು। ನಮಸ್ತುಂಗ ಶಿರಶ್ಚುಂಬೀ ಚಂದ್ರಚಾಮರ ಚಾರವೇ। ತ್ರೈಲೋಕ್ಯನಗರಾರಂಭ ಮೂಲಸ್ತಂಭಾಯ ಶಂಭುವೆ। ಸ್ವಸ್ತಿಶ್ರೀ ಜಯಾಭ್ಯುದಯ ನೃಪ ಶಾಲಿವಾಹನ

೨. ಶಕ ವರ್ಷ ೧೫೦೬ ನೇ ಪರಿವರ್ತಮಾನಕ್ಕೆ ಸಲುವ ತಾರಣ ಸಂವತ್ಸರದ ॥ ಮಾಘ ಬ ೧೩ ಲು ಯಡವ ಮುರಾರೀ ಕೋಟೆಕೋಲಾಹಲ ವಿಶುದ್ಧವೈಧಿಕಸಿದ್ಧಾಂತ ಪ್ರತಿಷ್ಟಾಪಕ.

೩. ಶಿವಗುರು ಭಕ್ತಿಪರಾಯಣರಾದ। ಇಕ್ಕೇರಿ ವೀರಭದ್ರಪನಾಯಕರು।-। ಕೋಡಚಾದ್ರಿ ಕೇಶೋಭಟ್ಟರಿಗ ಶ್ರೀಮಧಿಕ್ಕೇರೀ ಅಘೋರವೀರಭದ್ರ ಸಮೇತ ಭದ್ರಕಾಲ ಅಂಮನವ

೪. ರ ಪೊಜೆಯಂನು ।ಕಾಲಂಪ್ರತೀಯಲ್ಲಿ ಪುತ್ರಪೌತ್ರ ರಾಶಾಂಕರಾಗಿ ನಿತ್ಯ ನೈಮಿತ್ಯ ವಿಶೇಷಕಟ್ಟಲೇ ಹಂಣು ಕಾಯಿದುರ್ಗಾಕಲಶವಸ್ತ್ರ ಪ್ರಯುಮೆ ಪಂ

೫. ಚಾಂಮೃತ ಕನಕಾಭಿಷೇಕ ಸುವರ್ನಪುಷ್ ಮುಂತಾದಂನೂ ಕಾಲಂಪ್ರತೀಯಲ್ಲಿ ತ್ಯಗದು ಕೊಂಡು।- ದೇವಸ್ಥಾನದ ದಕ್ಷಿಣ ದಿಕ್ಕಿನಲ್ಲಿ ಅಘೊ.

೬. ರ ವೀರಭದ್ರದೇವರ ಅರ್ಚಕಮಧುಲಿಂಗಾಭಟ್ಟನ ಮನೆ ಹಿತ್ತಲ ದಕ್ಷಿಣದಿಕ್ಕಿನಲ್ಲೀ ಇರುವಮನೆ ದಣ ಹಿತ್ತಿಲೀಗೇ ಚತುರ್ಗಡೀ। ಮುಡಲುಗೇ

೭. ಮೇಕೇರೆದಿಣವೇಗಡೀ। ತೆಂಕಲು ಸತೀಚತುರ ಗಡೀವಲಗಾದ ಸ್ಥಲದಲ್ಲಿ ಮನೆ ಕಟ್ಟಿ ಕೊಂಡು ಅನುಭವಿಸಿ ಬಂನಿಯನುತ ಧಾರಾಪೂರ್ವಕವಾ

೮. ಗಿ ಪ್ರಾಕು ಸದಾಶಿವಪನಾಯಕರು ಬಿಟ್ಟದರಿಂದಾ

*ಒಂದನೇ ಅಡ್ಡರಸ್ತೆ, ಜಯನಗರ, ಶಿವಮೊಗ್ಗ ೫೭೭೨೦೧

ೀವು ಭದ್ರಕಾಲೀ ಅಂಮನವರ ಕಲಾಪೂರ್ವಕವಾಗಿ ಪೂಜೆಯಂನು। ನಾವು ಬೇಡಿಕೊಂಡ

೯. ಪ್ರಸಾದವು ಆದ್ದರಿಂದ ಬಹಲ ಸಂತೋಷಬಿಟ್ಟು ಸಮರ್ಥರುಯನುತತಿಳಿದು ಆಗಲೇ।-।ಸದಾಶಿವಪನಾಯಕರ ಪ್ರಪೌತ್ರರಾದಭದ್ರಪನಾಯಕರ ಪೌತ್ರರಾದ ವೆಂ

ಂಭಾಗ

೧೦. ಕಟಪನಾಯಕರ ಪುತ್ರರಾದ ವೀರಭದ್ರ ಪನಾಯಕರು।-।ಸುಭಾಭಟ್ಟರ ಪ್ರಪೌತ್ರರಾದ ಕೇಶೋಭಟ್ಟರ ಪೌತ್ರರಾದ ಮೊದೋಭಟ್ಟರ ಪುತ್ರರಾದ ಕೇಶೋಭಟ್ಟರಿೀಗೇ ಅಪಣೆದಯಾಪಾ

೧೧. ಲಿಸಿದು। ಈ ಭದ್ರಕಾಲೀ ಅಂಮನವರ ಸಂನಿಧಿಯಲು ಯೇನು ಉತ್ಸಾಹ ನಿತ್ಯ ನೈಮಿತ್ಯಕ ಕಟ್ಟಲೆಯನು ಉತ್ಸಾಹವಂನು ಮೇಲಿನ ಮನೆ ದಣಾಮುಂತಾಗಿ ನಿಂಮ ಪುತ್ರ

೧೨. ಪ್ರಪೌತ್ರ ಸಂತಾನ ಪಾರಂಪರ್ಯ್ಯವಾಗಿ ಈ ಸ್ಥಲವಂನು ಅನುಭವಿಸಿಕೊಂಡುಬಂನೀಯನುತ ಶ್ರೀಅಘೋರ ವೀರಭದ್ರ ಸಮೇತ ಭದ್ರಕಾಲೀ ಅಂಮನವರ ಸಂನಿಧೀಲು ಶ್ರೀಗಲ ಸ್ರೀ

೧೩. ಬೆಲ್ವಪತ್ರೆನೀರಂನು ಬಿಟ್ಟೆವು। ಇದಕೆ ಅಲ್ಪಿದರೆ ಸೂರ್ಯ ಚಂದ್ರ ಭೊಮೀ ಸ್ರೀ ಮನ್ಮಹಾ ವಿಷ್ನು ಮಹೇಶ್ವರರೀಗೇ ಅಲ್ಪಿದಪಾಪವನು ಅನುಭವಿಸಿಕೊಂಡು ಬಂ

೧೪. ದೇವುಯನುತ ನಂಮ ಸಂತಾನಾ ಪಾರಂಪರ್ಯ್ಯ ವಾಗಿ ಪುಣ್ಯಬರಬೇಕೆಂದು ಸಹಿರಂಣ್ಯೋದಕ ಧಾರಾಪೂರ್ವಕ ವಾಗಿ ಸ್ರೀ ತುಲಸೀಬಿಲ್ವ ಪ

೧೫. ತ್ರೆ ನೀರಂನು ಬಿಟ್ಟೆವು।-। ದಾನಾಚ ಪಾಲಿತೋ ರಾಜಾ ದಾನಾಚ್ಛಪಾಲಿತೇಗುರು ದದಾನಾಚಪಾಲಿತೇ ಮಾತಾ ತತ್ಫಲಂಲಭತೇಮಹೀ: ಯಥಾವಾಲೇಪ್ರತಿ:

ಎರಡನೇ ಗರಿ ( ತಿಗಳಾರಿ ಲಿಪಿಯಲ್ಲಿದೆ )

೧. ಸವಸ್ತಿ। ಕೋಡಚಾದ್ರೀಸುಭಾಬಟ್ಟರಮಗ ಕೇಶೋಭಟ್ಟರ ಪುತ್ರ ಮಾದೋಬಟ್ಟರ ಮಗ ಕೇಶೋಭಟ್ಟರೀ।-।ಶಕವರ್ಷ ೧೫೦೬ ನೇ ಪರಿವರ್ತಮಾನಕ್ಕೆ ಸಲುವ ತಾರಣ ಸಂ । ಮಾಘ

೨. ಬ ೧೩ಲು ಭದ್ರಕಾಲೀ ಅಂಮನವರ ಪೂಜೆಯನ್ನು ವೀರಭದ್ರನಾಯಕರು ಕೊಟ್ಟರು ಅವರ ಮಗ ಸುಬಾಭಟ್ಟರಮಗ ಮಾದೋಭಟ್ಟರ ಪುತ್ರ ಕೇಶೋ ಭಟ್ಟರ ಪುತ್ರ ಸುಬಾಭಟ್ಟ ತ

೩. ಮ ಮಾದೋಭಟ್ಟರ ಮಗ ಮದುಲಿಂಗಭಟ್ಟ ಯಾನೇ ತಂಮ್ಮಯಭಟ್ಟನ ಬರಹ

ಶಾಲಿವಾಹನ ಶಕ ವರ್ಷ ೧೫೦೬ ನೇ ತಾರಣಸಂವತ್ಸರದಲ್ಲಿ ಕೆಳದಿ ವೀರಭದ್ರನಾಯಕರು ಕೊಡಚಾದ್ರಿಯಲ್ಲಿರುವ ಭದ್ರಕಾಲೀ ಅಮ್ಮನವರ ನಿತ್ಯನೈಮಿತ್ತಿಕ ಪೂಜಾದಿಗಳನ್ನು ಕೊಟ್ಟ ದಾನದ ವಿವರಗಳನ್ನು ಒಳಗೊಂಡಿದೆ. ಪ್ರಸ್ತುತ ಶಾಸನದ ಕಾಲವಿಚಾರದ ಬಗ್ಗೆ ಹೇಳುವುದಾದರೆ, ವೀರಭದ್ರನಾಯಕರು ಆಳಿದ ಕಾಲ ಕ್ರಿ.ಶ.೧೬೨೯-೧೬೪೬. ಆದರೆ ಈ ಶಾಸನದಕಾಲ ಕ್ರಿ.ಶ.೧೫೮೪ ಅಗುತ್ತದೆ. ಬಹುಶಃ ಇದೊಂದು ಕೂಟ ಶಾಸನವಿರಬಹುದು, ಅಥವಾ ಶಾಸನದ ಎಂಟನೇ ಸಾಲಿನಲ್ಲಿ ಹೇಳಿರುವಂತೆ ಸದಾಶಿವನಾಯಕರು ಬಿಟ್ಟ ದಾನವನ್ನು ಕೇಶೋಭಟ್ಟರು ಬೇಡಿಕೊಂಡ ಮೆರೆಗೆ ಪುನ: ದೃಢಿಕರಿಸಿರುವರೆಂದು ಹೇಳಬಹುದಾಗಿದೆ, ಈ ಶಾಸನವನ್ನು ಪ್ರತಿ ಮಾಡಿದವನು ಮಾದೋಭಟ್ಟರ ಮಗ ಮಧುಲಿಂಗ 'ಭಟ್ಟನೆಂದು ಆತನೇ ಶಾಸನದ ಕೊನೆಯಲ್ಲಿ ಹೇಳಿಕೊಂಡಿದ್ದಾನೆ. ○

ಗ್ರಂಥ ಋಣ

೧.ತಾಳೆಯೋಲೆ ಹಸ್ತಪ್ರತಿ-ಕೃಪೆ ಮಲ್ನಾಡ ರೀಸರ್ಚ್ ಅಕಾದೆಮಿ, ಶಿವಮೊಗ್ಗ

೨. ಕೆಳದಿ ಅರಸರ ಶಾಸನ ಸಂಪುಟ-ಡಾ.ಕೆ.ವೆಂಕಟೇಶ್.

೩. ಎಪಿಗ್ರಾಫಿಯಾ। ಕರ್ನಾಡಾಟಿಕಾ.ಸಂ.೮.(ರೈಸ್‌ಆವೃತ್ತಿ)

ಡಾ॥ ಗಣಪತಿ ಗೌಡ, ಎಸ್.*

# ಶಿಶುಗಲಿ ಪಾಂಡ್ಯರ ಕೆಕ್ಕಾರ ವೀರಗಂಬ ಶಾಸನಗಳು: ಒಂದು ಅಧ್ಯಯನ

ಕೆಕ್ಕಾರ ಉತ್ತರ ಕನ್ನಡ ಜಿಲ್ಲೆಯ ಹೊನ್ನಾವರ ತಾಲೂಕಿನಿಂದ ಸುಮಾರು ೧೫ ಕಿ.ಮೀ. ದೂರದಲ್ಲಿದೆ. ಇಲ್ಲಿಯ ಅಮ್ಮನವರ ದೇವಾಲಯದಲ್ಲಿ ಚೌಕವಿನ್ಯಾಸದ ಸುಮಾರು ೬ ಅಡಿ ಎತ್ತರದ ಮೂರು ವೀರಗಂಬಗಳಿವೆ. ಇವುಗಳ ಒಂದು ಅಥವಾ ಎರಡು ಮೈಯಲ್ಲಿ ಶಾಸನವನ್ನು ಕೊರೆಯಲಾಗಿದೆ. ಈ ಶತಮಾನದ ಐದನೇ ಶತಕದಲ್ಲಾಗಲೇ ವಿದ್ಯಾರತ್ನ ಪಂಚಮುಖಿಯವರು ಇದನ್ನು ಗಮನಿಸಿದ್ದಾರೆ.[1] ಆದರೆ ಈ ಶಾಸನಗಳ ಪಾಠ ನಮಗೆ ತಿಳಿದಂತೆ ಪ್ರಕಟವಾಗಿಲ್ಲ.

ಇಂತಹ ವಿಶಿಷ್ಟ ಮಾದರಿಯ ವೀರಗಂಬಗಳು ಕರಾವಳಿಯ ಕೆಲವೇ ಕೆಲವು ಭಾಗದಲ್ಲಿ ಒಂದು ನಿರ್ದಿಷ್ಟ ಸಮಯಕ್ಕಷ್ಟೇ ಸೀಮಿತವಾಗಿರುವದು ಒಂದು ವಿಶೇಷ. ಇಂತಹ ವೀರಗಂಬಗಳನ್ನ ಉತ್ತರ ಕನ್ನಡ ಜಿಲ್ಲೆಯ ಭಾವಿಕೇರಿ (ಅಂಕೋಲಾ ತಾಲ್ಲೂಕು), ಹಳದಿಪುರ,[2] ಹೆಬ್ಬಾನಕೇರಿ, ಕೆಕ್ಕಾರ ಮಂಕಿ (ಹೊನ್ನಾವರ ತಾಲ್ಲೂಕು) ಯಲ್ಲಿ ಕಾಣಬಹುದಾಗಿದೆ. ಈ ಕಂಬಗಳಲ್ಲಿಯ ಶಾಸನದ ಭಾಗವನ್ನು ಹೊರತುಪಡಿಸಿ ಉಳಿದ ಮುಖಗಳಲ್ಲಿ ಯುದ್ಧ ಮತ್ತು ರಾಮಾಯಣಗಳಿಂದಾಯ್ದ ಶಿಲ್ಪ ಚಿತ್ರಗಳನ್ನು ಕೆತ್ತಲಾಗಿದೆ. ಅನೇಕ ಲೈಂಗಿಕ ಶಿಲ್ಪಗಳ ದೃಶ್ಯವೂ ಇಲ್ಲಿದೆ.

ಇಲ್ಲಿಯ ಮೊದಲನೆಯ ಶಾಸನ ೬೨ ಸಾಲುಗಳನ್ನು ಎರಡನೆಯ ಶಾಸನ ೬೫ ಸಾಲುಗಳನ್ನು, ಮೂರನೆಯ ಶಾಸನ ೩೦ ಸಾಲುಗಳನ್ನೊಳಗೊಂಡ ಕ್ರಿ.ಶ.೧೧ನೇ ಶತಮಾನ[ದ] ಕನ್ನಡಲಿಪಿ, ಕನ್ನಡ ಗದ್ಯ ಭಾಷೆಯಲ್ಲಿದೆ.[3]

ಕಾಲಮಾನ

೧) ಮೊದಲನೇ ಶಾಸನದ ಕಾಲ ಶಕವರ್ಷ ೧೦೦೦ (ಕ್ರಿ.ಶ.೧೦೭೮) .

೨) ಎರಡನೇ ಶಾಸನದ ಕಾಲ ಶಕವರ್ಷ ೧೦೦೨, ಸಿದ್ಧಾರ್ಥಿ ಸಂವತ್ಸರ (ಕ್ರಿ.ಶ ೧೦೭೯)

೩) ಮೂರನೆಯ ಶಾಸನದಲ್ಲಿ ಕಾಲಮಾನದ ವಿವರಣೆ ಇಲ್ಲ.

ವಿಶ್ಲೇಷಣೆ

ಕ್ರಿ.ಶ. ೧೦೭೮ರ ದೇವಾಲಯದ ಪ್ರಾಕಾರದ ಬಲಭಾಗದಲ್ಲಿರುವ ಮೊದಲನೆಯ ವೀರಗಂಬ ಶಾಸನದಲ್ಲಿ ಪಂಚಮಹಾಶಬ್ದ, ಮಹಾಸಾಮಂತಾಧಿಪತಿ, ಮಹಾಪ್ರಚಂಡ ದಂಡನಾಯಕ ಮತ್ತಲೆ ಸಿಂಘ, ಸಂಗ್ರಾಮ ಗರುಡ, ಪಡವಳ ಬುದ್ಧ ಶಕವರ್ಷ ೧೦೦೦ (ಕ್ರಿ.ಶ.೧೦೭೮) ರಲ್ಲಿ ಗೋಕರ್ಣದಲ್ಲಿ ಅಸುನೀಗಿದ ಬಗ್ಗೆ ಮೊದಲಲ್ಲಿ ವಿವರಣೆ ನೀಡುತ್ತದೆ. ತದನಂತರ ಕಡತೋಕೆಯ ರಕ್ಷಪಾಲ ಕಾಮದೇವನ ಕಟ್ಟಿದಲಗು ಮೊದಲಾದ ಬಿರುದಾವಳಿಗಳನ್ನು

*ಉಪನ್ಯಾಸಕರು, ಮಂಗಳೂರು ವಿಶ್ವವಿದ್ಯಾನಿಲಯ ಕಾಲೇಜು, ಮಡಿಕೇರಿ.

೧. ಪ್ರೊಗ್ರೆಸ್ಸ ರಿಪೋರ್ಟ ಆಫ್ ಕನ್ನಡ ರೀಸರ್ಚ್ ಇನ್ ಬೊಂಬೇ ಪ್ರೊವ್ಹಿನ್ಸ ೧೯೪೧-೧೯೪೬. ಪುಟಗಳು ೬-೭, ಕನ್ನಡ ಸಂಶೋಧನ ಸಂಸ್ಥೆ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

೨. ಗಣಪತಿ ಗೌಡ. ಎಸ್., "ಎರಡನೆ ಕಾಮದೇವನ ಕಾಲದ ಚಂಡೇಶ್ವರ ವೀರಗಲ್ಲು ಶಾಸನ" ಕರ್ನಾಟಕ ಭಾರತಿ, ಸಂ. ೨೩/೨ ಪು.೬-೧೩. ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ. ೧೯೯೦.

೩. ಲೇಖನದಲ್ಲಿಯ ಶಾಸನದ ಪಾಠ ಗಮನಿಸಿ.

ಹೊಂದಿದ್ದ ಪಡವಳ ಬುದ್ಧನ ಮೊಮ್ಮಗನಾದ ಪಡವಳ ಹಾಚ ಮತ್ತು ಬೋಗೋರಿಕ ಕೂಡಿ ಹೈವೆ, ತೆಂಕಲು, ಕೊಂಕಣದಲ್ಲಿಯ ವೈರಿಗಳನ್ನು ಇರಿದು ಪಡವಳ ಬುದ್ಧನಿಗೆ ಶಕವರ್ಷ ೧೧೦೦ದಲ್ಲಿ ವೀರಗಲ್ಲನ್ನು ಮಾಡಿಸಿದರೆಂದು ತಿಳಿಸುತ್ತದೆ. ಕಸಪ ಮತ್ತು ನನ್ನಿಗ ಎನ್ನುವ ಇನ್ನೆರಡು ವೀರರು ಯುದ್ಧದಲ್ಲಿ ಮಡಿದುದರ ಪ್ರಸ್ತಾಪವಿದೆ. ವೀರಗಂಬವನ್ನು ಅಂಕೋಲೆಯ ನಂದಿಓಜನು ಮಾಡಿದರೆ ಕೇಶವನು ಶಾಸನವನ್ನು ಬರೆದಿದ್ದಾನೆ.[4]

ಕ್ರಿ.ಶ.೧೧೭೪ರ ಎರಡನೆಯ ವೀರಗಂಬ ಶಾಸನವು ದೇವಾಲಯದ ಪ್ರಾಕಾರದ ಎಡಬದಿಯಲ್ಲಿದೆ. ಈ ಶಾಸನದಂತೆ ಪಂಚಮಹಾಶಬ್ದ-ಮಹಾಮಂಡಳೇಶ್ವರ, ಹೊನ್ನಾವರ ಪುರವರಾಧೀಶ್ವರ ಶ್ರೀಮತು ಕಾಮದೇವರಸರ ಹೆಗ್ಗಡೆ, ನಾಡಮನೆ ಮತ್ತು ರಾಜಮನೆಯಲ್ಲಿ ಪ್ರಸಿದ್ಧ ವಾಗ್ಮಿಯಾದಂತಹ ಮಾರಸಿಂಗನ ವಿರುದ್ಧ ಅವನ ವೈರಿಗಳು ನಾಗವರ್ಮರಸನ ಕಿವಿಯಲ್ಲಿ ಪಿಸುಮಾತನ್ನು ನುಡಿಯಲು ಸಿಟ್ಟಿಗೆದ್ದ ನಾಗವರ್ಮರಸನು ಮಾರಸಿಂಗನನ್ನು ಕೊಂದನೆಂದು ತಿಳಿದು ಬರುತ್ತದೆ. ಮಾರಸಿಂಗನ ಹೆಸರಲ್ಲಿ ಅವನ ಹೆಂಡತಿಯಾದ ಹೊನ್ನಬ್ಬೆ ಹೆಗ್ಗಡತಿ, ಗೋನು ಮತ್ತು ಮೇರು ಕೂಡಿ ಶಾಸನವನ್ನು ನೆಡಿಸಿದರು. ಹೆಗ್ಗಡೆ ಜೋಗನ ಮಗನಾದ ಹೆಗ್ಗಡೆ ಗೋನುವನ್ನು ಕಾಮದೇವನ ಅಕ್ಕಡಕೆಯ ಹೆಗ್ಗಡೆ ಎಂದು ಹೇಳಲಾಗಿದೆ. ಅಂಕೋಲೆಯ ಲಕ್ಕಣೋಜನ ಅಳಿಯ ನಂದಿಓಜ ವೀರಗಂಬವನ್ನು ಮಾಡಿದನು. ಶಾಸನವನ್ನು ಸೇನುಬೋವ ಮಾರ್ತಂಡ ಬರೆದನು.[5]

ಮೂರನೆಯ ವೀರಗಂಬವು ದೇವಾಲಯದ ಎದುರುಗಡೆ ಇದೆ. ಪೊನ್ನಾವರ ಪುರವರಾಧೀಶ್ವರ ಶ್ರೀಮತು ಕಾಮದೇವರಸರು ಮತ್ತು ಗೋಕರ್ಣ ಪುರವರಾಧೀಶ್ವರ ಶ್ರೀಮತು ನಾಗವರ್ಮರಸರ ನಡುವೆ ಬಲ್ಲಾಳ ಬಯಲಿನಲ್ಲಿ ನಡೆದ ಕಾಳಗದಲ್ಲಿ ಜಳವಳಿಯ ಬಡಮ್ಮ ನಾಗವಮ್ರ್ಮರಸರ ಕಡೆಯ ಅನೇಕ ಸೈನಿಕರನ್ನು ಕೊಂದು ಜಯಗೆಯ್ದು ಸ್ವರ್ಗಪ್ರಾಪ್ತನಾದನೆಂದು ಈ ಶಾಸನದಿಂದ ತಿಳಿದು ಬರುತ್ತದೆ. ಶಾಸನವನ್ನು ಹಿರಿಯ ಹೆಗ್ಗಡೆ ಹಾಚ ಮಾಡಿಸಿದನು. ಸಂಧಿವಿಗ್ರಹಿ ಹಯವಣ್ಣಯ್ಯ ಶಾಸನವನ್ನು ಬರೆದನು. ಪೊನ್ನಯ್ಯನು ಈ ಮಾನಸ್ತಂಭವನ್ನು ನೆಟ್ಟನೆಂಬುದು ಇದರ ವಿಷಯ ವಸ್ತು.[6]

## ವಿಶ್ಲೇಷಣೆ

ಈ ಮೇಲಿನ ಎಲ್ಲ ಶಾಸನದ ಕಾಲವನ್ನು ಗಮನಿಸಿದರೆ ಇದು ಕಲ್ಯಾಣ ಚಾಲುಕ್ಯ ಚಕ್ರವರ್ತಿ ಆರನೆಯ ವಿಕ್ರಮಾದಿತ್ಯನ ಅಧಿಕಾರಾವಧಿಗೆ ಸೇರಿದ್ದೆಂಬುದು ಸ್ಪಷ್ಟವಾಗುತ್ತದೆ. ಹಾಗಾದರೆ ಇಲ್ಲಿ ಉಲ್ಲೇಖಿತ ಕಾಮದೇವ ಯಾರು? ಯಾವ ವಂಶಜನು ನಾಗವರ್ಮನಿಗೂ, ಕಾಮದೇವನಿಗೂ ನಡೆದ ಯುದ್ಧದ ಹಿನ್ನೆಲೆ ಏನಿರಬಹುದೆಂದು ತಿಳಿಯ ಬೇಕಾದರೆ ಇದಕ್ಕೆ ಪೂರಕವಾದ ಆಕರಗಳನ್ನು ಪುನರ್‌ವಿಮರ್ಶಿಸುವುದು ಅಗತ್ಯ.

(೧) ಚಾಲುಕ್ಯ ಆರನೇ ವಿಕ್ರಮಾದಿತ್ಯನ ಮಾಂಡಳಿಕನಾಗಿದ್ದ ಕಾಮದೇವನ ಕ್ರಿ.ಶ ೧೧೧೨ರ ಬಳ್ಳಿಗಾವಿಯ ಶಾಸನವೊಂದರಲ್ಲಿ[7] ಕಾಮದೇವನನ್ನು ''ಪಾಂಡ್ಯವಂಶ ಚೂಡಾಮಣಿ'', ''ಕೊಂಕಣ ರಾಷ್ಟ್ರಪಾಲ'', ''ಗೋಕರ್ಣ ಪುರವರಾಧೀಶ್ವರ'' ಮೊದಲಾಗಿ ವಿವರಿಸಲಾಗಿದೆ. ಈ ಶಾಸನವು ಇವನ ಪೂರ್ವಜರ ವಿವರಣೆ ಕೊಡುತ್ತ ಅನೇಕ ಪಾಂಡ್ಯ ಅರಸರು ಹೈವೆಯ ಶಿಶುಗಲಿಯಿಂದ ಆಳಿದ ಬಳಿಕ ಚಂದ್ರ (ರಾಣಿ ಕಮ್ಮಲ ದೇವಿ), ಕಾಮದೇವ (ರಾಣಿ ಭಾಗಲದೇವಿ), ಇಮ್ಮಡಿ ಚಂದ್ರ (ರಾಣಿ ಸಾವಲದೇವಿ)ರಾಜ್ಯಭಾರ ಮಾಡಿದ ನಂತರ ಎರಡನೇ ಕಾಮದೇವ ರಾಜ್ಯಭಾರಕ್ಕೆ ಬರುತ್ತಾನೆ. ಈ ಸಂದರ್ಭದಲ್ಲಿ ಇವನನ್ನು ಗೋಕರ್ಣ ಪುರವರಾಧೀಶ್ವರ ಎಂದು ಸಂಬೋಧಿಸಿರುವದರಿಂದ ಗೋಕರ್ಣವು ಇವನ ಇನ್ನೊಂದು ರಾಜಧಾನಿಯಾಗಿರಬೇಕು ಇಲ್ಲವೇ ಇವನು ಇದರ ಅಧಿಕಾರಿಯಾಗಿರಬೇಕೆಂದು ಊಹಿಸಲು ಆಸ್ಪದವಿದೆ. ಶಾಸನದಲ್ಲಿ ಉಕ್ತವಾಗಿರುವ ಶಿಶುಗಲಿಯು ಬಹುಶಃ ಇಂದಿನ ಉತ್ತರ ಕನ್ನಡ ಜಿಲ್ಲೆಯ ಸಿದ್ದಾಪುರ ತಾಲೂಕಿನ ಸಸಿಗುಳಿಯಾಗಿರಬೇಕು.

(೨) ಹೊನ್ನಾವರದ ಕೋಟೆಯನ್ನು ಗೋವೆಯ ಕದಂಬ

---

೪. ಅದೇ, ಮೊದಲನೆಯ ಶಾಸನ.
೫. ಅದೇ, ಎರಡನೆಯ ಶಾಸನ.
೬. ಅದೇ, ಮೂರನೆಯ ಶಾಸನ.
೭. ಎಪಿಗ್ರಾಫಿಯ ಕರ್ನಾಟಿಕಾ (ಹಳೆಯದು) ಶಿಕಾರಿಪುರ, ೯೯, ಪುಟಗಳು. ೬೬-೬೭.

ಮೊದಲನೆಯ ಜಯಕೇಶಿ (ಕ್ರಿ.ಶ.೧೦೫೦-೧೦೭೮) ಕಟ್ಟಿಸಿದನೆಂದು ಹಳದಿಪುರದ ಚಂಡೇಶ್ವರ ದೇವಾಲಯದ ವೀರಗಂಬ (ಕ್ರಿ.ಶ. ೧೦೭೮) ಶಾಸನದಿಂದ ತಿಳಿದು ಬರುತ್ತದೆ.[8] ಇದರಿಂದ ಕ್ರಿ.ಶ. ೧೦೭೮ ಕ್ಕಿಂತ ಪೂರ್ವದಲ್ಲಿ ಈ ಭಾಗ ಗೋವೆಯ ಕದಂಬರ ವಶದಲ್ಲಿತ್ತೆಂಬುದು ಸ್ಪಷ್ಟವಾಗುತ್ತದೆ. ಜೊತೆಗೆ ಜಯಕೇಶಿಯು ಕಾಮದೇವನೆಂಬ ಅರಸನನ್ನು ಯುದ್ಧದಲ್ಲಿ ಸೋಲಿಸಿದನೆಂಬ ವಿವರಣೆಯನ್ನು ಗೋವೆಯ ಕದಂಬರ ಶಾಸನವು ತಿಳಿಸುತ್ತದೆ.[9]

(೩) ಪ್ರಸ್ತುತ ಲೇಖನದಲ್ಲಿಯ ಮೊದಲನೇ ವೀರಗಂಬ (ಕ್ರಿ.ಶ.೧೦೭೮)[10]ಶಾಸನದಿಂದ ತಿಳಿದು ಬರುವಂತೆ ಕಾಮದೇವನ ಪರವಾಗಿ ಪಡವಳ ನಂದಿ ಮತ್ತು ಪಡವಳ ಬುದ್ಧ ಯುದ್ಧ ಮಾಡಿ ಗೋಕರ್ಣದಲ್ಲಿ ಅಸುನೀಗಿದರು. ಅಂದ ಮೇಲೆ ಕ್ರಿ. ಶ. ೧೦೭೮ ಕ್ಕಿಂತ ಪೂರ್ವದಲ್ಲಿ ಗೋಕರ್ಣದ ಸರ್ವಾಧಿಕಾರಿ ನಾಗವರ್ಮರಸನಾಗಿದ್ದ. ಗೋಕರ್ಣವನ್ನು ತನ್ನ ಅಂಕಿತದಲ್ಲಿ ತಂದುಕೊಳ್ಳುವದಕ್ಕೋಸ್ಕರವಾಗಿ ಕಾಮದೇವ ಪ್ರಯತ್ನವನ್ನು ಮುಂದುವರಿಸುತ್ತಲೇ ಇದ್ದಿರಬೇಕು.

(೪) ಶಕವರ್ಷ ೧೦೦೨ರ ಶಾಸನದಲ್ಲಿ ಮಾರಸಿಂಗ ಹೆರ್ಗ್ಗಡೆಯನ್ನು ನಾಗವರ್ಮರಸ ಕೊಂದನೆಂದಿದೆ.[11]

(೫) ಲೇಖನದಲ್ಲಿಯ ಕೊನೆಯ ಶಾಸನ [12] ತಿಳಿಸುವಂತೆ 'ಬಲ್ಲಾಳ ಬಯಲಿ'ನಲ್ಲಿ ನಡೆದ ಯುದ್ಧದಲ್ಲಿ ನಾಗವರ್ಮರಸ ಸೋಲನ್ನು ಅನುಭವಿಸುತ್ತಾನೆ. ಹೊನ್ನಾವರದ ಕೋಟೆ ಪುನಃ ಕಾಮದೇವನ ಕೈಗೆ ಬರುತ್ತದೆ.

**ಸಂಶ್ಲೇಷಣೆ**

ಈ ಮೇಲಿನ ಶಾಸನಾಧಾರಗಳನ್ನು ಗಮನಿಸಿದಾಗ ಕಾಮದೇವನ ಇತಿಹಾಸವನ್ನು ಈ ಕೆಳಗಿನಂತೆ ವಿವರಿಸ ಬಹುದು.

ಕೆಕ್ಕಾರ ಮತ್ತು ಹಳದಿಪುರ ವೀರಗಂಬ ಶಾಸನದಲ್ಲಿ ಬರುವ ಪೊನ್ನಾವರ ಪುರವರಾಧೀಶ್ವರ ಕಾಮದೇವನ ಬಳ್ಳಿಗಾವೆ ಶಾಸನದಲ್ಲಿ ಉಲ್ಲೇಖಿತ ಶಿಶುಗಲಿ ಪಾಂಡ್ಯವಂ ಚೂಡಾಮಣಿ ಇಮ್ಮಡಿ ಕಾಮದೇವನಾಗಿದ್ದಾನೆ. ಈ ಹಿಂ ಪಂಚಮುಖಿಯವರು ಗುರುತಿಸಿದಂತೆ ಇವನು ಚಂದಾವ ಕದಂಬ ಅರಸ ಕಾಮದೇವನಲ್ಲ.[13] ಗೋವೆಯ ಕದಂ ಜಯಕೇಶಿಯಿಂದ ನಿಗ್ರಹಿಸಲ್ಪಟ್ಟ ಕಾಮದೇವನು ಇವನೇ ಬಹುಶಃ ಚಾಲುಕ್ಯ ಇಮ್ಮಡಿ ಸೋಮೇಶ್ವರ ಮತ್ತು ವಿಕ್ರಮಾದಿತ್ಯನ ನಡುವೆ ನಡೆದ ಸಿಂಹಾಸನ ಕಲಹ ಸಂದರ್ಭದಲ್ಲಿ ಜಯಕೇಶಿ ವಿಕ್ರಮಾದಿತ್ಯನ ಪರವಹಿಸಿದ್ದನು ವಿಕ್ರಮಾದಿತ್ಯನು ಪಟ್ಟಕ್ಕೇರುವ ಪೂರ್ವದಲ್ಲಿಯ ಅವನೊಂದಿಗೆ ಜಯಕೇಶಿಯು ಆಳುಪರು, ಪಾಂಡ್ಯರು ಮತ್ತು ಚೋಳರ ವಿರುದ್ಧ ದಂಡಯಾತ್ರೆ ಗೈದನು[14]. ಜಯಕೇಶಿಯ ಆಳುಪರನ್ನು ನಿಗ್ರಹಿಸುವದಕ್ಕೋಸ್ಕರವಾಗಿ ಹೊನ್ನಾವರದ ಕೋಟೆಯನ್ನು ಕಟ್ಟಿಸಿರಬೇಕು. ಆಳುಪರೊಂದಿಗೆ ಜಯಕೇಶಿಯು ನಡೆಸಿದ ಕದನದಲ್ಲಿ ಕಾಮದೇವನ ಜಯಕೇಶಿಯ ಪರವಹಿಸಿರುವ ಸಾಧ್ಯತೆ ಇದೆ. ಇವನ ಸಹಕಾ ಪಡೆದುಕೊಂಡ ಜಯಕೇಶಿ ಮತ್ತು ಆರನೇ ವಿಕ್ರಮಾದಿತ ಹೊನ್ನಾವರದ ಅಧಿಕಾರವನ್ನು ಕಾಮದೇವನಿ ಬಿಟ್ಟುಕೊಟ್ಟಿರಬೇಕು. ಇದರಿಂದ ಅವನು ಪೊನ್ನಾವ ಪುರವರಾಧೀಶ್ವರನಾದನು.

ಗೋಕರ್ಣದಲ್ಲಿ ಆಳುತ್ತಿದ್ದ ನಾಗವರ್ಮನು ಒಬ್ಬ ಪ್ರಬಲ ಅರಸನಾಗಿದ್ದನು. ಇವನು ಹೊನ್ನಾವರದ ಕೋಟೆಯನ್ನು ಕ್ರಿ.ಶ.೧೦೭೮ರಲ್ಲಿ ವಶಪಡಿಸಿಕೊಂಡಿದ್ದನು ಇವನ ಕುರಿತಾಗಿ ಇನ್ನಿತರ ಕೆಲವು ಶಾಸನಗಳು ಮಾಹಿ ಒದಗಿಸುತ್ತವೆ. ಅವುಗಳಲ್ಲಿ ಹಾವೇರಿಯ

---

೮. ಗಣಪತಿ ಗೌಡ.ಎಸ್., "ಎರಡನೇ ಕಾಮದೇವನ ಕಾಲದ ಚಂಡೇಶ್ವರ ವೀರಗಲ್ಲು ಶಾಸನ" ಕರ್ನಾಟಕ ಭಾರತಿ, ಸಂ. ೨೩/೨. ಪು-೬-೧೩. ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.,೧೯೯೦.

೯. ಗೋಪಾಲ್.ಬಿ.ಆರ್., ಮೈನರ್ ಡೈನಾಸ್ಟೀಸ್ ಆಫ್ ಸೌತ ಇಂಡಿಯಾ (ಕರ್ನಾಟಕ) ಪುಟಗಳು ೫೨-೫೩.

೧೦. ಲೇಖನದಲ್ಲಿಯ ಮೊದಲನೆ ಶಾಸನ ಸಾಲುಗಳು. ೨೨-೨೮.

೧೧. ಅದೇ, ಎರಡನೇ ಶಾಸನ, ಸಾಲುಗಳು. ೧೨-೩೯.

೧೨. ಅದೇ, ಮೂರನೆಯ ಶಾಸನ ಸಾಲುಗಳು, ೧೨-೧೫

೧೩. ಪ್ರೊಗ್ರೆಸ್ಸ್ ರಿಪೋರ್ಟ್ ಆಫ್ ಕನ್ನಡ ರಿಸರ್ಚ ಇನ್ ಬಾಂಬೇ ಪ್ರಾವ್ಹಿನ್ಸ, ೧೯೪೧-೪೬, ಪುಟಗಳು ೬-೭, ಕನ್ನಡ ಸಂಶೋಧನ ಸಂಸ್ಥೆ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ

೧೪. ಗೋಪಾಲ. ಬಿ.ಆರ್., ಮೈನರ್ ಡೈನಾಸ್ಟೀಸ್ ಆಫ್ ಸೌತ್ ಇಂಡಿಯಾ (ಕರ್ನಾಟಕ), ಪುಟ.೩೪

ಳಗನಾಥದಲ್ಲಿರುವ[15] ಕ್ರಿ.ಶ.೧೦೮೦ರ ಶಾಸನದ ಪ್ರಕಾರ ಮಹಾಮಂಡಳೇಶ್ವರ ಚನ್ನರಸನು ಹೈವೆಯ ನಾಗವರ್ಮನನ್ನು ಸೋಲಿಸಿ ಅವನಿಂದ ಕಪ್ಪಕಾಣಿಕೆಗಳನ್ನು ಪಡೆದಿದ್ದನೆಂದಿದೆ. ಶಕವರ್ಷ ೧೦೩೫ (ಕ್ರಿ.ಶ.೧೧೧೩)ರ ಬಾವಿಕೇರಿಯ ವೀರಗಂಬ ಶಾಸನವು ಮಹಾಮಂಡಳೇಶ್ವರ ನಾಗವರ್ಮನ ವಿಷಯವಾಗಿ ಪ್ರಸ್ತಾಪಿಸುತ್ತದೆ. ಕ್ರಿ.ಶ.ಸು ೧೨ನೇ ಶತಮಾನದ ಕಡಬಾಲ[17] ಶಾಸನದ ಪ್ರಕಾರ ಮಹಾಮಂಡಳೇಶ್ವರ ಜೊಕ್ಕಿದೇವರಸನು ಹೈವೆಯ ನಾಗವರ್ಮರಸನ ವಿರುದ್ದ ದಂಡಯಾತ್ರೆಗೈದಾಗ ಈ ಯುದ್ಧದಲ್ಲಿ ಕಾಳಾಚಾರಿ ಬರ್ಮನ ಮಗನಾದ ಕೋಟಿಗನು ಅಸುನೀಗಿದನು. ಈ ಮೇಲಿನ ಗಳಗನಾಥ, ಬಾವಿಕೇರಿ, ಕಡಬಾಲ ಶಾಸನದಲ್ಲಿ ಹೇಳಿರುವ ನಾಗವರ್ಮನೇ ಹಳದಿಪುರ, ಕೆಕ್ಕಾರ ವೀರಗಂಬ ಶಾಸನದಲ್ಲಿ ಬರುವ ನಾಗವರ್ಮರಸನಾಗಿರಬೇಕು. ಅಂದಮೇಲೆ ಕ್ರಿ.ಶ.ಸು. ೧೦೪೦ ರಿಂದ ಕ್ರಿ.ಶ.ಸು. ೧೧೧೨ರ ವರೆಗೆ ಇವನ ಆಡಳಿತ ವೈಖರಿ ಈ ಭಾಗದಲ್ಲಿ ಚುರುಕಾಗಿಯೇ ಇತ್ತೆಂದು ಹೇಳಬಹುದು.

ಹೈವೆಯ ಮೇಲಿನ ಸಂಪೂರ್ಣ ಅಧಿಕಾರಕ್ಕಾಗಿ ಕಾಮದೇವ ಮತ್ತು ನಾಗವರ್ಮ್ಮರಲ್ಲಿ ಯುದ್ಧ ತೀವ್ರಗತಿಯಲ್ಲಿ ಮುಂದುವರಿಯುತ್ತಲೇ ಇತ್ತು. ಕ್ರಿ.ಶ.೧೦೭೯ರಲ್ಲಿ ನಡೆದ ಬಲ್ಲಾಳ ಬಯಲಿನ ಯುದ್ಧದಲ್ಲಿ ನಾಗವರ್ಮನಿಗೆ ಸೋಲುಂಟಾಗಿ ಕಾಮದೇವನು, ಕೈತಪ್ಪಿಹೋಗಿದ್ದ ಹೊನ್ನಾವರದ ಕೋಟೆಯನ್ನು ವಶಪಡಿಸಿಕೊಂಡನು. ನಂತರ ನಾಗವರ್ಮರಸನ ವಿಷಯವಾಗಿ ಹೆಚ್ಚಿನ ಮಾಹಿತಿ ಲಭ್ಯವಿಲ್ಲ. ನಾಗವರ್ಮ ಬದುಕಿರುವವರೆಗೆ ಕಾಮದೇವನಿಗೆ ಗೋಕರ್ಣವನ್ನು ಜಯಿಸಲಿಕ್ಕೆ ಸಾಧ್ಯವಾಗಲಿಲ್ಲ 'ಗೋಕರ್ಣ ಪುರವರಾಧೀಶ್ವರ' ಎಂಬ ಬಿರುದನ್ನು ಕಾಮದೇವ ಧರಿಸುವ ಹೊತ್ತಿಗೆ ನಾಗವರ್ಮ ಆಗಲೇ ತನ್ನ ಆಡಳಿತದಿಂದ ನಿರ್ಗಮಿಸಿರಬೇಕು.

**ಶಾಸನ ಸಂಖ್ಯೆ-೧**

ಅಮ್ಮನವರ ದೇವಾಲಯದ ಪ್ರಾಕಾರದಲ್ಲಿರುವ ವೀರಗಂಬ ಶಾಸನ, ಶಕ.೧೦೦೦

**ಶಾಸನದ ಪಾಠ**

೧ ಶ್ರೀ ಜಳವಳಿ
೨ ಯ ಚಂದ್ರನ ಕೇಶವಂ ಬರೆದ
೩ ಅವನ ತಟಜಿನ ಬೆನ್ನಂ ಕಾದು
೪ ತಟಜಿ ಹಾಚಂ ಕಾದಂ ಆ-
೫ ಚಂದ್ರಾರ್ಕತಾರಂಬರಂ ||
೬ ಸ್ವಸ್ತಿ ಸಮ-
೭ ಧಿಗತ ಪಂಚಮಹಾ-
೮ ಶಬ್ದ ಮಹಾಸಾಮ-
೯ ನ್ತಾಧಿಪತಿ ಮ-
೧೦ ಹಾ ಪ್ರಚಣ್ಡ ದ-
೧೧ ಣ್ಡನಾಯಕ ನಾ
೧೨ ಸ್ಥಾನವ [ಸ]
೧೩ ನಾಯಕಿಂ [ತಿ]
೧೪ ಯಾಗಿಯ ಗಂಡ
೧೫ ರಾಯಣಂ ಶ್ರೀಮದುಗ-
೧೬ [ರಾ] ಜ ಗೋಮಿಗನ ಮಾವಂ
೧೭ ಪಡವಳ ನಂದಿ ಬೀರರ ಬೀರ
೧೮ ನನ್ನೆಯ ವರ್ಜಿತ ತೇಜ
೧೯ ಚಾಗಸಯಂ. ಮಾತ್ತ
೨೦ ಲೆ ಸಿಂಘಂ ಸಂಗ್ರಾಮಗ-
೨೧ ರುಡಂ ಕೀರ್ತ್ತಿವಿಖ್ಯಾತಂ
೨೨ ಶ್ರೀಮತು ಪಡವಟಿ ನಂ-
೨೩ ದಿ ಗೋಕರ್ಣದಲ್ಲಿ
೨೪ ಸತ್ತ ತೆತ್ತ ನಾ-
೨೫ ಟ್ಟಿ [ತು]ಣ ಮಂ ನಂದಿ-
೨೬ ಯ ಮರ್ಮ್ಮಂ ಪಡೆವ-
೨೭ ಟಿ ಬುದ್ದನ ವೀರಪ-
೨೮ ರಾಕ್ರಮ ಮೆಂತೆಂದೆಡೆ-
೨೯ ಚಲಕೆ ಬಲುಗಣ್ಡಂ
೩೦ ನ[ಪಂಚಗೋ] ತ್ರತ್ತಿ(?)
೩೧ ವೀರಂ ನುಡಿದಂತೆ ಗಂ-

೧೫. ಸೌತ್ ಇಂಡಿಯನ್ ಇನ್‌ಸ್ಕ್ರಿಪ್ಷನ್ಸ್., ಸಂಪುಟ ೧೮, ಶಾ.ಸಂ.೮೮, ಸಾಲುಗಳು ೪೮-೫೨
೧೬. ಅನ್ಯುಯಲ್ ರಿಪೋರ್ಟ್ ಆಫ್ ಇಂಡಿಯನ್ ಎಪಿಗ್ರಫಿ, ೧೯೪೯-೫೦, ಶಾ.ಸಂ.೧೩೩
೧೭. ಅನ್ಯುಯಲ್ ರಿಪೋರ್ಟ್ ಆಫ್ ಸೌತ್ ಇಂಡಿಯನ್ ಎಪಿಗ್ರಫಿ, ೧೯೩೯-೪೦, ಶಾ.ಸಂ.೩೯

೩೨ ಣ್ಣಂ ಶರಣಾಗತ
೩೩ ವಜ್ರ ಪಂಜರಂ ಭು-
೩೪ ಜಬಲ ವೀರ್ಯ್ಯ-
೩೫ ಪರಾಕ್ರಮಮಂ ಶ್ರೀಮತುಪ
೩೬ ಡೆವಳ ಬುದ್ದಂ ಸಖವ-
೩೭ ರ್ಷಂ ಸಾಸಿರದಂದು ಪ-
೩೮ ಡೆವಳ ಬುದ್ದಂ ಕಾಲವ-
೩೯ ಶವನೆಯಿಂದಂ [1*] ಬುದ್ದನ
೪೦ ಮರ್ಮ್ಮಂ ಪಡೆವಳ ಹಾಚ-
೪೧ ನ ವೀರ ಪರಾಕ್ರಮ ಮೆಂ-
೪೨ ತೆಂದೆಡೆ/ ಕಡತೋಕೆಯ
೪೩ ರಕ್ಷಪಾಲಂ ವೀರಲಕ್ಷ್ಮೀ ಕಾನ್ತಂ
೪೪ ಪುಱಿಗೆವರ ಕಾವಂ ಕೂರದ
೪೫ ವೈರಿಗಟ ಬೇರಂ ಕಿರ್ತ್ತಿ್ತವಂಪ
೪೬ ಗಮುಳಗಣ್ಣಾ [ನಾ] ಳಂ
೪೭ ಮುಂನಿಱಿವಂ ಕಾವದೇ-
೪೮ ವನ ಕಟ್ಟಿದಲಗು ಶ್ರೀಮ [ತು*]
೪೯ ಪಡೆವಳ ಹಾಚನುಂ ಬೋಗೊ-
೫೦ ಲಿಗನುಂ ಪೈವೆ ತೆಂಕಲು ಕೊಂ-
೫೧ ಕಣಂ ಬನವಾಸಿಯಱಿಯೆ
೫೨ ಪಗೆಯನಿಱಿದ ಪಡೆವಳ
೫೩ ಬುದ್ದಂಗೆ ಸಕ[ವ]ರ್ಷಂ ೧೦೦೦ ದಂದು.
೫೪ ಕಲ್ಲ ನಿಕ್ಕಿಸಿದರು। ಕಸಪಂ
೫೫ ನನ್ನಿಗನುಂ ಕಳಿಯಲ್ಲತ್ತರು
೫೬ ಅಂಕೋಲೆಯ ನಂದಿ ಓಜಂ
೫೭ ಮಾಡಿದಂ ಚಂದ್ರನ ಕೇ-
೫೮ ಶವನ ತಳಱಿ
೫೯ ನ ಬಿನ್ನವಂ ತಳ
೬೦ ಱಿಂ ಹಾಚಂ ಕಾದಂ ಅಚಂ-
೬೧ ದ್ರಾರ್ಕ್ಕ ಪಾರಂಬರಂ
೬೨ ಕೇಶವಂ ಬರೆದಂ.

ಶಾಸನ ಸಂಖ್ಯೆ-೨

ಅಮ್ಮನವರ ದೇವಾಲಯದ ಪ್ರಾಕಾರದಲ್ಲಿರ
ವೀರಗಂಬ ಶಾಸನ, ಶಕ, ೧೦೦೨)

ಶಾಸನದ ಪಾಠ

೧ ಸ್ವಸ್ತಿ[1*] ಶ್ರೀ ಮತು
೨ ಸಖವರಿಸಂ ಸಾಸಿ-
೩ ರದೆರಡನೆಯ
೪ ಸಿದ್ಧಾರ್ತ್ಥಿ ಸಂ
೫ ತ್ಸರದ ಸ್ವದೆ ಸು-
೬ ದ್ಧ ಪಂಚಮಿ ವಡ್ಡ[ವಾ]
೭ ರ ದಂದು ಸಮಧಿ [ಗ]-
೮ ತ ಪಂಚಮಹಾಸ [ಬ್ಧ]
೯ ಪೊಸ್ನವುರ ಪುರ [ವ]-
೧೦ ರಾಧೀಶ್ವರ ಕಾಮ-
೧೧ ದೇವರಸರ ಹೆರ್ಗ್ಗ [ಡೆ]
೧೨ ಮಾರಪಿಂಗನ
೧೩ ದ ವರ್ಷ್ಯಭಮಂ ಪೇ-
೧೪ ಳುವಡೆ [ನ್ತುದಿಸಿ?]-
೧೫ ತಪ್ಪ [ನಿ?] ಕರ
೧೬ ಕೇಳುಗಂಡ ಭುಜ-
೧೭ ಬಳವೀರ್ಯ್ಯ ಗೋತ್ರಪ-
೧೮ ವಿತ್ರ ಚಲದಂ(ಕ*)ಕಾಱಂ
೧೯ ಮತ್ತಮಾತನ ಪ್ರ
೨೦ ತಾಪಮಂ ಪೇಳ್ವಡೆ
೨೧ ನಾಡಮನೆಯಲು-
೨೨ ವರಮನೆಯಲು ತ-
೨೩ ನ್ನೆಂದ ಮಾತಲ್ಲದೆ ಪೆಱ-
೨೪ ರಮಾತುಗಳಂ ಸಲಲೀ-
೨೫ ಯ ರಾಜಸಭೆ, ಬ್ರಹ್ಮ-
೨೬ ಸಭೆಯಲ್ಲಾತನಕ್ಕು-
೨೭ ವೆಂದುದಕ್ಕು
೨೮ ವಾಗದದು [ವಾ]-
೨೯ ಗದೆಂತೆಂದೆಡೆ ಅತ
೩೦ ನಾಡಲು ಬಲ್ಲಿದಮಾ

೩೧ ನಸನಂಬುದ ನಡೆ-
೩೨ ದು ನಾಡಮಾನಸರಾ-
೩೩ ತನಮೇಲೆ ದುಷ್ಟ ಕ-
೩೪ ಷ್ಟರು ಪಿಸುಣಂ ನು-
೩೫ ಡಿಯೆ ಪಿಸುಣಂ ನಾ-
೩೬ ಗವರ್ಮ್ಮರಸರು
೩೭ ಕೇಳ್ದು

ಎರಡನೆಯ ಮುಖ

೩೮ ಆತನಂ ನಾಗವರ್ಮ್ಮರಸ-
೩೯ ರು ಕೊಂದರಾತಂ ಸ್ವರ್ಗ್ಗಪ್ರಾಪ್ತ-
೪೦ ನಾದಂ ಕೆಕ್ಕಾರ ಗೆಲ್ಲುಗನ ನಂ-
೪೧ ನಿಗನ ಮಗ ಬೆ-
೪೨ ಣ್ನಗನ ಬಳಿಯ
೪೩ ಮಾರಸಿಂಗ ವೆರ್ಗ್ಗಡೆಗಿಕ್ಕಿ-
೪೪ ದ ಸಾಸನ [೦] ಅತನ ವ [ಧು]
೪೫ ಹೊನ್ನಬ್ಬೆವೆರ್ಗ್ಗಡಿತಿಯ
೪೬ ಗೋನುವ ಮೇರುವ ಯಿಂತೀ
೪೭ ಮೂವರ ಮಾಡಿಸಿದ ಕ-
೪೮ ಲ್ಲು ಅಂಕೋಲೆಯ ಪುಟ್ಟಿದ
೪೯ ಲಕ್ಕಗೋಜನಳಿಯ ನಂ-
೫೦ ದಿಯೋಜನ ಮಾಡಿದ ಕ-
೫೧ ಲ್ಲು [ಮನುಪಮ]-
೫೨ ಚರಿಪವಿದ್ಯಾ
೫೩ ವನ್ತ[ರ]ಮಾಗಂ ಕೆಯ್ಸಲ್ಲಿ
೫೪ ಮತ್ತ ಹೆಗ್ಗಡೆ ಜೋಗನ
೫೫ ಮರ್ಮ್ಮಂ ಮಾರಸಿಂಗವೆ-
೫೬ ರ್ಗ್ಗಡೆಯ ಮಗ ಮತ್ತ
೫೭ ಸಮಸ್ತ ಪೊನ್ನ-
೫೮ ವುರ ಪುರವರಾ-
೫೯ ಧೀಶ್ವರ ಕಾಮದೇ-
೬೦ ವರಸರಕ್ಕಡಿಕೆ
೬೧ ಯ ಹೆಗ್ಗಡೆ ಗೋ-
೬೨ ನು ಮಾಡಿಸಿದ ಕಲ್ಲು [1*]ಬ-
೬೩ ರೆದಂ ಸೇನಬೋವ ಮಾ-
೬೪ ತ್ತ್ರಣ್ಣ ಸಾಯಿರ ವ-
೬೫ ರ್ಸ್ಸ ಬಾಳ್ಗೆ ॥

**ಶಾಸನ ಸಂಖ್ಯೆ-೩**

ಅಮ್ಮನವರ ದೇವಾಲಯದ ಎದುರುಗಡೆ ಇರುವ ವೀರಗಂಬ ಶಾಸನ.

**ಶಾಸನದ ಪಾಠ.**

೧ ಸ್ವಸ್ತಿ ಸಮಧಿ-
೨ ಗತ ಪಂಚಮ-
೩ ಹಾಶಬ್ದ ಮಹಾ-
೪ ಮಂಡಳೇಸ್ವ ರಂ
೫ ಪೊನ್ನಾವು
೬ ರ ಪುರವರಾ-
೭ ಧೀಸ್ವರಂ ಶ್ರೀ.
೮ ಮತು ಕಾಂವ-
೯ ದೇವರಸರುಂ ಗೋಕ-
೧೦ ರ್ಣ್ನಪುರವರಾಧೀ-
೧೧ ಸ್ವರಂ ಶ್ರೀಮತು
೧೨ ನಾಗವರ್ಮ್ಮರಸ-
೧೩ ರುಂವೀರ್ವ್ವರುಂ ಬಲ್ಲಾ-
೧೪ ಕೆ ಬಯಲಲು ಬಿ-
೧೫ ಟ್ಟು ಒಡ್ಡೊಡ್ಡಿ ಕಾ-
೧೬ ಳೆಗಂ ಕಾದಿದಲ್ಲಿ
೧೭ ಜಳೆವಳಿಯ ಬಡಮ್ಮ
೧೮ ನಾಗವರ್ಮ್ಮರಸರಾಳ ಪ-
೧೯ ಲರನಿಱಿದು ಜಯಂಗೆ-
೨೦ ಯ್ದು ಪರಲೋಕ ಪ್ರಾಪ್ತ-
೨೧ ನಾದ [1*] ಅವರ ಬಳಿ-
೨೨ ಯ ಬಲ್ಮಾನಸ ಪಿರಿ-
೨೩ ಯ ಹೆರ್ಗ್ಗಡೆ ಹಾಚ-
೨೪ ನುಂ ಮಾಡಿದ ಶಾ-
೨೫ ಸನಂ [1*] ಬರೆದಂ ಸನ್ಧಿ-
೨೬ ವಿಗ್ರಹಿ ಹಇವ-
೨೭ ಣಯ್ಯ [1*] ಮಾಡಿದಂ
೨೮ ಪೊನ್ನೆಯರಸನು [1*] ನಡೆ-
೨೯ ಯಿಸಿದ ಮಾಸ್ತಂಬ
೩೦ [ಮಂ] ಅಯ್ತವಮ್ಮಂ [11*]

ಕೆಳದಿ ಗುಂಡಾಜೋಯಿಸ್ *

# ಆನಂದಪುರ ದೇಶಮುಖ ಮಹತ್ತು ದೇವರಿಗೆ ಮಹಾನಾಡ ಸೆಟ್ಟಿಗಳು ನೀಡಿದ ತಾಮ್ರಶಾಸನ

ದಿನಾಂಕ ೭-೧-೧೯೯೫ ರಂದು ನನಗೆ ಮಂಗಳೂರಿನ ಜಿಲ್ಲಾಧಿಕಾರಿಗಳ ಆಫೀಸಿನಲ್ಲಿರುವ ಪತ್ರಾಗಾರದ ಸಂಶೋಧನೆ ಕೈಗೊಳ್ಳುವ ಸಂದರ್ಭದಲ್ಲಿ ಶ್ರೀಮಂತಿಬಾಯಿ ವಸ್ತುಸಂಗ್ರಹಾಲಯವನ್ನು ಸಮೀಕ್ಷಿಸಲು ಅವಕಾಶ ಲಭಿಸಿತು. ಇದರ ಸದುಪಯೋಗದಿಂದ ವಸ್ತುಸಂಗ್ರಹಾಲಯದಲ್ಲಿ ಪ್ರದರ್ಶನಕ್ಕಿಟ್ಟಿದ್ದ ಅಪೂರ್ವ ತಾಮ್ರಶಾಸನವೊಂದು ನನ್ನ ಗಮನ ಸೆಳೆಯಿತು. ಕೆಳದಿ ಅರಸರ ಕಾಲದ ಈ ಶಾಸನವನ್ನು ಪ್ರಬಂಧಕ್ಕೆ ಸೇರಿಸಿಕೊಳ್ಳಲು ಅನುಮತಿ ನೀಡಿದ ಪುರಾತತ್ವ ಇಲಾಖೆಯ ನಿರ್ದೇಶಕ ಡಾ|| ದೇವರಾಜ್ ಹಾಗೂ ವಸ್ತುಸಂಗ್ರಹಾಲಯದ ಕ್ಯುರೇಟರ್‌ರವರಿಗೂ ಅತ್ಯಂತ ಕೃತಜ್ಞನಿರುವೆನು.

**ಶಾಸನ ವಿವರ:**

ಸುಮಾರು ೨ ಅಡಿ ಉದ್ದ; ೧ ಅಡಿ ಅಗಲವಿರುವ ಈ ತಾಮ್ರಶಾಸನ ಕನ್ನಡ ಲಿಪಿ ಹಾಗೂ ಭಾಷೆಯನ್ನೊಳಗೊಂಡಿದೆ, ಎರಡು ಹಲಗೆಗಳಿದ್ದು ಮೊದಲನೇ ಹಲಗೆಯ ಮುಂಭಾಗದಲ್ಲಿಯ ಮೇಲಂಚಿನಲ್ಲಿ ಸೂರ್ಯ, ಚಂದ್ರ, ಈಶ್ವರಲಿಂಗ, ಪದ್ಮ ಹಾಗೂ ಬಸವನ ಚಿತ್ರವಿದೆ, ಮೊದಲನೇ ಹಲಗೆಯ ಮುಂಭಾಗದಲ್ಲಿ ೪೩ ಸಾಲು ೨೩ ಅಕ್ಷರಗಳು, ಎರಡನೇ ಹಲಗೆಯಲ್ಲಿ ೩೫ ಸಾಲು ೨೧ ಅಕ್ಷರಗಳಿವೆ. ಲಿಪಿಕಾರ ಮತ್ತು ಯಂಗಟಪತಿಯ ಮತ್ತು ವಿರಲಿಂಗೈಯನ ಮುದ್ರಾಂಕಿತ ಒಪ್ಪಿತದ ಅಂಶವನ್ನು ಈ ಶಾಸನವು ಒಳಗೊಂಡಿದೆ* ಪ್ರತಿಸಾಲಿನ ಆರಂಭದಲ್ಲಿ ಯೂ ಸೊನ್ನೆಯಿದೆ.

**ಶಾಸನ ಪಾಠ.**

೧ ೦ ಃ ಶ್ರೀ ಗಣಾಧಿಪತಯೆನಮಃ ನಿರ್ವಿಘ್ನ ಮಸ್ತು ! ಶುಭವಸ್ತು.
೨ ೦ ನಮಸ್ತುಂಗ ಶಿರಶ್ಚುಂಬಿ। ಚಂದ್ರಚಾಮರ ಚಾರವೇ ತ್ರೈಲೋಕ್ಯನಗರಾರಂ
೩ ೦ ಭ ಮೂಲಸ್ತಂಭಾಯ ಶಂಭವೇ। ಸ್ವಸ್ತಿ ಶ್ರೀ ಜಯಾಭ್ಯುದಯ ಶಾಲಿವಾ
೪ ೦ ಹನ ಶಖ ವರ್ಶ ೧೫೪೬ ಸಾವಿರದ ಐನೂರ ನಾಲ್ವತ್ತಾರನೆಯ ವ
೫ ೦ ರ್ತಮಾನಕ್ಕೆ ಸಲುವ। ರುಧಿರೊದ್ಗಾರಿ ಸಂವತ್ಸರದ ಮಾಘ ಬ ೧೪ ಯು
೬ ೦ ಸೊಮವಾರದ ಶಿವರಾತ್ರೆ ಪುಂಣ್ಯಕಾಲದಲೂ ಶ್ರೀ ಮದನೆಕ ಬ್ರಂಹ್ಮ
೭ ೦ ಡ ಭಾಂಡ ಗರ್ಭಗರ್ಭಿಕೃತ ವಿವಿದ ಮಧುಸೂಧನ ತ್ರಿದಶಾಧಿಶ್ವ
೮ ೦ ರದೆವತಾಮಗುಟ ಮಣಿಗಣಕಿರಣ ದಿಪ್ತಾ ದಿಪ್ತ। ಪಾದ ಪಯೊಜ
೯ ೦ ಪರಶಿವಲಿಲಾಕೃತ। ಕಲೆವರಮಪ್ಪ। ಶ್ರಿನಂದಿನಾಥ। ಶ್ರಿಭೃಂಗಿನಾಥ ಶ್ರಿ

* ಕೆಳದಿ ವಸ್ತುಸಂಗ್ರಹಾಲಯ, ಕೆಳದಿ, ಸಾಗರ ತಾಲೂಕು, ಶಿವಮೊಗ್ಗ ಜಿಲ್ಲೆ

* ಇದರ ಛಾಯಾಚಿತ್ರ ವಿದ್ವಾಂಸರಿಗೆ ತೋರಿಸಲು ಸಕಾಲಕ್ಕೆ ದೊರಕದಿದ್ದುದಕ್ಕೆ ವಿಷಾದಿಸುತ್ತೇನೆ,

೧೦ ೦ ವಿರಭದ್ರದೇವರು ಮುಖ್ಯರಾದ । ಶ್ರೀಮತ್ಸಜ್ಜನಶುದ್ಧ ಶಿವಾಚಾರ
೧೧ ೦ ಸಂಪಂನರಾದ। ದೆವಾಪೃಥ್ವಿ ಮಹಾಮಹತ್ತಿನ ಒಳಗಾದ ಆನಂದ
೧೨ ೦ ಪುರದ। ದೆಶೆಮುಖದ ಮಹತ್ತದೆವರಿಗೆ । ಚತುರ್ದಿಕ್ಕು ಪೂರ್ವದಕ್ಷಿ
೧೩ ೦ ಣ ಪಶ್ಚಿಮ ಉತ್ತರದ ವಳಗಾದ ಚಪಂನ ಆ್ಯವತ್ತಾರು ದೆಶವಳನಾ
೧೪ ೦ ಡುಸ್ತಳ ಪರಸ್ತಳ ಮುಂತಾದ ಉಭಯ ನಾನಾದೆಶದ ಮಹಾನಾಡ
೧೫ ೦ ಸೆಟ್ಟಿ ಸಮಸ್ತರೂ ಕೊಟ್ಟ ಮೂಲವಿಸದ ಧರ್ಮಶಾಶನದ ಕ್ರಮವೆಂತ್ತೆಂ
೧೬ ೦ ದರೆ। ಶ್ರೀಮಸ್ವಸ್ತಿ ಸಮಸ್ತ ನಿಜನಾಮಾಲಿಕ ಪ್ರ(ಶ)ಸ್ತಿ ಸಾಹಿತ್ಯರಾದ
೧೭ ೦ ಲೊಕ ವಿಚಾರವಬಲ್ಲಂಥ ಸಾಲುಮೂಲೆ ಸೆಟ್ಟಿ ಮಂತ್ರಿ ಭಾಸ್ಕರ ಮುಂತಾ
೧೮ ೦ ದ। ಶ್ರೀ ಮತ್ಸಜ್ಜನ ಶುದ್ದ ಶಿವಾಚಾರ್ಯ ಸಂಪಂನ್ನರಾದ ಹ(×)ರ ಗುರು ಭ
೧೯ ೦ ಕ್ತಿ ಪರಾಯಣರಾದ ವಿಭೂತಿ ರುದ್ರಾಕ್ಷ ಮಾಲಿಕಾಧಾರಣ ಸಕಲಪ
೨೦ ೦ ವಿತ್ರರಾದ ನಿತ್ಯಪಂಚಾಕ್ಷರಿ ಜಪ ಪರಾಯಣರಾದ ಶಿವಪೂಜಾ
೨೧ ೦ ಧುರಂಧರರಾದ ಸಕಲ ಸದ್ಗುಣಾಲಂಕುಶ ನಯ ವಿನಯದಯದಾ
೨೨ ೦ ಕ್ಷಂಣ್ಯ ಪರೊಪಕಾರ ಶಿದ್ದಿಗಳಾದ ಅನಿತುಜನ ಆಗ್ನಾಪಾಲಕರಾದ(?)
೨೩ ೦ ಶಿಕಾರ್ಯದುರಂಧರರಾದಾ ನಿಗರ್ವಿ ಶಿರೋಮಣಿಗಳಾದ ಪದವಾ
೨೪ ೦ ಕ್ಯಪ್ರಮಾಣಗ್ಯರಾದ। ವಜ್ರಮಾಣಿಕ್ಯಮರಕತ ಗೊಮಿಯಾದಿಕ ಪುಶ್ಕರಾ
೨೫ ೦ ಗಯಂದನಿಲ ಪ್ರವಾಳ ಮೌಕ್ತಿಕ ಮೊದಲಾದ ನವರತ್ನಾಭರಣಭೂಶಿತ
೨೬ ೦ ರಾದ ಶ್ರೀಗಂಧ ಮೊದಲಾದ ಅಷ್ಟಗಂಧಾನುಲೆಪಿತರಾದ। ಮರುಗ ಮಲ್ಲಿಗೆ
೨೭ ೦ ಜಾಜಿ ಮೊದಲಾದ ಸಕಲ । ಮಾಲ್ಯಾನುದಾರಕರಾದ ಮಧುರಾಹಾರನಿರ
೨೮ ೦ ತರಾದ। ಶಡುರಸಾಂಗ ಭೊಜನಪ್ರಿಯರಾದ ಪೂಗೀಫಲನಾಗವಾಲ್ಯೊ ಚೂ
೨೯ ೦ ರ್ನ ಕರ್ಪೂರಾದಿ ವಿಟಿಕಾ ಪ್ರವಿಣರಾದ । ತ್ಯಾಗ್ದಲ್ಲಿಕ ಗಂಗೆ ಸಮಾನರಾದ ಭೊಗ
೩೦ ೦ ದಲ್ಲಿ ದೆವೆಂದ್ರಗೆ ಸಮಾನರಾದ । ವಿರತ್ವದಲ್ಲಿ ವಿಕ್ರಮಾರ್ಕಗೆ ಸಮಾನರಾದ । ರ
೩೧ ೦ ಉದ್ರದಲ್ಲಿ ವಿರಭದ್ರಗೆ ಸಮಾನರಾದ । ಕ್ಷಮೆಯಲ್ಲಿ ಧರಿತ್ರಿಗೆ ಸಮಾನರಾದ ಶಾ
೩೨ ೦ ಂತದಲ್ಲಿ ಪೂರ್ನಚಂದ್ರಗೆ ಸಮಾನರಾದ ಸತ್ಯದಲ್ಲಿ ಹರಿಶ್ಚಂದ್ರಗೆ ಸಮಾನ
೩೩ ೦ ರಾದ ಶಕ್ತಿಯಲ್ಲಿ ಹನುಮಂತಗೆ ಸಮಾನರಾದ ಜಂಗಮಭಕ್ತಿಯಲ್ಲಿ
೩೪ ೦ ಬಸವೆಶ್ವರನಂದದವರಾದ । ಏಕೈಕ ಧಿರರಾದ ಲೋಕೈಕಮಾನ್ಯರಾ
೩೫ ೦ ದ। ಶೊಡ್ರಶದಾನ ಚಿಂತಾಮಣಿಗಳಾದ । ಆಶ್ರಿತ ಜನಕಲ್ಪವೃಷ್ಟಿರಾ
೩೬ ೦ ದ । ಬಂಧುಜನ ಚಿಂತಾಮಣಿಗಳಾದ । ಅನೆಕ ಧರ್ಮ ಪ್ರತಿಷ್ಟಾಪಾಲಕ
೩೭ ೦ ರಾದ । ಅಂಗ ವಂಗ ಕಳಿಂಗ ಕಾಸ್ಮಿರ ಮಘದ ಮಲೆಯಾಳ । ಮತ್ಸ್ಯಮಹಾರಾ
೩೮ ೦ ಷ್ಟ್ರ ಕೊಂಕಣ ತೆಂಕಣ ಯಿಂಗೆಂದ್ರ ಸರೆಶಣ ಬರ್ಬಂ ಹಂಮಿರಾರಜಿನತು
೩೯ ೦ ಳುವ ಸೌರಾಷ್ಟ್ರ । ಕುರುಮ ಕುಂಕಣ ಪುಳಿಂದ್ರ ದ್ರಾವಿಡ ಪಾಂಡ್ಯಾ । ವ
೪೦ ೦ ರ್‍ಪಿತ ವೈಧರ್ಮ । ಸಿಂಧು ಗುಜ್ಜರ ಅವಂತಿಕಾ। ಧರ್ಮ ಕರ್ನಾಟಕಕ್ಕೆ
೪೧ ೦ ಮುಖ್ಯವಾದ ಚಪ್ಪಂನ ಆ್ಯವತ್ತಾರು ದೆಶಾಧಿಶ್ವರರಾದ ಪರಸಮ
೪೨ ೦ ಯ ಕುದರ ಕುಲ ಸಹಾಯುದ । ಜಿನಸಮಯ ಪಾರಾವಾರ ಸುಧಾಕರ
೪೩ ೦ ರಾದ । ಚಂದ ಚಂದ ಗೊಕುಂದ ಮಂದಾರ ನಿಹಾರ ಸಾರಸಂಗ್ರಹಾರಾದ

೨ ನೇ ಹಲಗೆಯ ಮುಂಭಾಗ

೧ ೦ ಆನೆವೆಂನಾಗಂಣ । ಆಂದಣಸೆಟ್ಟಿ ಹುಚೈಯ । ಮುಗದದ ಜೆಡೆಯ
೨ ೦ ಯಪ್ಪ । ಕೆಂಚಪ್ಪ । ಮೂಡಲ ಹಿರಿಯೂರ ದಾಸಪ್ಪ । ಗೂಳೂರ ಚೆಂನಪ್ಪ
೩ ೦ ರಘುನಾಥಸೆಟ್ಟಿ । ಸಿದ್ದಪ್ಪಸೆಟ್ಟಿ । ಮಲ್ಲಿಸೆಟ್ಟಿ । ತುಮುಕೂರದಾಸಂಣಗೌಡ ।
೪ ೦ ಸಿದಂಣ । ಹೆಬ್ಬೂರ ವಿರಸೆಟ್ಟಿ । ನರಸಪ್ಪ । ನ ×× ಡಸೆಟ್ಟಿ । ಲಚಂಮ
೫ ೦ ನ ತಿಂಮ್ಮಯ । ತಿಪ್ಪಂಣನ ಚೆಂನಪ್ಪ । ಸೂರಂಣನ ಸಂಗೈಯ । ಮೂರ್ತಿಸೆ
೬ ೦ ಟ್ಟಿ । ಯರವಾಡಸೆಟ್ಟಿ ಶಿಂಮಯ್ಯು । ಕೈದಾಳ ತಿಪ್ಪಸೆಟ್ಟಿ । ಬಳ್ಳಾಪುರದ
೭ ೦ ಅನಂತ್ಯಯಾ । ಮಾಗಡಿ ದಾಸಪ್ಪ । ಶಿನಿವಾಗಿಲದ ಯಲ್ಲಿಸೆಟ್ಟಿ । ಶಿವರ
೮ ೦ ದಳಅವರೆ ವಿರಂಣ । ಚಿಟ್ಟನಹಳ್ಳಿ ಕೊಂಡಲ್ಲೆಯ ಕುದೂರ ಬಾಲಸೆಟ್ಟಿ
೯ ೦ ಹುಲಿಕಲ್ಲ ಪೆದ್ದಿ ತಿರುಮಲ್ಯಯ । ಯಿಾಡಲ ಕೊಂಡ್ಯಯ । ಗುತ್ತಲೂರ ನರ
೧೦ ೦ ಸ್ಯಯ । ಕೈದಾಳ ತಿಂಮಿಸೆಟ್ಟಿ । ಅಪ್ಪಂಮನ ತಿಂಮರಾಯ । ಬೆಂಗಳೂರ ಬಾಲಕೃಷ್ಣ
೧೧ ೦ ಯ್ಯ । ತೂಗೂರ ಕೃಷ್ಣಯ್ಯ । ಅನಂತ್ಯಯ । ಯಲ್ಲೂರ ಸಿದ್ದಪ್ಪ । ಅಳುಗುಂಟೆ
೧೨ ೦ ದೊಡ್ಡಕೊಂಡಲ್ಯಯ । ದೊಡವೆಂಕಟಗಿರಿಸೆಟ್ಟಿ। ದಾಸಂಣ । ಅಪ್ಪಂಣ
೧೩ ೦ ತಿರಕಪ್ಪ । ನಲ್ಲು ಕೊನೆರಿಸೆಟ್ಟಿ । ತೊಪಿಸೆಟ್ಟಿ । ಮುಳವಾಗಿಲ ಪಾತಾಳ ಬಸೆಟ್ಟಿ । ಬಡ
೧೪ ೦ ಗಲ ದಂಡಪ್ಪ । ಕಡಲೆ ಬಸೆಟ್ಟಿ । ಕಣತೂರ ಬಸೆಟ್ಟಿ । ರಾಚಪ್ಪ । ನಾಗಮಂಗಲ
೧೫ ೦ ದ ಜೆಡೆಯಪ್ಪ । ಕೊನೆರಿಸೆಟ್ಟಿ ತಿಂಮಪ್ಪ । ರಬ್ಬಳಿಗೆ ಚೆಂನಪ್ಪ । ನಾಲ್ಕುತ್ತ
೧೬ ೦ ಬಾಡ ಚೆಂನಪ್ಪ । ಧರ್ಮಾವರದ ಕಳಸ್ಯೆಯ । ಪೆನುಗುಂಡೆ ಯಿಾಶ್ವರ
೧೭ ೦ ಪೆನುಗುಂಡಿ ಯಿಾಶ್ವರ ಸೆಟ್ಟಿ । ಅಂಗಡಿ ಚೆಂನಪ್ಪ । ದುಂಮಿಾ ಮರುಳೈಯ್ಯ ರಾ
೧೮ ೦ ಣೆಬೆಂನೂರ ರಿತ್ತಿ ಚೆಂನಮಲ್ಲಪ್ಪ । ಚಿಲದ ಮಲುಕಪ್ಪ । ಕಾಮಂಣನ
೧೯ ೦ ಚೆಂನಯ್ಯ । ಪೆನುಗುಂಡಿ ಗಂಗಸೆಟ್ಟಿ । ಗೂಳೂರ ದಾಸಸೆಟ್ಟಿ। ಮುಂತಾದ ಚತುರ್ದಿಕ್ಕು
೨೦ ೦ ಆ್ಯವತ್ತಾರು ದೆಶ ವಳನಾಡು ಸ್ತಳ ಪರಸ್ತಳ ಮುಂತಾದ ಉಭಯ ನಾನಾ ದೆಶದ ಸೆ
೨೧ ೦ ಟ್ಟಿಗಳು ಮುಂತಾದ ಸಮಸ್ತ ದೆಶದ ಮಹಾನಾಡವರೂ ಕೊಟ್ಟ ಮೂ(ಲು)
೨೨ ೦ ವಿಸದ ಧರ್ಮಶಾಶನ । ಯಿಂತೊಪ್ಪಿದಕ್ಕೆ ದೆವಸಾಕ್ಷಿ ಆದಿತ್ಯ ಚಂ
೨೩ ೦ ದ್ರವನಿಲೊನಲಶ್ಚ । ದೆ ಉರ್ಭುಮಿರಾಪೊಹ್ರುದಯಂ ಯಮಶ್ಚ । ಆಾ
೨೪ ೦ ಹಶ್ಚರಾತ್ರೌ ಉಭೆಚ ಸಂಧ್ಯಾ । ಧರ್ಮಸ್ಯ ಜಾನಾತಿ ವರಾಸ್ಯ ಉ್ರುಕ್ತಂ
೨೫ ೦ ಕರ್ತುಗಳ ವಪ್ಪಿತ ಶ್ರೀ ಸಂಗಮೆಶ್ವರ
೨೬ ೦ ಯಿಂತಿವರ ಉಭಯಾನುಮತದಿಂದ ಯಿಾಶಾಶನವ ಬರದಾತ
೨೭ ೦ ದಾನಪಾಲಿನಯೊರ್ಮಧ್ಯೆ ದಾನಾತ್ಶೆಯೊನುಪಾಲನಂ । ದಾನಾಕ್ಶೈಲ್
೨೮ ೦ ಅಪಮಾಪ್ನೊತಿ ಪಾಲನಾದಿಶ್ವರಂ ಪದಂ ಸ್ವದತ್ತಾದ್ವಿ ಗುಣಂ ಪೂ
೨೯ ೦ ಣ್ಯಂ ಪರದತ್ತಾನು ಪಾಲನಂ । ಪೆರದತ್ತಾಪಹಾರೆಣ ಸ್ವೆದತ್ತಂ ನಿಶ್ಪಲಂ
೩೦ ೦ ಭವೆತು । ಸ್ವದತ್ತಾ ಪುತ್ರಿಕಾಧಾತ್ರಿಪಿತ್ರು ದತ್ತಾಸಹೊದರಿ । ಅಂನ್ಯದತ್ತಾನ್ಸಯಂ ।
೩೧ ೦ ಮಾತಾದತ್ತಾ ಧರ್ಮಂ ಪರಿತ್ಯಜೆತ್ । ಸ್ವದತ್ತಾ ಪರದತ್ತೊ ವಾಯೊಹ
೩೨ ೦ ರೆತಿ ವಸುಂಧರಾ ಶಷ್ಟಿರ್ವರುಶ ಸಹಸ್ರಾಣಿ ವಿಷ್ಟಾಯಾಜಾಯತೆ ಕ್ರಿ
೩೩ ೦ ಮಿ
೩೪ ೦ ದೆಷಮುದ್ರೆ ಯಂಗಟಪತಿಯ ವಪಿತದ
೩೫ ೦ ಬರಹ ವಿರೆಲಿಂಗೈನ ವೊಪಿತದ ಬರಹ

ಶಾಸನದಲ್ಲಿಯೇ ನಿರೂಪಿಸಿದಂತೆ ಇದರ ಕಾಲವು ಕ್ರಿ.ಶ. ೫೪೬ ನೇ ಮಾಘ ಬ ೧೪ನೇ ಸೋಮವಾರ-ಶಿವರಾತ್ರಿ ಪುಣ್ಯಕಾಲ. ಡಾ॥ ಸ್ವಾಮಿಕಣ್ಣುಪಿಳ್ಳೆಯವರ ಇಂಡಿಯನ್ ಎಫಿಮೆರೀಸ್ ಮೇರೆಗೆ ದಿನಾಂಕ ೭-೨-೧೬೨೪ ಶನಿವಾರವಾಗುತ್ತದೆ. ರುಧಿರೋದ್ಗಾರಿ ಸಂವತ್ಸರ ಮಾಘಮಾಸ ಹಾಗೂ ಬಹುಳ ೧೪ ಈ ತಾರೀಖಿಗೆ ಸರಿಸುಮಾರಾಗಿ ಹೋಲಿಕೆ ಕಂಡುಬರುತ್ತದೆ. ಆದರೆ ಸೋಮವಾರಕ್ಕೆ ಬದಲಾಗಿ ಶನಿವಾರವಾಗಿರುವುದು ವ್ಯಕ್ತಪಡುತ್ತದೆ.

ಎಪಿಗ್ರಾಫಿಯಾ ಕರ್ನಾಟಿಕಾ, ಸಂ.೮, ಶಾಸನ ನಂ. ೨೩ರ ಶಾಸನದ ೫ನೇ ಸಾಲಿನಿಂದ ೧೧ನೇ ಸಾಲಿನವರೆಗೆ ಸ್ವಲ್ಪ ಮಟ್ಟಿಗೆ ಈ ಶಾಸನದಲ್ಲಿ ನಿರೂಪಿಸಿದ ಬಿರುದಾಂಕಿತಗಳಿವೆ. ಇದರ ಕಾಲ ಕ್ರಿ.ಶ.೧೫೨೯ ನೇ ಪರಾಭವ ಸಂ. ಜೇಷ್ಠ ಶುದ್ಧ ೫. ಎಂದರೆ ಕ್ರಿ.ಶ.೧೬೦೬ ಆಗುತ್ತದೆ. ಬೆಂಗಳೂರು, ಕೋಲಾರ ಮೊದಲ್ಗೊಂಡು ಪೆನುಗೊಂಡೆ, ರಾಣಿಬೆನ್ನೂರು ಮುಂತಾದ ಪ್ರದೇಶಗಳಲ್ಲಿ ಕಂಡುಬರುವ ಕರ್ನಾಟಕದ ವರ್ತಕರ ನಿರೂಪಣೆಗಳು ಆಸಕ್ತಿಯಿಂಟು ಮಾಡುತ್ತವೆ. ಕರ್ನಾಟಕ ವಿಶ್ವವಿದ್ಯಾಲಯದ ಡಾ॥ ಬಿ.ಆರ್ ಹಿರೇಮಠ್‌ಅವರು ನಿರೂಪಿಸಿದಂತೆ ವಸ್ತುನಿಷ್ಠತೆಯಿಂದ ಕೂಡಿದ ಶಾಸನಗಳಲ್ಲಿ ನಾಡಿನ ಆರ್ಥಿಕ ವ್ಯವಸ್ಥೆಯ ಮೂಲಭೂತ ಘಟಕಗಳಾದ ವರ್ತಕ ಮತ್ತು ವರ್ತಕ ಸಂಘಗಳ ಚರಿತ್ರೆಯ ಅಧ್ಯಯನ ಮಹತ್ವಪೂರಿತವಾದುದು. ಈ ಮೂಲಭೂತ ಅಂಶಗಳನ್ನೊಳಗೊಂಡ ವರ್ತಕ ವೃತ್ತಿಗಳ ಅಧ್ಯಯನ ನಾಡಿನ ಆರ್ಥಿಕ, ಸಾಮಾಜಿಕ, ರಾಜಕೀಯ, ಸಾಂಸ್ಕೃತಿಕ ಜೀವನದ ಪರಿಚಯವಾಗುವುದು. ಡಾ॥ ಹಿರೇಮಠ್‌ಅವರ 'ಶಾಸನಗಳಲ್ಲಿ ಕರ್ನಾಟಕದ ವರ್ತಕರು' ಕೃತಿಯಲ್ಲಿ ಕ್ರಿ.ಶ.೪೫೦ ರಿಂದ ೧೫೬೫ ರವರೆಗೆ ಮಾತ್ರ ಈ ಕುರಿತು ಅಧ್ಯಯನ ನಡೆದಿದ್ದು, ಈ ಶಾಸನವು ಇದಕ್ಕೆ ಪೂರಕ ಅಂಶವಾಗುವುದಾದಲ್ಲಿ ನನ್ನ ಈ ಪ್ರಬಂಧವು ಸಾರ್ಥಕ ವಾಗಬಹುದೇನೋ?*

---

* *ಶಾಸನಗಳಲ್ಲಿ ಕರ್ನಾಟಕದ ವರ್ತಕರು ;* ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೮೬, ಅರಿಕೆ ಪುಟ x ನೋಡಿರಿ.

ಡಾ.ಕೆ.ಜಿ.ವಸಂತಮಾಧವ *

# ಬೈಂದೂರಿನ ಎರಡು ಶಿಲಾಶಾಸನಗಳ ಅಧ್ಯಯನ

ಕುಂದಾಪುರ ತಾಲೂಕಿನ ಉತ್ತರದ ಅಂಚಿನಲ್ಲಿರುವ ಬೈಂದೂರು ಕೆಲವು ಪ್ರಮುಖ ಇತಿಹಾಸ ಸ್ಮಾರಕ ಮತ್ತು ಕೆಲವು ಶಾಸನಗಳನ್ನು ಒಳಗೊಂಡಿದೆ. ಈ ಶಾಸನ ಮತ್ತು ಸ್ಮಾರಕಗಳು ಇಲ್ಲಿನ ಇತಿಹಾಸದ ಕೆಲವು ಸಂಗತಿಗಳನ್ನು ಬೆಳಕಿಗೆ ತರಲು ಸಹಾಯವಾಗುತ್ತವೆ. ಇಂತಹ ಶಾಸನಗಳಲ್ಲಿ ಶಕ.೧೩೭೧ರ ಎರಡು ಶಿಲಾಲೇಖನಗಳು ಗಮನಿಸು ವಂತಾದ್ದೆ. ಈಶಾಸನಗಳು ಈಗ ನಾಶವಾಗಿದ್ದರೂ ಇವುಗಳ ಇರುವುಕೆಯನ್ನು ಶಾಸನ ಖಾತೆಯ ೧೯೩೦ರ ವರದಿಯಲ್ಲಿ ತಿಳಿಸಿವೆ.[1] ಈ ಶಾಸನಗಳ ಕೆಲವು ಅಂಶಗಳನ್ನು ಶಾಸನ ಖಾತೆಯ ಮುಖ್ಯಾಧಿಕಾರಿಯಿಂದ ಈ ಪ್ರಬಂಧದ ಲೇಖಕರು ಪಡೆದುಕೊಂಡಿದ್ದಾರೆ.

ಜಿನಚಿಹ್ನೆ ಹೊಂದಿರುವ ಒಂದು ಶಾಸನವು ವಿಜಯಾಭ್ಯುದಯ ಶಕವರುಷ ೧೩೭೧ನ್ನು ತಿಳಿಸಿ ಮಲ್ಲಿಕಾರ್ಜುನ ಮಹಾರಾಯನ ಆಳ್ವಿಕೆ ವಿಜಯನಗರ ದಲ್ಲಿದ್ದದ್ದು ತಿಳಿಸುತ್ತದೆ. ಇದರೊಂದಿಗೆ ದೇವಪ್ಪದಂಣಾಯಕ ಮತ್ತು ಬಾರಕೂರು ರಾಜ್ಯಪಾಲಕ ಗೋಪನಾಥ ಒಡೆಯನ ಉಲ್ಲೇಖವಿದೆ. ಇವುಗಳು ಆಗಿನ ಕಾಲದ ರಾಜಕೀಯ ಸ್ಥಿತಿಗತಿಗಳನ್ನು ತಿಳಿಸುತ್ತದೆ. ನಂತದ ''ಸುರನರ ಉರಗನು ಧರೆಯೊಳಗಗ್ಗಳಂ ಬೈಂದೂರು ಪಾರ್ಶ್ವನಾಥ'' ಎಂಬ ಉಕ್ತಿ ಈ ಶಾಸನದಲ್ಲಿ ಬಂದಿದೆ. ಇದೇ ಶಾಸನವು ಈ ನಗರದೊಳಗಿ ರುವ ಪಾರ್ಶ್ವನಾಥ ಬಸದಿಯ ಗಡಿತಿಳಿಸಿ, ಈ ಬಸದಿಯ ಧರ್ಮ ಕಟ್ಟಳೆಗೆ ಸ್ಥಳೀಯ ಸೆಟ್ಟರು[2] ಬೈಂದೂರು ಮತ್ತು ಉಪ್ಪುಂದ ಗ್ರಾಮಗಳಲ್ಲಿ ಬಿಟ್ಟದಾನ ಭೂಮಿಗಳ ವಿವ ತಿಳಿಸುತ್ತದೆ. ಇಷ್ಟಲ್ಲದೆ, ಈ ಬಸದಿಯ ಮೇಲೆ ಮೇಗಿನ ನೆಲೆಯಲ್ಲಿ, ಮಳೆಗಾಲದಲ್ಲಿ ತಂಗುವ ಎರಡು ತಂ 'ರುಶಿ'ಯರ್ಗೆಮಾಳ್ಪನ ಒಡಹುಟ್ಟಿದ ಬಾಲೆ ಯಕ್ಕಸೆಟ್ಟಿಯು ಮಾಡಿದ ಧರ್ಮವನ್ನು ಇದೇ ಶಾಸನವು ತಿಳಿಸುತ್ತದೆ ಬಿಟ್ಟಧರ್ಮ ಬಾರಕೂರು ಕಾಟಿಗದ್ಯಾಣ ೨೦೦. ಇದರಲ್ಲಿ ಈ ಬಸದಿಯು ಪಾರ್ಶ್ವನಾಥನ 'ಹಾಲಧಾರೆ'ಯೂ ಒಳಗೊಂಡಿದೆ. ಬ್ರಹ್ಮದೇವರ ದೀಪ್ತಿಗೂ ದಾನವನ್ನು ಬಿಟ್ಟಿದೆ.

ಇಲ್ಲಿದ್ದ ಇನ್ನೊಂದು ಶಿಲಾಲೇಖವು, ಇದೇ ಶಕ ವರುಷದಲ್ಲಿ ಸಂಗೀರಾಯನ ಕುಮಾರ ಇಂದ್ರಗರಸ ಒಡೆಯನು ಹಾಡುವಳಿ ರಾಜ್ಯ ಪ್ರತಿಪಾಲಿಸುತ್ತಿದ್ದು ಈ ರಾಜ್ಯದಲ್ಲಿ ಭಟ್ಕಳ ಮತ್ತು ಬೈಂದೂರು ಒಳಗೊಂದಿತ್ತು ಎಂದು ತಿಳಿಸಿದೆ. ಇದೇ ಪಾರ್ಶ್ವನಾಥ ಬಸದಿಯ ತೀರ್ಥಂಕರ ಪೂಜಾ ವಿಧಿಗಳಿಗೆ ಸ್ಥಳೀಯ ಸೆಟ್ಟರು ೧೨ ಮೂಡೆ ಉತ್ಪತ್ತಿ ಇರುವ ಗದ್ದೆಯನ್ನು ಬೈಂದೂರಿನಲ್ಲಿ ಬಿಟ್ಟರೆಂದು ಇದೇ ದಾಖಲೆಯಲ್ಲಿ ನಮೂದಿಸಿದೆ.

## ಉಪಸಂಹಾರ

ಈ ಎರಡು ಶಾಸನಗಳು ಬೈಂದೂರು ಪರಿಸರದ ಸಮಗ್ರ ಇತಿಹಾಸ ತಿಳಿಸುತ್ತವೆ. ಆಗಿನ ಕಾಲದಲ್ಲಿ ಬೈಂದೂರು ವಿಜಯನಗರ ಅರಸರ ರಾಜ್ಯಪಾಲಕ ಮತ್ತು ಹಾಡುವಳ್ಳಿಯ ರಾಜರ ಸಂಯುಕ್ತವಾದ ಆಡಳಿತಕ್ಕೆ ಸೇರಿತ್ತು. ಬಾರಕೂರು ರಾಜ್ಯಪಾಲಕ, ಗೋಪನಾಥ ಒಡೆಯರ[3] ಮತ್ತು ದಂಣಾಯಕ

* 'ಆರಾಧನಾ' ಪಾವಂಜೆ, ಹಳೆಯಂಗಡಿ-೭೪೧೪೬

1. ಎ.ಆರ್.ಎಸ್. ಐ.ಇ. ೧೯೩೦-ಸಂ.೫೩೬,೫೩೭
2. ಗಾವಣ ಬಳಿಯ ಗಣಪಸೆಟ್ಟಿ, ಪುರುಷಸೆಟ್ಟಿ ಅರುಣಿ ಬಳಿ ಕಾಡಿಯಂಣ ಸೆಟ್ಟಿ, ಪಡುವಕುಪ್ಪಿ ಸೆಟ್ಟಿ ಮತ್ತು ಉಪ್ಪುಂದದ ಮಾಬಲ ಸೆಟ್ಟಿಯ ಮಕ್ಕಳು.
3. ಕ್ರಿ.ಶ.೧೪೫೦ ರಲ್ಲಿ ಲಿಂಗಪ್ಪ ಒಡೆಯ ಬಾರಕೂರು ರಾಜ್ಯ ಪಾಲಕ ಎಂದು ಈ ವರೆಗೆ ತಿಳಿಯಲಾಗಿತ್ತು. ವಿವರ: ಕೆ.ವಿ.ರಮೇಶ; ತುಳುನಾಡಿನ ಇತಿಹಾಸ, ಉಡಪಿ, ೧೯೬೯, ಪು. ೯೧.

ೇವಪ್ಪರ ಹೆಸರು ಪ್ರಥಮವಾಗಿ ತಿಳಿದು ಬರುವುದು ಈ ಾಸನದಲ್ಲಿ. ಇಲ್ಲಿನ ಜೈನಧರ್ಮದ ಚಿತ್ರಣವು ಈ ಾಸನಗಳಲ್ಲಿ ಮೂಡಿಬಂದಿದೆ. ಈ ಪಾರ್ಶ್ವನಾಥ ಬಸದಿಯು ್ಯಂದೂರು ನಕರದವೊಳಗೆ[4] ಇದ್ದಿತು. ಈ ರೀತಿ ತಿಳಿಸುವ ಾಸನಗಳು ಬಹಳ ಅಪರೂಪ. ಈ ಬೈಂದೂರು ಭವ್ಯ ನರಿಂದ ಶೋಭಿತವಾಗಿತ್ತು. ಇಲ್ಲಿನ ಜೈನಗುರುಪರಂಪರೆ, ಲಲಿತಕೀರ್ತಿ ಚಂದ್ರಪ್ರಭ, ಶ್ರೀ ಮೂಲಸಂಘದ ಪುಸ್ತಗಚ್ಛದ ೊಂಡಕುಂದಾನ್ವಯ ದೇಸಿಗಣ'' ವಾಗಿತ್ತು. ಧರ್ಮಚಂದ್ರ ೇವರು ಇಲ್ಲಿನ ಬಸದಿಯಲ್ಲಿದ್ದು ಧರ್ಮಕಾರ್ಯ ಡೆಸಿಕೊಂಡು ಬರುತ್ತಿದ್ದರೆಂದು ಈ ದಾಖಲೆಯ ಅಧ್ಯಯನವು ೂಚಿಸುತ್ತದೆ. ಈ ಬಸದಿಯ ಧಾರ್ಮಿಕ ಕಟ್ಟಳೆಗಳಲ್ಲಿ ುಳೆಗಾಲದಲ್ಲಿ ತಂಗುವ 'ರುಶಿ'ಗಳಿಗೆ ಆಹಾರ ದಾನ, ುತ್ತು ಇಲ್ಲಿನ ಬಸದಿಯ ಬ್ರಹ್ಮದೇವರ ದೀಪ್ತಿ ಸಮಾರಂಭ ಮನಾರ್ಹವಾಗಿವೆ. ಬೈಂದೂರಿನ ಗೋಪಿನಾಥ ಮತ್ತು ುಪ್ಪುಂದ ದುರ್ಗಾದೇವಿ ದೇವಾಲಯಗಳ ಉಲ್ಲೇಖಗಳು ಈ ದೇವಾಲಯಗಳ ಚಾರಿತ್ರ್ಯಮಹತ್ವ ತಿಳಿಯಲು ಹಾಯಕವಾಗಿವೆ. ಈ ದೇವಾಲಯಗಳಿಗೆ ದೇವಸ್ವ ಮತ್ತು ಬಾಳು'[5]ಗಳಿದ್ದದ್ದು ಅಲಕ್ಷಿಸುವ ಸಂಗತಿಗಳಲ್ಲ. ಒಟ್ಟಿನಲ್ಲಿ ಾರ್ಶ್ವನಾಥ ಬಸದಿ ಮತ್ತು ದೇವಾಲಯಗಳೊಳಗೆ ೂಹಿಡುವಳಿಗಳಲ್ಲಿ ಹೊಂದಾಣಿಕೆ ಇದ್ದಿತು ಎಂದು ಈ ಾಸನದ ಅಧ್ಯಯನದಿಂದ ವ್ಯಕ್ತವಾಗುತ್ತದೆ. ಈ ಎರಡು ಾಸನಗಳು ಬೈಂದೂರು ಮತ್ತು ಉಪ್ಪುಂದಹಳ್ಳಿಮಿಶ್ರಿತ ಪಟ್ಟಣಗಳೆಂದು ತಿಳಿಸುವುದು ಗಮನಾರ್ಹ. ಬೈಂದೂರು ನಕರ'ದಲ್ಲಿ ಓಣಿ, ಹಿತ್ತಲಿನ ಓಣಿದಾಗಳಾಗಿದ್ದವು. ುಪ್ಪುಂದದಲ್ಲಿ 'ಅಂಗಡಿ' ಇದ್ದು ಇದರ ತೆಂಕಲಿನಲ್ಲಿ ಹಿತ್ತಿಲು ಇದ್ದವು. ಒಟ್ಟಿನಲ್ಲಿ ಬೈಂದೂರು ಮತ್ತು ಉಪ್ಪುಂದಗಳಲ್ಲಿ ಸಣ್ಣ ಪ್ರಮಾಣದ ವ್ಯಾಪಾರಗಳು ನೆಡೆಯುತ್ತಿದ್ದವು. ಇಲ್ಲಿನ ಭೂಹಿಡುವಳಿ ಪದ್ಧತಿಗಳ ಕುರುತಾಗಿ ಈ ಶಾಸನಗಳು ಕೆಲವು ಕುತೂಹಲಕರ ಮಾಹಿತಿಗಳನ್ನು ತಿಳಿಸುತ್ತವೆ. ಇವುಗಳಲ್ಲಿ ಮುಖ್ಯವಾದವುಗಳು ಬಾಳು, ಉತ್ತಿಗೆ,[6] ದೇವಸ್ವ ಇವುಗಳನ್ನು ಅನುಭವಿಸಿಕೊಂಡು ಬರುವ ಜಾತಿಯವರು ಬ್ರಾಹ್ಮಣ (ಹೆಬ್ಬಾರ), ಸೆಟ್ಟರು, ಹೆಗ್ಗಡೆ, ನಾಯಕ ಮತ್ತು ಸಾಲೆಯವರು ಬ್ರಾಹ್ಮಣೇತರ ಜಾತಿಯವರಲ್ಲಿ ಮುಖ್ಯವಾದ ಬಳಿಗಳಾದ ಗಾವಣಿ, ಅರುಣೆ, ಮತ್ತು ಬಂಕಿಗಳೆಂಬ ಹೆಸರುಗಳು ಸ್ವಾರಸ್ಯವಾಗಿವೆ. ಭೂಹಿಡುವಳಿ ಕ್ರಮ ಮಕ್ಕಳು ಮತ್ತು ಸ್ತ್ರೀ ಸಂತಾನ ಪರಂಪರೆಗಳಂತೆ ನಡೆದು ಬರುತ್ತಿದ್ದವು. ಹಿತ್ತಿಲು, ಹಿತ್ತಿಲಗದ್ದೆ, ಬಯಲಗದ್ದೆ, ಕೆರೆಯಗದ್ದೆ, ಕೆರೆಯ ಬಯಲಗದ್ದೆ ಕರಣಿಕನಗದ್ದೆ. ಬೆಂಮರ ಹಾಳೆಯಗದ್ದೆ ತೆಂಗಿನತಾರೆಗಳೆಂಬ ವಿವಿಧ ತರಗತಿಯ ಕ್ರಮ ಭೂಮಿಗಳಿದ್ದವು ಎಂದು ಈ ಶಾಸನಗಳು ತಿಳಿಸುತ್ತವೆ. ಕೆರೆ, ನೀರು ಹರಿಯುವ ಓಣಿ, ಮತ್ತು ತೋಡುಗಳ ಮುಖಾಂತರ ನೀರಾವರಿ ನಡೆಸಿದ ಬೇಸಾಯವು ಇಲ್ಲಿ ನಡೆಯುತ್ತಿದ್ದವು. ತೋಡು,ಕೆರೆ. ತೆಂಗಲು ಬಂದ ಹಿತ್ತಿಲು, ದೇವಾಲಯದ ಓಣಿ ತೆಂಗಿನ ತಾರೆ ಇತ್ಯಾದಿಗಳ ಉಲ್ಲೇಖಗಳು ಇಲ್ಲಿನ ಪರಿಸರದ ಚಿತ್ರಣವನ್ನು ನೀಡುತ್ತವೆ. ಬೈಂದೂರು ಮತ್ತು ಉಪ್ಪುಂದ ಮದ್ಯೆ ಈಗ ಇರುವ ಹೊಳೆಯ ಉಲ್ಲೇಖ ಈ ಶಾಸನಗಳಲ್ಲಿ ಇಲ್ಲದಿದ್ದು ಆಶ್ಚರ್ಯವಾಗಿದೆ. ಹಾನೆ, ಬಿತ್ತುವ ಮೂಡೆ, ಕಾಟಿಗದ್ಯಾಣ ಹೊಂನು ಮತ್ತು ಬಾರಕೂರು ಪರಿವರ್ತನೆಗೆ ಸಲ್ಲುವ ಕಾಟಿ ಹೊಂನು ಇತ್ಯಾದಿಗಳ ಉಲ್ಲೇಖಗಳು ಇಲ್ಲಿನ ಅಳತೆ ಮಾನಗಳನ್ನು ತಿಳಿಸುತ್ತವೆ. ಒಟ್ಟಿನಲ್ಲಿ ಗ್ರಾಮ್ಯಮಿಶ್ರಿತ ನಗರ ಸಂಸ್ಕೃತಿಯ ಕೆಲವು ಮಾಹಿತಿಗಳನ್ನು ಈ ಶಾಸನಗಳ ಅಧ್ಯಯನವು ನೀಡುತ್ತದೆ. ○

---

4. ಆದರೆ ಈಗ ಈ ಬಸದಿಯ ಕುರುಹುಗಳು ಬೈಂದೂರು ಪೇಟೆಯ ಹೊರಗೆ ಇವೆ. ಇದರಿಂದ ಈ ಬೈಂದೂರು ಈಗೀನದಕ್ಕಿಂತ ವಿಸ್ತಾರವಾಗಿತ್ತು ಎಂದು ಅಭಿಪ್ರಾಯ ಪಡಬಹುದು.
5. ಬಾಳು ಕುಟುಂಬಗಳ ಅಥವಾ ವ್ಯಕ್ತಿಗಳ ಭೂಸ್ವತ್ತನ್ನು ತಿಳಿಸುತ್ತದೆ ದೇವಾಲಯಕ್ಕೆ ಬಿಟ್ಟ ಭೂಸ್ವತ್ತು ದೇವಸ್ವ.
6. ಉತ್ರಿ ಅಥವಾ ವೃತ್ತಿ= ಭೂಮಿಯನ್ನು ವೃತ್ತಿಯಾಗಿ ಅಥವಾ ದಾನವಾಗಿ ಪಡೆದವನು ಇದನ್ನು ಹೆಚ್ಚಾಗಿ ಬ್ರಾಹ್ಮಣರು ಹೊಂದಿದ್ದರು.

* ಈ ಶಾಸನಗಳ ಕುರುತಾಗಿ ಕೆಲವು ಮಾಹಿತಿಗಳನ್ನು ನೀಡಿದ ಶ್ರೀ ಮಾಧವ ಕಟ್ಟ ಮತ್ತು ಡಾ॥ ಸಂಪತ್ (ಭಾರತ ಶಾಸನ ಖಾತೆಯ ಅಧಿಕಾರಿಗಳು,) ಇವರಿಗೆ ಈ ಲೇಖಕರು ಕೃತಜ್ಞರಾಗಿದ್ದಾರೆ ಈ ಲೇಖನ ಪರಿಷ್ಕರಿಸುವಲ್ಲಿ ಸಹಕರಿಸಿದವರಲ್ಲಿ ಡಾ॥ ವಿ.ಸುಂದರ ಇವರಿಗೂ ಲೇಖಕರು ಅಭಿನಂದನೆ ಸಲ್ಲಿಸುತ್ತಾರೆ.

ಕೆಂಗೇರಿ ಚಕ್ರಪಾಣಿ *

# ಕನ್ನಡದ ಮೊಟ್ಟಮೊದಲ ದೇಶೀ ಶಾಸನ ತಜ್ಞ ಕವಿದೇವಚಂದ್ರ

ಕನ್ನಡಸಾಹಿತ್ಯಾಭ್ಯಾಸಿಗಳೆಲ್ಲರಿಗೂ ಕವಿದೇವಚಂದ್ರನು ತನ್ನ ರಾಜಾವಳೀ ಕಥಾಸಾರ ಮತ್ತು ಪೂಜ್ಯಪಾದ ಚರಿತೆ ಕೃತಿಗಳಿಂದ ಚಿರಪರಿಚಿತನಾಗಿದ್ದಾನೆ. ಆದರೆ ಕವಿ ದೇವಚಂದ್ರನು ಶಾಸನಗಳನ್ನು ಓದುವುದರಲ್ಲಿ ಪ್ರಾವೀಣ್ಯತೆಯನ್ನು ಸಂಪಾದಿಸಿ ಕರ್ನಾಟಕದ ಹಲವಾರು ಶಾಸನಗಳನ್ನು ಓದಿ ಯಥಾವತ್ತಾಗಿ ಅವುಗಳನ್ನು ತನ್ನ ಕೃತಿಯಲ್ಲಿ ನೀಡಿರುವುದನ್ನು ಯಾರೂ ಅಷ್ಟಾಗಿ ಗಮನಿಸಿಲ್ಲ. ಅಂದರೆ ಕವಿದೇವಚಂದ್ರನು ಚರಿತ್ರಕಾರಣ ಆಗಿದ್ದ, ಹಾಗೂ ಆತ ಕನ್ನಡದ ಮೊಟ್ಟಮೊದಲ ದೇಶೀಶಾಸನ ತಜ್ಞನೂ ಆಗಿದ್ದನೆಂಬ ವಿಷಯವನ್ನು ಉಪಲಬ್ಧ ಮಾಹಿತಿಗಳ ಆಧಾರದಿಂದ ಈ ಸಂಪ್ರಬಂಧದಲ್ಲಿ ಸಾಬೀತುಪಡಿಸಿದ್ದೇನೆ.

ಕರ್ನಾಟಕದ ಶಾಸನ ಅಧ್ಯಯನದ ಇತಿಹಾಸದ ಬಗ್ಗೆ ಚರ್ಚಿಸುವಾಗ ಮೊಟ್ಟಮೊದಲ ದೇಶಿಯ ವಿದ್ವಾಂಸ ಕವೆಲ್ಲಿ ವೆಂಕಟಬೋರಯ್ಯ ಎಂಬುದಾಗಿ ಹಲವಾರು ವಿದ್ವಾಂಸರು ಬರೆದಿದ್ದಾರೆ.

ಡಾ॥ ಎಂ. ಚಿದಾನಂದಮೂರ್ತಿಯವರು ''ಕನ್ನಡ ನಾಡಿನ ಶಾಸನಗಳ ಪ್ರಕಟನೆ ಆರಂಭವಾದದ್ದು ಕ್ರಿ.ಶ.೧೮೦೭ರಲ್ಲಿ.......... ಬೊರಯ್ಯ ಅವರು ಇದೇ ಸಂಪುಟದಲ್ಲಿ "Belligola" ಗೊಮ್ಮಟ ವಿಗ್ರಹದ ಮುಂದಿರುವ, ಜೈನರ ಮತ್ತು ವೈಷ್ಣವರ ವಿವಾದವನ್ನು ಬುಕ್ಕರಾಯ ಬಗೆಹರಿಸಿದ ವಿಷಯವನ್ನು ಹೇಳುವ ಶಾಸನವನ್ನು ಅನುವಾದಿಸಿದ್ದಾರೆ''[1] ಎಂದು ತಿಳಿಸಿದ್ದಾರೆ ಮತ್ತು ಅವ[...] ''ಕರ್ನಾಟಕದ ಶಾಸನಗಳ ಅಧ್ಯಯನದ ವಿಷಯದಲ[...] ಮೊಟ್ಟಮೊದಲು ಆಸಕ್ತಿವಹಿಸಿದ ಭಾರತೀಯ ವಿದ್ವಾಂ[...] ನೆಂದರೆ ಭಾಲಗಂಗಾಧರ ಶಾಸ್ತ್ರಿಗಳು. ಕೊಲ್ಲಾಪುರ[...] ಸುತ್ತಮುತ್ತ ದೊರಕಿದ ದೇವನಾಗರಿ ಮತ್ತು ಹಳಗನ್ನ[...] ಲಿಪಿಗಳಲ್ಲಿರುವ ಏಳು ಪ್ರಾಚೀನ ಶಾಸನಗಳನ್ನು ಓದಿ ಅವುಗ[...] ಸಾರಾಂಶವನ್ನು ೧೮೪೫ ರಲ್ಲಿ ಪ್ರಕಟಿಸಿದರು... ಬಹುಶಃ ಶ್ರ[...] ಶಾಸ್ತ್ರಿಗಳು ಕನ್ನಡ ಶಾಸನಗಳನ್ನು ಓದಿರಬೇಕು, ಅವುಗ[...] ಅರ್ಥವನ್ನು ಕನ್ನಡ ಭಾಷೆಯನ್ನು ಬಲ್ಲ ಯಾರೋ[...] ವಿವರಿಸಿರಬೇಕು[2] ಎಂದು ಅಭಿಪ್ರಾಯ ಪಟ್ಟಿರುತ್ತಾ[...] ಡಾ॥ ಸಿ. ಡಿ. ಕೃಷ್ಣಕುಮಾರ್ ಅವರು ''ಕನ್ನಡ ಶಾಸನಗ[...] ಪ್ರಕಟಣೆ ಮೊದಲಾದುದು ೧೮೦೭ರಲ್ಲಿ. ಏಷ್ಯಾಟಿ[...] ರಿಸರ್ಚಸ್ ಪತ್ರಿಕೆಯ ೯ನೆಯ ಸಂಪುಟದಲ್ಲಿ ಕೆಲವು ಕನ್ನ[...] ಸಾಸನಗಳು ಪ್ರಕಟವಾಗಿದೆ''[3] ಎಂದು ತಿಳಿಸಿದ್ದಾರೆ

ಡಾ॥ ಎಂ. ಎಂ. ಕಲಬುರ್ಗಿಯವರು ''ಕನ್ನ[...] ಶಾಸನಗಳನ್ನು ಮೊಟ್ಟಮೊದಲು ಓದಿದ ಕೀರ್ತಿ ಬೋರಯ[...] ನಿಗೆ ಸಲ್ಲುವಂತೆ ಕಾಣುತ್ತದೆ. ಈತನು ೧೮೦೭ರ ಏಶಿಯಾಟಿ[...] ರಿಸರ್ಚಸ್ ಪತ್ರಿಕೆಯ ೯ನೆಯ ಸಂಪುಟದಲ್ಲಿ ಶ್ರವಣ ಬೆ[...] 'ಗೊಳದ ಬುಕ್ಕರಾಯನ ಶಾಸನವನ್ನು. ಪ್ರಕಟಿಸಿದ ಆದ್ದರಿಂ[...] ಕ.ವೆ.ಬೋರಯ್ಯನೇ ಕನ್ನಡದ ಮೊದಲ ಶಾಸನ ತ[...] ಎಂಬುದಾಗಿ ಡಾ॥ಕಲಬುರ್ಗಿಯವರು ಅಭಿಪ್ರಾಯ ಪ[...]

---

* ನಂ. ೨೩, ಕೋಟೆ, ಕೆಂಗೇರಿ, ಬೆಂಗಳೂರು ೫೬೦೦೬೦.

1. ಡಾ॥ ಎಂ. ಚಿದಾನಂದಮೂರ್ತಿ. ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ ಪು. ೧೯
2. ಅದೇ ಪು. ೨೧
3. ಡಾ॥ ಸಿ. ಪಿ. ಕೃಷ್ಣಕುಮಾರ್ ಶಾಸನ ಪ್ರವೇಶ, ಪು. ೮

ದರೆ[4] ಒಟ್ಟಿನಲ್ಲಿ ಎಲ್ಲ ವಿದ್ವಾಂಸರ ಅಭಿಪ್ರಾಯವು ಕನ್ನಡ ಸನಗಳ ಬಗ್ಗೆ ಆಸಕ್ತಿವಹಿಸಿದ ಪ್ರಥಮ ವಿದ್ವಾಂಸ ಕವೆಲ್ಲಿ ೀರಯ್ಯ ಎಂದೇ ಆಗಿದೆ.

ಈಗ ಕವಿದೇವಚಂದ್ರನು ತನ್ನ ರಾಜಾವಳಿ ಾಸಾರದಲ್ಲಿ ಉಲ್ಲೇಖಿಸಿರುವ ಶಾಸನಗಳನ್ನು ಹಾಗೂ ದಕ್ಕೆ ಸಂವಾದಿಯಾದ ಶಾಸನಗಳು ಎಪಿಗ್ರಾಫಿಯಾ ರ್ನಾಟಕದ ಸಂಪುಟಗಳಲ್ಲಿ ಪ್ರಕಟವಾಗಿರುವುದನ್ನು ಮನಿಸೋಣಃ

ಶ್ರವಣಬೆಳಗೊಳದ ಭಂಡಾರ ಬಸದಿಯಲ್ಲಿರುವ ಕ್ಕನ ಧರ್ಮಸಮನ್ವಯ ಶಾಸನವನ್ನು ಪ್ರಾರ್ಥನಾ ್ಲೋಕದಿಂದ ಆರಂಭಿಸಿ ಕೊನೆಯಲ್ಲಿರುವ ಾಪಾಶಯದವರೆವಿಗೂ ಸಂಪೂರ್ಣವಾಗಿ ಉಲ್ಲೇಖಿಸಿದ್ದಾನೆ ಲ್ಲದೆ ಈ ಶಾಸನವು ಬೆಳ್ಗೊಳದ ಭಂಡಾರ ಬಸದಿಯ ಲಭಾಗದಲ್ಲಿ ದಕ್ಷಿಣೋತ್ತರವಾಗಿದೆ ಎಂದೂ ಹೇಳಿದ್ದಾನೆ. ಜಾವಳೀಕಥಾಸಾರ ಪು ೧೯೮- ಈ ಶಾಸಾನವು ಎಕ ರಡನೆಯ ಸಂಪುಟದ ೪೭೫ ನೆಯ ಶಾಸನವಾಗಿರುತ್ತದೆ.

ಕ್ರಿ.ಶ.೧೧೧೭ರಲ್ಲಿ ಹೊಯ್ಸಳ ವಿಷ್ಣುವರ್ಧನನು ಾಮರಾಜ ನಗರದಲ್ಲಿರುವ ತ್ರಿಕೂಟ ಬಸದಿಯನ್ನು ೀರ್ಣೋದ್ಧಾರ ಮಾಡಿಸಿದುದರ ಬಗ್ಗೆ ಚಾಮರಾಜನಗರದ ಾಸನದಲ್ಲಿರುವಂತೆಯೇ ಉಲ್ಲೇಕಿಸಿದ್ದಾನೆ. ರಾಜಾವಳೀ ಥಾಸಾರ ಪು. ೧೭೧-ದೇವಚಂದ್ರನು ಉಲ್ಲೇಖಿಸಿರುವ ಈ ಾಸನವು ಎ.ಕ.ಸಂ.4ರ ಶಾ.ಸಂ-೨ ಆಗಿದೆ. ಮಲೆಯೂರಿನಲ್ಲಿರುವ ವೀರ ಹರಿಹರರಾಯನ ೧೪ನೆಯ ತಮಾನದ ಶಾಸನದ ಸಂಪೂರ್ಣ ಪಾಠವನ್ನು ನೀಡಿದ್ದಾನೆ. ಕೆಲವು ರಾಜ್ಯಮಂ ಹೆಚ್ಚಿಸಿ ಕೊಟ್ಟು ಸಂತೋಷಂಬಡಿಸಿ ಳುಹಿಸೆ ಬಂದು ಕನಕಗಿರಿಯ ವಿಜಯದೇವರಿಗೆ ಮಲೆಯೂರು ್ರಾಮಮಂ ಶಾಸನ ದತ್ತಮಾಗಿ ಕೊಟ್ಟನದೆಂತೆಡೆ,'' ಎಂದು ಆರಂಭಿಸಿ ಮಂಗಳ ಶ್ಲೋಕದಿಂದ ಶಾಪಾಶಯದವರವಿಗೂ ೀಡಿದ್ದಾನೆ, ಅಲ್ಲದೆ ಅದೇ ಶಾಸನದ ಪ್ರತಿಯಾದ ಮಲೆಯೂರಿನ ಪಾರ್ಶ್ವನಾತ ಬಸದಿಯಲ್ಲಿರುವ ತಾಮ್ರ ಾಸನವನ್ನು ಗಮನಿಸಿ ''ಎಂದು ಶಿಲಾಶಾಸನಮಂ ಬರೆಯಿಸಿ ್ರಯಂಬಕೇಶ್ವರಸಾಕ್ಷಿಯಿಂ ಹಿರಣ್ಯೋದಕ ಧಾರಾಪೂರ್ವಕಂ ೊಟ್ಟು ಜಿನಧರ್ಮಮೆ ಸತ್ಯಮೆಂದು'' ಎಂದು ಮಲೆಯೂರಿನ ಾರ್ಶ್ವನಾಥ ಬಸದಿಯ ತಾಮ್ರ ಶಾಸಸದ ಬಗೆಗಿನ ವಿವರವನ್ನು ಸಹಾ ನೀಡಿದ್ದಾನೆ. ರಾ.ಕ.ಸಾರ, ಪು.೨೦೧. ಮೇಲಿನ ಎರಡೂ ಶಾಸನಗಳು ಎ.ಕ. ೪ನೆಯ ಸಂಪುಟದ ಸಾಸನ ಸಂಖ್ಯೆ-೩೫೫ ಹಾಗೂ ೩೭೨ ಆಗಿ ಪ್ರಕಟವಾಗಿದೆ ಮಲೆಯೂರಿನ ಕನಕಗಿರಿ ಬೆಟ್ಟದಲ್ಲಿ ದೇವರಸನೆಂಬ ಜಿನಭಕ್ತನು ತೋರಣ ಸ್ಥಂಭ, ದೀಪ ಸ್ಥಂಭಗಳನ್ನು ನಿರ್ಮಿಸಿದುದರ ಬಗ್ಗೆ ಹಾಕಿಸಿರುವ ಶಾಸನದ ಸಾರಾಂಶವನ್ನು ನೀಡಿದ್ದಾನೆ-ರಾ. ಕ. ಸಾರ, ಪು.೨೦೧ ಈ ಶಾಸನವು ಸಹ ನಾಲ್ಕನೆಯ ಸಂಪುಟದಲ್ಲಿ ಶಾ. ಸಂ. ೩೬೮ ಆಗಿ ಪ್ರಕಟವಾಗಿದೆ.

ಚಂದ್ರಮೌಳಿಯ ಪತ್ನಿ ಆಜಿಯಕ್ಕನು ಬೆಳ್ಗೊಳದಲ್ಲಿ ಬಸದಿಯನ್ನು ನಿರ್ಮಿಸಿದುದನ್ನು ತನ್ನ ಕೃತಿಯಲ್ಲಿ ಉಲ್ಲೇಖಿಸಿದ್ದಾನೆ. ''ಆ ಅಕ್ಕನಿಂದ ಬೆಳ್ಗೊಳದೊಳ್ ಬಸದಿಯಂ ರಚಿಸಿ ಶಕ ವರುಷ ಸಾವುರದ ನೂರ ನಾಲ್ಕನೆಯ (೧೧೦೪)ಪ್ಲವ ಸಂವತ್ಸರದ ಪುಷ್ಯಬಹುಳ ತದಿಗೆ ಶುಕ್ರವಾರ ಪ್ರತಿಷ್ಟೆಮಾಡಿಸಿದಳ್'' ಎಂದು ಈ ಬಗೆಗಿನ ಶಾಸನವನ್ನು ಸಂಪೂರ್ಣವಾಗಿ ಓದಿ ಅದರ ಸಾರಾಂಶವನ್ನು ಯಥಾವತ್ತಾಗಿ ನೀಜಿದ್ದಾನೆ. ರಾ. ಕ. ಸಾರ, ಪುಟ-೧೭೫. ಈ ಶಾಸನವು ಎ.ಕ.-೨ರ. ಶಾ. ಸಂ-೪೪೪ ಆಗಿದೆ. ಕೃಷ್ಣರಾಜ ಓಜೆಯರು ಕೆಲಸೂರಿನ ಬಸದಿಯಲ್ಲಿದ್ದ ತೀರ್ಥಂಕರರ ವಿಗ್ರಹಗಲನ್ನು ನವೀಕರಿಸದ ಬಗ್ಗೆ ಹಾಕಿಸಿರುವ ಶಾಸನವನ್ನು ಉಲ್ಲೇಖಿಸಿದ್ದಾನೆ. ರಾ.ಕ.ಸಾರ,-ಪು ೩೧೨-ಮೇಲಿನ ಶಾಸನವು ಎ.ಕ.ಸಂ.೩ ಗುಂಡ್ಲುಪೇಟೆ ೧೦೦ ಆಗಿ ಮುದ್ರಿತವಾಗಿದೆ. ಮರಿಯಾನೆ ದಂಡನಾಯಕನ ಪುತ್ರ ದ್ರೋಹಘರಟ್ಟ ಗಂಗಭಾವರಸನು ಕ್ರಿ.ಶ. ೧೧೩೮ರಲ್ಲಿ ಸಿಂಧಗೆರೆಯಲ್ಲಿ ನಿರ್ಮಿಸಿದ ಬಸದಿಯ ಬಗೆಗಿನ ಶಾಸನವನ್ನು .ಉಲ್ಲೇಖಿಸಿದ್ದಾನೆ.(ರಾ. ಕ. ಸಾರ-ಪು. ೧೭೪)

ಕ್ರಿ.ಶ.-೧೧೩೮ರಲ್ಲಿ ವಿಷ್ಣುವರ್ಧನನು ಬೆಳಕೆರೆಯಲ್ಲಿ ಅರೆಧವಳನಾಡ ಗದ್ದೆ ಬೆದ್ದಲನ್ನು ಶಾಸನದ್ವಾಗಿ ನೀಡೀದ ಬಗ್ಗೆ ಶಾಸನದಲ್ಲಿರುವಂತೆಯೇ ನೀಡಿದ್ದಾನೆ (ರಾ.ಕ.ಸಾರ, ಪು-೧೭೩).

ಮರಿಯಾನೆದಂಡನಾಯುಕ, ನಯುಕೀರ್ತಿಮುನಿ, ಸಾಂತಲೆ, ವಿಷ್ಣುವರ್ಧನ, ಎರಡನೆಯ ಬಲ್ಲಾಳ, ವೀರ ಹರಿಹರರಾಯ, ಬುಕ್ಕ, ಅಚ್ಯುತರಾಯ ಮುಂತಾದವರುಗಳ ಬಗ್ಗೆ ಹೇಳುವಾಗ ಅವರ ಶಾಸನಗಳನ್ನು ಗಮನಿಸಿರುವುದು

4. ಡಾ॥ ಎಂ.ಎಂ.ಕಲಬುರ್ಗಿ., ಶಾಸನ ವ್ಯಾಸಂಗ (ಶಾಸನ ಅಧ್ಯಯನದ ಇತಿಹಾಸ)

ನವುಗೆ ರಾಜಾವಳೀ ಕಥೆಸಾರವನ್ನು ಸೂಕ್ಷ್ಮವಾಗಿ ಪರಿಶೀಲಿಸಿದಾಗ ತಿಳಿಯುತ್ತದೆ. ಪ್ರತಿಯೊಂದು ಘಟನೆಯ ಕಾಲವನ್ನು ಹೇಳುವಾಗ ಆಯಾಶಾಸನಗಳನ್ನು ಗಮನಿಸಿ ಆದರಲ್ಲಿರುವಂತೆಯೇ ನೀಡೀರುವುದು ಅವನ ಪ್ರತಿಭೆಗೆ ಹಿಡಿದ ಕನ್ನಡಿಯಾಗಿದೆ.

ದೇವಚಂದ್ರನ ರಾಜಾವಳೀಕತಾಸಾರವು ಸಂಪೂರ್ಣ ವಾಗಿ ಶಾಸನಗಳನ್ನೇ ಆಧರಿಸಿ ರಚಿತವಾದ ಸಂಶೋಧನ ಗ್ರಂಥವಲ್ಲದಿದ್ದರೂ ಸಹ ಅದು ಕೆಲವೊಂದು ಉತ್ಪ್ರೇಕ್ಷಿತ ವಿವರಗಳನ್ನೊಳಗೊಂಡಿದ್ದ ಕೃತಿಯೇ ಆದರೂ ಸಹ ಶಾಸನಗಳನ್ನು ಉಲ್ಲೇಖಿಸಿ ರಚಿತವಾದ ಮೊದಲ ಕೃತಿ ಎನ್ನುವುದು ಗಮನಾರ್ಹ. ನಾನು ಈ ಪ್ರಬಂಧದಲ್ಲಿ ರಾಜಾವಳೀ ಕಥಾಸಾರದ ಗುಣಾವಗುಣಗಳ ಬಗ್ಗೆ ತುಲನೆಮಾಡಲು ಹೋಗುವುದಿಲ್ಲ. ದೇವಚಂದ್ರನು ಶಾಸನಗಳನ್ನು ಓದುವುದರಲ್ಲಿ ನಿಪುಣನಾಗಿದ್ದು, ಪ್ರಾಚೀನ ಶಾಸನಗಳ ಲಿಪಿಗಳನ್ನು ಓದುವುದರಲ್ಲಿ ಸಮರ್ಥನಾಗಿದ್ದ ನಲ್ಲದೆ, ಆತ ಹಲವಾರು ಶಾಸನಗಳನ್ನು ಯಥಾವತ್ತಾಗಿ ಸಮಗ್ರವಾಗಿ ತನ್ನ ಕೃತಿಯಲ್ಲಿ ಉಲ್ಲೇಖಿಸಿದ್ದಾನೆ. ಕೆಲವೊಮ್ಮೆ ಕೆಲವು ಶಾಸನಗಳನ್ನು ಓದಿ ಅವುಗಳ ಸಾರಾಂಶವನ್ನು ತನ್ನ ರಾಜಾವಳೀ ಕಥಾಸಾರದಲ್ಲಿ ಉಪಯೋಗಿಸಿಕೊಂಡಿದ್ದಾನೆ. ಆದ್ದರಿಂದ ಆತ ಒಬ್ಬ ಶಾಸನ ತಜ್ಞನೂ ಆಗಿದ್ದ ಎಂದು ಧಾರಾಳವಾಗಿ ಹೇಳಬಹುದಾಗಿದೆ.

ಕಾವೆಲ್ಲಿ ವೆಂಕಟ ಬೋರಯ್ಯ ಏಸಿಯಾಟಿಕ್ ರಿಸರ್ಚ ಪತ್ರಿಕೆಯಲ್ಲಿ ಬುಕ್ಕನ ಧರ್ಮಸಮನ್ವಯ ಶಾಸನವನ್ನು ಕ್ರಿ.ಶ.೧೮೦೭ರಲ್ಲಿ ಪ್ರಕಟಿಸಿದ್ದಾನೆ. ಆದರೆ ದೇವಚಂದ್ರನ ರಾಜಾವಳೀ ಕಥೆಯು ಕ್ರಿ.ಶ. ೧೮೦೪ರ ವೇಳೆಗೇ ರಚಿತವಾಗಿದೆ. ಈ ಕೃತಿಯಲ್ಲಿ ದೇವಚಂದ್ರನು ಈ ಹಿಂದೆಯೇ ಉಲ್ಲೇಖಿಸಿರುವಂತೆ ಶ್ರವಣಬೆಳಗೊಳದ ಬುಕ್ಕನ ಧರ್ಮ ಸಮನ್ವಯ ಶಾಸನವನ್ನೇ ಅಲ್ಲದೆ ಇನ್ನೂ ಹಲವಾರು ಶಾಸನಗಳನ್ನು ಯಥಾವತ್ತಾಗಿ ತನ್ನ ಕೃತಿಯಲ್ಲಿ ನೀಡಿರುವು ದನ್ನು ಗಮನಿಸಬಹುದು.

ದೇವಚಂದ್ರನಿಗೆ ವಿಷಯಗ್ರಹಣ ಶಕ್ತಿ ಹಾಗೂ ನಿರೂಪಣಾ ಸಾಮರ್ಥ್ಯ ಅಗಾಧವಾಗಿತ್ತು. ಇದನ್ನು ಗಮನಿಸಿಯೇ ಸೀಮೆಯ ಪರಿವೀಕ್ಷಣೆಗೆಂದು ಬಂದಿದ್ದ ಕರ್ನಲ್ ಮೆಕೆಂಜಿ ತನ್ನ ಸಹಾಯಕ ಲಕ್ಷ್ಮಣರಾಯನೊಡನೆ ಅವನನ್ನು

ಕರೆಯಿಸಿಕೊಂಡು ಕನಕಗಿರಿಯ ಸ್ಥಳ ಪುರಾಣವನ್ನು ಕೇ
ಮೆಚ್ಚಿ, ಕಳಲೆ, ಮೈಸೂರು, ಇಲವಾಲ ಮುಂತಾದ ಕ
ಸುಮಾರು ಎರಡು ತಿಂಗಳು ಜೊತೆಯಲ್ಲಿಯೇ ಕರೆದು ಕೊಂ
ಸುತ್ತಿ ದಿನಕ್ಕೆ ಇಷ್ಟು ಎಂದು ಹಣವನ್ನು ಕೊಟ್ಟು ಅವನಿಂ
ಅಲ್ಲಿಯ ಐತಿಹ್ಯಗಳನ್ನು ಸ್ಥಳಪುರಾಣಗಳನ್ನು ಕೇಳುತ್ತಾ ರಾ
ಸೀಮೆಯನ್ನು ಅಳೆದು ಗ್ರಾಮನಕ್ಷೆಯನ್ನು ಅವನಿಂ
ಬರೆಯಿಸಿಕೊಂಡು "ಈ ಕರ್ನಾಟಕದೊಳು ನಡೆದ ಪ್ರಪಂ
ಗಳನ್ನೆಲ್ಲಾ ಕ್ರೋಡೀಕರಿಸಿ ಬರೆದು ನಾನಿದ್ದಲ್ಲಿಗೆ ತೆಗೆದು ಕೊಂ
ತಿಂಗಳ ಒಳಗೆ ಬಂದರೆ ಭಾರಿ ಸಂಬಳ ಮಾಡಿಕೊಡುತ್ತೇನೆಂ
ಲಕ್ಷಣ ರಾಯನ ಮಾರಿಫತ್ತು ಇಪ್ಪತ್ತೈದು ಕಂಪನಿ ಹಣವ
ಕೊಡಿಸುತ್ತೇನೆಂದು ಮೊದಲಾಗಿ ಈ ಕಥಾಸಂಗ್ರಹ
ಮಾಡಿತಪ್ಪಿನ ಈ ಸರದಾರಂ ಬಹುದೂರ ಹೋದುದರಿಂ
ಒಪ್ಪಿಸುವವರಿಲ್ಲವಾಯಿತು"[5] ಎಂದು ವಿವರಿಸಿರು
ಭಾಗದಿಂದ ದೇವಚಂದ್ರನು ಸೀಮೆಗಳ ಎಲ್ಲೆಗಳನ
ಅಳೆಯುವಲ್ಲಿ, ಆ ಗ್ರಾಮಗಳ ವಿವರಗಳನ
ಸಂಗ್ರಹಿಸುವುದರಲ್ಲಿ ಎಷ್ಟರಮಟ್ಟಿಗೆ ಸಹಕರಿಸಿದ್ದ ಎಂ
ತಿಳಿದು ಬರುತ್ತದೆ. ಬಹುಶಃ ದೇವಚಂದ್ರನು ಮೆಕಂಜಿಗೆ
ಗ್ರಾಮಗಳ ಶಾಸನಗಳನ್ನು ಓದಿ ಹೇಳಿರಬೇಕು. ಮೆಕೆಂ
ಯಂತಹ ವಿದ್ವಾಂಸನೇ ಕರೆಯಿಸಿಕೊಂಡು ಪ್ರಶಂಸಿಸಿ ಕೃತಿ
ರಚನೆಗೆ ಪ್ರೋತ್ಸಾಹಿಸಿದ ಎಂದರೆ ಈತನ ಪಾಂಡಿತ್ಯದ ಮಹ
ತಿಳಿಯುತ್ತದೆ.

ಮೆಕೆಂಜಿ ದೇವಚಂದ್ರನನ್ನು ಕ್ರಿ.ಶ. ೧೮೦೪
ರಕ್ತಾಕ್ಷಿಸಂವತ್ಸರದಲ್ಲಿ ಭೇಟಿಯಾದನು. ಅದೇ ವರ
ದಲ್ಲಿಯೇ ರಾಜಾವಳೀ ಕಥಾಸಾರದ ಮೊದಲ ಹನ್ನೊಂ
ಅಧ್ಯಾಯಗಳನ್ನು ಬರೆದು ಮುಗಿಸಿದನು. ಆದರೆ ಕೃತಿರಚನ
ಪ್ರೇರಣೆ ಪ್ರೋತ್ಸಾಹ ನೀಡಿದ ಕರ್ನಲ್ ಮೆಕಂಜಿಯು ಮ
ಬೇಟಿಯಾಗದ್ದರಿಂದ ಅದು ಕತ್ತಲೆಯಲ್ಲಿಯೇ ಕೊಳೆಯ
ತ್ತಿದ್ದು ಮಲೆಯೂರಿನವನೇ ಆದ ಆಸ್ಥಾನ ಪಂಡಿತನಾ
ಸೂರಿಪಂಡಿತರ ನೆರವಿನಿಂದ ಮೈಸೂರಿನ ರಾಜಮನೆ
ದವರೊಡನೆ ಸಂಪರ್ಕಬೆಳೆದು ಅದು ಬೆಳಕಿಗೆ ಬರಲು ಅ
೩೪ ವರ್ಷಗಳ ಕಾಲ ಕಾಯಬೇಕಾಯಿತು. ಆದ
ದೇವಚಂದ್ರನು ಶಾಸನಗಳನ್ನು ಉಲ್ಲೇಖ ಮಾಡಿರುವ ಭಾ
ಮೊದಲ ಹನ್ನೊಂದು ಅಧ್ಯಾಯದೊಳಗೆ ಇರುವುದರಿಂ
ರಾಜಾವಳಿಯ ರಚನೆಯ ಕಾಲವು ಕ್ರಿ.ಶ.೧೮೦೪ ಎಂ
ನಿರ್ಧರಿಸಬಹುದು.

5. ರಾಜಾವಳೀ ಕಥಾಸಾರ, ಪು. ೨೧೫.

ಇದರಿಂದ ದೇವಚಂದ್ರನು ಕ್ರಿ.ಶ. ೧೮೦೭ಕ್ಕಿಂತ, ಅಂದರೆ ಕವೆಲ್ಲಿವೆಂಕಟಬೋರಯ್ಯನಿಗಿಂತ ಮೂರುವರ್ಷಗಳಷ್ಟು ಮೊದಲೆ ಕರ್ನಾಟಕದ ಪ್ರಾಚೀನ ಶಾಸನಗಳನ್ನು ಓದಿ ತನ್ನ ಕೃತಿಯಲ್ಲಿ ಆಕರವಾಗಿ ಬಳಸಿಕೊಂಡಿದ್ದಾನೆ. ಆತ ಹೊಯ್ಸಳಶಕ ಕಾಲದ ಶಾಸನಗಳಿಂದ ಆರಂಭಿಸಿ ಮೈಸೂರು ಒಡೆಯರ ಶಾಸನಗಳವರಿವಿಗೂ ತನ್ನ ಕೃತಿಯಲ್ಲಿ ಬಳಸಿಕೊಂಡಿರುವುದನ್ನು ಗಮನಿಸಿದರೆ ಅವನಿಗೆ ಶಾಸನಗಳನ್ನು ಓದುವುದು ಚೆನ್ನಾಗಿ ತಿಳಿದಿರಲೇಬೇಕೆಂದು ಹೇಳಬಹುದು. ಅಂತೆಯೇ, ಈತ ಕನ್ನಡದ ಪ್ರಾಚೀನ ಲಿಪಿಗಳನ್ನು ಓದುವಷ್ಟು ಲಿಪಿತಜ್ಞನಾಗಿದ್ದ ಎಂಬ ಮಹತ್ತರ ವಿಷಯ ಅರಿವಿಗೆ ಬರುತ್ತದೆ. ಕವೆಲ್ಲಿವೆಂಕಟಬೋರಯ್ಯ ಶ್ರವಣ ಬೆಳಗೊಳದ ಒಂದು ಶಾಸನವನ್ನು ಮಾತ್ರ ಪ್ರಕಟಿಸಿದರೆ, ದೇವಚಂದ್ರನು ಹಲವಾರು ಶಾಸನಗಳನ್ನು ಆಕರವಾಗಿ ಉಪಯೋಗಿಸಿಕೊಂಡು ಒಂದು ಕೃತಿಯನ್ನೇ ನೀಡಿದ್ದಾನೆ. ಅಂದರೆ ಇತಿಹಾಸ ರಚಿಸುವಲ್ಲಿ, ಆಕರವಾಗಿ ಶಾಸನಗಳನ್ನು ಬಳಸಿಕೊಳ್ಳುವಷ್ಟು ಮೇಧಾವಿಯಾಗಿದ್ದನೆಂದು ಹೇಳಬಹುದು. ಆದ್ದರಿಂದ ಇನ್ನು ಮುಂದೆ ಕನ್ನಡ ಶಾಸನಾಧ್ಯಯನದ ಇತಿಹಾಸವನ್ನು ಹೇಳುವಾಗ ಕವಿದೇವಚಂದ್ರನನ್ನು ಮರೆಯುವಂತಿಲ್ಲ. ಕನ್ನಡ ಶಾಸನ ಅಧ್ಯಯನವನ್ನು ಪ್ರಾರಂಭಿಸಿದ ದೇಶಿಯ ವಿದ್ವಾಂಸರ ಪಟ್ಟಿಯಲ್ಲಿ ಮೊಟ್ಟಮೊದಲ ಸ್ಥಾನ ಕವಿ ದೇವಚಂದ್ರನಿಗೇ ಸಲ್ಲಬೇಕು.

ಡಾ॥ ಎ.ಕೆ.ಶಾಸ್ತ್ರಿ*

# ಶ್ರೀ ಸೋಂದಾ ಸ್ವರ್ಣವಲ್ಲಿ ಮಹಾಸಂಸ್ಥಾನದ ಚಾರಿತ್ರಿಕ ದಾಖಲೆಗಳ ಕಿರುಪರಿಚಯ

ಶ್ರೀಸೋಂದಾಸ್ವರ್ಣವಲ್ಲಿ ಮಹಾಸಂಸ್ಥಾನದ ಚರಿತ್ರೆಯು ಆದಿಶಂಕರರಷ್ಟೇ ಪುರಾತನವಾದುದು. ಸುಮಾರು ಹನ್ನೆರಡುನೂರು ವರ್ಷಗಳ ಹಿಂದೆ ಆದಿ ಶಂಕರರು ಪ್ರತ್ಯಕ್ಷವಾಗಿ ಮತ್ತು ತಮ್ಮ ಶಿಷ್ಯರ ಮೂಲಕ ಪರೋಕ್ಷವಾಗಿ, ದೇಶದ ಅನೇಕ ಭಾಗಗಳಲ್ಲಿ ಮಠಗಳನ್ನು ಸ್ಥಾಪಿಸಲು ಕಾರಣರಾದರು. ಅಂಥ ಅದ್ವೈತ ಮಠಗಳ ಪರಂಪರೆಯು ಇಂದಿಗೂ ಸಾಗಿ ಬಂದಿದೆ. ಸ್ವರ್ಣವಲ್ಲಿಮಠ ಅಂಥ ಮಠಗಳಲ್ಲಿ ಒಂದು.

ಉತ್ತರಕನ್ನಡ ಜಿಲ್ಲೆಯ ಶಿರಸಿ ತಾಲೂಕಿನಲ್ಲಿರುವ ಸ್ವರ್ಣವಲ್ಲಿ[2], ಶಿರಸಿಯಿಂದ ಯಲ್ಲಾಪುರಕ್ಕೆ ಹೋಗುವ ಮಾರ್ಗದ ಎಡಬದಿಯಲ್ಲಿ, ಶಿರಸಿಯಿಂದ ಸುಮಾರು ೧೬ ಕಿ.ಮೀ. ಅಂತರದಲ್ಲಿ, ಶಾಲ್ಮಲಾನದಿ ದಂಡೆಯ ಮೇಲೆ ನಿಸರ್ಗದ ಮಡಿಲಲ್ಲಿ ನೆಲೆಸಿದೆ. 'ಸ್ವರ್ಣವಲ್ಲಿ' ಎಂಬ ಹೆಸರು, ಸೋದೆಯ ಅರಸಪ್ಪನಾಯಕನು ಹೊನ್ನೆಹಳ್ಳಿ ಗ್ರಾಮದಲ್ಲಿ 'ಸ್ವರ್ನವಲ್ಲಿ' ಮಠವನ್ನು ನಿರ್ಮಿಸಿ, ಸಹಸ್ರಲಿಂಗಮಠದ ಶ್ರೀ ಚಂದ್ರಶೇಖರ ಸರಸ್ವತಿ ಶ್ರೀಪಾದಂಗಳಿಗೆ ಶಾ.ಶ.೧೪೭೮ (ಕ್ರಿ.ಶ.೧೫೫೬)ರಲ್ಲಿ ಬರಕೊಟ್ಟ ಧರ್ಮಸಾಧನ[3]ದ ಕಾಲದಿಂದ ಪ್ರಸಿದ್ಧಿಗೆ ಬಂದರೂ, ಸ್ವರ್ಣವಲ್ಲಿ ಪ್ರದೇಶದ ಪೂರ್ವಚರಿತ್ರೆ ಮಾತ್ರ ಅತ್ಯಂತ ಪುರಾತನವಾದುದು. ಸ್ವರ್ಣವಲ್ಲಿಗೆ ಮಠಸ್ಥಳಾಂತರಗೊಳ್ಳುವ ಪೂರ್ವದಲ್ಲಿ ಸ್ವರ್ಣವಲ್ಲಿಗೆ ತೀರ ಹತ್ತಿರವಿರುವ ಸಹಸ್ರಲಿಂಗದಲ್ಲಿ ಮಠವಿತ್ತು.[4] ಇಂದಿಗೂ ಈ ಪ್ರದೇಶದಲ್ಲಿ ಪ್ರಾಗೈತಿಹಾಸಿಕ ಕಾಲಕ್ಕೆ ಸೇರಿರಬಹು ದೆನ್ನಲಾದ ಬಂಡೆಗಲ್ಲಿನ ಮೇಲೆ ರೇಖಾಚಿತ್ರಗಳು ಮತ್ತು ಮಡಕೆ ತುಣುಕುಗಳು ಗೋಚರಿಸಿವೆ.[5] ಇತಿಹಾಸ ಕಾಲದಲ್ಲಿ ಈ ಪ್ರದೇಶ ಬೇರೆ ಬೇರೆ ಅರಸುಮನೆತನಗಳ ಆಧಿಪತ್ಯಕ್ಕೆ ಒಳಪಟ್ಟಿತ್ತು.

**ಆಕರ ಸಾಮಗ್ರಿಗಳು:** ಸ್ವಣವಲ್ಲಿ ಮಠದಲ್ಲಿರುವ

* ಭವಾನಿ ಬಿಲ್ಡಿಂಗ್ಸ್, ಹೊಸಮಾರ್ಕೆಟ್ ಯಾರ್ಡ್ ಹತ್ತಿರ,ಸಿರಸಿ-೫೮೧೪೦೨, ಉ.ಕ.

1. ಆದಿಶಂಕರರ ಕಾಲ ಕುರಿತು ವಿದ್ವಾಂಸರಲ್ಲಿ ಭಿನ್ನಾಭಿಪ್ರಾಯವಿದ್ದರೂ, ಡಿ.ಆರ್. ಭಂಡಾರಕರ, ಮಾಕ್ಸ್‌ಮುಲ್ಲರ್, ಜೆ.ಎಫ್.ಫ್ಲೀಟ ಮುಂತಾದ ವಿದ್ವಾಂಸರು ಕ್ರಿ.ಶ.೭೮೮-ಕ್ರಿ.ಶ.೮೨೦ ಎಂದು ನಿರ್ಧರಿಸಿದ್ದಾರೆ. ಹೆಚ್ಚಿನ ಮಾಹಿತಿಗಾಗಿ ಲೇಖಕರ 'ಶೃಂಗೇರಿ ಧರ್ಮಸಂಸ್ಥಾನ', ೧೯೮೩, ಪು.೭ ನೋಡಿರಿ.
2. ದಾಖಲೆಗಳಲ್ಲಿ ಸ್ವರ್ಣವಲ್ಲಿಯನ್ನು 'ಸ್ವರ್ನವಲ್ಲಿ', 'ಹೊಂನೆಹಳ್ಳಿ', 'ಹೊನ್ನಳ್ಳಿ' ಎಂದು ಉಲ್ಲೇಖಿಸಲಾಗಿದೆ. ಸ್ವರ್ಣವಲ್ಲಿ ಸಂಸ್ಥಾನದ ಸೀಮೆಗಳಲ್ಲಿಯ ಗ್ರಾಮಾಂತರ ಪ್ರದೇಶದ ಜನರು ಇಂದಿಗೂ 'ಹೊನ್ನಳ್ಳಿಮಠ' ಎಂದೇ ಕರೆಯುತ್ತಾರೆ. ಕ್ರಿ.ಶ.೧೮೦೦ರಲ್ಲಿ ಹೊನ್ನಳ್ಳಿ ಮಠಕ್ಕೆ ಬಂದ ಡಾ॥ ಫ್ರಾನ್ಸಿಸ್ ಬುಕಾನನ್‌ನು, ಹೆಸರನ್ನು ಉಚ್ಚರಿಸಲು ಸರಿಯಾಗಿ ಬಾರದೆ, ತನ್ನ A Journey from Madras through the Countries of Mysore Malabar and Canara, Vol.IIIಎಂಬ ವೃತ್ತಾಂತದಲ್ಲಿ, 'ಹೊನ್ನವುಲ್ಲಿ' ಎಂದು ಬರೆದಿದ್ದಾನೆ.
3. ಡಾ॥ ಎ.ಕೆ. ಶಾಸ್ತ್ರಿ, 'ಶ್ರೀ ಸೋಂದಾ ಸ್ವರ್ಣವಲ್ಲಿ ಮಹಾಸಂಸ್ಥಾನದ ಐತಿಹಾಸಿಕ ದಾಖಲೆಗಳು. ಸಂ. I ' (ಅಪ್ರಕಟಿತ), ಕರ್ನಾಟಕ ರಾಜ್ಯ ಪತ್ರಾಗಾರ ಇಲಾಖೆ, ೧೯೯೫, ದಾ.ಸಂ. (ದಾಖಲೆ ಸಂಖ್ಯೆ).೬
4. ಮಠ ನಿರ್ಮಾಣವಾದ ಸಹಸ್ರಲಿಂಗ ಸ್ಥಳ, ಈಗಿರುವ ಸ್ವರ್ಣವಲ್ಲಿ ಮಠದಿಂದ ತೀರ ಸಮೀಪ, ಎಂದರೆ ಸುಮಾರು ೧.೫ ಕಿ.ಮೀ. ಅಂತರದಲ್ಲಿದೆ. ಹುಳಗೋಳದ ಸಮೀಪವಿರುವ, ಪ್ರವಾಸಿಗರನ್ನು ಆಕರ್ಷಿಸುವ ಬಂಡೆಬಸಪ್ಪ ಮತ್ತು ಅನೇಕ ಶಿವಲಿಂಗಗಳುಳ್ಳ ಸಹಸ್ರಲಿಂಗ, ಪೂರ್ವದಲ್ಲಿ ಮಠವಿದ್ದ ಸಹಸ್ರಲಿಂಗ ಅಲ್ಲ ಎಂಬುದನ್ನು ಓದುಗರು ಗಮ–ನಿಸಲ್ಲಿಡಬೇಕು.
5. ಕರ್ನಾಟಕ ವಿಶ್ವವಿದ್ಯಾಲಯದ ಪ್ರಾಚೀನ ಭಾರತ ಇತಿಹಾಸ ಮತ್ತು ಶಾಸನ ವಿಭಾಗದ ಪ್ರಾಧ್ಯಾಪಕರಾದ ಡಾ॥ ಎಚ್.ಆರ್. ರಘುನಾಥ ಭಟ್ಟರು ಗುರುತಿಸಿದ್ದಾರೆ.

ಸುಮಾರು ೩೦,೦೦೦ ಚಾರಿತ್ರಿಕ ದಾಖಲೆಗಳು[6], ಮಂತ್ರಭಾಗ ಮತ್ತು ಧಾರ್ಮಿಕ ವಿಷಯಗಳನ್ನೊಳಗೊಂಡ ಸಹಸ್ರಾರು ತಾಡೋಲೆಗಳು, ಕೀರ್ದಿಪುಸ್ತಕಗಳು, ಶಿಲಾ ಮತ್ತು ತಾಮ್ರ ಶಾಸನಗಳು ಮತ್ತು ಅವುಗಳ ಪ್ರತಿಗಳು, ಗೋಕರ್ಣ, ಮಂಜುಗುಣಿ, ಮತ್ತಿನ್ನಿತರ ಪ್ರದೇಶಗಳಲ್ಲಿ ಲಭ್ಯವಿರುವ ದಾಖಲೆಗಳು, ಸ್ವರ್ಣವಲ್ಲಿ ಸಂಸ್ಥಾನದ ಸೀಮೆಗಳಲ್ಲಿರುವ ದೇವಾಲಯಗಳು ಮತ್ತು ಅವಶೇಷಗಳು ಸ್ವರ್ಣವಲ್ಲಿ ಸಂಸ್ಥಾನದ ಚರಿತ್ರೆಯ ಮೇಲೆ ಬೆಳಕು ಬೀರುವ ಪ್ರಧಾನ ಆಕರ ಸಾಮಗ್ರಿಗಳು. ಇವುಗಳ ಹೊರತಾಗಿ, ಪೂರ್ವದಲ್ಲಿ, ಶ್ರೀ ಗಂಗಾಧರೇಂದ್ರ ಸರಸ್ವತಿಗಳು ರಚಿಸಿದ, ಗುರು ಪರಂಪರೆಯ ವೃತ್ತಾಂತವನ್ನು ಅರಹುವ, 'ಜ್ಞಾನದೀಪಿಕಾ' ಮತ್ತು ಶ್ರೇಷ್ಠ ಸಿದ್ಧಿಗ್ರಂಥವೆನಿಸಿದ 'ಸ್ವರಾಜ್ಯಸಿದ್ಧಿ' ಮತ್ತಿನ್ನಿತರ ಸಾಹಿತ್ಯಕ ಕೃತಿಗಳು ಈ ದಿಶೆಯಲ್ಲಿ ಉಪಯುಕ್ತ.

ಸು.ಕ್ರಿ.ಶ. ೯೦೫ ರಿಂದ ಕ್ರಿ.ಶ. ೧೯೯೫ರವರೆಗೂ ಸ್ವರ್ಣವಲ್ಲಿ ಮಠದ ದಾಖಲೆಗಳ ಕಾಲ ವಿಸ್ತಾರವಾಗಿದೆ. ಹೆಚ್ಚಿನ ದಾಖಲೆಗಳಲ್ಲಿ ಶಾಲಿವಾಹನ ಶಕ ನಮೂದಿತ ವಾಗಿದ್ದು, ಇನ್ನುಳಿದವುಗಳಲ್ಲಿ ವಿಕ್ರಮ, ಮೊಹಮ್ಮದ, ಫಸಲಿ, ಮತ್ತು ಕ್ರಿಸ್ತ ಶಕಗಳನ್ನು ಉಲ್ಲೇಖಿಸಲಾಗಿದೆ. ಕೆಲವು ದಾಖಲೆಗಳಲ್ಲಿ ಸಂವತ್ಸರಗಳನ್ನು ಮಾತ್ರ ನಮೂದಿಸಲಾಗಿದೆ. ಕೆಲವೇ ದಾಖಲೆಗಳಲ್ಲಿಯ ಶಕವರ್ಷ ಮತ್ತು ಸಂವತ್ಸರಗಳಲ್ಲಿ ಹೊಂದಾಣಿಕೆ ಕಂಡುಬರುವದಿಲ್ಲ.

ಸಾಮಾನ್ಯವಾಗಿ, ದಾಖಲೆಗಳೆಲ್ಲ ಕನ್ನಡದಲ್ಲಿದ್ದು, ಕೆಲವೇ ಮಾತ್ರ ಸಂಸ್ಕೃತ, ತಿಗಳಾರಿ ಮತ್ತು ಇಂಗ್ಲಿಷ್‌ನಲ್ಲಿವೆ ದಾಖಲೆಗಳು ಗತಕಾಲದ ಚರಿತ್ರೆಯ ಮೇಲೆ ಬೆಳಕು ಬೀರುವದರ ಜೊತೆಗೆ, ಕನ್ನಡ ಭಾಷೆ ಮತ್ತು ಲಿಪಿ ೧೪ನೇ ಶತಮಾನದಿಂದ ೨೦ನೇ ಶತಮಾನದ ಅಂತ್ಯದವರೆಗೆ ನಡೆದುಬಂದ ದಾರಿಯನ್ನು ತೋರಿಸುತ್ತವೆ. ವಿಜಯನಗರ ಪೂರ್ವ, ವಿಜಯನಗರ ಕಾಲ ಮತ್ತು ಸ್ವಾದಿ ಅರಸರ ಕಾಲದ ತಾಮ್ರ ಮತ್ತು ಶಿಲಾಶಾಸನಗಳ ಪ್ರತಿಗಳನ್ನು ಇಲ್ಲಿ ಕಾಣಬಹುದಾಗಿದೆ. ಅನೇಕ ಶಾಸನಗಳು ಇಂದು ನಶಿಸಿರುವುದರಿಂದ ದಾಖಲೆಗಳಲ್ಲಿಯ ಶಾಸನಗಳ ಪ್ರತಿಗಳಿಗೆ ಹೆಚ್ಚಿನ ಐತಿಹಾಸಿಕ ಮೌಲ್ಯ ಪ್ರಾಪ್ತವಾಗುತ್ತದೆ. ಲಿಪಿ, ವಾಕ್ಯರಚನೆ, ಭಾಷೆ, ಎಲ್ಲವೂ ಸುಂದರವಾಗಿವೆ. ಬೇರೆಬೇರೆ ಕಾಲದಲ್ಲಿ ಬೇರೆ ಬೇರೆ ಲಿಪಿಕಾರರು ಕನ್ನಡ ಮೋಡಿಯಲ್ಲಿ ಬರೆದಿದ್ದರಿಂದ, ಸಾಮಾನ್ಯವಾಗಿ, ದಾಖಲೆಗಳನ್ನು ಓದುವದು ಕಠಿಣ. ಆದರೂ, ಆಸಕ್ತಿ, ತಾಳ್ಮೆ, ಪರಿಶ್ರಮ ಮತ್ತು ಅನುಭವಗಳಿಂದ ಓದಲು ಸಾಧ್ಯ. ಕಾಲಕ್ಕೆ ತಕ್ಕಂತೆ ಹಳೆಗನ್ನಡ, ಸಂಸ್ಕೃತ, ಪರ್ಶಿಯನ್ ಮತ್ತು ಇಂಗ್ಲಿಷ್ ಪದಗಳನ್ನು ಬಳಸಲಾಗಿದೆ.

**ಪೂರ್ವಚರಿತ್ರೆ:** ದಾಖಲೆಗಳಲ್ಲಿ ನಮೂದಿಸಲಾದ ವಿಷಯ ಕುರಿತು ಹೇಳಬೇಕೆಂದರೆ ಶ್ರೀ ಸೋಂದಾ ಸ್ವರ್ಣವಲ್ಲಿ ಮಹಾಸಂಸ್ಥಾನದ ಸುಮಾರು ೧೨೦೦ ವರ್ಷಗಳ ಚರಿತ್ರೆಯನ್ನೇ ಈ ದಾಖಲೆಗಳು ಬೆಳಕಿಗೆ ತರುತ್ತವೆ. ಕಾಲ ಎಷ್ಟು ವಿಸ್ತಾರವೋ, ದಾಖಲೆಗಳೂ ಅಷ್ಟೇ ವೈವಿಧ್ಯಮಯ. ಮಠದ ಸ್ಥಳಾಂತರ, ಗುರುಪರಂಪರೆ, ಪ್ರದೇಶದಲ್ಲಿಯ ರಾಜಕೀಯ ಬೆಳವಣಿಗೆ, ಮಹಾಸಂಸ್ಥಾನದ ಆಡಳಿತ ವ್ಯವಸ್ಥೆ, ಧಾರ್ಮಿಕ, ಆರ್ಥಿಕ ಮತ್ತು ಸಾಮಾಜಿಕ ಸ್ಥಿತಿಗತಿಗಳನ್ನು ಅರಿಯಲು ಈ ದಾಖಲೆಗಳು ಪ್ರಯೋಜನಕಾರಿ. ಇಲ್ಲಿ ಆ ದಾಖಲೆಗಳ ಕಿರುಪರಿಚಯವನ್ನು ಮಾತ್ರ ಮಾಡಿಕೊಡಲಾಗಿದೆ.

ಸ್ವರ್ಣವಲ್ಲಿ ಮಠದ ಉತ್ಪತ್ತಿ ಮತ್ತು ಗುರುಪರಂಪರೆಯ ಚರಿತ್ರೆಯನ್ನು ಸ್ಪಷ್ಟವಾಗಿ ತಿಳಿಸುವ ಸು.ಕ್ರಿ.ಶ.೧೮೮೦ರ ದಾಖಲೆಯು ಮಠದಲ್ಲಿ ಲಭ್ಯವಾಗಿದೆ. ''..... ಪೂರ್ವದಲ್ಲಿ, ಅಹಿಕ್ಷೇತ್ರದಲ್ಲಿ ಹೈವ ದ್ರಾವಿಡ ಬ್ರಾಹ್ಮಣನಾದ ವಿಶ್ವಪತಿ ದೀಕ್ಷಿತರ ಮಗನಾದ ಗುಣನಿಧಿ ಯಂಬವನು ವಿರಕ್ತನಾಗಿ ಗೋಕರ್ಣ ಮಹಾಕ್ಷೇತ್ರದಲ್ಲಿ ದೇವತಾನುಗ್ರಹ ಸಂಪಾದಿಸಿಕೊಂಡು ಶ್ರೀಮತ್ ಕಾಶಿಕ್ಷೇತ್ರಕ್ಕೆ ಹೋಗಿ ಅಲ್ಲಿ

6. ಎರಡು ದಶಕಗಳ ಹಿಂದೆಯೇ ಸ್ವರ್ಣವಲ್ಲಿ ಮಠದ ಐತಿಹಾಸಿಕ ದಾಖಲೆಗಳನ್ನು ಪರಿಶೀಲಿಸಲು ಅಂದಿನ ಗುರುಗಳಾದ ಶ್ರೀ ಸರ್ವಜ್ಞೇಂದ್ರ ಸರಸ್ವತಿಗಳು ನನಗೆ ಅನುಮತಿ ನೀಡಿ ಆಶೀರ್ವದಿಸಿದ್ದರು. ಆದರೆ ಆ ಮಹತ್ವದ ಕಾರ್ಯ ಕೈಗೊಳ್ಳಲು ನನಗೆ ಸಮಯ ಕೂಡಿಬರಲಿಲ್ಲ. ಇಂದಿನ ಶ್ರೀ ಗಂಗಾಧರೇಂದ್ರ ಸರಸ್ವತಿಗಳು ೧೯೯೧ರಲ್ಲಿ ಪಟ್ಟಕ್ಕೆ ಬಂದನಂತರ ಈ ಕಾರ್ಯಕ್ಕೆ ಪುನಃ ಪ್ರೋತ್ಸಾಹ ದೊರೆಯಿತು. ಸ್ವರ್ಣವಲ್ಲಿ ಸಂಸ್ಥಾನದ ಚರಿತ್ರೆಯನ್ನು ಈಗಿರುವದಕ್ಕಿಂತ ಸ್ಫುಟವಾಗಿ ಮೂಡಿಸಲೆಂದು 'ಶ್ರೀಸರ್ವಜ್ಞೇಂದ್ರ ಪ್ರತಿಷ್ಠಾನದ' ಅಡಿಯಲ್ಲಿ ಒಂದು ಸಮಿತಿಯನ್ನೂ ರಚಿಸಲಾಯಿತು. ಕಳೆದೆರಡು ವರ್ಷಗಳಿಂದ ನಡೆಸಿದ ಚಾರಿತ್ರಿಕ ದಾಖಲೆಗಳ ಸಂಶೋಧನೆಯ ಫಲವಾಗಿ, ಇಂದು ನಾನು 'ಶ್ರೀ ಸೋಂದಾಸ್ವರ್ಣವಲ್ಲಿ ಮಹಾಸಂಸ್ಥಾನದ ಐತಿಹಾಸಿಕ ದಾಖಲೆಗಳು, ಸಂ.೧' ಎಂಬ ಗ್ರಂಥದ ಹಸ್ತಪ್ರತಿಯನ್ನು ತಯಾರಿಸಿ, ಪ್ರಕಟನೆಗಾಗಿ ಕರ್ನಾಟಕ ರಾಜ್ಯಪತ್ರಾಗಾರ ಇಲಾಖೆಗೆ ಸಾದರಪಡಿಸಲು ಸಾಧ್ಯವಾಗಿದೆ. ಒಟ್ಟು ೫೩೮ ಆಯ್ದ ದಾಖಲೆಗಳನ್ನು ೧೪ ಅಧ್ಯಾಯಗಳಲ್ಲಿ ಅಳವಡಿಸಿರುವೆ. ಪ್ರಸ್ತುತ ಲೇಖನದಲ್ಲಿ ನಮೂದಿಸಲಾದ ದಾಖಲೆ ಸಂಖ್ಯೆಗಳು ಮೇಲ್ಕಾಣಿಸಿದ ಹಸ್ತಪ್ರತಿಯಲ್ಲಿ ನಮೂದಿಸಲಾದ ದಾಖಲೆಗಳ ಸಂಖ್ಯೆಗಳೆಂಬುದನ್ನು ಓದುಗರು ಗಮನದಲ್ಲಿಡಬೇಕು.

ಶ್ರೀ ಶಂಕರಾಚಾರ್ಯರಿಗೆ ಹೇಳಿಕೊಳ್ಳಲಾಗಿ, ಅವರ ಅನುಗ್ರಹದಿಂದ ತಮ್ಮ ಶಿಷ್ಯರಾದ ಹಸ್ತಾಮಲ್ಕರೆಂಬ ಭಾಸ್ಕರೇಂದ್ರ ಸರಸ್ವತಿಗಳವರಿಂದ ಯತ್ಯಾಶ್ರಮವನ್ನು ಕೊಡಿಸಿ, ವರಾಹ ದೇವರು ತುಂಗಭದ್ರಾತೀರ್ಥ ಭೂರಿವಾಳ ಸಾಂಪ್ರದಾಯ ಪೂರ್ವಕ ವಿಸ್ವವಂದ್ಯ ಸರಶ್ವತಿಗಳೆಂತ ಯೋಗ ಪಟ್ಟಾ ಮಾಡಿ, ಶ್ರೀ ನರಸಿಂಹದೇವರ ವಿಗ್ರಹ, ಚಂದ್ರ ಮೌಳೀಶ್ವರ ದೇವರ ಲಿಂಗ ಸಹಾಕೊಟ್ಟು, ನೀನು ಗೋಕರ್ಣಮಂಡಲಕ್ಕೆ ಹೈವದ್ರಾವಿಡ ಬ್ರಾಹ್ಮಣ್ಯಕ್ಕೆ ಧರ್ಮಶಾಸ್ತ್ರ ಮಾರ್ಗದಲ್ಲಿ ವರ್ತಿಸಿ ಗುರುವಾಗಿ ಯಿರು ಯಂದು ಅಪ್ಪಣೆ ಕೊಟ್ಟ ಬಳಿಕ, ಕಾಶಿ ರಾಜನಿಂದ ನಿರ್ಮಿಸಿದ ದಶಾಶ್ವಮೇಧ ಘಾಟಿನಲ್ಲಿ ಯಿರುವ ಮಠದಲು ಕೆಲವು ದಿವ್ಸಯಿದ್ದು, ನಾರಾಯಣೇಂದ್ರ ಸರಸ್ವತಿಗಳೆಂಬ ಶಿಷ್ಯರ ಮಾಡಿದರು ......'' ಇತ್ಯಾದಿ, ದಾಖಲೆಯ ಪ್ರಾರಂಭದಲ್ಲಿ ಉಲ್ಲೇಖಿಸಲಾಗಿದ್ದು, ಮುಂದೆ, ಮಠ, ಕ್ರಮವಾಗಿ, ಉಜ್ಜಯಿನಿ, ಗೋಕರ್ಣ, ಕಡತೋಕೆ, ಸಹಸ್ರಲಿಂಗ ಮತ್ತು ಕ್ರಿ.ಶ.೧೫೫೬ರಲ್ಲಿ ಇಂದಿನ ಸ್ವರ್ಣವಲ್ಲಿಗೆ ಸ್ಥಳಾಂತರಗೊಂಡಿತೆಂದು ಪ್ರಸ್ತುತ ದಾಖಲೆಯಲ್ಲಿ ಉಲ್ಲೇಖಿಸಲಾಗಿದೆ.[7]

ಉಜ್ಜಯಿನಿಯ ದೊರೆ ವಿಕ್ರಮಾರ್ಕನು ವಿಶ್ವವಂದ್ಯರ ಅನುಚರರಾದ ನಾರಾಯಣೇಂದ್ರ ಸರಸ್ವತಿಗಳಿಗೆ ವಿಕ್ರಮಾರ್ಕಶಕ ೯೬೧ (ಸು.ಕ್ರಿ.ಶ.೯೦೫), ಕ್ರೋಧನ ಸಂವತ್ಸರದ ಚೈತ್ರ ಶುಕ್ಲ ಅಷ್ಟಮಿಯಂದು ನೀಡಿದ ತಾಮ್ರಶಾಸನವು ಸ್ವರ್ಣವಲ್ಲಿ ಮಠದ ಆಕರ ಸಾಮಗ್ರಿಗಳಲ್ಲಿಯೇ ಅತ್ಯಂತ ಪುರಾತನವಾದುದು. ಸಂಸ್ಕೃತ ಭಾಷೆಯ, ದೇವನಾಗರಿ ಲಿಪಿಯ ಈ ತಾಮ್ರಶಾಸನದ ಹಸ್ತಪ್ರತಿಯೂ ಮಠದ ಪತ್ರಾಗಾರದಲ್ಲಿ ಲಭಿಸಿದೆ.[8] ಮಠದ ಪರಂಪರೆಯಲ್ಲಿ ದ್ವಿತೀಯರಾದ ''ಶ್ರೀ ನಾರಾಯಣೇಂದ್ರ ಯತಿಗಳಿಗೆ ಸಾಮಂತ ರಾಜರೆಲ್ಲ ಕಾಣಿಕೆ ಸಲ್ಲಿಸತಕ್ಕದ್ದು ಕಾಳಿಕಾದೇವಾಲಯದ ಬಳಿಯಲ್ಲಿರುವ ಈ ಮಠದ ಪ್ರದೇಶಕ್ಕೆ ಮೇಧಾಪುರವೆಂದು ಹೆಸರು. ಇಂಥ ಮಹಾತ್ಮರಿಗೆ ಅವಕಾಶ ಕೊಡದಿದ್ದರೆ ತನ[ಗೆ] ನರಕ ಪ್ರಾಪ್ತಿಯಾಗುವದು ಖಂಡಿತ. ಆದುದರಿಂದ ಇವರನ್ನು ಕರೆಸಬೇಕು. ಕಿರೀಟ, ಶ್ವೇತಛತ್ರ, ಮೇನೆ, ತಿರ್ಯಗಾಂ[ದೋ]ದೋಲಿಕ, ಉಭಯಚಾಮರ, ಮಕರತೋರಣ, ವ್ಯಾಖ್ಯಾನ ಸಿಂಹಾಸನ, ಹಗಲು ದೀವಟಿಗೆಗಳು, ಸಿಂಹದ ಮುಖ[ದ], ಸೂರ್ಯಚಂದ್ರ ಚಿತ್ರಿತ ಪತಾಕಾದಿ ಚಿಹ್ನೆಗಳು, ತಾಳ, ಶಂಖ, ಚಕ್ರಾದಿ ವಾದ್ಯ ವಿಶೇಷಗಳು, ಸಕಲ ಬಿರುದಾವಳಿಗಳನ್ನೂ ಕೊಡುವದೆಂತ ತಾಮ್ರ ಶಾಸನ ಕೊಟ್ಟಿದ್ದೇನೆ. ಅಂತೆಯೇ ರಾಜಸಭೆಯಲ್ಲಿ ಘೋಷಿಸಿದ್ದೇನೆ. ಈ ಎಲ್ಲ ಬಗೆಯ ಸೌಕರ್ಯಗಳನ್ನು ಹೊಂದಿ, ಬಿರುದಾವಳಿಗಳೊಂದಿಗೆ ಶ್ರೀಗಳವರು ಧರ್ಮಮಾರ್ಗವನ್ನುಪದೇಶಿಸುತ್ತ ಮನ ಒಪ್ಪಿದ ಕಡೆ ಎಲ್ಲ ದಿಕ್ಕುಗಳಲ್ಲಿಯೂ ಸಂಚರಿಸಬಹುದು. ಈ ಶಾಸನವನ್ನು ನನ್ನ ವಂಶದವರೆಲ್ಲರೂ ಗೌರವಿಸಬೇಕು. ಯಾರು ಇದಕ್ಕೆ ವಿಘ್ನಮಾಡುತ್ತಾರೆಯೋ ಅವರ ಆಸ್ತಿಗಳನ್ನು ಮುಟ್ಟುಗೋಲು ಹಾಕತಕ್ಕದ್ದು. ದೇವತೆಗಳು, ಹಗಲು ರಾತ್ರಿಗಳೇ ಇದಕ್ಕೆ ಸಾಕ್ಷಿ. ಇದು ತಾಮ್ರ ಶಾಸನ.[9] ಎಂಬುದೇ ಈ ಧರ್ಮಶಾಸನದ ಪಾಠ.

ವಿಜಯನಗರ ಸಾಮ್ರಾಜ್ಯದ ವೀರಬುಕ್ಕರಾಯ ಮತ್ತು ಕೃಷ್ಣದೇವರಾಯರ ಕಾಲಕ್ಕೆ ಸೇರಿದ, ಸ್ವರ್ಣವಲ್ಲಿ ಸಂಸ್ಥಾನಕ್ಕೆ ಸಂಬಂಧಿಸಿದ ೩ ದಾಖಲೆಗಳು ಮಠದ ಪತ್ರಾಗಾರದಲ್ಲಿ ಲಭ್ಯವಾಗಿವೆ.[10] ಈ ಸಮ್ರಾಟರ ಕಾಲದಲ್ಲಿ ಮಠ, ಸ್ವರ್ಣವಲ್ಲಿಗೆ ಸ್ಥಳಾಂತರ ಗೊಂಡಿರದೆ ಇನ್ನೂ ಸಹಸ್ರಲಿಂಗದಲ್ಲೇ ಇದ್ದು, ಸಹಸ್ರಲಿಂಗ ಮಠವು ಅನೇಕ ಕಾಲುಮಠಗಳನ್ನೊಳಗೊಂಡಿತ್ತೆಂದು ತಿಳಿದು ಬರುತ್ತದೆ.

ಸ್ವಾದಿ ಅರಸರ ಕಾಲ: ಸ್ವರ್ಣವಲ್ಲಿಗೆ ಸಂಬಧಿಸಿದ ಸುಮಾರು ೪೫ ದಾಖಲೆಗಳು[11] ಸ್ವಾದಿ ಅರಸರ ಕಾಲಕ್ಕೆ ಸೇರಿದವುಗಳು. ಹದಿನಾರನೇ ಶತಮಾನದ ಮಧ್ಯದಿಂದ ಹದಿನೆಂಟನೇ ಶತಮಾನದ ಮಧ್ಯದವರೆಗೆ ಸ್ವಾದಿಯ ಅರಸರು

---

7. ದಾ.ಸಂ.೨೨೪; ಪೂರ್ವದಲ್ಲಿ ಶ್ರೀ ಗಂಗಾಧರೇಂದ್ರ ಸರಸ್ವತಿಗಳು ಬರೆದ 'ಜ್ಞಾನದೀಪಿಕಾ' ಎಂಬ ಸಂಸ್ಕೃತ ಕಾವ್ಯದಲ್ಲಿ ಮಠದ ಉತ್ಪತ್ತಿ ಮತ್ತು ಗುರುಪರಂಪರೆಯನ್ನು ಉಲ್ಲೇಖಿಸಲಾಗಿದೆ. 'ಜ್ಞಾನದೀಪಿಕಾ'ದಲ್ಲಿಯ ಅಂಶಗಳನ್ನು ಸು.ಕ್ರಿ.ಶ೧೮೮೦ ರಲ್ಲಿ ದಾಖಲೆಯ ರೂಪದಲ್ಲಿ ಬರೆದಿಟ್ಟಂತೆ ತೋರುತ್ತದೆ. ಶ್ರೀ ಸುರೇಶ್ವರಾಚಾರ್ಯರಿಂದ (ಶೃಂಗೇರಿ ಮಠ) ಗುಣನಿಧಿಗಳು ಸನ್ಯಾಸ ಸ್ವೀಕರಿಸಿದರೆಂದು ಮಂಜುಗುಣಿಯ ದಾಖಲೆಯು (ಸಂ.೪೯೮) ಸ್ಪಷ್ಟಪಡಿಸುತ್ತದೆ.

8 ದಾ.ಸಂ.೧

9 ಈ ತಾಮ್ರಶಾಸನದ ಮೂಲಶಾಸನವು ಶಿಲಾಶಾಸನವಾಗಿದ್ದು, ಅದು ಉಜ್ಜಯಿನಿಯ ಕಾಳಿಕಾದೇವಾಲಯದ ಸಮ್ಮುಖದಲ್ಲಿದೆ ಎಂದೂ ಶಾಸನದಲ್ಲಿ ಹೇಳಲಾಗಿದೆ.

10 ದಾ.ಸಂ.೨,೩,೪

11 ದಾ.ಸಂ.೫-೪೯

ಜ್ಯಭಾರ ಮಾಡಿದರು. ಕ್ರಿ.ಶ.೧೭೬೩ರಲ್ಲಿ ಹೈದರಲಿಯ ಸೇನೆಯು ಸ್ವಾದಿ(ಸೋದೆ) ರಾಜ್ಯವನ್ನು ಗೆದ್ದುಕೊಳ್ಳುವದರ ಜೊತೆಗೆ, ಸೋದಾರಾಜ್ಯದ ಪತನವೂ ಆಯಿತು.

ತಮ್ಮ ವಂಶಸ್ಥರಿಗೆಲ್ಲ ಶಿವಸಾಯುಜ್ಯ ಮೋಕ್ಷಪದವು ಸ್ಥಿರವಾಗಬೇಕೆಂದು, ಇಮ್ಮಡಿ ಅರಸಪ್ಪ ನಾಯಕನು, ಶ್ರೀ ಚಂದ್ರಶೇಖರ ಸರಸ್ವತಿಗಳಿಗೆ, ಶಾ.ಶ.೧೪೭೮ (ಕ್ರಿ.ಶ.೧೫೫೬) ರಲ್ಲಿ, ಶಾಲ್ಮಲೀತೀರದ ವಿಶಾಲವಾದ ಪ್ರದೇಶದಲ್ಲಿ, ಮಠ, ಚಂದ್ರಶಾಲೆ, ಶ್ರೀಲಕ್ಷ್ಮಿನರಸಿಂಹ; ಚಂದ್ರಮೌಳೀಶ್ವರ ದೇವಾಲಯ, ಶಾರದಾ, ಗಣಪತಿ, ವ್ಯಾಸಾದಿಗಳಿರುವ ಬೇರೆ ಬೇರೆ ಗುಡಿಗಳನ್ನು ಕಟ್ಟಿಸಿ, ''ಶ್ರೀ ಸ್ವರ್ಣವಲ್ಲಿ ಮಠ'' ಎಂದು ನಾಮಧೇಯವಿಟ್ಟು, ಪೂಜೆ, ವಿನಿಯೋಗ ನಿತ್ಯದಲ್ಲಿ ನಡೆಯಲೆಂದು, ಸೋದಾ ಗ್ರಾಮಕ್ಕೆ ''ಹೊನ್ನೆಹಳ್ಳಿಗ್ರಾಮ'' ವೆಂದು ಹೆಸರು ನಿರ್ಮಿಸಿ, ೫೨ ಗ್ರಾಮಗಳನ್ನು ಶ್ರೀಮಠಕ್ಕೆ ಉಂಬಳಿಯಾಗಿ ಕೊಟ್ಟನೆಂದು ಶಾಸನದಪಾಠವು ತಿಳಿಸುತ್ತದೆ.[12]

ವಿಜಯನಗರದಲ್ಲಿ ಸದಾಶಿವ ಮಹಾರಾಯರು ಆಳುತ್ತಿದ್ದ ಕಾಲದಲ್ಲಿ ಬನವಾಸಿಯ ಚಂನ್ನೈಯ್ಯಒಡೆಯರು ಹೊನ್ನೆಹಳ್ಳಿ ಹಿರೇಸರ್ವಜ್ಞೇಂದ್ರ ಸರಸ್ವತಿಗಳಿಗೆ, ಮಧುಲಿಂಗ ದೇವರು ಪ್ರಸನ್ನವಾಗಲೆಂದು, ಬನವಾಸಿ ಕ್ಷೇತ್ರದಲ್ಲಿಯ ೧೨ ಖಂಡುಗ ಭೂಮಿಯನ್ನು ಶಾ.ಶ.೧೪೮೧(ಕ್ರಿ.ಶ.೧೫೫೯)ರಲ್ಲಿ ದಾನವಾಗಿ ಬರಕೊಟ್ಟ ಪಟ್ಟೆ.[13] ಚಂದಾವರದ ಹೋಬಳಿ ಯೊಳಗಿನ ಅಗಸೆ ಮಾಡಗೆರಿ ಗ್ರಾಮದೊಳಗಿನ ಸ್ಥಳವನ್ನು, ಪ್ರಾಕು ಮರ್ಯಾದೆಗೆ ಆಗುಮಾಡಿಕೊಂಡು, ೩೪ವರಹ ಮತ್ತು ೯ ಹಣಗಳನ್ನು ಕಾಲಂಪ್ರತಿ ಅರಮನೆಗೆ ಸಲ್ಲಿಸುತ್ತ, ಧರ್ಮನಡೆಸುವಂತೆ, ಹೊನ್ನೆಹಳ್ಳಿ ರಾಮಚಂದ್ರ ಸರಸ್ವತಿಗಳಿಗೆ ಕೆಳದಿ ವೆಂಕಟಪ್ಪನಾಯಕರು ಕೊಟ್ಟಪಟ್ಟೆ,[14] ಅಡಕಳ್ಳಿ ಮಠದ ಧರ್ಮಸ್ವಾಸ್ಥಿ ಮತ್ತು ಅದಕ್ಕೆ ಸಂಬಂಧಿಸಿದ ಕಾಲು ಮಠ ಗಳನ್ನು, ಶಾ.ಶ ೧೫೭೬(ಕ್ರಿ.ಶ.೧೬೫೪)ರಲ್ಲಿ ಸೋದೆಯ ಮಹಾಪ್ರಭು ಮಧುಲಿಂಗನಾಯಕರು ಹೊನ್ನೆಹಳ್ಳಿ ರಾಮಚಂದ್ರಸರಸ್ವತಿಗಳಿಗೆ ಪಾಲಿಸಿದ ಪಟ್ಟೆ[15], ಚಂದಾವರ ಸೀಮೆಯೊಳಗಿನ ಅಂವಸವಳಿ ಬಾದೊಳಿ ಗ್ರಾಮವನ್ನು ಶಾ.ಶ.೧೫೪೧ (ಕ್ರಿ.ಶ.೧೬೧೯)ರಲ್ಲಿ, ಕೆಳದಿ ಸಂಸ್ಥಾನದ ಬಸಪ್ಪನಾಯಕರು ಹೊನ್ನೆಹಳ್ಳಿಯ ಸರ್ವಜ್ಞೇಂದ್ರ ಸರಸ್ವತಿಗಳಿಗೆ ಬರೆಸಿಕೊಟ್ಟ ಧರ್ಮಶಾಸನದ ಪಟ್ಟೆ,[16] ಯಲ್ಲಾಪುರ ಸೀಮೆಯೊಳಗಿನ ತಟಿಗಾರು ಕೊಮಡಿ ಧರ್ಮಸ್ವದ ಸ್ವಾಸ್ಥಿಯನ್ನು ಸು.ಶಾ.ಶ. ೧೬೦೦ (ಸು.ಕ್ರಿ.ಶ. ೧೬೭೮)ರಲ್ಲಿ, ಹೊನ್ನೆಹಳ್ಳಿ ರಾಮಚಂದ್ರ ಸರಸ್ವತಿಗಳಿಗೆ ಸೋದೆಯ ಸದಾಶಿವನಾಯಕರು ಪಾಲಿಸಿದ ರಾಯಸ,[17] ಹೊನ್ನೆಹಳ್ಳಿಯ ಪ್ರತ್ಯಕ ಬ್ರಹ್ಮೇಂದ್ರ ಸರಸ್ವತಿಗಳು ಶಾ.ಶ. ೧೬೪೮ (ಕ್ರಿ.ಶ.೧೭೨೬) ರಲ್ಲಿ ಭಂಡಾರದ ಭರಮಣ್ಣಗೆ ಬಿಳಿಗೆ ಸೀಮೆಯೊಳಗಿನ ಸಂಪಗೋಡ ಗ್ರಾಮದೊಳಗಿನ ಕಂಚಿಮನೆ ಗ್ರಾಮದಲ್ಲಿಯ ಭೂಮಿಯನ್ನು ಪಾಲಿಸಿದ್ದಕ್ಕೆ ಸಂಬಂಧಿಸಿ ರಾಯಸ,[18] ಇತ್ಯಾದಿ ದಾಖಲೆಗಳು ಸ್ವರ್ಣವಲ್ಲಿ ಮಠದೊಂದಿಗೆ ದೊರೆಗಳು ಇರಿಸಿಕೊಂಡ ಸಂಬಂಧವನ್ನು ತೋರಿಸುತ್ತವೆ. ವಿಜಯನಗರ, ಸ್ವಾದಿ ಮತ್ತು ಕೆಳದಿ ಅರಸರ ಕಾಲದಲ್ಲಿ ಸ್ವರ್ಣವಲ್ಲಿ ಮಠಕ್ಕೆ ಸಾಕಷ್ಟು ಭೂಮಿಯು ಪ್ರಾಪ್ತವಾಗಿದ್ದರಿಂದ ಅದೊಂದು ಮಹಾಸಂಸ್ಥಾನವಾಗಿ ರೂಪುಗೊಂಡಿತು.

**ಟೀಪುಸುಲ್ತಾನರ ಕಾಲ:** ಸ್ವರ್ಣವಲ್ಲಿಗೆ ಸಂಬಂಧಿಸಿದ ಟೀಪುಸುಲ್ತಾನರ ಕಾಲದ ೮ ದಾಖಲೆಗಳು [19] ಲಭ್ಯವಾಗಿವೆ. ಸೋಂದೆ ಇಮ್ಮಡಿ ಸದಾಶಿವರ್‍ಾಜರು ಬರೆಸಿಕೊಟ್ಟ ತಾಮ್ರ ಶಾಸನವು ದಂಡಿನ ಆ ಅಂವಾಂತ್ರದೊಳಗೆ ಹೋಯಿತು, ಎಂಬುದನ್ನು ಪ್ರಸ್ತಾಪಿಸಿ, ಕಂಪ್ಲಿ ವೆಂಕಪ್ಪಹೆಗಡೆ, ಹಾಸಣಗೆ ರಾಮಚಂದ್ರ ಹೆಗಡೆ, ಮುಂತಾದವರು ಸೋಂದೆ ತಾಲೂಕಿನ ಆಮಿಲ್, ಇಸ್ಮಾಯಿಲ್ ಖಾನ್ ಖುರೋಶಿ ಶಿರಸ್ತೆದಾರರಿಗೆ ಬರೆಸಿಕೊಟ್ಟ ಭೋಗವಟೆಪತ್ರ,[20] ಹೊನ್ನೆಹಳ್ಳಿ ಮಠದ ಮುಸಕಿ ಗ್ರಾಮದಿಂದ ಸರಕಾರಕ್ಕೆ ಸಲ್ಲುವ ಸಿಸ್ತಿನ ಮೆಣಸು ಕುರಿತು, ಮುಂಡಗೋಡ ಆಮಿಲ್, ಶೇಖ ಅಬ್ದುಲ್ ಖಾದರರ

---

12 ದಾ.ಸಂ.೬
13 ದಾ.ಸಂ.೯
14 ದಾ.ಸಂ. ೧೭
15 ದಾ.ಸಂ. ೨೩
16 ದಾ.ಸಂ. ೨೭
17 ದಾ.ಸಂ.೩೪
18 ದಾ.ಸಂ. ೪೨
19 ದಾ.ಸಂ. ೫೦-೫೭
20 ದಾ.ಸಂ. ೫೦

ಕಾಗದ[21] ಮುಂತಾದವುಗಳು ಹೈದರ ಮತ್ತು ಟೀಪುಸುಲ್ತಾನರ ಆಡಳಿತವು ಸ್ವರ್ಣವಲ್ಲಿ ಪ್ರದೇಶದಲ್ಲಿ ಜಾರಿಯಲ್ಲಿತ್ತೆಂದು ಸ್ಪಷ್ಟಪಡಿಸುತ್ತವೆ. ಸ್ವಾದಿ ಅರಸರ ಕಾಲದಲ್ಲಿ ನೀಡಲಾದ ಧರ್ಮಸಾಧನಗಳು ಹೈದರಲಿಯ ಸೈನ್ಯ ದಂಡೆತ್ತಿ ಬಂದಾಗ ಅವಾಂತರವಾಗಿ ಹೋಗಿದ್ದರಿಂದ, ಅವುಗಳನ್ನು ಪುನಃ ದಯಾಪಾಲಿಸಬೇಕಾಗಿ, ಸ್ಥಳಿಕರು ವಿನಂತಿಸಿಕೊಂಡಿದ್ದನ್ನು ಗಮನಿಸಬಹುದಾಗಿದೆ. ಮುಸಲ್ಮಾನ ಅಧಿಕಾರಿಗಳು ಹಿಂದೂ ಸ್ವಾಮಿಗಳು ಕಳುಹಿದ ಫಲ-ಮಂತ್ರಾಕ್ಷತೆ ಸ್ವೀಕರಿಸುತ್ತಿದ್ದ ರೆಂದು ಈ ದಾಖಲೆಗಳಿಂದ ಸ್ಪಷ್ಟವಾಗುತ್ತದೆ. ಈ ದಿಶೆಯಲ್ಲಿ, ಹೈದರ ಮತ್ತು ಟೀಪುಸುಲ್ತಾನರು ಶೃಂಗೇರಿ ಮಠದ ಜಗದ್ಗುರುಗಳನ್ನು ಗೌರವಿಸುತ್ತಿದ್ದರೆಂಬುದು ಗಮನಾರ್ಹ ಅಂಶವಾಗಿದೆ. [22]

**ಕಂಪನಿ ಸರಕಾರ:** ಸ್ವರ್ಣವಲ್ಲಿಗೆ ಸಂಬಂಧಿಸಿದ ಕಂಪನಿ ಸರಕಾರ ಕಾಲದ ೪೯ ದಾಖಲೆಗಳನ್ನು ಉಲ್ಲೇಖಿಸಲಾಗಿದೆ.[23] ಕ್ರಿ.ಶ ೧೭೯೯ರಲ್ಲಿ ಟೀಪುಸುಲ್ತಾನರ ಪತನದ ನಂತರ ಉತ್ತರಕನ್ನಡ ಜಿಲ್ಲೆಯಲ್ಲಿ ಕಂಪನಿ ಸರಕಾರದ ಆಡಳಿತ ಪ್ರಾರಂಭವಾಗುತ್ತದೆ. ಕ್ರಿ.ಶ.೧೮೫೮ರ ವರೆಗೂ, ಅಂದರೆ ಸಿಪಾಯಿದಂಗೆ ಮುಗಿದು, ಕಂಪನಿ ಸರಕಾರ ಕೊನೆಗೊಂಡು, ವಿಕ್ಟೋರಿಯಾ ಮಹಾರಾಣಿಯ ನೇರ ಆಡಳಿತ ಪ್ರಾರಂಭ ವಾಗುವವರೆಗೂ, ಸೋಂದಾ, ತಾಲೂಕಾ ಸ್ಥಳವಾಗಿದ್ದು, ೧೮೯೯ರಲ್ಲಿ ಶಿರಸಿಗೆ ತಾಲೂಕಾಸ್ಥಳವನ್ನು ಸ್ಥಳಾಂತರಿಸ ಲಾಯಿತು. ಹೀಗಾಗಿ, ಅಂದಿನವರೆಗಿನ ಐತಿಹಾಸಿಕ ದಾಖಲೆ ಗಳೆಲ್ಲ ನೇರವಾಗಿ ಸೋಂದಾಕ್ಕೆ ಸಂಬಂಧಿಸಿದವುಗಳೇ ಆಗಿವೆ.

ಜಮಾಬಂದಿ ಕುರಿತು, ಹೊನ್ನೆಹಳ್ಳಿ ಮಠ ಪೈಕಿ, ಕಕ್ಕೋಡ ಗ್ರಾಮದ ಸಂಕಯ್ಯಗೆ ಅಲೆಕ್ಝಾಂಡರ್ ರೀಡ್ ಸಾಹೇಬರ ಕಾಗದ,[24] ಕ್ರೋಧನ ಸಂವತ್ಸರದ ಜಮಾಬಂದಿಗೆ ಸಂಬಂಧಿಸಿ, ಹೊನೆಹಳ್ಳಿ ಮಠದ ಪಾರುಪತ್ಯಗಾರ ನರಶಿಂಭಟ್ಟರಿಗೆ ಅಲೆಕ್ಝಾಂಡರ್ ವಿಲ್ಸನ್ ಸಾಹೇಬರ ಪಟ್ಟೆ,[25] ಸವಣೂರು, ಮೈಸೂರು ಜಿಲ್ಲೆಗಳಲ್ಲಿ ಹೊನ್ನಳ್ಳಿಮಠದ ಶ್ರೀ ಗಂಗಾಧ ಸರಸ್ವತಿಗಳು ಸಂಚಾರ ಮಾಡುವದರಿಂದ, ಅವರನ್ನು ಅಟಕಾಯಿಸದೆ ಬಿಡುವಂತೆ ಕಾನಡಾ ಜಿಲ್ಲಾ ಮೆಜಿಸ್ಟ್ರೇಟ್ ಅಧಿಕಾರ ಸ್ಥಾನದಿಂದ ರಹದಾರಿ,[26] ಹೈದರಿ ೨೯೫ ವರಹ ೨ಹಣವನ್ನು ತಹಶಿಲ್ದಾರನ ಮಾರಿಫತ್ತಿಗೆ ಸಂದಾಯ ಮಾಡಿ ರಶೀದಿ ತೆಗೆದುಕೊಳ್ಳುವಂತೆ, ಹೊನ್ನೆಹಳ್ಳಿ ಮಠದ ನರಸಿಂಹ ಭಟ್ಟರಿಗೆ ಕಾನಡಾ ಜಿಲ್ಲಾ ಕಲೆಕ್ಟರ ಥಾಮಸ್ ಹ್ಯಾರಿಸ್ ಸಾಹೇಬರ ಬೇರಿಜು ಪಟ್ಟೆ, [27] ಹೊನ್ನೆಹಳ್ಳಿ ಮಠದ ಸ್ವಾಮಿಗಳು ಶಿಷ್ಯವರ್ಗದ ವಿಚಾರಣೆಗಾಗಿ ದೇಶಸಂಚಾರ ಮಾಡುವುದ ರಿಂದ, ಅವರಿಗೆ ಹರಕತ್ತು, ಏನೊಂದು ಉಪದ್ರವ ಕೊಡದ ಬಿಡಬೇಕಾಗಿ, ಕಾನಡಾ ಜಿಲ್ಲಾ ಸಬ್‌ಕಲೆಕ್ಟರ, ಜ್ಯೊಂಟ್ ಮೆಜಿಸ್ಟ್ರೇಟ್, ಆ್ಯಶಿಂಗಟನ್ ಸಾಹೇಬರು, ಮಾಮಲೇದಾರ, ಶಿರಸ್ತೆದಾರ, ಪೇಶ್ಕಾರ, ಮಣೆಗಾರ, ಶಾನಭೋಗ, ಪೋಲಿಸ್‌ದಫೆದಾರ, ಪ್ಯಾದೆ, ವಗೈರೆರಿಗೆ ಹೊರಡಿಸಿದ ರಹದಾರಿ,[38] ಗವರ್ನರ್ ಇನ್‌ಕೌನ್ಸಿಲ್‌ರ ಅಪ್ಪಣೆ ಪ್ರಕಾರ, ದತ್ತಪುತ್ರನ ದಾವೆಗಳನ್ನು ಗವರ್ನ್‌ಮೆಂಟಿನವರು ತೆಗೆದು ಹಾಕುತ್ತಾರೆಂಬುದಾಗಿ, ಗವರ್ನ್‌ಮೆಂಟ್ ಸೆಕ್ರೆಟರಿ, ಥಾಮ ಸನ್ ಅವರ ಜಾಹೀರುನಾಮೆ,[29] ಇತ್ಯಾದಿ ವಿಷಯಗಳನ್ನು ಈ ದಾಖಲೆಗಳಲ್ಲಿ ಉಲ್ಲೇಖಿಸಲಾಗಿದೆ.

ಕಂಪನಿ ಸರಕಾರದ ಕಾಲದಲ್ಲಿ ಕಾನಡಾ ಜಿಲ್ಲಾ ಕಲೆಕ್ಟರ್ ಆಗಿ, ಕ್ರಮವಾಗಿ, ಅಲೆಕ್ಝಾಂಡರ್ ರೀಡ್, ಥಾಮಸ್ ಹ್ಯಾರಿಸ್, ಕೆಮರನ್, ವೈರಶ್, ಅಸಿಸ್ಟಂಟ್ ಕಲೆಕ್ಟರರಾಗಿ, ಅಲೆಕ್ಝಾಂಡರ್ ವಿಲ್ಸನ್, ಮಾಲ್ಕಂ ಲುಯಿಸ್, ಹ್ಯಾಂಡ್ಲಿಗ್ಟನ್, ಮಾಲ್ಟಬ್, ಆ್ಯಶಿಂಗಟನ್, ವಾರ್ಡ್; ಗವರ್ನ್‌ಮೆಂಟ ಸೆಕ್ರೆಟರಿಯಾಗಿ ಥಾಂಸನ್, ಮುಂತಾದ ಉನ್ನತ ಬ್ರಿಟಿಷ್ ಅಧಿಕಾರಿಗಳು ಜಿಲ್ಲೆಯ ಆಡಳಿತ ನಡೆಸುತ್ತಿದ್ದರೆಂದು ತಿಳಿದುಬರುತ್ತದೆ. ಹೊನ್ನಳ್ಳಿ ಮಠದ ಪಾರುಪತ್ಯಗಾರರಾಗಿ, ಕ್ರಮವಾಗಿ, ನರಸಿಂಹಭಟ್ಟ, ತಮ್ಮಯ್ಯಭಟ್ಟ, ಮತ್ತು

21 ದಾ.ಸಂ. ೫೬

22 ಹೆಚ್ಚಿನ ಮಾಹಿತಿಗಾಗಿ ಲೇಖಕರ 'ಶೃಂಗೇರಿ ಧರ್ಮಸಂಸ್ಥಾನ', ೧೯೮೨, ಪು.೬೨-೭೦ ನೋಡಿರಿ.

23 ದಾ.ಸಂ. ೫೮-೧೦೬

24 ದಾ.ಸಂ. ೬೬

25 ದಾ.ಸಂ. ೭೩

26 ದಾ.ಸಂ. ೮೩

27 ದಾ.ಸಂ. ೮೫

28 ದಾ.ಸಂ. ೧೦೧

39 ದಾ.ಸಂ. ೧೦೩

ಣ್ಣಯ್ಯ ಭಟ್ಟರು ಮತ್ತು ಸೋದೆ ತಾಲೂಕಿನ ಸುಬೇದಾರ ಾಗಿ, ಸೂರ್ಯನಾರಣಪ್ಪನವರು, ರಾಮಕೃಷ್ಣನವರು ಮತ್ತು ಂಕಟರಾಯರು ಕಂಪನಿ ಸರಕಾರದ ಕಾಲದಲ್ಲಿ ತಮ್ಮ ಾರ್ಯನಿರ್ವಹಿಸಿದರೆಂಬುದು ಕಂಡುಬರುತ್ತದೆ. ಅದೇ ರೀತಿ ಅವಧಿಯಲ್ಲಿ ಕ್ರಮವಾಗಿ, ಶ್ರೀ ಗಂಗಾಧರೇಂದ್ರ ರಸ್ವತಿಗಳು (ಸು.ಕ್ರಿ.ಶ.೧೭೭೯-ಸು.ಕ್ರಿ.ಶ.೧೮೧೬), ಶ್ರೀ ರ್ವಜ್ಞೇಂದ್ರ ಸರಸ್ವತಿಗಳು (ಸು.ಕ್ರಿ.ಶ.೧೮೧೬-ಸು.ಕ್ರಿ.ಶ ೮೨೬) ಮತ್ತು ಶ್ರೀ ಗಂಗಾಧರೇಂದ್ರ ಸರಸ್ವತಿಗಳು ಸು.ಕ್ರಿ.ಶ.೧೮೨೭-ಸು.ಕ್ರಿ.ಶ೧೮೬೪) ಸ್ವರ್ಣವಲ್ಲಿ ಮಠದ ೀಠದಲ್ಲಿದ್ದರೆಂದು ತಿಳಿದುಬರುತ್ತದೆ.

೧೮೫೮ ರಿಂದ ೧೯೯೦: ಕಂಪನಿ ಸರಕಾರ ುಕ್ತಾಯವಾದನಂತರ ಸ್ವರ್ಣವಲ್ಲಿಯ ಪೀಠಕ್ಕೆ ಬಂದವರು, ್ರಮವಾಗಿ, ಶ್ರೀ ಸರ್ವಜ್ಞೇಂದ್ರ ಸರಸ್ವತಿ[30] (ಸು.ಕ್ರಿ.ಶ. ೧೮೬೫-ು.ಕ್ರಿ.ಶ.೧೮೮೦), ಶ್ರೀ ಗಂಗಾಧರೇಂದ್ರ ಸರಸ್ವತಿ[31] ಸು.ಕ್ರಿ.ಶ.೧೮೮೦-ಕ್ರಿ.ಶ.೧೯೧೮) ಮತ್ತು ಶ್ರೀ ಸರ್ವಜ್ಞೇಂದ್ರ ಸರಸ್ವತಿ[34] (ಕ್ರಿ.ಶ.೧೯೧೮-ಕ್ರಿ.ಶ.೧೯೯೦). ಇವರುಗಳ ಕಾಲಕ್ಕೆ ಸಂಬಂಧಿಸಿದ ದಾಖಲೆಗಳು ಮಠದಲ್ಲಿ ಸಾಕಷ್ಟು ಲಭ್ಯವಾಗಿವೆ. ದೇವರ ಜಯಂತಿ, ರಥೋತ್ಸವ, ಗುರುಕಾಣಿಕೆ, ಶಿಷ್ಯವರ್ಗದ ಆಚಾರವಿಚಾರ, ಹೊನ್ನೆಹಳ್ಳಿಯಲ್ಲಿ ನರಸಿಂಹ, ಚಂದ್ರಮೌಳೀಶ್ವರ, ಶಾರದಾಂಬಾ, ಕಾಶಿವಿಶ್ವೇಶ್ವರ, ಕಾಲ ಭೈರವ ಮತ್ತು ಶಂಕರಾಚಾರ್ಯ ಪೀಠ ಸ್ಥಾಪನೆಗೆ ಸಂಬಂಧಿಸಿದ ಕೈಫಿಯತ್, ಭೂದಾನ ಪಟ್ಟೆ, ಭೂಮಿಸಾಗುವಳಿ, ರಾಜಾರ್ಥ, ಭೂವ್ಯವಹಾರ, ಮೂಲಗೇಣಿ, ಕೆರೆ ದುರಸ್ತಿ, ದತ್ತು ಸ್ವೀಕಾರ, ಪೌರೋಹಿತ್ಯ, ಬಹಿಷ್ಕಾರ, ದೀಪಾರಾಧನೆ ಕಾಣಿಕೆ, ಪಾರುಪತ್ಯ, ಇರುಳು ತಪ್ಪಿದ ಹೆಣ್ಣಿನ ವಿಚಾರ, ಜಾತಿಪದ್ಧತಿ, ಬೆಟ್ಟದ ಸಲುವಾಗಿ ಜಂಗಲ್ ಭೂಮಿ, ಮುಂತಾದ ಅನೇಕ ಸಂಗತಿಗಳನ್ನು ಈ ಕಾಲದ ದಾಖಲೆಗಳು ಬೆಳಕಿಗೆ ತರುತ್ತವೆ.

**ಗೋಕರ್ಣದ ದಾಖಲೆಗಳು:** ಶ್ರೀ ಗೋಕರ್ಣಕ್ಷೇತ್ರದ ವೇ॥ ವಿಘ್ನೇಶ್ವರ ದಾಮೋದರ ದೀಕ್ಷಿತರಲ್ಲಿಯ ಸ್ವರ್ಣವಲ್ಲಿ ಮಹಾಸಂಸ್ಥಾನಕ್ಕೆ ಸಂಬಂಧಿಸಿದ, ಸು.ಕ್ರಿ.ಶ.೧೭೯೩ ರಿಂದ ಕ್ರಿ.ಶ.೧೯೯೦ರ ಅವಧಿಯ ೪೩ ದಾಖಲೆಗಳನ್ನು ಲೇಖಕರ ಗ್ರಂಥದಲ್ಲಿ ಉಲ್ಲೇಖಿಸಲಾಗಿದೆ.[32] ಈ ಅವಧಿಯಲ್ಲಿ ಸ್ವರ್ಣ ವಲ್ಲಿ ಪೀಠದಲ್ಲಿದ್ದವರು, ಕ್ರಮವಾಗಿ, ಶ್ರೀಗಂಗಾಧರೇಂದ್ರ ಸರಸ್ವತಿ, ಶ್ರೀ ಸರ್ವಜ್ಞೇಂದ್ರ ಸರಸ್ವತಿ,ಶ್ರೀ ಗಂಗಾಧರೇಂದ್ರ ಸರಸ್ವತಿ, ಶ್ರೀ ಸರ್ವಜ್ಞೇಂದ್ರ ಸರಸ್ವತಿ, ಶ್ರೀ ಗಂಗಾಧರೇಂದ್ರ ಸರಸ್ವತಿ ಮತ್ತು ಶ್ರೀ ಸರ್ವಜ್ಞೇಂದ್ರ ಸರಸ್ವತಿಗಳು.

ಸ್ವರ್ಣವಲ್ಲಿ ಮಠದ ಗೋಕರ್ಣದಲ್ಲಿಯ ಪರಮೇಶ್ವರ ಭಟ್ಟನು ಶಿವಾಧೀನವಾಗಿರುವದರಿಂದ, ಆತನ ಸಂತತಿ ಯಾರೂ ಇಲ್ಲದ್ದರಿಂದ, ಈಗ ಆ ಮಠವನ್ನು ನಿನ್ನ ತಾಲೂಕು ಮಾಡಿಸಿಕೊಟ್ಟಿರುವುದಾಗಿ, ಸ್ವರ್ಣವಲ್ಲಿ ಮಠದ ಗಂಗಾಧರೇಂದ್ರ ಸರಸ್ವತಿಗಳು ವಿಘ್ನೇಶ್ವರೋಪಾಧ್ಯಗೆ ಬರೆಸಿ ಪಾಲಿಸಿದ ಮೂಲರಾಯಸ ಪಟ್ಟೆ,[34] ಸ್ವರ್ಣವಲ್ಲಿ ಮಠದ ಗುರುಗಳು ಗೋಕರ್ಣಕ್ಕೆ ಬಂದಾಗಿನ ಉತ್ಸವವು, ಸರ್ವಸಾಧಾರಣ, ಶೃಂಗೇರಿ ಶ್ರೀಯವರ ಸವಾರಿ ಉತ್ಸವವೋ ಎಂಬ ಹಾಗೆ ತೋರಿತೆಂದು ವೇನಡಗೋಡ ಶಂಭಟ್ಟರಿಗೆ, ಗೋಕರ್ಣವಾಸಿ ಕೊಡಗಿನಬೈಲ ವೆಂಕಪ್ಪಯ್ಯನ ಬಿನ್ನಹಪತ್ರ,[37] ಹವೀಕ ಮತ್ತು ಕೋಟದವರಿಗೆ ಕನ್ಯಾಸಂಬಂಧ ಕುರಿತು ಧರ್ಮ ಶಾಸ್ತ್ರದಂತೆ ಅಪ್ಪಣೆ ನೀಡಿರುವದಾಗಿ, ಸ್ವರ್ಣವಲ್ಲಿ ಸಂಸ್ಥಾನ ದಿಂದ ಬೆಳ್ಳೇಕೆರಿ ಶೇಷಪ್ಪ ಹೆಗಡೆ, ಮೂಲೆಮನೆ ವೆಂಕಪ್ಪ, ಮುಂತಾದವರಿಗೆ ನಿರೂಪ,[35] ತೋಟದ ಸೀಮೆಯ ಮೆಣಸು, ಅಡಕೆ, ಯಾಲಕ್ಕಿಗಳಿಗೆ ಬಂದ ರೋಗ ನಿವೃತ್ತಿ ಬಗ್ಗೆ ಮಹಾ ರುದ್ರ ಪಾರಾಯಣ ಹವನ ಮಾಡುವದರ ಕುರಿತು ತಮ್ಮ ಸ್ವಂತ ಅಭಿಪ್ರಾಯ ತಿಳಿಸಬೇಕಾಗಿ, ಮಹಾ ಸಂಸ್ಥಾನದಿಂದ ವಿಘ್ನೇಶ್ವರ ಮತ್ತು ಸಾಂಬ ಉಪಾಧ್ಯರಿಗೆ ಸರ್ವಜ್ಞೇಂದ್ರ ಸರಸ್ವತಿಗಳಿಂದ ಆಶೀರ್ವಾದ ಪತ್ರ,[36] ೧೫-೫-೧೯೮೩ ರಿಂದ ೩೧-೫-೧೯೮೩ ರ ವರೆಗೆ ನಡೆಯಲಿರುವ ಶ್ರೀ ಗೋಕರ್ಣ ಮಹಾಬಲೇಶ್ವರ ದೇವರ ಅಷ್ಟಬಂಧ ಮಹೋತ್ಸವದ ನಿಮಂತ್ರಣ ಪತ್ರಿಕೆ,[47] ಇತ್ಯಾದಿ ಅನೇಕ

30 ದಾ.ಸಂ. ೨೦೮-೨೨೩
31 ದಾ.ಸಂ. ೨೨೪-೨೯೨
32 ದಾ.ಸಂ. ೨೯೩-೩೯೪
33 ದಾ.ಸಂ. ೪೪೩-೪೮೫
34 ದಾ.ಸಂ. ೪೪೪
35 ದಾ.ಸಂ. ೪೫೧
36 ದಾ.ಸಂ. ೪೬೪
37 ದಾ.ಸಂ. ೪೮೧

ವಿಷಯಗಳ ಮೇಲೆ ಸದರಿ ದಾಖಲೆಗಳು ಬೆಳಕು ಬೀರುತ್ತವೆ. ದಾಖಲೆಗಳನ್ನು ಸೂಕ್ಷ್ಮವಾಗಿ ಅವಲೋಕಿಸಿದಾಗ, ಕ್ರಮವಾಗಿ, ದಾಮೋದರ ಉಪಾಧ್ಯ, ಮಹಾಬಲಉಪಾಧ್ಯ, ವಿಘ್ನೇಶ್ವರ ಉಪಾಧ್ಯ, ದಾಮೋದರ ಉಪಾಧ್ಯ, ತಮ್ಮಣ್ಣ ಉಪಾಧ್ಯ, ವಿಘ್ನೇಶ್ವರ ಉಪಾಧ್ಯ, ಮಹಾಬಲ ಉಪಾಧ್ಯ, ದತ್ತಾತ್ರೇಯ ಉಪಾಧ್ಯ, ದಾಮೋದರ ಉಪಾಧ್ಯ (ದೀಕ್ಷಿತ) ಮತ್ತು ಇಂದಿನ ವಿಘ್ನೇಶ್ವರ ಮತ್ತು ಅವರ ಕಿರಿಯ ಸಹೋದರ ಸಾಂಬ ಉಪಾಧ್ಯರು (ದೀಕ್ಷಿತ) ಗೋಕರ್ಣದಲ್ಲಿಯ ಕ್ಷೇತ್ರ ಪೌರೋಹಿತ್ಯವನ್ನು ಸ್ವರ್ಣವಲ್ಲಿ ಮಠದ ಪರವಾಗಿ ಬೇರೆ ಬೇರೆ ಕಾಲದಲ್ಲಿ ನಡೆಸುತ್ತ ಬಂದರೆಂದು ವಿದಿತವಾಗುತ್ತದೆ. ಗೋಕರ್ಣ ಕ್ಷೇತ್ರದೊಂದಿಗೆ ಸ್ವರ್ಣವಲ್ಲಿ ಸಂಸ್ಥಾನ ಪುರಾತನ ಕಾಲದಿಂದಲೂ ಸಂಪರ್ಕವಿರಿಸಿಕೊಂಡು ಬಂದಿದೆ ಎಂಬುದಕ್ಕೆ ಪ್ರಸ್ತುತ ದಾಖಲೆಗಳೇ ಸಾಕ್ಷಿ. ಸ್ವರ್ಣವಲ್ಲಿ ಮಠ, ಪೂರ್ವದಲ್ಲಿ ಕಾಶಿಯಿಂದ ಉಜ್ಜಯಿನಿ ಮತ್ತು ಉಜ್ಜಯಿನಿಯಿಂದ ಗೋಕರ್ಣಕ್ಕೆ ಸ್ಥಳಾಂತರವಾಗಿದ್ದು, 'ಜ್ಞಾನದೀಪಿಕಾ' ಮತ್ತು ಮಠದ ದಾಖಲೆಯಿಂದ ಸ್ಪಷ್ಟವಾಗುತ್ತದೆ.

**ಮಂಜುಗುಣಿಯ ದಾಖಲೆಗಳು:** ಶ್ರೀ ಮಂಜುಗುಣಿಕ್ಷೇತ್ರದ ಅಣ್ಣಯ್ಯಭಟ್ಟರಲ್ಲಿಯ, ಸ್ವರ್ಣವಲ್ಲಿ ಸಂಸ್ಥಾನಕ್ಕೆ ಸಂಬಂಧಿಸಿದ, ಸು.ಕ್ರಿ.ಶ.೧೮೪೩ ರಿಂದ ಸು.ಕ್ರಿ.ಶ. ೧೯೮೪ರ ಅವಧಿಯ, ೫೩ ದಾಖಲೆಗಳನ್ನು ಉಲ್ಲೇಖಿಸಲಾಗಿದೆ.[38] ತೆರಾ ತೆಗೆದುಕೊಂಡು ಕನ್ಯಾಲಗ್ನ ಮಾಡುವದು ಅಶಾಸ್ತ್ರವಾಗಿರುವದರಿಂದ, ಇನ್ನಾದರೂ, ವರ್ಣಾಶ್ರಮಕ್ಕೆ ವಿರೋಧವಾಗದ ರೀತಿ, ಕನ್ಯಾಕ್ಕೆ ೮ ವರ್ಷವಾದಕೂಡಲೇ, ಉತ್ತಮ ಕುಲದವರಿಗೆ ಲಗ್ನಮಾಡಿ ಕೊಡಬೇಕಾಗಿ, ಶ್ರೀ ಗಂಗಾಧರೇಂದ್ರ ಸರಸ್ವತಿಗಳು ಮಂಜುಗುಣಿ ವೆಂಕಟರಮಣ ದೇವಸ್ಥಾನದ ಅರ್ಚಕ ಪುಟ್ಟಭಟ್ಟರಿಗೆ ಮತ್ತು ಸೀಮೆಯ ವೈದಿಕ ಗೃಹಸ್ಥರಿಗೆ ಬರೆಸಿ ಪಾಲಿಸಿದ ನಿರೂಪ,[39] ಗುಣನಿಧಿ ಎಂಬ ಬ್ರಾಹ್ಮಣನು ಕಾಶಿಕ್ಷೇತ್ರದಲ್ಲಿ ಶ್ರೀಜಗದ್ಗುರು ಶಂಕರಾಚಾರ್ಯರ ಶಿಷ್ಯ, ಸುರೇಶ್ವರಾಚಾರ್ಯರ ಅನುಗ್ರಹದಿಂದ ತುರೀಯಾಶ್ರಮ ಸ್ವೀಕರಿಸಿದ್ದಕ್ಕೆ ಸಂಬಂಧಿಸಿ ಶ್ರೀ ಗಂಗಾಧರೇಂದ್ರ ಸರಸ್ವತಿಗಳಿಂದ ಅರ್ಚಕ, ಪುಟ್ಟಭಟ್ಟರಿಗೆ ನಿರೂಪ,[40] ತಾವು ಕಾಶಿಯಾತ್ರೆ ಮಾಡಿಬರಬೇಕೆಂತ ಆಲೋಚಿಸಿರುವದಾಗಿ ಮತ್ತು ಸಾಂಪ್ರದಾಯಾನುಸಾರ ಶಿಷ್ಯರನ್ನು ಮಾಡತಕ್ಕದ್ದು ಅವಶ್ಯ ವಿರುವದರಿಂದ , ಶಿಷ್ಯರು ಆಗಲಿಕ್ಕೆ ಯೋಗ್ಯ ಬ್ರಹ್ಮಚಾರಿಗಳಿಗೆ ನಿಮ್ಮ ಸೀಮೆಯಲ್ಲಿ ಶೋಧ ಮಾಡಿ, ಎಂದು, ಶ್ರೀ ಗಂಗಾಧರೇಂದ್ರರು ಅರ್ಚಕ ಪುಟ್ಟಭಟ್ಟರಿಗೆ ಪಾಲಿಸಿದ ನಿರೂಪ,[41] ಸ್ವರ್ಣವಲ್ಲಿ ಮಠದ ಸರ್ವಾಧಿಕಾರಿ, ರಾಮಚಂದ್ರ ಗಂಗಾಧರಶಾಸ್ತ್ರಿಯವರ ತೃತೀಯ ಪುತ್ರನನ್ನು ವಿಧಿಯುಕ್ತವಾಗಿ ದತ್ತು ಸ್ವೀಕಾರ ಮಾಡಿಕೊಳ್ಳಬಹುದೆಂದು ಸರ್ವಜ್ಞೇಂದ್ರ ಸರಸ್ವತಿಗಳು (೧೯೧೮-೧೯೯೦) ಮಂಜುಗುಣಿಯ ಅರ್ಚಕ ಪುಟ್ಟಭಟ್ಟರಿಗೆ ಪಾಲಿಸಿದ ನಿರೂಪ,[42] ಶ್ರೀ ಮಠದ ಖಾತೆಯ ಜಮೀನುಗಳ ಲೆಖ್ಖವನ್ನು ಪದ್ಧತಿಯಂತೆ ತಯಾರಿಸುವ ಬಗ್ಗೆ, ವಸೂಲಿವಗೈರೆ ಯಾವತ್ತೂ ಕೆಲಸಗಳನ್ನು ಪೂರ್ವಪದ್ಧತಿಗೆ ವಿರೋಧವಾಗದಂತೆ ಜವಾಬದಾರಿಯಿಂದ ನಡೆಸಿಕೊಂಡು ಹೋಗುವ ಬಗ್ಗೆ ಸರ್ವಜ್ಞೇಂದ್ರರು ಅರ್ಚಕ, ಸುಬ್ರಾಯಭಟ್ಟರಿಗೆ ಕಳುಹಿದ ನಿರೂಪ,[43] ಮುಂತಾದ ಅನೇಕ ವಿಷಯಗಳನ್ನು ದಾಖಲೆಗಳಲ್ಲಿ ಪ್ರಸ್ತಾಪಿಸಲಾಗಿದೆ. ಸುಮಾರು ಒಂದೂವರೆ ಶತಮಾನಗಳ ಈ ಅವಧಿಯಲ್ಲಿ, ಕ್ರಮವಾಗಿ, ಅಣ್ಣಯ್ಯಭಟ್ಟ, ವೆಂಕಭಟ್ಟ, ಪುಟ್ಟಭಟ್ಟ, ಸುಬ್ರಾಯಭಟ್ಟ ಮತ್ತು ಇಂದಿನ ಅರ್ಚಕರಾದ ಅಣ್ಣಯ್ಯಭಟ್ಟರು ಮಂಜುಗುಣಿ ವೆಂಕಟೇಶದೇವರ ಅರ್ಚಕರಾಗಿ ಬೇರೆ ಬೇರೆ ಕಾಲದಲ್ಲಿ ಸೇವೆ ಸಲ್ಲಿಸುತ್ತ ಬಂದಿರುವದು ಕಂಡುಬರುತ್ತದೆ.

ಹದಿನಾಲ್ಕು ಅಧ್ಯಾಯಗಳಲ್ಲಿ ಸಂಕಲಿಸಿದ ಒಟ್ಟೂ ೫೩೮ ಚಾರಿತ್ರಿಕ ದಾಖಲೆಗಳನ್ನು ಕೂಲಂಕಷವಾಗಿ ಅಧ್ಯಯನ ಮಾಡಿದಾಗ, ಸುಮಾರು ಹನ್ನೆರಡು ಶತಮಾನಗಳ ಶ್ರೀಸೋಂದಾ ಸ್ವರ್ಣವಲ್ಲಿ ಮಹಾಸಂಸ್ಥಾನದ ಚರಿತ್ರೆಯು ಮೂಡಿಬರಲು ಸಾಧ್ಯವಾಗುತ್ತದೆ. ಹೊರನೋಟಕ್ಕೆ,

---

38 ದಾ.ಸಂ. ೪೮೨

39 ದಾ.ಸಂ. ೪೮೬-೫೩೮

40 ದಾ.ಸಂ. ೪೯೪

41 ದಾ.ಸಂ. ೪೯೮ ; ಗುಣನಿಧಿಯು ಹಸ್ತಾಮಲಕರಿಂದ ಸನ್ಯಾಸ ಸ್ವೀಕರಿಸಿದ ಸಂಗತಿಯನ್ನು ಸ್ವರ್ಣವಲ್ಲಿ ಮಠದಲ್ಲಿ ದೊರೆತ ಇನ್ನೊಂದು ದಾಖಲೆ (೨೨೪) ತಿಳಿಸುತ್ತದೆ.

42 ದಾ.ಸಂ. ೫೦೪

43 ದಾ.ಸಂ. ೫೦೮

44 ದಾ.ಸಂ. ೫೩೧

ಖಲೆಗಳು ಕೇವಲ ಸ್ವರ್ಣವಲ್ಲಿ ಮಠದ ಚರಿತ್ರೆಯನ್ನು ರಿಯಲು ಪ್ರಯೋಜನಕಾರಿ ಎಂದೆನಿಸಿದರೂ, ಖಲೆಗಳನ್ನೆಲ್ಲ ಸಮಗ್ರವಾಗಿ ಪರಿಶೀಲಿಸಿದಾಗ, ಪ್ರಾದೇಶಿಕ ರಿತ್ರೆ ಮತ್ತು ವಿಷಯ ವ್ಯಾಪ್ತಿ ಎಷ್ಟೊಂದು ವಿಸ್ತಾರವಾಗಿದೆ ಂಬುದರ ಅರಿವು ಉಂಟಾಗುತ್ತದೆ. ಮುಖ್ಯವಾಗಿ, ೧೬ ೀಮೆಗಳನ್ನೊಳಗೊಂಡ ಸ್ವರ್ಣವಲ್ಲಿ ಮಹಾಸಂಸ್ಥಾನದ ರಾತನ ಚರಿತ್ರೆ, ಅವಿಚ್ಛಿನ್ನವಾಗಿ ಸಾಗಿ ಬಂದ ಗುರುಪರಂಪರೆ, ುರು-ಶಿಷ್ಯರ ಸಂಬಂಧ, ಇತ್ಯಾದಿ ವಿಷಯಗಳು ಸ್ಫುಟವಾಗಿ ಮೂಡಿಬಂದಿವೆ. ಸ್ವಾದಿ ಮತ್ತು ಕೆಳದಿ ಅರಸರು, ೀಪುಸುಲ್ತಾನರು ಮತ್ತು ಕಂಪನಿ ಸರಕಾರದ ಅಧಿಕಾರಿಗಳು ್ವರ್ಣವಲ್ಲಿಯ ಗುರುಗಳನ್ನು ಮತ್ತು ಮಠವನ್ನು ಗೌರವಿಸುತ್ತಿದ್ದರೆಂಬುದು ಖಚಿತವಾಗುತ್ತದೆ. ದಾಖಲೆಗಳಲ್ಲಿ ಉಲ್ಲೇಖಿಸಲಾದ ಗುರುಗಳ ಬಿರುದಾವಳಿಗಳು ಗುರುಪೀಠದ ಘನತೆಯನ್ನು ಪ್ರಕಾಶಿಸುತ್ತವೆ. ಉತ್ತರ ಕನ್ನಡ ಜಿಲ್ಲೆಯ ಸುಮಾರು ೫೦೦ ವರ್ಷಗಳ ರಾಜಕೀಯ, ಆರ್ಥಿಕ , ಸಾಮಾಜಿಕ, ಸಾಂಸ್ಕೃತಿಕ ಮತ್ತು ಧಾರ್ಮಿಕ ಸ್ಥಿತಿಗತಿಗಳನ್ನು ಈ ದಾಖಲೆಗಳು ಬೆಳಕಿಗೆ ತರುತ್ತವೆ. ಕಾಶಿ, ಉಜ್ಜಯಿನಿ, ಗೋಕರ್ಣ, ಪುಣೆ, ಮದ್ರಾಸ, ಗೋವಾ ಮುಂತಾದ ಸ್ಥಳಗಳಲ್ಲಿ ದೊರೆಯಬಹುದಾದ, ಸ್ವರ್ಣವಲ್ಲಿ ಮಹಾಸಂಸ್ಥಾನದ ಚರಿತ್ರೆಗೆ ಸಂಬಂಧಿಸಿದ ಹಸ್ತಪ್ರತಿಗಳ ಶೋಧನಾಕಾರ್ಯ ಇನ್ನೂ ಆಗಬೇಕಾಗಿದೆ. ಏನಿದ್ದರೂ, ಕರ್ನಾಟಕದ ಸಮಗ್ರ ಇತಿಹಾಸ ರಚನೆಯ ಕಾರ್ಯದಲ್ಲಿ, ಈಗಾಗಲೇ ಸಂಕಲಿಸಲಾದ ಶ್ರೀಸೋಂದಾಸ್ವರ್ಣವಲ್ಲಿ ಮಹಾಸಂಸ್ಥಾನದ ಐತಿಹಾಸಿಕ ದಾಖಲೆಗಳು ಉಪಯುಕ್ತವಾದ ಆಕರ ಸಾಮಗ್ರಿಗಳೆಂಬುದರಲ್ಲಿ ಯಾವ ಸಂಶಯವೂ ಇಲ್ಲ.

ಡಾ॥ ಎಂ.ಪಿ.ಮಹದೇವಯ್ಯ *

# ಪ್ರಾಚೀನ ಕರ್ನಾಟಕದಲ್ಲಿ ನೌಕಾಯುದ್ಧಗಳು

ನೌಕಾದಳವು ರಾಜ್ಯದ ಆಡಳಿತದ ಮುಖ್ಯ ಅಂಗಗಳಲ್ಲಿ ಒಂದು ಎಂಬುದನ್ನು ಎಲ್ಲಾ ರಾಜಕೀಯ ಚಿಂತಕರೂ ಒಪ್ಪಿದ್ದಾರೆ. ಕೌಟಿಲ್ಯನ ಪ್ರಕಾರ ನೌಕಾದಳವು ಸೇನೆಯಷ್ಟೇ ಮುಖ್ಯವಾಗಿದ್ದು, ಸೇನೆಯು ಯುದ್ಧದಲ್ಲಿ ಸೋಲುವ ಲಕ್ಷಣಗಳನ್ನು ತೋರಿದರೆ ಆಗ ನೌಕಾದಳವನ್ನು ಉಪಯೋಗಿಸಬೇಕು, ಆದುದರಿಂದ ನೌಕಾದಳವನ್ನು ಯಾವಾಗಲೂ ಸರಿಯಾಗಿ ನೋಡಿಕೊಳ್ಳುವುದು ಮಾತ್ರವಲ್ಲದೆ ಕಾರ್ಯಪ್ರವೃತ್ತ ಸ್ಥಿತಿಯಲ್ಲಿಡಬೇಕು. ಸೇನಾ ಯುದ್ಧಕ್ಕಿಂತ ನೌಕಾದಳದ ಯುದ್ಧದಲ್ಲಿ ಅನೇಕ ಉಪಯೋಗಗಳಿರುವುದರಿಂದ, ಅದಕ್ಕೆ ಹೆಚ್ಚು ಮಹತ್ವವನ್ನು ಕೊಡುವ ಅನೇಕ ಲೇಖಕರೂ ಇದ್ದಾರೆ. ಆದರೆ ಕರ್ನಾಟಕದ ಇತಿಹಾಸದಲ್ಲಿ ನೌಕಾಯುದ್ಧಗಳ ಪಾತ್ರ ಅಷ್ಟಾಗಿ ಕಾಣಬರುವುದಿಲ್ಲ. ಏಕೆಂದರೆ ಇಲ್ಲಿ ಕರಾವಳಿಯ ಪ್ರದೇಶ ಬಲುಕಮ್ಮಿ. ಪಶ್ಚಿಮ ಕರಾವಳಿಯ ಒಂದು ಸಣ್ಣ ಜಾಗವನ್ನು ಬಿಟ್ಟರೆ ಕರ್ನಾಟಕದಲ್ಲಿ ಆ ರೀತಿಯ ಪ್ರದೇಶ ಹೆಚ್ಚಿಲ್ಲ. ಆದರೂ ಕೂಡ ಶಾಸನಗಳಲ್ಲಿ ನೌಕಾಯುದ್ಧಗಳ ಉಲ್ಲೇಖ ಕಂಡುಬರುವುದರಿಂದ ಅವುಗಳನ್ನು ಇಲ್ಲಿ ಕಾಲಕ್ರಮದಲ್ಲಿ ಗಮನಿಸಲಾಗಿದೆ.

ಕ್ರಿಸ್ತಶಕದ ಮೊದಲ ಶತಮಾನಗಳು ನೌಕಾಯಾನದ ದೃಷ್ಟಿಯಿಂದ ಸುವರ್ಣಯುಗವೆಂದು ಹೇಳಬಹುದು. ಏಕೆಂದರೆ ರೋಂ ದೇಶಕ್ಕೂ ಕರ್ನಾಟಕಕ್ಕೂ ಉತ್ತಮವಾದ ವ್ಯಾಪಾರ ಸಂಬಂಧಗಳು ಈ ಕಾಲದಲ್ಲಿ ವಿಶೇಷವಾಗಿ ನಡೆದುಬಂದಿದ್ದವು. ಸುಮಾರು ಕ್ರಿ.ಶ.ಆರನೆಯ ಶತಮಾನದವರೆಗೆ ಈ ವ್ಯಾಪಾರ ಹೆಚ್ಚಿಗೆ ನಡೆಯಿತು. ಶಾತವಾಹನರು ಈ ವ್ಯಾಪಾರಕ್ಕೆ ಸಾಕಷ್ಟು ಅವಕಾಶಗಳನ್ನು ಕಲ್ಪಿಸಿಕೊಟ್ಟರು. ರೋಮನ್ನರ ಚಿನ್ನದ ಮತ್ತು ಬೆಳ್ಳಿಯ ನಾಣ್ಯಗಳು ಕರ್ನಾಟಕದ ವಿವಿಧ ಭಾಗಗಳಲ್ಲಿ ಶಾತವಾಹನರ ಮಡಿಕೆ ಕುಡಿಕೆಗಳ ಜೊತೆಯಲ್ಲಿ ದೊರಕಿರುವುದು, ಇದನ್ನು ತೋರಿಸುತ್ತದೆ. ಒಂದು ನಮೂನೆಯ ಶಾತವಾಹನ ನಾಣ್ಯದಲ್ಲಿ ಹಡಗಿನ ಚಿತ್ರವಿದೆ.[1] ಇದು ಮುಖ್ಯವಾದುದು. ನೌಕಾದಳದ ಸಹಾಯವಿಲ್ಲದೆ ನೌಕಾ ವ್ಯಾಪಾರ ಸಾಧ್ಯವಿಲ್ಲವೆಂಬುದನ್ನು ಗಮನಿಸಿದಾಗ, ಶಾತವಾಹನರ ಕಾಲದಲ್ಲಿ ನೌಕಾದಳದ ಪ್ರಾಮುಖ್ಯ ತಿಳಿಯಬರುತ್ತದೆ. ಆದರೆ ಈ ಕಾಲದಲ್ಲಿ ನೌಕಾಯುದ್ಧಗಳ ಉಲ್ಲೇಖ ಕಾಣಬರುವುದಿಲ್ಲ. ಇದನ್ನು ಇನ್ನೊಂದು ರೀತಿಯಲ್ಲಿಯೂ ಗಮನಿಸಬಹುದು. ಸಪ್ತ ಸಮುದ್ರಗಳ ಅಧಿಪತಿ, ಪಶ್ಚಿಮ ಸಮುದ್ರದ ಅಧಿಪತಿ, ಮೂರು ಸಮುದ್ರಗಳ ಒಡೆಯ, ಮುಂತಾದ ಶಾತವಾಹನರ ಬಿರುದುಗಳನ್ನು ಗಮನಿಸಿದರೆ ಇವರು ಸಮುದ್ರಮಾರ್ಗಗಳನ್ನು ನೌಕಾದಳಗಳ ಮೂಲಕ ತಮ್ಮದನ್ನಾಗಿ ಮಾಡಿಕೊಂಡಿದ್ದರೆಂದು ತಿಳಿಯಬರುತ್ತದೆ.

ಪುರಾತತ್ವ ಉತ್ಖನನಗಳಿಂದ ಕೆಲವು ವಿಷಯಗಳು ತಿಳಿಯಬರುತ್ತವೆ. ತಿರುಮಕೂಡಲು ನರಸೀಪುರದ ಉತ್ಖನನದಲ್ಲಿ ಮಣ್ಣಿನ ತಲೆಊರೆಗಳು ದೊರಕಿವೆ.[2] ಇವುಗಳು ಈಜಿಪ್ಟಿನಲ್ಲಿ ದೊರಕಿದ ತಲೆಊರೆಗಳಂತೇ ಇವೆ; ಇದೇ

---

* ಪ್ರವಾಚಕರು ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ವಿಭಾಗ, ಮಾನಸಗಂಗೋತ್ರಿ, ಮೈಸೂರು-೫೭೦೦೦೬

1. ಐ.ಕೆ.ಶರ್ಮ: ಕಾಯಿನೇಜ್ ಆಫ್ ಶಾತವಾಹನ ಎಂಪೈರ್, ಪು.೬೪
2. ಎಂ. ಶೇಷಾದ್ರಿ: ಟಿ.ನರಸೀಪುರ, ಉತ್ಖನನ, ಪು.೫೧

ತಿಯ ತಲೆಊರೆಗಳು ಹಳ್ಳೂರಿನ ಉತ್ಖನನದಲ್ಲಿಯೂ ೂರಕಿವೆ.[3] ಹಳ್ಳೂರಿನ ಉತ್ಖನನದಲ್ಲಿ ದೊರಕಿರುವ ಾಗಿಯಕಾಳುಗಳು ಈಜಿಪ್ಟಿನ ರಾಗಿಯನ್ನು ವಿಶೇಷವಾಗಿ ೋಲುತ್ತವೆ.[4] ಆದುದರಿಂದ ಈ ಎರಡೂ ದೇಶಗಳ ನಡುವೆ ಾಜಕೀಯ, ವ್ಯಾಪಾರ ಮತ್ತು ಸಾಂಸ್ಕೃತಿಕ ಸಂಬಂಧಗಳು ದ್ದಿರಬೇಕೆಂದು ವಿದ್ವಾಂಸರು ತರ್ಕಿಸಿದ್ದಾರೆ. ಇದು ವಶಿಲಾಯುಗ ಮತ್ತು ಬೃಹತ್ ಶಿಲಾಯುಗದ ಕಾಲದಲ್ಲಿ ದ್ದಿತು. ಅಂದರೆ ಕ್ರಿಸ್ತಪೂರ್ವದ ಶತಮಾನಗಳಿಂದಲೇ ರ್ನಾಟಕದ ಜನಗಳು ಈಜಿಪ್ಟಿನ ಜನರ ಜೊತೆಯಲ್ಲಿ ಾಂಸ್ಕೃತಿಕ ಸಂಬಂಧಗಳನ್ನು ನೌಕಾಯಾನದ ಮೂಲಕ ಟ್ಟುಕೊಟ್ಟಿದ್ದರೆಂದು ಖಚಿತವಾಗುತ್ತದೆ.

ಬನವಾಸಿ ಕದಂಬರ ಕಾಲದ ನೌಕಾದಳದ ಬಗೆಗೆ ಮಗೆ ಏನೂ ತಿಳಿದಿಲ್ಲ. ಆದರೆ ಗ್ರೀಕ್ ಇತಿಹಾಸಕಾರ ಾಲಮಿಯು ಬನೌಸಿ ಎಂಬ ನಗರವನ್ನು ಉಲ್ಲೇಖಿಸಿದ್ದಾನೆ. ದನ್ನು ಬನವಾಸಿ ಎಂದು ಗುರುತಿಸಲಾಗಿದೆ. ಅಂದರೆ ಆ ಮಯಕ್ಕಾಗಲೇ ಬನವಾಸಿಯು ವ್ಯಾಪಾರ ಮತ್ತು ಸಾಂಸ್ಕೃತಿಕ ಾರಣಗಳಿಂದಾಗಿ ಗ್ರೀಕರಿಗೂ ಪರಿಚಯವಾಗಿತ್ತು ಎಂದು ೊತ್ತಾಗುತ್ತದೆ. ಕೆಲವು ವಿದ್ವಾಂಸರ ಪ್ರಕಾರ ಬನವಾಸಿಯು ್ರೀಕ್ ಮೊದಲಾದ ದೇಶಗಳೊಡನೆ ನೌಕಾ ಸಂಬಂಧವನ್ನು ೊಂದಿದ್ದಿತು ಎಂದು ತಿಳಿದುಬರುತ್ತದೆ. ಬಾದಾಮಿಯ ಾಲುಕ್ಯರ ಕಾಲಕ್ಕೆ ಬಂದರೆ ಸ್ವಲ್ಪ ಹೆಚ್ಚಿನ ಮಾಹಿತಿಗಳು ೊರೆಯುತ್ತದೆ. ಈ ವಂಶದ ಅತ್ಯಂತ ಪ್ರಭಾವಶಾಲಿಯಾದ ಇಮ್ಮಡಿ ಪುಲಕೇಶಿಯು ನೌಕಾ ಯುದ್ಧಮಾಡಿ ಕೊಂಕಣದ ಮೌರ್ಯರನ್ನು ಸೋಲಿಸಿದನೆಂದು ತಿಳಿದುಬಂದಿದೆ.[5] ಅದಾದನಂತರ ಚಾಲುಕ್ಯರ ನೌಕಾದಳವು ಪಶ್ಚಿಮ ವಡದಲ್ಲಿರುವ ಪುರಿಯನ್ನು ಗೆದ್ದುಕೊಂಡಿತು. ಇವನ ನೌಕಾ ಸೈನ್ಯವು ಮದಿಸಿದ ಆನೆಯಂತೆ ಮುನ್ನುಗ್ಗುತ್ತಿದ್ದಿತು ಎಂದು ಶಾಸನಗಳು ತಿಳಿಸುತ್ತವೆ. ಈ ಪುರಿಯು ಬೊಂಬಾಯಿ ಸಮೀಪದಲ್ಲಿರುವ ಎಲಿಫೆಂಟ ಎಂದು ಗುರುತಿಸಲಾಗಿದೆ. ಇದನ್ನು ನೋಡಿದ ಲಾಟ ಮತ್ತು ಮಾಳ್ವ ರಾಜರು ಪುಲಕೇಶಿಗೆ ಶರಣಾಗತರಾದರು. ಹ್ಯುಯೆನ್‌ತ್ಸಾಂಗನ ಬರವಣಿಗೆಯಿಂದ, ಪುಲಕೇಶಿಯ ನೌಕಾದಳವು ಬಹಳಷ್ಟು ಬಲಿಷ್ಠವಾಗಿದ್ದಿತು. ಆಗಿನ ರಾಜರು ಇದರಿಂದ ಭಯಭೀತರಾಗಿದ್ದರು ಎಂದು ತಿಳಿಯುತ್ತದೆ. ಈ ರೀತಿಯ ಬಲಿಷ್ಠವಾದ ನೌಕಾದಳವಿಲ್ಲದೇ ಇದ್ದಿದ್ದರೆ ಪುಲಕೇಶಿಯ ರಾಜ್ಯವು ಪಶ್ಚಿಮ ಸಮುದ್ರದವರೆಗೆ ವಿಸ್ತಾರವಾಗುವ ಸಾಧ್ಯತೆಯಿರುತ್ತಿರಲಿಲ್ಲವೆಂದು ವಿದ್ವಾಂಸರು ಭಾವಿಸುತ್ತಾರೆ. ಇದು ಸಮಂಜಸವಾಗಿಯೇ ಇದೆ ಎಂದು ಹೇಳಬೇಕು.

ಇದೇ ಕಾಲದಲ್ಲಿ ಇನ್ನೊಂದು ನೌಕಾಯುದ್ಧವು ನಡೆಯಿತು. ಅದು ನಡೆದಾಗ ಚಾಲುಕ್ಯ ವಿನಯಾದಿತ್ಯನು ದೊರೆಯಾಗಿದ್ದನು. ಶಾಸನಗಳ ಪ್ರಕಾರ ವಿನಯಾದಿತ್ಯನು ಕಮೇರ, ಪಾರಸಿಕ ಮತ್ತು ಸಿಂಹಳಗಳ ರಾಜರುಗಳನ್ನು ಸೋಲಿಸಿ ಅವರಿಂದ ಕಪ್ಪ-ಕಾಣಿಕೆಗಳನ್ನು ವಸೂಲು ಮಾಡಿದನೆಂದು ತಿಳಿಯುತ್ತದೆ. ಇಲ್ಲಿ ಕಮೇರ ಎಂದರೆ ಖ್ಮರ್ ಅಥವಾ ಕಂಬೋಡಿಯ. ಆಗ ಇಲ್ಲಿ ಭವವರ್ಮನು ರಾಜ್ಯ ವಾಳುತ್ತಿದ್ದನು. ವಿನಯಾದಿತ್ಯನು ಅವನನ್ನು ನೌಕಾಯುದ್ಧ ದಲ್ಲಿ ಸೋಲಿಸಿ ಅವನಿಂದ ಕಪ್ಪವನ್ನು ವಸೂಲು ಮಾಡಿದನು[6] ಅದರೆ ಈ ಯುದ್ಧದ ವಿವರಗಳು ತಿಳಿದು ಬಂದಿಲ್ಲ. ಆದರೆ ಕಂಬೋಡಿಯದಲ್ಲಿ ಚಾಲುಕ್ಯ ನಾಣ್ಯಗಳು ದೊರಕಿರುವುದು ಮತ್ತು ಕನ್ನಡ ಲಿಪಿಯು ಕಂಬೋಡಿಯದ ಶಾಸನಗಳಲ್ಲಿ ಬಳಕೆಯಾಗಿರುವುದು ಇದಕ್ಕೆ ಪುಷ್ಟಿ ನೀಡುತ್ತದೆ.[7] ಇದಾದ ನಂತರ ವಿನಯಾದಿತ್ಯನು ಸಿಂಹಳದ ಮೇಲೆ ನೌಕಾಯುದ್ಧ ಮಾಡಿದನು. ಕ್ರಿ.ಶ.೬೯೩ರಲ್ಲಿ ಸಿಂಹಳದಲ್ಲಿ ಮಾನವರ್ಮನು ರಾಜನಾಗಿದ್ದನು. ಇವನು ಪಲ್ಲವರ ಸ್ನೇಹಿತನಾಗಿದ್ದನು. ವಿನಯಾದಿತ್ಯನು ಪಲ್ಲವರನ್ನು ಸೋಲಿಸಿದ ನಂತರ, ಅವರ ಸ್ನೇಹಿತನಾದ ಮಾನವರ್ಮನ ಮೇಲೂ ನೌಕೆಯಲ್ಲಿ ದಂಡೆತ್ತಿ ಹೋಗಿ, ಅವನನ್ನು ಸೋಲಿಸಿ ಕಪ್ಪವನ್ನು ವಸೂಲು ಮಾಡಿದನು.[8] ಈ ಯುದ್ಧದಲ್ಲಿ ವಿನಯಾದಿತ್ಯನು ಯುದ್ಧದ ನಾವೆಗಳನ್ನು ಬಳಸಿದನೆಂದು ಶಾಸನಗಳು ತಿಳಿಸುತ್ತವೆ. ಇದೇ ರಾಜವಂಶದ ಮಂಗಳೇಶನ ಕಾಲದಲ್ಲಿ ಇನ್ನೊಂದು

---

3. ಎಂ.ಎಸ್. ನಾಗರಾಜರಾವ್: ಹಳ್ಳೂರಿನ ಉತ್ಖನನ, ಪು.೬೪
4. ಅದೇ
5. ಕೆ.ವಿ.ರಮೇಶ್: ಚಾಲುಕ್ಯಾಸ್ ಆಫ್ ವಾತಾಪಿ, ಪು.೨೯
6. ಪಿ.ಬಿ.ದೇಸಾಯಿ ಸಂಭಾವನಾಗ್ರಂಥ, ಪು. ೨೨೨
7. ಅದೇ
8. ಶ್ರೀಕಂಠಿಕಾ, ಪು ೧೫೪

ನೌಕಾಯುದ್ಧವು ನಡೆಯಿತು. ಶಾಸನಗಳ ಪ್ರಕಾರ ಮಂಗಳೇಶನು ರೇವತಿ ದ್ವೀಪದ ಮೇಲೆ ನೌಕಾಯುದ್ಧವನ್ನು ಮಾಡಿ, ಅದನ್ನು ಗೆದ್ದನು.[9] ಈ ಎಲ್ಲಾ ಉಲ್ಲೇಖಗಳನ್ನು ಗಮನಿಸಿದರೆ, ಬಾದಾಮಿಯ ಚಾಲುಕ್ಯರು ಉತ್ತಮವಾದ ಮತ್ತು ಶ್ರೇಷ್ಠವಾದ ನೌಕಾಸೇನೆಯನ್ನು ಹೊಂದಿದ್ದು; ಅದರಿಂದ ಪೂರ್ವ ಮತ್ತು ಪಶ್ಚಿಮಗಳಲ್ಲಿ ರಾಜ್ಯ ವಿಸ್ತರಣೆ ಮಾಡಿ, ಖ್ಯಾತರಾದರೆಂದು ಸುಲಭವಾಗಿ ಹೇಳಬೇಕಾಗುತ್ತದೆ.

ರಾಷ್ಟ್ರಕೂಟರ ಕಾಲದಲ್ಲಿ ಬಲಯುತವಾದ ನೌಕಾಸೇನೆಯಿದ್ದಿತು. ಅವರು ಇದರ ಸಹಾಯದಿಂದ ಸಿಂಹಳದ್ವೀಪದವರೆಗೆ ಹೋಗಿ ಅಲ್ಲಿನ ರಾಜನನ್ನು ಸೋಲಿಸಿದರು.[10] ಸಿಂಹಳದ ದೊರೆಯಾದ ನಾಲ್ಕನೆಯ ಮಹೇಂದ್ರನು ಕರ್ನಾಟಕದ ವಲ್ಲಭನೆಂಬ ರಾಜನನ್ನು ಎದುರಿಸಿದನು. ಸಿಂಹಳ ನೌಕಾಸೇನೆಯ ಅಧಿಪತಿಯಾದ ಸೇನನು ಬಂದು ಒಪ್ಪಂದವನ್ನು ಮಾಡಿಕೊಂಡನು. ಈ ವಲ್ಲಭನೇ ರಾಷ್ಟ್ರಕೂಟ ದೊರೆ ಮೂರನೇಯ ಕೃಷ್ಣನೆಂದು ಗುರುತಿಸಲಾಗಿದೆ.[11] ಇದಾದ ಸ್ವಲ್ಪ ಕಾಲಾನಂತರ ಕೃಷ್ಣನು ತನ್ನ ನೌಕಾಸೈನ್ಯವನ್ನು ಸಿಂಹಳದಲ್ಲಿ ಸ್ವಲ್ಪಕಾಲ ಇರಿಸಿದ್ದನು. ರಾಷ್ಟ್ರಕೂಟರು ಅರಬ್ಬರೊಡನೆ ವ್ಯಾಪಾರ ಸಂಬಂಧವನ್ನು ಹೊಂದಿದ್ದರು. ಇದು ಸಾಧ್ಯವಾದದ್ದು, ಅವರ ನೌಕಾದಳದಿಂದ ಎನ್ನುವುದು ಖಚಿತವಾದ ಸಂಗತಿ.[12]

ಕಲ್ಯಾಣದ ಚಾಲುಕ್ಯರ ಕಾಲದಲ್ಲಿ ಕದಂಬ ಷಷ್ಠದೇವನು ನೌಕಾಯುದ್ಧದಲ್ಲಿ ಸಿಂಹಳವನ್ನು ಸೋಲಿಸಿದನೆಂದು ತಿಳಿದುಬರುತ್ತದೆ.[13] ಶಾಸನಗಳ ಪ್ರಕಾರ ಷಷ್ಠದೇವನು ಕಾವಡಿ ದ್ವೀಪವೇ ಮೊದಲಾದವನ್ನು ವಶಪಡಿಸಿಕೊಂಡು, ಸೇತುವೆಯನ್ನು ನಿರ್ಮಿಸಿ, ಸಿಂಹಳದವರೆಗೆ ಹೋಗಿ ಅಲ್ಲಿನ ರಾಜನಿಂದ ಕಪ್ಪವನ್ನು ವಸೂಲು ಮಾಡಿದನೆಂದು ತಿಳಿದು ಬರುತ್ತದೆ. ಆರನೆಯ ವಿಕ್ರಮಾದಿತ್ಯನೇ ಮೊದಲಾದ ಚಾಲುಕ್ಯ ರಾಜರು ಸಿಂಹಳದೊಡನೆ ಮೈತ್ರಿ ಸಂಬಂಧವನ್ನು ಹೊಂದಿದ್ದರು. ಈ ನೌಕಾದಳದ ಅಧಿಪತ್ಯವನ್ನು, ಸಾಮಂತ ನಾದ ಕದಂ ಷಷ್ಠದೇವನಿಗೆ ವಹಿಸಿದ್ದರು. ಇವನು ತನ್ನ ಶಕ್ತಿಯನ ಉಪಯೋಗಿಸಿ ತನ್ನ ದೊರೆಗಳಾದ ಚಾಲುಕ್ಯರಿಗೆ ಕರಾವ ತೀರದಲ್ಲಿ ಗೌರವ ಘನತೆಗಳನ್ನು ತಂದುಕೊಟ್ಟನು.

ದೋರಸಮುದ್ರದ ಹೊಯ್ಸಳರ ಕಾಲದ ಇದಕ್ಕಿಂತಲೂ ಮುಖ್ಯವಾದ ನೌಕಾಯುದ್ಧವು ನಡೆಯಿತ ಎರಡನೆಯ ನರಸಿಂಹನು ತನ್ನ ಸೈನ್ಯಾಧಿಪತಿ ಗೋಪಯ್ಯ ನೇತೃತ್ವದಲ್ಲಿ ಸಿಂಹಳಕ್ಕೆ ನೌಕಾ ಸೈನ್ಯವನ್ನು ಕಳುಹಿಸಿದನ ಗೋಪಯ್ಯನು ಜಯಶಾಲಿಯಾಗಿ, ಅದರ ಜ್ಞಾಪಕಾರ್ಥವಾಗಿ ಇವನನ್ನು 'ಸಮುದ್ರ ಗೋಪಯ್ಯ' ಎಂದು ಕರೆಯಲ ಪ್ರಾರಂಭಿಸಿದರು.[14] ಇವನು ಸಿಂಹಳದ ದೊರೆಯಾ ಪರಾಕ್ರಮ ಬಾಹುವನ್ನು ಸೋಲಿಸಿದನು. ಸಿಂಹಳದ ದೊರೆಗಳ ಹೊಯ್ಸಳರೊಡನೆ ಮೈತ್ರಿಯನ್ನು ಬೆಳೆಸಿದರು.

ದೇವಗಿರಿಯ ಸೇವುಣರ ಕಾಲದಲ್ಲಿ ದೊ ಮಹಾದೇವನ ರಾಜ್ಯಭಾರ ಸಮಯದಲ್ಲಿ ಉತ್ತರ ಕೊಂಕಣ ದೊರೆ ಸೋಮೇಶ್ವರನಿಗೂ ಸೇವುಣ ದೊರೆಗೂ ನೌಕಾಯುದ ನಡೆಯಿತು.[15] ಬೊಂಬಾಯಿನ ಕರಾವಳಿಯಲ್ಲಿ ನೂರಾ ವೀರಗಲ್ಲುಗಳು ದೊರಕಿವೆ. ಇವುಗಳಲ್ಲಿ ನೌಕೆಗಳಲ್ಲಿ ಜನಗಳ ಯುದ್ಧ ಮಾಡುತ್ತಿರುವುದು ಚಿತ್ರಿತವಾಗಿದೆ. ಆದುದರಿಂ ಇವು ಈ ನೌಕಾಯುದ್ಧವನ್ನು ನಿರ್ದೇಶಿಸುತ್ತಿದೆ ಎಂದ ಭಾವಿಸಬಹುದು. ಹೇಮಾದ್ರಿಯೂ ಇದರ ವಿಷಯದಲ್ ಮಾಹಿತಿ ಒದಗಿಸುತ್ತಾನೆ. ಕೊಂಕಣದ ರಾಜನಾದ ಸೋಮನ ಈಜುಗಾರಿಕೆಯಲ್ಲಿ ಖ್ಯಾತನಾಗಿದ್ದರೂ ಕೂಡ, ಸೇವು ದೊರೆ ಮಹಾದೇವನ ನೌಕೆಯ ಮುಂದೆ ಅಸಹಾಯಕನಾ ಸಮುದ್ರದಲ್ಲಿ ಮುಳುಗಿಹೋದನು ಎಂದು ಹೇಮಾದ್ರಿಯ ವರ್ಣಿಸಿದ್ದಾನೆ.[16] ಇದರಿಂದ ಸೇವುಣ ದೊರೆಗಳು ಎಂತಹ ಉತ್ತಮವಾದ ನೌಕಾದಳವನ್ನು ಹೊಂದಿದ್ದರು ಎಂಬುದ ಅರ್ಥವಾಗುತ್ತದೆ.

---

9. ಎಪಿಗ್ರಾಫಿಯ ಇಂಡಿಕ, ಸಂ. ೯, ಪು. ೨೦೫
10. ಅಳತೇಕರ್: ರಾಷ್ಟ್ರಕೂಟಸ್, ಪು.೨೬೩
11. ಎ.ಇಂ.೪, ಪು.೨೭೯
12. ಅಳತೇಕರ್: ಪೂರ್ವೋಕ್ತ, ಪು.೨೬೪
13. ಎಸ್. ಐ.ಐ.ಸಂ. ೧, ಪು.೧೧
14. ಎ.ಇಂ.೧೨, ಪು.೧೦
15. ಎ.ವಿ.ನರಸಿಂಹಮೂರ್ತಿ; ದೇವಗಿರಿಯ ಸೇವುಣರು, ಪು ೧೬೧
16. ಅದೇ

ಕೊನೆಗೆ ವಿಜಯನಗರ ಕಾಲಕ್ಕೆ ಬಂದರೆ, ಈ ವಂಶದ ೂರೆಗಳು ನೌಕಾದಳವನ್ನು ಹೊಂದಿದ್ದು ಮಾತ್ರವಲ್ಲದೆ ೂರದೇಶಗಳೊಡನೆ ವ್ಯವಸ್ಥಿತವಾದ ವ್ಯಾಪಾರ ಂಬಂಧಗಳನ್ನು ಹೊಂದಿದ್ದರು; ಎಂಬುದು ಗೊತ್ತಾಗುತ್ತದೆ. ಜಯನಗರದ ಬಹುಮಂದಿ ರಾಜರು ಸಿಂಹಳ ಮತ್ತು ರ್ಮ ದೇಶಗಳ ದೊರೆಗಳಿಂದ ಕಪ್ಪ-ಕಾಣಿಕೆಗಳನ್ನು ವಸೂಲು ಾಡುತ್ತಿದ್ದರೆಂದು ತಿಳಿಯಬರುತ್ತದೆ. ಆ ರಾಜರುಗಳು ರಿಸಿದ್ದ ಬಿರುದುಗಳಾದ ಪಶ್ಚಿಮ, ಪೂರ್ವ ಮತ್ತು ದಕ್ಷಿಣ ಮುದ್ರಗಳ ಅಧಿಪತಿಗಳು ಎಂಬುದು ಈ ದೃಷ್ಟಿಯಿಂದ ಮನಾರ್ಹವಾದುದು. ಅಂದರೆ ಈ ರಾಜರು ಕರಾವಳಿ ್ರದೇಶದ ಮೇಲೆ ತಮ್ಮ ಅಧಿಪತ್ಯವನ್ನು ಸ್ಥಾಪಿಸಿದ್ದರೆಂದು ಿಚಿತವಾಗುತ್ತದೆ.[17] ಅಬ್ದುರ್ ರಜಾಕನ ಪ್ರಕಾರ, ಇಮ್ಮಡಿ ೇವರಾಯನ ದಂಡನಾಯಕನಾದ ಲಕ್ಕಣ್ಣದಂಡೇಶನು ಿಂಹಳ ದ್ವೀಪದ ಮೇಲೆ ನೌಕಾಯುದ್ಧವನ್ನು ಮಾಡಿ, ಜಯಶಾಲಿಯಾದುದು ಮಾತ್ರವಲ್ಲದೆ, ಆ ರಾಜನಿಂದ ಕಪ್ಪವನ್ನು ವಸೂಲು ಮಾಡಿದನು. ಕೃಷ್ಣದೇವರಾಯ, ಅಚ್ಯುತರಾಯ ಮತ್ತು ಸದಾಶಿವರಾಯರೂ ಕೂಡ ಸಿಂಹಳದ ಮೇಲೆ ನೌಕಾಸೈನ್ಯವನ್ನು ಕಳುಹಿಸಿದ್ದರು. ಇದರ ಜೊತೆಗೆ ಈ ದೊರೆಗಳು ಗೋವೆಯ ಪೋರ್ಚುಗೀಸರ ಮೇಲೆಯೂ ನೌಕಾಸೈನ್ಯವನ್ನು ಕಳುಹಿಸಿದ್ದರು. ಕ್ರಿ.ಶ.೧೫೦೬ರಲ್ಲಿ ತಿಮ್ಮೋಜನ ನೇತೃತ್ವದಲ್ಲಿ ಗೋವೆಯ ಪೋರ್ಚುಗೀಸರ ಮೇಲೆ ನೌಕಾಸೇನೆಯನ್ನು ಕಳುಹಿಸಲಾಯಿತು. ಈ ದೊರೆಗಳು ನೌಕಾಯಾನದ ಮೂಲಕ ಚೀನೀ ರಾಜರೊಂದಿಗೂ ಸ್ನೇಹ ಸಂಬಂಧವನ್ನು ಇಟ್ಟುಕೊಂಡಿದ್ದರು.[18] ವಿದೇಶೀಯ ಯಾತ್ರಿಕರು, ವಿಜಯನಗರ ಕಾಲದ ನೌಕೆಗಳನ್ನು ಮತ್ತು ಹಡಗುಗಳನ್ನು ವರ್ಣಿಸಿದ್ದಾರೆ. ಅವುಗಳ ಪ್ರಕಾರ ಅವು ಬಲು ದೊಡ್ಡವಾಗಿದ್ದು, ತೆಳುವಾಗಿದ್ದು, ಅವುಗಳಲ್ಲಿ ಕಬ್ಬಿಣ ವಿರಲಿಲ್ಲ; ಅವುಗಳಲ್ಲಿ ಬಟ್ಟೆಯನ್ನು ಸೇರಿಸಿ ಹೊಲಿಯಲಾಗಿದ್ದಿತು. ಇವುಗಳನ್ನು ಸುಸ್ಥಿತಿಯಲ್ಲಿಡುವುದಕ್ಕಾಗಿ ವರ್ಷಕ್ಕೆ ಒಂದು ಸಾರಿ, ಅವುಗಳ ದಾರಗಳನ್ನು ಬದಲಾಯಿಸುತ್ತಿದ್ದರು. ಈ ರೀತಿ ವಿಜಯನಗರ ದೊರೆಗಳು ವ್ಯವಸ್ಥಿತವಾದ ನೌಕಾಸೇನೆಯನ್ನು ಹೊಂದಿದ್ದರು. ಆದರೆ ಒಂದು ಮಾತನ್ನು ಹೇಳಬೇಕು: ಕರ್ನಾಟಕ ಸೇನಾಬಲ ಇಡೀ ಭಾರತದಲ್ಲೇ ಖ್ಯಾತವಾಗಿದ್ದಿತು. ಶತ್ರು ರಾಜರು ಇದನ್ನು ಕೇಳಿದರೇ ಹೆದರಿಕೊಳ್ಳುತ್ತಿದ್ದರು. ಆದರೆ ನೌಕಾದಳಕ್ಕೆ ಈ ಖ್ಯಾತಿ ದೊರೆಯಲಿಲ್ಲ. ಬಹುಶಃ ಇದಕ್ಕೆ ಕರ್ನಾಟಕದಲ್ಲಿ ಕರಾವಳಿ ಪ್ರದೇಶ ಹೆಚ್ಚಿಗೆ ಇಲ್ಲದೇ ಇದ್ದುದೇ ಕಾರಣವೆನ್ನಬೇಕು.

---

17. ಟಿ.ವಿ.ಮಹಾಲಿಂಗಂ: ಸೌತ್ ಇಂಡಿಯನ್ ಪಾಲಿಟಿ, ಪು.೨೮೬
18. ಅದೇ, ಪು.೨೮೭

ಡಾ॥ ಬಿಂ. ಶಾ. ಶ್ಯಾಮಲಾ ರತ್ನಕುಮಾರಿ *

# ರಾಜಪ್ರಶಸ್ತಿಗಳ ಹಿನ್ನೆಲೆಯಲ್ಲಿ ರಾಷ್ಟ್ರಕೂಟ ರಾಜಪ್ರಭುತ್ವದ ಸ್ವರೂಪ ಒಂದು ವಿವೇಚನೆ

ರಾಷ್ಟ್ರಕೂಟ ರಾಜಪ್ರಭುತ್ವದ ಕಾಲ (ಕ್ರಿ.ಶ.೭೫೩-೯೭೩) ಕರ್ನಾಟಕದ ಇತಿಹಾಸದಲ್ಲಿ ಒಂದು ಉಜ್ವಲ ಯುಗವೆನಿಸಿದೆ. ಕರ್ನಾಟಕದ ರಾಜಪ್ರಭುತ್ವದ ವಿಜಯದುಂದುಭಿ ಕೀರ್ತಿ ಪ್ರತಿಷ್ಠೆಗಳು ಭಾರತದಾದ್ಯಂತ ಎಂದರೆ ಉತ್ತರದಲ್ಲಿ ಕನೋಜಿನಿಂದ ದಕ್ಷಿಣದಲ್ಲಿ ರಾಮೇಶ್ವರದವರೆಗೆ ಹರಡಿ ವಿಜೃಂಭಿಸಿದ ಮಹೋನ್ನತ ಕಾಲವೆನಿಸಿದೆ. ಸಮಕಾಲೀನ ವಿಶ್ವದ ಪ್ರಸಿದ್ಧ ನಾಲ್ಕು ಸಾಮ್ರಾಜ್ಯಗಳಲ್ಲಿ ರಾಷ್ಟ್ರಕೂಟ ಸಾಮ್ರಾಜ್ಯವು ಒಂದೆಂದು ಪರಿಗಣಿಸಲ್ಪಟ್ಟಿದೆ. (ಇತರ ಮೂರು ಸಾಮ್ರಾಜ್ಯಗಳು- ಅರಬ್, ಬೈಜಾಂಟಿಯನ್ ಮತ್ತು ಚೀಣಾದ ಸಾಮ್ರಾಜ್ಯಗಳು).[1] ಇಂತಹ ಭವ್ಯ ಸಾಮ್ರಾಜ್ಯದ ಪ್ರಭುಗಳಾಗಿದ್ದ ರಾಷ್ಟ್ರಕೂಟ ದೊರೆಗಳು ವಿಜಿಗೀಷುಗಳೂ ಮಹತ್ವಾಕಾಂಕ್ಷಿಗಳೂ ಪ್ರಭಾವಶಾಲಿಗಳೂ ಉದಾರಿಗಳೂ ಪ್ರಜಾರಂಜಕರೂ ಆಗಿದ್ದರು ಎಂಬುದನ್ನು ಸಮಕಾಲೀನ ಸಾಹಿತ್ಯಕೃತಿಗಳಲ್ಲಿ, ಶಾಸನಗಳಲ್ಲಿ ಕಾಣಸಿಗುವ ವೈವಿಧ್ಯಮಯ ವೈಶಿಷ್ಟ್ಯಪೂರ್ಣ ರಾಜಪ್ರಶಸ್ತಿಗಳು ಸ್ಪಷ್ಟಪಡಿಸುತ್ತವೆ.

ಸಾಮಾನ್ಯವಾಗಿ ರಾಜಪ್ರಶಸ್ತಿಗಳೂ ಬಿರುದಾವಲಿಗಳೂ ರಾಜರ ಕುಲೋಚಿತತ್ತ್ವವನ್ನೂ ಗುಣವಿಶೇಷಗಳನ್ನೂ ವ್ಯಕ್ತಿತ್ವ ಸಾಧನೆಗಳನ್ನು ಪ್ರತಿನಿಧಿಸುತ್ತವೆ. ಅವರ ಅರಸುತನದ ಹಕ್ಕನ್ನೂ ದೈವಿಕತೆಯನ್ನೂ ಪರಮಾಧಿಕಾರವನ್ನೂ ವೈಭವೋಪೇತ ಸ್ಥಾನಮಾನಗಳನ್ನೂ ನ್ಯಾಯಬದ್ಧವೆಂದು ಸಾರಿ ಅವುಗಳನ್ನು ಪ್ರಜೆಗಳು ಮಾನ್ಯಮಾಡುವಂತೆ ಪ್ರೇರಿಸುತ್ತವೆ. ಅಲ್ಲದೆ ಈ ಪ್ರಶಸ್ತಿಗಳು ರಾಜರ ಕೀರ್ತಿ ಘನತೆ ಪ್ರತಿಷ್ಠೆಗಳನ್ನು ಎಲ್ಲೆಡ ಹರಡಿ ಪ್ರಜೆಗಳಲ್ಲಿ ರಾಜರ ಬಗ್ಗೆ ಗೌರವ, ವಿಧೇಯತೆ, ನಿಷ ಅಭಿಮಾನಗಳನ್ನು ಬೆಳೆಸಲು ಅನುವಾಗುತ್ತದೆ. ಈ ಪ್ರಕಾರವಾಗಿ ರಾಜಪ್ರಶಸ್ತಿಗಳು ಯಶಸ್ವಿ ರಾಜಪ್ರಭುತ್ವದ ಬುನಾದಿ ಅಂಶಗಳಾಗಿ ಪರಿಗಣಿಸಲ್ಪಡುತ್ತವೆ.

ಈ ಹಿನ್ನೆಲೆಯಲ್ಲಿ ರಾಷ್ಟ್ರಕೂಟ ರಾಜರ ವಿಭಿನ್ನ ಪ್ರಶಸ್ತಿಗಳನ್ನು ಅರ್ಥಪೂರ್ಣವಾಗಿ ವಿಶ್ಲೇಷಿಸಿ ರಾಷ್ಟ್ರಕೂಟ ರಾಜಪ್ರಭುತ್ವದ ಸ್ವರೂಪವನ್ನು ವಿವೇಚಿಸುವುದೇ ಪ್ರಸ್ತುತ ಲೇಖನದ ಉದ್ದೇಶವಾಗಿದೆ.

ರಾಷ್ಟ್ರಕೂಟ ರಾಜ್ಯ ಸಂಸ್ಥಾಪನಾದ ದಂತಿದುರ್ಗ ಹಾಗೂ ಅವನ ಪೂರ್ವಜರು ಬಾದಾಮಿ ಚಾಲುಕ್ಯರ ಸಾಮಂತರಾಗಿದ್ದುದರಿಂದ ಸಾಮಂತ ಪ್ರಶಸ್ತಿಗಳಾದ 'ಸಮಧಿಗತ ಪಂಚ ಮಹಾಶಬ್ದ' ಮತ್ತು 'ಮಹಾಸಾಮಂತಾಧಿಪತಿ' ಎಂಬ ಬಿರುದುಗಳನ್ನು ಮಾತ್ರ ಧರಿಸಿದ್ದರು. ಪಂಚಮಹಾಶಬ್ದ (ಶಂಖ, ತಮ್ಮಟೆ, ಧವಳಭೇರಿ, ಶೃಂಗ, ಜಯಘಂಟೆ)[2] ಗೌರವ ಮರ್ಯಾದೆಗಳಿಗೆ ಅರ್ಹರಾದ ಸಾಮಂತ ಶ್ರೇಷ್ಠರಿಗೆ ಮಾತ್ರ 'ಸಮಧಿಗತ ಪಂಚ ಮಹಾಶಬ್ದ'ದ ಬಿರುದನ್ನು ನೀಡಲಾಗುತ್ತಿದ್ದಿತು. ಅಂತೆಯೇ ಸಾಮಂತಮುಖ್ಯನಿಗೇ 'ಮಹಾಸಾಮಂತಾಧಿಪತಿ' ಬಿರುದು ಸಲ್ಲುತ್ತಿದ್ದಿತು. ಆದ್ದರಿಂದ ದಂತಿದುರ್ಗನು ಬಾದಾಮಿ ಚಾಲುಕ್ಯರ ಪ್ರಮುಖ ಸಾಮಂತರ ಸಾಲಿಗೆ ಸೇರಿದವನಾಗಿದ್ದನೆಂದು ಹೇಳಬಹುದಾಗಿದೆ. ದಂತಿದುರ್ಗನು

* ಇತಿಹಾಸ ವಿಭಾಗದ ಮುಖ್ಯಸ್ಥರು,ಬಸವೇಶ್ವರ ಪ್ರಥಮದರ್ಜೆ ಮಹಾವಿದ್ಯಾಲಯ, ರಾಜಾಜಿನಗರ,ಬೆಂಗಳೂರು ೫೬೦೦೧೦

1. ಡಾ.ಎಚ್.ಎಲ್.ನಾಗೇಗೌಡ, 'ಪ್ರವಾಸಿ ಕಂಡ ಇಂಡಿಯಾ', ಸಂ.೧. ಮೈ.ವಿ.ವಿ.
2. ನಿಜಗುಣ ಶಿವಯೋಗಿ ವಿರಚಿತ 'ವಿವೇಕ ಚಿಂತಾಮಣಿ', ಪುಟ ೩೩೮

ೂನೆಯ ಬಾದಾಮಿ ಚಾಲುಕ್ಯ ದೊರೆ ಇಮ್ಮಡಿ ೀರ್ತಿವರ್ಮನನ್ನು ಸೋಲಿಸಿ ಅವನಿಂದ ರಾಜ್ಯವನ್ನು ವಶಕ್ಕೆ ಗೆದುಕೊಂಡ ಮೇಲೆ ಬಾದಾಮಿ ಚಾಲುಕ್ಯ ಅರಸರ ಾರ್ವಭೌಮತ್ವ ಸೂಚಕಗಳಾದ 'ಪೃಥ್ವೀವಲ್ಲಭ', ಪರಮಭಟ್ಟಾರಕ', 'ಮಹಾರಾಜಾಧಿರಾಜ' 'ಪರಮೇಶ್ವರ' ುಂತಾದ ಪ್ರಶಸ್ತಿಗಳನ್ನು ತಾನೂ ಧರಿಸಿದನು. ಈ ಪ್ರಶಸ್ತಿಗಳು ುಂದಿನ ಎಲ್ಲರಾಷ್ಟ್ರಕೂಟ ದೊರೆಗಳಿಗೂ ಸಮಾನವಾಗಿ ನ್ವಯಿಸಲ್ಪಟ್ಟು ಕುಲಕ್ರಮಾಗತ ಸಾರ್ವಭೌಮತ್ವಸೂಚಕ ಿರುದುಗಳಾದವು.

ರಾಷ್ಟ್ರಕೂಟ ರಾಜಪ್ರಭುತ್ವ ಮುಂದೆ ವಿಸ್ತಾರಗೊಂಡಂತೆ ಹಾಗೂ ಅದರ ಕೀರ್ತಿ ಪ್ರತಿಷ್ಠೆಗಳು ಹೆಚ್ಚಿದಂತೆ ರಾಷ್ಟ್ರಕೂಟ ೊರೆಗಳ ಪ್ರಶಸ್ತಿ ಬಿರುದಾವಳಿಗಳು ಸಂಖ್ಯಾತ್ಮಕವಾಗಿಯೂ ುತ್ತು ಗುಣಾತ್ಮಕವಾಗಿಯೂ ಬೆಳೆದು ಬಂದವು. ಈ ಎಲ್ಲ ಾಜಪ್ರಶಸ್ತಿಗಳನ್ನು ಪ್ರಿಯಾಭಿಧಾನ (Terms of Endearment), ಶೌರ್ಯಾಭಿಧಾನ (Terms of Heroism), ್ರೇಷ್ಠತಾ ಅಭಿಧಾನ (Terms of Excellence) , ಕ್ತ್ಯಾಭಿಧಾನ (Terms of Personal Devotion), ೋಷಕಾಭಿಧಾನ (Terms of Royal Patronage) ೌಂದರ್ಯಾಭಿಧಾನ (Terms of Personal Beauty) ಎಂಬ ಶೀರ್ಷಿಕೆಗಳಲ್ಲಿ ವರ್ಗೀಕರಿಸಿ ವಿಶ್ಲೇಷಿಸಬಹುದಾಗಿದೆ.[3]

## ್ರಿಯಾಭಿಧಾನ

ಎಲ್ಲ ರಾಷ್ಟ್ರಕೂಟ ದೊರೆಗಳೂ ಪ್ರಿಯಾಭಿಧಾನಗಳನ್ನು ಧರಿಸಿದ್ದರು. ಈ ಪ್ರಶಸ್ತಿಗಳನ್ನು ಸ್ವಯಮಾಭಿಲಾಷೆಯಿಂದ ರಾಜರೇ ಧರಿಸುತ್ತಿದ್ದರು, ಇಲ್ಲವೇ ಪ್ರಜೆಗಳೇ ತಮಗೆ ಅತ್ಯಂತ ಪ್ರಿಯರಾದ ರಾಜರಿಗೆ ಈ ಅನ್ವರ್ಥ ಅಭಿಧಾನಗಳನ್ನು ಆಪ್ಯಾಯಿಕೆಯಿಂದ ನೀಡುತ್ತಿದ್ದರು. ಬಹುವೇಳೆ ರಾಜನ ನಿಜನಾಮಧೇಯಕ್ಕೆ ಬದಲಾಗಿ ಆಯಾಯಾ ರಾಜರ ಪ್ರಿಯಾಭಿಧಾನಗಳಿಂದಲೇ ಅವರನ್ನು ಉಲ್ಲೇಖಿಸಿರುವುದನ್ನು ಗಮನಿಸಬಹುದಾಗಿದೆ. ಉದಾಹರಣೆಗೆ ಧ್ರುವನನ್ನು ಕಲಿವಲ್ಲಭನೆಂದೂ ಶರ್ವನನ್ನು ನೃಪತುಂಗ ಅಮೋಘವರ್ಷನೆಂದೂ ಮುಮ್ಮಡಿ ಗೋವಿಂದನನ್ನು ಪ್ರಭೂತವರ್ಷನೆಂದೂ ಮುಮ್ಮಡಿ ಕೃಷ್ಣನನ್ನು ಅಕಾಲವರ್ಷನೆಂದೂ ಉಲ್ಲೇಖಿಸಲಾಗಿದೆ.

ರಾಷ್ಟ್ರಕೂಟರಾಜರ ಪ್ರಿಯಾಭಿಧಾನಗಳನ್ನು ಮೂರು ನಿರ್ದಿಷ್ಟ ಗುಂಪುಗಳಲ್ಲಿ ಪರಿಗಣಿಸಬಹುದಾಗಿದೆ. ಅವುಗಳೆಂದರೆ 'ತುಂಗ', 'ವರ್ಷ', 'ವಲ್ಲಭ' ಎಂಬ ಅಂತ್ಯಪ್ರತ್ಯಯಗಳನ್ನು ಹೊಂದಿದ ಪ್ರಿಯಾಭಿಧಾನಗಳು.

'ತುಂಗ'[4] ಅಂತ್ಯಪ್ರತ್ಯಯಗಳಿಂದ ಕೂಡಿದ ಪ್ರಿಯಾಭಿದಾನಗಳೆಂದರೆ 'ಜಗತ್ತುಂಗ', 'ಶುಭತ್ತುಂಗ', 'ನೃಪತುಂಗ', 'ವಿಕ್ರಮತುಂಗ' ಮೊದಲಾದವು. ಈ ಪ್ರಿಯಾಭಿಧಾನಗಳನ್ನು ಕ್ರಮವಾಗಿ ಮುಮ್ಮಡಿ ಗೋವಿಂದ, ಮೊದಲನೇ ಹಾಗೂ ಎರಡನೇ ಕೃಷ್ಣ, ಶರ್ವ ಅಮೋಘವರ್ಷ ಹಾಗೂ ನಾಲ್ವಡಿ ಗೋವಿಂದ, ಮೊದಲನೇ ಇಂದ್ರ ಹಾಗೂ ಮೂರನೇ ಇಂದ್ರರು ಧರಿಸಿದ್ದರು. ಈ ಬಿರುದು ರಾಷ್ಟ್ರಕೂಟ ರಾಜರ ಅಧಿಕಾರ ಘನತೆ ಮತ್ತು ಪ್ರಭಾವಗಳು ಶಿಖರಕ್ಕೇರಿದುದನ್ನು ವಿಶದೀಕರಿಸಿ ರಾಷ್ಟ್ರಕೂಟ ರಾಜಪ್ರಭುತ್ವವು ಸಿದ್ಧಿಯ ಪರಾಕಾಷ್ಠೆಯನ್ನು ಮುಟ್ಟಿತೆಂದು ಸಮರ್ಥಿಸುತ್ತದೆ.

'ವರ್ಷ'+ ಅಂತ್ಯಪ್ರಕ್ಯಯಗಳಿಂದ ಕೂಡಿದ ಪ್ರಿಯಾಭಿಧಾನಗಳಿಗೆ ಉದಾಹರಣೆಗಳೆಂದರೆ 'ಧಾರಾವರ್ಷ'

---

3. ಆಧಾರ-ಕುಂದಣಗಾರ,'ಇನ್ಸ್‌ಕ್ರಿಪ್ಷನ್ಸ್ ಆಫ್ ಸಾರ್ಥರ್ನ್ ಕರ್ನಾಟಕ ಅಂಡ್ ಕೊಲ್ಹಾಪುರ', ಪುಟ.೮
4. ಅ) ನೇಸರಿಕಾ ತಾಮ್ರಪಟಗಳು, ರಾಜ, ಮುಮ್ಮಡಿ ಗೋವಿಂದ, ಕಾಲ-ಶಕ ೭೨೭ ಎ.ಇಂ ೩೪, ಸಂ. ೧೯, ಪುಟ, ೧೩೧.
   ಆ) ಭಂಡಕ್ ತಾಮ್ರಪಟಗಳು, ಎ.ಇಂ.xiv ಸಂ.೬.ಪುಟ ೧೨೧. ಮಂತ್ರಾಲ ಶಾಸನ, ೧೯ ೧೫.ಎ.ಆರ್. ಸಂ. ೫೪೨
   ಇ) ನೀಲಗುಂದ ಶಾಸನ, ಎ.ಇಂ.vi , ಸಂ.೧೧, ಪುಟ ೯೮.ಕಲಸ ಶಾಸನ ಎ.ಇಂ.xiii , ಸಂ ೨೯, ಪುಟ ೨೩೬.
   ಈ) ವಜೀರ್ ಖೇಡ ತಾಮ್ರಪಟಗಳು, ಎ.ಇಂ. xxxiii
5. ಅ) ಪಟ್ಟದಕಲ್ ಶಾಸನ, ಇಂ.ಆಂ. xi , ೧೮೮೨, ಸಂ. ೧೨೨
   ಆ) ಭಂಡಕ್ ತಾಮ್ರಪಟಗಳು-ಮೇಲಿನಂತೆ.
   ಮಂತ್ರಾಲ ಶಾಸನ - ಮೇಲಿನಂತೆ.
   ಸೊರಟೂರು ಶಾಸನ - ಸೌ.ಇಂ.ಇ xi, ಸಂ.೩೯.
   ಇ) ಅಲಾಸ್ ತಾಮ್ರಪಟಗಳು, ಎ. ಇಂ. vi , ಸಂ.೧೮, ಪು ೨೦೯-೨೧೧ ರಾಧನಪುರ ತಾ.ಪ.ಟ ಎ.ಇಂ.vi , ಪು ೨೪೨.
   ಈ) ದಂಡಾಪುರ ಶಾಸನ ಕ. ಇ. iv , ಸಂ.೪ ಪು ೨೪೨ ಸಿರೂರ್ ಶಾಸನ ಕ.ಇ.,vii , ಪು.೨೦೨.
   ಉ) ನೋಡಿ ಅಡಿ ಟಿಪ್ಪಣಿ ೪ ಈ; ಹಾಳಹರವಿ ಬಂಡೆ ಶಾಸನ ಸೌ.ಇಂ.ಇ ix, ಸಂ.೬೨
   ಊ) ಅಂದೂರ ತಾಮ್ರಪಟಗಳು, ಎ.ಇಂ.xxxvi , ಸಂ. ೩೨. ಪು ೨೫೬.

(ಧಾರಾಕಾರವಾಗಿ ಸಂಪತ್ತನ್ನು ವರ್ಷಿಸುವವನು-ಸುರಿಸುವವನು); 'ಅಕಾಲವರ್ಷ' (ಅಕಾಲದಲ್ಲಿಯೂ ಬರಗಾಲದಲ್ಲಿಯೂ ಸಂಪತ್ತನ್ನು ವರ್ಷಿಸುವವನು), 'ಪ್ರಭೂತವರ್ಷ' (ಸಮೃದ್ಧಿಯಾಗಿ ಸಂಪತ್ತನ್ನು ನೀಡುವವನು); 'ಅಮೋಘವರ್ಷ' (ಅತಿಶಯವಾಗಿ ನೀಡುವವನು); 'ನಿತ್ಯವರ್ಷ'(ಪ್ರತಿದಿನವೂ ಸಂಪತ್ತನ್ನು ವರ್ಷಿಸುವವನು); 'ಸುವರ್ಣವರ್ಷ' (ಚಿನ್ನವನ್ನು ವರ್ಷಿಸುವವನು) ಮೊದಲಾದುವು. ಈ ಬಿರುದುಗಳನ್ನು ಕ್ರಮವಾಗಿ ಧ್ರುವ, ಮೊದಲನೇ, ಎರಡನೇ ಹಾಗೂ ಮೂರನೆ ಕೃಷ್ಣರು, ಶರ್ವ ಹಾಗೂ ಬದ್ದೆಗ, ಮುಮ್ಮಡಿ ಹಾಗೂ ನಾಲ್ವಡಿ ಗೋವಿಂದ, ಮುಮ್ಮಡಿ ಇಂದ್ರ, ಖೊಟ್ಟಿಗ ಹಾಗೂ ಕರ್ಕರು ಧರಿಸಿದ್ದರು.

ಇವರೆಲ್ಲರ ಪ್ರಿಯಾಭಿಧಾನವಾದ 'ವರ್ಷ' ರಾಷ್ಟ್ರಕೂಟ ರಾಜರ ಔದಾರ್ಯ ಮತ್ತು ದಾನಪ್ರಿಯತೆಯನ್ನು ಎತ್ತಿ ತೋರಿಸುತ್ತದೆ. ರಾಷ್ಟ್ರಕೂಟ ಶಾಸನಗಳಲ್ಲಿ ಬಹುಪಾಲು ದಾನಶಾಸನಗಳಾಗಿದ್ದು ಬ್ರಾಹ್ಮಣರಿಗೂ ದೇವಾಲಯಗಳಿಗೂ, ವೀರರಿಗೂ ನೀಡಿದ ಭೂದಾನ ಸುವರ್ಣದಾನಗಳನ್ನು ಉಲ್ಲೇಖಿಸುವುದರ ಮೂಲಕ ಮೇಲೆ ಹೇಳಲ್ಪಟ್ಟ 'ವರ್ಷ' ಪ್ರಿಯಾಭಿಧಾನಗಳ ಅನ್ವರ್ಥತೆಯನ್ನು ಸಾರುತ್ತವೆ.

ಇನ್ನು 'ವಲ್ಲಭ'[6] ಅಂತ್ಯಪ್ರತ್ಯಯವನ್ನುಳ್ಳ ಪ್ರಿಯಾಭಿದಾನಗಳು 'ಕಲಿವಲ್ಲಭ' 'ಶ್ರೀ ವಲ್ಲಭ'. 'ಲಕ್ಷ್ಮೀವಲ್ಲಭ' 'ವಲ್ಲಭನರೇಂದ್ರ' ಮೊದಲಾದುವು. ಈ ಪ್ರಿಯಾಭಿಧಾನಗಳನ್ನು ಕ್ರಮವಾಗಿ ಧ್ರುವ ಮುಮ್ಮಡಿ ಗೋವಿಂದ, ಶರ್ವಅಮೋಘವರ್ಷ ಹಾಗೂ ಮುಮ್ಮಡಿ ಕೃಷ್ಣ ಧರಿಸಿದ್ದರು. ಈ 'ವಲ್ಲಭ' ಪ್ರಿಯಾಭಿಧಾನಗಳ ರಾಷ್ಟ್ರಕೂಟ ರಾಜರ ಸಾರ್ವಭೌಮತ್ವ, ಸಾರ್ವತ್ರಿಕ ಪ್ರಭಾ ಮತ್ತು ಸಂಪತ್ತಿನ ಒಡೆತನಗಳನ್ನು ನಿರ್ದೇಶಿಸುತ್ತವೆ. ಈ ಅಂಶವನ್ನೇ ಪುಷ್ಟೀಕರಿಸುತ್ತದೆ-'ಬಲ್ಹಾರ (ಬಲ್ಲಹ ವಲ್ಲಭ) ರಾಜನು ಇಡೀ ಭಾರತದ ರಾಜರನ್ನು ತಮ್ಮ ಅಧೀನದಲ್ಲಿರಿಸಿಕೊಂಡು ಕಪ್ಪ ಸ್ವೀಕರಿಸುತ್ತಿದ್ದನು; ಎಲ್ಲಾ ರಾಜರೂ ಅವನಿಗೆ ಶಿರಬಾಗಿ ನಮಿಸುತ್ತಿದ್ದರು' ಎಂಬ ಅರಬ ಪ್ರವಾಸಿಗರ ಹೇಳಿಕೆ.

### ಶೌರ್ಯಾಭಿಧಾನ

ಎಲ್ಲ ರಾಷ್ಟ್ರಕೂಟ ರಾಜರನ್ನು ಸಮಕಾಲೀನ ದಾಖಲೆಗಳು ಶೂರವೀರರೆಂದೂ ಪ್ರಚಂಡ ದಿಗ್ವಿಜಯಿಗಳೆಂದೂ ಪ್ರಶಂಸಿಸಿದೆ. ರಾಷ್ಟ್ರಕೂಟ ರಾಜರೆಲ್ಲರೂ ವಿಜಿಗೀಷುಗಳಾಗಿದ್ದು ಭಾರತದ ಆದ್ಯಂತ ಪ್ರಚಂಡ ದಿಗ್ವಿಜಯಗಳನ್ನು ನಡೆಸಿ ವಿಜಯದುಂದುಭಿಯನ್ನು ಮೊಳಗಿಸಿದ್ದಾರೆ. ಆ ಕಾರಣ ರಾಷ್ಟ್ರಕೂಟ ಶೌರ್ಯಭಿಧಾನಗಳು ವಿಶೇಷತೆಯಿಂದ ಕೂಡಿವೆ. ಈ ಶೌರ್ಯಭಿ ಧಾನಗಳು ಸಂಸ್ಕೃತ ಹಾಗೂ ಕನ್ನಡ ಭಾಷೆಗಳೆರಡರಲ್ಲೂ ಕಾಣಸಿಗುತ್ತವೆ. ಸಂಸ್ಕೃತದಲ್ಲಿನ ಶೌರ್ಯಾಭಿಧಾನಗಳು[7]- ಅಪ್ರತಿಹತ ವಿಕ್ರಮ(ಎದಿರೇಟಿಲ್ಲದ ಶೌರ್ಯವುಳ್ಳವನು), ವಿಜಯಾವಲೋಕ (ದೃಷ್ಟಿ ಮಾತ್ರದಿಂದಲೇ ವಿಜಯವನ್ನು ಪಡೆಯುವವನು), 'ವಿಕ್ರಾಂತನಾರಾಯಣ' (ತ್ರಿವಿಕ್ರಮ ಸಾಧಿಸಿದ ವಿಷ್ಣು), 'ವೀರನಾರಾಯಣ', 'ವಿಕ್ರಮಾವಲೋಕ', ಇತ್ಯಾದಿ. ಈ ಪ್ರಶಸ್ತಿಗಳನ್ನು ಕ್ರಮವಾಗಿ ಶರ್ವ ಅಮೋಘವರ್ಷ, ಮುಮ್ಮಡಿ ಇಂದ್ರ ಮತ್ತು ಇಮ್ಮಡಿ

---

6. ಅ) ನೋಡಿ ಅಡಿ ಟಿಪ್ಪಣಿ ೫ ಅ.
ಆ) ಲಕ್ಮೇಶ್ವರ ಶಾಸನ, ಐ ಎ xi ಪುಟ ೧೫೬
ಇ) ನೋಡಿ ಅಡಿ ಟಿಪ್ಪಣಿ ೪ ಇ.
ಈ) ನೋಡಿ ಅಡಿಟಿಪ್ಪಣಿ ೫ ಉ.
7. i. ಕವಿರಾಜಮಾರ್ಗ, ಪರಿಚ್ಛೇದ ೧, ಪದ್ಯ ೨
ii. ಜಂಬಗಾಂವ್ ತಾಮ್ರಪಟಗಳು.
iii. ಅಂದೂರ ತಾಮ್ರಪಟಗಳು
iv. ಸಂಜಾನ್ ತಾಮ್ರಪಟಗಳು, ಎ.ಇಂ. ೧೮, ಸಂ.೨೬, ಪುಟ ೨೩೫.
v. ಅಲಾಸ್ ತಾ.ಪ. ಎ.ಇಂ. ೬ ಸಂ.೧೮ ಪು ೨೦೯-೧೧
vi. ಇಸಾಮುದ್ರ ಶಾಸನ. ಎ.ಕ. xi, ಚಿತ್ರದುರ್ಗ ೭೬ ಸಂ.ಬಿ.ಎಲ್. ರೈಸ್.
vii. ಬಾಂಬೆ ಗಜೆಟಿಯರ್, 'ಸೌಂದತ್ತಿಯ ರಟ್ಟರ ಶಾಸನಗಳು', ಪುಟ. ೪೧೯
viii. ಮೇಲೆ ನೋಡಿ vi
ix. ಅದೇ.

ಲ್ಪಡಿ ಗೋವಿಂದರು ಧರಿಸಿದ್ದರು. ಕನ್ನಡದಲ್ಲಿನ ೌರ್ಯಾಭಿಧಾನಗಳೆಂದರೆ 'ಕಾಯ್ದ್ಬಾರ ಜವ' ಹೋರಾಡುವ ಶತ್ರುಗಳಿಗೆ ಯಮ), 'ತುಡಿಗ' (ತುಂಟ-ಂಕೆಗೆ ಸಿಕ್ಕದವನು), 'ಕಲಿ ಚಾಗಿ' (ತ್ಯಾಗವೀರ), ಪ್ರತಿಬಲದಗ್ಗಳಿರಿಪುಗೆನಿಪ್ಪರಸ' (ಅತಿಶಯವಾದ ತ್ರುಪ್ರಮುಖನಿಗೂ ಅರಸನೆನಿಸುವವನು), ಮುಂತಾದವು. ಶೌರ್ಯಾಭಿಧಾನಗಳನ್ನು ಮುಮ್ಮಡಿ ಇಂದ್ರ ಮುಮ್ಮಡಿ ೃಷ್ಣ ಹಾಗೂ ಕದಂಬಳಿಗೆ ಪ್ರಾಂತ್ಯದ ಸಾಮಂತಾಧಿಪತಿ ನ್ನರರು ಧರಿಸಿದ್ದರು.

ಶ್ರೇಷ್ಠತಾಭಿಧಾನ

ಈ ವರ್ಗದ ಪ್ರಶಸ್ತಿಗಳು ಆಯಾಯಾ ರಾಜರುಗಳಿಗೆ ವಿವಿಧ ಕ್ಷೇತ್ರಗಳಲ್ಲಿ ಇದ್ದ ಅಭಿರುಚಿ ಸಿದ್ಧಿ ಹಾಗೂ ಪಾರಮ್ಯಗಳನ್ನು ಸ್ಪಷ್ಟಪಡಿಸುತ್ತವೆ. ಇಂತಹ ಪ್ರಶಸ್ತಿಗಳೆಂದರೆ ಮುಮ್ಮಡಿ ಕೃಷ್ಣನಿಗಿದ್ದ 'ಆನೆವೆಡಂಗ' 'ಮದಗಜಮಲ್ಲ', ಅವನ ಮಂತ್ರಿ, ಪ್ರಧಾನನಾಗಿದ್ದ ನಾರಾಯಣನಿಗಿದ್ದ 'ಗಜಾಂಕುಶ' ಹಾಗೂ ಮೊದಲನೇ ಅಮೋಘವರ್ಷನ ಅಧಿಕಾರಿಗಿದ್ದ 'ತುರಗವೆಡಂಗ', ಇವು ಮುಮ್ಮಡಿ ಕೃಷ್ಣ ಹಾಗೂ ರಾಷ್ಟ್ರಕೂಟ ಅಧಿಕಾರಿಗಳಿಗಿದ್ದ ಹಸ್ತಿವಿದ್ಯಾ ಚತುರತೆಯನ್ನು ಪ್ರತಿನಿಧಿಸುತ್ತವೆ ಹಾಗೂ ಮುಮ್ಮಡಿ ಕೃಷ್ಣನು ತನ್ನ ಉತ್ತರ ಮತ್ತು ದಕ್ಷಿಣ ಭಾರತ ದಿಗ್ವಿಜಯದ ಸಂದರ್ಭದಲ್ಲಿ ತನ್ನ ಹಸ್ತಾಶ್ವಯುದ್ಧ ಕುಶಲತೆ, ನಿಷ್ಣಾತತೆಯಿಂದ ವಿಜಯಸಾಧಿಸಿದನೆಂದು ಸ್ಪಷ್ಟಪಡಿಸುತ್ತವೆ. ಅಂತೆಯೇ ಅವನ 'ತಂಜೈಯುಂ ಕಚ್ಚಿಯುಂ ಕೊಂಡ' ಎಂಬ ಪ್ರಶಸ್ತಿಯು ದಕ್ಷಿಣ ಭಾರತದ ಚೋಳರನ್ನು ಸಂಪೂರ್ಣವಾಗಿ ಸೋಲಿಸಿ ಅವರ ಪ್ರಮುಖ ರಾಜಕೀಯ ಕೇಂದ್ರಗಳಾದ ತಂಜಾವೂರು ಮತ್ತು ಕಾಂಚಿಗಳನ್ನು ವಶಪಡಿಸಿಕೊಂಡು 'ದಕ್ಷಿಣಾಧಿಪತಿ'ಯಾಗಿ ತನ್ನನ್ನು ಕರೆದುಕೊಂಡ ಮುಮ್ಮಡಿ ಕೃಷ್ಣನ ದಿಗ್ವಿಜಯ ಸಿದ್ಧಿ ಹಾಗೂ ಅಧಿಕಾರ ಪಾರಮ್ಯಗಳನ್ನು ವಿಶದೀಕರಿಸುತ್ತದೆ. ಮುಮ್ಮಡಿ ಕೃಷ್ಣನ ಪರಮ ಮಿತ್ರ, ಸಾಮಂತ ಗಂಗ ಮಾರಸಿಂಹ ಗೂರ್ಜರ ಪ್ರತೀಹಾರರನ್ನು ಸೋಲಿಸಿ ಪಡೆದುಕೊಂಡ 'ಗೂರ್ಜರಾಧಿಪತಿ' ಹಾಗೂ ನೊಳಂಬರನ್ನು ನಿರ್ಮೂಲಮಾಡಿ ಅವರ ರಾಜ್ಯವಶಪಡಿಸಿ ಕೊಂಡು ಧರಿಸಿದ 'ನೊಳಂಬಾಂತಕ' ಎಂಬ ಬಿರುದುಗಳೂ ಇದೇ ವರ್ಗಕ್ಕೆ ಸೇರುತ್ತವೆ. ಈ ವರೆಗೆ ಹೇಳಲ್ಪಟ್ಟ ಬಿರುದುಗಳು ಯುದ್ಧಕಲೆಯಲ್ಲಿನ ಶ್ರೇಷ್ಠತೆಗೆ ಸಂಬಂಧಿಸಿದವುಗಳಾದರೆ ಮುಮ್ಮಡಿ ಕೃಷ್ಣನ 'ಕಂಧಾರಪುರವರೇಶ್ವರ' ಎಂಬ ಪ್ರಶಸ್ತಿಯು ಅವನು ನಿರ್ಮಿಸಿದ ನೂತನವಾದ ಅಚ್ಚುಕಟ್ಟಿನಿಂದ ಕೂಡಿದ ಕಾಂಧಾರಪಟ್ಟಣ ನಿರ್ಮಾಪಕ ನೆಂದೂ ನೆಲೆವೀಡು ರಚನಾಕಲೆಯಲ್ಲಿ ಅವನ ನೈಪುಣ್ಯತೆಯ ಬಗ್ಗೆ ತಿಳಿಸುತ್ತದೆ. ಅಮೋಘವರ್ಷನ ಬಿರುದುಗಳಾದ 'ನೀತಿ ನಿರಂತರ', 'ಉದಾರಚರಿತ' ಹಾಗೂ ಮುಮ್ಮಡಿ ಕೃಷ್ಣನ 'ಪರಾಂಗನಾ ಪುತ್ರಕ' ಮುಂತಾದುವು. ಈ ರಾಜರ ಚಾರಿತ್ರ್ಯ ಶ್ರೇಷ್ಠತೆಯನ್ನು ಎತ್ತಿ ಹಿಡಿಯುತ್ತವೆ.

ಭಕ್ತ್ಯಾಭಿಧಾನ

ರಾಜ ರಾಣಿಯರ ಅಥವಾ ಅಧಿಕಾರಿಗಳ ವೈಯಕ್ತಿಕ ಒಲವು ಯಾವ ಧರ್ಮ ಮತ್ತು ದೇವತೆಯ ಬಗೆಗೆ ಇತ್ತೆಂದು ತಿಳಿಸುವ ಬಿರುದುಗಳೇ, ಈ ಭಕ್ತ್ಯಾಭಿಧಾನ ಪ್ರಶಸ್ತಿಗಳು. ಈ ಬಿರುದುಗಳು ಆಯಾ ರಾಜರ ಆಳ್ವಿಕೆಯಲ್ಲಿ ಆಯಾ ದೈವ ಹಾಗೂ ಧರ್ಮಕ್ಕೆ, ಧರ್ಮಾನುಯಾಯಿಗಳಿಗೆ ಸಿಗುತ್ತಿದ್ದ ಮಾನ್ಯತೆ ದತ್ತಿದಾನ ಮತ್ತು ಪ್ರಭಾವಗಳನ್ನು ಸೂಚಿಸುತ್ತವೆ. ಅಲ್ಲದೆ.'ಯಥಾರಾಜಾ ತಥಾ ಪ್ರಜಾ' ಎಂಬ ಹೇಳಿಕೆಯಂತೆ ತಮ್ಮ ರಾಜರುಗಳ ದೇವಭಕ್ತಿ, ಧಾರ್ಮಿಕತೆಗಳನ್ನನುಸರಿಸುವ ಪ್ರಜೆಗಳ ಧಾರ್ಮಿಕ ಒಲವು ನಿಷ್ಠೆಗಳನ್ನು. ಈ ಮೇಲಿನ ಭಕ್ತ್ಯಾಭಿದಾನ ಪ್ರಶಸ್ತಿಗಳು ಪ್ರತಿನಿಧಿಸುತ್ತವೆ.ಮುಮ್ಮಡಿ

---

8 i. ಜೂರ ಪ್ರಶಸ್ತಿ, ರಾಜ-ಮುಮ್ಮಡಿ ಕೃಷ್ಣ, ಸಾಲುಗಳು ೪-೫, ಶಾಸನ ಸಂಗ್ರಹ ಸಂ.೧೫, ಪು ೧೫

ii. ಸೊರಟೂರು ಶಾಸನ.ಎಸ್.ಐ. ಐ. xi ಸಂ.೩೯

iii. ಸಾಲೊಟಗಿ ಶಾಸನ. ಎ.ಇಂ.೪, ಸಂ.೬

iv. ರೋಣ ಶಾಸನ, ಎ.ಇಂ ೧೩

v. ಮೇಲೆ (I)ನ್ನ ನೋಡಿ.

vi.-vii. ಕರ್ನಾಟಕದ ಇತಿಹಾಸ, ಡಾ|| ಬಾ.ರಾ. ಗೋಪಾಲ್, ಪುಟಗಳು ೭೫-೭೬

viii. ಕಂದಾರ ಶಾಸನ, ನಾಂದೇಡ್ ಜಿಲ್ಲೆಯ ಶಾಸನಗಳು, ಸಂ ೨ ಸಂ.ಕುಂದಣಗಾರ್.

ix. ಕವಿರಾಜಮಾರ್ಗ, ಪರಿಚ್ಛೇದ i, ii

x. ಅದೇ.

xi. ಮೇಲಿನ (!)ನ್ನು ನೋಡಿ.

ಇಂದ್ರ, ನಾಲ್ವಡಿಗೋವಿಂದ ಧರಿಸಿದ್ದ 'ಕೀರ್ತಿನಾರಾಯಣ' 'ನೃಪತಿ ತ್ರಿಣೇತ್ರ', 'ರಾಜ ಮಾರ್ತಾಂಡ' 'ಚಾಣಕ್ಯ ಚತುರ್ಮುಖ' ಮುಂತಾದ ಪ್ರಶಸ್ತಿಗಳನ್ನು[9] ಈ ವರ್ಗಕ್ಕೆ ಸೇರಿಸಬಹುದಾಗಿವೆ. ಈ ಪ್ರಶಸ್ತಿಗಳಿಂದ ರಾಷ್ಟ್ರಕೂಟ ರಾಜರು ತಮ್ಮ ಹೆಗ್ಗಳಿಕೆಯನ್ನು ತ್ರಿಮೂರ್ತಿಗಳಾದ ಬ್ರಹ್ಮ ವಿಷ್ಣು ಮಹೇಶ್ವರ ಹಾಗೂ ಸೂರ್ಯರೊಡನೆ ಸಮೀಕರಿಸಿ ಕೊಂಡಿರುವುದರಿಂದ ಸೌರ, ಬ್ರಾಹ್ಮ ಶೈವ ಮತ್ತು ವೈಷ್ಣವ ದರ್ಶನಗಳ ಬಗ್ಗೆ ಹೆಚ್ಚಿನ ಆಸ್ಥೆಯನ್ನು ಅವರು ಬೆಳೆಸಿದ್ದರೆಂಬ ಅಂಶ ನಿರೂಪಿತವಾಗುತ್ತವೆ. ಅಂತೆಯೇ ಗಂಗ ಮಾರಸಿಂಹನ ಅಧಿಕಾರಿ ಧಲದಂಕರಾಮನು ತನ್ನನ್ನು 'ರಾಮಪಾದಪಂಕಜ ಭ್ರಮರ' ಎಂದು ಕರೆದುಕೊಂಡಿದ್ದಾನೆ. ಇದರಿಂದ ಮಾರಸಿಂಹನ ಆಳ್ವಿಕೆಯಲ್ಲಿ ಜೈನ ಧರ್ಮಕ್ಕೆ ಸರಿಸಮನಾಗಿ ವೈಷ್ಣವ ಧರ್ಮವೂ ಪುರಸ್ಕರಿಸಲ್ಪಟ್ಟಿತೆಂಬ ಅಂಶವು ದೃಢವಾಗುತ್ತದೆ.

**ಪೋಷಕಾಭಿಧಾನ**

ರಾಷ್ಟ್ರಕೂಟ ರಾಜರು ಸಂಗೀತ, ಸಾಹಿತ್ಯ, ಕಲೆ ಮುಂತಾದುವುಗಳ ಬಗ್ಗೆ ಅಭಿರುಚಿಯನ್ನು ಹೊಂದಿದ್ದು ಉದಾರವಾಗಿ ಅವುಗಳನ್ನು ಪೋಷಿಸಿ ಬೆಳೆಸಿದರೆಂಬ ಅಂಶವನ್ನು ಸ್ಪಷ್ಟವಾಗಿ ನಿರೂಪಿಸುತ್ತವೆ. ಈ ಪೋಷಕಾಬಿಧಾನಗಳು. 'ಗೇಯ ಚತುರ್ಮುಖ', 'ಪಂಡಿತ', 'ಗುಡಿ ಕಲ್ಪ ವೃಕ್ಷ' ಎಂಬ ಮುಮ್ಮಡಿ ಇಂದ್ರ, ಅಮೋಘವರ್ಷ ನೃಪತುಂಗ ಹಾಗೂ ಮುಮ್ಮಡಿ ಅಮೋಘವರ್ಷರು ಧರಿಸಿದ್ದ ಅಬಿಧಾನಗಳು[10]. ಈ ವರ್ಗದ ಪ್ರಶಸ್ತಿಗಳಿಗೆ ಕೆಲವು ಉದಾಹರಣೆಗಳಾಗಿವೆ. ಈ ಅಭಿಧಾನಗಳು ರಾಜರುಗಳಿಗೆ ಸಂಗೀತ, ಕಾವ್ಯ, ಸಾಹಿತ್ಯ ದೇವಾಲಯ ನಿರ್ಮಾಣಕಲೆಗಳಲ್ಲಿದ್ದ ಆಸಕ್ತಿಯನ್ನೂ ಪರಿಶ್ರಮವನ್ನೂ ಹಾಗೂ ಉದಾರ ಪೋಷಕತ್ವವನ್ನೂ ಸೂಚಿಸುತ್ತವೆ. ಶರ್ವ ಅಮೋಘವರ್ಷನು ಸ್ವತ
ವಿದ್ವಾಂಸನಾಗಿದ್ದು ಕಾವ್ಯ ಶಾಸ್ತ್ರದಲ್ಲಿ ಸ್ವಂತ ಅಭಿಪ್ರಾ
ನೀಡುತ್ತಿದ್ದನೆಂದು ಅವನ ಅನುಮತಕ್ಕನು ಸಾರವಾಗಿಮ
'ಕವಿರಾಜ ಮಾರ್ಗ' ಗ್ರಂಥವು ರಚಿಸಲ್ಪಟ್ಟಿತೆಂದು ಕವಿಯ
ಅದರಲ್ಲಿ ಸ್ಪಷ್ಟವಾಗಿ ಹೇಳಿದ್ದಾನೆ. ಈ ಕಾರಣದಿಂದ
ಇಂದಿಗೂ ಕೆಲವು ವಿದ್ವಾಂಸರು ಅಮೋಘವರ್ಷ
ನೃಪತುಂಗನನ್ನೇ 'ಕವಿರಾಜ ಮಾರ್ಗ' ಗ್ರಂಥದ ಕೃರ್ತವೆಂದು
ಪರಿಗಣಿಸಿದ್ದಾರೆ.

**ಸೌಂದರ್ಯಾಭಿಧಾನ:**

ರಾಷ್ಟ್ರಕೂಟ ರಾಜರು ಸೌಂದರ್ಯವಂತರೆಂಬುದನ್ನು
ತಿಳಿಸುತ್ತವೆ, ಈ ವರ್ಗದ ಪ್ರಶಸ್ತಿಗಳು. ಉದಾಹರಣೆ
ಮುಮ್ಮಡಿ ಕೃಷ್ಣ, ನಾಲ್ವಡಿ ಗೋವಿಂದ, ಮುಮ್ಮಡಿ ಅಮೋಘ
ವರ್ಷರಿಗಿದ್ದ 'ರಟ್ಟಕಂದರ್ಪ', 'ನಿತ್ಯಕಂದಪ್ರ', 'ನಿರುತಸ್ಮರ
ಬಿರುದುಗಳು [11]. ಈ ರಾಜರು ಮನ್ಮನಂತೆ ರೂಪಯೌವನ
ಸಂಪನ್ನರಾಗಿದ್ದರೆಂದು ಸೂಚಿಸುತ್ತವೆ. ತಮ್ಮ ರೂಪ
ಸಂಪತ್ತಿನಿಂದಲೇ ಪ್ರಜೆಗಳನ್ನು ವಿಶೇಷವಾಗಿ ರಂಜಿಸು
ತ್ತಿದ್ದರೆಂದೂ ಇದರಿಂದ ಸ್ಪಷ್ಟವಾಗುತ್ತದೆ.

ರಾಷ್ಟ್ರಕೂಟ ರಾಜರೇ ಅಲ್ಲದೆ ಕೆಲವು ರಾಣಿಯರೂ
ಪ್ರಭಾವಶಾಲಿಗಳಾಗಿದ್ದು ಅಧಿಕಾರಸೂಚಕ ಬಿರುದುಗಳನ್ನು
ಹೊಂದಿದ್ದರೆಂದು ಶಾಸನಗಳಿಂದ ತಿಳಿದುಬರುತ್ತದೆ.
ಉದಾಹರಣೆಗೆ ಧ್ರುವನ ರಾಣಿಯಾಗಿದ್ದ ವೆಂಗಿ ಚಾಲುಕ್ಯ
ರಾಜಕುಮಾರಿ ಶೀಲಾಭಟ್ಟಾರಿಕಾ ಧರಿಸಿದ್ದ 'ಪರಮೇಶ್ವರಿ'
ಎಂಬ ಅಭಿಧಾನ ಹಾಗೂ ನಾಲ್ವಡಿ ಗೋವಿಂದನ ರಾಣಿ
ಭಾಗಿಯವ್ವೆ ಧರಿಸಿದ್ದ 'ಮಹಾದೇವಿ', 'ರಾಜ್ಞಿ' ಎಂಬ
ಅಭಿಧಾನಗಳು[12]. ಈ ರಾಣಿಯರಿಗಿದ್ದ ರಾಜಕೀಯಾಧಿಕಾರದ

9 i. ಮುಮ್ಮಡಿ ಇಂದ್ರನ ಜಂಬಗಾಂವ್ ತಾಮ್ರಪಟಗಳು, ಎ.ಇಂ ೩೬, ಸಂ. ೨೯ ಪುಟ ೨೨೨.
ii-iii . ಕ್ಯಾಂಬೆ ತಾಮ್ರಪಟಗಳು, ಎ.ಇಂ.೭ ಸಂ.೬, ಪುಟ ೩೯.
iv. ನಾಲ್ವಡಿ ಗೋವಿಂದನ ಅಂದೂರ ತಾಮ್ರಪಟಗಳು
v. ಮದ್ದಗಿರಿ ಶಾಸನ ಸಂ. ೧೦೨, xii ಎ.ಕ.

10 i. ಮುಮ್ಮಡಿ ಇಂದ್ರನ ವಾಜಿರ್‌ಖೇಡ ತಾಮ್ರಪಟಗಳು, ಎ.ಇಂ. ೩೮,ಸಂ ೨
ii. ಕವಿರಾಜಮಾರ್ಗ, ಪರಿಚ್ಛೇದ ೧, ಪದ್ಯ ೧೭೮, ೧೩೬.
iii. ಇಸಾಮುದ್ರ ಶಾಸನ, ಮುಮ್ಮಡಿ ಅಮೋಘವರ್ಷನ ಆಳ್ವಿಕೆ. ಎ.ಕ.ಕ್ರೈ , ಚಿತ್ರದುರ್ಗ ೭೬, ಸಂ.ಬಿ.ಎಲ್.ಕೈಸ್.

11 i. ಜಂಬಗಾಂವ್ ತಾಮ್ರಪಟಗಳು,ಎ.ಇಂ.೩೬ ಸಂಖ್ಯೆ ೨೯, ಘಟ ೨೩೬
ii. ನಾಲ್ಕನೇ ಗೋವಿಂದನ ಕ್ಯಾಂಬೆ ತಾಮ್ರಪಟಗಳು, ಎ.ಇ. ೭, ಸಂ ೬ ಸಾಲು ೩೮.
iii. ಕವಿರಾಜಮಾರ್ಗ, ಪರಿಚ್ಛೇದ ii

12 1 ಚಿತ್ಯಾಯ್ ತಾಮ್ರಪಟಗಳು, ಎ.ಇಂ.೨೨, ಸಂ.೧೩ಸಪುಟ ೯೮
2. ಅಂದೂರ ತಾ.ಪ., ಎ.ಇಂ.೩೬ ಸಂ.೩೨ ಪುಟ ೨೫೬

ಭಿರುಚಿ ಮತ್ತು ಸಾರ್ವಭೌಮ ಸ್ಥಾನವನ್ನು ಪ್ರತಿಬಿಂಬಿ ತ್ತವೆ.

ಈ ಮೇಲೆ ವಿಶ್ಲೇಷಿಸಲ್ಪಟ್ಟ ರಾಷ್ಟ್ರಕೂಟ ರಾಜಪ್ರಶಸ್ತಿಗಳು ಹೊರಗೆಡಹುವ ರಾಜಪ್ರಭುತ್ವಸ್ವರೂಪದ ಅಂಶಗಳನ್ನು ಕೆಳಕಂಡಂತೆ ಕ್ರೋಢೀಕರಿಸಬಹುದು.

ಪ್ರಿಯಾಭಿಧಾನಗಳಾದ 'ತುಂಗ' ಅಂತತ್ಯಪ್ರತ್ಯಯಗಳ್ಳು ಪ್ರಶಸ್ತಿಗಳು ರಾಷ್ಟ್ರಕೂಟ ರಾಜಪ್ರಭುತ್ವವು ಕೀರ್ತಿಯ ಉತ್ತುಂಗಕ್ಕೇರಿದುದನ್ನು (ಹಿಮಾಲಯದವರೆಗೆ), 'ವಲ್ಲಭ' ಪ್ರಶಸ್ತಿಗಲು ಸಮಕಾಲೀನ ಭಾರತದ ಎಲ್ಲಾ ರಾಜರ ಮೇಲೆ ಪಡೆದಿದ್ದ ಅಧಿರಾಜತ್ವವನ್ನು ಎತ್ತಿಹಿಡಿಯುತ್ತವೆ.

ಶೌರ್ಯಾಬಿಧಾನಗಳು ರಾಷ್ಟ್ರಕೂಟ ರಾಜಪ್ರಭುತ್ವದ ವಿಜಿಗೀಷುತೆಗೆ ಉತ್ತರ ಮತ್ತು ದಕ್ಷಿಣ ಭಾರತದ ದಿಗ್ವಿಜಯ ಮೇಲ್ಮೆಗೆ ಅವರು ಹೊಂದಿದ್ದ 'ಕರ್ನಾಟಕ ಬಲದ' ಅಮೋಘ ಸಾಧನೆಗೆ ಸಂಕೇತಗಲಾಗಿವೆ.

ಬಿಕ್ರ್ಯಾಬಿದಾನಗಳು ರಾಷ್ಟ್ರಕೂಟ ರಾಜಪ್ರಬುತ್ವದ ಧರ್ಮಪರಾಯಣತೆ ಧಾರ್ಮಿಕ ಪುನರುತ್ಥಾನಕ್ಕೆ, ಧರ್ಮಸಮಾನತೆಗೆ, ಧಾರ್ಮಿಕ ಪ್ರಗತಿಗ ದ್ಯೋತಕಗಲಾಗಿವೆ.

ಅಂತೆಯೇ 'ವರ್ಷ' ಪ್ರಿಯಾಭಿದಾನಗಳು ಮತ್ತು ಪೋಷಕ್ಯಾಧಾನಗಳು ರಾಷ್ಟ್ರಕೂಟ ರಾಜಪ್ರಭುತ್ವದ ಪಾಂಡಿತ್ಯ, ಕಲೆ, ಶೌರ್ಯ, ಧರ್ಮ ಮುಂತಾದುವುಗಳಿಗೆ ತೋರಿದ ಆದರಾಸಕ್ತಿಗಳು, ಕೊಟ್ಟ ಪುರಸ್ಕಾರ, ದಾನ, ಉದಾರ ಅಶ್ರಯ ಪೋಷಣೆಗಳನ್ನು ಎತ್ತಿ ತೋರಿಸುತ್ತವೆ.

ಅಲ್ಲದೆ ರಾಷ್ಟ್ರಕೂಟ ರಾಜರ ಶ್ರೇಷ್ಠತಾಭಿಧಾನಗಳೂ, ಸೌಂದರ್ಯಾಭಿಧಾನಗಳೂ ರಾಷ್ಟ್ರಕೂಟ ರಾಜಪ್ರಭುತ್ವದ ಹಿರಿಮೆ ಗರಿಮೆ ರಂಜಕತೆಯನ್ನು ಸಾಬೀತುಪಡಿಸುತ್ತವೆ.

ಹೀಗೆ ರಾಜಪ್ರಶಸ್ತಿಗಳ ಹಿನ್ನೆಲೆಯಲ್ಲಿ ರಾಷ್ಟ್ರಕೂಟ ರಾಜಪ್ರಭುತ್ವವನ್ನು ಅಖಿಲ ಭಾರತೀಯಸಾರ್ವಭೌಮತ್ವವುಳ್ಳ ಪ್ರಭಾವಶಾಲಿ ಪ್ರಜಾರಂಜಕ ಅಧಿಪತ್ಯವೆಂದು ಪರಿಗಣಿಸಬಹುದಾಗಿದೆ. ●

ಕೂ. ಸ. ಅಪರ್ಣ*

# ಶಾಸ್ತ್ರಗ್ರಂಥಗಳಲ್ಲಿ ನಿರೂಪಿತವಾದ ದೇವಾಲಯ ಮೇಲ್ಕಟ್ಟಡದ ರಚನೆ

ಷಡ್ವರ್ಗ ರೀತಿಯ ದೇವಾಲಯಗಳಲ್ಲಿ ಗ್ರೀವ, ಶಿಖರ, ಸ್ತೂಪಿ ಈ ಭಾಗಗಳನ್ನು ಕ್ರಮವಾಗಿ ನಾಲ್ಕು, ಐದು, ಆರನೇ ವರ್ಗಗಳೆಂದು ಗುರುತಿಸಲಾಗಿದ್ದು. ಈ ಮೂರನ್ನೂ ಒಟ್ಟಾಗಿ 'ಮೇಲ್ಕಟ್ಟಡ' (Super Structure) ಎಂದು ತಿಳುವಳಿಕೆಯ ಅನುಕೂಲಕ್ಕಾಗಿ ಹೇಳಬಹುದಾಗಿದೆ. ಡಾ॥ ಬಾ.ರಾ.ಗೋಪಾಲ್ ಅವರೂ ವಿಷ್ಣುಧರ್ಮೋತ್ತರ ಪುರಾಣದ ಹಿನ್ನೆಲೆಯಲ್ಲಿ ಇದನ್ನು ಮೇಲ್ಕಟ್ಟಡವೆಂದೇ ಉಲ್ಲೇಖಿಸಿದ್ದಾರೆ (ವಾಸ್ತುಕಲೆ, ಪು.೩೦). ಈ ಭಾಗಗಳ ಬಗ್ಗೆ ವಿವಿಧ ಶಾಸ್ತ್ರಗ್ರಂಥಗಳು ನಿರೂಪಣೆ ಮಾಡಿದ್ದು, ಆ ಗ್ರಂಥಗಳಲ್ಲಿ ಮೇಲ್ಕಟ್ಟಡದ ವಿವಿಧ ಪ್ರಕಾರಗಳ ಬಗ್ಗೆಯೂ ವಿವರಸಲಾಗಿದೆ.[1]

ಗ್ರೀವವನ್ನು ಗ್ರಂಥಗಳು ಗಲ, ಕಂಧರ, ಕಂಠ ಇತ್ಯಾದಿಯಾಗಿ ಹೇಳಿವೆ. ಗ್ರೀವದ ಕೆಳಗೆ ವೇದಿ ಇರಬೇಕೆಂದೂ (ಮಯ-೨೧-೬೭, ವಿ.ಕಲ್ಪ-ಪ.೯, ಪುಟ-೪೦, ಅಜಿ-೧೪.೬೫), ಈ ವೇದಿಯಲ್ಲಿ ಕುಡ್ಯಸ್ತಂಭವಿರಬೇಕೆಂದೂ (ಮಯ-೧೮.೩) ನಿಯಮವಿದೆ. ಈ ವೇದಿ ಮತ್ತು ಗ್ರೀವವು ಮೇಲಿರುವ ಶಿಖರದ ಆಕಾರವನ್ನು ಹೋಲುತ್ತಿರಬೇಕೆಂದು ಗ್ರಂಥಗಳು ಹೇಳಿರುವುದು (ಅದೇ ೧೮.೧೨-೧೩, ಮಾನ ೧೮.೪೫-೪೬) ಸೂಕ್ತವಾಗಿದೆ. ಗ್ರೀವವು ಚತುರಶ್ರ, ಅಷ್ಟಾ[...] ಅಥವಾ ವೃತ್ತಾಕಾರದಲ್ಲಿರಬಹುದು (ವಿ.ಕಲ್ಪ-೯.೪೦) 'ಗ್ರೀವಕೋಷ್ಠ'ದ ಉಲ್ಲೇಖವು ಗ್ರಂಥಗಳಲ್ಲಿದ್ದು (ಮಯ[...] ೨೨.೫೨, ೭೪-೭೫) ಗ್ರೀವಭಾಗದಲ್ಲಿರುವ ನಾಸಿಯನ್ನು 'ಗ್ರೀವನಾಸಿಕಾ' (ವಿ.ಕಲ್ಪ-೯.೪೨) ಎನ್ನಲಾಗಿದೆ. [...] ನಾಸಿಕದ ಕೆಳಗಿರುವ ಸ್ತಂಭಗಳಿಗೆ 'ನಕುಲಾಂಘ್ರಿ' (ಕಾಶ್ಯ[...] ೨೦.೭) ಎಂದು ಹೆಸರು. ಗ್ರೀವದ ಮೇಲೆ ಮತ್ತೆ ಪ್ರಸ್ತರದ[...] ಅಂಗಗಳು ಇರುವುದನ್ನು ಗ್ರಂಥಗಳು (ಅದೇ.೯.೪೧, ಮಯ[...] ೧೮-೫-೭, ಕಾಶ್ಯ-೨೦-೮-೧೩) ಹೇಳಿವೆ.

ಗ್ರೀವಾಧರದ ಮೂಲೆಗಳಲ್ಲಿ ವಾಹನವಿರಬೇಕು ಮತ್ತು[...] ಅದು ಆಯಾ ದೇವತೆಯ ಬಲಕ್ಕಿರಬೇಕು (ಮಯ-೧೯.೪೭[...] ೪೮). 'ಮಾನಸಾರ'ದ ಪ್ರಕಾರ, ಶಿವ ದೇವಾಲಯಗಳಲ್ಲಿ[...] ಪ್ರಸ್ತರದ ಮೇಲೆ ಮೂಲೆಗಳಲ್ಲಿ ವೃಷಭವನ್ನು ಸ್ಥಾಪಿಸಬೇಕು[...] ಶಿವೇತರದೇವಾಲಯಗಳಲ್ಲಿ ಅವರವರ ಅಭಿರುಚಿಗೆ ತಕ್ಕಂ[...] ಬಿಂಬವನ್ನು ಮಾಡಬೇಕು (೧೯.೧೧೪-೧೧೬), ಪ್ರಸ್ತರದ[...] ಮೇಲಿರುವ ಬಿಂಬಗಳು ಕುಳಿತಿರಬೇಕು ಅಥವಾ ಮಲಗಿ[...]ಬೇಕು (ಅದೇ. ೧೯ ೧೨೫).

ಗ್ರೀವದ ಮೇಲಿನ ಭಾಗವಾದ 'ಶಿಖರ'ಕ್ಕೆ ಶಿರ, ಶಿರಸ್[...]

* ೧೬೪೩, ೧೭ನೇ ಮುಖ್ಯ ರಸ್ತೆ, ಬನಶಂಕರಿ ಮೊದಲನೇಹಂತ, ಬೆಂಗಳೂರು ೫೬೦೦೫೦

1. ಮಯಮತ = (ಮಯ) ಮತ್ತು ಮಾನಸಾರ =(ಮಾನ) ಗ್ರಂಥಗಳಲ್ಲಿ ೧೮ ರಿಂದ ೨೧ರವರೆಗಿನ ಅಧ್ಯಾಯಗಳು ಕ್ರಮವಾಗಿ ಮೇಲ್ಕಟ್ಟ[...] (ತಳರಹಿತ), ಏಕತಲ, ದ್ವಿತಲ ಮತ್ತು ತ್ರಿತಲ ದೇವಾಲಯಗಳನ್ನು ವಿವರಿಸಿವೆ. ಮಯಮತದ ೨೨ನೇ ಅಧ್ಯಾಯ ಮತ್ತು ಮಾನಸಾರದ ೨೨ ರಿಂ[...] ೩೦ರವರೆಗಿನ ಅಧ್ಯಾಯಗಳು ೪ ರಿಂದ ೧೨ ತಲಗಳುಳ್ಳ ದೇವಾಲಯಗಳನ್ನು ವಿವರಿಸಿವೆ. ಕಾಮಿಕಾಗಮ (=ಕಾಮಿ) ಮತ್ತು ಕಾಶ್ಯಪಶಿಲ್ಪಗಳ[...] (=ಕಾಶ್ಯ) ೧೬ ತಲಗಳವರೆಗಿನ ದೇವಾಲಯಗಳ ರಚನೆಯನ್ನು ವಿವರಿಸಿವೆ. ಕಾಶ್ಯಪಶಿಲ್ಪದಲ್ಲಿ, ೨೦ ರಿಂದ ೪೧ನೇ ಅಧ್ಯಾಯಗಳವರೆಗೆ ಈ ವಿವರ[...] ಇದ್ದು, ೨೮,೨೯ ಮತ್ತು ೩೦ನೇ ಅಧ್ಯಾಯಗಳು ಕ್ರಮವಾಗಿ ದ್ವಿತಳ, ತ್ರಿತಳ ಮತ್ತು ಚತುಷ್ತಳ ದೇವಾಲಯಗಳಿಗೆ ಸಂಬಂಧಿಸಿದ್ದಾಗಿವ[...] ಕಾಮಿಕಾಗಮದಲ್ಲಿ, ೬೦ನೇ ಅಧ್ಯಾಯವೊಂದರಲ್ಲೇ ಈ ಎಲ್ಲ ವಿವರಗಳಿವೆ. ವಿಮಾನಾರ್ಚನ ಕಲ್ಪವು (=ವಿ.ಕಲ್ಪ) ಒಟ್ಟು ೮ ತಲಗ[...] ದೇವಾಲಯಗಳನ್ನು ೯ ಮತ್ತು ೧೦ನೇ ಪಟಲಗಳಲ್ಲಿ ವಿವರಿಸಿದೆ. ಅಜಿತಾಗಮ (=ಅಜಿ) ಮತ್ತು ರೌರವಾಗಮಗಳಲ್ಲಿ (=ರೌರವ) ತಲಗಳ ಹೆಚ್ಚ[...] ವಿವರಣೆ ಇಲ್ಲ; ಅವುಗಳ ಕ್ರಿಯಾಪಾದ ಭಾಗದಲ್ಲಿ ಕ್ರಮವಾಗಿ ೧೯ ಮತ್ತು ೩೯ನೇ ಪಟಲಗಳಲ್ಲಿ ಮೇಲ್ಕಟ್ಟಡವನ್ನು ವಿವರಿಸಲಾಗಿದೆ.

ರ್ಷ, ಶೀರ್ಷಕ, ಮಸ್ತಕ- ಇತ್ಯಾದಿ ಪರ್ಯಾಯ ಪದಗಳಿವೆ. ಖರವು ಚೌಕ, ವೃತ್ತ, ಷಡಶ್ರ, ಅಷ್ಟಾಶ್ರ, ಗೋಲಕ- ಈ ಕಾರಗಳಲ್ಲಿರಬಹುದು. (ಮಯ.೧೮.೧೫-೧೬). ಶಿಖರ ಲ್ಲಿರುವ ನಾಸಿಗೆ 'ಮಹಾನಾಸಿ' (ಅದೇ, ೨೧.೯-೧೦, .ಕಲ್ಪ-೯.೪೩, ಕಾಶ್ಯ-೨೨.೩) ಎಂದು ಹೆಸರು. ವಿದಿಕ್ಕು ಳಲ್ಲಿ ಇರುವ ನಾಸಿಯನ್ನು ಕಾಶ್ಯಪಶಿಲ್ಪವು 'ಭದ್ರನಾಸಿ' ಂದಿದ್ದರೂ (೨೭.೪೯), ಅದನ್ನೇ 'ಮಹಾನಾಸಿ' ಎಂದೂ ುರುತಿಸಿದೆ (೩೦.೩೦). ನಾಸಿಕಾಂಘ್ರಿಯ ಮಧ್ಯದಲ್ಲಿ ಮೂರ್ತಿಯನ್ನು ಸ್ಥಾಪಿಸಬೇಕು (ಕಾಶ್ಯ.೨೨.೧೭). ಶಿಖರದ ುದಿಯಲ್ಲಿರುವ ಕಮಲವನ್ನು ಗ್ರಂಥಗಳು 'ಪದ್ಮತುಂಗ' ಂದಿವೆ (ಮಯ-೧೮-೧೮-೧೯: ಕಾಶ್ಯ-೨೧.೧೦; .ಕಲ್ಪ-೯.೪೧). ಇದೂ ಕೂಡ ಶಿಖರದ ಆಕಾರವನ್ನೇ ಹೋಲುತ್ತದೆ. 'ಮಹಾಪದ್ಮ' ಎಂದು ಸಾಮಾನ್ಯವಾಗಿ ರೆಯಲ್ಪಡುವ ಈ ಪದ್ಮದ ಮೇಲೆ ಸ್ತೂಪಿ ಇರಬೇಕು. ಮಾನ.೧೯.೨೫, ೧೮.೫೧; ಕಾಶ್ಯ-೨೯.೩೦; ರೌರವಾ- .೯.೨೩ ; ಕಾಮಿ-೬೦.೨೭).

ಸ್ತೂಪಿಯನ್ನು ಶಿಖಾ, ಕುಂಭ, ಘಟ-ಎಂದು ಗ್ರಂಥಗಳಲ್ಲಿ ಕರೆಯಲಾಗಿದೆ. ಪ್ರಾಸಾದದಲ್ಲಿ ಮೂರು, ಎರಡು ಅಥವಾ ಒಂದು ಸ್ತೂಪಿಯಿರಬೇಕು (ಮಾನ-೧೮.೪೬). ಇದನ್ನು ಸುವರ್ಣ, ರಜತ, ತಾಮ್ರದಿಂದ ಮಾಡಬಹುದು (ಅಜಿ-೧೪.೯೦). ಗ್ರೀವದಿಂದ ಸ್ತೂಪಿಯವರೆಗೂ ಆಕಾರವು ಒಂದೇ ರೀತಿಯಾಗಿರಬೇಕೆಂಬ ಸೂಚನೆಯು ಗ್ರಂಥಗಳಲ್ಲಿದೆ. ಸ್ತೂಪಿಯಲ್ಲೂ ವಿವಿಧ ಅಂಗಗಳನ್ನು ಗ್ರಂಥಗಳು ಗುರುತಿಸಿದ್ದು (ಅದೇ.೧೪.೮೮-೮೯, ಮಾನ- ೧೮.೫೬-೬೩, ಕಾಶ್ಯ.೨೧.೧೪-೧೭, ವಿ.ಕಲ್ಪ-೯.೪೨), ಪದ್ಮ, ಘಟ, ಕಂಧರ, ಮುಕುಲಗಳನ್ನು ಮುಖ್ಯಭಾಗಗಳೆಂದು ಹೇಳಬಹುದಾಗಿದೆ. ಶಿಖರಾಕೃತಿಯಲ್ಲಿ ಕುಂಭ, ಫಲಿಕಾ (ಪಾಲಿಕಾ?), ಕೂಶ್ಮಲ (=ಕುಡ್ಮಲ) ಇರಬೇಕೆಂದು ಕಾಶ್ಯಪಶಿಲ್ಪವು ಹೇಳಿದರೆ (೨೧.೧೮), ಸ್ತೂಪಿಯ ತುದಿಯಲ್ಲಿರುವ ಕಮಲದ ಮೊಗ್ಗೂ ಕೂಡ ಚೌಕ, ಅಷ್ಟಮುಖ, ಹದಿನಾರು ಮುಖ, ವೃತ್ತ ಅಥವಾ ಶಿಖರದ ಆಕಾರದಲ್ಲಿ ಇರಬಹುದಾಗಿದ್ದು, ಅಲಂಕಾರಕ್ಕೆ ಹೊಂದುವಂತಿರಬೇಕೆಂದು ಮಯಮತವು ಸೂಚಿಸಿದೆ (೧೮.೮೯-೯೦). ಸ್ತೂಪಿಯು ವೃತ್ತ ಅಥವಾ ಚೌಕಾಕಾರವಾಗಿ ಇರಬಹುದಾಗಿದ್ದು, ಪದ್ಮದಿಂದ ಕುಡ್ಮಲದವರೆಗೆ ಅದೇ ರೀತಿಯಾಗಿರಬೇಕೆಂದು ಮಾನಸಾರವು ಹೇಳಿದೆ (೧೮.೫೧).

ಈ ರೀತಿ ಷಡ್ವರ್ಗಗಳಿಂದ ಕೂಡಿದ ರಚನೆಯು 'ಏಕತಲ ದೇವಾಲಯ' ಎನಿಸಿದ್ದು, ಇವುಗಳ ಮೇಲ್ಕಟ್ಟಡದಲ್ಲಿರಬೇಕಾದ ಬಿಂಬಗಳೆಂದರೆ, ಪೂರ್ವಕ್ಕೆ ನಂದಿ ಮತ್ತು ಕಾಲ, ದಕ್ಷಿಣಕ್ಕೆ-ದಕ್ಷಿಣಾಮೂರ್ತಿ, ಪಶ್ಚಿಮಕ್ಕೆ-ಅಚ್ಯುತ ಅಥವಾ ಲಿಂಗಸಂಭೂತ; ಉತ್ತರಕ್ಕೆ ಪಿತಾಮಹ; ಇವು ಕುಳಿತಿರಬಹುದು ಅಥವಾ ನಿಂತಿರಬಹುದು (ಮಯ-೧೯.೩೯-೪೨)[2]

ಎಂಟರಿಂದ ಹದಿನಾರು ತಲಗಳುಳ್ಳ ದೇವಾಲಯಗಳನ್ನು ರಚಿಸುವುದರ ಬಗ್ಗೆ ವಿವರಗಳಿದ್ದು, ತಲಗಳನ್ನು ಗ್ರಂಥಗಳು ಭೂ, ಭೂಮಿ ಎಂದೂ ಕರೆದಿವೆ. ಒಂದಕ್ಕಿಂತ ಹೆಚ್ಚು, ತಲಗಳಿದ್ದಾಗ, ಆದಿತಲದಂತೆಯೇ ಪ್ರತಿ ತಲದಲ್ಲೂ ಸ್ತಂಭ ಮತ್ತು ಪ್ರಸ್ತರಗಳು ಪುನರಾವರ್ತವಾಗುತ್ತವೆಂದು ಗ್ರಂಥಗಳು ಸೂಚಿಸಿವೆ. ತಲಗಳಲ್ಲಿ ಮುಖ್ಯವಾಗಿ ಕಂಡುಬರುವ ಅಂಗಗಳೆಂದರೆ, ಕೂಟ, ಶಾಲಾ, ಪಂಜರ-ಇತ್ಯಾದಿಗಳು. ಶಾಲಾಗೆ ಕೋಷ್ಠ, ಕೋಷ್ಠಕ, ಮಧ್ಯಕೋಷ್ಠ-ಇತ್ಯಾದಿ ಪರ್ಯಾಯ ಪದಗಳಿವೆ. ಇದನ್ನು ಮೇಲ್ಕಟ್ಟಡದಲ್ಲಿ ಮಧ್ಯೆ ರಚಿಸಬೇಕು ಮತ್ತು ಅದಕ್ಕೆ ಅನೇಕ ಸ್ತೂಪಿ ಇರಬೇಕು (ಮಯ.೨೨.೮೪-೮೫)[3]. 'ಶಾಲಾ'ದಲ್ಲಿ ಮಧ್ಯೆ ಇರುವ ನಾಸಿಗೆ 'ಅಲ್ಪನಾಸಿ' ಎಂದು ಹೆಸರಾದರೂ, ಕಾಶ್ಯಪಶಿಲ್ಪದಲ್ಲಿ ಒಂದೆಡೆ ಇದನ್ನು 'ಮಹಾನಾಸಿ' ಎನ್ನಲಾಗಿದೆ (೩೦.೪೦). ಕಾಮಿಕಾಗಮದ ಪ್ರಕಾರ, 'ಸೌಷ್ಠಿಕ'ವು ಕೂಟದ ಪರ್ಯಾಯ ಪದ (೬೦.೧೮). ಕೂಟವು ಮೂಲೆಗಳಲ್ಲಿರಬೇಕೆಂದಿದ್ದು (ಮಯ.೭೮-೭೯), ಈ ಕಾರಣವಾಗಿಯೇ ಅದು 'ಕರ್ಣಕೂಟ' ವೆಂದು ಸಾಮಾನ್ಯವಾಗಿ ಗುರುತಿಸಲ್ಪಡುತ್ತದೆ. ಕೂಟವು ಚೌಕ, ಅಷ್ಟಮುಖ, ವೃತ್ತಾಕಾರ, ಹದಿನಾರು ಮುಖ- ಈ ಆಕಾರಗಳಲ್ಲಿರ ಬಹುದೆಂದು ಮಯಮತ ಮತ್ತು ಕಾಶ್ಯಪಶಿಲ್ಪಗಳು ಹೇಳಿವೆ (೨೨-೮೨-೮೩, ೨೧,೪೫-೪೮ ಮತ್ತು ೩೦.೪೪). ಇದರ ಮೇಲೆ ಸ್ತೂಪಿ ಇದ್ದು, ಮಧ್ಯೆ

2 ಕಾಶ್ಯಪಶಿಲ್ಪವು ಪೂರ್ವಕ್ಕೆ ಸ್ಕಂದನನ್ನು ಹೇಳಿದೆ (೨೭.೫೬-೫೭); ವಿಮಾನಾರ್ಚನ ಕಲ್ಪವು, ಪೂರ್ವಕ್ಕೆ ನೃಸಿಂಹ, ದಕ್ಷಿಣಕ್ಕೆ ದಕ್ಷಿಣಾಮೂರ್ತಿ ಪಶ್ಚಿಮಕ್ಕೆ ಅಚ್ಯುತ ಮತ್ತು ಉತ್ತರಕ್ಕೆ ಅನಿರುದ್ಧನನ್ನು ಹೇಳಿದೆ. (ಪ.೯).

3. ಇದೇ ಸಂದರ್ಭದಲ್ಲಿ (ಶಾಲಾ) 'ಮಧ್ಯೆ ಇರದೆ ಹಿಂದೆ ಇದ್ದರೆ, ಹಸ್ತಿಪೃಷ್ಠದಂತಿರಬೇಕು; ಮುಂಭಾಗವು ಶಾಲಾಕಾರದಲ್ಲಿರಬೇಕು' ಎಂದು ಹೇಳಿರುವುದು 'ಶಾಲಾ'ಗೆ ಅನ್ವಯಿಸುವಂತೆ ತೋರುವುದಿಲ್ಲ.

ನಾಸಿ ಇರಬೇಕು (ಮಯ- ೨೨.೮೨-೮೩; ಮಾನ-೨೦.೩೪). ಇದರೊಂದಿಗಿರುವ 'ಪಂಜರ'ವು ಕೂಟ ಮತ್ತು ಕೋಷ್ಠದ ಮಧ್ಯೆ ಇರಬೇಕು (ಮಯ. ೨೨.೭೮-೭೯, ಕಾಶ್ಯ ೨೮.೩). ಪಾರ್ಶ್ವಗಳಲ್ಲಿ ತೆರೆದ ರಚನೆ ಇದ್ದು(?) (ಪಾರ್ಶ್ವವಕ್ತ್ರ), 'ಹಸ್ತಿತುಂಡ'ದಿಂದ ಅಲಂಕರಿಸಬಹುದು (ಮಯ-೨೨.೮೪-೮೫). ಇವು ಒಟ್ಟಾರೆಯಾಗಿ 'ಹಾರ' ಎನಿಸಿದ್ದು (ಅದೇ ೨೧.೬-೭) ಇವೆಲ್ಲವೂ 'ವೇದಿ'ಯಿಂದ ಕೂಡಿರಬೇಕು (ಅದೇ.೧೯.೪೮-೪೯). ಇವುಗಳಲ್ಲದೆ, ತಲಗಳಲ್ಲಿ ಇರುವ ಇತರ ಅಂಗಗಳೆಂದರೆ, ನಾಸಿಕೋಷ್ಠಗಳು, ಇದನ್ನು ಗ್ರಂಥಗಳು ಕ್ಷುದ್ರನೀಡ, ಅಲ್ಪನೀಡ, ಕ್ಷುದ್ರಪಂಜರ ಎಂದು ಪರ್ಯಾಯವಾಗಿ ಕರೆದಿವೆ. ಇಷ್ಟೇ ಅಲ್ಲದೆ, ಕಾಶ್ಯಪಶಿಲ್ಪದಲ್ಲಿ 'ವೃತ್ತಸ್ಫುಟಿತ'ದ ಉಲ್ಲೇಖವೂ (೨೫.೩೫) ಇದೆ. ಈ ಅಂಗಗಳು 'ಹಾರಾಂತರ'ದಲ್ಲಿ ಇರುವುವು (ಕಾಶ್ಯ-೩೦.೪೩ ;ರೌರವ-೩೯.೧೧). ಹಾರಾಂತರದಲ್ಲಿ ಸ್ತಂಭವನ್ನು ರಚಿಸಬೇಕು (ಮಯ-೨೦.೩೭). ಈ ಭಾಗದಲ್ಲಿ ಕಾಣುವ ಭಿತ್ತಿಯನ್ನು 'ಗೃಹಪಿಂಡಿ' ಎಂದು ರೌರವಾಗಮವು ಗುರುತಿಸಿದೆ(೩೯.೧೦). ಹೀಗೆ ರಚಿಸುವಾಗ, ಕೂಟ-ಶಾಲಾಗಳ 'ಹಾರ'ವು ಈ ಭಿತ್ತಿ ಮೇಲ್ಕಟ್ಟಡಕ್ಕೆ ಸೇರಿದಂತಿದ್ದರೆ, ಅದಕ್ಕೆ 'ಅರ್ಪಿತಹಾರ' ಎಂದೂ, ಸೇರದಂತಿರದಿದ್ದಲ್ಲಿ ಅದಕ್ಕೆ ಅನರ್ಪಿತಹಾರ, ಅನರ್ಪಿತ ಪ್ರಾಸಾದ (ಮಯ.೨೧.೬೫) ಎಂದೂ ಹೆಸರು. ಅನರ್ಪಿತ ಹಾರವಿದ್ದಲ್ಲಿ, ತಳದಿಂದ ತಳಕ್ಕೆ ನಡುವೆ ಓಡಾಡಲು ಸ್ಥಳವಿದ್ದು, ಅದನ್ನು ಅಲಿಂದ್ರ/ಅಲಿಂದ ಎಂದು ಗ್ರಂಥಗಳು ಗುರುತಿಸಿವೆ. (ಅದೇ.೨೧.೬೪-೬೫; ರೌರವ ೩೯.೧೦; ವಿ.ಕಲ್ಪ-೯.೪೫; ಕಾಮಿ-೬೦.೧೦೫). ಇಂತಹ ರಚನೆಗಳಲ್ಲಿ ಒಂದು ಹಾರ, ತಲವು ಕೆಳಕಟ್ಟಡದ ಪ್ರಸ್ತರದ ಮೇಲಿರುತ್ತದೆ. ಇದನ್ನು 'ಖಂಡಭವನ' ಎಂದು ಮಯಮತವೂ (೨೧.೫೨-೫೪), 'ಖಂಡಹರ್ಮ್ಯ' ಎಂದು ಕಾಮಿಕಾಗಮವೂ (೬೦.೧೦೫) ಗುರುತಿಸಿದೆ.

ಇದರೊಂದಿಗೇ ಗಮನಿಸಬೇಕಾದ ಮತ್ತೊಂದು ರಚನೆಯೆಂದರೆ, ಮುಖಭದ್ರ. 'ಮಾನಸಾರ'ದಲ್ಲಿ ಇದರ ರಚನೆಯ ಬಗ್ಗೆ ಪ್ರತ್ಯೇಕ ವಿವರವಿದೆ (೧೮.೧೩೭-೧೬೮). ಇದರಲ್ಲಿ ವೇದಿ, ಗ್ರೀವ, ತಲ (=ಶಿಖರ?); 'ಶಿಖಾ'ದ ಉಲ್ಲೇಖವಲ್ಲದೆ, 'ನಾಸಿಕಾ'ದ ಸುದೀರ್ಘ ವಿವರಣೆ ಇದೆ. ಅಲ್ಲದೆ, ಇದನ್ನು ಶಿಖರಕ್ಕೆ ಲಂಬವಾಗಿ ಅಥವಾ ಪ್ರಸ್ತರದ ಮೇಲೆ ರಚಿಸಬೇಕೆಂದಿದೆ. ಈ ವಿವರಗಳು 'ಸುಖನಾಸಿ'ಯ ರಚನೆಯನ್ನು ಬಹುಪಾಲು ಹೋಲುತ್ತಿರುವಂತಿದೆ. ದಾಕ್ಷಿಣಾತ್ಯ ರೀತಿಯ ಗ್ರಂಥಗಳಲ್ಲಿ 'ಸುಖನಾಸಿ'ಯ ಉಲ್ಲೇಖವಿಲ್ಲದಿರುವುದನ್ನು ಇಲ್ಲಿ ಗಮನಿಸಬೇಕು ಅಂತೆಯೇ, ಈಗ ನಾವು 'ಸುಖನಾಸಿ' ಎಂದು ಗುರುತಿಸು ಅಂಗವು, ಹೆಸರಿಗೆ ತಕ್ಕಂತಿರುವ ಉತ್ತರ ಭಾರತ 'ಸುಖನಾಸಿ'ಗಳಿಗಿಂತ ಭಿನ್ನವಾದ ರಚನೆಯನ್ ಹೊಂದಿರುವುದನ್ನೂ ಗುರುತಿಸಬಹುದು. ಹೀಗೆ ನೋಡಿದಾಗ 'ಸುಖನಾಸಿ'ಗೆ ಪರ್ಯಾಯವಾಗಿ 'ಮುಖಭದ್ರ'ದ ರಚನೆಯನ್ ಈ ಗ್ರಂಥವು ಸೂಚಿಸಿರುವಂತೆ ಕಂಡುಬರುತ್ತದೆ. ಅಥವ ಶಿಲ್ಪಿಯೇ ಈ ವಿವರಗಳ ಸಹಾಯದಿಂದ ಸುಖನಾಸಿ ಪರ್ಯಾಯವಾದ ರಚನೆಯನ್ನು ತಂದಿರಬಹುದು. ಮಯಮ ದಲ್ಲಿರುವ, ('ಶಾಲಾ'ವು ಮಧ್ಯೆ ಇರದೆ ಹಿಂದೆ ಇದ್ದರೆ ಹಿಂಭಾಗ ಹಸ್ತಿಪೃಷ್ಠದಂತಿದ್ದು, ಮುಂಭಾಗ ಶಾಲಾಕಾರದಲ್ಲಿರಬೇಕು (೨೨.೮೪-೮೫) ಎಂಬ ಹೇಳಿಕೆಯ 'ಶಾಲಾ'ಗೆ ಅನ್ವಯಿಸದೆ, ಬಹುಶಃ ಮುಖಭದ್ರ ರೀತಿಯ ರಚನೆಗೇ ಅನ್ವಯಿಸುವಂತಿದೆ ಮಯಮತ ಮತ್ತು ಕಾಮಿಕಾಗಮಗಳು ಕೂಟ, ಶಾಲಾದೊಂದಿಗೇ ಈ ರಚನೆಯನ್ನು ಹೇಳಿದ್ದು, ಇದನ್ನು 'ಮಧ್ಯಭದ್ರ' ಎಂದು


ಕಂಬದಹಳ್ಳಿಯ ತ್ರಿಕೂಟ ಬಸದಿಯ ಒಂದು ಬಸದಿ
'ದ್ವಿತಳಪರ್ವತ' ರೀತಿ

ರೆದಿವೆ. ಇದರಿಂದಾಗಿ, 'ಸುಖನಾಸಿ' ಯನ್ನು ದಾಕ್ಷಿಣಾತ್ಯ ಗ್ರಂಥಗಳು ಮುಖಭದ್ರ/ಮಧ್ಯಭದ್ರ ಎಂದಿರುವುದು ಸ್ಪಷ್ಟವಾಗುತ್ತದೆ.

ಹೀಗೆ ವಿವಿಧ ಅಂಗಗಳಿಂದ ಕೂಡಿದ ಮೇಲ್ಕಟ್ಟಡದಲ್ಲಿ ವಿವಿಧ ಪ್ರಕಾರಗಳನ್ನು ಗ್ರಂಥಗಳು ಗುರುತಿಸಿವೆ. ಮೊದಲಿಗೆ ಹೇಳುವುದಾದರ, ಏಕತಲ ದೇವಾಲಯಗಳನ್ನು ಅವು ಮೂರು ರೀತಿಯಲ್ಲಿ ವರ್ಗೀಕರಿಸಿವೆ. ಮೊದಲನೇ ರೀತಿಯು ವರ್ಗೀಕರಣಕ್ಕೆ ವಿವಿಧ ಅಳತೆಗಳಲ್ಲಿನ ವಿಭಿನ್ನತೆಯು ಆಧಾರವಾಗಿದ್ದರೆ, ಎರಡನೇ ರೀತಿಯ ವರ್ಗೀಕರಣದಲ್ಲಿ, ಗ್ರೀವ ಮತ್ತು ಶಿಖರದ ಆಕಾರವನ್ನೂ, ಅದರಲ್ಲಿರುವ ಕರ್ಣಕೂಟ ಮತ್ತು ಮಧ್ಯಭದ್ರವನ್ನೂ ಗಮನಿಸಲಾಗಿದೆ. ಇದರಂತೆ, ಗ್ರೀವ ಮತ್ತು ಶಿಖರವು ವೃತ್ತಾಕಾರವಾಗಿದ್ದರೆ-ವೈಜಯಂತ ; (ಕಾಮಿಕಾಗಮದಲ್ಲಿ 'ವಿಜಯ' ಎಂದಿದೆ.) ; ಅದರಲ್ಲಿ ಕರ್ಣಕೂಟ ಇದ್ದರೆ-ಶ್ರೀಭೋಗ ;(ಮಾನಸಾರದಲ್ಲಿ 'ಭೋಗ' ಎಂದಿದೆ.) ; ಮಧ್ಯಭದ್ರ ಇದ್ದರೆ-ಶ್ರೀವಿಶಾಲ; ಶಿಖರವು ಎಂಟು ಮುಖವಾಗಿದ್ದರೆ-ಸ್ವಸ್ತಿಬಂಧ ; ಅದೇ ಚೌಕಾಕಾರವಾಗಿದ್ದರೆ-ಶ್ರೀಕರ ; ವಿನ್ಯಾಸವು ಚೌಕಾಕಾರವಾಗಿದ್ದು, ಶಿಖರವು ದ್ವ್ಯಶ್ರವೃತ್ತದಲ್ಲಿದ್ದರೆ-ಹಸ್ತಿಪೃಷ್ಠ ; ಶಿಖರವು ವೃತ್ತ ಅಥವಾ ಚೌಕಾಕಾರವಾಗಿದ್ದು, ಕರ್ಣಕೂಟ ಮತ್ತು ನಾಸಿಯಿರುವ ಮಧ್ಯಭದ್ರ ಇದ್ದರೆ-ಕೇಸರ (ಕಾಮಿಕಾಗಮದಲ್ಲಿ ಚೌಕಾಕಾರದ ಗಲ ಮತ್ತು ಶಿರವನ್ನು ಮಾತ್ರ ಹೇಳಲಾಗಿದೆ ;ಮಾನಸಾರದಲ್ಲಿ, ಕರ್ಣಕೂಟ, ಭದ್ರ, ಶಾಲಾನಾಸಿ ಇದ್ದು, ಮಧ್ಯದ ಭದ್ರವು ವಿಶಾಲವಾಗಿದ್ದರೆ, ಅದು 'ಕೇಶರ'ರೀತಿ ಎಂದಿದೆ.) ಈ ರೀತಿಯಾಗಿ ಬೇರೆ ಬೇರೆ ಹೆಸರನ್ನು ಗ್ರಂಥಗಳು ನೀಡಿವೆ (ಮಯ-೧೯.೩೧-೩೪; ಮಾನ-೧೯.೯೧-೯೫;ಕಾಮಿ-೬೦.೬-೧೧) ಅಲ್ಲದೆ, ಗ್ರೀವ ಮತ್ತು ಶಿಖರವು ಆರು ಮುಖವಾಗಿದ್ದರೆ, ಸ್ಕಂಧತಾರ ಮತ್ತು ಸ್ಕಂಧಕಾಂತ ಎಂದು ಮಾನಸಾರ (೧೮.೯೩) ಮತ್ತು ಕಾಮಿಕಾಗಮಗಳು (೬೦.೯) ಕ್ರಮವಾಗಿ ಗುರುತಿಸಿವೆ. ಭದ್ರನಾಸ್ಯಂಗ ಮತ್ತು ಶಿಖರವು ವೃತ್ತಾಕಾರವಾಗಿದ್ದರೆ 'ಕೋಷ್ಠಕ' ರೀತಿಯೆಂದು ಕಾಮಿಕಾಗಮವು ಹೇಳಿದೆ (೬೦.೧೧).

ಈ ವರ್ಗೀಕರಣದಲ್ಲಿ, ಏಕತಲ ದೇವಾಲಯಗಳನ್ನು ವಿಂಗಡಿಸುವಾಗ, ಕೂಟ, ಶಾಲಾ, ಮಧ್ಯಭದ್ರ-ಇತ್ಯಾದಿಗಳನ್ನು ಹೇಳಿರುವುದು (ಮಾನ.೧೯.೨೭.೨೯) ಅನುಮಾನಕ್ಕೆಡೆಯಾಗಿದೆ. ಮಾನಸಾರದಲ್ಲಿ ಒಂದೆಡೆ,



ಕಂಬದಹಳ್ಳಿಯ ತ್ರಿಕೂಟ ಬಸದಿಯ ಒಂದು ಬಸದಿ
'ದ್ವಿತಳವಿಷ್ಣು ಕಾಂತ' ರೀತಿ

ಪ್ರಸ್ತರದ ಮೇಲೆ (೧೯.೨೬), ಪ್ರಚ್ಛಾದನಕ್ಕೆ ಆಲಂಕಾರಿಕವಾಗಿ (೨೧.೫) ಕರ್ಣಹರ್ಮ್ಯವನ್ನು ರಚಿಸಬೇಕೆಂದಿದೆ ; ಅಂತೇ ಮಧ್ಯಭದ್ರವು ಸುಖನಾಸಿಯನ್ನು ಸೂಚಿಸುತ್ತಿರಬೇಕು. ಈ ದೃಷ್ಟಿಯಿಂದ ನೋಡಿದಾಗ, ಈ ವಿವರಣೆಗಳು 'ತಲ'ಗಳನ್ನು ಸೂಚಿಸುವುದಿಲ್ಲವೆಂಬುದು ಸ್ಪಷ್ಟವಾಗುವುದಲ್ಲದೆ, ಈ ವರ್ಗೀಕರಣವು ಕೆಲಮಟ್ಟಿಗೆ ಮಾತ್ರ ಸಮಂಜಸವಾಗಿದೆ ಎನಿಸುತ್ತದೆ. ಏಕೆಂದರೆ, ಪ್ರಾತ್ಯಕ್ಷಿಕವಾಗಿ ದೇವಾಲಯ ರಚನೆಯನ್ನು ಗಮನಿಸಿದಾಗ, ಏಕತಲ ದೇವಾಲಯಗಳಲ್ಲಿ ಪ್ರಸ್ತರದ ಮೇಲೆ ಕರ್ಣಹರ್ಮ್ಯವಾಗಲೀ, ಮಧ್ಯಭದ್ರವಾಗಲೀ ಕಂಡುಬರುವುದಿಲ್ಲ ; ಕೆಲವು ಪ್ರಾಚೀನ ದೇವಾಲಯಗಳಲ್ಲಿ ಗ್ರೀವ ಭಾಗದಲ್ಲಿ ಕೂಟ-ಶಾಲಾಗಳು ಇರುವುವಾದರೂ, ಅದೂ ಕೂಡಾ ಏಕತಲ ದೇವಾಲಯಗಳಲ್ಲಿಲ್ಲ. ಕಾಶ್ಯಪಶಿಲ್ಪದಲ್ಲಿ ಏಕತಲ ದೇವಾಲಯಗಳಿಗೆ ಕೂಟ-ಶಾಲಾಗಳನ್ನು ಕಡ್ಡಾಯವಾಗಿ ಹೇಳಿಲ್ಲವೆಂಬುದನ್ನಿಲ್ಲಿ ಗಮನಿಸಬಹುದು. ವಿಮಾನಾರ್ಚನ ಕಲ್ಪದಲ್ಲೂ



ನರಸಮಂಗಲದ ರಾಮಲಿಂಗೇಶ್ವರ ದೇವಸ್ಥಾನ-'ತ್ರಿತಳಸ್ವಸ್ತಿಕ' ರೀತಿ

'ಷಡ್ವರ್ಗ'ಗಳನ್ನು ಹೇಳಿದ ನಂತರ, ದ್ವಿತಲ ದೇವಾಲಯದ ವಿವರಗಳು ಇದ್ದು, ಇದರ ಪ್ರಕಾರ ಕೂಟ-ಕೋಷ್ಠಗಳಿಲ್ಲದ ರಚನೆಯೇ 'ಏಕಭೂಮಿ' ದೇವಾಲಯ ಎನಿಸಿದೆ. ಪ್ರಾತ್ಯಕ್ಷಿಕವಾಗಿಯೂ ಇದೇ ಸೂಕ್ತವಾದ ವಿವರಣೆ (ಪ.9) ಎನ್ನಬಹುದು.

ಈ ವರ್ಗೀಕರಣದಲ್ಲಿ ಕೆಲವು ಕೂಟ ಶಾಲಾ ರಹಿತ ಪ್ರಭೇದಗಳನ್ನು ಹೇಳಿದ್ದರೂ, ಏಕತಲ ದೇವಾಲಯಗಳ ಮೇಲ್ಕಟ್ಟಡಗಳು ಬಹುಪಾಲು ಚೌಕಾಕಾರವಾಗಿರುವುದರಿಂದ, 'ಶ್ರೀಕರ' ರೀತಿಯವೇ ಹೆಚ್ಚಾಗಿವೆ ಎನ್ನಬಹುದು. ಬೇಗೂರಿನ ಕಮಠೇಶ್ವರ ದೇವಾಲಯವು ಇದಕ್ಕೊಂದು ಉದಾಹರಣೆ ಎನ್ನಬಹುದು.

ಮೂರನೇ ರೀತಿಯ ವರ್ಗೀಕರಣದಲ್ಲಿ ಪೂರ್ಣ ದೇವಾಲಯದ ಸ್ವರೂಪವನ್ನು ಗಮನಿಸುವುದರೊಂದಿಗೆ, ಶಿಖರಕ್ಕೆ ಪ್ರಾಧಾನ್ಯ ನೀಡಲಾಗಿದೆ. ಇದರಂತೆ, ಮೂಲದಿಂದ ಸ್ತೂಪಿಯವರೆಗೆ ಚತುರಶ್ರ ಅಥವಾ ಆಯತಾಕಾರವಾಗಿದ್ದರೆ ನಾಗರ; ಅದೇ ರೀತಿ ಅಷ್ಟಾಶ್ರ ಅಥವಾ ಷಡಶ್ರವಾಗಿದ್ದರೆ ದ್ರಾವಿಡ ಮತ್ತು ವೃತ್ತ, ವೃತ್ತಾಯತ, ದ್ವ್ಯಶ್ರಾಕಾರವಿದ್ದರೆ ವೇಸರ ರೀತಿಯೆಂದು ಗ್ರಂಥಗಳು ಗುರುತಿಸಿವೆ (ಮಾನ.೧೮.೪೭-೫೦ ಸುಪ್ರ-೩೧.೩೭-೩೯; ಕಾಶ್ಯ-೨೫.೪೬-೪೭; ರೌರವ-೩೯.೨೩-೨೫; ದೀಪ್ತ-೭,೧೨-೧೫). ತಳದಿಂದಲ್ಲದೆ, ಗ್ರೀವ ಮತ್ತು ಶಿಖರ ಮಾತ್ರವೇ ಆ ಆಕಾರದಲ್ಲಿದ್ದರೂ ಅದೇ ಹೆಸರುಗಳೇ ಅನ್ವಯಿಸುತ್ತವೆ. ಈ ವರ್ಗೀಕರಣದಲ್ಲಿ ಗ್ರಾಂಥಿಕ ವ್ಯತ್ಯಾಸಗಳೂ ಇವೆ.[4] ನಾಗರ, ದ್ರಾವಿಡ, ವೇಸರ ದೇವಾಲಯಗಳಿಗೆ ಸಂಬಂಧಿಸಿದಂತೆ, ಇಡೀ ಭಾರತದ ಹಿನ್ನೆಲೆಯಲ್ಲಿ ಮಾಡಿದ ಭೌಗೋಳಿಕ ವರ್ಗೀಕರಣವನ್ನು ಕಾಶ್ಯಪಶಿಲ್ಪದಲ್ಲಿ ಕಾಣಬಹುದು (೨೫.೧೮-೨೦). ಇವನ್ನು ಸಾತ್ವಿಕ, ರಾಜಸ, ತಾಮಸ ಎಂದೂ ಗ್ರಂಥಗಳು ಕ್ರಮವಾಗಿ ಗುರುತಿಸಿವೆ (ಅದೇ. ೨೫. ೨೧-೨೩; ಮಯ-೨೧.೯). ಶ್ರವಣಬೆಳಗೊಳದ ಚಂದ್ರಗುಪ್ತ ಬಸದಿ, ಮೇಲೆ ಹೇಳಿದ ಬೇಗೂರಿನ ಕಮಠೇಶ್ವರ ದೇವಾಲಯ -ಇವು ನಾಗರ ರೀತಿಗೆ ಸೇರುತ್ತವೆ.

ದ್ವಿತಲ ದೇವಾಲಯಗಳ ಬಗ್ಗೆ ಹೇಳುವಾಗ, ಹನ್ನೊಂದು ರೀತಿಯ ದೇವಾಲಯಗಳನ್ನು ಕಾಮಿಕಾಗಮ ಮತ್ತು ಮಯಮತಗಳು ಹೇಳಿವೆ. ಈ ಗ್ರಂಥಗಳಲ್ಲಿ, ಗ್ರೀವ ಮತ್ತು ಶಿಖರದ ಆಕಾರ, ತಲದಲ್ಲಿರುವ ಕೂಟ-ಶಾಲಾಗಳ ಸಂಖ್ಯೆ, ಅವುಗಳ ಪರಸ್ಪರ ಔನ್ನತ್ಯ ಈ ಎಲ್ಲ ಅಂಶಗಳ ಆಧಾರದಿಂದ ಈ ವರ್ಗೀಕರಣವನ್ನು ಮಾಡಲಾಗಿದೆ. (ಮಯ.೨೦.೨೦-೨೬) ಇದರೊಂದಿಗೆ, ಪೂರ್ಣಕಟ್ಟಡವನ್ನು ಗಮನಿಸಿ, ಗರ್ಭಗೃಹದ ಆಕಾರವನ್ನು ಗಮನದಲ್ಲಿಟ್ಟುಕೊಂಡು ಮತ್ತೊಂದು ರೀತಿಯ ವರ್ಗೀಕರಣವನ್ನೂ ಮಾಡಲಾಗಿದೆ (ಮಯ.೨೦.೨೭-೩೦). ಕಾಶ್ಯಪಶಿಲ್ಪದಲ್ಲಿ (೨೮.೬ ಟಿ ೪೬) ಕೆಲವೆಡೆ ಶಿಖರದ ಆಕಾರವನ್ನು ಹೇಳಿ ವರ್ಗೀಕರಿಸಿದ್ದರೂ, ಮಾನಸಾರದಂತೆ (೨೦.೪೭-೪೮) ಬಹುಪಾಲು ಅಳತೆ-ವಿಭಾಗಗಳನ್ನು ಆಧರಿಸಿದ ವರ್ಗೀಕರಣವಿದೆ. ವಿಮಾನಾರ್ಚನ ಕಲ್ಪದಲ್ಲೂ ಬೇರೆ

---

4 ಕಾರಣಾಗಮ ಮತ್ತು ಸುಪ್ರಭೇದಾಗಮದಲ್ಲಿ (=ಸುಪ್ರ) ಆಯತ, ಆರು ಮುಖ ಮತ್ತು ದ್ವ್ಯಾಶ್ಯವೃತ್ತದ ಶಿಖರಗಳನ್ನು ಹೇಳಿಲ್ಲ; (ಎಲ್ಲವೂ ಉದ್ಧೃತಗಳೇ!) ರೌರವಾಗಮದಲ್ಲಿ ಶಿಖರದ ಆಕಾರದಲ್ಲಿ ಆಯತಾಕಾರ ಮತ್ತು ದ್ವ್ಯಶ್ಯವೃತ್ತವನ್ನು ಹೇಳಿಲ್ಲ, ದೀಪ್ತಾಗಮದಲ್ಲಿ 'ದ್ರಾವಿಡ'ಕ್ಕೆ ಆರು ಮುಖದ ಶಿಖರವನ್ನು ಹೇಳಿಲ್ಲ (ಎಲ್ಲವೂ ಉದ್ಧೃತಗಳೇ). ರೌರವಾಗಮದಲ್ಲಿ ಶಿಖರದ ಆಕಾರದಲ್ಲಿ ಆಯತಾಕಾರ, ದ್ವ್ಯಶ್ಯ ವೃತ್ತವನ್ನು ಹೇಳಿಲ್ಲ ಮತ್ತು ದ್ರಾವಿಡ ರೀತಿಯನ್ನು ಹೇಳಿಲ್ಲ

ಬೇರೆ ರೀತಿಯ ಅಳತೆ-ವಿಭಾಗಗಳನ್ನು ಹೇಳಿದ್ದರೂ, ಯಾವುದೇ 'ಬಗೆ'ಯನ್ನು ಅದು ಗುರುತಿಸಿಲ್ಲ (ಪ.೧೦). ಗ್ರಂಥಗಳು ಬೇರೆ ಬೇರೆ ಪ್ರಕಾರಗಳಿಗೆ ನೀಡಿರುವ ಬೇರೆ ಬೇರೆ ಹೆಸರುಗಳು ಬಹುಪಾಲು, ನಿಶ್ಚಿತ ಆಕಾರವನ್ನೋ, ಅವು ನೀಡುಬಹುದಾದ ಫಲವನ್ನೋ ಅಥವಾ ದೇವರ ಹೆಸರನ್ನೋ ಸೂಚಿಸುವಂತಿರುತ್ತದೆ.

ಗ್ರಂಥಗಳು ಹೆಸರಿಸುವ ವಿವಿಧ ಪ್ರಕಾರಗಳ ರಚನಾ ವಿವರಗಳೂ ಅವುಗಳಲ್ಲಿದ್ದು, ಉದಾಹರಣೆಯಾಗಿ ಇಲ್ಲಿ, 'ದ್ವಿತಳ ಸ್ವಸ್ತಿಕ' ರೀತಿಯ ರಚನೆಯನ್ನು ಗಮನಿಸಬಹುದು: ಅಧಿಷ್ಠಾನ, ಗಲ, ಶಿಖರಗಳು ಚೌಕಕಾರವಾಗಿರಬೇಕು. ನಾಲ್ಕು ಕೂಟ, ನಾಲ್ಕುಕೋಷ್ಠ, ಎಂಟು ಅಲ್ಪನೀಡಗಳಿರಬೇಕಲ್ಲದೆ ೪೮ ಅಲ್ಪನಾಸಿಗಳಿದ್ದು, ಶಿಖರದಲ್ಲಿ ನಾಲ್ಕುನಾಸಿಕಗಳಿರಬೇಕು; ಗೋಡೆ ಮತ್ತು ಹಾರಾಂತರಗಳ ನಡುವೆ ಕುಂಭದಿಂದ ಹೊರಟ ಬಳ್ಳಿ ಇದ್ದು, ತೋರಣ, ಪೀಠಗಳು ವಿವಿಧ ರೀತಿಯಲ್ಲಿದ್ದರೆ, ಅದು 'ಸ್ವಸ್ತಿಕ' ರೀತಿ(ಮಯ-೨೦.೬-೯). ಕಾಶ್ಯಪಶಿಲ್ಪ (೨೮.೧೯-೨೧) ಮತ್ತು ಕಾಮಿಕಾಗಮಗಳು (೬೦.೨೪) ಮುಖ್ಯ ವಿವರಗಳಲ್ಲಿ ಮಯಮತವನ್ನೇ ಹೋಲುತ್ತಿದ್ದು, ಕಾಮಿಕಾಗಮದಲ್ಲಿ ಅಲ್ಪನಾಸಿಯನ್ನು ಹೇಳಿಲ್ಲ, ಮಾನಸಾರದಲ್ಲಿ 'ಸ್ವಸ್ತಿಕ' ರೀತಿಯ ಬಗ್ಗೆ ಹೇಳಿದ್ದರೂ, (೨೦.೩೮) ವಿವರಗಳು ಸ್ಪಷ್ಟವಾಗಿಲ್ಲ.

ಒಟ್ಟಾರೆ, ಮೇಲ್ಕಟ್ಟಡ ರಚನೆಯ ವಿವರ, ನಿಯಮಗಳು ಮತ್ತು ಲಕ್ಷಣಗಳ ಹಿನ್ನೆಲೆಯಲ್ಲಿ, ಮೇಲ್ಕಟ್ಟಡದ ಸಾಮಾನ್ಯ ರಚನೆಗೆ ಮತ್ತು ವಿಶೇಷವಾಗಿ ಸ್ವಸ್ತಿಕ ರೀತಿಯ ರಚನೆಗೆ ಉದಾಹರಣೆಯಾಗಿ ಬೇಗೂರಿನ ಚೋಳೇಶ್ವರ ದೇವಾಲಯವನ್ನು ಗಮನಿಸಬಹುದು: ಈದೇವಾಲಯವು ಅಧಿಷ್ಠಾನದಿಂದ ಶಿಖರದವರೆಗೂ ಚೌಕಾಕಾರವಾಗಿದೆ. ಭಿತ್ತಿಯಲ್ಲಿ ಕೋಷ್ಠ ಮತ್ತು ತೋರಣಾಲಂಕರಣವಿದೆ. ಪ್ರಸ್ತರವು ಕಪೋತನಾಸಿ, ಭೂತವಲಭೀ, ಪ್ರತಿಮುಖಗಳಿಂದ ಅಲಂಕೃತಗೊಂಡಿದೆ. ಪ್ರಸ್ತರದ ಮೂಲೆಗಳಲ್ಲಿ ವಾಹನವಿಲ್ಲ; ಮೊದಲ ತಲದ ಮೇಲೆ ಕೂಟ-ಶಾಲಾಗಳ ಇನ್ನೊಂದು ತಲವೂ, ತಲಾಂತ್ಯದಲ್ಲಿ ಸ್ತಂಭ ಮತ್ತು ಪ್ರಸ್ತರವೂ ಇದ್ದು ಇದು ದ್ವಿತಲ ದೇವಾಲಯವೆನಿಸಿದೆ. ಆದಿತಳದ ವೇದಿಯ ಮೇಲೆ, ಕರ್ಣಭಾಗದಲ್ಲಿ ಕೂಟವೂ, ಭದ್ರಭಾಗದಲ್ಲಿ 'ಶಾಲಾ'ವೂ ಇದೆ. ಶಾಲಾ ಮತ್ತು ಕೂಟಗಳು ಒಂದೇ ಎತ್ತರದಲ್ಲಿವೆ. ಹಾರಾಂತರದಲ್ಲಿ 'ಅಲ್ಪನೀಡ'ಗಳಿದ್ದು, ಮುಂಭಾಗದಲ್ಲಿ 'ಹಾರ'ವು ಪ್ರಸ್ತರದ ಮೇಲೆ ಸುತ್ತಲೂ ಇದೆ. ಇದನ್ನೂ ಪರಿಗಣಿಸಿದಲ್ಲಿ, ಈ ತಲದಲ್ಲಿ ಒಟ್ಟು ಹಾರದಲ್ಲಿ ೪ ಕೂಟ, ೪ ಕೋಷ್ಠಗಳೂ ಮತ್ತು ಹಾರಾಂತರದಲ್ಲಿ ೮ ಅಲ್ಪನೀಡಗಳೂ, 'ಶಾಲಾ'ದ ಹಿಂಭಾಗದ 'ನಾಸಿ'ಯೂ ಸೇರಿ ಒಟ್ಟು ೪೦ ಅಲ್ಪನಾಸಿಗಳೂ ಇವೆ. ಈ ತಲವು ಮೇಲ್ಕಟ್ಟಡಕ್ಕೆ ಸೇರಿದಂತಿರುವುದರಿಂದ ಇದು 'ಅರ್ಪಿತಹಾರ' ಎನಿಸಿದೆ. 'ಗೃಹಪಿಂಡಿ'ಯಲ್ಲಿ ಮೂಲೆಗಳಲ್ಲಿ ಸ್ತಂಭವೂ, ಅದರ ಮೇಲೆ ಪ್ರಸ್ತರವೂ ಇದೆ. ಇದರ ಮೇಲೆ ಚೌಕಾಕಾರದ ವೇದಿ ಇದೆ. ನಾಲ್ಕೂ ಮೂಲೆಗಳಲ್ಲಿ (ಬಲಕ್ಕೆ ಮಾತ್ರವಲ್ಲ) ನಂದಿಯನ್ನು ಬಿಡಿಸಲಾಗಿದೆ. ಇವು ಪರಸ್ಪರ ವಿರುದ್ಧ ದಿಕ್ಕಿಗೆ ಮುಖ ಮಾಡಿವೆ. ನಂತರ ಇರುವ 'ಗ್ರೀವ' ಭಾಗವು ವೇದಿಯಂತೇ ಚೌಕಾಕಾರವಾಗಿದ್ದು, ಹೆಚ್ಚು ಎತ್ತರವಾಗಿಲ್ಲ. ಗ್ರೀವನಾಸಿಕಾ, ಗ್ರೀವಕೋಷ್ಠಗಳಿದ್ದು, ಗ್ರೀವದೇವತೆಗಳಾಗಿ ಪೂರ್ವದಲ್ಲಿ ನಿಂತಿರುವ ಇಂದ್ರ, ದಕ್ಷಿಣದಲ್ಲಿ-ದಕ್ಷಿಣಾಮೂರ್ತಿ, ಪಶ್ಚಿಮದಲ್ಲಿ ವಿಷ್ಣು, ಉತ್ತರದಲ್ಲಿ ಬ್ರಹ್ಮ ಇದ್ದಾರೆ.[5] ಗ್ರೀವದ ತುದಿಯಲ್ಲಿ 'ಹಂಸಮಾಲಾ' ಇದ್ದು, ಗ್ರಂಥಗಳು ಹೇಳುವ ಪ್ರಸ್ತರವನ್ನು ನೆನಪಿಗೆ ತರುತ್ತದೆ. 'ಶಿಖರ'ವು ಗ್ರೀವದ ಆಕಾರದಲ್ಲೇ ಚೌಕಾಕಾರದಲ್ಲಿದೆ. ಇದು ಕೋಣಪಟ್ಟ ಮತ್ತು ಚಂದ್ರಮಂಡಲಗಳಿಂದ ಅಲಂಕೃತಗೊಂಡಿದೆ (ಗ್ರಂಥದಲ್ಲಿ ಹೇಳಿಲ್ಲ). ಶಿಖರದ ನಾಲ್ಕೂ ದಿಕ್ಕುಗಳಲ್ಲಿ 'ಮಹಾನಾಸಿ' ಇದೆ. ಶಿಖರದ ಮೇಲಿನ ಮಹಾಪದ್ಮವೂ ಚೌಕಾಕಾರವಾಗಿದೆ. ಇದರ ಮೇಲೆ ಸಾಮಾನ್ಯವಾಗಿರುವಂತೆ ಒಂದು ಸ್ತೂಪಿ ಇದ್ದು, ಇದು ಶಿಖರದ ಆಕಾರದಲ್ಲಿರದೆ, ದುಂಡಾಕಾರವಾಗಿದೆ (ಸ್ವಸ್ತಿಕ ರೀತಿಯಲ್ಲಿ ಸ್ತೂಪಿಯ ಆಕಾರವನ್ನು ಹೇಳಿಲ್ಲ). ಇದರಲ್ಲಿ ಘಟ, ಕಂಧರ ಮತ್ತು ಮುಕುಲವನ್ನು ಪ್ರಧಾನವಾಗಿ ಗುರುತಿಸಬಹುದು. ಕಮಲದ ಮೊಗ್ಗು, ಮುಕುಲವು ದುಂಡಾಕಾರದಲ್ಲಿದೆ. ಹೀಗೆ, ಈ ದೇವಾಲಯದ ರಚನೆಯನ್ನು ಗಮನಿಸುವುದರ ಮೂಲಕ, ಮೇಲ್ಕಟ್ಟಡ ರಚನೆಯ ಸಾಮಾನ್ಯನಿಯಮಗಳನ್ನೂ, ಸ್ವಸ್ತಿಕ ರೀತಿಯ ಲಕ್ಷಣಗಳನ್ನೂ ಎಷ್ಟರ ಮಟ್ಟಿಗೆ ಅನ್ವಯಿಸಿದ್ದಾರೆಂಬುದನ್ನು ಅರಿಯಬಹುದಾಗಿದೆ.

---

5. ಮಯಮತವು ಒಂದೆಡೆ (೧೯.೪೪-೪೫) ಎರಡನೇ ತಳದಲ್ಲಿ ಪೂರ್ವಕ್ಕೆ ಸುಬ್ರಹ್ಮಣ್ಯ/ಪುರಂದರ, ದಕ್ಷಿಣಕ್ಕೆ ವೀರಭದ್ರ, ಪಶ್ಚಿಮಕ್ಕೆ ನಾರಸಿಂಹ, ಉತ್ತರಕ್ಕೆ ವಿಧಾತೃ ಇರಬೇಕೆಂದು ಹೇಳಿರುವುದು ಇಲ್ಲಿಗೂ ಅನ್ವಯಿಸುವಂತಿದೆ.

ಗ್ರಂಥವು ಹೇಳುವ ಸ್ವಸ್ತಿಕ ರೀತಿಗೂ, ಈ ದೇವಾಲಯದ ರಚನೆಗೂ ಇರುವ ವ್ಯತ್ಯಾಸವೆಂದರೆ, ಭಿತ್ತಿಯಲ್ಲಿ ಕುಂಭಲತಾ ಇಲ್ಲದಿರುವುದು ಮತ್ತು ಅಲ್ಪನಾಸಿಗಳ ಸಂಖ್ಯೆಯಲ್ಲಿ ವ್ಯತ್ಯಾಸ ವಿರುವುದು. ಗ್ರಂಥಗಳು ಹೇಳುವ ೪೮ ಅಲ್ಪನಾಸಿಗಳು ರಚನಾ ದೃಷ್ಟಿಯಿಂದ ಹೆಚ್ಚಾಗಿರುವಂತೇ ಕಂಡುಬರುತ್ತದೆ.[6] ಈ ವ್ಯತ್ಯಾಸವನ್ನು ಬಿಟ್ಟರೆ, ಈ ದೇವಾಲಯವು ಗ್ರಂಥಗಳು ಹೇಳುವ 'ದ್ವಿತಳ ಸ್ವಸ್ತಿಕ' ರೀತಿಯನ್ನು ಹೋಲುತ್ತಿದೆ-ಎನ್ನಬಹುದು. (ಇಂತಹುದೇ ರೀತಿಯ ರಚನೆಯಲ್ಲಿ ಕೂಟವು, ಕೋಷ್ಠಕ್ಕಿಂತಲೂ ಕೆಳಭಾಗದಲ್ಲಿದ್ದರೆ, ಅದು 'ವಿಪುಲಸುಂದರ'ವೆಂದೂ, ಅದೇ ತದ್ವಿರುದ್ಧವಾಗಿದ್ದರೆ, 'ಕೈಲಾಸ' ರೀತಿ ಎಂದೂ ಗ್ರಂಥಗಳು (ಮಯ.೨೦,೯-೧೩) ಹೇಳಿದ್ದರೂ, ಎರಡೂ ಒಂದೇ ನೇರದಲ್ಲಿರುವುದರಿಂದ ಈ ದೇವಾಲಯಕ್ಕೆ ಅನ್ವಯಿಸುವುದಿಲ್ಲ). ಮಯಮತದ ಅನುವಾದಕರು ನೀಡಿರುವ 'ದ್ವಿತಳ ಸ್ವಸ್ತಿಕ'ರೀತಿಯ ದೇವಾಲಯದ ರೇಖಾನಕ್ಷೆಗೂ ಇದು ಒಟ್ಟಾರೆ ತಾಳೆಯಾಗುತ್ತಿದ್ದು, ಬೇಗೂರಿನ ಈ ಚೋಳೇಶ್ವರ ದೇವಾಲಯವನ್ನು, ಮೇಲೆ ಹೇಳಿದ ಅಲ್ಪ ವ್ಯತ್ಯಾಸದೊಂದಿಗೆ, 'ದ್ವಿತಳ ಸ್ವಸ್ತಿಕ' ರೀತಿ ಎಂದು ಹೇಳಬಹುದಾಗಿದೆ. ಇದೊಂದೇ ಅಲ್ಲದೆ, ಕಂಬದಹಳ್ಳಿಯ ತ್ರಿಕೂಟ ಬಸದಿಯಲ್ಲಿನ ಒಂದು ಬಸದಿ, ಅಲ್ಲಿನ ಆದಿನಾಥ ಬಸದಿ-ಇವೂ ಕೂಡಾ 'ದ್ವಿತಳ ಸ್ವಸ್ತಿಕ' ರೀತಿಗೇ ಸೇರುತ್ತವೆ.

ಇವಿಷ್ಟೇ ಅಲ್ಲದೆ, ಇನ್ನೂ ಕೆಲವು ರೀತಿಯ ದೇವಾಲಯಗಳನ್ನು ಹೀಗೆ ಗ್ರಂಥಗಳ ಹಿನ್ನೆಲೆಯಲ್ಲಿ ಗುರುತಿಸಬಹುದಾಗಿದೆ. ಬೇಗೂರಿನ ನಾಗೇಶ್ವರ ದೇವಾಲಯ, (ಇದರಲ್ಲಿ ನಾಸಿಕೋಷ್ಠದ ಬದಲು ವೃತ್ತಸ್ಫುಟಿತವನ್ನು ಮೊದಲ ಬಾರಿಗೆ ಗುರುತಿಸಬಹುದು). ಕಂಬದಹಳ್ಳಿಯ ತ್ರಿಕೂಟ ಬಸದಿಯಲ್ಲಿನ ಒಂದು ಬಸದಿ-ಇವುಗಳು 'ದ್ವಿತಳ ಪರ್ವತ' ರೀತಿಗೂ (ಮಯ.೨೦.೧೩-೧೬,ಕಾಮಿ. ೬೦-೨೧.೨) ಅಲ್ಲಿನದೇ ಇನ್ನೊಂದು ಬಸದಿಯು 'ದ್ವಿತಳ ವಿಷ್ಣುಕಾಂತ' ರೀತಿಗೂ (ಅದೇ.೨೦.೨ ಗ; ೬೦.೨೭) ತಾಳೆಯಾಗುತ್ತದೆ. ನರಸಮಂಗಲದ ರಾಮೇಶ್ವರ ದೇವಾಲಯವು 'ತ್ರಿತಳಸ್ವಸ್ತಿಕ' ರೀತಿಯದಾಗಿದೆ (ಅದೇ ೨೧.೧೧-೧೩; ೬೦.೫೧-೫೩ ಕಾಶ್ಯಪ ೨೯.೨೪-೨೭), (ಸ್ಥಳಾಭಾವದಿಂದ ಇಲ್ಲಿ ಲಕ್ಷಣಗಳನ್ನು ಹೇಳಲಾಗಿಲ್ಲ). ಗ್ರಂಥಗಳಿಗೂ ಮತ್ತು ರಚನೆಗಳಿಗೂ ಅಲ್ಪ ವ್ಯತ್ಯಾಸಗಳಿರ ಬಹುದಾದರೂ, ಅವುಗಳ 'ಪ್ರಕಾರ'ವನ್ನು ಗುರುತಿಸುವಲ್ಲಿ ಇವು ಮುಖ್ಯ ತೊಡಕಾಗಿ ಕಾಣಬರುವುದಿಲ್ಲ. ಗ್ರಂಥ-ಗ್ರಂಥಗಳ ನಡುವೆಯೂ ಅಲ್ಪಸ್ವಲ್ಪ ವ್ಯತ್ಯಾಸಗಳಿವೆಯಾದರೂ ಅವು ರಚನಾತ್ಮಕವಾದ ವ್ಯತ್ಯಾಸಗಳಲ್ಲ. ಗ್ರಂಥಗಳ ದೃಷ್ಟಿಯಿಂದ ಹೇಳುವುದಾದರೆ, ಮಯಮತ, ಕಾಮಿಕಾಗಮ ಮತ್ತು ಕಾಶ್ಯಪಶಿಲ್ಪಗಳು ಹೆಚ್ಚು ನಿಖರವಾದ ವಿವರಗಳನ್ನು ನೀಡುತ್ತಿದ್ದು, ಅದರಲ್ಲೂ, ಮಯಮತದ ವಿವರಗಳು ಹೆಚ್ಚು ಅನುಕರಣೀಯವಾಗಿವೆ ಎನ್ನಬಹುದು. 'ಮಾನಸಾರ'ದ ವಿವರಗಳು ಸ್ಪಷ್ಟವಾಗಿಲ್ಲ.

ದೇವಾಲಯಗಳ ಬಗ್ಗೆ ಹೇಳುವಾಗ ಸಾಮಾನ್ಯವಾಗಿ



'ದ್ವಿತಳಸ್ವಸ್ತಿಕ' ರೀತಿ-ಕೃಪೆ: ಮಯಮತ-(ಅನು). ಬ್ರೂನೋ ಡಗೆನ್ಸ್

6. ಒಟ್ಟು ೮ ನಾಸಿಗಳನ್ನು ಗ್ರಂಥಗಳು ಹೆಚ್ಚಾಗಿ ಹೇಳಿರುವಂತಿದೆ. ಇದರಂತೆ, 'ಶಾಲಾ'ದ ಹಿಂಭಾಗ ಮತ್ತು ಮುಂಭಾಗವು ಜೊತೆಜೊತೆಯಾದ 'ನಾಸಿ'ಯನ್ನು ಹೊಂದಿರಬೇಕು ಅಥವಾ ಅಲ್ಪನೀಡಗಳು ಜೊತೆಯಾಗಿರಬೇಕು ಎನಿಸುತ್ತದೆ. ರಚನಾತ್ಮಕ ದೃಷ್ಟಿಯಿಂದ ಎರಡನೆಯ ಸಾಧ್ಯತೆಯೇ ಹೆಚ್ಚಾಗಿದ್ದರೂ, ಪ್ರಸ್ತುತ ದೇವಾಲಯದಲ್ಲಿ ಇವಾವುದೂ ಸೂಕ್ತವಾಗುವುದಿಲ್ಲ.

ಏಕತಳ ವಿಮಾನ-ಬ್ರಹ್ಮಛಂದ ಶಿಖರ, ತ್ರಿತಳ ವಿಮಾನ-ವಿಷ್ಣುಛಂದ ಶಿಖರ ಇತ್ಯಾದಿಯಾಗಿ ಹೇಳಿ, ನಂತರ ಕೂಟ, ಶಾಲಾಗಳನ್ನು ವಿವರಿಸುತ್ತೇವೆ. ಹೀಗೆ ಎಲ್ಲವನ್ನೂ ಪ್ರತ್ಯೇಕವಾಗಿ ಹೇಳುವುದಕ್ಕಿಂತಲೂ, ಗ್ರಂಥಗಳಲ್ಲಿ ಹೇಳಿರುವ 'ರೀತಿ'ಗಳಿಂದ ಅವುಗಳನ್ನು ಗುರುತಿಸಿ ಹೇಳಿದರೆ, ಆಗ ಮೇಲ್ಕಟ್ಟಡದ ಪೂರ್ಣರೂಪ, ವಿನ್ಯಾಸಗಳು ಸ್ಪಷ್ಟವಾಗುತ್ತವೆ. ಹೆಚ್ಚಿನ ವಿವರಗಳಿಲ್ಲದೆ ಮೇಲ್ಕಟ್ಟಡದಲ್ಲಿರುವ ತಲಗಳು, ಅವುಗಳಲ್ಲಿರುವ ಕೂಟ, ಶಾಲಾಗಳ ಸಂಖ್ಯೆ, ಅವುಗಳ ರಚನಾ ರೀತಿ, ಶಿಖರದ ಆಕಾರ-ಈ ಎಲ್ಲವನ್ನೂ ಒಂದು ಹೆಸರಿನಿಂದಲೇ ಪೂರ್ಣವಾಗಿ ತಿಳಿಯಲು ಸಾಧ್ಯವಾಗುತ್ತದೆ. (ಒಂದೇ ಹೆಸರುಗಳು ಬೇರೆ ತಲಗಳ ದೇವಾಲಯಗಳಿಗೂ ಅನ್ವಯಿಸುವುದರಿಂದ, ತಲಗಳೊಂದಿಗೆ ಹೆಸರಿಸ ಬೇಕಾಗುತ್ತದೆ; ಕೆಲವೊಮ್ಮೆ ಗ್ರಂಥಗಳ ಹೆಸರಿನೊಂದಿಗೆ ಗುರುತಿಸುವುದು ಸಮಂಜಸವೆನಿಸಬಹುದಾದರೂ ಎಲ್ಲ ಸಂದರ್ಭಗಳಲ್ಲೂ ಇದು ಅವಶ್ಯಕವಿಲ್ಲ). ಆದ್ದರಿಂದ, ಗ್ರಂಥಗಳಿಗೆ ಹೊಂದುವಂತಹ ಇಂತಹ ರಚನಾರೀತಿಗಳನ್ನು ಗುರುತಿಸಿ ಉಲ್ಲೇಖಿಸುವುದು ಸೂಕ್ತವೆನಿಸುತ್ತದೆ.

ಈ ರೀತಿಯ ಅನ್ವಯಗಳು ಒಮ್ಮೆಗೆ ಅಸಮರ್ಪಕವೆನಿಸ ಬಹುದಾದರೂ, ಹಲವಾರು ಹೋಲಿಕೆಗಳನ್ನು ಗಮನಿಸಿದಾಗ, ಆನ್ವಯಿಕ ವಿವರಣೆಯು ತಪ್ಪೆನಿಸುವುದಿಲ್ಲ. ಗ್ರಂಥಗಳ ವಿವರಣೆ ಮತ್ತು ದೇವಾಲಯ ರಚನೆಗೆ ಇರುವ ಪರಸ್ಪರ ಸಂಬಂಧಗಳು ಈಗಾಗಲೇ ಸಾಕಷ್ಟು ದೃಢಪಟ್ಟಿರುವಾಗ, ಇಂತಹ ವಿಶ್ಲೇಷಣೆಗಳಿಂದ ಗ್ರಾಂಥಿಕ ವಿವರಗಳು ನಮಗೆ ಹೆಚ್ಚು ಸ್ಪಷ್ಟವಾಗುತ್ತಾ ಹೋಗುತ್ತವೆ. ಗ್ರಂಥಗಳು ಹೇಳುವ ಎಲ್ಲ ಪ್ರಕಾರಗಳಿಗೂ ನಮಗೆ ಉದಾಹರಣೆಗಳು ದೊರೆಯದಿರ ಬಹುದಾದರೂ, ಇರುವ ದೇವಾಲಯಗಳ ಪ್ರಕಾರಗಳನ್ನು ಈ ಹಿನ್ನೆಲೆಯಲ್ಲೂ ಗುರುತಿಸುವುದು ಅವಶ್ಯವೆನಿಸುತ್ತದೆ. ಆ ದಿಸೆಯಲ್ಲಿನ ಒಂದು ಪ್ರಯತ್ನವನ್ನಿಲ್ಲಿ ಮಾಡಲಾಗಿದೆ.

## ಗ್ರಂಥ ಋಣ


ಮಯಮತ-ಬ್ರೂನೋ ಡಗೆನ್ಸ್ (ಸಂ). ಪಾಂಡಿಚೆರಿ, ೧೯೭೦.

ಮಾನಸಾರ ಸೀರೀಸ್- ಪಿ.ಕೆ.ಆಚಾರ್ಯ(ಸಂ)., ಸಂ III ನವದೆಹಲಿ, ೧೯೭೯. ಸಂ.IV ನವದೆಹಲಿ, ೧೯೮೦., ಸಂ. VII ನವದೆಹಲಿ, ೧೯೭೯.

ರೌರವಾಗಮ-ಎನ್. ಆರ್. ಬಟ್. (ಸಂ), ಪಾಂಡಿಚೆರಿ, ೧೯೭೨,

ಅಜಿತಾಗಮ-ಎನ್.ಆರ್.ಭಟ್ (ಸಂ), ಪಾಂಡಿಚೆರಿ, ೧೯೬೪.

ವಿಮಾನಾರ್ಚನಕಲ್ಪ- ರಘುನಾಥ ಚಕ್ರವರ್ತಿ ಭಟ್ಟಾ ಚಾರ್ಯ (ಸಂ). ಮದ್ರಾಸು, ೧೯೨೬.

ಕಾಶ್ಯಪಶಿಲ್ಪ-

ಕಾಮಿಕಾಗಮ (ಪೂರ್ವಭಾಗ)-ಸಿ. ಸ್ವಾಮಿನಾಥ ಶಿವಾಚಾರ್ಯ (ಸಂ), ಮದ್ರಾಸು, ೧೯೭೫.

Mayamata: An Indian Treatise on Housing Architecture and Iconography, Bruno Dagens (Tr), New Delhi,1985.

Encyclopaedia of Indian Temple Architecture-South India-Upper Dravidades'a-vol.I.pt.2-Michael W. Meister and M.A.Dhaky (Eds)- Delhi, 1986.

ಡಾ॥ ರಾಜಾರಾಮ ಹೆಗಡೆ *

# ಬನವಾಸಿ ನಾಗರಖಂಡ ಹಾಗೂ ಸುತ್ತಲಿನ ಪ್ರದೇಶದಲ್ಲಿ ಮಧ್ಯಕಾಲೀನ ಇಟ್ಟಿಗೆಯ ದೇವಾಲಯಗಳು

ಇಲ್ಲಿ ಪರಿಶೀಲನೆಗೆ ಒಳಗಾದ ಪ್ರದೇಶವು ಈಗಿನ ಶಿವಮೊಗ್ಗಾ ಜಿಲ್ಲೆ ಶಿಕಾರಿಪುರ ಹಾಗೂ ಸೊರಬ ತಾಲ್ಲೂಕುಗಳಲ್ಲೂ, ಧಾರವಾಢ ಜಿಲ್ಲೆಯ ಹಿರೇಕೆರೂರು ತಾಲ್ಲೂಕಿನಲ್ಲೂ ವ್ಯಾಪಿಸಿದೆ. ಈ ಭಾಗದಲ್ಲಿ ೧೦ ರಿಂದ ೧೩ನೇ ಶತಮಾನದ ಕಾಲಾವಧಿಗೆ ಸೇರಿಸಬಹುದಾದ ದೇವಾಲಯಗಳನ್ನು ಪರಿಗಣಿಸಲಾಗಿದೆ. ಇಲ್ಲಿ ಮುಖ್ಯವಾಗಿ ನಾಗರಖಂಡ-೭೦ ಎಂಬ ಭಾಗವು ಬಂದಳಿಕೆಯಿಂದ ಸುತ್ತಲೂ ಸುಮಾರು ೧೦ ಕಿ.ಮೀ. ಪರಧಿಯವರೆಗೆ ಹಬ್ಬಿಕೊಂಡಿದೆ. ಅದರ ಪಶ್ಚಿಮಕ್ಕೆ ಜಿಡ್ಡುಳಿಗೆಯೂ, ದಕ್ಷಿಣಕ್ಕೆ ಎಡವಟ್ಟಿ ಎಂಬ ಭಾಗಗಳೂ ಇದ್ದವೆಂದು ಶಾಸನಗಳ ಮೂಲಕ ತಿಳಿದುಬರುತ್ತದೆ. ಈ ಪ್ರದೇಶದ ಉತ್ತರಕ್ಕೆ ವರದಾ ನದಿಯೂ, ದಕ್ಷಿಣಕ್ಕೆ ಕುಮುದ್ವತೀ ನದಿಯೂ ಹರಿಯುತ್ತಿವೆ. ಇವೆಲ್ಲ ಮಧ್ಯಕಾಲೀನ ಬನವಾಸಿ ೧೨೦೦೦ದ ಭಾಗಗಳಾಗಿದ್ದವು. (ನಕ್ಷೆ ೧ನ್ನು ನೋಡಿ)

ಈ ಪ್ರದೇಶದಲ್ಲಿ ಶಾಸನಾಧಾರ ಹಾಗೂ ಪ್ರಾಕ್ತನಶಾಸ್ತ್ರೀಯ ಆಧಾರಗಳು ಸೂಚಿಸುವಂತೇ ಕ್ರಿ.ಶ.೧೦-೧೧ನೆಯ ಶತಮಾನದಲ್ಲಿ ಶಿಲಾಮಯ ದೇವಾಲಯಗಳನ್ನು ಕಟ್ಟಿಸುವ ಕೆಲಸ ಭರದಿಂದ ನಡೆಯಿತು. ಈ ಕಾಲಕ್ಕೂ ಪೂರ್ವದಲ್ಲಿ ಈ ಪ್ರದೇಶದಲ್ಲಿ ಶಿಲಾಮಯ ದೇವಾಲಯಗಳು ಇದ್ದ ಬಗ್ಗೆ ತೀರ ಅಲ್ಪ ಆಧಾರ ಇದೆ. ಶಾಸನ ಹಾಗೂ ಪ್ರಾಕ್ತನಶಾಸ್ತ್ರೀಯ ಆಧಾರಗಳ ಪ್ರಕಾರ ಶಾತವಾಹನರ ಕಾಲದಿಂದಲೂ ಇಲ್ಲಿ ದೇವಾಲಯಗಳು ಇದ್ದವು ಹಾಗೂ ಮುಖ್ಯವಾಗಿ ಅವು ಇಟ್ಟಿಗೆಯಿಂದಲೇ ನಿರ್ಮಾಣವಾಗಿದ್ದವು[1]. ಬಾದಾಮಿ, ಚಾಳುಕ್ಯ ಹಾಗೂ ರಾಷ್ಟ್ರಕೂಟರ ಕಾಲದಲ್ಲಿ ಈ ಭಾಗದಲ್ಲಿ ಕೆಲವೇ ಕೆಲವು ಶಿಲಾಮಯ ದೇವಾಲಯಗಳೋ, ಇಲ್ಲ ಶಿಲಾಶಿಲ್ಪಗಳ ಭಾಗವನ್ನು ಹೊಂದಿದ್ದ ಇಟ್ಟಿಗೆಯ ದೇವಾಲಯಗಳೂ ಇದ್ದವು[2]. ಆದರೆ ಹತ್ತನೆಯ ಶತಮಾನದ ನಂತರ ಈ ಭಾಗದಲ್ಲಿ ನಡೆದ ದೇವಾಲಯ ನಿರ್ಮಾಣ ಚಟುವಟಿಕೆ ಕರ್ನಾಟಕದ ಇತರ ಭಾಗಗಳಿಗೆ ಹೋಲಿಸಿದರೆ ಸೋಜಿಗ ಎನ್ನುವಷ್ಟು ಪ್ರಮಾಣದಲ್ಲಿ ಆಗಿದೆ. ಕಲ್ಯಾಣಿ ಚಾಲುಕ್ಯರ ಕಾಲದಲ್ಲಿ ಈ ಭಾಗವು ಬನವಾಸಿ ೧೨೦೦೦ದ ತಿರುಳಾಗಿತ್ತು. ಈ ಪ್ರದೇಶದಲ್ಲೇ ಇರುವ ಬಳ್ಳಿಗಾವಿ ಒಂದು ದೊಡ್ಡ ನಗರವಾಗಿ ಬನವಾಸಿ ೧೨೦೦೦ದ ರಾಜಧಾನಿಯಾಗಿ ಬೆಳೆಯಿತು. ಈ ಪ್ರದೇಶದಲ್ಲಿ ಒಟ್ಟಾರೆಯಾಗಿ ಕೆರೆ ನೀರಾವರಿ ಹಾಗೂ ಕೃಷಿಯ ಅಭಿವೃದ್ಧಿಯಾಗಿ ವ್ಯಾಪಾರ-ವಾಣಿಜ್ಯ ಉಚ್ಛ್ರಾಯ ಸ್ಥಿತಿಯನ್ನು ತಲುಪಿತು. ಶಾಸನಗಳಲ್ಲಿ ನೂರಾರು ಕೆರೆಗಳು, ಹಳ್ಳಿಗಳು, ದೇವಾಲಯಗಳು, ವೃತ್ತಿಗಳು, ಕರಗಳು, ವರ್ತಕರು ಉಲ್ಲೇಖಗೊಂಡಿದ್ದಾರೆ. ಅಂದರೆ ಒಟ್ಟಾರೆಯಾಗಿ

*ಇತಿಹಾಸ ಮತ್ತು ಪ್ರಾಕ್ತನಶಾಸ್ತ್ರ ವಿಭಾಗ, ಕುವೆಂಪು ವಿಶ್ವವಿದ್ಯಾನಿಲಯ, ಬಿ. ಆರ್. ಪ್ರಾಜೆಕ್ಟ್, ಶಿವಮೊಗ್ಗ.

1. ಎಪಿಗ್ರಾಫಿಯ ಕರ್ನಾಟಿಕ, ಸಂಪುಟ ೭, ಬಿ.ಎಲ್.ರೈಸ್ (ಸಂಪಾದಕರು)ಶಿಕಾರಿಪುರ ನಂ.176(ತಾಳಗುಂದ)ಹಾಗೂ 263 (ಮಳವಳ್ಳಿ). ಈ ಶಾಸನಗಳು ಈ ಸ್ಥಳಗಳಲ್ಲಿ ಶಾತವಾಹನ ಕಾಲದಿಂದಲೂ ದೇವಾಲಯಗಳು ಇದ್ದುದನ್ನು ಸೂಚಿಸುತ್ತವೆ. ಅ. ಸುಂದರ ಹಿಸ್ಟರಿ ಆಫ್ ಕರ್ನಾಟಕ, ಪ್ರಿ ಗಂಗ, ಕದಂಬ, ಪಿರಿಯಡ್, ಅವಲೋಕನ ೧೯೮೫, ಪು. ೫೦-೫೭. ಇಲ್ಲೂ ಈ ಅವಶೇಷಗಳ ಕುರಿತು ಚರ್ಚಿಸಲಾಗಿದೆ. ಈ ಕಾಲದಲ್ಲಿ ಇಟ್ಟಿಗೆಗಳು ತೀರ ಸಾಮಾನ್ಯವಾದ ಕಟ್ಟಡ ವಸ್ತುಗಳಾದ್ದರಿಂದ, ಇಂಥ ದೇವಾಲಯಗಳು ಇಟ್ಟಿಗೆಯಲ್ಲಿ ಕಟ್ಟಲ್ಪಟ್ಟಿದ್ದವೆಂದು ತರ್ಕಿಸಬಹುದು. ಗುಪ್ತ ಪೂರ್ವಕಾಲದ ದೇವಾಲಯಗಳು ಇಟ್ಟಿಗೆಯಲ್ಲೇ ಕಟ್ಟಲ್ಪಡುತ್ತಿದ್ದವೆಂಬುದು ಭಾರತೀಯ ಸಂದರ್ಭದಲ್ಲಿ ನಿದರ್ಶಿತ ಸತ್ಯ.
2. ಈ ಪ್ರದೇಶದಲ್ಲಿ ಬಳ್ಳಿಗಾವಿ, ನೇರಲಗಿ, ಕುಪ್ಪಗಡ್ಡೆ ಮುಂತಾದೆಡೆಗಳಲ್ಲಿ ಅ.ಸುಂದರ, ಅವರು ಇಂಥ ಚಾಲುಕ್ಯ ಪೂರ್ವ ಕಟ್ಟಡಗಳ ಕುರಿತು ವರದಿ ಮಾಡಿದ್ದಾರೆ. ನೋಡಿ : ಇಂಡಿಯನ್ ಆರ್ಕಿಯಾಲಜಿ-ಎ ರಿವ್ಯು, ೧೯೭೪-೭೫, ಪು.೧೭,ಹಾಗೂ ಕರ್ನಾಟಕ ಭಾರತಿ.೮-೧, ೧೯೭೬ ಪು.೧೧ ರಿಂದ.

ಈ ಕಾಲದಲ್ಲಿ ಇಡೀ ಕರ್ನಾಟಕದಲ್ಲೇ ಪ್ರಾರಂಭವಾದ ಒಂದು ನಗರೀಕರಣ ಪ್ರಕ್ರಿಯೆ ಈ ಪ್ರದೇಶದಲ್ಲಿ ಹೆಚ್ಚು ವೇಗದಲ್ಲಿ ನಡೆಯಿತು ಎಂಬುದು ಸ್ಪಷ್ಟ.

ಈ ರೀತಿ ಭೌತಿಕ ಉಚ್ಛ್ರಾಯದ ಜೊತೆಗೇ ಈ ಪ್ರದೇಶದಲ್ಲಿ ರಾಜಕೀಯ ಮತ್ತು ಧಾರ್ಮಿಕ ಚಟುವಟಿಕೆಗಳೂ ತ್ವರಿತಗತಿಯಲ್ಲಿ ಬೆಳೆದು ಬಂದವು. ಇಂಥ ಶ್ರೀಮಂತ ಪ್ರದೇಶವನ್ನು ಆಳುವಲ್ಲಿ ಚಾಲುಕ್ಯ, ಕಳಚೂರ್ಯ, ಹೊಯ್ಸಳ ಹಾಗೂ ಯಾದವ ರಾಜರು ವಿಶೇಷ ಮುತುವರ್ಜಿ ವಹಿಸಿದರು. ಸ್ಥಳೀಯ ಮಂಡಳೇಶ್ವರರು, ದಂಡನಾಯಕರು, ಮಂತ್ರಿಗಳು, ಪ್ರಧಾನಿಗಳು, ಶಾಸನಗಳಲ್ಲಿ ಕಡ್ಡಾಯವಾಗಿ ಕಾಣಿಸಿಕೊಳ್ಳುತ್ತಾರೆ. ಜೊತೆಗೇ ಉದ್ದರೆ, ಬಂದಳಿಕೆ ಮುಂತಾದ ಸ್ಥಳಗಳಲ್ಲಿ ೧೨-೧೩ನೆಯ ಶತಮಾನದಲ್ಲಿ ಪ್ರಾದೇಶಿಕ ಅರಸುಮನೆತನಗಳೂ ತಲೆಯೆತ್ತಿದವು. ಈ ಕಾಲದ ಶಾಸನಗಳಲ್ಲಿ ಇಂಥ ನೂರಾರು ಅಧಿಕಾರಿಗಳು ಹಾಗೂ ಆಳರಸರು ಈ ಪ್ರದೇಶದ ದೇವಾಲಯಗಳಿಗೆ ಸ್ಪರ್ಧಾತ್ಮಕವಾಗಿ ದಾನ ನೀಡಿದ್ದು ಕಂಡುಬರುತ್ತದೆ. ಇವರಲ್ಲದೇ ಹೈವೆ, ಸಾಂತಳಿಗೆಗಳ ಅರಸರು, ಚಾಲುಕ್ಯ, ಕಳಚೂರ್ಯ, ಹೊಯ್ಸಳ ಹಾಗೂ ಯಾದವ ರಾಜರು ಕೆಲವೊಮ್ಮೆ ಖುದ್ದಾಗಿಯೂ ದಾನಗಳನ್ನು ನೀಡಿದ್ದರು. ಈ ಪ್ರದೇಶದಲ್ಲಿ ಈ ರೀತಿ ಬೆಳೆದ ದೇವಾಲಯ ಸಂಸ್ಕೃತಿಗೆ ಧಾರ್ಮಿಕ ಮುಖಂಡರೂ ಕಾರಣವಾಗಿದ್ದಾರೆ. ಮುಖ್ಯವಾಗಿ ಶೈವ (ಕಾಳಾಮುಖ ಪಂಥ) ಮುನಿಗಳು ನಿರ್ಮಾಣ ಹಾಗೂ ಉಸ್ತುವಾರಿಗೆ ಕಾರಣರಾದರು[3]. ಜೈನ ಮಠಗಳೂ ಮಹತ್ವದ ಪಾತ್ರವನ್ನು ವಹಿಸುತ್ತವೆ. ಜೊತೆಗೆ ಅಗ್ರಹಾರಗಳೂ ಈ ಕೆಲಸದಲ್ಲಿ ಭಾಗಿಯಾದವು. ಹೀಗೆ ಒಂದು ಸ್ಥಾನಿಕ ದೇವತೆಗೆ ಆಶ್ರಯವನ್ನು ನಿರ್ಮಿಸಿ, ದೇವಾಲಯ ನಿರ್ಮಾಣ, ವಿನಿಯೋಗ ಹಾಗೂ ಜೀರ್ಣೋದ್ಧಾರದ ಜವಾಬ್ದಾರಿಯನ್ನು ಇವರು ವಹಿಸಿದ್ದು ಕಂಡುಬರುತ್ತದೆ. ದೇವಾಲಯ ಸಂಸ್ಕೃತಿ ಹೀಗೆ ತೀರ ಹದವಾದ ಐತಿಹಾಸಿಕ ಪರಿಸ್ಥಿತಿಯಲ್ಲಿ ಬೆಳೆಯಿತು. ೧೩ನೇ ಶತಮಾನದ ಉತ್ತರಾರ್ಧದ ನಂತರ ಈ ಪರಿಸ್ಥಿತಿ ಇಲ್ಲದ್ದು ಕಂಡುಬರುತ್ತದೆ.

ಈ ರೀತಿ ಈ ಪ್ರದೇಶದಲ್ಲಿ ೨೦೦ಕ್ಕೂ ಹೆಚ್ಚು ದೇವಾಲಯಗಳು ಇದ್ದ ಬಗ್ಗೆ ಶಾಸನಾಧಾರ ಹಾಗೂ ಪ್ರಾಕ್ತನಶಾಸ್ತ್ರೀಯ ಆಧಾರಗಳಿವೆ[4]. ಅವುಗಳಲ್ಲಿ ವಿಭಿನ್ನ ಗಾತ್ರಗಳ ಹಾಗೂ ಮಹತ್ವದ ದೇವಾಲಯಗಳನ್ನು ಗುರುತಿಸಬಹುದು. ಬಳ್ಳಿಗಾವಿಯ ಕೇದಾರೇಶ್ವರ, ಕುಬಟೂರಿನ ಕೋಟೇಶ್ವರ ದೇವಾಲಯಗಳು ಇವುಗಳಲ್ಲೆಲ್ಲ ಅತೀ ಮಹತ್ವವಾಗಿ ಬೆಳೆದವು. ಇಂಥ ದೊಡ್ಡ ದೇವಾಲಯಗಳು ಮಠ, ಸತ್ರ, ಪಾಠಶಾಲೆ, ಹಾಗೂ ಇತರ ಸಣ್ಣಪುಟ್ಟ ಪರಿವಾರ ದೇವಾಲಯಗಳನ್ನೊಳಗೊಂಡು ಸಂಸ್ಥೆಗಳೇ ಆಗಿದ್ದವು. ಇವುಗಳ ಜೊತೆಗೆ, ಕೇವಲ ಗರ್ಭಗೃಹವನ್ನೊಂದೇ ಹೊಂದಿದ ತೀರ ಸಣ್ಣ ದೇವಾಲಯಗಳೂ ಇದ್ದವು. ಈ ರೀತಿ ಒಂದೇ ಕಾಲದಲ್ಲಿ ಅಸ್ತಿತ್ವದಲ್ಲಿದ್ದ ಈ ಎಲ್ಲ ಸಣ್ಣ-ದೊಡ್ಡ ದೇವಾಲಯಗಳ ವಾಸ್ತು ನಿರ್ಮಾಣವೂ ಒಂದೇ ಶೈಲಿಯಲ್ಲಿರಲಿಲ್ಲ. ವಿಭಿನ್ನ ದೇವಾಲಯಗಳ ಆಶ್ರಯದಾತರ ಅಭಿರುಚಿ, ಸಾಮರ್ಥ್ಯಕ್ಕನುಗುಣವಾಗಿ ವಾಸ್ತು ನಿರ್ಮಾಣವೂ ನಡೆಯಿತು. ಹಾಗಾಗಿ ಪೂರ್ಣಶಿಲೆಯಲ್ಲಿ ಕಟ್ಟಿದ ದೇವಾಲಯಗಳ ಜೊತೆಗೇ ಅರ್ಧಶಿಲೆ, ಅರ್ಧ ಇಟ್ಟಿಗೆಯಲ್ಲಿ ಕಟ್ಟಿದ ದೇವಾಲಯಗಳೂ ಈ ಪ್ರದೇಶದಲ್ಲಿ ಅಸ್ತಿತ್ವದಲ್ಲಿ ಬಂದವು. ಇನ್ನುಳಿದ ಸಣ್ಣಪುಟ್ಟ ದೇವಾಲಯಗಳು ಪೂರ್ಣ ಇಟ್ಟಿಗೆಯಲ್ಲಿಯೇ ಅಸ್ತಿತ್ವದಲ್ಲಿ ಇದ್ದಿರಬಹುದು.

ಒಂದು ದೇವಾಲಯವನ್ನು ಪೂರ್ಣಶಿಲೆಯಲ್ಲಿ ಕಟ್ಟಿಸುವುದು ಹೆಗ್ಗಳಿಕೆಯ ಕೆಲಸವಾಗಿ, ಶಾಸನವನ್ನು ನಿಲ್ಲಿಸುವ ಮಟ್ಟದ್ದಾಗಿತ್ತು. ೧೧-೧೨ನೆಯ ಶತಮಾನದ ದೇವಾಲಯ ನಿರ್ಮಾಣವನ್ನು ಉಲ್ಲೇಸುವ ಶಾಸನಗಳಲ್ಲಿ ಕೆಲವು ಶಿಲಾಮಯಮಂಮಾಡಿಸಿ ಎಂದು ಉಲ್ಲೇಖಿಸುತ್ತವೆ[5]. ಅಂದರೆ ಈಗಾಗಲೇ ಇರುವ ದೇವಾಲಯಗಳನ್ನು ಶಿಲಾಮಯ

3. ಆರ್.ಎನ್.ನಂದಿ., 'ಒರಿಜಿನ್ ಎಂಡ್ ನೇಚರ್ ಆಫ್ ಶೈವೈಟ್ ಮೊನಾಸ್ಟಿಸಿಸಂ : ದಿ ಕೇಸ್ ಆಫ್ ಕಾಳಾಮುಖಾಸ್, ಇಂಡಿಯನ್ ಸೊಸೈಟಿ, ಹಿಸ್ಟಾರಿಕಲ್ ಪ್ರೋಬಿಂಗ್ಸ್', ಪೀಪಲ್ಸ್ ಪಬ್ಲಿಷಿಂಗ್ ಹೌಸ್, ನ್ಯೂ ದೆಹಲಿ, ೧೯೭೪, ಪುಟ ೧೭೬-೧೯೦.

4. ಈ ದೇವಾಲಯಗಳ ಸಂಖ್ಯೆ ಕನಿಷ್ಟವಾದರೂ ೨೦೦ರಷ್ಟಿದೆ. ಪ್ರಸ್ತುತ ಲೇಖಕರು ಈ ಪ್ರದೇಶದ ಶಾಸನಗಳಲ್ಲೇ ೧೨೦ರಷ್ಟನ್ನು ಗುರುತಿಸಿದ್ದಾರೆ. ಕ್ಷೇತ್ರಕಾರ್ಯದಲ್ಲಿ (ಇನ್ನೂ ಅಪೂರ್ಣವಾಗಿದೆ) ೧೭೫ರಷ್ಟನ್ನು ಗುರುತಿಸಿದ್ದಾರೆ. ಅನೇಕ ಶಾಸನೋಕ್ತ ದೇವಾಲಯಗಳು ಈಗ ಅಸ್ತಿತ್ವದಲ್ಲೇ ಇಲ್ಲ, ಅದರಂತೇ ನಮಗೆ ಪ್ರಾಕ್ತನಶಾಸ್ತ್ರೀಯವಾಗಿ ಇಂದು ಸಿಗುವ ಅನೇಕ ದೇವಾಲಯಗಳಿಗೆ ಶಾಸನಗಳೇ ಇಲ್ಲ ಅಥವಾ ಲಭ್ಯವಿಲ್ಲ.

5. ಎಪಿಗ್ರಾಫಿಯಾ ಕರ್ನಾಟಿಕಾ, ೭,ಭಾಗ ೧, ಶಿಕಾರಿಪುರ ನಂ.೧೩೬, ಕ್ರಿ.ಶ. ೧೦೬೮ 'ಶಿಲಾಕರ್ಮಮಂ ಮಾಡಿಸಿ'. ನಂ. ೨೪೨, ಕ್ರಿ.ಶ. ೧೧೬೩ 'ಕಲ್ವೆಸ ಮಾಡಿಸಿ'; ಭಾಗ ೨, ಸೊರಬ ೨೩೭, ೧೧೪೩ ಶಕ ಕಲುವೆಸನ ಮಾಡಿಸಿ ; ಸೊರಬ ೩೨೫, ಕ್ರಿ.ಶ.೧೧೭೮ 'ಶೈಳದಿಂ ಮಾಡಿಸಿ'. ಈ ಮುಂತಾದ ಶಾಸನಗಳೆಲ್ಲ ೧೧-೧೨ನೇ ಶತಮಾನದಲ್ಲಿ ಇಂಥ ಜೀರ್ಣೋದ್ಧಾರ ಕೆಲಸಗಳು ನಡೆಯುತ್ತಿದ್ದವು ಎಂದು ಸೂಚಿಸುತ್ತವೆ. ಈ ಮೇಲಿನ ದೇವಾಲಯಗಳ ವಾಸ್ತುಶೈಲಿ ಕೂಡ ಆ ಕಾಲದವೇ ಎಂಬುದು ಈಗ ಉಳಿದು ಬಂದ ದೇವಾಲಯಗಳಿಂದ ದೃಢಪಡುತ್ತದೆ.

ಮಾಡಿದ್ದನ್ನು ಅವು ಸೂಚಿಸುತ್ತವೆ. ಶಿಲಾಮಯವನ್ನಾಗಿ ಮಾಡಿಸುವುದು ಒಂದು ಶ್ರೇಷ್ಠ ಮಟ್ಟದ ಆಶ್ರಯ ಎಂಬ ಧ್ವನಿಯನ್ನು ಅಂಥ ಶಾಸನಗಳಲ್ಲಿ ಗುರುತಿಸಬಹುದು. ಅದರರ್ಥ ಶಿಲಾಮಯ ವಲ್ಲದ ದೇವಾಲಯಗಳೂ ಅಂದಿನ ಕಾಲದಲ್ಲಿ ಅಸ್ತಿತ್ವದಲ್ಲಿದ್ದವು. ಶಿಲಾಮಯವನ್ನಾಗಿ ಮಾಡುವುದು ಅಧಿಕ ವೆಚ್ಚದ ಕೆಲಸವೂ ಆಗಿತ್ತು. ಈ ಪ್ರದೇಶದಲ್ಲಿ ಈ ಕಾಲಕ್ಕೂ ಮೊದಲು ಇಟ್ಟಿಗೆಯ ದೇವಾಲಯಗಳನ್ನು ನಿರ್ಮಿಸುವ ಸಂಪ್ರದಾಯ ಇತ್ತು ಎಂಬುವುದು ಪ್ರಾಕ್ತನ ಶಾಸ್ತ್ರಜ್ಞರ ವರದಿಗಳಿಂದ ತಿಳಿದುಬರುತ್ತವೆ. ಅವುಗಳಲ್ಲಿ ಹಲವು ಕ್ರಮೇಣ ಮಹತ್ವವನ್ನು, ಆಶ್ರಯವನ್ನು ಗಳಿಸಿ ಶಿಲಾಮಯವಾಗ ತೊಡಗಿದವು. ಆದರೆ ಇಟ್ಟಿಗೆಯ ನಿರ್ಮಾಣಗಳು ಇವುಗಳ ಜೊತೆ-ಜೊತೆಗೇ ಅಸ್ತಿತ್ವದಲ್ಲಿದ್ದದೊಂದೇ ಅಲ್ಲ ಶಿಲೆ ಮತ್ತು ಇಟ್ಟಿಗೆಗಳನ್ನು ಅಗತ್ಯ ಬಿದ್ದಲ್ಲಿ ಉಪಯೋಗಿಸುವ ನಿರ್ಮಾಣ ತಂತ್ರವೂ ಬೆಳೆಯಿತು. ಈ ಪ್ರದೇಶದಲ್ಲಿ ಸಿಗುವ ಇಟ್ಟಿಗೆಯ ಕಟ್ಟಡಗಳ ಅವಶೇಷಗಳ ಒಂದು ಪರಿಶೀಲನೆಯಿಂದ ಈ ವಿಷಯ ಇನ್ನು ಸ್ಪಷ್ಟವಾಗುತ್ತದೆ. ಇಂಥ ಅವಶೇಷಗಳನ್ನ ಈ ಕೆಳಗಿನಂತೆ ವರ್ಗೀಕರಿಸಬಹುದು.

(೧) ಸಂಪೂರ್ಣವಾಗಿ ಇಟ್ಟಿಗೆಯಲ್ಲಿ ಕಟ್ಟಿದ ದೇವಾಲಯಗಳು[6]. (೨) ಕಲ್ಲು ಹಾಗೂ ಇಟ್ಟಿಗೆಯ ಮಿಶ್ರ ನಿರ್ಮಾಣಗಳು (೩) ಕಲ್ಲಿನ ದೇವಾಲಯಗಳಿಗೆ ಸೇರಿಸಿದ ಇಟ್ಟಿಗೆಯ ಕಟ್ಟಡಗಳು ಮತ್ತು (೪) ಮಧ್ಯಕಾಲೀನ ಹೆಂಚುಗಳು.

೧) **ಇಟ್ಟಿಗೆಯ ಗುಡಿಗಳು:** ಸಂಪೂರ್ಣವಾಗಿ ಇಟ್ಟಿಗೆಯಲ್ಲಿ ಕಟ್ಟಿದ ದೇವಾಲಯಗಳು ಇಂದು ಯಾವುವೂ ಕಂಡುಬಂದಿಲ್ಲ. ಆದರೆ ಮಧ್ಯಕಾಲದಲ್ಲಿ ತೀರ ಸಣ್ಣ ಇಟ್ಟಿಗೆಯ ಗುಡಿಗಳು ಅಸ್ತಿತ್ವದಲ್ಲಿದ್ದುದಕ್ಕೆ ಆಧಾರ ಸಿಗುತ್ತದೆ. ಬಹುಶಃ ಇವು ಸಣ್ಣವಿದ್ದುದರಿಂದ ಹಾಗೂ ಕೇವಲ ಇಟ್ಟಿಗೆಯವಾದುದರಿಂದ ಸಂಪೂರ್ಣ ನಶಿಸಿವೆ. ಇದಕ್ಕೆ ಆಧಾರ ನೀಡುವ ಒಂದು ಸ್ಥಳ ಎಂದರೆ ಬಳ್ಳಿಗಾಮಿಯಿಂದ ಕೇವಲ ೩-೪ ಕಿ.ಮೀ. ದೂರದಲ್ಲಿರುವ ಮಳೂರಿನ ಹಕ್ಕಲಿನಲ್ಲಿ ಇರುವ ಅವಶೇಷ. ಇಲ್ಲಿ ಉತ್ತರ ದಕ್ಷಿಣಕ್ಕೆ ಸಾಲಾಗಿ ಪೂರ್ವಾಭಿಮುಖವಾಗಿ ಮೂರು ಕಟ್ಟಡಗಳ ಅವಶೇಷಗಳಿವೆ ತಳಪಾಯ ಮಾತ್ರ ಅಲ್ಲಲ್ಲಿ ಕಾಣಸಿಗುತ್ತದೆ ಪ್ರತಿಯೊಂದರಲ್ಲೂ ಒಂದೊಂದು ಕಲ್ಲಿನ ಲಿಂಗ ಹಾಗೂ ಅದಕ್ಕೆದುರಾಗಿ ಕಲ್ಲಿನ ಬಸವಗಳು ಕಾಣಸಿಗುತ್ತವೆ. ಇಟ್ಟಿಗೆಯ ಅಳತೆ ೨೦×೨೦×೬ ಸೆಂ. ಮೀ. ಇದೆ. ಇನ್ನುಳಿದವು ಅಳೆಯಲಿಕ್ಕೆ ಸಿಕ್ಕಿಲ್ಲ.

ಈ ವರ್ಗಕ್ಕೆ ಸೇರುವ ಅವಶೇಷಗಳಲ್ಲೇ ಇಂದಿನ ಕಲ್ಲಿನ ದೇವಾಲಯಗಳ ತಳಪಾಯದಲ್ಲಿ ಕಾಣಸಿಗುವ ಇಟ್ಟಿಗೆಯ ಗೋಡೆಗಳ ಅವಶೇಷಗಳನ್ನು ಸೇರಿಸಬಹುದು. ಅಂದರೆ ಒಂದು ಕಾಲದಲ್ಲಿ ಇಟ್ಟಿಗೆಯ ದೇವಾಲಯ ವಾಗಿದ್ದುದನ್ನು ಕೆಡವಿ ಕಲ್ಲಿನಲ್ಲಿ ಕಟ್ಟಿದ್ದನ್ನು ಇದು ಸೂಚಿಸ ಬಹುದು. ಇಂಥ ಆಧಾರಗಳು ಸೊರಬ ತಾಲ್ಲೂಕಿನ ತಲ್ಲೂರು (ಕಲ್ಲಪ್ಪ), ತೊರವಂದ (ಬಯಲು ಬಸವಣ್ಣ), ಕೊಡಕಣಿ (ಈಶ್ವರ), ಕುಪ್ಪಗಡ್ಡೆ (ನೀಲಕಂಠೇಶ್ವರ) ಹುರುಳಿ (ಕಲ್ಲಪ್ಪ) ಹಾಗೂ ಎಣ್ಣೆಕೊಪ್ಪಗಳಲ್ಲಿ, ಶಿಖಾರಿಪುರ ತಾಲ್ಲೂಕಿನ ಎಳಗೇರಿ (ಕಲ್ಲೇಶ್ವರ), ಹಿರೇಮಾಗಡಿ ಹಾಗೂ ಅಡಗಂಟಿ (ಈಶ್ವರ)ಗಳಲ್ಲಿ ದೊರೆಯುತ್ತವೆ. ತೊರವಂದದಲ್ಲಿ ಇತ್ತೀಚೆಗೆ ಹಳೇಗುಡಿಯನ್ನು ಸಂಪೂರ್ಣ ಕಿತ್ತುಹಾಕಿ ಹೊಸಗುಡಿಯೊಂದನ್ನು ನಿರ್ಮಿಸಿದ್ದಾರೆ. ಸುತ್ತಮುತ್ತೆಲ್ಲ ನಮಗೆ ಪೂರ್ಣ ಪ್ರಮಾಣದ ಇಟ್ಟಿಗೆಗಳು ನೋಡಲಿಕ್ಕೆ ಸಿಗುತ್ತವೆ. ಅವುಗಳ ಗಾತ್ರ ವೈವಿಧ್ಯ ೩೮ × ೨೦×೭.೫ ರಿಂದ ೨೨×೨೩×೮ ಸೆಂ.ಮೀ.ಯವರೆಗೆ ಇದೆ. ಜೊತೆಗೇ ಅಧಿಷ್ಠಾನದ ಕುಮುದಕ್ಕೆ ಬಳಸಿದ ಇಟ್ಟಿಗೆಯೊಂದು ಸಿಕ್ಕಿದೆ. ಇದು ೩೪×೨೩×೭ ಸೆಂ.ಮೀ. ಇದೆ. ಈ ಮೇಲಿನ ದೇವಾಲಯಗಳಲ್ಲಿ ಹಲವು ಚಾಲುಕ್ಯ ಪೂರ್ವದವೂ ಇರಬಹುದು. ಖಚಿತ ಕಾಲಗಣನೆಯನ್ನು ಸಧ್ಯಕ್ಕೆ ಮಾಡುವಂತಿಲ್ಲ.

---

6 ರು. ಮ. ಷಡಕ್ಷರಯ್ಯ, ''ಧಾರವಾಡ ಜಿಲ್ಲೆಯಲ್ಲಿ ಇತ್ತೀಚೆಗೆ ಕಂಡುಬಂದ ಕೆಲವು ಮಹತ್ವದ ಇಟ್ಟಿಗೆಯ ದೇವಾಲಯಗಳು'' ಇತಿಹಾಸ ದರ್ಶನ, ೬,(೧೯೯೧), ಪು.೭೦ ರಿಂದ ೭೬. ಇಲ್ಲಿ ಲೇಖಕರು ಚಿಕ್ಕೇರೂರು, ಸಾತೇನಹಳ್ಳಿ ಮುಂತಾದ ಸ್ಥಳಗಳಲ್ಲಿ ಕಂಡುಬಂದ ಇಟ್ಟಿಗೆಯ ದೇವಾಲಯಗಳನ್ನು ಅಧ್ಯಯನ ಮಾಡಿದ್ದಾರೆ. ಅವರು ಈ ದೇವಾಲಯಗಳನ್ನೆಲ್ಲ ೧೧-೧೨ನೇ ಶತಮಾನಕ್ಕಿಂತ ಪೂರ್ವದವು ಎಂದು ತೀರ್ಮಾನಿಸುತ್ತಾರೆ ಹಾಗೂ ೧೧-೧೨ನೇ ಶತಮಾನದಲ್ಲಿ ಇಂಥ ಇಟ್ಟಿಗೆಗಳನ್ನು ಉಪಯೋಗಿಸಿ ಕಟ್ಟಡ ಕಟ್ಟಿದ ಉದಾಹರಣೆಗಳಿಲ್ಲ ಎಂದು ಅಭಿಪ್ರಾಯಪಡುತ್ತಾರೆ. ೧೨-೧೩ನೇ ಶತಮಾನದ ದೇವಾಲಯಗಳ ನೆಲಗಟ್ಟಿನಲ್ಲಿ ಸಿಗುವ ಇಟ್ಟಿಗೆಯ ಗೋಡೆಗಳ ಅವಶೇಷಗಳು ಅದಕ್ಕೂ ಪೂರ್ವದವಾಗಿರುವ ಸಾಧ್ಯತೆ ಇದೆ. ಹಾಗಾಗಿ ಈ ಮೇಲೆ ಉಲ್ಲೇಖಿಸಿದ ರೀತಿಯ ಇಟ್ಟಿಗೆಯ ಅವಶೇಷಗಳ ಕಾಲದ ಕುರಿತು ನಿಖರತೆ ಶಕ್ಯವಿಲ್ಲ. ಆದರೆ ಎರಡನೇ ರೀತಿಯ ಅವಶೇಷಗಳಲ್ಲಿ ಸಿಗುವ ಇಟ್ಟಿಗೆಗಳು ೧೨-೧೩ನೇ ಶತಮಾನದಲ್ಲೇ ಆಗಿರಬೇಕೆಂಬುದು ಪ್ರಸ್ತುತ ಲೇಖಕರ ತರ್ಕಕ್ಕೆ ಸರಿಯೆನ್ನಿಸುತ್ತದೆ. ೧೦-೧೧ನೇ ಶತಮಾನದವರೆಗೆ ಮುಂದುವರಿದ ಇಟ್ಟಿಗೆಯ ನಿರ್ಮಾಣ ತಂತ್ರ ೧೨-೧೩ನೇ ಶತಮಾನದಲ್ಲಿ ಮುಂದುವರಿಯಲಿಲ್ಲ ಎಂದು ತರ್ಕಿಸುವುದು ಈಗ ಸಿಕ್ಕ ಆಧಾರಗಳ ಪ್ರಕಾರ ಸರಿಯಲ್ಲ.

೨) ಕಲ್ಲಿನ ಹಾಗೂ ಇಟ್ಟಿಗೆಯ ಮಿಶ್ರ ನಿರ್ಮಾಣಗಳು: ಇಂಥ ದೇವಾಲಯಗಳು ಸಾಕಷ್ಟಿವೆ. ಅವುಗಳಲ್ಲಿ ಅಂದಳಿಕೆಯಲ್ಲಿ ಮೂರು ದೇವಾಲಯಗಳು, ಹಿರೇಕೆರೂರಿನ ಜನಾರ್ಧನ ದೇವಾಲಯ, ಬಾರಂಗಿ ಕೆರೆಯ ಒಡ್ಡಿನ ಕೆಳಗೆ ಇರುವ ಮೂರು ದೇವಾಲಯಗಳು ಹಾಗೂ ಕಲ್ಲಪ್ಪನ ದೇವಾಲಯ, ಹಿರೇಮಾಗಡಿಯಲ್ಲಿ ಮೂರು ದೇವಾಲಯಗಳೂ, ತೆವರ ತೆಪ್ಪದಲ್ಲಿ ಎರಡು ಬಸದಿಗಳು, ಎಲೆವಾಳದಲ್ಲಿ ಚಕ್ಕಲಿನಲ್ಲಿರುವ ಈಶ್ವರ ಗುಡಿ, ಮಡಲೂರಿನಲ್ಲಿ ಎರಡು ದೇವಾಲಯಗಳು, ಸಾತೇನಹಳ್ಳಿಯ ಸೋಮೇಶ್ವರ ದೇವಾಲಯ, ಸಂಡದಲ್ಲಿ ಎರಡು ಈಶ್ವರ ಗುಡಿಗಳು, ಹಾಗೂ ಚಿಕ್ಕೇರೂರು, ಕಣಸೋಗೆ, ಭರತನಕೊಪ್ಪ, ಬೇಗೂರು, ಮುಗಳಗೆರೆ, ಕಪ್ಪನಹಳ್ಳಿ, ನೇರಲಿಗೆ, ಬಸವನಂದಿ ಹಳ್ಳಿಗಳಲ್ಲಿ ಒಂದೊಂದು ದೇವಾಲಯಗಳನ್ನು ಪರಿಶೀಲಿಸಲಾಗಿದೆ. ಈ ದೇವಾಲಯಗಳ ವೈಶಿಷ್ಟ್ಯವೆಂದರೆ ಇವು ೧೧-೧೩ನೆಯ ಶತಮಾನದ ಚಾಲುಕ್ಯ ಶೈಲಿಯ ದೇವಾಲಯಗಳಾಗಿವೆ. ತಲವಿನ್ಯಾಸದಲ್ಲಿ ಗರ್ಭಗೃಹ, ಸುಕನಾಸಿಗಳ ನಂತರ ರಂಗಮಂಟಪ (ಗೂಢ ಮಂಡಪ) ಇರುತ್ತದೆ. ಇವುಗಳಲ್ಲಿ ಕೆಲವು ದೇವಾಲಯಗಳು ದ್ವಿಕೂಟ ಅಥವಾ ತ್ರಿಕೂಟದಲ್ಲಿ ಇರುತ್ತವೆ. ಈ ದೇವಾಲಯಗಳಲ್ಲಿ ಕಂಡುಬರುವ ಅಧಿಷ್ಠಾನ (ಕಲ್ಲಿನದಿದ್ದರೆ) ಸ್ತಂಭಗಳು ಭಿತ್ತಿಸ್ತಂಭಗಳು, ಬಾಗಿಲುಗಳು ಎಲ್ಲ ಚಾಲಕ್ಯ ಶೈಲಿಯಲ್ಲೇ ಇರುತ್ತವೆ. ಇಂಥ ದೇವಾಲಯಗಳಲ್ಲಿ ಎರಡು ಸಂದರ್ಭಗಳಲ್ಲಿ ಇಟ್ಟಿಗೆಯನ್ನು ಬಳಸಿರುತ್ತಾರೆ. ಅ) ಭಿತ್ತಿಗಳಿಗೆ ಹಾಗೂ ಆ) ಶಿಖರಗಳಿಗೆ.

೨. ಅ) ಭಿತ್ತಿಗಳಿಗೆ ಇಟ್ಟಿಗೆಯ ಬಳಕೆ: ದೇವಾಲಯದ ಅಧಿಷ್ಠಾನ, ಸ್ತಂಭಗಳು ಹಾಗೂ ಅಂಕಣದ ಹಂದರವನ್ನು ಕಲ್ಲಿನಲ್ಲಿ ಮಾಡಿ, ಗೋಡೆಗಳು,ಬರುವಲ್ಲೆಲ್ಲ ಇಟ್ಟಿಗೆಯನ್ನು ಬಳಸಿರುತ್ತಾರೆ. ಈ ಗೋಡೆಗಳು ೮೦ ರಿಂದ ೯೦ ಸೆಂ.ಮೀ. ರಷ್ಟು ಅಂದರೆ, ಕಲ್ಲಿನ ದೇವಾಲಯಗಳ ಗೊಡೆಗಳಷ್ಟೇ ದಪ್ಪ ಇರುತ್ತವೆ. ಕೆಲವೊಮ್ಮೆ ಇಟ್ಟಿಗೆಯ ಗೋಡೆಗಳು ಕೇವಲ ರಂಗಮಂಟಪಕ್ಕೆ ಮಾತ್ರ ಬಳಕೆಯಾಗಿವೆ, ಅಥವಾ ತ್ರಿಕೂಟಾಚಲದಲ್ಲಿ ಎರಡು ಪಾರ್ಶ್ವ ಕೂಟಗಳಿಗೆ ಮಾತ್ರ ಬಳಕೆಯಾಗಿವೆ. ಇಂದು ಇಂಥ ಹಲವು ದೇವಾಲಯಗಳಲ್ಲಿ ಇಟ್ಟಿಗೆಯ ಗೋಡೆ ಸಂಪೂರ್ಣವಾಗಿ ನಾಶವಾಗಿದ್ದು, ಕೇವಲ ಭಿತ್ತಿ-ಸ್ತಂಭಗಳನ್ನು ಹೊಂದಿದ ಮಂಟಪಗಳ, ದೇವಾಲಯಗಳ ಹಂದರ ಮಾತ್ರ ನಿಂತುಕೊಂಡಿದೆ. ಸಂಪೂರ್ಣವಾಗಿ ಗೋಡೆಗಳು ಉಳಿದು ಬಂದಲ್ಲಿ, ಅದರ ಹೊರಮೈಯನ್ನು ನೋಡಲು ಸಿಗುವುದು ಅಪರೂಪ. ಏಕೆಂದರೆ ಇಂಥ ದೇವಾಲಯಗಳ ಹೊರ ಮೈ ಮಣ್ಣಿನ ರಾಶಿಯಲ್ಲಿ ಹೂತು ಹೋಗಿರುತ್ತದೆ. ಇದು ಸ್ವಾಭಾವಿಕವಾಗಿ ಆದದ್ದೋ ಇಲ್ಲ ಈ ದೇವಾಲಯಗಳು ಬೀಳದಂತೆ ರಕ್ಷಿಸಲು ನಂತರದ ಕಾಲದಲ್ಲಿ ಹಳ್ಳಿಗರು ಮಾಡಿದ ಉಪಾಯವೋ ಎಂಬುದೂ ಸ್ಪಷ್ಟವಿಲ್ಲ.

ಕೆಲವೇ ಕೆಲವು ಉದಾಹರಣೆಗಳಲ್ಲಿ ಇಂಥ ಇಟ್ಟಿಗೆ ಗೋಡೆಗಳ ಹೊರಭಾಗವನ್ನು ವೀಕ್ಷಿಸುವ ಅವಕಾಶವಿದೆ. ಶಿಕಾರಿಪುರ ತಾಲ್ಲೂಕಿನ ಬೇಗೂರಿನ ಮಲ್ಲಿಕಾರ್ಜುನ ದೇವಾಲಯ ಒಂದು ತ್ರಿಕೂಟಾಚಲವಾಗಿದ್ದು, ರಂಗ ಮಂಟಪದ ಮೂರು ಪಾರ್ಶ್ವದಲ್ಲಿ ತ್ರಿಕೂಟಗಳು ಹಾಗೂ ಪ್ರವೇಶದ್ವಾರದ ಎದುರು ಭವ್ಯ ಸಭಾಮಂಟಪವಿದೆ. ಈ ಸಭಾಮಂಟಪ ಸಂಪೂರ್ಣವಾಗಿ ಕಲ್ಲಿನಲ್ಲಿ ನಿರ್ಮಿತವಾಗಿದ್ದು, ಹದಿನಾರು ಕಕ್ಷಾಸನ ಸ್ತಂಭಗಳನ್ನು, ೧೬ ಮಧ್ಯ ಅಂಕಣದ ಸ್ತಂಭಗಳನ್ನು ಹೊಂದಿದೆ. ಈ ದೇವಾಲಯದ ಕೇಂದ್ರ ಗರ್ಭಗುಡಿಯ ಭಿತ್ತಿ ಕಲ್ಲಿನಲ್ಲೇ ಇದೆ. ಪಾರ್ಶ್ವ ಗುಡಿಗಳ ಭಿತ್ತಿ ಸಂಪೂರ್ಣವಾಗಿ ಇಟ್ಟಿಗೆಯಲ್ಲಿ ಇದೆ. ಈ ಇಟ್ಟಿಗೆಗಳ ಅಳತೆ ೩೪×೨೦×೭.೫, ೨೨×೨೨×೬, ೨೯×೧೮×೬ ಸೆಂ.ಮೀ.ಗಳಷ್ಟು ವೈವಿಧ್ಯತೆಯನ್ನು ಹೊಂದಿದೆ. ಈ ಭಿತ್ತಿಯ ಹೊರಭಾಗ ಭಿತ್ತಿಸ್ತಂಭಗಳಿಂದ ಅಲಂಕೃತವಾಗಿದೆ. ಈ ಕೂಟಗಳ ಶಿಖರ ಕೂಡ ಇಟ್ಟಿಗೆಯಲ್ಲೇ ಇದ್ದು ಈಗ ತೀವ್ರವಾಗಿ ಹಾಳಾಗಿದೆ. ಇಷ್ಟು ಭವ್ಯವಾದ ದೇವಾಲಯದಲ್ಲಿ ಈ ಪಾರ್ಶ್ವ ದೇಗುಲಗಳು ಏಕೆ ಇಟ್ಟಿಗೆಯಲ್ಲಿ ಕಟ್ಟಲ್ಪಟ್ಟವು ಎಂಬುದು ಸಂದಿಗ್ಧವಾಗಿದೆ.

ಮತ್ತೊಂದು ಮುಖ್ಯ ದೇವಾಲಯವೆಂದರೆ ಹಿರೇಕೆರೂರು ತಾಲ್ಲೂಕಿನ ಮಡಲೂರಿನ ಮೂಕೇಶ್ವರ ದೇವಾಲಯ. ಈ ದೇವಾಲಯದ ಗೋಡೆಗಳೆಲ್ಲ ಸಂಪೂರ್ಣವಾಗಿ ಇಟ್ಟಿಗೆಯಲ್ಲೇ ಮಾಡಲ್ಪಟ್ಟಿದ್ದು, ಇದು ಮೂಲತಃ ಚತುಷ್ಕೂಟಾಚಲವಾಗಿತ್ತು. ಇದರ ದಕ್ಷಿಣದ ಕೂಟದ ಪಾರ್ಶ್ವದಲ್ಲಿ ಪ್ರವೇಶದ್ವಾರ ಇತ್ತು. ಇಟ್ಟಿಗೆಯ ಅಳತೆ ೩೩×೨೪×೭, ೨೦×೨೦×೭.೫, ೧೮×೧೮×೬ ಮುಂತಾಗಿ ಇವೆ. ಈ ದೇವಾಲಯದ ಹೊರ ಭಾಗ ಸಂಪೂರ್ಣವಾಗಿ ಹೂತುಹೋಗಿದೆ. ಈ ದೇವಾಲಯದ ಮತ್ತೊಂದು ವೈಶಿಷ್ಟ್ಯ ವೆಂದರೆ ರಂಗಮಂಟಪದ ಗೋಡೆಯಲ್ಲಿ ಇಟ್ಟಿಗೆಯಲ್ಲೇ ದೇವಕೋಷ್ಟಗಳನ್ನು ನಿರ್ಮಿಸಲಾಗಿದೆ. ಆದರೆ ಇವು ಶೈಲಿಯಲ್ಲಿ ಶಿಲಾ ಕೋಷ್ಟಗಳಂತೇ ಇರದೇ ಸರಳವಾದ ಕೋರ್ಬೆಲ್ ಕಮಾನಿನ ಗೂಡಿನಂತೆ ಇವೆ.

ಸೊರಬ ತಾಲ್ಲೂಕಿನ ಹಂಚಿಯ ಈಶ್ವರ ದೇವಾಲಯದ ರಂಗಮಂಡಪದ ಸುತ್ತ ಗೋಡೆಯ ಅವಶೇಷಗಳು ಈಗ ಉಳಿದುಬಂದಿಲ್ಲ. ಆದರೆ ಗರ್ಭಗೃಹ ಹಾಗೂ ಸುಕನಾಸಿಯ ಸುತ್ತ ಗೋಡೆ ಇದೆ. ಈ ಗೋಡೆಯ ಹೊರಮೈಯಲ್ಲಿ ಅಧಿಷ್ಠಾನದ ದಿಂಡುಗಳನ್ನು ಗುರುತಿಸಬಹುದು. ಈ ಗೋಡೆ ತೀವ್ರವಾಗಿ ಶಿಥಿಲವಾಗಿದ್ದು ಶೈಲಿಯನ್ನು ಸ್ಪಷ್ಟವಾಗಿ ಗುರುತಿಸುವುದು ಕಷ್ಟ. ಆದರೆ ಇಟ್ಟಿಗೆಯ ಅಧಿಷ್ಠಾನದಲ್ಲೂ ಕಲ್ಲಿನ ಅಧಿಷ್ಠಾನದ ಕುಮುದಗಳಂಥ ದಿಂಡುಗಳಿದ್ದವೆಂಬುದು ತೊರವಂದದ ಬಯಲು ಬಸವಣ್ಣನ ಗುಡಿಯಲ್ಲಿ ಸಿಕ್ಕ ಇಟ್ಟಿಗೆಯಿಂದ ವಿದಿತವಾಗುತ್ತದೆ.

ಶಿಕಾರಿಪುರ ತಾಲೂಕಿನ ಬಂದಳಿಕೆಯ ತ್ರಿಮೂರ್ತಿ ದೇವಾಲಯದ ಎದುರು ಇರುವ ಎರಡು ತ್ರಿಕೂಟಾಚಲಗಳಲ್ಲಿ (?) ಕೂಡ ಇಟ್ಟಿಗೆಯ ಗೋಡೆಗಳನ್ನು ಗಮನಿಸಬಹುದು. ಇಲ್ಲಿ ಮುಖ್ಯ ಕೂಟಗಳ ಅಧಿಷ್ಠಾನ ಕಲ್ಲಿನಲ್ಲೇ ಇದೆ. ಇಟ್ಟಿಗೆಗಳ ಅಳತೆ ೩೨×೨೦×೭.೫, ೩೨×೨೨×೭.೫, ೩೦×೨೧×೭.೫, ೨೪×೨೦×೮, ೨೧×೨೧×೬ ಸೆಂ.ಮೀ. ಗಳಷ್ಟು ವೈವಿಧ್ಯತೆಯನ್ನು ಹೊಂದಿದೆ.

ಈ ದೇವಾಲಯಗಳಲ್ಲಿ ಕಲ್ಲಿನ ಕೆತ್ತನೆಗಳು ಯಾವುದೇ ಶಿಲಾದೇವಾಲಯಗಳಿಗಿಂತಲೂ ಕಡಿಮೆ ಇಲ್ಲ. ಹಂಚಿಯ ಈಶ್ವರ ದೇವಾಲಯದ ರಂಗಮಂಟಪದ ಅಂಕಣದ ಶಿಲ್ಪಗಳು ಬಹಳ ಸುಂದರವಾಗಿವೆ. ಅಂದರೆ ಅಗತ್ಯವಿರುವೆಡೆಯಲ್ಲೆಲ್ಲ ಶಿಲ್ಪಕಲಾ ನೈಪುಣ್ಯತೆಯ ಉಪಯೋಗವನ್ನು ತೆಗೆದುಕೊಳ್ಳಲಾಗಿದೆ.

೨ ಆ) **ಶಿಖರದಲ್ಲಿ ಇಟ್ಟಿಗೆಗಳು:** ಶಿಖರಭಾಗದಲ್ಲಿ ಇಟ್ಟಿಗೆಗಳನ್ನು ಹೊಂದಿದ ದೇವಾಲಯಗಳು ತೆವರತೆಪ್ಪದಲ್ಲಿ, ಸಾತೇನಹಳ್ಳಿಯಲ್ಲಿ, ಬೇಗೂರು, ಹಿರೇಮಾಗಡಿ, ಬಾರಂಗಿ ಮುಂತಾದ ಸ್ಥಳಗಳಲ್ಲಿವೆ. ಇಂಥ ಶಿಖರಗಳು ಈಗ ಸಂಪೂರ್ಣವಾಗಿ ಹಾಳಾಗಿರುವುದರಿಂದ ಅವುಗಳ ಪೂರ್ಣ ರೂಪವನ್ನು ಗ್ರಹಿಸುವುದು ಕಷ್ಟ. ತೆವರತೆಪ್ಪದ ೧೨ನೇ ಶತಮಾನದ ಜೈನ ದೇವಾಲಯವೊಂದರಲ್ಲಿ ಅಧಿಷ್ಠಾನದಿಂದ ಮುಚ್ಚಿಗೆಯವರೆಗೆ ಸಂಪೂರ್ಣವಾಗಿ ಕಲ್ಲನ್ನು ಬಳಸಲಾಗಿದೆ. ಶಿಖರಭಾಗದಲ್ಲಿ ಸಂಪೂರ್ಣವಾಗಿ ಇಟ್ಟಿಗೆಯದೇ ಅವಶೇಷವಿದೆ. ಇವುಗಳ ಅಳತೆ ೩೩×೨೦×೭, ೨೧×೧೩×೬.೫ ಮುಂತಾಗಿ ಇದೆ. ಇಂಥ ಇಟ್ಟಿಗೆಗಳ ಸಾಲು ಮೇಲಕ್ಕೆ ಹೋದಂತೆಲ್ಲ ಮೆಟ್ಟಲು ಮೆಟ್ಟಲಾಗಿ ಒಳಕ್ಕೆ ಹೋಗಿ ಪಿರಾಮಿಡ್ಡಿನ ಆಕೃತಿಯನ್ನು ಉಂಟುಮಾಡುತ್ತದೆ. ಇದಕ್ಕೂ ಸ್ಪಷ್ಟವಾಗಿ ಅವುಗಳ ಜೋಡಣೆ ಕಾಣಿಸುವುದಿಲ್ಲ. ಗರ್ಭಗೃಹ, ರಂಗಮಂಡಪ ಎಲ್ಲವನ್ನೂ ಸೇರಿಸುವಂತೇ ಒಂದೇ ರಾಶಿಯಾಗಿ ಈ ಇಟ್ಟಿಗೆಗಳು ಮೇಲೆ ಉಲ್ಲೇಖಿಸಿದ ಎಲ್ಲ ದೇವಾಲಯಗಳಲ್ಲೂ ಕಾಣಿಸುತ್ತವೆ. ಹಿರೇಕೆರೂರು ತಾಲೂಕಿನ ಸಾತೇನಹಳ್ಳಿಯ ಸೋಮೇಶ್ವರ ದೇವಾಲಯದ ಶಿಖರ ಭಾಗದಲ್ಲಿ ಮಣ್ಣಿನ ರಾಶಿಯ ನಡುವೆಯೂ ತೆವರತೆಪ್ಪದಲ್ಲಿ ಕಂಡುಬಂದಂಥ ಜೋಡಣೆ ಅಲ್ಲಲ್ಲಿ ಕಾಣಸಿಕ್ಕುತ್ತದೆ. ಈ ಇಟ್ಟಿಗೆಗಳು ಮಧ್ಯಕಾಲೀನ ಇಟ್ಟಿಗೆಯ ಶಿಖರವನ್ನೇ ಸೂಚಿಸುತ್ತವೆಯೋ ಇಲ್ಲ, ಕಲ್ಲಿನ ಶಿಖರದ ಒಡಲಿನಲ್ಲಿ ಏನಾದರೂ ಈ ರೀತಿ ಇಟ್ಟಿಗೆಯನ್ನು ತುಂಬಿದ್ದಾರೋ ಎಂಬ ಸಂದೇಹವೂ ತಾಳುತ್ತದೆ. ಆದರೆ ಶಿಥಿಲವಾದ ಕಲ್ಲಿನ ಶಿಖರಗಳ ಒಳಗೆಲ್ಲೂ ಇಂಥ ಇಟ್ಟಿಗೆಗಳನ್ನು ಪ್ರಸ್ತುತ ಲೇಖಕರು ನೋಡಿಲ್ಲ.

೩) **ಕಲ್ಲಿನ ದೇವಾಲಯಗಳಿಗೆ ಸೇರಿಸಿದ ಇಟ್ಟಿಗೆಯ ಕಟ್ಟಡಗಳು:** ಮಧ್ಯಕಾಲೀನ ಕಲ್ಲಿನ ದೇವಾಲಯಗಳಿಗೆ, ಹಾಗೂ ಇತರ ದೇವಾಲಯಗಳಿಗೆ ಪ್ರಾಕಾರ ಹಾಗೂ ದ್ವಾರಗೋಪುರಗಳನ್ನು ಇಟ್ಟಿಗೆಯಲ್ಲಿಯೂ ನಿರ್ಮಿಸಿದ ಸಾಧ್ಯತೆ ಇದೆ. ಇಂಥ ಒಂದು ಸ್ಪಷ್ಟ ಉದಾಹರಣೆ ಸೊರಬ ತಾಲೂಕಿನ ಕೋಡಕಣಿಯ ಸಿದ್ಧರಾಮೇಶ್ವರ ದೇವಾಲಯದಲ್ಲಿ ಸಿಗುತ್ತದೆ. ಈ ದೇವಾಲಯ ಸಂಪೂರ್ಣ ಕಲ್ಲಿನದಾಗಿದ್ದು ೧೨-೧೩ನೇ ಶತಮಾನದಲ್ಲಿ ನಿರ್ಮಿತವಾಗಿದೆ. ಈ ದೇವಾಲಯದ ಅಧಿಷ್ಠಾನದ ಹೊರಭಾಗದಲ್ಲಿ ಅಲ್ಲಲ್ಲಿ ಇಟ್ಟಿಗೆಯ ಗೊಡೆಯ ಕುರುಹುಗಳಿವೆ. ಇವು ಮೂಲತಃ ಒಂದು ಪ್ರಾಕಾರದ್ದಾಗಿರಬಹುದು. ಏಕೆಂದರೆ ಈ ಎದುರು ಭಾಗದಲ್ಲಿ ಒಂದು ಇಟ್ಟಿಗೆಯ ಪ್ರವೇಶ ಗೋಪುರದ ತಳಪಾಯ ಅಲ್ಲಲ್ಲಿ ಕಾಣುತ್ತವೆ. ಪ್ರವೇಶ ದ್ವಾರದ ಎರಡೂ ಕಡೆ ಎರಡು ಕೋಣೆಗಳು ಅಥವಾ ಅಂತಹ ಕಟ್ಟಡಗಳು ಇದ್ದುದಂತೂ ಸ್ಪಷ್ಟ. ಇಟ್ಟಿಗೆಯ ಅಳತೆ ೨೨×೧೮×೭.೫ ಸೆಂ.ಮೀ. ಈ ಕಟ್ಟಡಗಳು ಕಾಲಮಾನ ಕೂಡ ಸಧ್ಯಕ್ಕೆ ಅಧಿಕೃತವಾಗಿಲ್ಲ.

೪) **ಮಧ್ಯಕಾಲೀನ ಹೆಂಚುಗಳು:** ಈ ಕಾಲದ ಹೆಂಚುಗಳಿಗೆ ಕೊಡಬೇಕಾದಷ್ಟು ಗಮನವನ್ನು ಇಲ್ಲಿಯವರೆಗೆ ಕೊಟ್ಟಿಲ್ಲ ಎನಿಸುತ್ತದೆ. ಏಕೆಂದರೆ ಪ್ರಾಕ್ತನಶಾಸ್ತ್ರೀಯ ಅನ್ವೇಷಣೆ ಹಾಗೂ ಉತ್ಖನನದ ವರದಿಗಳಲ್ಲಿ ಈ ಮಾದರಿಯ ಹೆಂಚುಗಳ ಕುರಿತು ವರದಿ ನನ್ನ ಗಮನಕ್ಕೆ ಬಂದಿಲ್ಲ[7]. ಆದರೆ ಸಾಮಾನ್ಯವಾಗಿ ಈ ಮೇಲೆ ಉಲ್ಲೇಖಿಸಿದ ಎಲ್ಲ

ೇವಾಲಯಗಳಲ್ಲೂ, ಸ್ಥಳಗಳಲ್ಲೂ ಇಟ್ಟಿಗೆಗಳ ಜೊತೆಗೇ ಂದು ರೀತಿಯ ಹೆಂಚುಗಳು ಕಂಡುಬರುತ್ತವೆ. ಕೆಲವೊಮ್ಮೆ ಟ್ಟಿಗೆಯ ಅವಶೇಷಗಳು ಸಿಗದೆಡೆಗಳಲ್ಲೂ ಇವು ಸಿಗುತ್ತವೆ. ಟ್ಟಿನಲ್ಲಿ ಇಟ್ಟಿಗೆಗಳಿಗಿಂತ ವ್ಯಾಪಕವಾಗಿ ಹೆಂಚುಗಳು ಗುತ್ತವೆ. ಈ ಹೆಂಚುಗಳು ಶಾತವಾಹನದ ಕಾಲದ ಹೆಂಚುಗಳಂತೆಯೂ ಇಲ್ಲ, ವಿಜಯನಗರೋತ್ತರ ಕಾಲದ ಹೆಂಚುಗಳಂತೆಯೂ ಇಲ್ಲ. ಇವನ್ನು ಅನೇಕ ಸಾಂದರ್ಭಿಕ ಅಂಶಗಳನ್ನು ಗಮನಿಸಿ ಕದಂಬ ಕಾಲದಿಂದ ೧೨-೧೩ನೇ ಶತಮಾನದವರೆಗಿನವು ಎಂದು ಪರಿಗಣಿಸಬಹುದು.

ಇಂಥ ಹೆಂಚುಗಳು ಈ ಪ್ರದೇಶದಲ್ಲಿ ಮಾತ್ರವಲ್ಲ, ಕರಾವಳಿಯ ಹೈಗುಂದದಲ್ಲೂ, ಚಿಕ್ಕಮಗಳೂರಿನ ಅಸಂದಿ ಯಲ್ಲೂ ಸಿಗುತ್ತವೆ. ಈ ಎರಡೂ ನಿವೇಶನಗಳೂ ಕದಂಬ-ಕಲ್ಯಾಣಿ ಚಾಲುಕ್ಯ ಕಾಲಕ್ಕೆ ಸೇರಿದವು. ಇಂಥ ಹೆಂಚುಗಳನ್ನು ಶಿರಸಿಯ ಗುಡ್ನಾಪುರದಲ್ಲೂ ಪ್ರಸ್ತುತ ಲೇಖಕರು ನೋಡಿದ್ದಾರೆ. ಇವುಗಳ ಗಾತ್ರ ವೈವಿಧ್ಯತೆ ಅಧಿಕವಾಗಿದೆ. ಹೈಗುಂದದ ಹೆಂಚುಗಳು ೨೦×೧೨, ೧೮×೧೪ ಸೆಂ.ಮೀ. ಗಳ ಅಳತೆಯನ್ನು ಹೊಂದಿದ್ದರೆ ಆಸಂದಿಯವು ೫.೫×೧೦ ಸೆಂ.ಮೀ.ಯಷ್ಟು ಚಿಕ್ಕದಾಗಿವೆ. ನಾಗರಖಂಡ ಸುತ್ತಮುತ್ತಲಿನ ಪ್ರದೇಶದಲ್ಲಿ ಇದರ ಮೂರು ಅಳತೆಗಳು ಸಾಧಾರಣವಾಗಿ ಕಂಡುಬರುತ್ತವೆ. ೨೪.೫×೧೦,೧೮×೯,೨೨×೧೦.೫ ಸೆಂ.ಮೀ. ಇದಕ್ಕೂ ಸಣ್ಣ ಹೆಂಚುಗಳೂ ಇವೆ. ಈ ಹೆಂಚುಗಳೆಲ್ಲ ಗಾತ್ರದಲ್ಲಿ ಮಾತ್ರ ವೈವಿಧ್ಯಪೂರ್ಣವಾಗಿಯೇ ಹೊರತು ಅವುಗಳ ಆಕಾರ ಏಕರೂಪದಲ್ಲಿದೆ. ಹಾಗಾಗಿ ಇವೊಂದು ಸಾಪೇಕ್ಷ ಕಾಲಗಣನೆಯ ಮಾನದಂಡಗಳಾಗಿ ಪ್ರಾಕ್ತನ ಶಾಸ್ತ್ರಜ್ಞರಿಗೆ ಸಹಾಯವಾಗುವುದರಲ್ಲಿ ಸಂಶಯವಿಲ್ಲ. ಈ ಹೆಂಚುಗಳ ಎರಡೂ ಮೈ ಸಮತಲವಾಗಿದ್ದು ಒಂದು ತುದಿ ಬಾಗಿರುತ್ತದೆ. ಮತ್ತೊಂದು ತುದಿ ನೇರವಾಗಿ ಇರಬಹುದು ಇಲ್ಲ ಚೂಪಾದ ಅಥವಾ ಅರ್ಧ ವರ್ತುಳಾಕಾರದ ದಳದಂಥ ತುದಿ ಅಥವಾ ಎರಡು ಅಥವಾ ಮೂರು ಧಳಗಳಂಥ ತುದಿ ಇರುತ್ತದೆ.

ಈ ಹೆಂಚುಗಳನ್ನು ಆಗಿನ ಕಾಲದ ಕಟ್ಟಡಗಳಲ್ಲಿ ಹೇಗೆ ಉಪಯೋಗಿಸಿದ್ದರೆಂಬುದು ತಿಳಿದುಬರುವುದಿಲ್ಲ. ಆದರೆ ಒಂದೆರಡು ಶಿಲ್ಪಗಳಲ್ಲಿ ಹೆಂಚಿನ ಮಾಡುಗಳ ಚಿತ್ರಣವನ್ನು ಹೋಲುವ ಅಲಂಕಾರಗಳಿವೆ. ಬಂದಳಿಕೆಯ ಶಾಂತಿನಾಥ ಬಸದಿಯಲ್ಲಿ ಸುಕನಾಸಿಯ ಅಂಕಣದ ಒಳಭಾಗದ ಮಧ್ಯ ಭಾಗ ಚೌಕಾಕಾರದ ಚಿತ್ರದ ಫಲಕವನ್ನು ಹೊಂದಿದ್ದು ಅದರ ನಾಲ್ಕೂ ಬದಿಗಳಿಗೆ ಇಳಿಜಾರಾದ ಮಾಡುಗಳನ್ನು ತೋರಿಸಲಾಗಿದೆ. ಈ ಮಾಡುಗಳ ಮೇಲೆ ನಾವು ಈ ಮೇಲೆ ಪರಿಶೀಲಿಸಿದ ಹೆಂಚುಗಳ ಎರಡು ಸಾಲುಗಳನ್ನು ಚಿತ್ರಿಸಿದ್ದಾರೆ. ಬಹುಶಃ ಇದನ್ನೇ ಸ್ವಲ್ಪ ಕಲಾತ್ಮಕವನ್ನಾಗಿ ಮಾಡಲು ಹೆಂಚುಗಳನ್ನು ಪದ್ಮದಳಗಳಂತೆ ಕಾಣಿಸಲಾಗಿದೆ. ಹೀಗೆ ಇಂಥ ಉದಾಹರಣೆಯನ್ನು ನಾವು ಪರಿಗಣಿಸಿ ಇಂಥ ಹೆಂಚುಗಳು ಆ ಕಾಲದಲ್ಲಿ (೧೩ನೇ ಶತಮಾನದಲ್ಲಿ) ಇದ್ದವೆಂದು ತೀರ್ಮಾನಿಸಬಹುದು.[8]

**ವಿಶ್ಲೇಷಣೆ :**

ಈ ಲೇಖನದಲ್ಲಿ ಪರಿಶೀಲಿಸಿದ ಈ ಮೇಲಿನ ಎಲ್ಲ ಅವಶೇಷಗಳನ್ನು ಯಾವ ಕಾಲಕ್ಕೆ ಸೇರಿಸಬೇಕು ಎನ್ನುವ ಸಮಸ್ಯೆ ಹಾಗೇ ಉಳಿಯುತ್ತದೆ. ಇಲ್ಲಿ ಸಿಕ್ಕಿದ ಇಟ್ಟಿಗೆಗಳಲ್ಲಿ ದೀರ್ಘ ಆಯತಾಕಾರದವು ಹಾಗೂ ಚೌಕದವು ಎಂದು ಎರಡು ಪ್ರಕಾರವನ್ನು ಮಾಡಬಹುದು. ಇವುಗಳ ದಪ್ಪ ಸಾಧಾರಣವಾಗಿ ೭ ರಿಂದ ೮ ಸೆಂ.ಮೀ.ಯಷ್ಟಿರುತ್ತದೆ. ಉದ್ದ ಇಟ್ಟಿಗೆಗಳು ೩೦ ರಿಂದ ೩೪ ಸೆಂ.ಮೀ. ಗಳಷ್ಟು ಉದ್ದ ಇದ್ದು ೨೦ ರಿಂದ ೨೪ ಸೆಂ.ಮೀ.ರಷ್ಟು ಅಗಲ ಇರುತ್ತವೆ. ಚೌಕಾಕಾರದ ಇಟ್ಟಿಗೆಗಳು ೧೯ ಸೆಂ.ಮೀ. ಗಿಂತಲೂ ದೊಡ್ಡದಾಗಿರುತ್ತವೆ. ಇದಕ್ಕೂ ನಿಖರವಾಗಿ ಈ ಇಟ್ಟಿಗೆಗಳ ಅಳತೆಯ ಮಾನದಂಡವನ್ನು ಕಾಣುವುದು ಅಸಾಧ್ಯ. ಇದಕ್ಕೂ ಸ್ವಲ್ಪ ದೊಡ್ಡ ಇಟ್ಟಿಗೆಗಳನ್ನು ಶಾತವಾಹನದ ಕಾಲದ ನಿವೇಶನಗಳಲ್ಲಿ ಕಾಣುತ್ತೇವೆ. ಉದಾಹರಣೆಗೆ ವಡಗಾಂವ್--ಮಾಧವಪುರದ ಉತ್ಖನನಕಾರರ ಪ್ರಕಾರ ಈ ಅಳತೆ ೪೫×೨೨×೮, ೫೨×೨೭×೧೦, ೩೪×೩೭×೧೦, ೨೪×೨೫×೮

7. ಇಂಥ ಹೆಂಚುಗಳನ್ನು ಅ.ಸುಂದರ ಅವರು ಸಂಗ್ರಹಿಸಿದ್ದಾರಂತೆ. ಅವರೇ ಮುಖತಃ ಹೇಳಿದಂತೆ ಇವು ಕದಂಬ ಕಾಲದಿಂದ ಚಾಲುಕ್ಯ ಕಾಲದವರೆಗಿನವು ಎಂಬುದರಲ್ಲಿ ಸಂಶಯವಿಲ್ಲ.

8. ಈ ಬಸದಿ ರಾಷ್ಟ್ರಕೂಟರ ಕಾಲದಲ್ಲೇ ಇತ್ತೆಂಬುದು ಶಾಸನಾಧಾರದಿಂದ ತಿಳಿದು ಬರುತ್ತದೆ. ನಂತರ ೧೦೭೫ರಲ್ಲಿ ಹಾಗೂ ೧೨೦೪ರಲ್ಲಿ ಅವರ ಜೀರ್ಣೋದ್ಧಾರಗಳಾದದ್ದು ಕಂಡುಬರುತ್ತದೆ. ೧೨೦೪ರಲ್ಲಿ ಅದರ ಕಲ್ಲಿನ ಮಂಡಪವನ್ನು ಮಾಡಿಸಲಾಯ್ತು ಈ ಬಸದಿಯ ವಿಮಾನ ವಿನ್ಯಾಸ ಈಗಿರುವಂತೆ ೧೨ನೇ ಶತಮಾನಕ್ಕೂ ಪೂರ್ವದ್ದಾಗಿರಲಿಕ್ಕೆ ಶಕ್ಯವಿಲ್ಲ. ನೋಡಿ ಎ.ಕ.೭,೧, ಶಿಕಾರಿಪುರ ನಂ. ೨೧೯,೨೨೧,೨೨೫.



ಎಲೆವಾಳದ ಕಲ್ಲಪ್ಪನ ಗುಡಿಯ ರಂಗಮಂದಿರದ ಗೋಡೆ



ತೆವರ ತೆಪ್ಪದ ಬಸದಿ(ನಂ.೨)ಯ ರಂಗಮಂಟಪದ ಗೋಡೆ

ರಷ್ಟು ವೈವಿಧ್ಯಪೂರ್ಣವಾಗಿವೆ[9]. ಇಂಥ ಇಟ್ಟಿಗೆಗಳೇ ಕದಂಬ, ಗಂಗರ ಕಾಲದಲ್ಲೂ ಮುಂದುವರಿದಿದ್ದು ಕಂಡುಬರುತ್ತದೆ. ಅಂಥ ಇಟ್ಟಿಗೆಗಳ ನಿಖರವಾದ ಅಳತೆ ಪ್ರಸ್ತುತ ಲೇಖಕರಿಗೆ ಸಿಕ್ಕಿಲ್ಲ. ಶಿಕಾರಿಪುರದ ಸಂಡದಲ್ಲಿ ದೇವಾಲಯವೊಂದರ ಅವಶೇಷದಲ್ಲಿ ೪೧×೩೦×೮ ಸೆಂ.ಮೀ.ಗಳಷ್ಟು ದೊಡ್ಡ ಇಟ್ಟಿಗೆಗಳಿವೆ. ಇವು ೧೦ನೇ ಶತಮಾನಕ್ಕೂ ಪೂರ್ವದವು ಇದ್ದರೂ ಇರಬಹುದು. ಒಟ್ಟಾರೆಯಾಗಿ ಪ್ರಸ್ತತ ಲೇಖನದಲ್ಲಿ ಪರಿಶೀಲಿಸಿದ ಇಟ್ಟಿಗೆಗಳು ಶಾತವಾಹನರ ಕಾಲದ ಇಟ್ಟಿಗೆಗಳಿಗಿಂತ ಮಾನದಲ್ಲಿ ಸಣ್ಣದಿವೆ. ಈ ಇಟ್ಟಿಗೆಗಳು ೧೨-೧೩ನೇ ಶತಮಾನದವರೆಗೂ ಈ ಪ್ರದೇಶದಲ್ಲಿ ತಯಾರಾಗುತ್ತಿದ್ದವು. ಏಕೆಂದರೆ ಆ ಕಾಲದ ಶಿಲಾ ವಾಸ್ತುಗಳ ಮಧ್ಯದಲ್ಲಿ ಇಂಥ ಇಟ್ಟಿಗೆಗಳನ್ನು ನಿಯೋಜಿಸಿದ್ದಾರೆ. ಹಾಗಾಗಿ ಶಾತವಾಹನ ಕಾಲದ ಇಟ್ಟಿಗೆಗಳ ಸಂಪ್ರದಾಯ ಸ್ವಲ್ಪ ಸಣ್ಣ ಮಾನದಲ್ಲಿ ೧೨-೧೩ನೇ ಶತಮಾನದವರೆಗೂ ಅಸ್ತಿತ್ವದಲ್ಲಿದ್ದವು. ಇದರಿಂದ ನಮಗೆ ತಿಳಿದುಬರುವುದೇನೆಂದರೆ ಕರ್ನಾಟಕದಲ್ಲಿ ಪ್ರಾಚೀನ ಹಾಗೂ ಮಧ್ಯಕಾಲೀನ ಇತಿಹಾಸ ಕಾಲದಲ್ಲಿ ಅಖಂಡವಾಗಿ ಇಟ್ಟಿಗೆಯ ನಿರ್ಮಾಣ ಶೈಲಿಯೊಂದು ಬೆಳೆದುಕೊಂಡು ಬಂದಿತ್ತೆಂಬುದು. ಹಾಗಾಗಿ ವಿಜಯನಗರದ ವಾಸ್ತುಗಳಲ್ಲಿ ಕಂಡುಬರುವ ಅದರ ವಿಫುಲ ಉಪಯೋಗ ಕರ್ನಾಟಕ ಶಿಲಾ ವಾಸ್ತು ಸಂಪ್ರದಾಯಕ್ಕೆ ಹೊಸದಾಗಿರಲಿಲ್ಲ. ಹಾಗೂ ಇಂಥ ಇಟ್ಟಿಗೆಯ ದೇವಾಲಯಗಳನ್ನೆಲ್ಲ ೧೦ನೇ ಶತಮಾನದ ಪೂರ್ವಕ್ಕೇ ಸೇರಿಸುವದು ಸರಿಯಾಗಲಾರದು.

ಈ ರೀತಿಯಲ್ಲಿ ನಾಗರಖಂಡದ ಸುತ್ತಲಿನ ಪ್ರದೇಶಗಳಲ್ಲಿ ದೊರೆಮುವ ಇಟ್ಟಿಗೆಗಳು ಹಾಗೂ ಹೆಂಚುಗಳು ೧೦ ರಿಂದ ೧೩ನೇ ಶತಮಾನದವರೆಗಿನ ಈ ಪ್ರದೇಶದ ಭೌತಿಕ ಸಂಸ್ಕೃತಿಯನ್ನು ಸೂಚಿಸುತ್ತವೆ. ಶಿಲಾದೇಗುಲಗಳು ಆ ಕಾಲದ ದೇವಾಲಯ ವಾಸ್ತುವಿನ ಒಂದು ಮುಖವಾದರೆ ಇಟ್ಟಿಗೆಯ ದೇವಾಲಯಗಳು ಮತ್ತೊಂದು ಮುಖ. ಬಹುಶಃ ಇಂಥ ಇಟ್ಟಿಗೆಗಳ ಬಳಕೆ ಈ ಭಾಗದಲ್ಲಿ ೧೧-೧೨ನೇ ಶತಮಾನದಲ್ಲಿ ಅಧಿಕವಾಗಿ ಬೆಳೆದ ದೇವಾಲಯ ನಿರ್ಮಾಣ ಚಟುವಟಿಕೆಯಲ್ಲಿ ಕಚ್ಚಾವಸ್ತುವಿಗೆ ಉಂಟಾದ ತೀವ್ರ ಬೇಡಿಕೆಗೆ ಒಂದು ಪ್ರತಿಕ್ರಿಯೆಯಾಗಿ ಆಗಿರಬಹುದು.

(ಈ ಕ್ಷೇತ್ರಕಾರ್ಯದಲ್ಲಿ ನನ್ನೊಂದಿಗಿದ್ದು ಸಹಕರಿಸಿದ ಶ್ರೀ ಶ್ರೀ ಪಾದರಾವ್ ಬಿಚ್ಚುಗತ್ತಿ, ಶ್ರೀ ಮಂಜುನಾಥ ಹಾಗೂ ಶ್ರೀ ಕುಮಾರಸ್ವಾಮಿಯವರನ್ನು ಕೃತಜ್ಞತೆಯಿಂದ ನೆನೆಯುತ್ತೇನೆ). ೦

9. ಅ.ಸುಂದರ : ''ಎ ಟೂ ಥೌಸಂಡ್ ಇಯರ್ ಓಲ್ಡ್ ಟೌನ್ ಎಂಡ್ ಇಟ್ಸ್ ಆರ್ಕಿಟೆಕ್ಚರ್ ಇನ್ ವಡಗಾಂವ್-ಮಾದವಪುರ ಇನ್ ಕರ್ನಾಟಕ'' ಮಧು, ಸಂ : ಎಮ್.ಎಸ್.ನಾಗರಾಜ ರಾವ್, ಆಗಮ ಕಲಾ ಪ್ರಕಾಶನ ದೆಹಲಿ, ೧೯೮೧, ಪುಟ ೯೬. ಆ ಕಾಲದ ಮಾದರಿ ಇಟ್ಟಿಗೆಯ ಗಾತ್ರ ೪೫×೨೨×೮ ಸೆಂ.ಮಿ. ಎಂದು ವರದಿ ಮಾಡಿದ್ದಾರೆ.

ತುಂಕೂರು ಸುನಂದಾ*

# ಬಸದಿಬೆಟ್ಟ - ಒಂದು ಅಧ್ಯಯನ

ಜನವಾಡಿಕೆಯ ಮಾತಲ್ಲಿ ಪ್ರಸಿದ್ಧವಾಗಿರುವ ಬಸದಿ ಬೆಟ್ಟಕ್ಕೆ ಇರುವ ಮತ್ತೊಂದು ಹೆಸರು ಮಂದರಗಿರಿ. ತುಮಕೂರಿನಿಂದ ಪೂರ್ವಕ್ಕೆ ಸುಮಾರು ಹತ್ತು ಕಿ.ಮೀ. ದೂರದಲ್ಲಿರುವ ಈ ಜೈನಕೇಂದ್ರ ಚಾರಿತ್ರಿಕವಾಗಿಯೂ ಪ್ರಸಿದ್ಧವಾಗಿದೆ. ಜೈನರ ನಂಬಿಕೆಯ ಪ್ರಕಾರ ಶ್ರೀ ಮಂದಾರಸ್ವಾಮಿ ಎಂಬ ವಿದೇಹ ತೀರ್ಥಂಕರರು ಇಲ್ಲಿ ಪಾದಸ್ಪರ್ಶ ಮಾಡಿದ್ದರಿಂದ ಆ ಹೆಸರಲ್ಲೇ 'ಮಂದರಗಿರಿ' ಎಂದು ಮತ್ತು ಇಲ್ಲಿ ಯಥೇಚ್ಛವಾಗಿ ಮಂದಾರಪುಷ್ಪಗಳು ಬಿಡುತ್ತಿದ್ದರಿಂದಲೂ ಈ ಹೆಸರು ಬಂದಿತೆಂದು ಪ್ರತೀತಿ. ಇದು ಏಕಶಿಲಾ ಬಂಡೆಯಾಗಿದ್ದು ಆಮೆಯಾಕಾರದಲ್ಲಿ ಕಾಣಬರುವುದರಿಂದಲೂ ಈ ಹೆಸರಾಯಿತ್ತು ಎಂಬ ಅಭಿಪ್ರಾಯಗಳಿವೆ.

ಇದು ಹೊಯ್ಸಳರ ಕಾಲದಲ್ಲಿ ಪ್ರಾಮುಖ್ಯತೆ ಪಡೆದಿತ್ತು ಎಂಬುದಕ್ಕೆ ಅಲ್ಲಿರುವ ಜೈನಬಸದಿಯ ಎದುರಿನಲ್ಲಿರುವ ಸುಮಾರು ೫೭ ಸಾಲಿನ ಶಾಸನ ಆಧಾರವಾಗಿದೆ. ಅಲ್ಲಿನ ಉಲ್ಲೇಖದ ಪ್ರಕಾರ ನರಸಿಂಹನ ಪ್ರತಿನಿಧಿಯಾಗಿದ್ದ ಬಾಲ ಈಶ್ವರಚಮೂಪತಿ ಎಂಬುವವನು ಈ ಪ್ರದೇಶದ ಆಡಳಿತಾಧಿಕಾರವನ್ನು ನೋಡಿಕೊಳ್ಳುತ್ತಿದ್ದನು. ಇವನಿಗೆ ಇಬ್ಬರು ಪತ್ನಿಯರು ; ಮಾಚಿಕಬ್ಬೆ ಮತ್ತು ಪದ್ಮಾವತಿ. ಪದ್ಮಾವತಿ ಜಿನಭಕ್ತಳಾಗಿದ್ದಳು. ಬೆಟ್ಟದ ಬುಡದಲ್ಲಿ ಕೆರೆಯೊಂದನ್ನು ನಿರ್ಮಿಸಿದಳು. ಅದನ್ನು ಇದೀಗ ಮೈದಾಳ ಎನ್ನುತ್ತಾರೆ. ನರುವಲಿ, ಶೀತಕಲ್, ಮಣ್ಣೆ, ಕಲ್ವಳಿ ಇವನ ಪ್ರದೇಶಕ್ಕೆ ಸೇರಿದ ಭಾಗಗಳು. ಇಲ್ಲಿನ ಜಿನದೇವಾಲಯವನ್ನು ಇವರು ನಿರ್ಮಿಸಿದರು ಎಂಬುದು ಈ ಶಾಸನದ ಮುಖ್ಯ ಪಾಠಾಂಶ.

ಈ ಏಕಶಿಲಾಬಂಡೆಯ ಮೇಲೆ ನಾಲ್ಕು ಜಿನಬಸದಿಗಳಿವೆ. ಇದರ ಸುತ್ತಲೂ ಪೌಳಿಗೋಡೆ ಮತ್ತು ದಕ್ಷಿಣ ಹಾಗೂ ಉತ್ತರಕ್ಕೆ ಮಹಾದ್ವಾರಗಳಿವೆ. ಇಲ್ಲಿರುವ ಪ್ರತಿ ಬಸದಿಗೂ ಪ್ರದಕ್ಷಿಣಾ ಪಥವಿದೆ. ನಾಲ್ಕು ಒಂದೇ ಸಾಲಿನ ನಿಟ್ಟಿನಲ್ಲಿ ಕಟ್ಟಲಾಗಿದೆ.

(ಅ) ಮೊದಲನೆಯ ಬಸದಿ ಚಂದ್ರನಾಥ ಬಸದಿ. ಇದರಲ್ಲಿ ಅಮೃತಶಿಲೆಯ ಚಂದ್ರನಾಥ ತೀರ್ಥಂಕರನ ವಿಗ್ರಹವಿದೆ. ಚಂದ್ರನ ಚಿಹ್ನೆಯಿದೆ.

(ಆ) ಎರಡನೆಯ ಬಸದಿಯಲ್ಲಿ ಸುಪಾರ್ಶ್ವನಾಥ ಸ್ವಾಮಿ ವಿಗ್ರಹ. ಇದು ಕರಿಶಿಲಾಮೂರ್ತಿ. ಸ್ವಸ್ತಿಕ ಚಿಹ್ನೆ ಇದೆ.

(ಇ) ಮೂರನೆಯ ಬಸದಿಯಲ್ಲಿ ಪಾರ್ಶ್ವನಾಥರ ಮೂರ್ತಿ. ಅಮೃತಶೀಲೆಯಲ್ಲಿ ಇದೆ. ಏಳು ಹೆಡೆಯ ಸರ್ಪ ಚಿಹ್ನೆ ಇದೆ.

(ಈ) ನಾಲ್ಕನೆಯ ಮಂದಿರದಲ್ಲಿ ಕರಿಶಿಲೆಯ ಸುಂದರವಾದ ನಿಲುಮೂರ್ತಿ ಚಂದ್ರನಾಥಸ್ವಾಮಿ. ಹೊಳಪುಕಲ್ಲು. ಇದರ ಎತ್ತರ ಸುಮಾರು ನಾಲ್ಕು ಅಡಿ, ಪೀಠ ಅರ್ಧ ಅಡಿ ಎತ್ತರವಿದೆ. ಪೀಠದಲ್ಲಿ ಕಮಲದಳಗಳು, ಅಕ್ಕಪಕ್ಕದಲ್ಲಿ ಯಕ್ಷ-ಯಕ್ಷಿ, ಹೂಬಳ್ಳಿಗಳನ್ನು ಬಿಡಿಸಲಾಗಿದೆ.

ಮೊದಲ ಮೂರು ಬಸದಿಯಲ್ಲಿರುವ ನವರಂಗಳಲ್ಲಿ ಸಾಧಾರಣ ಚೌಕಟ್ಟುಶೈಲಿಯ ಕಂಬಗಳಿವೆ. ನಾಲ್ಕನೆಯ ಚಂದ್ರನಾಥ ಬಸದಿಯ ನವರಂಗದ ಕಂಬಗಳು ಬಳೆಯಾಕಾರದ

* ನಂ. ೬, ೧ನೇ ರಸ್ತೆ, 'ಸವರ್ಣಾ', ಎಂ. ಸಿ. ಕಾಲೋನಿ, ತುಮಕೂರು-೫೭೨೧೦೨

ಮತ್ತು ಚೌಕಾಕಾರದ ಕಂಬಗಳನ್ನು ಹೊಂದಿದೆ. ಇಲ್ಲಿನ ಸೂರುವಿನ ಮೇಲ್ಭಾವಣಿಯಲ್ಲಿ ವಿಶೇಷವಾದ ಯಕ್ಷ-ಯಕ್ಷಿ ದಂಪತಿಗಳ ಚಿತ್ರಗಳು ಮತ್ತು ಅವರುಗಳು ವಾಹನಾ ರೂಢರಾಗಿರುವ ಸನ್ನಿವೇಶದ ಚಿತ್ರಗಳವೆ. ಗಜ, ಟಗರು, ಮತ್ತು, ಮಕರ, ಅಶ್ವ, ಗರುಡ ಮುಂತಾದ ಪ್ರಾಣಿ ವಾಹನಗಳನ್ನು ಇವರು ಹೊಂದಿದ್ದಾರೆ.

ಈ ಬಸದಿಯ ಗರ್ಭಗುಡಿಯ ಮೇಲೆ ಪಿರಮಿಡ್ಡಾಕಾರದ ಮೂರು ಅಂತಸ್ತಿನ ಗೋಪುರ, ಅದರಲ್ಲಿ ಸಿಂಹ, ಪುಷ್ಪಾದಿಗಳನ್ನು ಬಿಡಿಸಿರುವರು. ಈ ಬಸದಿಯ ಮುಂದೆ ಮುರಿದುಬಿದ್ದಿರುವ ಬ್ರಹ್ಮಸ್ತಂಭವುಂಟು. ಇದರ ಬಲ ಪಾರ್ಶ್ವದಲ್ಲಿ ಶ್ರೀಮಂದಾರ ಸ್ವಾಮಿಗಳ ಪೂಜನೀಯ ಪಾದದ್ವಯದ ಸ್ಮಾರಕವಿದೆ. ಈ ದೇವಾಲಯಗಳ ಪೌಳಿಗೋಡೆಯ ಹೊರಭಾಗದಲ್ಲಿ ಉತ್ತರಭಾಗಕ್ಕೂ ಶಾಸನಬರಹವಿದೆ. ಆದರೆ ಛಿದ್ರಛಿದ್ರವಾಗಿದೆ.

ಒಟ್ಟಾರೆ : (1) ಈ ಬಸದಿಗೆ ಏರಲು ಸುಮಾರು ೪೫೦ ಮೆಟ್ಟಿಲುಗಳುಂಟು. ಅದು ಇತ್ತೀಚೆಗೆ ಕಡೆದಿರಬಹುದು.

(2) ಈ ಬೆಟ್ಟದ ಸುತ್ತಲು ತಪ್ಪಲಲ್ಲಿ ಅಲ್ಲಲ್ಲೇ ಕೆಲವು ಕಲ್ಲಿನ ತಳಪಾಯದ ಕುರುಹುಗಳಿವೆ. ಇಲ್ಲಿ ಮೈದಾಳ ಎಂಬ ಪಟ್ಟಣ ವಿದ್ದಿರಬೇಕು.

(3) ನಾಲ್ಕು ಬಸದಿಗಳಲ್ಲಿ, ಕರಿಶಿಲೆಯಲ್ಲಿರುವ (ಅ) ಸುಪಾರ್ಶ್ವನಾಥ ಮತ್ತು (ಈ) ಚಂದ್ರನಾಥ ಬಸದಿ ಹೊಯ್ಸಳರ ಕಾಲದ್ದೆಂದು ಹೇಳಬಹುದು. ಏಕೆಂದರೆ ಆ ಕಾಲಕ್ಕೆ ಅಮೃತ ಶಿಲಾಮೂರ್ತಿಗಳ ಬಳಕೆ ಅಷ್ಟಾಗಿ ಕರ್ನಾಟಕದಲ್ಲಿ ಇರಲಿಲ್ಲ. ಆದ್ದರಿಂದ ಈ ಎರಡೇ ಬಸದಿಗಳು ಮಾತ್ರ ಹೊಯ್ಸಳರ ಕಾಲದ್ದು ಎನ್ನಬಹುದು.

(4) (ಆ) ಚಂದ್ರನಾಥ (ಇ) ಪಾರ್ಶ್ವನಾಥ ಬಸದಿಗಳಲ್ಲಿರುವ ಮೂರ್ತಿಗಳು ಅಮೃತಶಿಲೆಯದ್ದಾಗಿದ್ದು ಬಹುಶಃ ಅನಂತರದ್ದು ಎಂದರೆ ೧೫-೧೬ನೇ ಶತಮಾನದ ನಂತರ ಉತ್ತರ ಭಾರತದಿಂದ ಪ್ರಭಾವಿತರಾದ ಭಕ್ತರು ಇಲ್ಲಿ ಈ ಅಮೃತ ಶಿಲಾಮೂರ್ತಿಗಳನ್ನೂ ಸ್ಥಾಪಿಸಿರಬೇಕು.

(5) ಹೊಯ್ಸಳರೇ (ಆ)ಚಂದ್ರನಾಥ (ಈ) ಚಂದ್ರನಾಥ (ಒಬ್ಬನೇ ತೀರ್ಥಂಕರರ) ಎರಡು ಬಸದಿಗಳನ್ನು ನಿರ್ಮಿಸಿದರೆಂಬುದನ್ನು ಒಪ್ಪಲಾಗುವುದಿಲ್ಲ.

(6) ಶಾಸನದಲ್ಲಿ ಹೊಯ್ಸಳರು ಇಷ್ಟೇ ಬಸದಿಗಳನ್ನು ನಿರ್ಮಿಸಿದರು ಎಂಬ ಉಲ್ಲೇಖನವೂ ಇಲ್ಲ.

(7) ಇದೀಗ ಬೆಟ್ಟದ ಉತ್ತರಕ್ಕಿರುವ 'ಮೈದಾಳ'ಕೆರೆಯಿಂದ ತುಮಕೂರು ನಗರಕ್ಕೆ ನೀರು ಸರಬರಾಜು ಆಗುತ್ತಿದೆ. ಇದನ್ನು ಚಮೂಪತಿ ಪತ್ನಿ ಪದ್ಮಾವತಿ ಎಂಬುವಳು ನಿರ್ಮಿಸಿದಳು ಆಕೆ ಪ್ರತಿನಿತ್ಯ 'ಮೈದೊಳೆದು' ಬೆಟ್ಟಕ್ಕೆ ಬಂದು ಜಿನ ಪೂಜೆಮಾಡುತ್ತಿದ್ದಳು. ಬಹುಶಃ ಕೆರೆಯಲ್ಲಿ 'ಮೈದೊಳೆದು'ಎಂಬ ಪದವೇ ರೂಪಾಂತರ ಹೊಂದಿ 'ಮೈದಾಳ'ವಾಗಿರಬೇಕೆಂಬ ಅಭಿಪ್ರಾಯ. ಈ ಪಟ್ಟಣಕ್ಕೆ 'ಮೈದೊಳಹು'ಎಂಬ ಹೆಸರು ಇತ್ತೆಂದು ಶಾಸನದಲ್ಲೂ ತಿಳಿದುಬರುತ್ತದೆ.

ಇತ್ತೀಚೆಗೆ ಬೆಟ್ಟಹತ್ತಿಹೋಗುವ ಹಾದಿಯ ಪಕ್ಕದಲ್ಲಿ ಒಂದು ಬ್ರಹ್ಮಮಂದಿರವನ್ನು ಜಿನಭಕ್ತರು ನಿರ್ಮಿಸಿದ್ದಾರೆ. ಒಟ್ಟನಲ್ಲಿ ಈ ಬಸದಿಬೆಟ್ಟ ಧಾರ್ಮಿಕ ಮತ್ತು ಚಾರಿತ್ರಿಕ ಪ್ರಾಮುಖ್ಯತೆಯನ್ನು ಒಂದು ಕಾಲದಲ್ಲಿ ಪಡೆದಿತ್ತು ಎಂಬುದು ನಿಸ್ಸಂದೇಹವಾಗಿ ಹೇಳಬಹುದು.

ಮೋಹನ ಗ. ಹೆಗಡೆ*

# ಕೆಳದಿಯ ವಾಸ್ತುಶಿಲ್ಪದ ಮೇಲೆ ಹೊಸ ಬೆಳಕು

ವೀರಭದ್ರಮಂದಿರ

ಕೆಳದಿಯ ರಾಮೇಶ್ವರ ಮಂದಿರ ಸಂಕೀರ್ಣದಲ್ಲಿ ರಾಮೇಶ್ವರ ಮಂದಿರದ ಬಲದಲ್ಲಿ "ವೀರಭದ್ರ" ದೇವಾಲಯ ಇದೆ. ಇದು ೪.೫೭ ಮೀಟರ್ ಅಗಲ ೬.೬೨ ಮೀಟರ್ ಉದ್ದದ ಸುಂದರವಾದ ಶಿಲಾರಂಗಮಟಪವನ್ನು ಹೊಂದಿದೆ. ಒಳಗಡೆ ಸುತ್ತ ಕೂಡ್ರಲು ಕಲ್ಲಿನ ಕಟ್ಟೆ ಇದೆ. ಒಟ್ಟು ೪ ಅಂಕಣಗಳನ್ನು ಹೊಂದಿದೆ. ಮಂದಿರ ಪ್ರವೇಶಿಸಿದಾಗ ಸಿಗುವ ೨ನೇ ಅಂಕಣದಲ್ಲಿ ಸುಮಾರು ೨×೪ ಅಳತೆಯ ದೇಶಪ್ರ ಸಿದ್ಧ ಗಂಢಭೇರುಂಡ ಲಾಂಛನ ಶಿಲ್ಪವಿದೆ.

ಈ ಮಂದಿರದಲ್ಲಿ ಕಂಡುಬರುವ, ಈಗ ಬೆಳಕಿಗೆ ಬರುತ್ತಿರುವ ಕೆಲ ವಿಶಿಷ್ಟ ಶಿಲ್ಪಗಳು, ಇದು ಮೂಲತ: ವೀರಭದ್ರ ದೇವಾಲಯ ಇರಲಾರದು ಎಂಬ ಅಭಿಪ್ರಾಯವನ್ನು ಮೂಡಿಸುತ್ತಿದೆ. ರಂಗಮಂಟಪದ ನೆಲಮಟ್ಟದಿಂದ ೨' ಎತ್ತರದಲ್ಲಿ ನಾಲ್ಕನೇ ಅಂಕಣ ಇದೆ. ಪ್ರಧಾನ ಬಾಗಿಲು ಇರುವ ಈ ಶಿಲಾಭಿತ್ತಿಯಲ್ಲಿ ನಮಗೆ ಆಸಕ್ತಿ ಹುಟ್ಟಿಸುವ ಅನೇಕ ವಿಶಿಷ್ಟ ಕೆತ್ತನೆಗಳಿವೆ.

ಪ್ರಧಾನದ್ವಾರದ ಬಲಗಡೆಯ ಗೋಡೆಯಲ್ಲಿ ೫'×೨' ಅಳತೆಯ ಕೈಮುಗಿದು ನಿಂತ ದಕ್ಷಬ್ರಹ್ಮನಿದ್ದಾನೆ. ಎಡಗಡೆ ಇದೇ ಅಳತೆಯ ನಿಂತ ನರಸಿಂಹನ ವಿಗ್ರಹವಿದೆ. ವೈಷ್ಣವ ದೇವಾಲಯಗಳಲ್ಲಿ ಮಾತ್ರ ಕಾಣಬರುವ ಶಿಲ್ಪವಿದು.

ಇದೇ ದ್ವಾರದ ಪ್ರವೇಶದಲ್ಲಿ ತಲೆಗೆ ಅಡ್ಡಲಾಗಿ ಶಿಲಾಫಲಕವಿದೆ. ಇದರಲ್ಲಿ ಮಧ್ಯೆ ಗಜಲಕ್ಷ್ಮಿ ಶಿಲ್ಪವಿದೆ. ಇದರ ಬಲಗಡೆ ಪರಸ್ಪರ ಕೊರಳನ್ನು ಸುತ್ತಿಕೊಂಡ ೨ ಗರುಡಗಳಿವೆ. ಪಕ್ಕದಲ್ಲಿ ಒಂದೇ ಹಣ್ಣನ್ನು ಎದುರು ಬದುರಾಗಿ ಕಚ್ಚಿಕೊಂಡ ಗಿಳಿಗಳಿವೆ. ಬಲಪಕ್ಕದಲ್ಲಿ ಇದೇ ರೀತಿ ಒಂದೇ ಹಣ್ಣನ್ನು ಕಚ್ಚಿರುವ ಶೃಂಗಾರಿತ ಹಂಸಪಕ್ಷಿಗಳಿವೆ. ಇದರ ಪಕ್ಕದಲ್ಲೂ ಅಂಥದೇ ಗಿಳಿಗಳಿವೆ. ಗರುಡ ಹಂಸ ಪಕ್ಷಿಗಳು ವೈಷ್ಣವ ದೇವಾಲಯಗಳಲ್ಲಿ ಕಂಡು ಬರುವ ಲಕ್ಷಣಗಳು.

ಗಜಲಕ್ಷ್ಮಿಯ ಎಡಗಡೆ ೬"×೩" ಚೌಕಟ್ಟಿನಲ್ಲಿ ೧, ಅಂತರದಲ್ಲಿ ಕುಳಿತು ಕೈ ಮುಗಿಯುತ್ತಿರುವ ಗರುಡ, ಬಲಗಡೆಗೂ ಇದೇ ರೀತಿಯ ಎಡಕ್ಕೆ ಮುಖತಿರುಗಿಸಿ ನಿಂತ ವೀರಾಂಜನೇಯನಿದ್ದಾನೆ.

ಬಾಗಿಲ ಮೇಲ್ಗಡೆ ಮಧ್ಯಗೋಡೆಯಲ್ಲಿ ೪"×೬" ಅಳತೆಯ ಚೌಕಟ್ಟಿನಲ್ಲಿ ವೇಣುಗೋಪಾಲನಿದ್ದಾನೆ. ಈತನ ಬುಡದಲ್ಲಿ ದ್ವಾರ ರಕ್ಷಕನಾಗಿ ಗಣಪತಿ ಇದ್ದಾನೆ. ವಿಚಿತ್ರ ಎಂದರೆ ಜೊತೆಯಲ್ಲಿರಬೇಕಾದ ಇಲಿ ಇಲ್ಲ.

ಪ್ರಧಾನ ಬಾಗಿಲಿನ ಎರಡೂ ಪಾರ್ಶ್ವಗಳಲ್ಲಿ ಶೃಂಗಾರ ಭೂಷಿತ ದ್ವಾರಪಾಲಕರಿದ್ದಾರೆ. ನಾಲ್ಕುಕೈಗಳ ಇವರ ಹಿಂಗೈ ಗಳಲ್ಲಿ ಡಮರು ಇದೆ. ಬಲಗೈ ತ್ರಿಶೂಲ ಹಿಡಿದಿದ. ಮುಂದಿನ ಬಲಗೈ ಕಮಲದ ಮೊಗ್ಗು ಹಿಡಿದಿದೆ. ಎಡಗೈಗಳು ನಿಂತ ಗದೆಗಳ ಮೇಲೆ ಇವೆ. ಎಡದ್ವಾರಪಾಲಕನ ಗದೆಯಗಡ್ಡೆಯ ಮೇಲೆ ಮೂರು ಹೆಡೆಗಳ ಸರ್ಪ ಸುತ್ತುವರೆದಿದೆ. ಬಲದ್ವಾರ ಪಾಲಕನ ಗದೆಯ ಹಿಡಿಕೆ ನಾಗದಿಂದ ಸುತ್ತಲ್ಪಟ್ಟಿದೆ.

ನಿತ್ಯವೂ ಪೂಜೆಗೊಳ್ಳುವ ಒಳಗಡೆಯ ವೀರಭದ್ರನ ಪ್ರತಿಮೆ ಕತ್ತಲೆಯಲ್ಲಿ ಅಥವಾ ಹಣತೆಯ ಬೆಳಕಿನಲ್ಲಿರುವ ದರಿಂದ ರೂಪಲಕ್ಷಣ ಸ್ಪಷ್ಟೀಕರಿಸುವದು ಕಷ್ಟ.

* ಭಾರತಿ ಹೈಸ್ಕೂಲು, ಕೆಳದಿ, ಸಾಗರ-೫೭೭೪೦೧.

ಈ ಅನೇಕ ವಾಸ್ತುಶಿಲ್ಪಗಳ, ಪ್ರತಿಮೆಗಳ ರಚನೆ, ಕ್ಷಣಗಳು ಈ ಮಂದಿರವು ವೈಷ್ಣವ ದೇವಾಲಯದ ರುವಿಕೆಯನ್ನು ನಿರೂಪಿಸುತ್ತವೆ.

**ದಾವ ಶಿಲ್ಪ?**

ಗರ್ಭಗುಡಿಯ ಹಿಂಗಡೆ ಗೋಡೆಯ ಮಧ್ಯೆ ಎತ್ತರ ೨'×೨'ಅಗಲದಲ್ಲಿ ಒಂದು ವಿಚಿತ್ರ ಉಬ್ಬುತಗ್ಗಿನ ಶಿಲ್ಪವಿದೆ. ಈ ವರೆಗಿನ ವಾಸ್ತು ಶಿಲ್ಪಜ್ಞರು ಇದನ್ನು ವಾಸ್ತು ಪುರುಷನೆಂದು, ಇನ್ನು ಕೆಲವರು ಕ್ಷೇತ್ರಪಾಲನೆಂದು ಕರೆದಿದ್ದಾರೆ. ಆದರೆ ಈ ಕೆಳಗೆ ನಾನು ನೀಡುವ ಅನೇಕ ಆಧಾರಗಳನ್ನು ಲಕ್ಷಿಸಿದಾಗ ಅದು ಅವೆರಡೂ ಅಲ್ಲದ ಊಹಾತೀತ ಬೇರೆಯೇ ಯಾವುದೋ ಶಿಲ್ಪವೆಂದು ಸ್ಪಷ್ಟವಾಗುತ್ತದೆ.

ಪಶ್ಚಿಮಕ್ಕೆದುರಾಗಿರುವ ಈ ಶಿಲ್ಪ ೩೦" ಅಗಲ ೪೮" ಎತ್ತರವಾಗಿದೆ. ದೇವಮಂದಿರಗಳಲ್ಲಿರಬಹುದಾದ ರಕ್ಕಸ ಮೋರೆ, ಎದೆಯವರೆಗೆ ಇಳಿಬಿದ್ದಗಡ್ಡ, ೮ ಹಲ್ಲು, ೨ ಕೋರೆ ದಾಡೆಗಳಿವೆ. ಕೈಗಳೆರಡೂ ಸೊಂಡಿಲಿನಂತಿವೆ. ಎದೆಯಿಂದ ಟೊಂಕದವರೆಗಿನ ಭಾಗ ಆಮೆಯ ಚಿಪ್ಪಿನಂತಿವೆ. ಎರಡು ಕಾಲುಗಳು ಆನೆಯವು. ಕಾಲುಗಳ ಮಧ್ಯದಿಂದ ಪಾದದ ವರೆಗೂ ಕುಚ್ಚುಗಳಿರುವ ಬಾಲವಿದೆ. ಇಂಥ ವಿಚಿತ್ರ ಶಿಲ್ಪದ ಉಲ್ಲೇಖ ಯಾವ ವಾಸ್ತುಶಿಲ್ಪಗಳ ಗ್ರಂಥಗಳಲ್ಲೂ ಇಲ್ಲ.

ಇದರ ಎರಡೂ ಕಡೆ ೧' ಅಂತರದಲ್ಲಿ ಮೇಲಿನಿಂದ ಕೆಳವರೆಗೆ ಇದ್ದ ಚೌಕಗಳಲ್ಲಿ ಈ ಶಿಲ್ಪಗಳು ಕಂಡುಬರುತ್ತವೆ. ಬಲಗಡೆಯ ಮೇಲಿನಿಂದ ಒಂದನೆಯದು, ನೃತ್ಯಗಾತಿ. ಎರಡನೆಯದು ಮುನಿಯಿಂದ ಲಿಂಗಾಭಿಷೇಕ ನಡೆಯುತ್ತಿದೆ. ಮೂರನೆಯದರಲ್ಲಿ ಕುಳಿತ ಓರ್ವ ಮುನಿಯ ಭುಜದ ಮೇಲೆ ಒಂದು ಗಿಳಿ ಕುಳಿತು ಸಂಭಾಷಿಸುತ್ತಿದೆ. ನಾಲ್ಕನೆಯದರಲ್ಲಿ ಒಂದು ಯುಗಳ ನೃತ್ಯಶಿಲ್ಪವಿದೆ.

ಎಡದಲ್ಲಿ ಮೇಲಿನಿಂದ-ಬಲಮೊಳಕಾಲ ಮೇಲೆ ತಲೆ ಒರಗಿಸಿ ಕುಳಿತ ಸನ್ಯಾಸಿ, ಎರಡನೆಯದರಲ್ಲಿ ಕರುವಿಗೆ ಹಾಲು ಕುಡಿಸುತ್ತಿರುವ ೫ ತಲೆಗಳ ಹಸು ಇದೆ. ಮೂರನೆಯದರಲ್ಲಿ ಎಡತಲೆಗೆ ಕೈಕೊಟ್ಟು ಕುಳಿತ ಸನ್ಯಾಸಿಯ ಬಲಭುಜದ ಮೇಲೆ ಕುಳಿತ ಗಿಳಿ ಸಂಭಾಷಿಸುತ್ತಿದೆ. ನಾಲ್ಕನೆಯದರಲ್ಲಿ ಎದುರುಬದುರಾಗಿ ಕುಳಿತ ಅವಳಿ ವ್ಯಕ್ತಿಗಳಿದ್ದಾರೆ. ಈ ಶಿಲ್ಪಗಳಿಂದ ಸುತ್ತುವರಿದ ಈ ವಿಚಿತ್ರ ಶಿಲ್ಪಕುರಿತು ಯೋಚಿಸೋಣ : ಪ್ರಪಂಚ ಸಾರ ಸಂಗ್ರಹದ, ಚಂಡೇಶ್ವರ ಮಂತ್ರ ಪ್ರಸಂಗದಲ್ಲಿ ಕ್ಷೇತ್ರಪಾಲನ ಕುರುತಾದ ಶ್ಲೋಕ ಹೀಗಿದೆ

"ಏಕ ಖಟ್ವಾಂಗ ಹಸ್ತಂ ಭುಜಗ ಪರಿವೃತಂ ಪಾಶಮೇಕಂ ತ್ರಿಶೂಲಂ। ಕಾಪಾಲಂ ಖಡ್ಗಹಸ್ತಂ, ಡಮರುಗ ಸಹಿತಂ ವಾಮಹಸ್ತೇ ಪಿನಾಕಂ। ಚಂದ್ರಾರ್ಧ ಕೇತುಮಾಲಾಂ, ನರಶಿರವಪುಂ ಸರ್ಪಯಜ್ಞೋಪವೀತಂ।ಕಾಲಂ ಕಾಲಾಂಧಕಾರಂ ಮಮದುರಿತ ಹರಂ ಕ್ಷೇತ್ರಪಾಲಂ ನಮಾಮಿ"

ಯಾವುದೇ ಮಂದಿರದ ರಕ್ಷಕನಾಗಿ ಅದರ ಹೊರ ಆವರಣದಲ್ಲಿ ಈಶಾನ್ಯ ದಿಕ್ಕಿನಲ್ಲಿ ಕ್ಷೇತ್ರಪಾಲನಿರಬೇಕೆಂಬ ನಿಯಮವಿದೆ.

ಕ್ಷೇತ್ರಸ್ಯ ಪತಿನಾವಯಂ ಹಿತೇನೇವ ಜಯಾಮಸಿ।

ಗಾಮಶ್ವಂ ಪೋರ್ಶ್ಯಯಿಟ್ವಾ ಸನೋಮೃಳಾ ವೇದೃಶೇ ॥

ಪ್ರ.ಫಾ.ಸಂ

ನಮಗೆ ಮಿತ್ರನಂತಿರುವ ಕ್ಷೇತ್ರಪತಿದೇವನ ಸಹಾಯದಿಂದ ನಾವು ಜಯಗಳಿಸುತ್ತೇವೆ. ಆತ ನಮಗೆ ಪುಷ್ಟವಾದ ದನ-ಕರುಗಳನ್ನು ಕುದುರೆಗಳನ್ನು ದೊರಕಿಸಿಕೊಡಲು, ನಮಗೆ ಐಶ್ವರ್ಯ ನೀಡಿ ನಮ್ಮನ್ನು ಸಂತೋಷ ಪಡಿಸಲಿ ಎಂದು ಹೇಳತ್ತದೆ.

ಮಂದಿರದ ಹೊರವಲಯದಲ್ಲಿ ಹೆಚ್ಚಾಗಿ ಗುಂಡುಕಲ್ಲನ್ನು ಸ್ಥಾಪಿಸಿ ಅದಕ್ಕೇ ಕ್ಷೇತ್ರಪಾಲನೆಂದು ಹೆಸರಿಸುತ್ತಾರೆ. ಮೂರ್ತಿರೂಪದಲ್ಲಿ ಕ್ಷೇತ್ರಪಾಲ ನನ್ನ ಗಮನಕ್ಕೆಲ್ಲೂ ಕಂಡು ಬಂದಿಲ್ಲ. ಇದಕ್ಕೆ ಬಲಿಸಲ್ಲಿಸುವ ಪದ್ಧತಿ ಆದಿಕಾಲದಿಂದ ನಡೆದು ಬಂದಿದೆ. ಆದ್ದರಿಂದ 'ಇದು ಕ್ಷೇತ್ರಪಾಲನಲ್ಲ.

**ಈತ ವಾಸ್ತುಪುರಷನೇ?**

ಕಟ್ಟಡ, ಕಟ್ಟುವ ಪೂರ್ವ ವಾಸ್ತುಪೂಜೆ ನಡೆಸುವುದು ಹಿಂದೂ ಸಂಪ್ರದಾಯ. ಋಗ್ವೇದದಲ್ಲಿ ಇದು ವಾಸ್ತೋಷ್ಪತಿಸ್ತುತಿಯಲ್ಲಿ(೭.೫೪) ಉಲ್ಲೇಖವಿದೆ. ವಾಸ್ತೋಷ್ಪತಿ ಎಂದರೆ ಮನೆ ಅಥವಾ ಕಟ್ಟಡ ಕಾಯುವ ದೇವತೆ ಎಂದರ್ಥ. ಗೃಹಸ್ಥ, ಪಾಲಯಿತೃ ದೇವ ಎನ್ನುತ್ತಾರೆ. ಅಂತರಿಕ್ಷ ದೇವತೆಗಳನ್ನು ಕಾಪಾಡುವವನು "ಬ್ರಹ್ಮಸ್ಥಾನ ವಾಸ್ತು ಮಧ್ಯೇತು ಮರ್ಮಾಣಿ ಬ್ರಹ್ಮಾ ಹೃದಯಮುಚ್ಯತೇ." ವಾಸ್ತು ಎಂಬ ದೈತ್ಯನನ್ನು ನಿಗ್ರಹಿಸಲು ದೇವತೆಗಳು ಅವನನ್ನು ಕೆಡವಿ ಅವನ ಮೇಲೆ ಕುಳಿತರಂತೆ. ಆದ್ದರಿಂದ ಪ್ರಧಾನ ಬಾಗಿಲಿನ ಬಲಪಕ್ಕ ಅವನ ಸ್ಥಾನ. ಕಾಲು ನೈರುತ್ಯಕ್ಕೆ, ತಲೆ

ಈಶಾನ್ಯಕ್ಕೆ ಮಾಡಿ ಒರಗಿರುವ ಶಿಲ್ಪ ಅವನದು. ಕಟ್ಟಡ ಪ್ರವೇಶಿಸುವ ಮೊದಲು ಅವನನ್ನುಕುರಿತು ಮಾಡುವ ಯಜ್ಞವೇ ಆತನ ಆಹಾರ ಎಂಬುದು ಬ್ರಹ್ಮನ ವರ. ವಾಸ್ತು ಮೂರ್ತಿಯನ್ನು ಕುರಿತ ಒಂದು ಶ್ಲೋಕ ಹೀಗಿದೆ :

''ವಾಸ್ತುಮೂರ್ತಿರ್ವಹಾಕಾಯಃ ಕೃಷ್ಣಾಂಗೋ ರಕ್ತಲೋಚನಃ।

ಏಕಾನನ ದ್ವಿಬಾಹುಶ್ಚ ಬರ್ಬರಾಂಗಶ್ಚ ದುರ್ಧರಃ।

ವಜ್ರದೇಹೋ ಸುರಾಶಾರಃ ರಕ್ತಶ್ಮಶ್ರು ಶಿರೋರುಹಃ।

ಈಶಾನ್ಯಮಸ್ತಕ: ಕೃದ್ಧೋ ನೈಋುತ್ಯಾಂಗತ ಪಾದಕಃ।

ಕೃತಾಂಜಲಿ ರಥೋವಕ್ತ್ರೋ ವಾಸ್ತುಮೂರ್ತಿ ಪ್ರಕೀರ್ತಿಗತಃ।

ಗೃಹ್ಯಸೂತ್ರ

ಈತನ ಸ್ಥಾನ ಕಟ್ಟಡದ ಪ್ರಧಾನ ಬಾಗಿಲಿನ ಬಳಿಯೇ ಹೊರತು ಹೊರಗಲ್ಲ. ಅದ್ದರಿಂದ ಈ ಶಿಲ್ಪ ವಾಸ್ತು ಪುರುಷನಲ್ಲ.

ಇನ್ನು ಕಟ್ಟಡಕ್ಕೆ ದೃಷ್ಟಿಯಾಗಬಾರದೆಂಬ ಉದ್ದೇಶಕ್ಕೆ ಇಂಥ ಶಿಲ್ಪ ಇದೆ ಎನ್ನುವುದಾದರೆ ಅದು ಮಂದಿರದ ಮುಂದೇ ಇರಬೇಕಾಗಿತ್ತು.

ಈ ಆಧಾರಗಳು ವಾಸ್ತುಪುರುಷನ ಶಿಲ್ಪ ಇದಲ್ಲವೆಂದು ಹೇಳುತ್ತವೆ.

ಈ ವೀರಭದ್ರ? ಮಂದಿರವನ್ನು (ಶಾ.ಶಕ ೧೪೬೮-೭೧) ಕ್ರಿ.ಶ.೧೫೪೬-೪೯ರ ಮಧ್ಯೆ ದೊಡ್ಡ ಸಂಕಣ್ಣನಾಯಕನು ನಿರ್ಮಿಸಿದನು. ಆದ್ದರಿಂದ ಈ ವರೆಗೆ ಸುಮಾರು ೪೫೦ ವರ್ಷಗಳ ಕಾಲ ಉತ್ತಮ ವಿಶಿಷ್ಟ ಶಿಲ್ಪಗಳನ್ನು ಹೊಂದಿನಿಂತ ಈ ಮಂದಿರದ ಮೂಲವಿಗ್ರಹ ಯಾವುದಾಗಿದ್ದಿ ಬೇಕೆಂದು ಪ್ರಾಜ್ಞರೇ ಹೇಳಬೇಕು.

ಇದೇ ಗುಡಿಯ ಗರ್ಭಗುಡಿಯ ಹೊರ ಎಡಗೋಡೆಯ ಮಧ್ಯೆ ಪದ್ಮಾಸನದ ಒಂದು ದೇವ ವಿಗ್ರಹ, ಬಲದಲ್ಲಿ ಬಗ್ಗಿ ನಮಸ್ಕಾರಿಸುತ್ತಿರುವ ಆಂಜನೇಯ,ಎಡದಲ್ಲಿ ಕೈ ಮುಗಿದು ನಿಂತ ಗರುಡನಿದ್ದಾನೆ. ಗರ್ಭಗುಡಿಯ ಹಿಂಗೋಡೆಯಲ್ಲಿ ಎಡಕ್ಕೆ ತಿರುಗಿನಿಂತ ಆಂಜನೇಯನಿದ್ದಾನೆ.

ಇವೆಲ್ಲಕ್ಕೂ ಮಹತ್ವದ ಅಂಶ ಇನ್ನೊಂದಿದೆ.

ಕೆಳದಿ ಮಂದಿರ ಸಂಕೀರ್ಣ ಪ್ರವೇಶಿಸಲು ಬೃಹತ್ ಮರದ ಹೆಬ್ಬಾಗಿಲು ಇದೆ. ಒಳಹೊಗುತ್ತಿದ್ದಂತೆ ಬಲಕ್ಕೆ ವೀರಾಂಜನೇಯ ವಿಗ್ರಹವಿದೆ. ಹೀಗೆ ೧೫-೨೦ ಹೆಜ್ಜೆ ಹೋದರೆ ಕಬ್ಬಿಣದ ಕಿಟಕಿಯ ರಕ್ಷಣೆಯಲ್ಲಿ ಗೋಡೆಗುಂಟ ೨೦-೩೦ ನಿಲ್ಲಿಸಿದ ನಾಗರಕಲ್ಲುಗಳಿವೆ ಇವೆಲ್ಲ ವ್ಯವಸ್ಥೆಗೊಂಡದ್ದು ಇತ್ತೀಚೆ ಮಾತ್ರ, ಇವುಗಳ ಮಧ್ಯೆ ಸುಮಾರು ಒಂದು ಅಡಿ ಎತ್ತರದ ಪೀಠ. ಇದರ ಮೇಲೆ ಅತಿ ಸುಂದರ ಹೊಯ್ಸಳ ಶೈಲಿಯ ಚೆನ್ನಕೇಶವನನ್ನು ಹೋಲುವ ಗರುಡವಾಹನ ಲಕ್ಷ್ಮೀನಾರಾಯಣ ವಿಗ್ರಹವಿದೆ. ಈತನ ಒಂದು ಕಾಲು ನೆಲಕ್ಕೆ ಇದೆ. ಎಡದಲ್ಲಿ ಆಭರಣ ಭೂಷಿತೆ ಲಕ್ಷ್ಮಿ ಇದ್ದಾಳೆ. ಗರುಡ ಶಿಲ್ಪ ತುಂಬ ಸುಂದರವಾಗಿದೆ. ಸರ್ವಾಲಂಕಾರಗೊಂಡ ಈ ಲಕ್ಷ್ಮೀನಾರಾಯಣ ವಿಗ್ರಹ ತುಂಬ ಆಕರ್ಷಕರವಾಗಿದೆ. ಇಂಥ ಸುಂದರ ಮೂರ್ತಿ ಇಲ್ಲಿ ಹೇಗೆ ಬಂತು?

ದೊಡ್ಡ ಸಂಕಣ್ಣನಾಯಕನು ಸ್ಥಾಪಿಸಿದ ವೀರಭದ್ರ ಮಂದಿರದಲ್ಲಿ ಮೊದಲು ಈ ಮೇಲಣ ಲಕ್ಷ್ಮೀನಾರಾಯಣ ಮೂರ್ತಿ ಸ್ಥಾಪನೆಯಾಗಿ ಪೂಜೆಗೊಳ್ಳುತ್ತಿರಬಹುದು.

**ಕೆಳದಿಯ ವಾಸ್ತುಶಿಲ್ಪಕ್ಕೊಂದು ಅಳತೆಗೋಲು**

ನಿರ್ಮಾಣಕಾಲ ೧೫೪೬-೪೯





ಈ ವಿಚಿತ್ರ ಶಿಲ್ಪ ಯಾವುದು?



ಈಗಿನ ವೀರಭದ್ರದೇವರ ಸ್ಥಾನದಲ್ಲಿ ಮೂಲತಃ ಇದ್ದಿರಬಹುದೆಂದುಶಂಕಿಸಲಾದ ಅಲಕ್ಷಿತವಾಗಿರುವ ಹೊಯ್ಸಳ ಶೈಲಿಯ ಸುಂದರ ಕೆತ್ತನೆಯ ಲಕ್ಷ್ಮೀನಾರಾಯಣ ಪ್ರತಿಮೆ. ಸು. ೧೮" ಎತ್ತರದ ಪ್ರತಿಮೆ

ಕಾಲಾಂತರದಲ್ಲಿ ಬಹುಶ: ಯಾರಿಂದಲೋ ಭಿನ್ನವಾದಾಗ ಕಿತ್ತೆಸೆಯಲ್ಪಟ್ಟು ಅಲ್ಲಿ ವೀರಭದ್ರನ ಮೂರ್ತಿ ಪ್ರತಿಷ್ಠಾಪನೆ ಗೊಂಡಿರಬಹುದು.

## ಭೂಮಿಯನ್ನಳೆಯುವ ಅಳತೆಗೋಲೇ ಇದು?

ಈ ವಿಚಿತ್ರಶಿಲ್ಪದ ಬಲಗಡೆ ಸುಮಾರು ೨ಅಡಿ ಅಂತರದಲ್ಲಿ ಒಂದು ಆಳತೆಗೋಲನ್ನು ಮೇಲಿಂದ ಕೆಳಗೆ ಕೆತ್ತಲಾಗಿದೆ. ಇದೊಂದು ೩ ಸೆಂ. ಮೀ. ಅಗಲ, ೭೯.೫ ಸೆಂ.ಮೀ. ಎತ್ತರದ ಅಳತೆಗೋಲು. ಒಟ್ಟು ನಾಲ್ಕು ಬಾಗಗಳನ್ನು ಗುರುತಿಸಲಾಗಿದೆ. ಕೆಳಗಿನಿಂದ ೨ನೇ ಭಾಗ ೧೯ ಸೆಂ.ಮೀ ಇದೆ. ಮೂರನೇ ಭಾಗದಲ್ಲಿ ೨ ಅಡ್ಡ ಭಾಗಗಳಿವೆ, ಮೇಲಿನ ಅರ್ಧವನ್ನು ಉದ್ದದಲ್ಲಿ ೪ ಭಾಗಗಳನ್ನಾಗಿ ಮಾಡಿದೆ ನಾಲ್ಕನೇ ಭಾಗ ೩.೫ ಸೆಂ.ಮೀ. ಉದ್ದವಿದೆ. ಅದರಲ್ಲಿ ಅಡ್ಡಲಾಗಿ ೩ ಭಾಗ ತೋರಿಸಿದೆ. ಮೇಲ್ಭಾಗದಲ್ಲಿ ಪುನಃ ಉದ್ದವನ್ನು ನಾಲ್ಕು ಸೀಳನ್ನಾಗಿ ಮಾಡಿದೆ. ಕೊನೆಯ ನಾಲ್ಕು ಸೆಂ.ಮೀಟರ್‌ನಲ್ಲಿ ಪುನಃ ನಾಲ್ಕು ಅಡ್ಡಾಗಿ ಗುರುತಿಸಿದೆ.

ಇದರ ಹೆಸರಿನ ಉಲ್ಲೇಖ ಎಲ್ಲೂ ಇಲ್ಲ. ಕೆಳದಿ ಶೈಲಿಯವಾಸ್ತು ಶಿಲ್ಪಕ್ಕೆ ಅಳತೆಗೋಲು ಇದು ಇರಬಹುದೆಂದು ಅನಿಸುತ್ತಿದೆ. ಭೂಮಿಯನ್ನು ಅಳೆಯಲು ಇದನ್ನು ಬಳಸಿದರು ಎಂಬ ಅಭಿಪ್ರಾಯ ಕೆಲವರದು.

೧) ಮೇಲಣ ಅಳತೆ ಪಟ್ಟಿಯ ಬಲಭಾಗದಲ್ಲಿ "L" ಆಕಾರದ ಒಂದು ಗುರುತನ್ನು ನಾವು ಗಮನಿಸಬೇಕು. ವಾಸ್ತುಶಿಲ್ಪ ರಚನೆಯಲ್ಲಿ ಗೋಡೆ ಕಟ್ಟುವಾಗ ಕಬ್ಬಿಣದ ಮೂಲೆಮಟ್ಟವನ್ನು ಬಳಸುವದು ಎಲ್ಲರೂ ಅರಿತ ವಿಷಯ. ಈ ಗುರುತು ಸೂಚಿಸುವದೂ ಅದನ್ನೇ.

೨) "L" ಗುರುತಿನಿಂದ ೨ ಅಡಿ ಕೆಲಗಡೆ ಅಷ್ಟಮೂಲೆಯ ಒಂದು ಗುರುತಿದೆ. ಗೋಡೆಯನ್ನು ಕಟ್ಟುವಾಗ ಅದರ ಲಂಬುವನ್ನು ಗುರುತಿಸಲು ಬಳಸುವ ಕಬ್ಬಿಣದ ಗುಂಡು ಇದಾಗಿದೆ.

ಭೂಮಿಯನ್ನು ಅಳೆಯಲು ಇವೆರಡರ ಅಗತ್ಯ ಇಲ್ಲ. ಆದ್ದರಿಂದ ಈ ಅಳತೆಪಟ್ಟಿ ಕೆಳದಿ ವಾಸ್ತುಶಿಲ್ಪ ರಚನೆಯಲ್ಲಿ ಮೂಲಅಳತೆಯ ಮಾನವನ್ನು ಹೊಂದಿದ್ದಿರಬೇಕೆಂದು ಹೇಳಬಹುದು.

ಶ್ರೀ ವೀರಭದ್ರ ದೇವಾಲಯವನ್ನು ಕಟ್ಟಿಸಿದವನು ದೊಡ್ಡ ಸಂಕಣ್ಣನಾಯಕ. ಈತನ ಶಾಸನ ಕಾಲ ಕ್ರಿ.ಶ.೧೫೪೬-೫೯. ಎಂದರೆ ಈ ಮಧ್ಯಕಾಲದಲ್ಲಿ ಇದರ ರಚನೆಯಾಗಿದೆ. ಗರ್ಭ ಗುಡಿಯ ಹಿಂಗೋಡೆಯಲ್ಲಿಯ ಅಳತೆಪಟ್ಟಿ, ಉಬ್ಬುತಗ್ಗಿನ ವಿಚಿತ್ರ ಶಿಲ್ಪಗಳೂ ಆ ಅವಧಿಯಲ್ಲೇ ಕೆತ್ತಿದ್ದಿರಬೇಕು.

ಸುಮಾರು ೪೫೦ ವರ್ಷಗಳ ಹಿಂದೆಯೇ ಕೆಳದಿಯ ಅರಸರು ತಾವು ರಚಿಸುವ ಮಂದಿರಗಳಿಗೆ, ತಮ್ಮದೇ ಆದ ವಿಶಿಷ್ಟ ಅಳತೆಗೋಲನ್ನು ರೂಪಿಸಿಕೊಂಡಿದ್ದರು. ಎಂಬುದಕ್ಕೆ ಈ ಶಿಲಾ ಅಳತೆಪಟ್ಟಿ ಮಹತ್ವದ ಸಾಕ್ಷಿಯಾಗಿದೆ.

ಡಾ॥ ಚನ್ನಬಸವಯ್ಯ ಹಿರೇಮಠ *

# ರಾಚೋಟಿ ವೀರಭದ್ರ ದೇವಾಲಯ -ಒಂದು ಅಧ್ಯಯನ

ಆಂಧ್ರಪ್ರದೇಶದ ಕಡಪ ಜಿಲ್ಲೆಯ ತಾಲೂಕು ಕೇಂದ್ರವಾದ ರಾಚೋಟಿಯು ವೀರಭದ್ರದೇವರ ಪವಿತ್ರ ತಾಣ. ಆಂಧ್ರ ಮತ್ತು ನೆರೆಯ ಕರ್ನಾಟಕದ ಅನೇಕ ಜನರು ಈತನನ್ನು ಭಕ್ತಿಯಿಂದ ಆರಾಧಿಸುತ್ತಾರೆ. ಇವರಲ್ಲಿ ಬಹಳಷ್ಟು ಜನರು ಈ ವೀರಭದ್ರನನ್ನು ತಮ್ಮ ಕುಲದೈವ ಅಥವಾ ಮನೆದೈವವಾಗಿ ತುಂಬ ಪ್ರಾಚೀನ ಕಾಲದಿಂದಲೂ ವಂಶಪರಂಪರೆಯಾಗಿ ಪೂಜಿಸಿಕೊಂಡು ಬಂದಿದ್ದಾರೆ.

ವೀರಭದ್ರನು ತುಂಬ ಜಾಗೃತ ದೇವತೆ ಎಂಬ ಕಲ್ಪನೆ ಪ್ರಾಚೀನಕಾಲದಿಂದಲೂ ಬೆಳೆದು ಬಂದಿದೆ. ನಂದಿ, ಮಲ್ಲಿಕಾರ್ಜುನ ಮತ್ತು ವೀರಭದ್ರರು ಕೆಲವರಿಗೆ ಕುಲದೈವಗಳಾಗಿದ್ದುದನ್ನು ಚನ್ನಬಸವಣ್ಣ ತಿಳಿಸಿದ್ದಾನೆ.[1] ಮಡಿವಾಳ ಮಾಚಿದೇವನು ಶುದ್ಧಶೈವರು ನಂದಿ, ವೀರಭದ್ರ, ಹಾವುಗೆ, ಗುರ್ದುಗೆ, ಕಂಥೆ-ಕಮಂಡಲುಗಳನ್ನು ಲಿಂಗಗಳೆಂದು ಇದಿರಿಟ್ಟು ಪೂಜಿಸುವುದನ್ನು ವಿಡಂಬಿಸಿದ್ದಾನೆ.[2] ಅಲ್ಲದೆ ದೈವದ ಜಾತ್ರೆಗೆ ಹೋಗುವುದು; ಆ ದೈವದ ಮೂರ್ತಿಯನ್ನು ತಾಳಿ ತಗಡು ಮಾಡಿ, ಮನೆದೈವವೆಂದು ಕೊರಳಿಗೆ ಕಟ್ಟಿಕೊಳ್ಳುವುದನ್ನು ಖಂಡಿಸಿದ್ದಾನೆ.[3] ಇದರಿಂದ ವೀರಭದ್ರನು ವಚನಕಾರರಿಗಿಂತ ಪೂರ್ವದಿಂದಲೇ ಶೈವಭಕ್ತರ ಮನೆದೈವವಾಗಿ ಪೂಜೆಗೊಳ್ಳುತ್ತಿದ್ದುದು ಸ್ಪಷ್ಟವಾಗುತ್ತದೆ.

ವೀರಭದ್ರ ದೇವರ ಅವತಾರದ ಸಂದರ್ಭವನ್ನು ಅಂಬಿಗರ ಚೌಡಯ್ಯನು

ಪರಮಾತ್ಮನೆಂಬ ಶಿವನಿಗೆ ಅಶ್ರಯವಾಗಿ ಹುಟ್ಟಿತ್ತು ಲಿಂಗ,
ಆತಂಗೆ ವಾಹನವಾಗಿ ಹುಟ್ಟಿದಾತ ವೃಷಭ,
ಆತಂಗೆ ವಾಹನವಾಗಿ ಹುಟ್ಟಿದಾತ ವಿನಾಯಕ,
ಆತಂಗೆ ಯುದ್ಧಕ್ಕೆ ಸರಿಯಾಗಿ ಹುಟ್ಟಿದಾತ ವೀರಭದ್ರ

ಎಂದು ಸ್ಪಷ್ಟಪಡಿಸಿದ್ದಾನೆ.[4] ವೇದಗಳಲ್ಲಿ ಉಲ್ಲೇಖ ಗೊಂಡಿರುವ ರುದ್ರನು ಮುಂದೆ ಶಿವನೆಂದು ಸ್ಥಾನ ಪಡೆದ ಮೇಲೂ ಅವನಿಗೆ ಇಂದ್ರಾದಿದೇವತೆಗಳಂತೆ ಯಜ್ಞ ದೇವತೆಯ ಸ್ಥಾನ ದೊರೆಯಲಿಲ್ಲ. ಇದರಿಂದಾಗಿ ಶಿವನಿಗೆ ಯಜ್ಞ ಸಂದರ್ಭದಲ್ಲಿ ಹವಿರ್ಭಾಗ ಸಲ್ಲಲಿಲ್ಲ. ಇದು ಘರ್ಷಣೆ ಎಡೆಮಾಡಿಕೊಟ್ಟಿತು. ಈ ಸಮಯದಲ್ಲಿಯೇ ವೀರಭದ್ರನು ಶಿವನ ಆಜ್ಞೆಯ ಮೇರೆಗೆ ಯಜ್ಞವನ್ನು ನಾಶಮಾಡಿದನು. ಅಂದರೆ ಆರ್ಯ ಮತ್ತು ದ್ರಾವಿಡ ಜನಾಂಗದ ಸಮ್ಮಿಳನ ಪೂರ್ವದ ಸಂಘರ್ಷದ ಸಂದರ್ಭದಲ್ಲಿ ವೀರಭದ್ರನ ಕಲ್ಪನೆ ಜನ್ಮತಾಳಿದೆ.

ಕರ್ನಾಟಕದ ಭಕ್ತರನ್ನು ಅದರಲ್ಲೂ ವೀರಶೈವರನ್ನು ಹೆಚ್ಚಿನ ಸಂಖ್ಯೆಯಲ್ಲಿ ಹೊಂದಿರುವ ರಾಚೋಟಿಯ ವೀರಭದ್ರ ದೇವಾಲಯವು ತುಂಬ ಪ್ರಾಚೀನವಾದುದು. ಬಹುಶಃ ಅದು

* ಕನ್ನಡ ಪ್ರಾಧ್ಯಾಪಕ, ಎಲ್. ವಿ. ಡಿ. ಕಾಲೇಜು, ರಾಯಚೂರು, ೫೮೪೧೦೧

1. ಚನ್ನಬ.ವಚನ ೨೧೫, ಪು ೯೭(ಸಂ.) ಡಾ॥ ಹಿರೇಮಠ, ಆರ್.ಸಿ., ಧಾರವಾಡ, ೧೯೭೧ (ದ್ವಿ.ಮು)
2. ಸಂಕೀರ್ಣವಚನ ಸಂಪುಟ-ಮೂರು(ಸಂ) ಡಾ.ಹಿರೇಮಠ ಬಿ.ಆರ್., ಬೆಂಗಳೂರು ೧೯೯೩, ವಚನ ೪೭೫, ಪು.೧೮೪.
3. ಅದೇ ವಚನ ೫೫೮, ಪು. ೨೧೩.
4. ಅದೇ.ಸಂಪುಟ-ಒಂದು (ಸಂ) ಡಾ.ಕಲಬುರ್ಗಿ, ಎಂ.ಎಂ., ವಚನ ೮೪, ಪು. ೨೯-೩೦.

ಕ್ಷಿಣ ಭಾರತದ ಬಹುತೇಕ ವೀರಭದ್ರ ದೇವಸ್ಥಾನಗಳಿಗೆ ನುಕೂಲವಾಗಿರಬೇಕು. ರಾಚೋಟಿಯ ವೀರಭದ್ರನು ಬಾಲರೂಪದಲ್ಲಿ ಕಾಣಿಸಿಕೊಂಡ ವೀರನಾಗಿದ್ದಾನೆ. ಕರಿಯ ಕಲ್ಲಿನಲ್ಲಿರುವ ವೀರಭದ್ರನ ಬಾಲರೂಪದ ಶಿಲ್ಪವು ಚಿತ್ತಾಕರ್ಷಕವಾಗಿದೆ. ಈತನು ದೋಟಿ ಹಿಡಿದು ಬಂದವನೆಂದು ಇಲ್ಲಿನ ಸ್ಥಳಪುರಾಣ ಹೇಳುತ್ತದೆ. ಆದ್ದರಿಂದ ಕುರುಬರ ಬೀರಲಿಂಗ (ವೀರ) ಶೈವರ ವೀರಭದ್ರ ಮೂಲತಃ ಒಂದೇ ಆಗಿರುವ ಸಾಧ್ಯತೆಯಿದೆ.[5]

ರಾಚೋಟಿ ವೀರಭದ್ರನ ಅತ್ಯಂತ ಪ್ರಾಚೀನ. ಉಲ್ಲೇಖ ಅದೇ ಗ್ರಾಮದ ಕ್ರಿ.ಶ.೧೫೩೪ರ ಶಾಸನದಲ್ಲಿದೆ.[6] ಆದರೆ ಇದೇ ದೇವಾಲಯದ ಕ್ರಿ.ಶ.೧೫೨೦ರ ಮತ್ತೊಂದು ಶಾಸನದಲ್ಲಿ, ಕಾಮಿನಾಯಕ ಎಂಬುವನು ತನ್ನ ದೊರೆ ಕೃಷ್ಣದೇವರಾಯನಿಗೆ ಪುಣ್ಯವಾಗಲೆಂದು '××ಟೂರಿ ಸೀಮೆಯಲ್ಲಿನ ಪೆನಗೊಂಡ ಮಾರ್ಜವಾಡ ಮತ್ತು ಉದಯಗಿರಿ ಮಾರ್ಜವಾಡ ಸೀಮೆಯಲ್ಲಿನ ಭೂಮಿಯನ್ನು ದೇವಾಲಯಕ್ಕೆ(?) ದಾನವಾಗಿ ಬಿಟ್ಟುಕೊಟ್ಟ ಉಲ್ಲೇಖ ವಿದೆ.[7] ಶಾಸನದ ಪ್ರಮುಖ ಭಾಗವು ತ್ರುಟಿತ ಗೊಂಡಿರುವುದರಿಂದ ದೇವಾಲಯದ ಹೆಸರು ಅಸ್ಪಷ್ಟವಾಗಿದೆ. ಬಹುಶಃ ಆದು ಈ ವೀರಭದ್ರ ದೇವಾಲಯವೇ ಆಗಿರಬೇಕು. ಇದು ನಿಜವಾದರೆ ಕ್ರಿ.ಶ.೧೫೨೦ರ ಶಾಸನವೇ ರಾಚೋಟಿ ವೀರಭದ್ರ ದೇವಾಲಯವನ್ನು ಉಲ್ಲೇಖಿಸುವ ಅತ್ಯಂತ ಪ್ರಾಚೀನ ಶಾಸನವೆಂದು ಹೇಳಬೇಕಾಗುತ್ತದೆ. ಇದಲ್ಲದೆ ಬೆಡದೂರಿನ ಕ್ರಿ.ಸ.೧೫೪೯ರ ಶಾಸನ,[8] ರಾಚೋಟಿಯ ಕ್ರಿ.ಶ.೧೫೫೩-೫೪,[9] ಕ್ರಿ.ಶ.೧೫೫೮[10] ಮತ್ತು ಕ್ರಿ.ಶ.೧೬೭೨೮ರ ಶಾಸನಗಳೂ[11] ರಾಚೋಟಿಯ ವೀರಭದ್ರನನ್ನು ಉಲ್ಲೇಖಿಸಿವೆ. ಈ ಎಲ್ಲ ಶಾಸನಗಳು ವೀರಭದ್ರ ದೇವಾಲಯವನ್ನು ನೇರವಾಗಿ ಉಲ್ಲೇಖಿಸಿರುವುದರಿಂದ ಆ ಪೂರ್ವದಿಂದಲೇ ಅದು ಅಸ್ತಿತ್ವದಲ್ಲಿದ್ದಿರಬೇಕು.

ವಿಜಯನಗರದ ಚಕ್ರವರ್ತಿ ಸದಾಶಿವರಾಯನ ಸಾಮಂತ ಅರಸನಾದ ಮಹಾಮಂಡಳೇಶ್ವರ ಜಿಲೇಳ ರಂಗಪತಿರಾಜನ ಕಾರ್ಯಕರ್ತ ಅಮರನಾಯಿನಿ ವೆಂಗಳನಾಯುಡು, ರಾಮದುರ್ಗಸೀಮೆಯ ಪಾರುಪತ್ಯ ಮಾಡುತ್ತಿದ್ದನು. ಅವನು ತನ್ನ ಒಡೆಯ ಜಿಲೇಳ ರಂಗಪತಿರಾಜನಿಗೆ ಪುಣ್ಯವಾಗಲೆಂದು 'ಮುದ್ರಮನುಷ್ಯ' ಉಚ್ಚಲವಾಡಿ ರಾಮಯ್ಯನ ಕೈಯಿಂದ ಕ್ರಿ.ಶ.೧೫೬೩ರಲ್ಲಿ ಶಿಥಿಲಗೊಂಡಿರುವ ರಾಚೋಟಿಯ ವೀರಭದ್ರ ದೇವಾಲಯದ ಗರ್ಭಗೃಹ, ಸುಕನಾಸಿ ಮತ್ತು ಶಿಖರಗಳ ಜೀರ್ಣೋದ್ಧಾರ ಮಾಡಿಸುತ್ತಾನೆ.[12] ಇದರಿಂದ ರಾಚೋಟಿ ವೀರಭದ್ರ ದೇವಾಲಯವು ಕ್ರಿ.ಶ. ೧೫೨೦ಕ್ಕಿಂತ ಹಿಂದಿನಿಂದಲೇ ಅಸ್ತಿತ್ವದಲ್ಲಿದ್ದು, ಅದು ಶಿಥಿಲಗೊಂಡ ಪ್ರಯುಕ್ತ ಕ್ರಿ.ಶ.೧೫೬೩ರಲ್ಲಿ ಪುನರ್ನಿರ್ಮಾಣಗೊಂಡಿರುವುದು ಸ್ಪಷ್ಟವಾಗುತ್ತದೆ. ಆದರೆ ವಿಜಯನಗರ ಕಾಲದ ರಾಯಲಸೀಮೆಯ ದೇವಾಲಯಗಳನ್ನು ಕುರಿತು ಸಂಶೋಧನೆ ನಡೆಸಿದ ಡಾ॥ ವಿ.ಕಾಮೇಶ್ವರರಾವ್ ಅವರು, ತಮ್ಮ "Select Vijayanagr Temples of Rayala Seema" ಸಂಪ್ರಬಂಧದಲ್ಲಿ, ರಾಚೋಟಿ ವೀರಭದ್ರ ದೇವಾಲಯವು ಕ್ರಿ.ಶ.೧೫೬೩ರಲ್ಲಿ ಜೀರ್ಣೋದ್ಧಾರಗೊಂಡಿರುವುದನ್ನು ಗಮನಿಸಿ. ಅದು, ಕ್ರಿ.ಶ.೧೫೦೦ ವೇಳೆಗೆ ರಚನೆಗೊಂಡಿರ ಬೇಕೆಂದು ಹೇಳಿದ್ದಾರೆ.[13] ವೀರಭದ್ರ ದೇವಾಲಯವು. ವಿಜಯನಗರ ಶೈಲಿಯಲ್ಲಿರುವುದೇ ಅವರ ಈ ನಿರ್ಧಾರಕ್ಕೆ ಕಾರಣವಾಗಿದೆ. ಆದರೆ ಒಂದು ಶಿಲಾದೇವಾಲಯವು ಕೇವಲ ೬೩ ವರ್ಷಗಳಲ್ಲಿ ಶಿಥಿಲಗೊಳ್ಳಲು ಸಾಧ್ಯವೇ? ಅದರಲ್ಲೂ

---

5. ಡಾ॥ ಕಲಬುರ್ಗಿ, ಎಂ.ಎಂ., ಶಾಸನಗಳಲ್ಲಿ ಶಿವಶರಣರು, ಪು.೯೭.
6. Inscriptions of Andhra Pradesh (Cuddapah Dist) part-II(Ed). Dr. Parabrahma Sastri,P.V., Hyderabad, ೧೯೭೮, No. ೧೧೭, ಕ್ರಿ.ಶ. ೧೫೩೪ ಜೂನ್ ೨೨ ರಾಯಚೋಟಿ.
7. ಅದೇ. ೮೩, ಕ್ರಿ.ಶ.೧೫೨೦ ಮೇ ೨೮, ರಾಯಚೋಟಿ
8. ಅದೇ. ೨೦೫, ಕ್ರಿ.ಶ.೧೫೪೯, ಬೇಡದೂರು, ಜಮ್ಮುಲ ಮಡುಗು(ತಾ.).
9. ಅದೇ.೨೩೧, ಕ್ರಿ.ಶ.೧೫೫೩-೫೪, ರಾಯಚೋಟಿ.
10. ಅದೇ ೨೫೫, ಕ್ರಿ.ಶ. ೧೫೫೮ ನವೆಂಬರ ३೦, ರಾಯಚೋಟಿ.
11. T.T.D. Inscriptions, Xi-1,No.25 Ref: Dr.Kameswara Rao, Select Vijaynagar Temples of Rayala Seema, Hyderbad, ೧೯೭೬, p.೬೧.
12. I.A.P. Part II (Cuddapah Dist.) No.೨೬೦, ಕ್ರಿ.ಶ. ೧೫೬೩ ಜನವರಿ ೧೯, ರಾಯಚೋಟಿ.
13. Dr. Kameswara Rao., Select Vijayanagar Temples of Rayalaseema, p.೬೧.

ಗರ್ಭಗುಡಿ, ಸುಕನಾಸಿ ಮತ್ತು ಶಿಖರಗಳಂಥ ದೇವಾಲಯದ ಪ್ರಮುಖ ಭಾಗಗಳು ಶಿಥಿಲಗೊಳ್ಳಬೇಕಾದರೆ ಅದು ತೀರ ಪ್ರಾಚೀನ ದೇವಾಲಯವೇ ಆಗಿರಬೇಕು. ಆದರೆ ಎಷ್ಟು ಪ್ರಾಚೀನ? ಎನ್ನುವುದೇ ಇಲ್ಲಿನ ಮುಖ್ಯ ಸಮಸ್ಯೆಯಾಗಿದೆ.

ಇತಿಹಾಸದ ಪುನಾರಚನೆಯಲ್ಲಿ ಸಾಹಿತ್ಯಕೃತಿಗಳಿಗೂ ಶಾಸನಗಳಷ್ಟೇ ಮಹತ್ವವಿದೆ. ಅದರಲ್ಲೂ ವಚನ ಸಾಹಿತ್ಯ ತನ್ನ ಕಾಲದ ಜೀವನದ ವಿವಿಧ ಮುಖಗಳ ವಿವರಗಳನ್ನು ಹಿಡಿದಿಟ್ಟುಕೊಂಡಿದೆ. ಅಲ್ಲಿನ ಅನೇಕ ಸಂಗತಿಗಳನ್ನು ತುಂಬ ಎಚ್ಚರಿಕೆಯಿಂದ ಅಭ್ಯಸಿಸಿದರೆ, ೧೨ನೆಯ ಶತಮಾನ ಮತ್ತು ಅದಕ್ಕಿಂತ ಹಿಂದಿನ ಕಾಲದ ಕನ್ನಡ ಜನತೆಯ ಬದುಕಿನ ವಿವರಗಳು ನಮ್ಮ ಕಣ್ಮುಂದೆ ಗೋಚರಿಸುತ್ತವೆ. ವಚನಕಾರರ ಕಾಲವು ಕನ್ನಡನಾಡಿನಲ್ಲಿ ನಡೆದ ಅನೇಕ ಧರ್ಮಗಳ ಸಂಘರ್ಷಣೆಯ ಕಾಲ. ಅವರು ಕುಲದೈವ, ಮನೆದೈವಗಳ[14] ಹೆಸರಿನಲ್ಲಿ ಸ್ಥಾವರಲಿಂಗಪೂಜೆ ಮಾಡುವುದನ್ನು ಖಂಡಿಸುತ್ತ, ಇಷ್ಟ ಲಿಂಗ ಪೂಜೆಯನ್ನು ಪ್ರಚುರಪಡಿಸಿದ್ದಾರೆ. ಅಲ್ಲದೆ ಆ ಕಾಲದ ಅನೇಕ ಪ್ರಸಿದ್ಧ ಶೈವಕೇಂದ್ರಗಳನ್ನು ಹೆಸರಿಸುತ್ತ, ತೀರ್ಥಯಾತ್ರೆ ಮತ್ತು ಪುಣ್ಯಸಂಪಾದನೆಯ ಹೆಸರಿನಲ್ಲಿ ಅಲ್ಲಿಗೆ ಹೋಗುವುದನ್ನು ವಿಡಂಬಿಸಿ[15]ದ್ದಾರೆ. ಅಂಬಿಗರ ಚೌಡಯ್ಯನ ಒಂದು ವಚನ ಹೀಗಿದೆ.[16]

> ಕಾಶಿಗೆ ಹೋದೆನೆಂಬವರು ಹೇಸಿ ತೊತ್ತಿನ ಮಕ್ಕಳಯ್ಯ
>
> ಮೈಲಾರಕ್ಕೆ ಹೋದೆನೆಂಬವರು ಮಾದಗಿತ್ತಿಯ ಮಕ್ಕಳಯ್ಯ
>
> ಪರ್ವತಕ್ಕೆ ಹೋದೆನೆಂಬವರು ಹಾದರಗಿತ್ತಿಯ ಮಕ್ಕಳಯ್ಯ
>
> ರಾಚೋಟಿಗೆ ಹೋದೆನೆಂಬವರು ಲಜ್ಜೆಮಾರಿ ತೊತ್ತಿನ ಮಕ್ಕಳಯ್ಯ
>
> ಛೇ ,ಛೇ, ಇದು ಭಕ್ತಿಯಲ್ಲವಯ್ಯ
>
> ಅದೆಂತೆಂದಡೆ:
>
> ಪರಬ್ರಹ್ಮ ಮೂರುತಿಯಾದ ಪರಶಿವನೆ ಗುರುನಾಮದಿ ಬಂದು
>
> ಇಷ್ಟಲಿಂಗವ ಧರಿಸಿ, ಪಂಚಾಕ್ಷರಿಯ ಬೋಧಿಸಿದ ಮೇಲೆ
>
> ಆ ಭಕ್ತನ ಕಾಯವೇ ಕೈಲಾಸ
>
> ಅವನ ಒಡಲೇ ಸೇತುಬಂಧ ರಾಮೇಶ್ವರ
>
> ಅವನ ಶಿರವೇ ಶ್ರೀಶೈಲ
>
> . . . . . . . . .
>
> . . . . . . . . . .

ಭಾರತದ ಪ್ರಸಿದ್ಧ ಶೈವ ಕ್ಷೇತ್ರಗಳಾದ ಕಾಶಿ, ಮೈಲಾರ, ಶ್ರೀಶೈಲಗಳಂತೆ ರಾಚೋಟಿಯೂ ಒಂದಾಗಿದೆ. ಕಾಶಿಯ ವಿಶ್ವನಾಥ, ಮೈಲಾರದ ಮೈಲಾರಲಿಂಗ, ಪರ್ವತ (= ಶ್ರೀಶೈಲ)ದ ಮಲ್ಲಿಕಾರ್ಜುನರು ತೀರ ಪ್ರಾಚೀನ ಕಾಲದಿಂದ ನಮ್ಮವರೆಗೂ ಲಿಂಗ ರೂಪದಲ್ಲಿ ಪೂಜೆಗೊಳ್ಳುತ್ತ ಬಂದಿದ್ದಾರೆ. ಆದರೆ ಈ ದೇವಾಲಯಗಳ ಸಾಲಿನಲ್ಲಿ ಸೇರಿರುವ ರಾಚೋಟಿಯಲ್ಲಿದ್ದ ಲಿಂಗಯಾವುದು? ರಾಚೋಟಿಯಲ್ಲಿ ಇಂದು ಪೂಜೆಗೊಳ್ಳುತ್ತಿರುವ ಸುಪ್ರಸಿದ್ಧ ದೇವರೆಂದರೆ ವೀರಭದ್ರನೇ ಆಗಿದ್ದಾನೆ. ಈ ದೇವರು ಕಾರಣವಾಗಿ ರಾಚೋಟಿಯು ''ದಕ್ಷಿಣದ ಕಾಶಿ'' ಎಂಬ ಖ್ಯಾತಿಯನ್ನು ಪಡೆದಿತ್ತು.[17] ವಚನಕಾರರು ವೀರಭದ್ರ ಮೊದಲಾದ ದೇವತೆಗಳನ್ನು ಶೈವರು ಲಿಂಗರೂಪದಿಂದ ಪೂಜಿಸುತ್ತಿದ್ದರೆಂದೇ ಹೇಳಿದ್ದಾರೆ.[18] ಶರಣರ ಪ್ರಭಾವಕ್ಕೊಳಗಾಗಿ ಅನೇಕ ಕಾಳಾಮುಖ ಮಠಗಳು ವೀರ ಶೈವ ಮಠಗಳಾಗಿ ಪರಿವರ್ತನೆಗೊಂಡುದಕ್ಕೆ ಆಧಾರಗಳಿವೆ. ಈ ಮಠಗಳ ಸ್ಥಾನಾಚಾರ್ಯರು ಇಷ್ಟಲಿಂಗ ಮತ್ತು ಸ್ಥಾವರಲಿಂಗಗಳೆರಡನ್ನೂ ಒಪ್ಪಿಕೊಂಡು ಮುನ್ನಡೆದುದನ್ನು

---

14. ಬಸವವಚನ ೩೭೩, ಪು.೭೧ (ಸಂ)ಡಾ.ಹಿರೇಮಠ. ಆರ್.ಸಿ., ಧಾರವಾಢ.೧೯೮೮.
15. ಸಂಕೀರ್ಣ ವಚನ ಸಂಪುಟ-ಒಂದು(ಸಂ) ಡಾ. ಕಲಬುರ್ಗಿ ಎಂ.ಎಂ., ಅಂಬಿಗರ ಚೌಡಯ್ಯನ ವಚನ- ೧೧೨, ಪು.೩೭-೩೮.
16. ಅದೇ, ವಚನ. ೧೨೫, ಪು-42-43.
17. ಐ.ಎ.ಪಿ(ಕಡಪಜಿಲ್ಲೆ) ಭಾಗ-೨, ೧೧೭, ಕ್ರಿ.ಶ.೧೫೩೮, ಜೂನ್, ೨೨ ರಾಯಚೋಟಿ.
    ಅದೇ.೨೫೫, ಕ್ರಿ.ಶ.೧೫೫೮ ನವಂಬರ ೩೦, ರಾಯಚೋಟಿ.
    ಅದೇ. ೨೬೦, ಕ್ರಿ.ಶ. ೧೫೬೩ ಜನವರಿ ೧೯, ರಾಯಚೋಟಿ.
    ''ದಕ್ಷಿಣಕಾಸಿ ನಿವಾಸುಂಡ್ಯೆನ ಶ್ರೀ ರಾಚವೀಟಿ ವೀರೇಶ್ವರುನಿಕಿ''
18. ರಾಚೋಟಿಯಲ್ಲಿ ಭಗ್ನವಾದ ದೇವಾಲಯ ಮತ್ತು ಈಶ್ವರಲಿಂಗದ ಅವಶೇಷವಿದ್ದು, ಜನರು ಅದನ್ನು ಹಳೇ ರಾಚೋಟಿ ವೀರಭದ್ರ ದೇವಾಲಯವೆಂದೇ ಕರೆಯುತ್ತಾರೆ. ಆದ್ದರಿಂದ ಈ ಲಿಂಗವೇ ಮೂಲ ರಾಚೋಟಿ ಲಿಂಗವೆಂಬುದು ಸ್ಪಷ್ಟ.

ಚರಿತ್ರೆ ಸಾರುತ್ತದೆ.[19] ಅಂದರೆ ಅಂದು ಮನೆದೈವವೆಂದು ಲಿಂಗರೂಪದಲ್ಲಿ ವೀರಭದ್ರನನ್ನು ಪೂಜಿಸುತ್ತಿದ್ದವರೇ ಮುಂದೆ ವೀರಶೈವಕ್ಕೆ ಪರಿವರ್ತನಗೊಂಡ ಮೇಲೂ ಮುಂದು ವರೆಸಿಕೊಂಡು ಬಂದಿದ್ದಾರೆ. ಒಂದು ಶಾಸನವಂತೂ "ಈ ಶಾಸನಂ ಯಿಚಿನ ಪುರಾಂತಕುಲ ಒಪಂ ರಾಚವೀಟಿ ವೀರೇಶ್ವರುಂಡು" ಎಂದು ಸ್ಪಷ್ಟವಾಗಿ ಹೇಳಿದೆ.[20] ಆದ್ದರಿಂದ ರಾಚೋಟಿಯ ವೀರಭದ್ರ ದೇವಾಲಯವು 12ನೇ ಶತಮಾನಕ್ಕಿಂತಲೂ ಪ್ರಾಚೀನವಾದುದೆಂಬುದು ಸ್ಪಷ್ಟ. ಅಲ್ಲದೆ ೧೨ನೇ ಶತಮಾನದಿಂದ ೧೬ನೇ ಶತಮಾನದ (ಕ್ರಿ.ಶ.೧೫೬೩)ವರೆಗೆ ಈ ವೀರಭದ್ರನು ಲಿಂಗರೂಪದಿಂದ ಪೂಜೆಗೊಳ್ಳುತ್ತಿದ್ದುದು ಅಲ್ಲಿ ದೊರೆತ ಅವಶೇಷಗಳಿಂದ ಸ್ಪಷ್ಟವಾಗುತ್ತದೆ. ಆದ್ದರಿಂದ ಈಗ ಪೂಜೆಗೊಳ್ಳುತ್ತಿರುವ ವೀರಭದ್ರನ ಶಿಲ್ಪವು ೧೬ನೇ ಶತಮಾನದಿಂದ ಈಚಿನದೆಂದು ಹೇಳಬಹುದು. ಆದರೆ ವಚನಗಳ ಕಾಲಕ್ಕಿಂತ ಹಿಂದಿನ ಈ ದೇವಾಲಯದ ಚರಿತ್ರೆಯನ್ನು ಕಟ್ಟಿಕೊಡಲು ಆಧಾರಗಳ ಕೊರತೆಯಿದೆ. ಸಧ್ಯದ ಆಧಾರಗಳ ಮಿತಿಯಲ್ಲಿ, ರಾಚೋಟಿಯ ವೀರಭದ್ರ ದೇವಾಲಯವು ೧೨ನೇ ಶತಮಾನದಲ್ಲಿ ಪ್ರಸಿದ್ಧ ಶೈವಕೇಂದ್ರವಾಗಿತ್ತೆಂದು ಹೇಳಬಹುದು.

ಒಟ್ಟಿನಲ್ಲಿ ಆಂಧ್ರಪ್ರದೇಶದ ರಾಚೋಟಿಯ ವೀರಭದ್ರ ದೇವಾಲಯವು ೧೨ನೆಯ ಶತಮಾನದಷ್ಟು ಪ್ರಾಚೀನ ಇತಿಹಾಸವನ್ನು ಹೊಂದಿದೆ. ಶಾಸನಗಳಂಥ ಪ್ರಮುಖ ಆಧಾರಗಳ ದಿವ್ಯಮೌನದಲ್ಲೂ ಅಂಬಿಗರ ಚೌಡಯ್ಯನ ವಚನ ಈ ದೇವಾಲಯದ ಚರಿತ್ರೆಯನ್ನು ಕಟ್ಟಿಕೊಡುವಲ್ಲಿ ತುಂಬ ನೆರವಾಗಿದೆ.

**ಅನುಬಂಧ**

ಇದುವರೆಗೆ ರಾಚೋಟಿ ವೀರಭದ್ರ ದೇವರನ್ನು ಉಲ್ಲೇಖಿಸುವ ಒಟ್ಟು ೮ ತೆಲುಗು ಭಾಷೆಯ ಶಾಸನಗಳು ಲಭ್ಯವಾಗಿವೆ. ಚಕ್ರವರ್ತಿಗಳ ಇಲ್ಲವೆ ಸಾಮಂತರ ಆಳ್ವಿಕೆಗೆ ಸಂಬಂಧಿಸಿ ಹೇಳುವುದಾದರೆ, ಕೃಷ್ಣದೇವರಾಯನ ಕಾಲದ ಒಂದು, ಅಚ್ಯುತದೇವರಾಯನ ಕಾಲದ ಒಂದು, ಸದಾಶಿವರಾಯನ ಕಾಲದ ಮೂರು, ವೆಂಕಟಾದ್ರಿಯಕಾಲದ ಒಂದು, ಕುಮಾರ ಅನಂತರಾಯನ ಕಾಲದ ಒಂದು ಮತ್ತು ಅರಸರ ಉಲ್ಲೇಖವಿಲ್ಲದ ಒಂದು ಶಾಸನಗಳು ಇಲ್ಲಿವೆ. ಇವುಗಳಲ್ಲಿ ಸದಾಶಿವರಾಯನ ಕಾಲದ ಒಂದು ಶಾಸನ (ಕ್ರಿ.ಶ.೧೫೪೯)ವನ್ನು ಹೊರತುಪಡಿಸಿ ಉಳಿದೆಲ್ಲವೂ ರಾಚೋಟಿಯ ವೀರಭದ್ರ ದೇವಾಲಯದಲ್ಲಿಯೇ ಇವೆ.

ಕೃಷ್ಣದೇವರಾಯನ ಆಳ್ವಿಕೆಯಲ್ಲಿನ ಶಾಸನವು (ವೀರಭದ್ರ) ದೇವಾಲಯಕ್ಕೆ ಭೂಮಿಯನ್ನು (?) ದಾನವಾಗಿ ಬಿಟ್ಟುದನ್ನು ಉಲ್ಲೇಖಿಸಿದರೆ, ಅಚ್ಯುತ ದೇವರಾಯನ ಕಾಲದ ಶಾಸನವು ನಾಯಂಕಾಚಾರ್ಯ ಮತ್ತು ಕುಮಾರ ವೆಂಕಟಾದ್ರಿನಾಯಕರು ವೀರಭದ್ರ ದೇವರ ಅಂಗರಂಗ ವೈಭವ, ಅಖಂಡ ದೀಪ, ನೈವೇದ್ಯಗಳನ್ನು ನಡೆಸಲು 'ಮಂಡ್ಯಂ' ಪ್ರಾಂತದಿಂದ ಬರುವ ಆದಾಯವನ್ನು ಕಾವಲಿಗಾಡು ಮತ್ತು ದೇಸಿಯ ಕಾಪುಗಳ ರೂಪದಲ್ಲಿ ಪ್ರಥಮ ಏಕಾದಶಿಯ ಪುಣ್ಯಕಾಲದಲ್ಲಿ, ಒಂದು ತೂಮುಅಕ್ಕಿಯ ದರದಲ್ಲಿ ಬಿಟ್ಟುಕೊಟ್ಟುದನ್ನು ಉಲ್ಲೇಖಿಸಿದೆ.

ಸದಾಶಿವರಾಯನ ಆಳ್ವಿಕೆಯ ಬೆಡದೂರ ಶಾಸನವು ಈ ದೇವಾಲಯವು ಅತ್ಯಂತ ಪುರಾತನವಾದುದೆಂದು ಹೇಳಿದೆ. ಕ್ರಿ.ಶ.೧೫೫೮ರ ರಾಚೋಟಿಯ ಶಾಸನವು ಮಹಾ ಮಂಡಳೇಶ್ವರ ಜಿಲ್ಲೆಳ್ಲ ವೆಂಗಳರಾಜು ಮತ್ತು ಮಹಾ ಮಂಡಳೇಶ್ವರ ರಾಯಪರಾಜು ವೆಂಗಳರಾಜು ಅವರಿಗೆ ಪುಣ್ಯವಾಗಲೆಂದು ಆಸ್ಥಾನ ಪೂಜಾರಿ ಪರುತಯ್ಯನು ವೀರಭದ್ರದೇವರಿಗೆ ಅಕ್ಕಿ, ಹಾಲು, ಸಕ್ಕರೆ, ಬೆಲ್ಲ ಮೊದಲಾದವುಗಳನ್ನು ದಾನವಾಗಿ ಬಿಟ್ಟುದನ್ನು ಹೇಳಿದೆ. ಇನ್ನು ಕ್ರಿ.ಶ.೧೫೬೩ರ ಶಾಸನವು ಕಾಶ್ಯಪ ಗೋತ್ರದ ಮಹಾಮಂಡಳೇಶ್ವರ ಜಿಲೇಳ ರಂಗಪತಿರಾಜನ ಕಾರ್ಯಕರ್ತನಾದ ಅಮರಿನಾಯನಿ ವೆಂಗಳ ನಾಯುಡು ವೀರಭದ್ರ ದೇವಾಲಯದ ಗರ್ಭಗುಡಿ, ಸುಕನಾಸಿ ಮತ್ತು ಶಿಖರಗಳನ್ನು ಜೀರ್ಣೋದ್ಧಾರಗೊಳಿಸಿದುದನ್ನು ಉಲ್ಲೇಖಿಸಿದೆ.

ಚಕ್ರವರ್ತಿಯನ್ನು ಉಲ್ಲೇಖಿಸದ ಕ್ರಿ.ಶ.೧೫೫೩–೫೮ರ ಶಾಸನವು ಬುಗ್ಗರಾಜು ತಿಮ್ಮಪ್ಪನು ಗುರುವರಾಜು ಮತ್ತು

---

19. ಉಳಿಯುಮೇಶ್ವರ ಚಿಕ್ಕಯ್ಯನು ಹುಳಿಯುಮೇಶ್ವರ ದೇವಾಲಯದ ಸ್ಥಾನಾಚಾರ್ಯನಾಗಿದ್ದುಕೊಂಡೂ ವಚನಗಳನ್ನು ಬರೆದಿದ್ದಾನೆ. ವಿವರಗಳಿಗೆ ನೋಡಿ. ಡಾ|| ಚನ್ನಬಸವಯ್ಯ ಹಿರೇಮಠ., ಕುರುಗೋಡು ಸಿಂದರು ಒಂದು ಅಧ್ಯಯನ, ಕೊಪ್ಪಳ, ೧೯೯೫.
20. ಐ.ಎ.ಪಿ.(ಕಡಪ ಜಿಲ್ಲೆ) ಭಾಗ-೨, ೨೦೫, ಕ್ರಿ.ಶ.೧೫೪೯ ಬೆಡದೂರು, ಜಮ್ಮಲಮಡುಗು(ತಾ.).

ದೊಡ್ಡಸಂಗರಾಜು ಅವರಿಗೆ ಪುಣ್ಯವಾಗಲೆಂದು ವೀರಭದ್ರ ದೇವಾಲಯದ ವೀದಿಮಂಟಪದಲ್ಲಿ ದೀಪದ ವ್ಯವಸ್ಥೆಯನ್ನು ಮಾಡಿದುದಾಗಿ ಹೇಳಿದೆ. ಈ ಶಾಸನದ ಮುಂದಿನ ಭಾಗವು ತ್ರುಟಿತವಾಗಿದೆ.

ಕಾಲನಿರ್ದೇಶನವಿಲ್ಲದ ವೆಂಕಟಾದ್ರಿಯ ಆಳ್ವಿಕೆಯ ಶಾಸನವು[21] ಅವನ ಅಧಿಕಾರಿಗಳಾದ ಇರುಗ ಜೀಲ, ಬಾಲ ಜೀಲ, ಯರಜೀಲ, ಚಿನವೀರಪ, ನಲ್ಲಜೀಲ, ವೀರಪ, ತಮರವುತ ವೀರಪರು ಸಾಮೂಹಿಕವಾಗಿ ರಾಚೋಟಿಯ ವೀರಸಿದ್ದಣನಿಗೆ ವೀರಭದ್ರ ದೇವಾಲಯದಲ್ಲಿ ಶಾಶ್ವ ದೀಪವನ್ನು ನೋಡಿಕೊಳ್ಳಲು 'ಮೊಗಪಾಲಂಪಲ್ಲ' ಎಂ ಗ್ರಾಮದ ಸಮಸ್ತ ಆದಾಯವನ್ನು ಬಿಟ್ಟುಕೊಟ್ಟುದನ್ನ ಹೇಳಿದ ಇನ್ನು ಕುಮಾರ ಅನಂತರಾಯನ ಕಾಲದ ಕ್ರಿ.ಶ.೧೬೨ ಶಾಸನವು[22] ವೀರಭದ್ರ ದೇವಾಲಯದ ಎರಡು ಗೋಪುರಗಳಿ ಬಣ್ಣಹಚ್ಚಿದುದನ್ನು ಹೇಳಿದೆ.

21 ಅದೇ. ೨೬೯, ರಾಯಚೋಟಿ.

22. T.T.D. Inscriptions, VI-೧, No.25, Ref: Dr. Kameswara Rao., Select Vijayanayar Temples of Rayalaseema, p-೬೧.

...ೀಣಾ ಶೇಖರ್ *

# ...ದರಿಯಾ ದೌಲತ್ ಬಾಗ್‌ನ ವರ್ಣಚಿತ್ರಗಳ ಬಗ್ಗೆ ಕೆಲವು ಅನಿಸಿಕೆಗಳು

ಅಜಂತಾ, ಎಲ್ಲೋರಾ, ಬಾಘ್, ಬಾದಾಮಿಗಳಲ್ಲಿ ...ಾಣಬರುವ ಭಿತ್ತಿ ಚಿತ್ರಗಳ ಪರಂಪರೆಯಲ್ಲಿ ಆಗುತ್ತಿದ್ದ ...ಂಜರಿತವನ್ನು ದರಿಯಾ ದೌಲತ್‌ನ ಭಿತ್ತಿಚಿತ್ರಗಳಲ್ಲಿ ...ುರುತಿಸಬಹುದು. ಟಿಪ್ಪುವಿನ ಬೇಸಿಗೆ ಅರಮನೆಯ ಪೂರ್ವ ...ಮತ್ತು ಪಶ್ಚಿಮದ ಗೋಡೆಗಳ ಮೇಲೆ ಇರುವ ಚಿತ್ರಗಳು ...ವ್ಯಕ್ತಿಗಳ ಆಕೃತಿಗಳನ್ನು ಒಳಗೊಂಡು ಮೆಚ್ಚುಗೆ ಗಳಿಸುವ ...ಸ್ವರೂಪದವೂ, ಕೆಲಮಟ್ಟಿಗೆ ವಿಲಕ್ಷಣವಾದುವೂ, ಆಗಿವೆ.

ಪಶ್ಚಿಮದ ಭಿತ್ತಿಯಲ್ಲಿ ಬ್ರಿಟಿಷರ ವಿರುದ್ಧ ಟಿಪ್ಪು ಮತ್ತು ಹೈದರ್ ನಡೆಸಿದ ಖ್ಯಾತ ಪೊಲ್ಲುಯೂರ ಯುದ್ಧದ ದೃಶ್ಯವಿದೆ. ಪೂರ್ವದ ಗೋಡೆಗಳ ಮೇಲೆ ಉಲ್ಲೇಖಿಸಬಹುದಾದ ಚಿತ್ರಗಳಲ್ಲಿ ತಂಜಾವೂರಿನ ರಾಜ, ಮದಕರಿ ನಾಯಕ, ಕೃಷ್ಣರಾಜ ಒಡೆಯರ್ ಮುಂತಾದವರ ಚಿತ್ರಣವಿದೆ. ಇವು ಪಾಶ್ಚಾತ್ಯ ಶೈಲಿಯಲ್ಲಿ ರೇಖಿಸಲು ಮಾಡಿದ ಯತ್ನಗಳು. ಇದರಲ್ಲಿ ೩೦-೪೦ ರಾಜರ ಚಿತ್ರಗಳಿದ್ದು ಅವುಗಳಲ್ಲಿ ಕೆಲವನ್ನು ಮಾತ್ರ ಗುರುತಿಸಲು ಈವರೆಗೆ ಸಾಧ್ಯವಾಗಿದೆ. ಈ ರಾಜರ ಚಿತ್ರಗಳು ಟಿಪ್ಪುವಿನ ಜೊತೆ ದರ್ಬಾರಿನಲ್ಲಿದ್ದಾಗ ಮೂಡಿಸಿದವೆ ಅಥವಾ ಸುಲ್ತಾನನು ನೀಡಿದ ವರ್ಣನೆಯಿಂದಲೇ ಎಂಬುದು ಖಚಿತವಾಗಿಲ್ಲ. ಇದರಲ್ಲಿ ಕೆಲವರು ಟಿಪ್ಪುವಿನ ಮಿತ್ರರಲ್ಲದ್ದ ರಿಂದ ಆತನ ದರ್ಬಾರಿನಲ್ಲಿ ಬಂದಾಗ ಚಿತ್ರಿತರಾದವರೆಂದು ಹೇಳಲು ಬಾರದು. ಟಿಪ್ಪುವಿನ ವರ್ಣನಾಸಾಮರ್ಥ್ಯದಿಂದ ಬರೆದುವು ಇವೆಂದಾದರೆ ಅವುಗಳನ್ನು ಗುರುತಿಸುವ ಯತ್ನ ಸಂಶಯಾತೀತವಲ್ಲ.

ಇನ್ನೊಂದು ಸಮಸ್ಯೆ ಎಂದರೆ ಇಲ್ಲಿನ ವ್ಯಕ್ತಿ ಚಿತ್ರಗಳು ಕುಗ್ಗಿದ ಸ್ಥಳಾವಕಾಶದಿಂದ ಒಂದರ ಮೇಲೆ ಒಂದು ಎಂಬಂತೆ ಒತ್ತರದಲ್ಲಿ ಮೂಡಿ ಬಂದಿರುವುದು. ಕಲಾವಿದರಿಗೆ ಸಾಕಷ್ಟು ವಿಶಾಲವಾದ ಗೋಡೆ ಇದ್ದರೂ, ಈ ಈ ರೀತಿಯ ಚಿತ್ರಣದಿಂದ ಒಬ್ಬ ವ್ಯಕ್ತಿಯನ್ನು ನಮ್ಮ ಸ್ಮರಣ ಶಕ್ತಿಯ ಬಲದಿಂದ ಗುರುತಿಸಲು ಕಷ್ಟವಾಗುವುದು. ಬಹುಶಃ ದಕ್ಷಿಣ ಭಾರತದ ಇತಿಹಾಸದ ದೀರ್ಘ ಕಾಲಾವಧಿಯ ಸಂಗತಿಗಳನ್ನು ಮೂಡಿಸುವ ಒತ್ತಡ ಕಲಾವಿದರ ಮೇಲೆ ಬಿದ್ದುದೇ ಇದಕ್ಕೆ ಕಾರಣವಿರಬಹುದು.

ಇನ್ನೊಂದು ಕಲಾ ಸಮುದಾಯದಲ್ಲಿ ಇಬ್ಬರು ವ್ಯಕ್ತಿಗಳು ಸೈನ್ಯವೊಂದರ ಮುಂದಾಳುಗಳಾಗಿ ಸಾಗುವ ಚಿತ್ರಣವಿದೆ. ಒಬ್ಬ ವ್ಯಕ್ತಿಯ ಉಡುಪು ಮತ್ತು ರಾಜ ಸಮಾನ ನಿಲುವಿನಿಂದ ಆತನನ್ನು ಟಿಪ್ಪುವೆಂದು ಗುರುತಿಸಬಹುದಾದರೂ ಮುಖದ ಮೇಲಣ ವರ್ಣಗಳೆಲ್ಲ ಮಾಸಿವೆ. ಇಲ್ಲಿ ಟಿಪ್ಪು ಮಧ್ಯಮ ಎತ್ತರದ, ಮಧ್ಯಮ ತೂಕದ ಮತ್ತು ಮಧ್ಯಮ ವರ್ಣದ ವ್ಯಕ್ತಿಯಾಗಿ ಕಂಡುಬರುತ್ತಾನೆ. ಎಚ್ಚರಿಕೆಯಿಂದ ನೋಡಿದರೆ ಅವನ ಮುಖವನ್ನು ಪುನರ್ಲೇಖಿಸಲಾಗಿದ್ದು ತಿಳಿಯುತ್ತದೆ; ಮೂಲದಲ್ಲಿ ಅದರ ಸ್ವರೂಪ ಬೇರೆಯೇ ಇದ್ದೀತು. ಇಲ್ಲಿನ ವಸ್ತು ಸಂಗ್ರಹಾಲಯದಲ್ಲಿ ಇರುವ ಬ್ರಿಟಿಷ್ ಕಲಾವಿದರು ಬರೆದ ಆತನ ಎರಡು ತೈಲ ಚಿತ್ರಗಳನ್ನು ಕಂಡಲ್ಲಿ ರಾಜನ ಮೂರು ಭಿನ್ನ ಪ್ರತೀಕಗಳು ನಮಗೆ ದೊರೆತಂತಾಗುತ್ತದೆ.

ಜಾನ್ ಜೊಫ್ಫಾನಿ (Zoffany) ೧೭೮೦ರಲ್ಲಿ ಚಿತ್ರಿಸಿದ ಟಿಪ್ಪುವಿನ ವರ್ಣಚಿತ್ರದಲ್ಲಿ ಆತನು ರಾಜನಾಗಿ,

---

* ಸಂಶೋಧನಾ ವಿದ್ಯಾರ್ಥಿನಿ, ಚಿತ್ರಕಲಾ ಪರಿಷತ್, ಬೆಂಗಳೂರು.

ದೀರ್ಘಕಾಯನಾಗಿ, ಕಂದು ಮೈಬಣ್ಣದವನಾಗಿ ಹಾಗೂ ಪ್ರಬುದ್ಧ ದೃಷ್ಟಿಯವನಾಗಿ ಕಾಣುತ್ತಾನೆ. ಆದರೆ ಚೆರ್ರಿ ರೇಖಿಸಿದ ಎದೆಮಟ್ಟದ ಚಿತ್ರದಲ್ಲಿ ಆತ ಕುಬ್ಜ, ಕಪ್ಪು ಬಣ್ಣದವನು ಹಾಗೂ ದಪ್ಪದ ದೇಹದವನಾಗಿ ಮೂಡಿದ್ದಾನೆ. ಇದರಿಂದ ಟಿಪ್ಪುವಿನ ವ್ಯಕ್ತಿತ್ವ ಏನಿತ್ತೆಂದು ನಿರ್ಣಯಿಸುವುದು ಕಠಿಣವಾಗುತ್ತದೆ.

ಯುದ್ಧದ ಚಿತ್ರಣ ನೀಡುವ ಭಿತ್ತಿಚಿತ್ರ ಭಾರತದಲ್ಲೇ ವಿಶಾಲವಾದುದು. ಇದ್ದ ವರ್ಣಗಳು ಮಾಸಿ ಹಲವು ಬಾರಿ ಅವನ್ನು ಪುನಃ ರೇಖಿಸಲಾಗಿದೆ. ಪ್ರತೀಬಾರಿ ಕೆಲವು ವಿವರಗಳನ್ನು ಕೈಬಿಟ್ಟಿದೆ. ಇಲ್ಲವೇ ಬದಲಾಯಿಸಿದೆ. ಇದ್ದರಲ್ಲಿ ಹಲವು ವ್ಯಕ್ತಿಗಳ ಚಿತ್ರವನ್ನೂ ಬದಲಾಯಿಸಿದ ಬಗ್ಗೆ ಸಾಕ್ಷ್ಯವಿದೆ. ೧೮೦೪ರಲ್ಲಿ ಲಾರ್ಡ್ ವಲೆನ್‌ಶಿಯಾ (Valentia) ಅದನ್ನು ಕಂಡಿದ್ದು ಅದರಲ್ಲಿ ಟಿಪ್ಪುವು ದ್ವೇಷಿಸುತ್ತಿದ್ದ ಆಂಗ್ಲ ವ್ಯಕ್ತಿಯೊಬ್ಬ ಮಹಿಳೆಯೊಬ್ಬಳ ವಿರುದ್ಧ ಖಡ್ಗ ಹಿರಿಯುವ ದೃಶ್ಯವಿತ್ತು. ಕರ್ನಲ್ ವಾಲ್ಟರ್ ಕ್ಯಾಂಪ್‌ಬೆಲ್ ಕೆಲವು ವಿವರಗಳನ್ನು ನೀಡಿದ್ದು ಅವು ಮಾಯವಾಗಿದೆ. ಸ್ಥಳೀಯ ಸೇವಕರು ಒಂದು ಕೈಯಲ್ಲಿ ಚಹಾದಾನಿಯನ್ನು, ಇನ್ನೊಂದರಲ್ಲಿ ಬ್ರ್ಯಾಂಡಿಯ ಸೀಸೆಗಳನ್ನೂ ಒಯ್ಯುತ್ತಿದ್ದ ಚಿತ್ರಗಳನ್ನು ಕಂಡಿದ್ದಾಗಿ ಆತ ಬರೆದಿದ್ದ. ಇಂಥ ಯಾವ ವಿವರಗಳೂ ಅಲ್ಲಿನ ವರ್ಣಚಿತ್ರಗಳಲ್ಲಿ ಇಲ್ಲ. ಮುಖ್ಯವಾದ ವಿಷಯವೆಂದರೆ ಬೇರೆ ಬೇರೆ ಕಲಾವಿದರು ಈ ಚಿತ್ರಗಳ ರಚನೆಗೆ ಕೈಯಾಡಿಸಿದ್ದು. ಮೊದಲು ಟಿಪ್ಪುವಿನ ಆಶ್ರಯದಲ್ಲಿ ಸ್ಥಳೀಯ ಚಿತ್ರಕಾರರು ಇವುಗಳನ್ನು ರೇಖಿಸಿದರು. ಮುಂದೆ ಆತನೇ ಅವುಗಳಲ್ಲಿ ಹಲವು ಬದಲಾವಣೆಗಳನ್ನು ಮಾಡಿಸಿದ. ಆಗ ಅವನಲ್ಲಿ ಇದ್ದ ಫ್ರೆಂಚ್ ಕಲಾವಿದರು ಈ ಕೆಲಸ ಮಾಡಿರಬೇಕು. ಬ್ರಿಟಿಷರು ಶ್ರೀರಂಗ ಪಟ್ಟಣವನ್ನು ಗೆದ್ದಾಗ ಅವರು ಅವುಗಳಲ್ಲಿನ ಹಲವು ಅಂಶಗಳನ್ನು ಮಾರ್ಜಿಸಿ ದಂತಿದ್ದು ಅದನ್ನು ಆಂಗ್ಲ ಕಲಾವಿದರೇ ಮಾಡಿರಬಹುದು. ಅವುಗಳಲ್ಲಿನ ಕೆಲವು ಚಿತ್ರಗಳ ಬಣ್ಣಗೆಡುತ್ತ ಸಾಗಲು ಅವುಗಳ ರಕ್ಷಣಾರ್ಥವಾಗಿ ಕೇಂದ್ರ ಪುರಾತತ್ತ್ವ ಇಲಾಖೆ ಅವುಗಳನ್ನು ಮತ್ತೆ ತಿದ್ದಿಸಿದೆ. ಇದರಿಂದ ಈ ವರ್ಣ ಚಿತ್ರಗಳು ಶ್ರೀರಂಗಪಟ್ಟಣ ಕಲಾವಿದರ ಕೌಶಲ್ಯದ ಮೂಲ ಮೌಲ್ಯಕ್ಕೆ ಎರವಾಗಿ ಪುರಾತನತೆಯ ಮೌಲ್ಯಗಳನ್ನು ಕಳಕೊಂಡವು; ಇದರಿಂದ ಅವುಗಳಲ್ಲಿ ಸೂಕ್ತ ಪ್ರಮಾಣ ಬದ್ಧತೆ ಮತ್ತು ಸಮ್ಯಕ್ ದರ್ಶನ ದೊರೆಯದಂತೆ ಆಯಿತು.

ದರಿಯಾದೌಲತ್ ಕಟ್ಟಡದ ಭೌತಿಕ ಚೌಕಟ್ಟಿಗೂ ಅಲ್ಲಿನ ಹವಾಮಾನದ ಏರು ಪೇರುಗಳಿಂದ ಪರಿಣಾಮವಾಗಿದೆ. ಸೂರ್ಯನ ಕಿರಣಗಳು ನೇರವಾಗಿ ಅವುಗಳ ಮೇಲೆ ಬಿದ್ದುದರಿಂದ ವರ್ಣಚಿತ್ರಗಳಿಗೆ ಘಾಸಿಯಾಗಿದೆ. ಇದರ ಉಷ್ಣದಿಂದ ವರ್ಣಗಳ ಮೇಲೆ ಪ್ರತಿಕ್ರಿಯೆಯಾಗಿ ಕೆಲವು ಮಸುಕಾಗುತ್ತ ಸಾಗಿದರೆ ಕೆಲವು ವರ್ಣದ ಪದರುಗಳು ಕಿತ್ತು ಬಂದಿವೆ. ವಸ್ತು ಸಂಗ್ರಹಾಲಯ ಸ್ಥಾಪನೆ ಇತ್ತೀಚೆಗಾಯಿತು ಇದಕ್ಕೂ ಮೊದಲು ವರ್ಣಚಿತ್ರ ಸಂಪದ ಬಹಳಷ್ಟು ನಷ್ಟವಾಗಿದೆ. ಅನಾಗರಿಕ ಕ್ರಿಯೆಗಳಿಂದ ಇಲ್ಲಿನ ಚಿತ್ರಗಳು ಹಾಳಾದಂತೆ ಇವೆ. ಸಂದರ್ಶಕರು ತಮಗೆ ಮೆಚ್ಚಿಗೆಯಾಗದ ವ್ಯಕ್ತಿಗಳ ಚಿತ್ರಗಳನ್ನೂ ಮುಖಗಳನ್ನೂ ಕೆರೆದು ತೆಗೆದಂತಿದೆ. ಟಿಪ್ಪುವಿನ ಅಧಿಕಾರಿಯಾಗಿದ್ದ ಮೀರ್ ಸಾದಿಕನ ಚಿತ್ರ ಇದಕ್ಕೆ ಒಳ್ಳೆಯ ಮಾದರಿ. ಅವನ ಮುಖವನ್ನು ಮತ್ತೆ ಮತ್ತೆ ಕೆರೆದುದರಿಂದ ಹಿಂದಿನ ಹೇಳಿಕೆಗಳಿಂದಷ್ಟೇ ಅವನ ಚಿತ್ರವನ್ನು ಗುರುತಿಸಬಹುದು. ಆ ಚಿತ್ರದ ದುರಸ್ತಿಗಾರರು ಆ ಕಲೆಯ ಅನ್ಯಾನ್ವಯವಾಗುವುದನ್ನು ತಪ್ಪಿಸಲು ಅಂಥ ಭಾಗಗಳನ್ನು ಹಾಗೇ ಬಿಡುತ್ತಾರೆ.

ವರ್ಣಚಿತ್ರಗಳಿಗೆ ಸೌಂದರ್ಯದ ದೃಷ್ಟಿಗಿಂತ ಐತಿಹಾಸಿಕ ದೃಷ್ಟಿಯಿಂದ ವಿಶೇಷ ಮಹತ್ವವಿದೆ. ಅವುಗಳು ಸಾಮಾಜಿಕ ಇಲ್ಲವೇ ಧಾರ್ಮಿಕ ವಸ್ತುಗಳದ್ದಾಗಿರದೆ ರಾಜಕೀಯ ವಿಚಾರಗಳನ್ನು ಒಳಗೊಂಡವುಗಳಾಗಿರುವುದೇ ಈ ಅನನ್ಯ ಮಹತ್ವಕ್ಕೆ ಕಾರಣ.

ದರಿಯಾ ದೌಲತ್ ಬಗ್ಗೆ ಬರೆದ ಕೃತಿಗಳು ಬಹಳವಿಲ್ಲ. ಅವುಗಳ ಒಂದು ಸಮಗ್ರ ಮತ್ತು ಸವಿವರ ಅಧ್ಯಯನ ಅವುಗಳು ನಶಿಸುತ್ತಿರುವ ಈ ಕಾಲದಲ್ಲಿ ನಡೆಯುವುದು ಅನಿವಾರ್ಯ. ಟಿಪ್ಪು ಹೊಂದಿದ್ದ ಅಪಾರ ಸಂಪತ್ತಿನಲ್ಲಿ ಈಗ ಉಳಿದಿರುವ ಸಂಪತ್ಭಂಡಾರಗಳೆಂದರೆ ಇವೇ. ಉಳಿದ ಈ ಚಿತ್ರಸಂಪತ್ತಿನ ರಕ್ಷಣೆ, ದಾಖಲೀಕರಣ ಮತ್ತು ಅತಿ ಎಚ್ಚರಿಕೆಯ ಪರಿಪಾಲನೆ ಅತ್ಯವಶ್ಯ ತುರ್ತುಕ್ರಮವಾಗಿದ್ದು ಇಲ್ಲವಾದಲ್ಲಿ ಅವು ಅಂಧಕಾರದ ಪರಿಧಿಗೆ ತಳ್ಳಲ್ಪಟ್ಟು ಮುಂದೆ ಪೂರ್ತಿ ಇಲ್ಲದಂತೆ ಆಗಬಹುದು.

○

ಪ್ರೊ॥ ಸಿ ವ್ಹಿ. ಮಠದ *

# ಹದಿನೆಂಟನೆಯ ಶತಮಾನದಲ್ಲಿ ಬೆಳಗಾವಿ

ಮರಾಠರು ಈ ಭಾಗದ ಮೇಲೆ ತಮ್ಮ ಆಳಿಕೆ ಪ್ರಾರಂಭಿಸುವ ಪೂರ್ವದಲ್ಲಿ ಬೆಳಗಾವಿ ಜಿಲ್ಲೆಯಲ್ಲಿ ಅನೇಕ ದೇಸಾಯಿಯುವರು, ಜಮೀನುದಾರರು, ಬಿಜಾಪುರ ಅದಿಲಶಾಹಿಯ ಹಿಡಿತಕ್ಕೊಳಪಟ್ಟು ಅವನ ಆಳ್ವಿಕೆಯ ಲಾಭ ಪಡೆದವರಾಗಿದ್ದರು. ೧೭ನೆಯ ಶತಮಾನದ ಪ್ರಾರಂಭದಲ್ಲಿ ಕ್ರಿ.ಶ.೧೬೨೫ರಲ್ಲಿ ಶಹಜಿಯು ಬಿಜಾಪುರ ಇಬ್ರಾಹಿಂ ಅದಿಲಶಾಹಿಯ ಆಸ್ಥಾನದಲ್ಲಿ ಸೇವೆಗೆ ಸೇರಿದನು. ಇದರ ಲಾಭ ಪಡದು ಅನೇಕ ಮರಾಠರು ಬಿಜಾಪುರ ಅರಸು ಮನೆತನದ ಸೈನಿಕ ಹಾಗೂ ಆಡಳಿತ ಸೇವೆಗಳಲ್ಲಿ ಸೇರಿಕೊಂಡರು, ಸಾವಕಾಶವಾಗಿ ತಮ್ಮ ಪ್ರಭಾವವನ್ನು ಹೆಚ್ಚಿಸಿಕೊಂಡರು.

ಬಿಜಾಪುರ ಅದಿಲ್‌ಶಾಹಿ ಮನೆತನ ಪತನವಾದಾಗ ಮೋಘಲ ಬಾದಶಹನು ಈ ಭಾಗದ ಮೇಲೆ ತನ್ನ ಅಧಿಕಾರ ಘೋಷಿಸಿದನು. ಈ ವೇಳೆಗೆ ಮರಾಠರು ಸ್ಥಾನಿಕವಾಗಿ ತಮ್ಮ ಪ್ರಭಾವ ಹೆಚ್ಚಿಸಿಕೊಂಡಿದ್ದರು. ಕೆಲವು ಸ್ಥಾನಿಕ ದೇಸಾಯರು ಮರಾಠರ ಪ್ರಭಾವಕ್ಕೊಳಗಾಗಿದ್ದರು. ೧೭೬೧ರ ಮೂರನೆಯ ಪಾಣಿಪತ್‌ನ ಯುದ್ಧದಿಂದಾಗಿ ಮರಾಠರ ಪ್ರಭಾವ ಕುಸಿಯಿತು. ಇದರ ಲಾಭ ಪಡೆದು ಮೈಸೂರಿನ ಪ್ರಭಾವಿ ವ್ಯಕ್ತಿ ಹೈದರ್ ಅಲಿ ಕರ್ನಾಟಕದ ಉತ್ತರ ಭಾಗದ ಮೇಲೆ ತನ್ನ ಪ್ರಭಾವ ಸ್ಥಾಪಿಸಲು ಹೆಣಗಿದನು. ಇದರಲ್ಲಿ ಯಶಸ್ಸು ಕೂಡ ಸಾಧಿಸಿದನು. ಇಂಥ ಪರಿಸ್ಥಿತಿಯ ಲಾಭ ಪಡೆದು ಇಂಗ್ಲೀಷರೂ ಕೂಡ ತಮ್ಮ ಅಳಿಕೆಯನ್ನು ಭಾರತದಲ್ಲಿ ಸ್ಥಿರಗೊಳಿಸಲು ಹೆಣಗಿದರು. ಅಂತೆಯೇ ಈ ಪರಿಸ್ಥಿತಿಯ ಲಾಭ ಪಡೆದು ಸ್ಥಾನಿಕ ಆಡಳಿತಗಾರರಾದ ಕಿತ್ತೂರು, ತೊರಗಲ್, ಬೆಳವಡಿ, ಸಿರಿಸಂಗಿ, ಪಂಟಿಮುರಿ ದೇಸಾಯರು ಸ್ವತಂತ್ರ ಅಸ್ತಿತ್ವಕ್ಕೆ ಹೋರಾಟ ನಡೆಸಿದ್ದರು. ಕೆಲವು ಸಲ ದೊಡ್ಡ ಶಕ್ತಿಗಳು ತಮ್ಮ ಲಾಭಕ್ಕಾಗಿ ಇಲ್ಲಿಯ ಚಿಕ್ಕ ಸಂಸ್ಥಾನಿಕರ ಸಹಾಯ ಕೂಡ ಪಡೆಯುತ್ತಿದ್ದರು. ಇಂಥ ಅನೇಕ ಪ್ರಸಂಗಗಳು ಇತಿಹಾಸದ ಪುಟಗಳಲ್ಲಿ ಎದ್ದು ಕಾಣುತ್ತಿವೆ. ಈ ಭಾಗದಲ್ಲಿ ಸ್ಥಾನಿಕ ದೇಸಾಯರ ಸಹಾಯ ಪಡೆಯಲು ಪೈಪೋಟಿ ನಡೆಸಿದ ಮೊದಲ ಶಕ್ತಿಗಳೆಂದರೆ ಮೊಘಲರು ಹಾಗೂ ಬಿಜಾಪುರ ಆದಿಲಶಾಹಿಗಳು. ನಂತರ ಮೊಘಲರು, ಮರಾಠರು ಕೊನೆಯದಾಗಿ ಮರಾಠರು ಹಾಗೂ ಮೈಸೂರಿನ ಹೈದರಅಲಿ ಹಾಗೂ ಟೀಪು ಸುಲ್ತಾನ.

**ಮೂಲಾಧಾರಗಳು:** ಮುಖ್ಯವಾಗಿ ಅದಿಲಶಾಹಿಗಳ ಮುಖ್ಯ ಪಟ್ಟಣ ಬಿಜಾಪುರದಲ್ಲಿ ಬಿಟ್ಟುಹೋದ ಅನೇಕ ಆಧಾರ ಗ್ರಂಥಗಳು ದೊರೆಯುತ್ತವೆ. ಮೊಘಲರ ಆಸ್ಥಾನದಲ್ಲಿ ಕೂಡ ಈ ವಿಷಯಕ್ಕೆ ಸಂಬಂಧಿಸಿದ ಅನೇಕ ಆಧಾರ ಗ್ರಂಥಗಳು ದೊರೆಯುತ್ತವೆ. ಮರಾಠರ ಹಾಗೂ ಪೇಶ್ವೆಯರ ಕಾಲದ ಅನೇಕ ದಾಖಲೆಗಳು ನಮಗೆ ವಿವಿಧೆಡೆಯಲ್ಲಿ ಉಪಲಬ್ಧವಿವೆ. ಹಾಗೆಯೇ ಸ್ಥಾನಿಕ ದೇಸಾಯರ ಆಸ್ಥಾನದಲ್ಲಿ ಕೂಡ ಅನೇಕ ಆಧಾರ ಸಾಮಗ್ರಿ ದೊರೆಯುತ್ತವೆ. ಬೆಳಗಾವಿ ಹಾಗೂ ಈ ಜಿಲ್ಲೆಗೆ ಸಂಬಂಧಿಸಿದ ಅನೇಕ ಮಹತ್ವದ ಆಧಾರಗಳು ಪುಣೆ ಪತ್ರಾಗಾರಗಳಲ್ಲಿ ಕಾದಿಡಲ್ಪಟ್ಟಿವೆ. ರಾಯಲ್ ಎಸಿಯಾಟಿಕ್ ಲೈಬ್ರರಿ ಮುಂಬೈ ಹಾಗೂ ಕರ್ನಾಟಕ ವಿಶ್ವವಿದ್ಯಾಲಯಗಳ ಗ್ರಂಥಾಲಯಗಳಲ್ಲಿ ದೆಹಲಿ ಪತ್ರಾಗಾರದಲ್ಲೂ ದೊರೆಯುತ್ತವೆ. ಹೆಚ್ಚಿನ ಗ್ರಂಥಗಳು ಇಂಗ್ಲೀಷ ಹಾಗೂ ಸ್ಥಾನಿಕ ಭಾಷೆಗಳಲ್ಲಿವೆ. ಅದರಲ್ಲಿಯು ಮೋಡಿ ಲಿಪಿಯಲ್ಲಿ

---

* ಪ್ರಿನ್ಸಿಪಾಲ್, ಹುಕ್ಕೇರಿ ಮಠದ ಮಹಿಳಾ ಕಾಲೇಜು, ಹಾವೇರಿ, ಧಾರವಾಡ ಜಿಲ್ಲೆ

ವಿಪುಲವಾದ ಮಾಹಿತಿ ದೊರೆಯುತ್ತದೆ. ಈ ಭಾಗದ ವಿಷಯಗಳನ್ನು ಮೊದಲಿಗೆ ನಮೂದಿಸಿದ ಗ್ರಂಥಗಳೆಂದರೆ ''ಮಾರಾಠ ಕ್ರಾನಿಕಲ್ಸ್'' ಅಥವಾ 'ಬಖೈರು'ಗಳು. ಪುಣೆಯ ಡೆಕ್ಕನ್ ಕಾಲೇಜಿನ ಪತ್ರಾಗಾರದಲ್ಲಿ ಅನೇಕ ಕಾಗದಪತ್ರಗಳಿವೆ! ಹಾಗೆಯೇ ಪುಣೆ ಹಾಗೂ ಕೊಲ್ಹಾಪೂರ ಪತ್ರಾಗಾರಗಳಲ್ಲಿ ಕೂಡ ದಾಖಲೆಗಳು ದೊರೆಯುತ್ತವೆ. ಸ್ಟೊರ್ಕ್ಸ್ ಬರೆದ ''ಹಿಸ್ಟರಿ ಆಫ್ ಬೆಳಗಾಂ ಡಿಸ್ಟ್ರಿಕ್ಟ್'' ೧೮೭೦ ಈ ಗ್ರಂಥ ಕೂಡ ಈ ಭಾಗದ ವಿಶೇಷ ಮಾಹಿತಿ ಒದಗಿಸುವುದು. ಬೆಳಗಾಂವ 'ಗ್ಯಾಜೆಟ್ಟಿಯರ್ ಕೂಡಾ ಈ ಭಾಗದ ಚರಿತ್ರೆಯನ್ನು ಸ್ಪಷ್ಟಪಡಿಸುತ್ತದೆ. ಡಾ|| ಆರ್.ಡಿ ಚೌಕ್ಸೆಯವರ Economic History of Northern Karnataka ಕೂಡ ಆರ್ಥಿಕ ಪರಿಸ್ಥಿತಿಯನ್ನು ವಿವರಿಸುತ್ತದೆ.

**ನೆಲ ಹಾಗೂ ಜನ:** ಈ ಜಿಲ್ಲೆಯ ಹೆಚ್ಚಿನ ಭಾಗ ಫಲವತ್ತಾದ ಭೂಮಿಯನ್ನು ಹೊಂದಿದೆ. ಕೆಲವು ಕಡೆ ಹೆಚ್ಚು ಮಳೆ ಬೀಳುವುದು. ಇಲ್ಲಿಯ ಜನರ ಮುಖ್ಯ ಉದ್ಯೋಗ ಒಕ್ಕಲುತನ. ಕೆಲವು ಪ್ರದೇಶಗಳಲ್ಲಿ ದಟ್ಟವಾಗಿ ಹಬ್ಬಿದ ಅರಣ್ಯಗಳಿವೆ. ಈ ಜಿಲ್ಲೆಯಲ್ಲಿ ಕೃಷ್ಣಾ, ಮಲಪ್ರಭಾ, ಘಟಪ್ರಭಾ, ಮಾರ್ಕಂಡೆಯ ಮುಂತಾದ ನದಿಗಳು ಹರಿದಿವೆ. ಆ ಕಾಲದ ಮುಖ್ಯ ರಸ್ತೆ ಮಿರಜದಿಂದ ಚಿಕ್ಕೊಡಿ, ಗೋಕಾಕ, ಸವದತ್ತಿ ಬೈಲಹೊಂಗಲ ಮತ್ತು ಬೆಳಗಾವಿವರೆಗೆ ಬರುತ್ತಿತ್ತು. ಪ್ರದೇಶದ ಪ್ರವಾಸಿಗಳು ಗೋವೆಯಿಂದ ಖಾನಾಪುರ ಮಾರ್ಗವಾಗಿ ಶಹಪುರ, ಬೆಳಗಾವಿಗೆ ಬಂದು ನಂತರ ಕಲಾದಗಿ ಮುಖಾಂತರ ಬಾಗಲಕೊಟೆಗೆ ಹೋಗುತ್ತಿದ್ದರು. ಇಲ್ಲಿಯ ಹವೆ ಉತ್ತಮವಾಗಿದೆ. ಬೇಸಿಗೆಯಲ್ಲಿ ತಂಪು ಹವೆ ಇರುವದರಿಂದ ಸ್ಥಳಕ್ಕೆ ''ಬಡವರ ಮಹಾಬಳೇಶ್ವರ'' ಎಂದೂ ಕರೆಯುವುದುಂಟು.

**ರಾಜಕೀಯ ಇತಿಹಾಸ:** ಬಿಜಾಪುರ ಅದಿಲಶಾಹಿ ವಶದಲ್ಲಿದ್ದ ಈ ಭಾಗದ ಹುಕ್ಕೇರಿಯನ್ನು ಐನ ಉಲ್ ಮುಲ್ಕ್ ಗಿಲಾನಿ ಎಂಬುವವನು ೪೩ ವರ್ಷ ಆಳಿದನು (೧೫೦೩ ರಿಂದ ೧೫೪೬ ). ಬೆಳಗಾವಿಯನ್ನು ಅಸದಖಾನನು ೩೮ ವರ್ಷ (೧೫೧೧-೧೫೪೯)ಗಳ ಕಾಲ ಆಳಿದನು. ಅದೇ ರೀತ ಖಾನಾಪುರ, ರಾಯಭಾಗ, ತೊರಗಲ್‌ಗಳೂ ಕೂಡ ಅದಿಲ್ ಶಾಹಿಯ ಅನುಯಾಯಿಗಳಿಂದಲೇ ಆಳಲ್ಪಟ್ಟವು. ೧೫ನೆಯ ಶತಮಾನದಲ್ಲೆ ಬಹಮನಿ ಮನೆತನದ ಅವಸಾನವನ್ನು ಕಂಡಿತು. ನಂತರ ಮರಾಠರ ಹಾಗೂ ಪೋರ್ಚುಗೀಸರ ಏಳಿಗೆ ಪ್ರಾರಂಭವಾಯಿತು.

ಮರಾಠರ ಆಡಳಿತದಲ್ಲಿ ಜಿಲ್ಲೆಯಲ್ಲಿ ಮಹತ್ವ ಬದಲಾವಣೆಯನ್ನು ಕಾಣುತ್ತೇವೆ. ಮರಾಠರ ಅಧಿಕಾ ಯಾವದೇ ಕ್ರಾಂತಿಯಿಲ್ಲದೆ ಶಾಂತಿಯುತವಾಗಿ ಪೇಶ್ವೆಯರಿ ಹಸ್ತಾಂತರಗೊಂಡಿತು. ಈ ಸಂದರ್ಭದಲ್ಲಿ ಮುಸಲ್ಮಾನ ಹಾಗೂ ಇಂಗ್ಲೀಷರ ಪ್ರಭಾವವನ್ನು ಹತ್ತಿಕ್ಕುವುದಕ್ಕೋಸ್ಕ ಕೂಡ ಮರಾಠ ಹಾಗೂ ಪೇಶ್ವೆಯರ ಸಂಬಂಧ ಉತ್ತಮವಾಗಿರಬೇಕಿತ್ತು. ಅಂತೆಯೇ ಈರ್ವರಲ್ಲಿ ಅಂತರಿ ತಿಳುವಳಿಕೆ ಹಾಗೂ ಶಾಂತಿ ಸೌಹಾರ್ದತೆ ಹೆಚ್ಚುವುದು ಅವಶ್ಯವಿದ್ದಿತು. ಈ ಸಮಯದಲ್ಲಿ ಛತ್ರಪತಿ ಶಾಹು ಅನೇ ಕಠಿಣ ಪ್ರಸಂಗಗಳನ್ನು ಎದುರಿಸಬೇಕಾಯಿತು. ಅಲ್ಲದ ಮಹಾರಾಷ್ಟ್ರದಲ್ಲಿ ವಾತಾವರಣ ಕಲುಷಿತಗೊಂಡಿತ್ತು. ಈ ಪರಿಸ್ಥಿತಿಯ ಲಾಭ ಪಡೆದು ಜಾಣರಾದ ಪೇಶ್ವೆಯರು ರಾಜಕೀಯ ಚುಕ್ಕಾಣಿ ಹಿಡಿದರು. ಇಲ್ಲಿ ಶಾಹುವಿನಿಂದ ಪೇಶ್ವೆಗೆ ಅಧಿಕಾರವೇನೂ ಹಸ್ತಾಂತರವಾಗಲಿಲ್ಲ. ಉತ್ತಮ ತಿಳುವಳಿಕೆ ಇಬ್ಬರಲ್ಲಿಯೂ ಇದ್ದಿತು. ಯುದ್ಧಕಲೆಯಲ್ಲಿ ನಿಪುಣರಾದ ಮರಾಠರು. ಜಾಣರಾದ ಮಹತ್ವಾಂಕ್ಷಿಗಳಾದ ಹಾಗೂ ಮುಂಧೋರಣೆಯವರಾದ ಪೇಶ್ವೆಯರಿಗೆ ಸಹಕಾರ ನೀಡಿದರು. ಪೇಶ್ವೆ ಶಾಹುವಿನಿಂದ ಅಧಿಕಾರ ಕಿತ್ತುಕೊಳ್ಳದೆ ಅವನ ಸರಿಸಮಾನವಾಗಿ ನಿಂತು ಕೆಲಸ ಮಾಡಿದರು. ಆದರೆ, ಉಳಿದ ಆಡಳಿತಾಧಿಕಾರಿಗಳಿಗಿಂತಲೂ ತಾವು ಮೇಲೆಂಬ ಭಾವನೆ ಹೆಚ್ಚಿಸಿ ಪೇಶ್ವೆ ಅಧಿಕಾರದ ಸೂತ್ರ ಹಿಡಿದರೂ ಛತ್ರ ಪತಿಯಿಂದ ಅಧಿಕಾರವನ್ನು ಕಿತ್ತುಕೊಳ್ಳಲಿಲ್ಲ. ಹೀಗೆ ರಾಜಕೀಯದಲ್ಲಿ ಪೇಶ್ವೆ ಹಾಗೂ ಮರಾಠರು ವಿರೋಧಿ ಗಳಾಗದೆ ಸಹಕಾರದಿಂದಲೇ ಮರಾಠಾಸಾಮ್ರಾಜ್ಯದ ಒಡೆಯರಾಗಲು ಶ್ರಮಿಸಿದರು. ಅಂತೆಯೇ ಪೇಶ್ವೆಯ ಆಡಳಿತದಿಂದಾಗಿ ಈ ಭಾಗದ ಮೇಲೆ ಅವರ ಪ್ರಭಾವವನ್ನು ಇಂದಿಗೂ ಕಾಣುತ್ತೇವೆ.

**ಆರ್ಥಿಕ ಜೀವನ:** ಈ ಭಾಗದ ಜನ ಆರ್ಥಿಕವಾಗಿ ಹಿಂದುಳಿದ ವರಾಗಿದ್ದರು, ಹೆಚ್ಚಿನ ಜಮಿನು ಜಮೀನುದಾರರ ಒಡೆತನದಲ್ಲಿದ್ದವು. ಭೂ ಸಾಗುವಳಿ ಮಾಡುವವನು ರೈತನಾದರೂ ಜಮೀನುದಾರರೇ ಭೂ ಒಡೆಯನ ರಾಗಿದ್ದರು. ಇದರಿಂದಾಗಿ ಸಾಮಾನ್ಯ ಜನರು ತಮ್ಮ ಒಡೆಯನ ಜಮೀನಿನಲ್ಲಿ ಕೆಲಸ ಮಾಡಬೇಕು. ಇಲ್ಲವೆ ಅವನ ಸೈನ್ಯದಲ್ಲಿ ಸೈನಿಕನಾಗಿ ಸೇವೆ ಸಲ್ಲಿಸಬೇಕಾಗಿತ್ತು. ಉದ್ಯೋಗ ಬೆಳವಣಿಗೆಗೆ ಅಷ್ಟೊಂದು ಪ್ರೋತ್ಸಾಹ ಇರಲಿಲ್ಲ. ಆದಾಗ್ಯೂ ಕೆಲವು ಗುಡಿ ಕೈಗಾರಿಕೆಗಳಾದ ನೇಕಾರಿಕೆ, ಕುಂಬಾರಿಕೆ, ಬಡಗಿತನ,

ಮುಂತಾದವುಗಳಿಗೆ ಪ್ರೋತ್ಸಾಹ ಇತ್ತು. ಬೆಳಗಾವಿಗೆ ಹತ್ತಿರದ ಶಹಪುರ ಉತ್ತಮ ವ್ಯಾಪಾರೀ ಕೇಂದ್ರವಾಗಿತ್ತು. ಪೇಶ್ವೆಯರು ಇಲ್ಲಿ ಹಳೆಯ ಉದ್ಯೋಗಗಳನ್ನೇ ಪ್ರೋತ್ಸಾಹಿಸಿದರು. ಬೆಳಗಾವಿ ಜಿಲ್ಲೆಗೆ ಹೊಂದಿದ ಜಮಖಂಡಿ, ಮುಧೋಳ, ರಬಕವಿ, ಬನಹಟ್ಟಿ ಮುಂತಾದ ಬಿಜಾಪುರ ಜಿಲ್ಲೆಯ ಪ್ರದೇಶಗಳಿಂದ ವಿವಿಧ ರೀತಿಯ ಸೀರೆಗಳು, ಕುಬುಸದ ಖಣಗಳು ಈ ಭಾಗಕ್ಕೆ ಬರುತ್ತಿದ್ದವು. ಅಂತೆಯೇ ಇಂದಿಗೂ ಮಹಾರಾಷ್ಟ್ರದಲ್ಲಿ ಈ ಭಾಗದ ಸೀರೆ ಖಣಗಳು ಜನಪ್ರಿಯವಾಗಿವೆ. ಆರ್ಥಿಕವಾಗಿ ಅಷ್ಟೊಂದು ಉತ್ತೇಜನ ಕಾರಕ ಪರಿಸ್ಥಿತಿ ಇದ್ದಿರಲಿಲ್ಲವೆಂದು ಹೇಳಬಹುದು.

**ಸಾಮಾಜಿಕ ಹಾಗೂ ಸಾಂಸ್ಕೃತಿಕ ಜೀವನ :** ಮುಸಲ್ಮಾನರ ಪ್ರಭಾವದಿಂದಾಗಿ ಕೆಲವು ಪಟ್ಟಣಗಳಿಗೆ ಅಲ್ಲಿ ಆಳುತ್ತಿದ್ದ ಮುಖಂಡರ ಹೆಸರುಗಳೇ ಇಂದಿಗೂ ಉಳಿದಿವೆ. ಖಾನಾಪುರದಲ್ಲಿ ಆಳುತ್ತಿದ್ದ ಖಾನ ಬಹಾದ್ದೂರಿನಿಂದಲೇ ಖಾನಾಪುರ ಹೆಸರು ಪ್ರಾಪ್ತವಾಯಿತು. ಮುಗಟಖಾನ ಹುಬ್ಬಳ್ಳಿ ಇಲ್ಲಿ ಆಳುತ್ತಿದ್ದ ಮುಗುಟ ಖಾನನಿಂದಲೇ ಆ ಹೆಸರು ಬಂದುದಾಗಿದೆ. ಬೆಳಗಾವಿಯಲ್ಲಿ ಅಸದಖಾನನಿಗಿಂತ ಮೊದಲು ಆಳುತ್ತಿದ್ದ ಮುಸ್ತಫಾನಿಂದ ಬೆಳಗಾವಿಗೆ ಮುಸ್ತಾಫಾಬಾದ ಎಂದು ಕರೆಯಲಾಯಿತು ನಂತರ ಮೊಘಲರ ವಶಕ್ಕೆ ಬಂದಾಗ ಔರಂಗ ಜೇಬನ ಎರಡನೆಯ ಮಗ ಆಜಂ ಇಲ್ಲಿ ಆಳುತ್ತಿದ್ದ. ಅಂತೆಯೇ ಇದಕ್ಕೆ ಆಜಂನಗರ ಎಂದು ಕರೆದ. ಅಂತೆಯೇ ಮುಸಲ್ಮಾನರ ಪ್ರಭಾವ ಇಲ್ಲಿ ಹೆಚ್ಚಾಗಿದ್ದುದನ್ನು ಕಾಣುತ್ತೇವೆ.

ಇದಕ್ಕೂ ಹೆಚ್ಚಾಗಿ ಮುಸಲ್ಮಾನರ ಆಳಿಕೆಯಲ್ಲಿ ಅನೇಕ ಮಸೀದಿಗಳು ಹಾಗೂ ದರ್ಗಾಗಳು ರಚನೆಯಾದವು, ಇವುಗಳಿಗೆ ಬರಿ ಮುಸ್ಲಿಮರಿಗಷ್ಟೆ ಸೀಮಿತವಾಗಿರದೆ ಹಿಂದೂಗಳೂ ಹೋಗುತ್ತಿದ್ದರು. ಹುಕ್ಕೇರಿಯಲ್ಲಿ ೧೫೫೭ರಲ್ಲಿ ಆದಿಲ್‌ಶಾಹಿ ಸರದಾರರು ಕಟ್ಟಿಸಿದ ನೀರಿನ ಕಾರಂಜಿಗಳು ಇಂದಿಗೂ ಪ್ರಸಿದ್ಧ ಇವೆ. ಈ ಕಾರಂಜಿಗಳಿಂದ ಹುಕ್ಕೇರಿ ಹಾಗೂ ಸುತ್ತ ಮುತ್ತಲಿನ ಊರುಗಳಿಗೆ ನೀರಿನ ಸರಬರಾಜು ಆಗುತ್ತಿತ್ತು. ಬೆಳಗಾವಿಯಲ್ಲಿ ಕೂಡ ಅನೇಕ ಮಸೀದಿ ಹಾಗೂ ದರ್ಗಾಗಳು ಕಟ್ಟಲ್ಪಟ್ಟವು ಅಸದಖಾನನ ದರ್ಗಾ ಇಂದಿಗೂ ನೋಡಬಹುದು. ಬೆಳಗಾವಿ ಕೋಟೆಯಲ್ಲಿಯ ಬಹದೂರಷಾವಲಿ ದರ್ಗಾ, ಕೋತವಾಲಗಲ್ಲಿಯ ಕುವಾಲ ಷಾವಲಿದರ್ಗಾ, ಭೇಂಡಿಬರಝೂರದಲ್ಲಿಯ ಬಾಶಿಬನ್ ಷಾವಲಿದರ್ಗಾ ಹಾಗೂ ದರ್ಬಾರಗಲ್ಲಿಯ ಜಾಮಿ ಮಸಜಿದ್, ಕೋಟೆಯಲ್ಲಿಯ ಸಾಫಾ ಮಸಜಿದ್ ಇಂದಿಗೂ ನೋಡಬಹುದು.

ಮುಸಲ್ಮಾನರ ಕಾಲದ ಫಕೀರರು, ಖಾಜಿಗಳು, ಪೀರರು ಕಾಲಾನಂತರ ಹಿಂದೂ ಸಂಸ್ಕೃತಿಯಲ್ಲಿ ಬದಲಾವಣೆ ಹೊಂದಿ ಫಕೀರೇಶ, ಫಕೀರಪ್ಪ, ಪೀರಪ್ಪ, ಪೀರಾಜಿಗಳಾಗಿ ಪರಿವರ್ತನೆ ಗೊಂಡರು.

ಅದೇ ರೀತಿ ಪೇಶ್ವೆಯರಕಾಲದಲ್ಲಿ ಅನೇಕ ಬದಲಾವಣೆಗಳನ್ನು ಕಾಣುತ್ತೇವೆ. ವೀರಪ್ಪ ವೀರೋಜಿ, ಆದುದನ್ನೂ ಬಸವಂತಪ್ಪ ಬಸವಂತ ಆದುದನ್ನೂ ಕಾಣುತ್ತೇವೆ. ಕನ್ನಡ, ಮರಾಠಿ ಭಾಷೆಗಳೆರಡಲ್ಲಿಯೂ, ಅಕ್ಕ, ತಾಯಿ, ಅಣ್ಣಾ ಉಪಯೋಗವಾಗಿದೆ. ಹಾಗೆಯೇ ತಲೆಗೆ ಸುತ್ತುವ ಪೇಟಾ ಕೂಡಾ ಎರಡೂ ಭಾಷೆಗಳಲ್ಲಿ ಪಟ್ಕ, ರುಮಾಲ ಎಂದಾಗಿದೆ. ಲಲಿತ ಕಲೆಗಳಲ್ಲಿ ಕೂಡ ಪ್ರಭಾವ ಎದ್ದು ಕಾಣುತ್ತಿದೆ. ಲೋಕನಾಟ್ಯ,ತಮಶಾ, ಸಾಂಗತ್ಯ ಹಾಗೂ ಗೊಂದಲಿಗರ ಹಾಡುಗಳು ಈ ಭಾಗದಲ್ಲಿ ಜನಪ್ರಿಯವಾದವು. ಅದೇ ರೀತಿ ಕೆಲವು ಧಾರ್ಮಿಕ ವಿಧಿ ವಿಧಾನಗಳಲ್ಲಿ ಕೂಡ ಪ್ರಭಾವವನ್ನು ಕಾಣುತ್ತೇವೆ, ಗಣೇಶೋತ್ಸವ ಈ ಭಾಗದಲ್ಲಿ ಈಗ ಬಹಳ ಜನಪ್ರಿಯವಾಗಿದೆ. ಅದೇ ರೀತಿ ಸಂಕಷ್ಟಿ ಆಚರಣೆ. ಸಂಪತ್ ಶುಕ್ರವಾರದ ಆಚರಣೆ ಕೂಡ ಜನಪ್ರಿಯವಾಗಿದೆ.

ಪ್ರತಿಯೊಬ್ಬ ವಿಜಯೀ ರಾಜನೂ ಗೆದ್ದುಕೊಂಡ ಪ್ರದೇಶದ ಮೇಲೆ ತನ್ನದೇ ಆದ ಧಾರ್ಮಿಕ, ಸಾಂಸ್ಕೃತಿಕ ಪ್ರಭಾವವನ್ನು ಬಿಟ್ಟುಹೋಗಿದ್ದಾನೆ, ಅಂತೆಯೇ ಈ ನಾಡು ಜೈನರ ಬಸದಿಗಳನ್ನು ಹೊಂದಿದೆ, ಹಿಂದೂ ದೇವಾಲಯಗಳಿವೆ, ಮಸೀದೆಗಳಿವೆ, ಚರ್ಚುಗಳಿವೆ. ಹೀಗೆ ಜೈನ ಹಿಂದೂ ಮುಸಲ್ಮಾನ ಮರಾಠ ಹಾಗೂ ಇಂಗ್ಲೀಷರ ಆಳಿಕೆಗೊಳಪಟ್ಟ. ಈ ನಾಡು ಎಲ್ಲ ಸಂಸ್ಕೃತಿಗಳನ್ನೂ ತನ್ನ ದಾಗಿಸಿಕೊಂಡು ಎಲ್ಲ ಸಂಸ್ಕೃತಿಗಳ ತಿರುಳನ್ನು ಅರಗಿಸಿಕೊಂಡು ಸಾಂಸ್ಕೃತಿಕ ಶ್ರೀಮಂತಿಕೆಯನ್ನು ಹೊಂದಿದೆ.

ಹೊ. ನ. ನೀಲಕಂಠೇಗೌಡ *

# ಇತಿಹಾಸಕಾರರ ನಿರ್ಲಕ್ಷ್ಯಕ್ಕೆ ಗುರಿಯಾದ ಕಾಶೀಪುರದ ಪ್ರಾಚೀನ ವಿದ್ಯಾಕೇಂದ್ರ

ಪ್ರಾಚೀನ ಕರ್ನಾಟಕದಲ್ಲಿ ಬಳ್ಳಿಗಾವೆ, ನಾಗಾವಿ, ಸಾಲೋಟಗಿ, ತಾಳಗುಂದ, ಮೇತುಂಗಿ, ಹೆಬ್ಬಾಳ, ಜಟಿಂಗ ರಾಮೇಶ್ವರ, ಕಾಡಿಯೂರು, ಕೋಲಹಳ್ಳಿ, ನಿಲಗುಂದ, ಬಾಗೇವಾಡಿ, ಗದಗು, ಬೇಹಟ್ಟಿ ಮುಂತಾದ ಸ್ಥಳಗಳು ಪ್ರಸಿದ್ಧವಾದ ವಿದ್ಯಾಕೇಂದ್ರಗಳಾಗಿದ್ದು ವಿದ್ಯಾಭ್ಯಾಸ ಕಾಂಕ್ಷಿಗಳಿಗೆ ವಿದ್ಯೆಯನ್ನು ಬೋಧಿಸುವ ಪುಣ್ಯಕಾರ್ಯದಲ್ಲಿ ಮಗ್ನವಾಗಿದ್ದವು.

ಆದರೆ ಹಾಸನ ಜಿಲ್ಲೆಯ ಬೇಲೂರು ತಾಲ್ಲೂಕಿನ ಹಳೇಬೀಡು ಹೋಬಳಿಗೆ ಸೇರಿದ ಅಡಗೂರಿಂದ ಸುಮಾರು ಎರಡು ಕಿ.ಮೀ. ದೂರದಲ್ಲಿರುವ ಕಾಶೀಪುರ ಎಂಬ ಬೇಚಿರಾಕ್ ಗ್ರಾಮದಲ್ಲಿರುವ ಒಂದು ಪ್ರಾಚೀನ ವಿದ್ಯಾ ಕೇಂದ್ರದ ಬಗ್ಗೆ ಯಾರ ಗಮನುನವು ಹೋದಂತಿಲ್ಲ.

ಈ ಕಾಶೀಪುರದಲ್ಲಿ ಹೊಯ್ಸಳರ ಕೊನೆಯ ಕಾಲ ಹಾಗೂ ವಿಜಯನಗರದ ಆರಂಭದ ವೇಳೆಗೆ ಒಂದು ದೊಡ್ಡ ಶೈವ ಮಠವಿದ್ದು ವಿದ್ಯಾದಾನದಂತಹ ಶ್ರೇಷ್ಠವಾದ ಕಾರ್ಯದಲ್ಲಿ ತನ್ನನ್ನು ತೊಡಗಿಸಿಕೊಂಡಿದ್ದುದಲ್ಲದೆ ಸಮಾಜದಲ್ಲಿ ಕೋಮು ಸಾಮರಸ್ಯವನ್ನು ಕಾಪಾಡುವ ಕೆಲಸದಲ್ಲಿಯೂ ತೊಡಗಿಸಿಕೊಂಡದ್ದು ಗಮನಾರ್ಹವಾದ ಸಂಗತಿಯಾಗಿದೆ.

ಅಡಗೂರಿನ ಪೂರ್ವಕ್ಕೆ ಎರಡು ಕಿಲೋಮೀಟರ್ ದೂರದಲ್ಲಿ ಒಂದು ದೊಡ್ಡದಾದ ಆವರಣದಲ್ಲಿ ಕಾಶೀಪುರದ ಶೈವಮಠದ ಶಿಥಿಲ ಕಟ್ಟಡಗಳು ನಮ್ಮ ದೃಷ್ಟಿಗೆ ಗೋಚರ ವಾಗುತ್ತವೆ.

ಇಲ್ಲಿ ಪೂರ್ವ ಪಶ್ಚಿಮವಾಗಿ ೧೫೦ ಅಡಿಗಳು, ಉತ್ತರದಕ್ಷಿಣವಾಗಿ ೨೦೦ ಅಡಿಗಳಷ್ಟು ವಿಸ್ತಾರವಾದ ಆವರಣದಲ್ಲಿ ಕಟ್ಟಡಗಳಿವೆ. ಈ ಕಟ್ಟಡಗಳ ಮಧ್ಯ ಭಾಗದಲ್ಲಿ ಒಂದು ಶೈವ ಆಲಯವಿದೆ. ಈ ದೇವಾಲಯವು ಗರ್ಭಗೃಹ, ಅಂತರಾಳ, ನವರಂಗ ಹಾಗೂ ಮುಖಮಂಟಪಗಳನ್ನು ಹೊಂದಿದೆ. ಗರ್ಭಗೃಹದಲ್ಲಿ ಯಾವುದೇ ವಿಗ್ರಹಗಳಿಲ್ಲ. ಈ ಆಲಯದ ನವರಂಗದಲ್ಲಿರುವ ಕಂಭಗಳು ಹೊಯ್ಸಳ ಶೈಲಿಯವಾಗಿವೆ. ದೇವಾಲಯದ ಕಟ್ಟಡವು ಬಳಪದ ಕಲ್ಲಿನಿಂದ ನಿರ್ಮಿತವಾಗಿದ್ದರೂ ಸಹ ಅಷ್ಟು ಶ್ರೇಷ್ಠವಾದ ಕುಸುರಿ ಕಲೆಯನ್ನೇನೂ ಹೊಂದಿಲ್ಲ. ವಾಸ್ತುಶೈಲಿಯನ್ನು ಗಮನಿಸಿದರೆ ಬಹುಶಃ ೧೩ನೆಯ ಶತಮಾನದ ಕೊನೆಯ ಭಾಗದಲ್ಲಿ ನಿರ್ಮಿತವಾಗಿದೆಯೆಂದು ನಿರ್ಧರಿಸಬಹುದು. ಈ ದೇವಾಲಯದ ಬಳಿಯಲ್ಲಿ ಮತ್ತೊಂದು ಕಟ್ಟಡವಿದೆ. ಇದೂ ಒಂದು ದೇವಾಲಯದಂತೆಯೇ ನಿರ್ಮಿತವಾಗಿದ್ದು ಗರ್ಭಗೃಹ, ಅಂತರಾಳ ಹಾಗೂ ನವರಂಗಗಳನ್ನೊಳಗೊಂಡಿದೆ. ಗರ್ಭಗೃಹದಲ್ಲಿ ಒಂದು ಗದ್ದುಗೆ, ಹಾಗೂ ಗದ್ದುಗೆಯ ಮೇಲೆ ಶಿವಲಿಂಗವಿದೆ. ಈ ಎರಡು ಕಟ್ಟಡಗಳನ್ನು ಕೇಂದ್ರ ವಾಗಿರಿಸಿಕೊಂಡು ಸುತ್ತಲೂ ಹಲವಾರು ಕೋಣೆಗಳನ್ನು ನಿರ್ಮಿಸಲಾಗಿದೆ. ಇವುಗಳಲ್ಲಿ ಕೆಲವು ವಸತಿಗೃಹಗಳಾಗಿದ್ದು ನಾಲ್ಕಾರು ಕುಟುಂಬಗಳ ವಾಸಕ್ಕಾಗಿ ನಿರ್ಮಿತವಾದವುಗಳೆಂದು ಸುಲಭವಾಗಿ ತಿಳಿಯುತ್ತದೆ. ಮೂರ್ನಾಲ್ಕು ಕೋಣೆಗಳು ವಿಶಾಲವಾಗಿದ್ದು ಹಲವಾರು ಮಂದಿಯ ಸಾಮೂಹಿಕ ವಸತಿಗಾಗಿ ನಿರ್ಮಿತವಾಗಿರಬಹುದೆಂದು ಊಹಿಸಬಹುದಾಗಿದೆ.

* ಕನ್ನಡ ಉಪನ್ಯಾಸಕ, ಚಾಮರಾಜಪೇಟೆ ಪ್ರಥಮ ದರ್ಜೆ ಕಾಲೇಜು, ಚಾಮರಾಜಪೇಟೆ, ಬೆಂಗಳೂರು-೫೬೦೦೧೮

ವುಗಳ ಬಳಿಯಲ್ಲಿಯೇ ಒಂದು ಅಡಿಗೆಯ ಕೋಣೆ ಹಾಗೂ ಒಂದು ಉಗ್ರಾಣವಿದೆ. ದೇವಾಲಯದ ಬಲಬದಿಯಲ್ಲಿ ಒಂದು ದೊಡ್ಡ ಕೋಣೆಯಿದ್ದು ಇದು ಬಹುಶಃ ಪಾಠಶಾಲೆ ಯಾಗಿದ್ದಿರಬಹುದೆಂದು ಊಹಿಸಬಹುದಾಗಿದೆ. ಈ ಕಟ್ಟಡಗಳ ಆಕೇರ್ಣಕ್ಕೆ ಸುಮಾರು ೧೦೦ ಅಡಿಗಳ ದೂರದಲ್ಲಿ ಒಂದು ದೊಡ್ಡ ಕೆರೆ, ಹಾಗೂ ನಮ್ಮ ದೃಷ್ಟಿಗೆ ಗೋಚರವಾಗುವಷ್ಟು ದೂರಕ್ಕೂ ಗದ್ದೆಗಳು ಕಂಡುಬರುತ್ತವೆ. ಇಲ್ಲಿಯ ಎಲ್ಲಾ ಕಟ್ಟಡಗಳನ್ನು ಸೂಕ್ಷ್ಮವಾಗಿ ಗಮನಿಸಿದರೆ ಹಾಗೂ ಇಲ್ಲಿ ದೊರೆಯುವ ಆಂತರಿಕ ಹಾಗೂ ಬಾಹ್ಯ ಪ್ರಮಾಣಗಳನ್ನು ಸೂಕ್ಷ್ಮವಾಗಿ ಅವಲೋಕಿಸಿದರೆ ಇದು ಒಂದು ಪ್ರಾಚೀನ ವಿದ್ಯಾಕೇಂದ್ರವಾಗಿದ್ದುದರಲ್ಲಿ ಯಾವುದೇ ರೀತಿಯ ಅನುಮಾನಗಳು ಕಿಂಚಿತ್ತೂ ಬರುವುದಿಲ್ಲ.

ಈ ವಿದ್ಯಾಕೇಂದ್ರದ ಬಗ್ಗೆ ದೊರೆಯುವ ಶಾಸನಾಧಾರಗಳನ್ನು ಈಗ ಗಮನಿಸೋಣ. ಅಡಗೂರಿನ ವೀರಭದ್ರ ದೇವಾಲಯದಲ್ಲಿರುವ ಒಂದು ಶಾಸನದ ಪ್ರಕಾರ,

''ಶ್ರೀಶೈಲದ ಶ್ರೀ ಸ್ವಯಂಭು ಶ್ರೀ ಲಿಂಗ ಚಕ್ರವರ್ತಿ ಶ್ರೀ ಮಲ್ಲಿಕಾರ್ಜುನ ಮಹಾಲಿಂಗದೇವರ ದಿವ್ಯ ಶ್ರೀಪಾದ ಪದ್ಮಾರಾಧಕರಾದ ಶ್ರೀ ಕೈಲಾಸದ ಮೇಲಿನ ದ್ಯಾವಾ ಪೃಥ್ವಿ ಮಹಾಮಹತ್ತಿಗೆ ಮುಖ್ಯರಾದ ಅವಧಾನ್ಯದ ಅಯ್ಯಗಳ ಆರಾಧಕರಾದ ಶ್ರೀ ಸಿಂಗಿರಾಜ ಅಯ್ಯಗಳು ಅಡಗೂರ ಶ್ರೀ ವೀರಭದ್ರದೇವರಿಗೆ ಕೊಟ್ಟ ಧರ್ಮ ಶಾಸನವು. ಅವಧಾನ್ಯದ ಅಯ್ಯಗಳಿಗೆ ತಪೋ ರಾಜ್ಯವಹಂತಾಗಿ ಅಡಗೂರಲು ಸೊಸ್ತುಗೆಯಾಗಿ ಎತ್ತಿ ಬಹ ಗಣಾಬಾಧ ವರಹ ಗದ್ಯಾಣ ಅಕ್ಕೆ ದೇವರ ದೀಪ್ತಿ ನೈವೇದ್ಯಕ್ಕೆ ಕೊಟ್ಟುದು ವರಹ ಎರಡು ಹೊನ್ನನು ಕೊಟ್ಟೆವು.''

ಮೇಲಿನ ಶಾಸನದಿಂದ ಅಡಗೂರಿನ ಶೈವಮಠಾಧೀಶರಾದ ಅವಧಾನ್ಯದ ಅಯ್ಯನವರ ಆರಾಧಕರಾದ ಶ್ರೀ ಸಿಂಗಿರಾಜಯ್ಯನವರು ವೀರಭದ್ರದೇವರ ನೈವೇದ್ಯಕ್ಕೆ ಹಾಗೂ ನಂದಾದೀಪಕ್ಕೋಸ್ಕರ ೪ ಗದ್ಯಾಣ ೨ ವರಹಗಳನ್ನು ಕೊಟ್ಟುದಾಗಿ ತಿಳಿದು ಬರುತ್ತದೆ. ಹಾಗೂ ಶಾಸನದಲ್ಲಿ ಅಡಿಗೂರಿನ ಮಠಾಧೀಶರಾದ ಅವಧಾನ್ಯದ ಅಯ್ಯನವರನ್ನು ಶ್ರೀ ಶೈಲದ ಮಲ್ಲಿಕಾರ್ಜುನನ ದಿವ್ಯ ಶ್ರೀ ಪಾದ ಪದ್ಮಾರಾಧಕರಾದ ಶ್ರೀ ಕೈಲಾಸದ ಮೇಲಿನ ದ್ಯಾವಾಪೃಥ್ವಿ ಮಹಾಮಹತ್ತಿಗೆ ಮುಖ್ಯರೆಂದು ಸ್ತುತಿಸಲಾಗಿದೆ. ಅಡಗೂರಿನ ಈ ಮಠವು ಕೈಲಾಸಕ್ಕಿಂತಲೂ ಶ್ರೇಷ್ಠವಾದ ಮಠವಾಗಿತ್ತೆಂದು ವರ್ಣಿಸಲಾಗಿದೆ. ಮಹಾಮಠ ಎಂಬ ಪದಕ್ಕೆ ಸಮಾನಾಂತರವಾಗಿ ಮಹಾಮಹತ್ತು ಎಂಬ ಪದವನ್ನು ಬಳಸಲಾಗಿದೆ.

ಅಡಗೂರಿನಿಂದ ಸುಮಾರು ೫ ಕಿ. ಮೀ. ದೂರದಲ್ಲಿರುವ ಹಳೇಬೀಡಿನ ಬಸ್ತಿಹಳ್ಳಿಯ ಒಂದು ಶಾಸನದಲ್ಲಿ ಹಳೇಬೀಡಿನ ಪುಷ್ಪಗಿರಿಯ ಮಲ್ಲಿಕಾರ್ಜುನ ದೇವಾಲಯದ ಬಗ್ಗೆ ಶೈವರಿಗೂ ಜೈನರಿಗೂ ವಿವಾದವಾದಾಗ ಎಲ್ಲ ಶೈವಮಠಗಳ ಮಠಾಧೀಶರೂ ಒಟ್ಟಿಗೆ ಸೇರಿ ಜೈನ ಧರ್ಮಕ್ಕೆ ಯಾರಾದರೂ ವಿಘ್ನ ಮಾಡಿದರೆ ಆತ ಶಿವದ್ರೋಹಿ, ಜಂಗಮದ್ರೋಹಿ, ವಿಭೂತಿ ರುದ್ರಾಕ್ಷಿಗೆ ತಪ್ಪಿದವನು, ಎಂದು ಶಾಸನ ಹಾಕಿಸುತ್ತಾರೆ. ಈ ನಿರ್ಣಯ ಕೈಗೊಳ್ಳುವಲ್ಲಿ ಅಡಗೂರಿನ ಮಠಾಧೀಶರೂ ಸೇರಿದ್ದರು. ಈ ರೀತಿಯ ಕೋಮು ಸಾಮರಸ್ಯದ ಕೆಲಸದೊಡನೆ ಜನರಲ್ಲಿ ಧರ್ಮ ಪ್ರಭಾವನೆ ನಡೆಸುತ್ತಿದ್ದ ಕಾಶೀಪುರದ ಶೈವಮಠವು ಒಂದು ವಿದ್ಯಾಕೇಂದ್ರವೂ ಆಗಿತ್ತೆನ್ನುವುದು ಗಮನಾರ್ಹ ಸಂಗತಿ. ಕಳೆದ ಸು. ೧೦೦-೧೫೦ ವರ್ಷಗಳವರೆಗೂ ಇಲ್ಲಿ ವಿದ್ಯಾಭ್ಯಾಸಕ್ಕಾಗಿ ಬರುತ್ತಿದ್ದವರಿಗೆ ಉಚಿತ ಊಟ ವಸತಿಗಳೊಂದಿಗೆ ವಿದ್ಯೆಯನ್ನು ಹೇಳಿಕೊಡುತ್ತಿದ್ದರೆಂದು ಅಲ್ಲಿನ ಸ್ಥಳೀಯರು ನಮ್ಮ ಕ್ಷೇತ್ರಕಾರ್ಯದ ವೇಳೆ ತಿಳಿಸಿದರು. ಅಲ್ಲಿನ ಜನರ ಬಾಯಿಯಲ್ಲಿ ಅದು ಇಂದಿಗೂ ಕಾಶೀಪುರ ಘಟ್ಯಾಸ್ಥಾನ ಎಂದೇ ಹೆಸರು ಪಡೆದಿದೆ. ಘಟಿಕಾಸ್ಥಾನ ಎಂದರೇನು ಎಂದು ತಿಳಿಯದ ನಿರಕ್ಷರ ಕುಕ್ಷಿಗಳೂ ಸಹ ಘಟಿಕಾಸ್ಥಾನದ ತದ್ಭವವಾದ ಘಟ್ಯಾಸ್ಥಾನ ಎಂದೇ ಹೇಳುತ್ತಾರೆ. ಹಿಂದೆ ಇಲ್ಲಿ ಅನೇಕ ತಪಸ್ವಿಗಳು ವಿದ್ಯೆ ಹೇಳಿಕೊಡುತ್ತಿದ್ದರು. ಅವರು ಮಹಾತಪಸ್ವಿಗಳಾಗಿದ್ದರು. ಅವರ ಗುದ್ದುಗೆಯೇ ಇಲ್ಲಿದೆ ಎಂದು ತೋರಿಸುತ್ತಾರೆ. ಸು. ೧೫೦ ವರ್ಷಗಳ ಹಿಂದೆ ಅಂದರೆ ನಮ್ಮ ತಾತನ ಕಾಲದವರೆಗೂ ಇಲ್ಲಿ ಮಠ ಇತ್ತು, ಅಲ್ಲಿ ಪಾಠಹೇಳಿಕೊಡುತ್ತಿದ್ದರು, ಎಷ್ಟೋ ಮಂದಿ ಪಾಠ ಕಲಿಯುತ್ತಿದ್ದರು ಎಂದು ಅಲ್ಲಿನ ಸ್ಥಳೀಯರು ತಿಳಿಸಿದರು.

ಇಲ್ಲಿ ಶೈವಮಠವಿದ್ದುದಕ್ಕೆ, ಹಾಗೂ ಮಠಾಧೀಶರಿದ್ದುದಕ್ಕೆ, ಮತ್ತು ಅವರು ಸಮಕಾಲೀನ ಧಾರ್ಮಿಕ

1. ಎ.ಕ.೯, ಬಸ್ತಿಹಳ್ಳಿ, ಬೇಲೂರು ೩೯೩, ಕ್ರಿ.ಶ. ೧೬೩೮, ಪುಟ.






ಕಾಶೀಪುರದ ಪ್ರಾಚೀನ ವಿದ್ಯಾಕೇಂದ್ರ

ಸಾಮರಸ್ಯವನ್ನು ಕಾಪಾಡುವಲ್ಲಿ ಹಾಗೂ ಧಾಮಿಕ ಸಂಘರ್ಷಗಳನ್ನು ಪರಿಹರಿಸುತ್ತಿದ್ದುದಕ್ಕೆ ಶಾಸನಾಧಾರಗಳಿದ್ದರೂ ಸಹ ಇದೊಂದು ವಿದ್ಯಾಭ್ಯಾಸದ ಕೇಂದ್ರವಾಗಿದ್ದುದಕ್ಕೆ, ಘಟಿಕಾಸ್ಥಾನವಾಗಿದ್ದುದಕ್ಕೆ ಯಾವುದೇ ಶಾಸನಾಧಾರಗಳಿಲ್ಲದಿರುವುದು ನಮ್ಮ ದುರ್ದೈವ. ಶಾಸನಾಧಾರಗಳಿಲ್ಲದಿದ್ದ ಮಾತ್ರಕ್ಕೆ ಇದು ವಿದ್ಯಾಭ್ಯಾಸದ ಕೇಂದ್ರವಾಗಿರಲಿಲ್ಲವೆಂದು ಹೇಳಲಾಗುವುದಿಲ್ಲ. ಪ್ರಾಚೀನ ಕರ್ನಾಟಕದ ಬಹುತೇಕ ಶೈವಮಠಗಳು ವಿದ್ಯಾದಾನದಲ್ಲಿ ತೊಡಗಿದ್ದುದು ಗಮನಾರ್ಹ ಅಂಶ. ಅಲ್ಲದೆ ಕಾಶೀಪುರದ ಕಟ್ಟಡ ಸಂಕೀರ್ಣದಲ್ಲಿರುವ ಶಾಲೆಯ ಕಟ್ಟಡ, ವಿದ್ಯಾರ್ಥಿಗಳ ವಸತಿಗೃಹಗಳು, ಉಪಾಧ್ಯಾಯರ ವಸತಿಗೃಹಗಳು ಮುಂತಾದ ಕಟ್ಟಡಗಳು, ಹಾಗೂ ಸ್ಥಳೀಯರಲ್ಲಿ ಅಸ್ತಿತ್ವದಲ್ಲಿರುವ ತಲೆಮಾರಿನಿಂದ ತಲೆಮಾರಿಗೆ ಹರಿದು ಬಂದಿರುವ ಐತಿಹ್ಯದ ರೂಪದಲ್ಲಿರುವ ಐತಿಹಾಸಿಕ ಸತ್ಯದ ಆಧಾರದಿಂದ ಈ ಕಾಶೀಪುರದ ಶೈವಮಠವು ಒಂದು ದೊಡ್ಡ ವಿದ್ಯಾಕೇಂದ್ರವಾಗಿತ್ತೆಂದು ತಿಳಿದುಬರುತ್ತದೆ. ವಿದ್ಯಾಕೇಂದ್ರವನ್ನು ಕುರಿತಂತೆ ಯಾವುದಾದರೊಂದು ಶಾಸನ ದೊರೆತರೆ ಈ ಪ್ರಾಚೀನ ವಿದ್ಯಾಕೇಂದ್ರದ ಬಗ್ಗೆ ಮತ್ತಷ್ಟು ಬೆಳಕು ಚೆಲ್ಲಬಹುದು.

ನನ್ನ ಕ್ಷೇತ್ರಕಾರ್ಯದ ವೇಳೆಯಲ್ಲಿ ಹಿಂದೊಂದು ಕಾಲದಲ್ಲಿ ದೊಡ್ಡ ವಿದ್ಯಾಕೇಂದ್ರಗಳಾಗಿದ್ದ ಬಳ್ಳಿಗಾವೆ, ತಾಳಗುಂದ, ಗದಗು ಮುಂತಾದ ಹಲವಾರು ಸ್ಥಳಗಳನ್ನು ಸಂದರ್ಶಿಸಿದ್ದೇನೆ. ಆದರೆ ಇವುಗಳಲ್ಲಿ ಯಾವೊಂದು ವಿದ್ಯಾಕೇಂದ್ರಗಳ ಕಟ್ಟಡಗಳೂ ಸಂಪೂರ್ಣವಾಗಿ ಉಳಿದುಬಂದಿಲ್ಲ. ಆದರೆ ಕಾಶೀಪುರದ ಎಲ್ಲ ಕಟ್ಟಡಗಳೂ ಗಿಡಗೆಂಟೆಗಳು ಬೆಳೆದು ಸ್ವಲ್ಪ ಶಿಥಿಲವಾಗಿದ್ದರೂ ಸಹ ಇಂದಿಗೂ ಸುಭದ್ರವಾಗಿದ್ದು ಸಂಪೂರ್ಣವಾಗಿ ಉಳಿದು ಕೊಂಡಿರುವುದು ನಮ್ಮ ಅದೃಷ್ಟ. ಪ್ರಾಚೀನ ವಿದ್ಯಾಕೇಂದ್ರಗಳ ಕಟ್ಟಡಗಳು ಹೇಗಿರುತ್ತಿದ್ದವೆನ್ನುವುದಕ್ಕೆ ಒಂದು ಶ್ರೇಷ್ಠ ಮಾದರಿಯಾಗಿ ಕಾಶೀಪುರವಿದೆ. ನಮ್ಮ ಪುರಾತತ್ವ ಇಲಾಖೆಯವರು ಈ ಸ್ಥಳದ ಬಗ್ಗೆ ಗಮನ ಹರಿಸಿ ಸಂರಕ್ಷಿಸಿದರೆ ನಮ್ಮ ಐತಿಹಾಸಿಕ ಪರಂಪರೆಯ ಒಂದು ಪ್ರಮುಖ ಸ್ಮಾರಕವನ್ನು ನಾಡಿಗೆ ಉಳಿಸಿಕೊಟ್ಟಂತಾಗುತ್ತದೆ. ಅಲಕ್ಷಿಸಿದರೆ ಉಳಿದುಕೊಂಡು ಬಂದ ಏಕೈಕ ವಿದ್ಯಾಕೇಂದ್ರದ ಕಟ್ಟಡವೂ ನಾಶವಾದಂತಾಗುತ್ತದೆ. ಈ ನಿಟ್ಟಿನಲ್ಲಿ ಅವರು ಕ್ರಮ ಕೈಗೊಂಡರೆ ನನ್ನ ಶ್ರಮ ಸಾರ್ಥಕವಾದಂತಾಗುತ್ತದೆ.[1]

1. ಕಾಶೀಪುರದ ಬಗ್ಗೆ ನಮ್ಮ ಗಮನ ಸೆಳೆದು ನಮ್ಮ ಕ್ಷೇತ್ರಕಾರ್ಯದಲ್ಲಿ ಸಹಕರಿಸಿ ನಮ್ಮೊಡನೆ ಬಂದಿದ್ದ ಅಡಗೂರಿನ ಕಿರಿಯ ಗೆಳೆಯ ಚಿರಂಜೀವಿ ಸಂದೀಪ್‌ನ ಸಹಾಯ ಸ್ಮರಣೀಯ.

ಎಂ. ಬಾ. ಸದಾಶಿವಪ್ಪ*

# ಹರಪನಹಳ್ಳಿ ಪಾಳೇಗಾರರು ಸ್ಥಾಪಿಸಿದ ಕೆಲವು ದೇವಾಲಯಗಳ ಬಗ್ಗೆ ಐತಿಹ್ಯಗಳು

ಸುಮಾರು ಕ್ರಿ.ಶ. ೧೫೬೫ರಲ್ಲಿ ಹರಪನಹಳ್ಳಿ ಪಾಳೇಗಾರಿಕೆಯನ್ನು ಸ್ಥಾಪಿಸಿದ ದಾದೇನಾಯಕ ಒಮ್ಮೆ ಬೇಟೆಯಾಡುತ್ತಿದ್ದಾಗ ನಾಯಿಯನ್ನು ಹೆದರಿಸಿದ ಒಂದು ಮೊಲಕ್ಕೆ ಬೆನ್ನು ಹತ್ತಲು ಅದು ಹುತ್ತದಲ್ಲಿ ಅಡಗಿತು. ಆಗ ಹುತ್ತವನ್ನು ಬಗೆಯಲು ಅಲ್ಲಿ ಒಂದು ಮೂರ್ತಿ ಶಿಲ್ಪ ಗೋಚರಿಸಿತು. ಅದೇ ಹರಪನಹಳ್ಳಿಯ ಈಗಿನ ಕೋಟೆ ಹನುಮಂತದೇವರು.

ಹರಪನಹಳ್ಳಿಗೆ ಸುಮಾರು ೨೦ ಕಿಲೋಮೀಟರ್ ದೂರವಿರುವ ಮೈದೂರು ಗ್ರಾಮದಲ್ಲಿ ಎತ್ತು ಎಮ್ಮೆ ಮುಂತಾದ ಪಶುಗಳಿಗೆ ಖಾಯಿಲೆ ಉಂಟಾದರೆ ಪಶುವನ್ನು ಗೌಡರ ಎತ್ತು ಕಟ್ಟುವ ಗೋದಲಿಗೆ ಕಟ್ಟುತ್ತಿದ್ದರು. ಹೀಗೆ ಎರಡು ದಿನಗಳ ಕಾಲ ಕಟ್ಟಿದಲ್ಲಿ ಅವುಗಳ ಖಾಯಿಲೆ ನಿವಾರಣೆಯಾಗುವುದು. ಇದು ಜನರಾಡುವ ಮಾತುಗಳಿಂದ ನಾಯಕರಿಗೆ ಗೊತ್ತಾಯಿತು. ದಾದೇನಾಯಕ ಮೈದೂರಿಗೆ ತೆರಳಿ ಗೌಡರ ಗೋದಲಿಯನ್ನು ಅಗೆಸಿದನು. ಗೋದಲಿಯ ಅಡಿಯಲ್ಲಿ ಒಂದು ಕಲ್ಲಿನ ಮೂರ್ತಿ ದೊರೆಯಿತು. ಆ ಮೂರ್ತಿಯನ್ನು ಹರಪನಹಳ್ಳಿಗೆ ಸಾಗಿಸಿ ಈಗಿನ ಹಳೇ ಬಸ್ ನಿಲ್ದಾಣದಲ್ಲಿ ಒಂದು ದೇವಸ್ಥಾನ ನಿರ್ಮಿಸಿ ಅದರಲ್ಲಿ ಮೂರ್ತಿ ಸ್ಥಾಪಿಸಲು ಅರಸ ಯೋಚಿಸಿದ್ದನು. ಆದರೆ ಹರಪನಹಳ್ಳಿಗೆ ಆ ಮೂರ್ತಿಯನ್ನು ಸಾಗಿಸುವಾಗ ಹರಪನಹಳ್ಳಿಗೆ ಪೂರ್ವ ದಿಕ್ಕಿನಲ್ಲಿ ಬಂಡಿ ಅಚ್ಚು ಮುರಿದು ಬಿದ್ದಿತು. ಅಂದು ರಾತ್ರಿ ಅರಸನ ಸ್ವಪ್ನದಲ್ಲಿ ದೇವರು ಅಲ್ಲಿಯೇ ನೆಲೆಸುವುದಾಗಿ ಸೂಚಿಸಿದಂತಾಗಲು ಅಲ್ಲಿಯೇ ಒಂದು ದೇವಾಲಯವನ್ನು ನಿರ್ಮಿಸಲಾಯಿತು. ಈ ದೇವಾಲಯ ನಿರ್ಮಿಸಿದ ಅಲ್ಪಕಾಲದಲ್ಲಿ ಲಕ್ಷ್ಮೀದೇವಿಯ ಮೂರ್ತಿಯು ಅದೇ ಮೈದೂರು ಗ್ರಾಮದ ಒಂದು ಮನೆಯಲ್ಲಿ ದೊರೆಯಿತು. ಆ ಮೂರ್ತಿಯನ್ನು ಪಡೆದು ಅದನ್ನು ಶ್ರೀ ವೆಂಕಟೇಶ್ವರ ದೇವರ ಪಕ್ಕದಲ್ಲಿಯೇ ಸ್ಥಾಪಿಸಿದರು. ಆಗಿನ ಕಾಲದಲ್ಲಿ ಈ ದೇವಾಲಯದ ಪಕ್ಕದಲ್ಲಿ ಅರ್ಚಕರು ಮಾತ್ರ ವಾಸಿಸಿದ್ದರು. ಕೆಲಕಾಲದ ಮೇಲೆ ಕೆಲವು ಮನೆಗಳು ಹೊಸದಾಗಿ ನಿರ್ಮಾಣವಾಗಿ ಈಗ ಸುಮಾರು ಎರಡು ನೂರು ಮನೆಗಳ ಒಂದು ಗ್ರಾಮ ಇದಕ್ಕೆ ದೇವರ ತಿಮ್ಮಲಾಪುರವೆಂದು ಕರೆಯುವರು. ಪ್ರತಿ ವರ್ಷವೂ ರಥೋತ್ಸವದೊಂದಿಗೆ ಜಾತ್ರೆ ಜರುಗುವುದು.

ಹರಪನಹಳ್ಳಿ ಈಗಿನ ಹಳೇ ಬಸ್‌ನಿಲ್ದಾಣದಲ್ಲಿ ಶ್ರೀ ವೆಂಕಟೇಶ್ವರನಿಗಾಗಿ ನಿರ್ಮಿಸಿದ ಕಟ್ಟಡ ದೇವರಿಲ್ಲದ ಖಾಲಿ ಕಟ್ಟಡ ವಾಗಿತ್ತು. ಆಗಿನ ಕಾಲದಲ್ಲಿ ಕುರುಸಾಣಿ ಕಲ್ಲುಗಳನ್ನು ವ್ಯಾಪಾರಿಗಳು ಬೇರೆ ಕಡೆಯಿಂದ ಹರಪನಹಳ್ಳಿ ಮಾರ್ಗವಾಗಿ ಹರಿಹರಕ್ಕೆ ಕತ್ತೆಗಳಿಗೆ ಸಬರ ಹಾಕಿ ಸಾಗಿಸುತ್ತಿದ್ದರು. ಹೀಗಿರುವಾಗ ಒಂದು ಬಾರಿ ಹರಪನಹಳ್ಳಿಯ ಹಳೇ ಬಸ್ ನಿಲ್ದಾಣವಿರುವ ಜಾಗದಲ್ಲಿ ರಾತ್ರಿ ಒಂದು ತಂಡದವರು ಉಳಿದು ಮುಂಜಾವದಲ್ಲಿ ಸಬರದ ಕತ್ತೆಗಳನ್ನು ಸಾಗಿಸಿದರು. ಆಗ ಒಂದು ಕತ್ತೆಯ ಸಬರದಿಂದ ಒಂದು ಕಲ್ಲು ಜಾರಿ ಅಲ್ಲಿ ಬಿದ್ದಿತು. ಬಿದ್ದ ಕಲ್ಲಿನ ಮೇಲೆ ಶ್ರೀ ವೀರಭದ್ರದೇವರ ಮೂರ್ತಿಯ ರೇಖಾಚಿತ್ರ ಕಾಣುತ್ತಿತ್ತು. ದಿವಾನ ಹಂಪರ ಸಪ್ಪನ ಸ್ವಪ್ನದಲ್ಲಿ ಶ್ರೀ ವೀರಭದ್ರದೇವರ ಸೂಚನೆ ಆಗಲು ಅರಸನು ಆ ಮೂರ್ತಿಯನ್ನು ದೇವರಿಲ್ಲದ ಕಟ್ಟಡದಲ್ಲಿ ಪ್ರತಿಷ್ಠಾಪನೆ ಮಾಡಿಸಿದನು. ಪ್ರತಿ ವರ್ಷ ಗೌರಿ ಹುಣ್ಣಿಮೆಯಲ್ಲಿ

* ಶಂಕರಮಠದ ಹತ್ತಿರ, ಹೊಸಪೇಟೆರಸ್ತೆ, ಬಳ್ಳಾರಿ ಜಿಲ್ಲೆ, ಹರಪನಹಳ್ಳಿ – ೫೮೩ ೧೩೧

ರಥೋತ್ಸವ, ಅಗ್ನಿಗಳಿಂದ ಈ ದೇವರ ಜಾತ್ರೆ ಜರುಗುವುದು. ಅರಸರು ನೇಮಿಸಿದ ಕೆಲವು ಮಠಗಳ ಸ್ವಾಮಿಗಳು ಈಗಲೂ ಒಂದೊಂದು ಕಾರ್ಯದಲ್ಲಿ ಪಾಲುಗೊಳ್ಳುವರು. ೯.೨.೧೯೭೩ರಂದು ಒಂದು ಹೊಸ ಮೂರ್ತಿಯನ್ನು ಶಿಲ್ಪಿಗಳಿಂದ ಮಾಡಿಸಿ ಮೊದಲ ಮೂರ್ತಿಯನ್ನು ಅದರ ತಳದಲ್ಲಿ ಹಾಕಿರುವರು. ಸರಕಾರಿ ಲೆಕ್ಕಪತ್ರಗಳಲ್ಲಿ ಈ ದೇವರನ್ನು ಸಬರದ ಶ್ರೀ ವೀರಭದ್ರನೆಂದು ಉಲ್ಲೇಖಿಸಿದೆ. ಈ ದೇವಾಲಯದ ಸುತ್ತಮುತ್ತಣ ಪ್ರದೇಶಕ್ಕೂ ಸಬರದ ಕೇರಿ ಎಂದು ಹೆಸರು ಉಂಟಾಯಿತು. ಈಗ ಜನರ ಆಡು ಮಾತುಗಳಲ್ಲಿ ''ಸಬಕಾರ ಕೇರಿ'' ಎಂದಾಗಿದೆ.

ಹರಪನಹಳ್ಳಿ ಪಾಳೇಗಾರರು ಪ್ರತಿ ವರ್ಷ ಮಣ್ಣು ಮೈಲಾರ ಜಾತ್ರೆಗೆ ಹೋಗುತ್ತಿದ್ದರು. ಒಂದು ಸಾರಿ ಮೈಲಾರದ ದೇವರ ಧರ್ಮದರ್ಶಿಗಳಾದ ಒಡೆಯರು ಅರಸರನ್ನು ಸರಿಯಾಗಿ ಉಪಚರಿಸಲಿಲ್ಲ. ಅದಕ್ಕೆ ಕುಪಿತರಾದ ಅರಸ ದಾದೇನಾಯಕರು ಹರಪನಹಳ್ಳಿಗೆ ಪಶ್ಚಿಮಕ್ಕೆ ಒಂದು ಕಿಲೋಮಿಟರ್ ದೂರದಲ್ಲಿ ಒಂದು ದೇವಾಲಯವನ್ನು ನಿರ್ಮಿಸಿ ಶ್ರೀ ಮೈಲಾರಲಿಂಗಸ್ವಾಮಿಯ ಮೂರ್ತಿಯನ್ನು ಸ್ಥಾಪಿಸಿದರು. ಪ್ರತಿ ವರ್ಷ ಭಾರತ ಹುಣ್ಣಿಮೆಯಲ್ಲಿ ಗೊರವನು ಬಿಲ್ಲು ಏರಿ ಕಾರ್ಣೀಕ ಹೇಳುವುದರೊಂದಿಗೆ ವಿಜೃಂಭಣೆಯಿಂದ ಜಾತ್ರೆ ಜರುಗುವುದು.

ಉಚ್ಚಂಗಮ್ಮ ಎಂಬ ಹೆಣ್ಣು ದೇವತೆಯು ಈ ಅರಸರ ಮನೆ ದೇವರು. ದಾದೇನಾಯಕನ ಮಡದಿ ಹೊನ್ನಾನಾಗತಿ ಕೋಟೆಯ ಮೇಲಿನಿಂದ ಕೆಳಗೆ ಉರುಳಿ ನಿಧನಳಾಗಿದ್ದಳು ಆ ದುಃಖ ವನ್ನು ಮರೆಯಲು ನಾಯಕ ಉಚ್ಚಂಗಿದುರ್ಗಕ್ಕೆ ಕೆಲಕಾಲ ಹೋಗಲಿಲ್ಲ. ಹರಪನಹಳ್ಳಿಗೆ ವಾಯುವ್ಯ ದಿಕ್ಕಿನಲ್ಲಿ ಒಂದು ಪರ್ವತವಿದೆ. ಆ ಪರ್ವತದ ಮೇಲೆ ಒಂದು ಚಿಕ್ಕ ದೇವಾಲಯವನ್ನು ನಿರ್ಮಿಸಿ ಶ್ರೀ ಉಚ್ಚಂಗೆಮ್ಮ ಮೂರ್ತಿ ಯನ್ನು ಅರಸ ಸ್ಥಾಪಿಸಿದನು. ಇದರಿಂದ ಹರಪನಹಳ್ಳಿ ಮತ್ತು ಅದರ ಪರಿಸರದ ಭಕ್ತರಿಗೆ ದೂರ ಪ್ರಯಾಣ ಮಾಡುವ ಅಗತ್ಯವಿಲ್ಲವಾಯಿತು.

**ಈ ಐತಿಹ್ಯಗಳಿಂದ ಗೊತ್ತಾಗುವ ಅಂಶಗಳು ಇವು :**

೧) ೧೩ನೇ ಶತಮಾನದಲ್ಲಿ ದಕ್ಷಿಣ ಭಾರತದಲ್ಲಿ ದೆಹಲಿ ಸುಲ್ತಾನರು ದಾಳಿ ಮಾಡಿದರು. ಆಗ ಅವರ ದಾಳಿಯನ್ನು ಎದುರಿಸಲಾಗದ ಹಿಂದೂಗಳು ತಮ್ಮ ಶಿಲಾಮೂರ್ತಿಗಳನ್ನು ನೆಲದಲ್ಲಿ ಮುಚ್ಚಿದರು.

೨) ಪ್ರಾಚೀನರು ತಮ್ಮ ಸಾಕುಪ್ರಾಣಿಗಳಾದ ಎತ್ತು, ಎಮ್ಮೆ, ಆಡು, ಕುರಿಗಳಿಗೆ ರೋಗ ತಗುಲಿದರೆ ದೇವರಿಗೆ ಮೊರೆ ಹೋಗುತ್ತಿದ್ದರು.

೩) ಬ್ರಾಹ್ಮಣರು ಶ್ರೀ ವೀರಭದ್ರ ದೇವರನ್ನು ಪೂಜಿಸುವುದು ಅಪರೂಪ. ಇಲ್ಲಿ ದಿವಾನ ಹಂಪರಸಪ್ಪ ಬ್ರಾಹ್ಮಣ. ಅವನು ಶ್ರೀ ವೀರಭದ್ರದೇವರ ಪ್ರತಿಷ್ಠಾಪನೆಗೆ ಕಾರಣನಾದನು. ಈಗಲೂ ಅವರ ವಂಶದ ಬ್ರಾಹ್ಮಣರು ಶ್ರೀ ವೀರಭದ್ರ ದೇವರ ಭಕ್ತರು.

O

## ಆಧಾರಗಳು


೧) ದೇವಸ್ಥಾನಗಳ ಚಿತ್ರಗಳು

೨) ಪ್ರಾಚೀನರ ಹೇಳಿಕೆಗಳು

೩) ತಿಮ್ಮಲಾಪುರದಯ್ಯನ ಕತೆ- ಚಿ : ಗೋವಿಂದಾಚಾರ್ಯರು

೪) ದಾದೇ ನಾಯಕ ಮತ್ತು ಪುತ್ರ ರಂಗಾನಾಯಕರ ಮೂರ್ತಿಗಳು ಶ್ರೀ ವೆಂಕಟೇಶ್ವರ ದೇವಾಲಯದಲ್ಲಿವೆ..

೫) ಈಗಲೂ ಹರಪನಹಳ್ಳಿ ಬೇಡರ ಕೇರಿ ಜನರು ತಾವು ಮಾಡಿದ ಭೂಮಿ ಲಾವಣಿ ಹಣವನ್ನು ದಾದಣ್ಣನ ಮತ್ತು ರಂಗಣ್ಣನ ತೇರಿಗೆ ಕೊಡುವುದಾಗಿ ಕರಾರು ಬರೆಸುವರು.

. ಜಿ. ರೇಖಾ *

# ಮಂಡ್ಯ ಜಿಲ್ಲೆಯ ಶಾಸನಗಳಲ್ಲಿ ಜಾನಪದೀಯ ದೈವಗಳು

ಮಂಡ್ಯ ಜಿಲ್ಲೆಯ ಶಾಸನಗಳಲ್ಲಿ ಎಲ್ಲೆಡೆ ಜನಪ್ರಿಯವಾಗಿದ್ದ ಜನಪದ ದೈವಗಳ ಪ್ರಸ್ತಾಪವನ್ನು ಕಾಣಬಹುದು. ಪಾಂಡವಪುರದ ತೊಣ್ಣೂರಿನ ಶಾಸನವೊಂದರಲ್ಲಿ "ಪಟ್ಟಣದಂಮ್ಮನ" ಗುಡಿಗೆ ಬಿಟ್ಟ ಕಲ್ಲು ಎಂದು ಬರೆದಿದೆ. ಬಹುಶಃ ಇದು ಆ ಊರನ್ನು ಕಾಯುವ ಗ್ರಾಮ ದೇವತೆಯಾಗಿದ್ದು, ಆ ಗುಡಿ ಗ್ರಾಮದೇವತೆಯ ದೇವಾಲಯವಾಗಿದ್ದಿರಬಹುದು.

ಹಾಗೆಯೇ ನಾಗಮಂಗಲದ ದೇವರಹಳ್ಳಿಯ ಶಾಸನವೊಂದರಲ್ಲಿ (ಹೊಯ್ಸಳ ನರಸಿಂಹನ ಕಾಲ)[2] "..ನಾರಸಿಂಘ ದೇವರು ನಾಗಣನಾಯಕ ಎಂಬುವರು ಗಾದೆ ದೇವಾರಿಗೆ ಕಂಬದ ಮೂಡಪಡಣ ಹೊಲನಾ ದೇವರಿಗೆ ಧಾರಿ" ಎಂದಿದ್ದು ಸ್ವಲ್ಪ ಭೂಮಿಯನ್ನು ಧಾರೆ ಎರೆದುಕೊಟ್ಟ ಉಲ್ಲೇಖವಿದೆ.

ಇಲ್ಲಿ ಗಾದೆ ದೇವಾರಿಗೆ ನಂತರ ಹೊಲನಾ ದೇವರಿಗೆ ಎಂಬ ಅಂಶವಿರುವುದರಿಂದ ಈ ಗಾದೆ ದೇವಾರಿಗೆ ಬಹುಶಃ ಗಟ್ದೆ ದೇವಾರಿಗೆ > ಗದ್ದೆ ದೇವಾರಿಗೆ ಅರ್ಥದ ತಪ್ಪು ಪ್ರಯೋಗ ಇರಬಹುದು. ಈಗಲೂ ಸಹಾ ಹಳ್ಳಿಗಳ ಕಡೆ ಮುನಿಯಪ್ಪ, ಮುನೇಶ್ವರ ಮುಂತಾದ ದೇವತೆಗಳನ್ನು ಪೂಜಿಸುವುದನ್ನು ಈ ಸಂದರ್ಭದಲ್ಲಿ ನೆನೆಯಬಹುದು.

ಊರನ್ನು ಕಾಯುವ ಗ್ರಾಮದೇವತೆಗಳೆಂದ ಕೂಡಲೇ ಕಣ್ಣ ಮುಂದೆ ಸುಳಿಯುವ ಹೆಸರು ಮಾರಿಯದು. ಆಕೆಯ ಹೆಸರಿನಲ್ಲಿ ಒಂದು ಗುಡಿಯನ್ನು ಕಟ್ಟಿಸಿದ್ದಾರೆಂದು, ಅಲ್ಲಿಯೇ ಆಕೆಗೆ ಸಂಬಂಧಿಸಿದ ಶಾಸನವೊಂದಿದೆ[3].

"ಲಕೋಮನವರು...ಮಾಡಿದ ಕಾಯ್ಯ ಮಾರಿ ಗುಡಿ ಜೀರ್ನೋದಾರ ದೇವಾಲಯ ಕಟೂವದಕೆ ಹನುಮಂತೈನ ಮಗ ಬಿಲ್ಲೆ ತಿಂಮೈನ ಗೊತ್ತು ಮಾಡಿ ನೀ ವೆಲ್ಲರು.....ಕೊಟ್ಟೂ ಜೀರ್ನೋಧಾರ ಮಾಡಿಶಿ ಕಟಿಶಿಯಿರುವ ದೇವಾಲಯ ಮಾರಿ ಪೂಜೆ ಮೀರ್ತದಂತೆ ಸದಾಕಾಲ ಸೇವೆ ನಡಸುತ್ತ ಸರ್ವೇಜನಾ ಸುಖಿನೋ ಭವಂತು.."

ಪಾಂಡವಪುರ ತಾಲೂಕಿನ ಶಾಸನವೊಂದರಲ್ಲಿ "....ಪುರ ಮಾರಮನಹಳ್ಳಿಯ ಯಿಾ ಎರಡೂರ ಮಗ್ಗದೆಜಿ ಮಧುವೆ ದೆಜಿ ಮೊರವಾಳು....." ಎಂದು ಮಾರಮ್ಮನ ಹೆಸರಿನಲ್ಲಿಯೇ ಒಂದು ಹಳ್ಳಿ ಇದ್ದದ್ದಕ್ಕೆ ಸ್ಪಷ್ಟವಾದ ದಾಖಲೆಯಿದೆ. ಇಂದಿಗೂ ಸಹಾ ಮಂಡ್ಯ ಜಿಲ್ಲೆಯಲ್ಲಿ ಪೂಜಿಸಲ್ಪಡುವ ಮಾರಮ್ಮನ ಪಟ್ಟಿ ದೊಡ್ಡದಾಗಿಯೇ ಇದೆ.

ಮೂಲತಃ ಈ ಮಾರಿಗೂ, ಮಾನವಶಾಸ್ತ್ರಕ್ಕೂ ಸಂಬಂಧವಿದೆ. ಪ್ರಖ್ಯಾತ ಮಾನವ ಶಾಸ್ತ್ರಜ್ಞ ರೂತ್ ಬೆನೆಡಿಕ್ಟ್ ತನ್ನ "ಸಂಸ್ಕೃತಿಯ ರೂಪಿಕೆಗಳು" ಎಂಬ ಪುಸ್ತಕದಲ್ಲಿ ಪ್ರಾಚೀನ ಗ್ರೀಕ್ ದೇವತೆಗಳ ಬಗೆಗೆ ಹೇಳುತ್ತಾ ಎರಡು ರೀತಿಯ ದೇವತೆಗಳಿವೆಯೆಂದೂ, ಅಪೊಲೊನಿಯನ್ ವರ್ಗಕ್ಕೆ ಸೇರಿದ ದೇವತೆಗಳು ಶಾಂತತೆಗೆ, ಸಾತ್ವಿಕತೆಗೆ ಹೆಸರಾದವು. ಡಯೊನಿಷಿಯಸ್ ವರ್ಗಕ್ಕೆ ಸೇರಿದ ದೇವತೆಗಳು

* ನಂ. ೨೪೮, ಕಾಂತರಾಗಿಣಿ, ಪೈಪ್‌ಲೈನ್ ೧ ನೇಹಂತ, ಅನಂತಮೂರ್ತಿ ಲೇ ಔಟ್, ಶ್ರೀನಗರ, ಬೆಂಗಳೂರು 560 050

1. Epigraphia Carnatica Vol. VII
2. Epigraphia Carnatica Vol VII
3. Ephigraphia Carnatica Vol VI, ಶ್ರೀರಂಗಪಟ್ಟಣ ೪೪

ವಿಕ್ಷಿಪ್ತತೆ ಮತ್ತು ಪ್ರಕ್ಷುಬ್ಧತೆ ಹೆಸರಾದವುಗಳೆಂದು ಹೇಳುತ್ತಾರೆ-ನಮ್ಮ ಪ್ರಮುಖ ಗ್ರಾಮದೇವತೆಯಾದ ಮಾರಿಯನ್ನು ಈ ಎರಡನೆಯ ವರ್ಗಕ್ಕೆ ಸೇರಿಸ ಬಹುದೆಂದು ಕಾಣುತ್ತದೆ. ಪ್ರಾಚೀನ ಗ್ರೀಕ್ ದೇವತೆಗಳಿಗೂ ಕರ್ನಾಟಕದ ಜಾನಪದೀಯ ದೈವಗಳಿಗೂ ಹೋಲಿಕೆ ಕಂಡುಬರುವುದು ಒಂದು ಗಮನಾರ್ಹ ಅಂಶ. ಜೊತೆಗೆ ಇದರಿಂದ ಮನುಷ್ಯರ ಜೀವನ ವಿಧಾನಗಳಿಗೂ ಅವರು ಪೂಜಿಸುವ ದೈವಕ್ಕೂ ಸಂಬಂಧ ವಿರುವುದನ್ನು ತಿಳಿಯಬಹುದು; ಹೇಗೆಂದರೆ ರೂತ್ ಬೆನಡಿಕ್ಟಳ ಪ್ರಕಾರ ಸಾತ್ವಿಕ ಜೀವನವನ್ನು ನಡೆಸುವ ಜನಾಂಗ ಸಾತ್ವಿಕ ದೇವತೆಗಳನ್ನು ಪೂಜಿಸುತ್ತಾರೆಂದೂ, ರೂಕ್ಷ ದೇವತೆಗಳನ್ನು ಪೂಜಿಸುವವರ ಜೀವನ ವಿಧಾನ ರೂಕ್ಷವಾಗಿರುತ್ತದೆಂದೂ ಅವಳವಾದ ಆ ಪರಂಪರೆ ಬಹುಶ ಇಲ್ಲಿಯೂ ಬೆಳೆದು ಬಂದಿರಬಹುದೆಂದು ನನ್ನ ಊಹೆ. ಯಾಕೆಂದರೆ ಮಾರ್ಗನ್‌ನ ಮಾನಸಿಕ ಏಕತೆಯ ತತ್ವವನ್ನು ಗಮನಿಸಿದಾಗ ಸಂಸ್ಕೃತಿ ವಿಕಾಸವಾಗುತ್ತಿದ್ದಂತಹ ಸಂದರ್ಭದಲ್ಲಿ ಮನುಷ್ಯನಿಗೆ, ಸಮಾನ ಸಮಸ್ಯೆ ಸಮಾನ ಪರಿಹಾರಗಳಿದ್ದುವೆಂದು ಹೇಳುತ್ತಾನೆ. ಹೀಗಾಗಿ ಆರಾಧನೆಯ ಉಗಮ ಎಲ್ಲ ಪರಿಸರಗಳಲ್ಲಿಯೂ ಸಮಾನವಾಗಿದ್ದಿರ ಬೇಕೆಂದು ನಾನು ಊಹಿಸುತ್ತೇನೆ. ಜೊತೆಗೆ ಶಾಸನೋಕ್ತ ಜಾನಪದ ದೈವವೊಂದನ್ನು ಮಾನವ ಶಾಸ್ತ್ರದ ಹಿನ್ನೆಲೆಯಲ್ಲಿ ನೋಡುವ ಒಂದು ಪ್ರಯತ್ನ ಇದು.

O

ಪಿ. ವಿ. ಕೃಷ್ಣಮೂರ್ತಿ*

# ಕೈವಾರನಾಡು-ಶಾಸನಗಳ ಹಿನ್ನೆಲೆಯಲ್ಲಿ ಒಂದು ಅಧ್ಯಯನ

ಕ್ರಿಸ್ತಶಕ ಎಂಟು-ಒಂಬತ್ತನೆಯ ಶತಮಾನಕ್ಕಾಗಲೇ 'ಕೈವಾರನಾಡು' ಒಂದು ಪ್ರಾದೇಶಿಕ ವಿಭಾಗವಾಗಿ ರೂಪುಗೊಂಡಿತ್ತು. ಹನ್ನೊಂದನೆಯ ಶತಮಾನದಿಂದೀಚೆಗೆ, ಅಂದರೆ ಚೋಳ, ಹೊಯ್ಸಳ ಹಾಗೂ ವಿಜಯನಗರದ ಅರಸರ ಕಾಲದಲ್ಲಿ 'ಕೈವಾರನಾಡು' ವಿಶೇಷವಾಗಿ ಶಾಸನೋಕ್ತ ಗೊಂಡು ಗಮನ ಸೆಳೆಯುತ್ತದೆ. ಈ ನಾಡಿನ ಕೇಂದ್ರ ಸ್ಥಳವಾದ 'ಕೈವಾರ' ಇಂದಿಗೂ ಒಂದು ಪ್ರಸಿದ್ಧ ತೀರ್ಥಕ್ಷೇತ್ರವಾಗಿದ್ದು[1] ಪೌರಾಣಿಕ ಮಹತ್ವದೊಂದಿಗೆ ಚಾರಿತ್ರಿಕ ಹಿನ್ನೆಲೆಯನ್ನು ಪಡೆದಿದೆ. ಹಾಗೇ ಈ ಕೈವಾರ ನಾಡಿನ ಇನ್ನೊಂದು ತೀರ್ಥಕ್ಷೇತ್ರವಾದ 'ಸೀತಿಬೆಟ್ಟವೂ' ಹೆಚ್ಚು ಪ್ರಸಿದ್ಧವಾಗಿದೆ. ಈ ನಾಡಿನ ವ್ಯಾಪ್ತಿಯಲ್ಲೇ ಬರುವ ಮುರುಘಮಲೆ, ಅಂಬಾಜಿದುರ್ಗ, ಆಲಂಬಗಿರಿ, ತಾಪಸಗಿರಿ, ಬೆಳ್ಳೂರು, ನರಸಾಪುರ, ಕಡಗತ್ತೂರು, ನೆಲವಾಗಿಲು, ಸುಗುಟೂರು ಮುಂತಾದ ಸ್ಥಳಗಳಲ್ಲಿನ ದೇವಸ್ಥಾನಗಳು ಗಮನಾರ್ಹವಾಗಿವೆ. ಈ ನಾಡನ್ನು ಉಲ್ಲೇಖಿಸುವ ಬಹಳಷ್ಟು ಶಾಸನಗಳು ಈ ಸ್ಥಳಗಳಲ್ಲೇ ಸಾಂದ್ರವಾಗಿ ದೊರೆತಿದ್ದು ಕೈವಾರನಾಡು ತೀರ್ಥಕ್ಷೇತ್ರಗಳ ಬೀಡು, ಎಂಬ ಪರ್ಯಾಯ ನಾಮವನ್ನು ಪಡೆಯಲು ಅರ್ಹವಾಗಿದೆ. ಪ್ರಸ್ತುತ ಕೈವಾರನಾಡನ್ನು ಪ್ರಸ್ತಾಪಿಸುವ ಶಾಸನಗಳ ಅಧ್ಯಯನದಿಂದ ವ್ಯಕ್ತವಾಗುವ ಚಾರಿತ್ರಿಕ ಭೂಗೋಳದ ವಿವರಗಳೊಂದಿಗೆ ರಾಜಕೀಯ, ಸಾಂಸ್ಕೃತಿಕ, ವಿವರಗಳನ್ನು ದಾಖಲಿಸುವ ಪ್ರಯತ್ನವನ್ನು ಇಲ್ಲಿ ಮಾಡಲಾಗಿದೆ.

ಕೈವಾರನಾಡಿಗೆ ಸಂಬಂಧಿಸಿದ ಶಾಸನೋಕ್ತ ಗ್ರಾಮ ಗಳನ್ನು ಗುರುತಿಸುವುದರ ಮೂಲಕ ಆ ನಾಡಿನ ಭೌಗೋಳಿಕ ವ್ಯಾಪ್ತಿಯನ್ನು ಸ್ಥೂಲವಾಗಿ ನಿರ್ಣಯಿಸಬಹುದಾಗಿದೆ. ಇಂದಿನ ಚಿಂತಾಮಣಿ ಮತ್ತು ಶಿಡ್ಲಘಟ್ಟ ತಾಲೂಕಿನ ದಕ್ಷಿಣ ಭಾಗಗಳು, ಕೋಲಾರ ತಾಲೂಕಿನ ವಾಯುವ್ಯ ಭಾಗ ಹಾಗೂ ಹೊಸಕೋಟೆ ತಾಲೂಕಿನ ಈಶಾನ್ಯದ ಮೂಲೆಯು ಕೈವಾರನಾಡಿನಲ್ಲಿ ಅಂತರಗತವಾಗಿದ್ದವು. ಭೌಗೋಳಿಕವಾಗಿ ಈನಾಡು ತುಸು ಎತ್ತರವಾದ ಪ್ರದೇಶದಲ್ಲಿದ್ದು ಅಲ್ಲಲ್ಲೆ ಚದುರಿದಂತೆ ಹಲವು ಬೆಟ್ಟಗುಡ್ಡಗಳಿಂದ ಕೂಡಿದೆ. ಅವುಗಳಲ್ಲಿ ಅಂಬಾಜಿದುರ್ಗ, ತಾಪಸಗಿರಿ (ರಹ್ಮಾನ್ ಘಡ್), ಮುರುಘ ಮಲೆ, ಸೀತಿಬೆಟ್ಟಗಳು ಮುಖ್ಯವಾದುವಾಗಿವೆ. ಈ ನಾಡಿನಲ್ಲಿ ಯಾವುದೇ ಜೀವನದಿಗಳು ಹರಿಯುವುದಿಲ್ಲ, ಆದರೆ ಈ ನಾಡಿನ ಉತ್ತರಕ್ಕೆ ಹರಿಯುವ ಪಾಪಾಗ್ನಿ, ಆಗ್ನೆಯಕ್ಕೆ ಹರಿಯುವ ಪಾಲಾರ್ ಹಾಗೂ ಪಶ್ಚಿಮದಲ್ಲಿ ಹರಿಯುವ ದಕ್ಷಿಣಪಿನಾಕಿನಿ ನದಿಗಳಿಗೆ ನೀರೊದಗಿಸುವ ಪ್ರದೇಶ ಇದಾಗಿದೆ.

ಗಂಗರ ಆಳ್ವಿಕೆಯ ಕಾಲಕ್ಕಾಗಲೇ 'ಕಯ್ವರ ವಿಷಯ'ವೆಂದು ಖ್ಯಾತವಾಗಿದ್ದ ಈ ನಾಡು, ರಾಷ್ಟ್ರಕೂಟ ಮತ್ತು ನೊಳಂಬರ ಶಾಸನಗಳಲ್ಲಿ ಕಯ್ವರನಾಡು, ಕಯ್ವಾರನಾಡು ಎಂದು ಕ್ರಮವಾಗಿ ಹೆಸರು ಪಡೆದ ಒಂದು ಆಡಳಿತ ವಿಭಾಗವಾಗಿದ್ದಿತು. ಚೋಳರ ಕಾಲದಲ್ಲಿ ಮೊದಲಿಗೆ

* ಜಿ.ಬಿ.ಚಿ-೫೧೦, ೧೨ನೇ ಕ್ರಾಸ್, ಜವಾಹರ್ ನಗರ್ ೩ನೇ ಸೆಕ್ಟಾರ್, ಮಾರತ್ತಹಳ್ಳಿ. ಬೆಂಗಳೂರು. ೫೬೦೦೩೭

1. ಸು.ಕ್ರಿ.ಶ.೧೭೩೦-೧೮೪೦ ಅವಧಿಯಲ್ಲಿ ಕೈವಾರದಲ್ಲಿ ನೆಲೆಸಿದ್ದ ನಾರೇಯಣಪ್ಪ ಎಂಬ ಕವಿ ಹಾಗೂ ಯತಿವರ್ಯರ ಸಮಾಧಿ ಇಲ್ಲಿದೆ. ಕೈವಾರದ ತಾತಯ್ಯನವರೆಂದೇ ಪ್ರಸಿದ್ಧರಾಗಿದ್ದ ಇವರ ಹೆಸರಿನಲ್ಲಿ ಒಂದು ಆಶ್ರಮವಿದ್ದು ಇತ್ತೀಚಿನ ವರ್ಷಗಳಲ್ಲಿ ಅದು ಅನೇಕ ಸಮಾಜೋಧಾರ್ಮಿಕ ಕಾರ್ಯಕ್ರಮಗಳನ್ನು ರೂಪಿಸಿಕೊಂಡು ಕಾರ್ಯನಿರತವಾಗಿದೆ. ಸಮೀಪದಲ್ಲಿ ಕರ್ನಾಟಕ ಸರ್ಕಾರದ ಅರಣ್ಯ ಇಲಾಖೆಯವರ ನೆರವಿನಿಂದ ಔಷಧ ಸಸ್ಯಗಳವನ ಹಾಗೂ ಮೃಗಾಲಯವನ್ನುಸ್ಥಾಪಿಸಲಾಗಿದೆ.

ನೊಳಂಬವಾಡಿಯಾದ ನಿಗರಿಲಿ ಚೋಳಪಾಡಿಯ ಕೈವಾರ ನಾಡೆಂದು ಉಲ್ಲೇಖಗೊಂಡರೆ, ಆ ನಂತರದಲ್ಲಿ ಚೋಳರ, ಹೊಯ್ಸಳರ ಶಾಸನಗಳಲ್ಲಿ ಕೈವಾರನಾಡು ನಿಗರಿಲಿ ಚೋಳಮಂಡಲದ ಒಂದು ನಾಡಾಗಿ ಖ್ಯಾತವಾಗಿದ್ದಿತು.[2] ಹೊಯ್ಸಳ ವೀರಬಲ್ಲಾಳನ ಕ್ರಿ.ಶ.೧೩೦೧-೨ರ ಅನೇಕ ಶಾಸನಗಳಲ್ಲಿ ಕೈವಾರನಾಡೂ ಒಳಗೊಂಡಂತೆ ಅನೇಕ ನಾಡುಗಳು 'ಹೆಸರ್ ಕುಂದಾಣಿ ರಾಜ್ಯ'ದ ಭಾಗವೆಂದು ಉಲ್ಲೇಖಗೊಂಡಿದೆ. ಆದರೆ 'ನಿಗರಿಲಿ ಚೋಳಮಂಡಲ'ವೆಂಬ ಆಡಳಿತ ವಿಭಾಗ ನಾಮವು ವಿಜಯನಗರದ ಅರಸರ ಆಳ್ವಿಕೆಯಲ್ಲೂ ಮುಂದುವರೆದಿರುವುದು ಗಮನಾರ್ಹ ಅಂಶವಾಗಿದೆ. ಆದರೆ, ಕ್ರಿ.ಶ.೧೪೦೦ರ ನಂತರದಲ್ಲಿ ಕೈವಾರನಾಡು ನಾಡಿನ ಸ್ಥಾನದಿಂದ ಹಿಂದೆ ಸರಿದು ನಾಗಣನ ಚಾವಡಿಯರಸುನಾಡೊಳಗಣ ಕೈವಾರಸ್ಥಳವಾಗಿ ಮಾರ್ಪಾಟು ಗೊಂಡಿತು. ಆಗ ಕೈವಾರಸ್ಥಳದಲ್ಲಿ ಆಲಂಬಗಿರಿಯು ಅಂತರಗತವಾಗಿದ್ದಿತು. ಕ್ರಿ.ಶ.೧೬೩೯ರ ಸುಮಾರಿಗೆ ಕೋಲಾರ ಪ್ರದೇಶವು ರಣದುಲ್ಲಾಖಾನ್ ಮತ್ತು ಮರಾಠರ ಷಹಜಿಯ ಆಳ್ವಿಕೆಗೆ ಒಳಪಟ್ಟಿತು. ಆಗ ಕೈವಾರ ಸ್ಥಳವು ಹೊಸಲು ಚಾವಡಿಗೆ ಸಲುವ ಏಳುನಾಡು ಒಳಗಣ ಕೋಲಾಲಸೀಮೆಯ ಸ್ಥಳವೆಂದು ಪರಿಗಣಿತವಾಗಿತ್ತು. ಈ ಸ್ಥಳವನ್ನು ಭೋಸಲೆವಂಶದ ಛತ್ರಪತಿ ಶಿವಾಜಿ ಮಹಾ ರಾಜಾಧಿರಾಜರು ಶ್ರೀ ಮುಲುಕೋಜಿ ರಾಜರಿಗೆ ಮಿರಾಸಿ ಯಾಗಿ ನೀಡಿದ್ದ ವಿವರ ಕ್ರಿ.ಶ.೧೬೮೫ರ ಆಲಂಬಗಿರಿ ಶಾಸನದಿಂದ ತಿಳಿದುಬರುತ್ತದೆ.

ರಾಜಕೀಯವಾಗಿ ಕೈವಾರನಾಡು ಮೊದಲಿಗೆ ಮಹಾಬಲಿಬಾಣರ ಅಧೀನದಲ್ಲಿದ್ದಿತು. ಆನಂತರದಲ್ಲಿ ಗಂಗ, ರಾಷ್ಟ್ರಕೂಟ, ನೊಳಂಬರ ಆಳ್ವಿಕೆಗೆ ಒಳಪಟ್ಟಿತು. ರಾಷ್ಟ್ರಕೂಟ ಮುಮ್ಮಡಿ ಗೋವಿಂದ(೮೦೬)* ನೊಳಂಬರ ಇರಿವ ನೊಳಂಬ (೯೫೦), ಚೋಳ ದೊರೆಗಳಾದ ರಾಜೇಂದ್ರಚೋಳ (೧೦೧೭), ಮಹೇಂದ್ರಚೋಳ (೧೦೬೩) ಕುಲೋತ್ತುಂಗ ಚೋಳ(೧೦೭೫), ವಿಕ್ರಮಚೋಳ(೧೧೨೦) ಹಾಗೂ ಹೊಯ್ಸಳರ ಆಳ್ವಿಕೆಯ ಕಾಲದಲ್ಲಿ ನರಸಿಂಗ ಹೊಯ್ಸಳ ಬ್ರಹ್ಮಾದಿರಾಯನೆಂಬ ನಾಡಗೌಡ(೧೧೪೩), ನಂತರದಲ್ಲಿ, ವಿಶೇಷವಾಗಿ ಕ್ರಿ.ಶ.೧೨೦೦ರ ನಂತರದಲ್ಲಿ ಬ್ರಹ್ಮಾದಿರಾಯ ಗಂಗಪೆರುಮಾಳ್ (೧೨೫೦),[3] ವಿಜಯಗೊಂಡಚೋಳ ಇಳವಂಜಿರಾಯರಾದ ಕೂತ್ತಾಂಡುದೇವರ ಮಗನಾದ ವಾಸುದೇವ(೧೨೬೩), ಬ್ರಹ್ಮಾದಿರಾಜ ಚೆಲುವ ಗಂಗನ ಮಗ ಕರಿಯಗಂಗ ಪೆರುಮಾಳ್ (೧೨೭೯), ಗಂಗ ಪೆರು ಮಾಳನ ಮಗ ವಾಸುದೇವ (೧೨೮೦), ಗಂಗಪೆರುಮಾಳ್ (೧೨೮೪), ವೀರಗಂಗನ ಮಗ ಮಲ್ಲೈಪೆರುಮಾಳ್ (೧೨೮೫), ಬ್ರಹ್ಮಾದಿರಾಯನೆಂಬ ಗಂಗಪೆರುಮಾಳ್(೧೨೮೫) ಕೊನ್ನೈಕೂರುನಾಡಿನ ಮಾಂಡಲಿಕ ನಾಲೆಗಣ್ಣನ್ ರಾಘವದೇವ(೧೨೮೯) ಎಂಬುವವರು ಈ ಪ್ರದೇಶದಲ್ಲಿ ಅಧಿರಾಜನ ಉಲ್ಲೇಕವಿಲ್ಲದೆ ಸ್ವತಂತ್ರ ರಾಜರಂತೆ ಆಳಿರುತ್ತಾರೆ. ವಾಸ್ತವವಾಗಿ ಇವರು ಹೊಯ್ಸಳರ ಅಧೀನ ರಾಗಿಯೇ ಇದ್ದರೆಂದು ಹೇಳಬಹುದಾಗಿದೆ. ಬ್ರಹ್ಮಾದಿರಾಯ, ಇಳವಂಜಿರಾಯ ಹಾಗೂ ಕೊನ್ನೈಕೂರುನಾಡಿನ ಮಾಂಡಲಿಕರು ಎಂಬ ಮೂರು ಪ್ರತ್ಯೇಕ ಮನೆತನಗಳಿಗೆ ಸೇರಿದವರಾಗಿದ್ದಾರೆ ಇವರು. ಇವರಲ್ಲಿ ಬ್ರಹ್ಮಾಧಿರಾಯರ ವಂಶೀಯರಿಗೆ ಕೋಳಾಲ ಪ್ರದೇಶದಲ್ಲಿ ಆಳುತ್ತಿದ್ದ ವೀರಗಂಗನ ವಂಶೀಯ ರೊಂದಿಗೆ ಸಂಬಂಧವಿದ್ದಿತು. ಹಾಗಾಗಿ ಇವರೂ ಸಹ ಮೂಲತಃ ಗಂಗ ವಂಶೀಯರೇ ಆಗಿದ್ದು, ಗಂಗ ಪೃಥಿವೀಪತಿಯ ಕಾಲದಲ್ಲಿ ಪಲ್ಲವರನ್ನು ಆಶ್ರಯಿಸಿ ನಂತರದಲ್ಲಿ ಚೋಳರ ಮಾಂಡಲಿಕರಾಗಿ ತಮಿಳುನಾಡಿನಲ್ಲಿ ನೆಲೆನಿಂತವರು, ಚೋಳರ ಕಾಲದಲ್ಲಿ ಅವರ ಮಂಡಲಿಕರಾಗಿ ಕೋಲಾರ ಪ್ರದೇಶದ ಮೇಲೆ ತಮಿಳು ಗಂಗರೆಂಬ ಹೆಸರಿನಿಂದ ಪ್ರಸಿದ್ಧರಾದರು.

ಹೊಯ್ಸಳ ರಾಮನಾಥನ ಕಾಲದಲ್ಲಿ ಇವರೆಲ್ಲರ ಅಧಿಕಾರ ಮೊಟಕುಗೊಂಡು, ಪ್ರಾಧಾನ್ಯತೆ ಕಡಿಮೆ ಯಾಯಿತು. ರಾಮನಾಥನ ನಂತರದಲ್ಲಿ ವೀರಬಲ್ಲಾಳನ ದಂಡನಾಯಕರಾದ ಸಿಂಗಯದಂಡನಾಯಕ, ವಲ್ಲಪದಂಡ ನಾಯಕರುಗಳ ಪ್ರಾಬಲ್ಯ ಹೆಚ್ಚಿತು. ಕ್ರಿ.ಶ.೧೩೪೦ರ ನಂತರದಲ್ಲಿ ವಿಜಯನಗರದ ಅರಸರಾದ ಬುಕ್ಕರಾಯ(೧೩೪೪), ದೇವರಾಯ(೧೩೪೭), ವೀರಕಂಪಣ (೧೩೬೧-೬೨), ಕಂಪಣ ಒಡೆಯನ ಮಗ ಜೊಮ್ಮಣ್ಣ ಒಡೆಯ (೧೩೭೫), ಕಠಾರಿ ಸಾಳುವ ನರಸಿಂಗರಾಯ (೧೪೬೭), ಅಚ್ಯುತರಾಯ (೧೫೩೮) ಮುಂತಾದವರ ಆಡಳಿತ ಈ ನಾಡಿನ ಮೇಲೆ ನಡೆದಿದೆ. ಇದೇ

2 ಆದರೆ ಕ್ರಿ.ಶ. ೧೦೬೫ರ ನೆಲವಾಗಿಲು ಗ್ರಾಮದ ಶಾಸನವು ಕೈವಾರನಾಡು ವಿಜಯರಾಜೇಂದ್ರಮಂಡಲದ ಭಾಗವೆಂದು ಉಲ್ಲೇಖಿಸುತ್ತದೆ.

3 ಈತನಿಗೆ ಅಣ್ಣನಂಕಕಾರ, ದುಷ್ಟರಾಧಿತ್ಯ, ಚೆಲುವ ಗಂಗ, ರಾಜನಾರಾಯಣ ಎಂಬ ವಿಶೇಷಣಗಳಿದ್ದವು.

* ಆವರಣದಲ್ಲಿರುವ ಅಂಕಿಗಳುಲಭ್ಯಶಾಸನದ ಕಾಲವನ್ನು ಕ್ರಿ. ಶ. ಯಲ್ಲಿ ಸೂಚಿಸುತ್ತದೆ.

ವಧಿಯಲ್ಲಿ ಬ್ರಹ್ಮಾದಿರಾಯರ ವಂಶೀಯರು ಸ್ಥಳೀಯ ಧಿಕಾರಿಗಳಾಗಿ ಮುಂದುವರೆದಿರುವುದು ಶಾಸನಗಳಿಂದ ನಗಾಣಬಹುದಾಗಿದೆ.

ವಿಜಯನಗರದ ಅರಸರ ಆಳ್ವಿಕೆಯ ಉತ್ತರಾರ್ಧದ ವಧಿಯಲ್ಲಿ ಈ ನಾಡಿನ ಹಲವು ಭಾಗಗಳು ಸುಗುಟೂರು ಾಳೆಯಗಾರರ ಆಳ್ವಿಕೆಗೆ ಒಳಪಟ್ಟಿತ್ತು. ನಂತರದಲ್ಲಿ .ಶ.೧೬೬೪ರಲ್ಲಿ ಈ ಪ್ರದೇಶ ಮರಾಠರ ವಶವಾಗಿ ಂಭೋಜಿರಾಜರ ಪುತ್ರರಾದ ಮಲಕೋಜಿರಾಜರಿಗೆ ರಾಜಶ್ರೀ ವಾಜಿ ಮಹಾರಾಜರು ಬಿಟ್ಟುಕೊಟ್ಟು ಅವರ ಆಳಿಕೆ ಈ ಾಡಿನ ಮೇಲೆ ನಡೆದಿದೆ. (ಶಿವಾಜಿ ೧೬೭೭ರಲ್ಲಿ ಬೆಂಗಳೂರು ಾಗೀರನ್ನು ಗೆದ್ದಾಗ ತನ್ನ ದಿವಂಗತ ಸೋದರನಾಗಿದ್ದ ಶಂಬೋಜಿಯು ಮಗ ಮಲಕೋಜಿಗೆ ಈ ಪ್ರದೇಶ ಬಿಟ್ಟುಕೊಟ್ಟಿರಬೇಕು).

ಕೈವಾರನಾಡಿನ ಕೇಂದ್ರ ಸ್ಥಳವಾದ ಕೈವಾರವನ್ನು ಮಹಾಭಾರತದ ಪಾಂಡವರೊಂದಿಗೆ ಸಂಬಂಧ ಕಲ್ಪಿಸುವ ಸ್ಥಳಮಹಿಮೆ ಸಾಕಷ್ಟು ಪ್ರಸಿದ್ಧವಾಗಿದೆ. ದ್ವಾಪರಯುಗದಲ್ಲಿ ಇದು ಏಕ ಚಕ್ರಪುರವಾಗಿತ್ತೆಂದು ಭೀಮನು ಬಕಾಸುರನನ್ನು ಸಂಹರಿಸಿದ ಸ್ಥಳವಿದೆಂದೂ, ಸಮೀಪದ ಬೆಟ್ಟದ ಗವಿಯಲ್ಲಿ ಈಗಲೂ ಆಗಾಗ್ಗೆ ಕೀವು ರಕ್ತ ಸೋರುತ್ತದೆಯೆಂದೂ, ಅಲ್ಲದೆ ಭೀಮನು ಓಡಾಡಿರಬಹುದಾದ ಜಾಗಗಳನ್ನು ಜನರು ತೋರಿಸುತ್ತಾರೆ. ಇಂತಹ ಕಥೆಗಳು ನಮ್ಮ ದೇಶದ ಅನೇಕ ಸ್ಥಳಗಳಿಗೂ ಸಂಬಂಧಿಸಿದಂತೆ ಪ್ರಚಲಿತವಿರುವುದು ಅಸಾಮಾನ್ಯವೇನಲ್ಲ. ತಮ್ಮ ಸ್ಥಳದ ಧಾರ್ಮಿಕ ಮಹತ್ವ ಹೆಚ್ಚಿಸಿಕೊಳ್ಳಲು ಹುಟ್ಟಿಕೊಂಡಂಥ ಕಥೆಗಳು ಇವಾಗಿರುತ್ತವೆ.

ಕೈವಾರ ಹೆಸರಿನ ಬೇರೆ ಬೇರೆ ರೂಪಗಳಾದ ಕಯ್ವರ ಕಯ್ವಾರ, ಕೈಯ್ಯವಾರ, ಕೈವಾರ, ಕಯಿವಾರ, ಕೈಯಿವಾರ, ಕೈಬಾರ, ಕೈವರ, ಕಯವಾರ, ಕೈವಲ್ಯಪುರಿ ಎಂಬ ರೂಪಗಳು ಶಾಸನ ಮತ್ತು ಸಾಹಿತ್ಯ ಕೃತಿಗಳಲ್ಲಿ ಕಂಡುಬರುತ್ತದೆ. ಸಾಂಪ್ರದಾಯಿಕವಾಗಿ ಕೈವಲ್ಯಪುರ > ಕೈವಾರವೆಂದು ಹ್ರಸ್ವೀಕರಣಗೊಂಡಿದೆ ಎಂದು ಸ್ಥಳನಾಮ ನಿಷ್ಪತ್ತಿಯ ಬಗ್ಗೆ ಹೇಳಿರುವುದುಂಟು. ಆದರೆ ಜ್ಞಾತಿ ಭಾಷೆಗಳಲ್ಲಿರುವ ಇಂತಹ ರೂಪಗಳನ್ನು ಅವುಗಳಿಗೆ ಇರುವ ವಿಶಾಲ ಅರ್ಥವನ್ನು ಅವು ಇರುವ ಭೂ ಸನ್ನಿವೇಶವನ್ನೂ ಗಮನಿಸಿದರೆ ಕಯವೂರ> ಕಯವರ > ಕಯ್ವರ > ಕೈವಾರವಾಗಿರಬೇಕೆನಿಸುತ್ತದೆ. ಇಲ್ಲಿ ಕಯ/ಕಯಂ ಎಂಬ ಪದವು ಕೊಳ, ಜಲಾಶಯ ಇಲ್ಲವೇ ಜನಸಂಬಂಧವುಳ್ಳ ಭೂಭಾಗ ಎಂಬ ಅರ್ಥ ತುಳು ಮತ್ತು ತಮಿಳು ಭಾಷೆಗಳಲ್ಲಿ ಕಂಡುಬರುತ್ತದೆ. ಹೀಗಾಗಿ ಕೈವಾರವು ಜಲಸಂಬಂಧವುಳ್ಳ ಸ್ಥಳನಾಮವೆಂದು ನಿರ್ಣಯಿಸಬಹುದಾಗಿದೆ. ಕೈವಾರ ಸಮೀಪದ ಬೆಟ್ಟದ ಮೇಲೆ ಮೂರು ನೀರೀನ ಹೊಂಡಗಳಿದ್ದು ಆ ಹೊಂಡಗಳ ನೀರು ಖನಿಜಯುಕ್ತವೆಂದೂ ಔಷಧಿ ಗುಣವುಳ್ಳದೆಂದು ಪ್ರತೀತಿ ಇದೆ.

ನಮ್ಮ ಪೂರ್ವಜರ ಬದುಕು ರೂಪುಗೊಳ್ಳುವಲ್ಲಿ ದೇವರು, ದೇವಸ್ಥಾನ ಹಾಗೂ ಆ ಸಂಬಂಧದ ನಂಬಿಕೆಗಳು ಪ್ರಮುಖ ಪಾತ್ರವಹಿಸಿರುವುದು ತಿಳಿದ ವಿಷಯವೆ. ನಮ್ಮ ನಾಡಿನ ಇತರ ಕಡೆಗಳಂತೆ ಕೈವಾರನಾಡಿನಲ್ಲೂ ಅನೇಕ ದೇವಾಲಯಗಳು ತಲೆಯೆತ್ತಿದವು. ಅವುಗಳಲ್ಲಿ ಕೈವಾರದ ಅಮರನಾರಾಯಣಸ್ವಾಮಿ, ಭೀಮೇಶ್ವರ, ನಕುಲೇಶ್ವರ, ಸಹದೇವೇಶ್ವರ ಹಾಗೂ ದುರ್ಗಾದೇವಿಯರ ಗುಡಿಗಳು., ಸೀತಿಬೆಟ್ಟದ ಶ್ರೀಪತೀಶ್ವರ, ಶ್ರೀಭೈರವದೇವರ ಗುಡಿಗಳು, ಸುಗುಟೂರಿನ ಸೋಮೇಶ್ವರ, ಕೈವಾರನಾಡಿನ ಆಗ್ನೇಯದ ಗಡಿಯಲ್ಲಿರುವ ಕೊತ್ತನೂರಿನ (ಇರುಗಸಂದ್ರ) ಇರುಗೇಶ್ವರ, ಕಡಗತ್ತೂರಿನ ಸೋಮೇಶ್ವರ, ನರಸಾಪುರ ಗ್ರಾಮದ ಬಾಣೇಶ್ವರ, ನೆಲವಾಗಿಲ ಧರ್ಮೇಶ್ವರ, ಬೆಳ್ಳೂರಿನ ರಾಮಸ್ವಾಮಿ, ಆಲಂಬಗಿರಿಯ ವೆಂಕಟರಮಣ, ಮುರುಘಮಲೆಯ ಮುರುಘಾದೇವಾಲಯ ಮುಂತಾದವು ಮುಖ್ಯವಾದುವಾಗಿದ್ದು, ಈ ದೇವಾಲಯಗಳಿಗೆ ಚೋಳ, ಹೊಯ್ಸಳ, ವಿಜಯನಗರ ಅರಸರ ಕಾಲದಲ್ಲಿ ಅನೇಕ ತೆರನಾದ[4] ಪೂಜಾ ಕೈಂಕರ್ಯಗಳಿಗೆ ವಿಪುಲವಾಗಿ ದಾನದತ್ತಿಗಳು ನೀಡಲ್ಪಟ್ಟಿದೆ. ಈ ನಾಡಿನ ಶಾಸನಗಳಲ್ಲಿ ದೇವಾಲಯ ರಚನೆ, ದೇವರ ಪ್ರತಿಷ್ಠಾಪನೆಯಲ್ಲದೆ ತ್ರಿಶೂಲ ಸ್ಥಾಪನೆಯ ಬಗ್ಗೆ ಉಲ್ಲೇಖಗಳಿರುವುದು ಕಂಡುಬರುತ್ತದೆ. ಕ್ರಿ.ಶ.೧೨೮೪ರ ಶಾಸನ ಕೈವಾರದಲ್ಲಿ, ಕ್ರಿ.ಶ.೧೭೯೪ರ ಶಾಸನ ನಾಯಮ್ಮಳ್ಳಿ ಎಂಬಲ್ಲಿ ತ್ರಿಶೂಲಸ್ಥಾಪಿಸಿದ ವಿವರ ನೀಡುತ್ತವೆ. ಈ ರೀತಿ

4 ಇಲ್ಲಿನ ದೇವಾಲಯಗಳಿಗೆ ನೀಡಿರುವ ದತ್ತಿಗಳು ರಾಜನಿಗೆ, ದತ್ತಿನೀಡಿದ ವ್ಯಕ್ತಿಯ ತಂದೆ ತಾಯಿಗಳಿಗೆ ಧರ್ಮವಾಗಲೆಂದೂ, ಜನ್ಮದಿನದಂದು ವಿಶೇಷ ಪೂಜೆ ನಡೆಯಲೆಂದೂ, ತನ್ನ ಒಡೆಯನ ಕತ್ತಿ ಹಾಗೂ ತೋಳಿಗೆ ಜಯ ದೊರಕಲೆಂದು, ದೀಪ, ದೂಪ, ಗಂಧ, ಅಂಗರಂಗಭೋಗ ನೈವೇದ್ಯಾದಿಗಳಿಗಾಗಿ, ಮಾಸೋತ್ಸವ, ರಥೋತ್ಸವ, ತಿರುಮಾಲದಂಡೆ, ಧ್ವಜಾರೋಹಣ, ಗರುಡೋತ್ಸವ ಇತ್ಯಾದಿಗಳ ಆಚರಣೆಗಳಿಗಾಗಿ ನೀಡಲಾಗಿದೆ.

ತ್ರಿಶೂಲ ಸ್ಥಾಪನೆ ಶಿವಶಕ್ತಿಯ ಸ್ಥಾನ ನಿರ್ದೇಶನದ ಕುರುಹು ಎನ್ನಬಹುದು.

ದೇವಾಲಯದ ರಚನೆಯಲ್ಲಿ ದುಡಿದ ಶಿಲ್ಪಿಗಳ ಸೇವೆಗೆ ಪ್ರತಿಫಲವಾಗಿ ಅವರಿಗೆ ಕೆಲವೊಮ್ಮೆ ದತ್ತಿಗಳನ್ನು ನೀಡಿರುವುದುಂಟು. ಸುಗುಟೂರಿನ ಸೋಮೇಶ್ವರ ದೇವಾಲಯುವನ್ನು ಶಾಮ್ಮೆಯಚಾರಿ ಎಂಬುವವನು ಕಟ್ಟಿರಬೇಕು. ಆತನಿಗೆ ಏಕಭೋಗವಾಗಿ ಅನುಭವಿಸಲು ೫೦೦ ಕುಳಿ ಪ್ರಮಾಣದ ಗದ್ದೆ ಭೂಮಿಯನ್ನು ದತ್ತಿ ಬಿಡಲಾಗಿತ್ತು. ಹಾಗೆ ಸೀತಿಬೆಟ್ಟದ ಶಾಸನಗಳಲ್ಲಿ ಭೀಮೋಜ, ಕೆಂಪೋಜ, ಕೂತೋಜ, ಭೈರು ಎಂಬವವರಿಗೆ ಅವರ ಸೇವೆಗಾಗಿ ದತ್ತಿಬಿಡಲಾಗಿದೆ.

ಕೈವಾರನಾಡಿನಲ್ಲೂ ಅಂದಿನ ಆಳರಸರು ಷಟ್ಕರ್ಮ ನಿರತರಾದ ಬ್ರಾಹ್ಮಣರಿಗೆ ಅನೇಕ ಅಗ್ರಹಾರಗಳನ್ನು ಏರ್ಪಡಿಸಿರುವುದು ಕಂಡುಬರುತ್ತದೆ. ಸುಳಿದೇವನಹಳ್ಳಿ> ಶೆಯಂಗೊಂಡ ಚೋಳ ಚತುರ್ವೇದಿಮಂಗಲಂ, ವೆಳ್ಳಿಯೂರು > ಚಿನನಾಥ ಚತುರ್ವೇದಿಮಂಗಲಂ, ಸುಗ್ಗುಟೂರು > ಅರುಮೋಳಿದೇವ ಚತುರ್ವೇದಿ ಮಂಗಲ=ಅಹಿಚ್ಛತ್ರಪುರ, ಬೆಳ್ಳೂರು > ಶ್ರೀ ವಿಷ್ಣುವರ್ಧನ ಚತುರ್ವೇದಿಮಂಗಲ ಮುಂತಾದವು ಶಾಸನೋಕ್ತ ಅಗ್ರಹಾರಗಳಾಗಿವೆ. ಸೀತಿಬೆಟ್ಟದ ದೇವಾಲಯಗಳಲ್ಲಿ ಬ್ರಾಹ್ಮಣರಿಗೆ ಛತ್ರದ ವ್ಯವಸ್ಥೆ ಇದ್ದ ಬಗ್ಗೆ ಶಾಸನಗಳು ವಿವರ ನೀಡುತ್ತವೆ.

ಮಾನವ ಒಂದು ಕಡೆ ನೆಲೆ ನಿಲ್ಲಲು ಕಾರಣವಾದದ್ದು ಅವನು ತನ್ನ ಆಹಾರವನ್ನು ತಾನೇ ಉತ್ಪಾದಿಸಿಕೊಳ್ಳುವ ಕಲೆಯನ್ನು ಅರಿತದ್ದರಿಂದ. ಆ ಕಲೆಯೇ ಕೃಷಿ. ಕೃಷಿ ಕಾರ್ಯಕ್ಕೆ ಪ್ರಧಾನವಾಗಿ ನೀರು ಅತ್ಯಗತ್ಯ. ಕಾಡಾರಂಬಕ್ಕೆ (ಹೊಲ, ಬೆದ್ದಲೆ, ದೇವಮಾತೃಕೆ) ಮಳೆಯ ನೀರೇ ಆಶ್ರಯ. ತೋಟ, ಗದ್ದೆ ಮುಂತಾದವುಗಳಿಗೆ ಹೆಚ್ಚಿನ ನೀರಿನ ಅಗತ್ಯವಿದ್ದು, ಅದಕ್ಕಾಗಿ ಕೆರೆ, ಬಾವಿಗಳ ರಚನೆ ಅನಿವಾರ್ಯ. ಹೀಗಾಗಿ ನೀರಿಗಾಗಿ ಕೈವಾರನಾಡಿನ ಶಾಸನಗಳಲ್ಲೂ ಕೆರೆ ಕಟ್ಟೆಗಳ ರಚನೆಯಾದ ಬಗ್ಗೆ ವಿವರ ದೊರೆಯುತ್ತದೆ. ಕ್ರಿ.ಶ.೧೧೪೫ರ ಓಬಳೇನಹಳ್ಳಿ ಶಾಸನ ಕರುಣಾಕರ ಸಮುದ್ರ ಎಂಬ ಕೆರೆಯ ಬಗ್ಗೆ ಉಲ್ಲೇಖಿಸುತ್ತದೆ. ಸೀತಿಬೆಟ್ಟದ ಶಾಸನಗಳಲ್ಲಿ ಹಿರಿಯ



ಮುಳ್ಳುಕುಂಟೆಯ ಕೆಳಗೆ ಹೊಸದಾಗಿ ಕೆರೆ ಕಟ್ಟಿಸಿ ತೂಬನಿಕ್ಕಿ ಲೇರಿಯಲ್ಲಿ ಅಚ್ಚುಕಟ್ಟನ್ನು ಕಟ್ಟಿ ತಿದ್ದಿದ ಗದ್ದೆಯೊಳಗೆ ದೇವರ ಭಂಡಾರಕ್ಕೆ ಎರಡು ಭಾಗ ಕೊಡುವುದು., ಉತ್ತಮ, ಮಧ್ಯಮ, ಅಧಮ ನೆಲವೆಲ್ಲ ಹಂಚಿಕೊಳ್ಳುವುದು ಮಳೆ ಹಳವಾಗಿ ಕೆರೆತುಂಬಿ ಒಡೆದರೂ ಅದನ್ನು ಸರಿಪಡಿಸಿಕೊಂಡು ಮಾನ್ಯದ ಗದ್ದೆಗಳನ್ನು ಬಿತ್ತಿ ಬೆಳೆದುಕೊಂಬುದು ಎಂದು ಸ್ಥಾನಮಾನ್ಯ ದತ್ತಿಯ ವಿವರ ಬಂದಿದೆ. ಅದೇ ಸ್ಥಳದ ಇನ್ನೊಂದು ಶಾಸನದಲ್ಲಿ ಪೆರುಮಾಳ್ ಚೆಟ್ಟಿ ಎಂಬುವವನು ದೊಡ್ಡ ಕೆರೆಯನ್ನು ಕಟ್ಟಿಸಿದ ವಿವರವಿದೆ. ಕ್ರಿ.ಶ.೧೫೫೦ರಲ್ಲಿ ಹುತ್ತಲಹಳ್ಳಿ ಗ್ರಾಮದಲ್ಲಿ ತಿಂಣ್‌ಗಣೀ ಚಾವುಡೆಯ ಗಾವುಂಡನು ಕೆರೆಯೊಂದನ್ನು ಕಟ್ಟಿಸಿದಂತೆ ತೋರುತ್ತದೆ. ಹೀಗೆ ನೇರವಾಗಿ ಕೆರೆಗಳ ರಚನೆಯ ಬಗ್ಗೆ ಅಲ್ಲದೆ, ದಾನದತ್ತಿಗಳನ್ನು ನೀಡುವಾಗ ಅನೇಕ ಕೆರೆಗಳ ಪ್ರಸ್ತಾಪ ಶಾಸನಗಳಲ್ಲಿ ಬಂದಿವೆ.

ಸುಗುಟೂರಿನ ದೇವಾಲಯಕ್ಕೆ ದಾನಬಿಟ್ಟ ಶಾಸನ ವೊಂದು ದೇವಾಲಯದ ತೋಟದಲ್ಲಿ ಕೇದಿಗೆ, ಮಲ್ಲಿಗೆ, ಪಾದರಿ, ಪುನ್ನಾಗ, ಕೀಜುಕಮಂಜರಿ, ಪಾರೈಯಾರ, ಮಂಗಿಲಿ, ಶೀದಲೆ ಮುಂತಾದ ಹೂಗಿಡ ಮರಗಳನ್ನು ಬೆಳಸಿದ್ದ ಬಗ್ಗೆ ತಿಳಿಸುತ್ತದೆ.

ಯಾವುದೇ ನಾಡಿನ ಅಭಿವೃದ್ಧಿಯಲ್ಲಿ ವಾಣಿಜ್ಯ ಚಟುವಟಿಕೆಗಳು ಗಮನಾರ್ಹ ಪಾತ್ರ ವಹಿಸುತ್ತವೆ. ಅಂತೆಯೆ ಕೈವಾರನಾಡಿನ ವಾಣಿಜ್ಯ ಚಟುವಟಿಕೆಗಳ ಕೇಂದ್ರಗಳಾಗಿ ಅನೇಕ ಸಂತೆಗಳು ಸ್ಥಾಪಿತವಾಗಿದ್ದವು. ಕ್ರಿ.ಶ.೧೩೬೨ರ ಕೈವಾರದ ಶಾಸನವು ಆ ನಾಡಿನ ಸಮಸ್ತ ಗಾವುಂಡು ಪ್ರಜೆಗಳು ಉಭಯನಾನಾದೇಶಿ, . . . ಹದಿನೆಂಟು ಸಮಯದವರು ಸೇರಿ ಕೈವಾರದಲ್ಲಿ ಸಂತೆಯನ್ನು ಕಟ್ಟಿಸಿ, ಆ ಸಂತೆಗೆ ಮಾರಪ್ಪಸೆಟ್ಟಿ ಹಾಗೂ ಆತನ ಸೋದರ ಪೆರಿಯನಾಯನ ಎಂಬುವವರನ್ನು ಪಟ್ಟಣಸ್ವಾಮಿಯಾಗಿ ನೇಮಿಸಿದ ವಿವರ ನೀಡುತ್ತದೆ. ಈ ನಾಡಿನ ನೊಣ್ಣುಂಗುಳಿಯು(ನಂದಗುಡಿ, ಹೊಸಕೋಟೆ ತಾ ॥) ಆ ಕಾಲದಲ್ಲಿ ಬಹು ಪ್ರಸಿದ್ಧವಾಗಿದ್ದಿತು. ಅಲ್ಲಿನ ಸಂತೆಯಲ್ಲಿ ಅನೇಕ ದವಸಧಾನ್ಯಗಳಲ್ಲದೆ, ಉಪ್ಪು, ಮೆಣಸು, ಶುಂಠಿ, ಅಡಿಕೆ, ವೀಳೆಯದೆಲೆ, ಬಟ್ಟೆ, ಸೀರೆಗಳ ವ್ಯಾಪಾರ ನಡೆಯುತ್ತಿತ್ತು. ಕೈವಾರನಾಡಿನ ಸಂತೆಗಳಲ್ಲಿ ಪ್ರಾಯಶಃ ತೊತ್ತುಗಳ ವ್ಯಾಪಾರವೂ ನಡೆಯುತ್ತಿದ್ದಿತೆಂದು ಹೇಳಲು ಶಾಸನಗಳು ಸಹಾಯಕವಾಗುತ್ತವೆ. ಕುದುರೆ, ಮರಿಕುದುರೆ, ಎತ್ತು, ಎಮ್ಮೆ, ಆನೆ ಮೇಕೆಗಳ ಮೇಲೆ ತೆರಿಗೆಗಳನ್ನು ವಿಧಿಸುತ್ತಿದ್ದುದನ್ನು ಗಮನಿಸಿದರೆ- ಅವೂ ಸಂತೆಗಳಲ್ಲಿ ವಿಕ್ರಯವಾಗುತ್ತಿದ್ದವೆನ್ನಬಹುದಾಗಿದೆ.

ನಮ್ಮ ನಾಡಿಗರು ಸ್ವಾಭಿಮಾನಿಗಳು, ವೀರರು. ಅಂತೆಯೆ ಆ ವೀರ ಪರಂಪರೆಯ ಕುರುಹುಗಳಾಗಿ ವೀರಗಲ್ಲು, ಮಾಸ್ತಿಕಲ್ಲು ಮತ್ತು ನೆತ್ತರ ಕೊಡುಗೆ ಪ್ರಸ್ತಾಪಗಳು ಕೈವಾರನಾಡಿನ ಶಾಸನಗಳಲ್ಲೂ ಕಂಡುಬರುತ್ತದೆ. ಕೈವಾರನಾಡಿನ ವೀರಪರಂಪರೆಯ ಮುಕುಟಮಣಿ 'ಲಕ್ಷ್ಮಮ್ಮ ಗಾವುಂಡಿ' ಈಕೆ ಕೈವಾರನಾಡಿನ ಸರಕ್ಕನೂರ ಮಾಚಗಾವುಂಡನ ಮಗಳು. ಈಕೆ 'ಸಱಕ್ಕನೂರ ಎಮ್ಮೆರ್ ತುಱುಪರಿದಟ್ಟಿ ಪುಯ್ಯಲ್ಪರಿದು ಪಗಿರೆಯಲ್ದಟ್ಟಿ ಕಾದಿ ತುಱುವಂಮೆಟ್ಟಿ ಸತ್ತು ಸ್ವರ್ಗ್ಗ' ಸೇರಿದಳು. ಕ್ರಿ.ಶ. ೧೦೭೬ರ ನರಸಾಪುರದ ಶಾಸನವು ಕುಮಾರಾನ್ನೈ, ಕಾಟ್ಟುಮಯ್ಯ, ಚೋಳ ಮಾಯಲಟ್ಟಿ ಎಂಬುವವರು ವೆಳ್ಳಿಯೂರಿನ ಊರಳಿವಿನಲ್ಲಿ ಹೋರಾಡಿ ಮಡಿದ ವಿವರವನ್ನು ನೀಡುತ್ತದೆ. ಹಾಗೇ ಅಣ್ಣೆಯೂರಿನಲ್ಲಿ ನಡೆದ ಯುದ್ಧವೊಂದರಲ್ಲಿ ಭಾಗಿಯಾಗಿ ತನ್ನ ಶೌರ್ಯವನ್ನು ಮೆರೆದ ಶಾನಯನ್ ಎಂಬ ವೀರನಿಗೆ ಕೈವಾರನಾಡಿನ ಶ್ರೀ ವಲ್ಲಾಳ ಪೊಯ್ಸಳ ಮಾಣಿಕ್ಯ ಬ್ರಹ್ಮಾದಿರಾಯನು ನತ್ತಲಪಟ್ಟ (ನೆತ್ತರಕೊಡುಗೆ)ವಾಗಿ ಮೂರು ಖಂಡಗ ಗದ್ದೆ ಭೂಮಿಯನ್ನು ದತ್ತಿನೀಡಿರುವ ವಿವರ ಕ್ರಿ.ಶ.೧೩೧೨ರ ಶಾಸನದಲ್ಲಿ ಬಂದಿದೆ.

ಚೋಳರ ಕಾಲದಲ್ಲಿ ಅವರ ಅಧಿಕಾರಿಗಳಾಗಿ ಕೋಲಾರದ ಪ್ರದೇಶದಲ್ಲಿ ನೇಮಕಗೊಂಡವರು ಉಗ್ರ ತಮಿಳು ಅಭಿಮಾನಿಗಳಾಗಿದ್ದರೆಂಬುದರಲ್ಲಿ ಸಂದೇಹವಿಲ್ಲ. ಇದಕ್ಕೆ ನಾಲ್ಕಾರು ಶಾಸನಗಳ ಆಧಾರವಿದೆ. ಪ್ರಸ್ತುತ ಕೈವಾರನಾಡಿನ ಸುಗುಟೂರಿನಲ್ಲಿ ಸೋಮೇಶ್ವರ ದೇವಾಲಯವನ್ನು ಕಟ್ಟಿಸಿದ ನಲ್ಲೂರಿನ ಮುಖ್ಯನಾದ ಪಸರಾಂತ ಉದಯ ಮಾರ್ತಂಡ ಬ್ರಹ್ಮಮಾರಯನ್‌ನು 'ಕುವಳೈ ತಂತಿರನ್' (ಸೇನಾಪತಿ) ಆಗಿದ್ದು ಈತ ಶುದ್ಧ ತಮಿಳಿನಲ್ಲಿ ಪರಿಣತನೂ ವಿಶ್ವವಿಖ್ಯಾತನೆಂದೂ ಗ್ರಾಮ ಭೂಮಿಗಳನ್ನು ಕೊಂಡು ತಮಿಳು ಜನರ ಸಂತೋಷಕ್ಕಾಗಿ ದತ್ತಿ ಬಿಟ್ಟಿರುವುದಾಗಿ ಶಾಸನವೊಂದರಲ್ಲಿ ಹೇಳಿಕೊಂಡಿದ್ದಾನೆ. ಇಂತಹ ಅಧಿಕಾರಿಗಳ ಆಕ್ರಮಣಶೀಲ ಗುಣದಿಂದಾಗಿಯೇ ಕೋಲಾರ ಜಿಲ್ಲೆಯಲ್ಲಿ ಕ್ರಿ.ಶ.೧೨-೧೪ನೇ ಶತಮಾನಗಳ ಅವಧಿಯಲ್ಲಿ ತಮಿಳು ಶಾಸನಗಳ ಹೆಚ್ಚಳ ಕಂಡುಬಂದಿರುವುದು.

ಹೀಗೆ ವೈವಿಧ್ಯಮಯ ವಿವರಗಳ ಆಗರವಾಗಿರುವ ಕೈವಾರನಾಡು ಕ್ರಿ.ಶ.೧೫ನೆಯ ಶತಮಾನದವರೆಗೂ ಒಂದು ಮುಖ್ಯ ಆಡಳಿತ ವಿಭಾಗವಾಗಿ ಮೆರೆದಿತ್ತು. ಈ ನಾಡಿನ

ವಿಕ್ರಮ ಚೋಳಪುರ(?) ರಾಜೇಂದ್ರ ಚೋಳನ ಒಂದು ನೆಲೆವೀಡಾಗಿದ್ದಿತು. ಅನೇಕ ತೀರ್ಥಕ್ಷೇತ್ರಗಳಿಂದ ಕೂಡಿ ವಿಶಿಷ್ಟವಾದ ಪೌರಾಣಿಕ ಕಥನಗಳಿಗೆ ಇಂಬು ನೀಡಿದ್ದ ಕೈವಾರನಾಡು, ಅನೇಕ ಪ್ರಾಗೈತಿಹಾಸಿಕ ತಾಣಗಳ ಬೀಡು ಆಗಿರುವುದು ಗಮನಾರ್ಹ ಅಂಶ. ಹದಿನೆಂಟನೆಯ ಶತಮಾನದಲ್ಲಿ ಜೀವಿಸಿದ್ದ ಕೈವಾರದ ನಾರೇಯಣ ಯತೀಂದ್ರರ ಪ್ರಭಾವದಿಂದ ಇಂದಿಗೂ ಕೈವಾರ ಕ್ಷೇತ್ರ, ಆ ಪ್ರದೇಶದ ಜನರ ಸಾಂಸ್ಕೃತಿಕ ಬದುಕಿನ ಮೇಲೆ ನಿಚ್ಚಳ ಪ್ರಭಾವವನ್ನು ಬೀರುತ್ತಲಿದೆ.

### ಗ್ರಂಥ ಋಣ


ಎಪಿಗ್ರಾಫಿಯಾ ಕರ್ನಾಟಿಕ, ಸಂಪುಟ XI, X, XVII

ಮೈಸೂರು ಪುರಾತತ್ವ ವರದಿ-೧೯೩೫

ಸ್ಥಳನಾಮ ಅಧ್ಯಯನಗಳು, ವಿ. ಗೋಪಾಲಕೃಷ್ಣ, ವಿದ್ಯಾಗಿರಿ ಪ್ರಕಾಶನ, ೧೯೮೭

ಸುಗುಟೂರು ವೀರಶೈವ ಅರಸುಮನೆತನ, ಪಿ.ವಿ.ಕೃಷ್ಣಮೂರ್ತಿ, ಧಾರವಾಡ, ೧೯೯೪.

ಪ್ರೊ|| ಎಲ್. ವಿ. ಪಾಟೀಲ *

# ಬೆಳ್ವೊಲ-೩೦೦ ಒಂದು ವಿವೇಚನೆ

ಪ್ರಾಚೀನ ಕಾಲದಿಂದಲೂ ಆಡಳಿತದ ಅನುಕೂಲಕ್ಕಾಗಿ ದೇಶವನ್ನು ಕೆಲವು ವಿಭಾಗಗಳಲ್ಲಿ ವಿಂಗಡಿಸುತ್ತಿದ್ದ ಪದ್ಧತಿ ರೂಢಿಯಲ್ಲಿರುವದು ಕಂಡುಬರುತ್ತದೆ. ಇಂದು ರಾಜ್ಯ, ಜಿಲ್ಲೆ, ತಾಲ್ಲೂಕು, ಹೋಬಳಿಗಳೆಂದು ವಿಭಾಗಿಸುತ್ತಿದ್ದಂತೆ ಹಿಂದಿನ ಕಾಲದಲ್ಲಿ ಮಂಡಲ, ದೇಶ, ವಿಷಯ, ನಾಡು, ಕಂಪಣ, ವಳಿತ ಎಂದು ಮುಂತಾಗಿ ವಿಂಗಡಿಸಿದ ಸಂಗತಿ ಶಾಸನದಲ್ಲಿ ಉಕ್ತವಾಗಿದೆ. ಕುಂತಳ ದೇಶದಲ್ಲಿ ಇಂತಹ ಅನೇಕ ವಿಭಾಗಗಳಿದ್ದವು. ಬನವಾಸಿ, ಹಲಸಿಗೆ, ತರ್ದವಾಡಿ, ಬೆಳ್ವೊಲ, ಪುಲಿಗೆರೆ, ಬಾಗಡಿಗೆ, ಕಿಸುಕಾಡು, ಕರಡಿಕಲ್ಲು, ಹಗರಟ್ಟಿಗೆ, ಹಾನುಗಲ್ಲು ಮೊದಲಾದವುಗಳನ್ನು ಉದಾಹರಿಸಬಹುದಾಗಿದೆ. ಅರಸು ಮನೆತನದ ಹೆಸರಿನಿಂದ ಕರೆಯುತ್ತಿದ್ದ ಕೆಲವು ವಿಭಾಗಗಳಿದ್ದವು. ಉದಾಹರಣೆಗೆ ಗಂಗವಾಡಿ, ಕದಂಬ ಮಂಡಲ, ಸೇವಣ ದೇಶ, ಸಿಂದವಾಡಿ ಮುಂತಾದವುಗಳನ್ನು ಗಮನಿಸಬಹುದಾಗಿದೆ. ಈ ಆಡಳಿತ ವಿಭಾಗಗಳೊಂದಿಗೆ ಸಂಖ್ಯೆಗಳನ್ನು ಜೋಡಿಸಿ ಕರೆಯುವ ಪದ್ಧತಿ ಪ್ರಚಲಿತವಿದ್ದುದಾಗಿ ತಿಳಿದುಬರುವದು. ಗಂಗವಾಡಿ ೯೬,೦೦೦, ಬನವಾಸಿ-೧೨,೦೦೦, ಕೂಹಂಡಿ-೩೦೦೦, ತರ್ದವಾಡಿ-೧೦೦೦, ಹಾನುಗಲ್ಲು-೫೦೦, ಬೆಳ್ವೊಲ-೩೦೦, ಮಾಸವಾಡಿ-೧೪೦, ಕಿಸುಕಾಡು-೭೦, ಹೀಗೆ ಅನೇಕ ಉದಾಹರಣೆಗಳನ್ನು ಕೊಡಬಹುದು. ''ಈ ಪದ್ಧತಿ ಕರ್ನಾಟಕದ ವೈಶಿಷ್ಟ್ಯವೇ ಎನ್ನುವ ಮಟ್ಟಿಗೆ ಈ ಭಾಗದಲ್ಲಿ ಪ್ರಚಲಿತವಿದ್ದಿತು. ಭಾರತದ, ಇತರ ಭಾಗಗಳಲ್ಲಿ ಇಂಥ ಪದ್ಧತಿ ವಿರಳವಾಗಿದ್ದಿತೆಂದು ಹೇಳಬಹುದು''[1] ಎಂದು ವಿದ್ವಾಂಸರೊಬ್ಬರು ಅಭಿಪ್ರಾಯಪಟ್ಟಿದ್ದಾರೆ.

ಈ ವಿಭಾಗಗಳಿಗೆ ಜೋಡಿಸಲಾದ ಈ ಸಂಖ್ಯೆಗಳು ಏನನ್ನು ಸೂಚಿಸುತ್ತವೆ? ಇವುಗಳ ಅರ್ಥವೇನು? ಎಂದೆನ್ನುವದರ ಬಗ್ಗೆ ಅನೇಕ ವಿದ್ವಾಂಸರಲ್ಲಿ ಅನೇಕ ಬಗೆಯ ತರ್ಕಗಳು ನಡೆದಿವೆ. ಕೃಷ್ಣಸ್ವಾಮಿ ಅಯ್ಯಂಗಾರ ಅವರು ಈ ಸಂಖ್ಯೆಗಳು ಕಂದಾಯ ಇಲ್ಲವೆ, ಸಾಗುವಳಿಯ ಭೂಮಿಯ ಆದಾಯದ ಮೊತ್ತ, ಇಲ್ಲವೆ ಹಳ್ಳಿಗಳ ಸಂಖ್ಯೆಯನ್ನು ಸೂಚಿಸುತ್ತಿರಬಹುದೆಂದು ಅಭಿಪ್ರಾಯಪಟ್ಟಿದ್ದಾರೆ. ರೈಸ್ ಅವರು ಕಂದಾಯವನ್ನು ಸೂಚಿಸುತ್ತವೆ ಎಂದು ನಿಲುವು ತಾಳಿದ್ದರೆ. ಫ್ಲೀಟ ಅವರು ಪಟ್ಟಣಗಳ ಸಂಖ್ಯೆಗಳನ್ನು ಸೂಚಿಸುತ್ತಿರಬೇಕು, ಬಹು ದೊಡ್ಡ ಸಂಖ್ಯೆಗಳು ಹಳ್ಳಿಗಳ ಸಂಖ್ಯೆಯನ್ನು ಪ್ರತಿನಿಧಿಸುತ್ತಿರಬಹುದು ಎಂದು ಅಭಿಪ್ರಾಯ ಪಟ್ಟಿರುವರು.[2] ಹೀಗೆ ಇನ್ನೂ ಅನೇಕ ಬಗೆಯಲ್ಲಿ ಅನೇಕ ತರ್ಕಗಳನ್ನು ಬೇರೆ ಬೇರೆ ವಿದ್ವಾಂಸರು ಮಾಡಿರುವರು.[3]

ಹಳ್ಳಿಗಳನ್ನು ಗುಂಪುಗಳನ್ನಾಗಿ ಮಾಡಿಕೊಂಡು ಆಡಳಿತ ಮಾಡಬೇಕೆಂಬ, ವಿಚಾರವನ್ನು ಮನು ಹೇಳಿದ್ದಾನೆ. ಹತ್ತು ಹಳ್ಳಿಗಳ ಗುಂಪನ್ನು ಮಾಡಿಕೊಂಡು ಆಡಳಿತ ಮಾಡಲು ಸೂಚಿಸಿದ್ದಾನೆ. ಮತ್ತು ಗ್ರಾಮಗಳ ಗುಂಪಿನ ಸಂಖ್ಯೆ ಹತ್ತರಿಂದ ನೂರರವರೆಗೆ ಇರಬಹುದೆಂದು ಹೇಳಿದ್ದಾನೆ.[4] ಕೌಟಿಲ್ಯನು

---

* ಕಲಾ-ವಿಜ್ಞಾನ ಮಹಾವಿದ್ಯಾಲಯ, ಸಂಕೇಶ್ವರ

1. ಶ್ರೀನಿವಾಸ ರಿತ್ತಿ; 'ಬೆಳ್ವೊಲ ಮೂನೂಱು'; ಕರ್ನಾಟಕ ಭಾರತಿ, ಸಂ-೧; ಸಂ-೧; ಪು : ೮೧
2. ಬಾಂಬೆ ಗ್ಯಾಸೆಟಿಯರ್, ಧಾರವಾಡ ಡಿಸ್ಟ್ರಿಕ್ಟ್; ಪು. ೫೯ರಲ್ಲಿರುವ ಸಂಗತಿಯನ್ನು ಗಮನಿಸಿ.
3. Sumati Mulay; "Studies in the Historical Geography & Cultural Ethnography" p. 36., ಹೆಚ್ಚಿನ ಮಾಹಿತಿಗಾಗಿ ನೋಡಿರಿ.
4. A.S. Altekar; State and Government in Ancient India, p. 217 ದಿಂದ ಉದ್ಧೃತ.

ಅತಿ ಕಡಿಮೆ ಎಂದರೆ ಐದು ಗ್ರಾಮಗಳ ಗುಂಪು ಇರಬೇಕೆಂದು ತಿಳಿಸಿದ್ದಾನೆ. ಈ ಐದು ಹಳ್ಳಿಗಳ ಅಧಿಕಾರಿಯನ್ನು 'ಪಂಚಗ್ರಾಮಿ' ಎಂದು ಕರೆಯುತ್ತಿದ್ದರೆಂದು ವ್ಯಕ್ತವಾಗುತ್ತದೆ.[5]

ಬೇಗೂರ ಶಾಸನದಲ್ಲಿ ಬೆಂಪೂರು ಪನ್ನೆರಡು ಎಂದು ಉಲ್ಲೇಖಿತವಾದ ಶಾಸನ ಪಠ್ಯದಲ್ಲಿ ಹನ್ನೆರಡೂ ಹಳ್ಳಿಗಳ ಹೆಸರುಗಳನ್ನು ಕೊಟ್ಟಿರುವರು.[6]

ಇಲ್ಲಿ ಸಂಖ್ಯೆ ಮತ್ತು ಗ್ರಾಮಗಳು ಪರಸ್ಪರ ಸಂಬಂಧವನ್ನು ಸ್ಪಷ್ಟಪಡಿಸುವುದನ್ನು ಗಮನಿಸಬೇಕಾಗಿದೆ[7].

''ಪೊನುಗುಂದ ತ್ರಿಂಶನ್ಮಧ್ಯೇ ಶ್ರೀಪುರನಾಮ ಗ್ರಾಮಸ್ತಸ್ಯ''[8] ಮತ್ತು ''ನವಿಲಗುಂದ ಚತ್ವಾರಿಂಶ್ಮಧ್ಯ ವರ್ತಿನಂ ಬೆಲ್ಲವುರನಾಮಧೇಯಂ ಗ್ರಾಮಂ ಪ್ರಸಿದ್ದ''[9] ಎಂದೆನ್ನುವಲ್ಲಿ ಈ ಸಂಖ್ಯೆಗಳು ಗ್ರಾಮಗಳನ್ನೆ ಸೂಚಿಸುತ್ತವೆಂಬುವುದು ಗೊತ್ತಾಗುತ್ತದೆ. ಕೀಲಹಾರ್ನ ಅವರು ಪ್ರಕಟಿಸಿದ ಕೊಳನೂರ (ಈಗಿನ ಕೊಣ್ಣೂರ) ಶಾಸನದಲ್ಲಿ ಕೊಳನೂರ ೩೦ರ, ಮೂವತ್ತೂ ಹಳ್ಳಿಗಳ ಹೆಸರುಗಳಿರುವದು ಕಂಡುಬರುತ್ತದೆ.[10] ಈಗಂತೂ ಈ ಸಂಖ್ಯೆಗಳು ಗ್ರಾಮಗಳನ್ನೇ ಸೂಚಿಸುತ್ತವೆ, ಪ್ರತಿನಿಧಿಸುತ್ತವೆ ಎಂಬುವುದು ಹೆಚ್ಚು ಸ್ಪಷ್ಟವಾಗುತ್ತದೆ.

**ಕೊಳನೂರು ಮೂವತ್ತು**

ಕ್ರಿ. ಶ. ೮೬೦ ರಾಷ್ಟ್ರಕೂಟ ಅಮೋಘವರ್ಷನ ಕಾಲದ ಶಾಸನದಲ್ಲಿ ಈ ಉಪ-ವಿಭಾಗದ ಸಂಗತಿ ಉಲ್ಲೇಖವಾಗಿದೆ.[21] ಈ ವಿಭಾಗದಲ್ಲಿ ಉಲ್ಲೇಖಿತವಾದ ಗ್ರಾಮಗಳನ್ನು ಕೆಳಗೆ ಕೊಡಲಾಗಿದೆ :

೧) ಕೊಳನೂರು ೨) ಅವರವಾಡಿ, ೩) ಬೆಂದನೂರು, ೪) ಮುಡಗುಂಡಿ, ೫) ಕಿತ್ತವೊಳೆ, ೬) ಸುಳ್ಳ, ೭) ಮುಸಡಗೆರೆ, ೮) ಮಾವಿನೂರು, ೯) ಮತ್ತಿಕಟ್ಟೆ ೧೦) ನೀಲಗುಂದಿಗೆ, ೧೧) ತಲಖೇಡ, ೧೨) ಬೆಳ್ಳೇರು, ೧೩ ಸಂಗಮ, ೧೪) ಪಿರಿಸಿಂಗಿ, ೧೫) ಮುತ್ತಲಗೆರೆ, ೧೬ ಕಾಕೆಯನೂರು ೧೭) ಬೇಹೂರು, ೧೮) ಆಲೂರು, ೧೯ ಪಾರ್ವನಗೆರೆ, ೨೦) ಹೊಸಂಜಲಲು, ೨೧) ಇಂಡುಗಲು ೨೨) ನೇರಿಲಗೆ, ೨೩) ಹಾಗನೂರು, ೨೪) ಉನಲಾರು ೨೫) ಇಂದಗೆರೆ, ೨೬) ಮುನಿವಳ್ಳಿ, ೨೭) ಕೊತ್ತಸೆ, ೨೮ ಒಡ್ಡಟ್ಟಿಗೆ ೨೯) ಸಿಕಿಂಬರಿ ಮತ್ತು ೩೦) ಗಿರಿಪಿಡಿಲು.

ಈ ಮೂವತ್ತು ಗ್ರಾಮಗಳಲ್ಲಿ ಪ್ರಮುಖ ಪುರವಾದ ಕೊಳನೂರು (ಕೊಣ್ಣೂರ) ನರಗುಂದ ತಾಲೂಕಿನಲ್ಲಿದೆ ಹಾಗೂ ಬೆಳ್ಳೇರು (ಬೆಳ್ಳೇರಿ) ಈ ಗ್ರಾಮ ನರಗುಂದ ತಾಲೂಕಿನಲ್ಲಿದೆ. ಸುಳ್ಳ, ಮುಸಡಗೆರೆ (ಮುಷ್ಟಿಗೇರಿ), ಮತ್ತಿಕಟ್ಟೆ (ಮತ್ತೀಕಟ್ಟಿ), ನೀಲುಗುಂದಿಗೆ (ನೀಲಗುಂದ) ತಲಖೇಡ (ತಲಕವಾಡ) ಆಲೂರು, ನೇರಲಗೆ (ನೀರಲಗಿ) ಹಾಗನೂರು (ಹಾಗನೂರ) ಕಾಯಕೆಯನೂರು (ಕಾಕನೂರ), ಒಡ್ಡಟ್ಟಿಗೆ (ವಡವಟ್ಟಿಗೆ), ಕಿತ್ತವೊಳೆ (ಕಿತ್ತಳಿ), ಈ ಹನ್ನೊಂದು ಊರುಗಳು ಬಾದಾಮಿ ತಾಲೂಕಿನಲ್ಲಿವೆ. ಅವರವಾಡಿ ಗ್ರಾಮ ರಾಮದುರ್ಗ ತಾಲೂಕಿನಲ್ಲಿ ಹಾಗೂ ಪಿರಿಸಿಂಗಿ (ಸಿರಸಂಗಿ), ಮುನಿವಳ್ಳಿ (ಮುನವಳ್ಳಿ) ಸವದತ್ತಿ ತಾಲೂಕಿನಲ್ಲಿವೆ. ಅನೇಕ ಊರುಗಳ ಹೆಸರುಗಳು ಮೂಲ ರೂಪದಿಂದ ಸಂಪೂರ್ಣ ಬದಲಾವಣೆಗೊಂಡು ಹೊಸ ಹೆಸರುಗಳನ್ನು ಹೊಂದಿರುವ ಸಾಧ್ಯತೆ ಇದೆ.[11] ಕೆಲವು ಗ್ರಾಮಗಳು ಪಾಳು ಬಿದ್ದಿರಬಹುದು. ವಲಸೆ ಹೋಗಿ ಪುನರ್ವಸತಿ ಮಾಡಿಕೊಂಡಿರಬಹುದು. ಈ ಎಲ್ಲ ಕಾರಣಗಳಿಂದ ಅಂದಿನ ಗ್ರಾಮಗಳನ್ನೆಲ್ಲ ಗುರುತಿಸುವದು ದುಸ್ತರವಾಗಿದೆ.

ಬೆಳ್ವೊಲ ನಾಡಿನಲ್ಲಿದ್ದ ಮೂನ್ನೂರು ಗ್ರಾಮಗಳನ್ನು ಕುರಿತು ಈಗ ವಿಚಾರಿಸೋಣ. ಈ ಬೆಳ್ವೊಲ-300 ರಲ್ಲಿ

5. "Kautilya however refers to group of five villages as the smallest administrative division. Its officer was called Panchagrami".
6. ಎ.ಎಂ. ಅಣ್ಣಿಗೇರಿ, ಆರ್. ಶೇಷಶಾಸ್ತ್ರಿ; ಸಂಪಾದಕರು, ಶಾಸನ ಸಂಗ್ರಹ, ಪು. ೮, ಬೇಗೂರು (ಬೆಂಗಳೂರು ತಾ), ಕ್ರಿ.ಶ. 890
7. ದೇವರ ಕೊಂಡಾರೆಡ್ಡಿ : 'ಬೇಗೂರು ಶಾಸನ ಒಂದು ವಿವೇಚನೆ': ಸಾಧನೆ : ೩-೨ : ಪು : ೯೯,ಬೆಂಪೂರು (ಬೇಗೂರು), ತೊವಗೂರು (ತೋಗೂರು), ಪೂವಿನಪುಲ್ಲಿ ಮಙ್ಗಲ (ಹುಲಿಮಂಗಲ), ಇಗ್ಗಲೂರು (ಇಗ್ಗುಲೂರು), ಕೂಡಲ (ಕೂಡ್ಲು), ಸಾರಮು (ಸಾರಕ್ಕಿ?) ಇಂದು ಕೂಡ ಈ ಗ್ರಾಮಗಳನ್ನು ಗುರುತಿಸಬಹುದಾಗಿದೆಂದು ದೇವರ ಕೊಂಡಾರೆಡ್ಡಿಯವರು ಹೇಳಿರುವರು.
8. ಸೌ.ಇ.ಇ. : XI i: ೮೫ : ಶಿರೂರ : (ಬಾಗಲಕೋಟಿ ತಾ) : ಕ್ರಿ.ಶ. ೧೦೪೯
9. ಧಾ.ತಾ.ಶಾ. :೬೩: ರಾಯಾಪುರ : (ಧಾರವಾಡ ತಾ) : ಕ್ರಿ. ಶ. ೧೧೮೨
10. ಎ.ಇ. : VI : ಪು. ೨೫, ಕೊಣ್ಣೂರ : (ನರಗುಂದ ತಾ) ಕ್ರಿ.ಶ.೮೬೦
11. ಪುಲಿಗೆರೆ = ಲಕ್ಷ್ಮೇಶ್ವರ, ಕಾಡಿಯೂರು = ಕಳಸ ಎಂದು ಬದಲಾದ ಹೆಸರುಗಳನ್ನು ಹೊಂದಿರುವ ಸಂಗತಿಯನ್ನು ಇಲ್ಲಿ ಉದಾಹರಿಸಬಹುದಾಗಿದೆ.

ನೇಕ ಉಪ-ವಿಭಾಗಗಳಿದ್ದ ಸಂಗತಿ ಶಾಸನಗಳಲ್ಲಿ ಳಗಿನಂತೆ ಉಲ್ಲೇಖವಾಗಿವೆ :

೧) ಬೆಣ್ಣೆದಡಿ : ಎಪ್ಪತ್ತು[12] ೨) ಚಿಂಚಲಿ : ಐವತ್ತು,[13] .) ನವಿಲಗುಂದ : ನಲವತ್ತು,[14] ೪) ಕುಕ್ಕನೂರು : ಮೂವತ್ತು[15] ೫) ಕೊಳನೂರು : ಮೂವತ್ತು[16] ೬) ರೆಯಂಗಲ್ಲ : ಹನ್ನೆರಡು[17] ೭) ಬೆಳವಣಿಗೆ : ಹನ್ನೆರಡು[18] ) ಮುಳುಗುಂದ : ಹನ್ನೆರಡು[19] ೯) ಪೊನ್ನುಗುಂದ : ಮೂವತ್ತು.[20]

ಈ ಒಂಬತ್ತು ಉಪ-ವಿಭಾಗಗಳ ಗ್ರಾಮಗಳ ಸಂಖ್ಯೆ ಒಟ್ಟು 286 ಆಗುತ್ತದೆ. 300ಕ್ಕೆ ಕೇವಲ ೧೪ ಗ್ರಾಮಗಳ ಸಂಖ್ಯೆ ಕಡಿಮೆ ಇವೆ. ಇನ್ನೂ ಹೆಚ್ಚಿನ ಆಧಾರಗಳನ್ನು ಒದಗಿಸುವ ಶಾಸನಗಳು ದೊರಕಿದಾಗ ಈ ಹದಿನಾಲ್ಕು ಗ್ರಾಮಗಳನ್ನು ಗುರುತಿಸಲು ಸಾಧ್ಯವಾಗಬಹುದು. ಈ ವಿವರಣೆಯಿಂದ ಬೆಳ್ವೊಲ ಪದದೊಂದಿಗೆ ಜೋಡಿಸಿ ಕರೆಯುವ ಮೂನ್ನೂರು ಸಂಖ್ಯೆಯು ಗ್ರಾಮಗಳನ್ನು ಸೂಚಿಸುತ್ತವೆ ಎಂಬುವುದು ಸ್ಪಷ್ಟವಾಗುತ್ತದೆ.

---

12. ಕ.ಇ.; V, ೨೪; ನರಗುಂದ, (ನರಗುಂದ ತಾ) ; ಕ್ರಿ.ಶ. ೧೧೩೮
13. ಸೌ.ಇ.ಇ. ; XVIII, ೧೩, ಚಿಂಚಲ; (ಗದಗ ತಾ), ಕ್ರಿ.ಶ. ೮೬೬
14. ಧಾ.ತಾ.ಶಾ.; ೬೩, ರಾಯಾಪುರ, (ಧಾರವಾಡ ತಾ), ಕ್ರಿ.ಶ. ೧೧೮೨
15. ಕೊ.ಜಿ.ಶಾ. ; ೨೩; ತಳಕಲ್ಲ; (ಯಲಬುರ್ಗ ತಾ); ಕ್ರಿ. ಶ. ೯೯೧
16. ಎ.ಇ.; VI ; ಪು. ೨೫, ಕೊಣ್ಣೂರ, (ನರಗುಂದ ತಾ), ಕ್ರಿ.ಶ. ೮೬೦
17. ಸೌ.ಇ.ಇ. ; XI ii, ೧೬೩ ; ಅಬ್ಬಿಗೇರಿ; (ರೋಣ ತಾ); ಕ್ರಿ.ಶ. ೧೧೧೩
18. ಸೌ.ಇ.ಇ.; XI i 29, ಕೌಜಗೇರಿ, (ರೋಣ ತಾ) ಕ್ರಿ.ಶ. ೯೧೨
19. ಸೌ.ಇ.ಇ.; XI i ೬೫, ಹೊಸೂರ, (ಗದಗ ತಾ); ಕ್ರಿ. ಶ. ೧೦೨೯, ಈ ಏಳು ಉಪ-ವಿಭಾಗಗಳನ್ನು ಶ್ರೀನಿವಾಸ ರಿತ್ತಿಯ ರು ಈ ಮೊದಲು ಗುರುತಿಸಿರುವರು, ಕರ್ನಾಟಕ ಭಾರತಿ- 1-1, ಪು.೮೦
20. ಸೌ.ಇ.ಇ.; XI i ೧೧೩; ಹುನುಗುಂದ, (ಹುನುಗುಂದ ತಾ). ಕ್ರಿ.ಶ. ೧೦೭೪, ಎಂ.ಎಂ. ಕಲಬುರ್ಗಿಯವರು ಈ ಮೊದಲು ಈ ವಿಭಾಗವನ್ನು ಕುರಿತು ಉಲ್ಲೇಖಿಸಿರುವರು.; ಕವಿರಾಜ ಮಾರ್ಗದ ಪರಿಸರದ ಕನ್ನಡ ಸಾಹಿತ್ಯ; ಪು.೧೭

ಡಾ|| ಶಿ. ಬಾ. ಪಾಟೀಲ*

# ಸಂಕೇಶ್ವರದ ಸಾಂಸ್ಕೃತಿಕ ದರ್ಶನ

ನಾಲ್ಕನೇ ನಂಬರಿನ ರಾಷ್ಟ್ರೀಯ ಹೆದ್ದಾರಿಯ ಮೇಲೆ ಬೆಳಗಾವಿಯಿಂದ ಉತ್ತರಕ್ಕೆ ಸು. ೪೫ ಕಿ.ಮೀ. ಅಂತರದ ಮೇಲೆ ಕಾಣಿಸುವ ಔದ್ಯೋಗಿಕ ನಗರವೇ ಸಂಕೇಶ್ವರ.

ಇದರಲ್ಲಿ ಸಾಮಾನ್ಯವಾಗಿ ಮೂರು ಭಾಗಗಳನ್ನಾಗಿ ವಿಂಗಡಿಸಬಹುದು. ಊರು ಮಧ್ಯದಲ್ಲಿ ಹರಿದಿರುವ ಲಕ್ಷ್ಮಿ ಹಳ್ಳದ ಪಶ್ಚಿಮಕ್ಕೆ ಇರುವದೇ ಹಳೆಯ ಊರು. ಅಲ್ಲಿಯ ರೀತಿ ನಡವಳಿಕೆ ಸಂಬಂಧ ಬಾಂಧವ್ಯಗಳೆಲ್ಲವೂ ಹಳ್ಳಿಯ ಸಂಪ್ರದಾಯವಾಗಿವೆ. ಹಳ್ಳದಿಂದ ಪೂರ್ವಕ್ಕಿರುವದೇ ಇತ್ತ ಪಟ್ಟಣವು ಅಲ್ಲ ಅತ್ತ ಹಳ್ಳಿಯೂ ಅಲ್ಲದ ಮಧ್ಯಮ ತರಗತಿಯ ಪೇಟೆಯ ಪರಿಸರ. ಒಂದು ಕಾಲದಲ್ಲಿ ಇದು ಮೆಣಸಿನಕಾಯಿ, ಶೇಂಗಾ, ಹಾಗೂ ಬೆಲ್ಲಕ್ಕೆ ಹೆಸರುವಾಸಿಯಾಗಿತ್ತು. ಹಾಯ್ದಾಡುವದಕ್ಕೂ ಆಗದಷ್ಟು ರಸ್ತೆಯುದ್ದಕ್ಕೂ ರಾಶಿ ರಾಶಿಯಾಗಿ ದಲಾಲರ ಅಂಗಡಿಗಳ ಮುಂದೆ ರೈತರ ಮಾಲು ಬೀಳುತ್ತಿತ್ತು. ಆದರೆ ಅದೇ ಇಂದು ಬಿಕೋ ಎನ್ನುತ್ತದೆ.

ಹೆದ್ದಾರಿಯ ಪೂರ್ವ ಹಾಗೂ ಉತ್ತರ ಮತ್ತು ಪೋಲಿಸ ಠಾಣೆಯ ದಕ್ಷಿಣಕ್ಕೆ ಇರುವದೇ ಹೊಸ ಬಡಾವಣೆಗಳು. ಇದರಲ್ಲಿ ರಾಜ್ಯ ರಸ್ತೆ ಸಾರಿಗೆಯ ಬಸ್ ನಿಲ್ದಾಣ, ಪಟ್ಟಣ ಪುರಸಭೆ ಕಚೇರಿ, ಮಾರುಕಟ್ಟೆಗಳು ಬರುತ್ತವೆ. ದನಗಳ ಮಾರುಕಟ್ಟೆಯಲ್ಲಿ ಒಂದು ಮೇಕೆಯ ಕುರಿಯಿಂದ ಹಿಡಿದು ಬೆಲೆ ಬಾಳುವ ಪ್ರಸಿದ್ಧ ಎತ್ತಿನ ಜೋಡಿಗಳು ನೆರೆಯುತ್ತವೆ. ಅವುಗಳ ಖರೀದಿಗೆ ಸಂಬಂಧಿಸಿದಂತೆ ದೂರದೂರದ ವ್ಯಾಪಾರಿಗಳು ಬಂದಿರುತ್ತಾರೆ.

ಮತ್ತೊಂದು ಪ್ರತಿಷ್ಠೆಯ ಪ್ರಸಿದ್ಧ ಸಕ್ಕರೆ ಕಾರಖಾನೆ ಹಾಗೂ ಅದರ ಬಡಾವಣೆ ಹೀಗೆ ವಿಂಗಡಿಸಬಹುದು.

ಕರ್ನಾಟಕ ಹಾಗೂ ಮಹಾರಾಷ್ಟ್ರದ ಗಡಿಯಲ್ಲಿರುವ ಈ ಊರಿನ ಪಶ್ಚಿಮಕ್ಕೆ ಕೇವಲ ಕೆಲವೇ ಕಿಲೋ ಮೀಟರದ ಮೇಲೆ ಮಹಾರಾಷ್ಟ್ರ ರಾಜ್ಯದ ಸೀಮೆ ಇರುತ್ತದೆ. ಅದರಂತೆ ಊರ ದಕ್ಷಿಣಕ್ಕೆ ಪಕ್ಕಕ್ಕೆ ಹರಿದಿರುವ ಹಿರಣ್ಯಕೇಶಿಯ ನದಿ "ಆಚೆ ನೀನು ಈಚೆ ನಾನು ನಡುವೆ ನದಿಯು ಹರಿದಿದೆ" ಎನ್ನುವಂತೆ ಆಚಿನ ದಡಕ್ಕಿರುವದೇ ಮಹಾರಾಷ್ಟ್ರ ರಾಜ್ಯ.

ಸುಮಾರು ೩೦ ಸಾವಿರ ಜನಸಂಖ್ಯೆ ಇರುವ ಈ ಪಟ್ಟಣ ರಾಜ್ಯದ ಗಡಿಯಲ್ಲಿರುವದರಿಂದ ಗಡಿನಾಡು ಮತ್ತು ಹವಾಮಾನದಿಂದಲೂ ಇದು ಗಡಿನಾಡು. ಇಲ್ಲಿ ೩೫ ರಿಂದ ೪೦ ಅಂಗುಲು ಮಳೆಯಾಗುತ್ತದೆ. ಭೂಮಿಯು ಸಾಧಾರಣ ಕಪ್ಪಾದದ್ದು ಫಲವತ್ತಾಗಿದೆ. ಎಲ್ಲ ಪ್ರಕಾರದ ಬೆಳೆಗಳನ್ನು ಬೆಳೆಯುತ್ತಿದ್ದರೂ ವಿಶೇಷವಾಗಿ ಜೋಳ, ಮೆಣಸಿನ ಕಾಯಿ, ತಂಬಾಕು, ನೀರಾವರಿಯಿಂದ ಕಬ್ಬು, ಬತ್ತ ಬೆಳೆಯುತ್ತಾರೆ. ಇಲ್ಲಿಯ ಮೆಣಸಿನ ಕಾಯಿಗೆ ಮುಂಬೈಯಲ್ಲಿ ವಿಶೇಷ ಬೇಡಿಕೆ. ಸುಮಾರು ನಾಲ್ಕು ಸಾವಿರಕ್ಕೂ ಹೆಚ್ಚು ಎಕರೆ ಭೂಮಿ ಸಾಗುವಳಿಯಿದ್ದು ಸುಮಾರು ಒಂಬತ್ತು ನೂರಕ್ಕೂ ಹೆಚ್ಚಿಗೆ ರೈತರ ಮನೆತನಗಳಿವೆ.

ಬೆಳಗಾವಿ ಜಿಲ್ಲೆಯ ಹುಕ್ಕೇರಿ ತಾಲೂಕಿನ ಪಶ್ಚಿಮ ಭಾಗದಲ್ಲಿದ್ದು, ಈ ಪಟ್ಟಣ ತಾಲೂಕಿನ ಸ್ಥಳಕ್ಕಿಂತಲೂ ಎಲ್ಲದರಲ್ಲಿಯೂ ದೊಡ್ಡದಾಗಿರುತ್ತದೆ. ಇಲ್ಲಿ ಉಪಖಜಾನೆ ಉಪತಹಸೀಲದಾರರ ಕಛೇರಿಗಳಿರುತ್ತವೆ. ಇಲ್ಲಿಂದ ಕರ್ನಾಟಕ ಹಾಗೂ ಹೊರ ರಾಜ್ಯಗಳ ಪ್ರಮುಖ ಪಟ್ಟಣಗಳಿಗೆ ಸಾರಿಗೆ ಸೌಲತ್ತುಗಳಿರುತ್ತವೆ. ಇಲ್ಲಿಯ ಸಕ್ಕರೆ ಯಂತ್ರಷ ರಾಷ್ಟ್ರಮಟ್ಟದಲ್ಲಿ ಹೆಸರುಗಳಿಸಿ ಊರಿಗೆ ಕೀರ್ತಿ ತಂದಿದೆ.

*"ಬಸವಶ್ರೀ" ಬಸವನ ಬೀದಿ, ಸಂಕೇಶ್ವರ, ಬೆಳಗಾವಿ ಜಿಲ್ಲೆ.

ನಗರಾಧಿಪತಿಯಾದ ಶಂಕರಲಿಂಗ ದೇವಾಲಯ ಇರುವುದರಿಂದ ಈ ಊರಿಗೆ ಮೊದಲು ಶಂಕನೂರು ಎಂದೂ ಇಂದು ಗ್ರಾಮ್ಯದಲ್ಲಿ ಸಂಕಸೂರು ಮತ್ತು ಸಂಕೇಶ್ವರವೆಂದು ಕರೆಯ ಹತ್ತಿದರು.

ಪುರಾಣದಲ್ಲಿ ಈ ಊರಿಗೆ ''ಸಾಂಖ್ಯೆಶ್ವರ'' ಎಂದು ಕರೆಯಲಾಗಿದೆ. ಸಾಂಖ್ಯ ಷಡ್ದರ್ಶನದಲ್ಲಿ ಒಂದು ಇಲ್ಲಿಯ ನದಿಗೆ ಕಶ್ಮಲಾಹಾ ನದಿ, ಕಾಶ್ಮ-ಕಾಂತಿ, ಅಮಲಾ-ನಿರ್ಮಳ, ನಿರ್ಮಲವಾದ ಹೊಳಪುಳ್ಳ ಹೊಳೆ, ಇದಕ್ಕೆ ತಿಳಿಹೊಳೆ ಎಂದು ಹೆಸರು. ಏಕೆಂದರೆ ಬೆಳಗಾವಿ ಜಿಲ್ಲೆಯ ನದಿಗಳಿಗೆಲ್ಲ ವಿಶೇಷ ರೀತಿಯ ಹೆಸರುಗಳಿದ್ದಂತೆ ಗೊತ್ತಾಗುತ್ತದೆ. ಕರಿಹೊಳೆ-ಕಪ್ಪುನೀರು ಇರುವದರಿಂದ ಅದನ್ನೆ ''ಕೃಷ್ಣಾ ನದಿ'' ಎಂದರು. ಮತ್ತೊಂದು ನದಿ ''ಹಾಲು ಹೊಳೆ'' ಹಾಲಿನಂತೆ ಬಿಳುಪಾದ ನೀರು ಈ ನದಿಗೆ ''ಧೂಧ ಗಂಗಾನದಿ'' ಯಾಯ್ತು. ಈ ನದಿಯ ದಡದ ಮೇಲೆ ಇರುವ ದೇವತೆಗೆ ''ಹಾಲಸಿದ್ದೇಶ್ವರ'' ಎಂದಿರುವದೇ ಸಾಕ್ಷಿ. ಘಟ್ಟದಲ್ಲಿ ಪ್ರವಹಿಸುವದರಿಂದ ''ಘಟಪ್ರಭೆ''ಯಾಯ್ತು. ಪ್ರಭೆ-ಕ್ರಾಂತಿ ಬಿಳುಪು ಘಟ್ಟದ ಬಿಳಿ ನೀರಿನ ಹೊಳೆ ''ಮಲಪ್ರಭೆ'' ಮಲೆಗಳಲ್ಲಿ ಹರಿದ ಬಿಳಿ ಅಥವಾ ತಿಳಿನೀರಿನ ಹೊಳೆ. ಇದರಂತೆಯೇ ಸಂಕೇಶ್ವರದ ನದಿಯೂ ''ತಿಳಿಹೊಳೆ'' ಶುಭ್ರವಾದ ಹೊಳಪಿನ ನೀರು. ಶುಕ್ಲತೀರ್ಥ ಬಿಳಿಯ ಪವಿತ್ರ ಜಲ ಮತ್ತು 'ಹಿರಣ್ಯ ಕೇಶಿ' ಭಾರತದಲ್ಲಿ ಪ್ರತಿಯೊಂದಕ್ಕೂ ಪುರಾಣದ ತುಣಕನ್ನು ಜೋಡಿಸುವ ರೂಢಿ ಅದರಂತೆ ಈ ನದಿಯು ಹೊರತಾದದ್ದಲ್ಲ.

ಸಾಂಖ್ಯೆಶ್ವರ ಕುರಿತು ಪುರಾಣದಲ್ಲಿ

''ಸಿದ್ದಂ ಸಾಂಖ್ಯೇಶ್ವರಂ ಲಿಂಗಂ ನೈರುತ್ಯ ದಿಶಿ ಸಂಸ್ಥಿತಂ.

ಕಶ್ಮಲಾಹಾನದೀ ಸರ್ವ: ಸರ್ವೋತ್ತಮೊ ಭವೇತ

. . . . . ಪಂಕ್ತಿ ತೀರ್ಥ ಶುಕ್ಲ ತೀರ್ಥಂ ಬ್ರಹ್ಮ ಹತ್ಯಾ ನಿವಾರಕ.

ಕ್ಷೇತ್ರಾಣಾಂ ಉತ್ತಮಂ. ಕ್ಷೇತ್ರಂ ಕಾಶಿಕ್ಷೇತ್ರಾದಾಯ ವಾದಿಮ್

ಯಸ್ಮಿನ್ ಸಾಂಖ್ಯೇಶ್ವರ ಸ್ಥಾನ ಗುರುಭಾಗತ್ಸ ಸದಾಸಿವಾ''

ಹೀಗೆಂದು ಶಂಕರಲಿಂಗ, ಸಂಕೇಶ್ವರ ಹಾಗೂ ನದಿಯ ಕುರಿತು ಮಹಿಮೆಯು ವರ್ಣಿತಗೊಂಡಿದೆ. ಕಾಶಿಕ್ಷೇತ್ರಕ್ಕಿಂತಲೂ ಹೆಚ್ಚಿನ ಪ್ರಾಶಸ್ತ್ಯವು ಸಾಂಖ್ಯೇಶ್ವರಕ್ಕಿದೆ. ಎಂಬುದಾಗಿಯೂ ಮತ್ತು ದಡದಲ್ಲಿ ಹರಿವ ನದಿಯು ''ಕಶ್ಮಲಾಹಾನದಿ''. ಅದರಲ್ಲಿರುವ ತೀರ್ಥವು ಶುಕ್ಲತೀರ್ಥವೆಂದು ಹೇಳಿದ್ದಾರೆ. ಈ ತೀರ್ಥದಲ್ಲಿ ಸ್ನಾನ ಮಾಡಿದರೆ ಬ್ರಾಹ್ಮಣರ ಹತ್ಯಾದೋಷ ನಿವಾರಣೆಯಾಗುತ್ತದೆಂದೂ ಕಾಶಿ ಕ್ಷೇತ್ರಕ್ಕಿಂತಲೂ ಅಧಿಕ ಪವಿತ್ರವಾದ ಕ್ಷೇತ್ರವೆಂದೂ ಉಲ್ಲೇಖಿಸಲಾಗಿದೆ.

**ಇತಿಹಾಸ**

ರಾಷ್ಟ್ರಕೂಟರು ಕ್ರಿ.ಶ.ಎಂಟನೇ ಶತಮಾನದ ಉತ್ತರಾರ್ಧದಲ್ಲಿ ವಾತಾಪಿಯ ಚಾಲುಕ್ಯರನ್ನು ಬದಿಗೊತ್ತಿ ಕರ್ನಾಟಕದ ಮೇಲೆ ಸ್ವಾಮಿತ್ವವನ್ನು ಸ್ಥಾಪಿಸಿದರು. ಇವರ ವಂಶೀಕರೇ 'ರಟ್ಟರು'. ಮುಂದೆ ಇವರು ಸೌಂದತ್ತಿಯನ್ನು ತಮ್ಮ ರಾಜಧಾನಿಯನ್ನಾಗಿ ಮಾಡಿಕೊಂಡು ಈ ನಾಡನ್ನು ಆಳಿದರು.

ಇವರು ಮೊದಲು ರಾಷ್ಟ್ರಕೂಟರಿಗೂ, ನಂತರ ಕಲ್ಯಾಣದ ಚಾಲುಕ್ಯರಿಗೂ ಹಾಗೂ ಕಳಚೂರಿಗಳಿಗೂ ಸಾಮಂತ ರಾಗಿದ್ದರು. ಆಡಳಿತದಲ್ಲಿ ಪಳಗಿದಂತೆಲ್ಲ ಮಹಾಸಾಮಾಂತ ಮಾಂಡಳಿಕ, ಮಹಾಮಾಂಡಳಿಕರಾಗಿ ಸೌಂದತ್ತಿಯಿಂದ ಸ್ವತಂತ್ರರಾಗಿ ಇಂದಿನ ಬೆಳಗಾವಿಯನ್ನು ತಮ್ಮ ರಾಜಧಾನಿ ಯನ್ನಾಗಿಸಿಕೊಂಡು ಒಟ್ಟು ೩೦೦ ವರ್ಷ ಕಾಲ ೯೩೦ ರಿಂದ ೧೨೩೦ರ ವರೆಗೆ ಕೂಹುಂಡಿ ಮಂಡಲವನ್ನು (ಇದಕ್ಕೆ ಕೂಹಂಡಿ ಮೂರು ಸಾಸಿರವೆಂದೂ ಹೆಸರು) ಆಳಿದರು.

ರಟ್ಟರಲ್ಲಿ ಮೂರು ಶಾಖೆಗಳುಂಟು ೧) ಅಮರ್ಥಕಪುರ ರಟ್ಟರು, ೨) ಶಿಲಾಹಾರ ರಟ್ಟರು, ೩) ಸೌಂದತ್ತಿ ರಟ್ಟರು. ಇವರಲ್ಲಿ ಸೌಂದತ್ತಿ ರಟ್ಟರೇ ಪ್ರಮುಖರು. ಮೊದಲು ಶೈವರಿದ್ದವರು ಧರ್ಮಾಂತರ ಹೊಂದಿ ಜೈನ ಧರ್ಮಾವಲಂಬಿಗಳಾದರು. ಇವರ ಭಾಷೆ ಕನ್ನಡವಾಗಿತ್ತು.

ಗರುಡ ಧ್ವಜ ಹಾಗೂ ಸಿಂಧೂರ (ಆನೆ)ಲಾಂಛನ ಉಳ್ಳವರಾಗಿದ್ದ ಇವರು ತಮ್ಮ ಆಡಳಿತಕ್ಕೆ ಅನುಕೂಲ ವಾಗುವಂತೆ ೧೪ ವಿಭಾಗಗಳನ್ನು ಮಾಡಿಕೊಂಡಿದ್ದರು. ಇಂದಿನ ಬೆಳಗಾವಿ ಜಿಲ್ಲೆ ಹಾಗೂ ಮಹಾರಾಷ್ಟ್ರದ ಚಂದಗಡ, ಗಡಿಹಿಂಗ್ಲಜ, ಬಿಜಾಪೂರ ಜಿಲ್ಲೆಯ ಜಮಖಂಡಿ ಹಾಗೂ ಮುಧೋಳ ತಾಲೂಕುಗಳನ್ನು ಒಳಗೊಂಡಿತ್ತು. ಇದರಲ್ಲಿ ನೂಲೆನಾಡು ಒಂದು. ಈ ನೂಲೆನಾಡಿನಲ್ಲಿ ಈ ಸಂಕೇಶ್ವರವು ಒಂದು ಪ್ರಮುಖ ಕೇಂದ್ರವಾಗಿತ್ತು. ರಟ್ಟರ ಆಳ್ವಿಕೆಯಲ್ಲಿ ೧೪ ಮಂದಿ ಪ್ರಮುಖ ರಾಜರಾಗಿದ್ದಂತೆಯೂ ಮತ್ತು ತಮ್ಮ ರಾಜ್ಯದಲ್ಲಿ ಜೈನ, ಶೈವ ವೈಷ್ಣವ ಧರ್ಮಗಳಿಗೆ ಪ್ರೋತ್ಸಾಹ ನೀಡುವದರೊಂದಿಗೆ ಬಸದಿ, ಗುಡಿ, ಮಂದಿರಗಳನ್ನು ಹೇರಳವಾಗಿ ಕಟ್ಟಿದ್ದಾರೆ. ಅವುಗಳಿಗೆ ದಾನದತ್ತಿಗಳನ್ನು

ವಿಪುಲವಾಗಿ ಬಿಟ್ಟಿದ್ದಾರೆ. ೧೧೯೯ರ ಒಂದು ಶಾಸನದ ಪ್ರಕಾರ ಶ್ರೀ ಶಂಕರಲಿಂಗ ದೇವರಿಗೆ ದತ್ತಿ ಬಿಟ್ಟ ವಿಷಯ ಗೊತ್ತಾಗುತ್ತದೆ. ಇಲ್ಲಿಯ ಒಬ್ಬ ಧನಿಕನು ತನಗೆ ಪುತ್ರ ಸಂತಾನವಿಲ್ಲದ್ದಕ್ಕೆ ತನ್ನ ಆಸ್ತಿಯನ್ನೆಲ್ಲ ದೇವರಿಗೆ ದಾನ ಮಾಡಿದ ಶಾಸನವುಂಟು. ನಾಲ್ಕನೇ ಕಾರ್ತವೀರ್ಯನ ತಮ್ಮ ಮಲ್ಲಿಕಾರ್ಜುನನು ಮೂರು ಬಾರಿ ಶ್ರೀಶೈಲ ಮಲ್ಲಿಕಾರ್ಜುನ ದೇವರಿಗೆ ಹೋಗಿ ಬಂದವನಾಗಿದ್ದನು. ಮತ್ತು ಆ ಗಿರಿಯಿಂದ ಪವಿತ್ರಲಿಂಗವನ್ನು ತಂದು ತನ್ನ ರಾಜ್ಯದಲ್ಲಿ ಪ್ರತಿಷ್ಠಾಪಿಸಿದನು. ಇವನ ಧರ್ಮಗುರು ಹಾಗೂ ಶಿಕ್ಷಾಗುರು ಮತ್ತು ಮಂತ್ರಿ ಮುನಿಚಂದ್ರನಿದ್ದಾಗ ಸೇವುಣರ ಸಿಂಘಣನು ಮಲ್ಲಿಕಾರ್ಜುನನ ಮೇಲೆ ದಂಡೆತ್ತಿ ಬಂದು ಸೋಲಿಸಿದನು.

೧೩೨೦ರ ತರುವಾಯ ಮಲ್ಲಿಕ ಕಾಫರನ ದಾಳಿಗೆ ಈ ಭಾಗ ತುತ್ತಾಯ್ತು. ಘಟಪ್ರಭಾ ನದಿಯ ಉತ್ತರ ಭಾಗವು ಮಹಮ್ಮದೀಯರ ಆಳ್ವಿಕೆಗೂ ದಕ್ಷಿಣ ಭಾಗವು ವಿಜಯನಗರದ ರಾಯರ ಆಳ್ವಿಕೆಗೂ ಸೇರಿದ್ದಂತೆ ತಿಳಿದು ಬರುತ್ತದೆ. ಮುಂದೆ ೧೩೨೫ರಲ್ಲಿ ತುಗಲಕ ಮಹಮ್ಮದನ ಸರದಾರನಿಂದ ಆಳಲ್ಪಟ್ಟಿತು. ಅಂದು ಹುಕ್ಕೇರಿಯು (ಹೂವಿನಕೇರಿ) ಮುಖ್ಯ ಸ್ಥಳವಾಗಿತ್ತು. ೧೪೮೮ ರಿಂದ ೧೪೯೫ರ ವರೆಗೆ ಬಹಮನಿ ಮಹಮ್ಮದ ಶಹಾನ ಪ್ರತಿನಿಧಿ ಬಹಾದ್ದೂರ ಗಿಲಾನಿ ಎನ್ನುವವನು ಸಂಕೇಶ್ವರವನ್ನೇ ರಾಜಧಾನಿಯನ್ನಾಗಿಸಿಕೊಂಡು ಆಳುತ್ತಿದ್ದನು. ಇವನು ಸಂಕೇಶ್ವರದ ಮೊದಲನೇ ದೊರೆ ಎನ್ನಬೇಕು. ಅವನ ಕಾಲದಲ್ಲಿಯೇ ಸಂಕೇಶ್ವರಕ್ಕೆ ಕೋಟೆ ನಿರ್ಮಾಣಗೊಂಡಿತು. ಅಂದಿನ ಕೋಟೆಯ ಗೋಡೆಗಳನ್ನು, ಹೆಬ್ಬಾಗಿಲುಗಳನ್ನು ಇಂದಿಗೂ ಕಾಣಬಹುದು. ವಿಜಾಪೂರದ ಎರಡನೇ ಮಹಮ್ಮದ ಬಾದಶಹನು ಸುಮಾರು ೧೬ನೇ ಶತಮಾನದಲ್ಲಿ ಆಳುತ್ತಿದ್ದಾಗ ವಲ್ಲಭಗಡದಲ್ಲಿ (ಹರಗಾಪೂರಗಡ) ವಾಸಿಸುತ್ತಿದ್ದ ಶ್ರೀ ದೇವಗೋಸಾವಿ ವಿದ್ಯಾಶಂಕರ ಭಾರತಿಯವರಿಗೆ ಮೂರು ಊರುಗಳ ಉಂಬಳಿ ಕೊಟ್ಟಿದ್ದಕ್ಕೆ ಶ್ರೀ ದೇವಗೋಸಾವಿ ಸಂಕೇಶ್ವರಕ್ಕೆ ಬಂದರು. ಅಂದಿನಿಂದ ಶಂಕರಲಿಂಗನ ಮಠದಲ್ಲಿ ಶ್ರೀ ಶಂಕರಾಚಾರ್ಯರ ಸಂಪ್ರದಾಯ ಪ್ರಾರಂಭವಾಯ್ತು.

೧೭ ಹಾಗೂ ೧೮ನೇ ಶತಮಾನದಲ್ಲಿ ಮರಾಠಾ ಸರದಾರರು ಇದನ್ನು ಸಂಪೂರ್ಣವಾಗಿ ವಶಪಡಿಸಿಕೊಂಡರು. ೧೭೨೩ರ ಸುಮಾರಿಗೆ ಮುಘಲರ ಪ್ರಭಾವುಂಟಾಯಿತು. ಬಾಜಿರಾವ ಪೇಶ್ವೆ ಹಾಗೂ ನಿಪ್ಪಾಣಿಕರರ ದಾಳಿಗಳೂ ಕೂಡ ಅನೇಕ ಬಾರಿ ನಡೆದವು. ೧೮೧೮ರ ತರುವಾಯ ಪೇಶ್ವೆ ಪತನವಾದ ನಂತರ ಬ್ರಿಟಿಶರು ಸಂಪೂರ್ಣ ಭಾರತವನ್ನು ಆಕ್ರಮಿಸಿದ್ದಾಗ ಈ ಭಾಗವು ಹೊರತಾಗಲಿಲ್ಲ.

ಬ್ರಿಟೀಶರ ಆಳ್ವಿಕೆಗೆ ಇಲ್ಲಿಯು ಜನ ತೆಪ್ಪಗೆ ಕುಳಿತುಕೊಳ್ಳಲಿಲ್ಲ. ಸಂಕೇಶ್ವರದ ಉಕ್ಕಿನ ಮನುಷ್ಯರೆಂದೇ ಹೆಸರಾದ ದಿ। ಅಪ್ಪಣ್ಣಗೌಡರು ಸಂಕೇಶ್ವರ ಹಾಗೂ ಸುತ್ತ ಮುತ್ತಲಿನ ತರುಣ ಉತ್ಸಾಹಿ ಯುವಕರಿಗೆ ಸ್ವಾಭಿಮಾನ ಹಾಗೂ ದೇಶಾಭಿಮಾನದ ಬೀಜಬಿತ್ತಿ ಸ್ವಾತಂತ್ರ್ಯಕ್ಕಾಗಿ ತಮ್ಮ ಪ್ರಾಣ ಕೊಡುವಷ್ಟರ ಮಟ್ಟಿಗೆ ಅಣಿಗೊಳಿಸಿದರು. ಸರಕಾರದ ಯಂತ್ರವು ಸುಗಮವಾಗಿ ಸಾಗಬಾರದೆಂದು ಉಗ್ರ ಚಳವಳಿಯನ್ನು ನಡೆಸಿದರು. ಸರಕಾರಕ್ಕೆ ಸಲ್ಲುವ ಕರಕ್ಕೆ ವಿರೋಧಿಸಿದರು. ಸರಕಾರದ ಕಾಗದ ಪತ್ರಗಳನ್ನು ಸುಡುವದಲ್ಲದೆ ತಂತಿ ಸಂದೇಶದ ಕಂಬಿಗಳನ್ನು ಹಾಳು ಮಾಡಿದರು. ನಗರದ ಪ್ರಮುಖ ಜನಸಂದಣಿಯ ಸ್ಥಳವಾದ ಜಕಾತಿ ಕಟ್ಟೆ (ಗಾಂಧಿ ಚೌಕ)ಯಲ್ಲಿ ತ್ರಿವರ್ಣ ಧ್ವಜ ಹಾರಿಸು ವಾಗ ಬ್ರಿಟೀಶ ಸಿಪಾಯಿಗಳು ಗುಂಡು ಹಾರಿಸಿದರು. ದಿ: ಶಂಕರ ಸಾರವಾಡಿ ಮುಂತಾದವರಿಗೆ ಗುಂಡು ತಾಗಿತು. ಅಲ್ಲದೆ ಸ್ವಾತಂತ್ರ್ಯ ಹೋರಾಟಗಾರರನ್ನೆಲ್ಲ ಬಂಧಿಸಿ ಕಾರಾಗೃಹಕ್ಕೆ ಹಾಕಿದರು.

### ವಾಸ್ತು ಶಿಲ್ಪ

''ಗುಣವಿಲ್ಲದ ಯತಿ ಮಹಿಂ ಕ್ಷಮಾವಿಲ್ಲದ ನೃಪತಿ ಶೀಲವಿಲ್ಲದ ಸತಿ ಲಕ್ಷಣವಿಲ್ಲದ ಕೃತಿ ದೇವಾಲಯ (ಜಿನಾಲಯ) ವಿಲ್ಲದ ನಗರವಿಲ್ಲ ನಾಡೊಳೆ,'' ಎಂದು ರಟ್ಟರ ಕಾಲದ ೨ನೇ ಗುಣವರ್ಮನು ತನ್ನ ಕಾವ್ಯದಲ್ಲಿ ಹೇಳಿದ್ದಾನೆ. ಅದರಂತೆ ಇಲ್ಲಿಯ ನದಿಯ ಶ್ರೀ ಶಂಕರಲಿಂಗ ದೇವಸ್ಥಾನವೊಂದು. ಈ ಮಂದಿರವು ಚಾಲುಕ್ಯ ಶೈಲಿಯಲ್ಲಿ ನಿರ್ಮಿಸಲಾಗಿದೆ. ವಿಶಾಲವಾದ ಮುಖ ಮಂಟಪ ನವರಂಗ, ಸುಕನಾಸಿ ಹಾಗೂ ಗರ್ಭಗುಡಿಯುಳ್ಳದ್ದಾಗಿದೆ. ಇದು ನಕ್ಷತ್ರಾ ಕಾರದ ತಳಹದಿಯ ಮೇಲೆ ರೂಪುಗೊಂಡಿದೆ. ಮುಖ ಮಂಟಪದಲ್ಲಿ ೨೬ ಸುಂದರವಾದ ಕಂಬಗಳು ಆಕರ್ಷಕ ವಾಗಿದೆ. ಒಳಗೆ ಕಕ್ಷಾಸನವಿದೆ. ಸುತ್ತಲೂ ಇಳಿಜಾರಾದ ಛಾವಣಿ ಇರುತ್ತದೆ. ನವರಂಗವು ನಾಲ್ಕು ಕಂಬಗಳ ಮೇಲೆ ನಿಂತಿದ್ದು, ಭುವನೇಶ್ವರಿಯಲ್ಲಿ ಪುರಾಣದ ಮೂರ್ತಿಗಳನ್ನು ಬಿಡಿಸಿದ್ದಾರೆ. ಸುಂದರವಾದ ನಂದಿ ವಿಗ್ರಹವು ಶಿವಲಿಂಗದತ್ತ ಮುಖಮಾಡಿಕೊಂಡು ತದೇಕ ಚಿತ್ತದಿಂದ ನೋಡುತ್ತ ಕುಳಿತಿದೆ.

ವರಂಗಕ್ಕೆ ದಕ್ಷಿಣೋತ್ತರ ಬಾಗಿಲುಗಳಿದ್ದು ಎರಡು ಕಡೆಗೆ ಮಂಟಪಗಳಿದ್ದು ಸುಕನಾಸಿಯು ಸುಂದರವಾಗಿದ್ದು ಗರ್ಭಗುಡಿಯ ಬಾಗಿಲಿಗೆ ಮಕರ ತೋರಣಗಳನ್ನು ಕೆತ್ತಲಾಗಿದೆ. ಗರ್ಭಗುಡಿಯು ವಿಶಾಲವಾಗಿದ್ದು ಅದರಲ್ಲಿ ಬೃಹದಾಕಾರವಾದ ಪುರಾತನ ಲಿಂಗವಿರುತ್ತದೆ.

ಗುಡಿಯ ಸುತ್ತಲೂ ವಿಶಾಲವಾದ ಹಾಸು ಗಲ್ಲಿನ ಪ್ರಾಂಗಣವುಂಟು. ಉತ್ತರಕ್ಕಿರುವ ದ್ವಾರವು ಬಹು ದೊಡ್ಡದಾಗಿದ್ದು ಅದರ ಮೇಲೆ ನಗಾರಿಖಾನೆ ಇರುತ್ತದೆ. ದಕ್ಷಿಣ ದ್ವಾರದಿಂದ ನದಿಗೆ ಹೋಗಲು ಸೋಪಾನಗಳಿವೆ. ಮತ್ತು ಮಗ್ಗುಲಿಗೆ ಗುರುಪರಂಪರೆಯ ಸಮಾಧಿಗಳು ಉಂಟು. ಗುಡಿಯ ದಕ್ಷಿಣಕ್ಕೆ ಪಕ್ಕದಲ್ಲಿ ಶಂಕರಮಠದ ಯಜ್ಞಶಾಲೆ ಕೋಠಡಿಗಳಿರುವ ಪೇಶ್ವೇಕಾಲದ ಕಟ್ಟಡವಿದೆ. ಅಲ್ಲಿ ಸಾವಿರಾರು ಜನರು ಏಕಕಾಲಕ್ಕೆ ಕುಳಿತು ಕೀರ್ತನೆ ಪುರಾಣ, ಪ್ರವಚನಗಳಂತಹ ಧಾರ್ಮಿಕ ಕೆಲಸಗಳನ್ನು ಕೇಳುವಂತಾಗಿದೆ.

ಗರ್ಭಗುಡಿಯ ಮೇಲೆ ಇತ್ತಿತ್ತಲಾಗಿ ಕಟ್ಟಿಸಿದ ಗೋಪುರವಿರುತ್ತದೆ. ಗರ್ಭಗುಡಿಯ ಹಿಂಬದಿಯ ಮಂಟಪದ ಕೆಳಗೆ ಮಾಸಿ ಹೋದ ಕನ್ನಡ ಶಿಲಾಶಾಸನವಿದೆ. ಅದು ಅಸ್ಪಷ್ಟವಾಗಿದೆ. ಈ ಶಂಕರಲಿಂಗನ ಗುಡಿಯನ್ನು ನಾಥ ಸಂಪ್ರದಾಯಕ್ಕೂ ಸೇರಿಸಿದ್ದುಂಟು. ಆದರೆ ಇದು ೧೬ನೇ ಶತಮಾನದಿಂದ ಇಲ್ಲಿಯವರೆಗೆ ಶೃಂಗೇರಿ ಮಠದ ಶಾಖಾಮಠವಾಗಿಯೂ ಅದರ ಆಡಳಿತಕ್ಕೂ ಒಳಪಟ್ಟದ್ದಾಗಿಯೂ ಇರುತ್ತದೆ.

ಕ್ರಿ.ಶ.ಸು.೧೫೭೮ರಲ್ಲಿ ಶೃಂಗೇರಿ ಸ್ವಾಮಿ ಶ್ರೀ ದೇವಗೋಸ್ವಾಮಿ ಉರ್ಫ್ ವಿದ್ಯಾಶಂಕರ ಭಾರತಿಯವರು ಇಲ್ಲಿ ತಮ್ಮ ಶಾಖಾ ಮಠವನ್ನು ಸ್ಥಾಪಿಸಿದಂತೆ ತಿಳಿದು ಬರುತ್ತದೆ. ಶೃಂಗೇರಿ ಪೀಠಾಧಿಪತಿ ದೇವಗೋಸ್ವಾಮಿ ವಿದ್ಯಾಶಂಕರ ಭಾರತಿಯವರು ಕಾಶಿಗೆ ತಮ್ಮ ಸಹಪಾಠಿಗಳೊಂದಿಗೆ ಹೋದಾಗ ಹಿಮಾಲಯಕ್ಕೆ ಹೋಗಿ ಆದಿ ಶಂಕರಾಚಾರ್ಯರ ಗುಹೆಗೆ, ನೋಡಲು ಹೋದರು. ತಮ್ಮ ಸಂಗಡಿಗರಿಗೆ ಹೊರಗೆ ನಿಲ್ಲಲು ಹೇಳಿದರು. ಒಂದು ವೇಳೆ ನಾನು ಬಾರದೇ ಹೋದರೆ ಶೃಂಗೇರಿಗೆ ತಿರುಗಿ ಹೋಗಿ ಬೇರೆ ಸ್ವಾಮಿಯನ್ನು ನಿಯಮಿಸಿರಿ ಎಂದು ಆದೇಶ ನೀಡಿದ್ದರಂತೆ. ಅದರಂತೆ ಒಳಗೆ ಹೋದ ಇವರು ನಿರ್ಗಮಿಸದೆ ಇರುವದನ್ನು ಕಂಡು ಸಂಗಡಿಗರು ಮರಳಿ ಶೃಂಗೇರಿಗೆ ಬಂದು ಅವರ ಪಟ್ಟದ ಶಿಷ್ಯನಾದ ಗುರು ಸ್ವಾಮಿಯನ್ನು ಪಟ್ಟಕ್ಕೆ ಕೂಡ್ರಿಸಿದರು. ಆಮೇಲೆ ಕೆಲವು ದಿವಸದ ನಂತರ ಮರಳಿದ ಶ್ರೀ ದೇವಗೋಸ್ವಾಮಿ ಶೃಂಗೇರಿಗೆ ಹೋಗಿ ತಮಗೆ ಸ್ಥಾನವಿಲ್ಲದ್ದನ್ನು ಕಂಡು ಆಗ ಮೈಸೂರು ಮಹಾರಾಜರು ತುಂಗಾ ಹಾಗೂ ಭದ್ರಾನದಿಗಳ ಸಂಗಮದಲ್ಲಿ "ಕೂಡ್ಲಗಿ" ಎಂಬಲ್ಲಿ ಇವರಿಗಾಗಿಯೇ ಮತ್ತೊಂದು ಹೊಸ ಮಠ ಕಟ್ಟಿಸಿಕೊಟ್ಟರು. ಶ್ರೀ ದೇವಗೋಸ್ವಾಮಿಯವರಿಗೆ ಅಲ್ಲಿ ನಿಲ್ಲಲ್ಲಿಕ್ಕೆ ಮನಸ್ಸಾಗದೇ ಹಿಮಾಲಯಕ್ಕೆ ಪುನಃ ಹೊರಟರು. ದಾರಿಯಲ್ಲಿ "ವಲ್ಲಭ ಗಡ" (ಇಂದಿನ ಹರಗಾಪೂರ ಗಡ) ಕ್ಕೆ ಬಂದು ನೆಲೆಸಿದರು. ಅಲ್ಲಿಯೇ ತಮ್ಮ ಜಪತಪಗಳನ್ನು ಮಾಡಿಕೊಂಡು ಕಾಲ ಕಳೆಯುವಾಗ ಬಿಜಾಪೂರದ ಬಾದಶಹನು ದರ್ಶನಕ್ಕೆ ಬಂದಾಗ ಇವರನ್ನು ಕಂಡು ಸಂತೋಷಗೊಂಡು ಸಂಕೇಶ್ವರ, ಅಂಕಲಿ, ಕಮತನೂರು ಊರುಗಳನ್ನು ಉಂಬಳಿಯಾಗಿ ಕೊಟ್ಟನು. ಆಗ ಇವರ ಕಾರ್ಯ ಕ್ಷೇತ್ರವು ವಿಸ್ತಾರಗೊಂಡು ನದಿ ತಟದಲ್ಲಿರುವ ಶ್ರೀ ಶಂಕರಲಿಂಗನ ಮಠಕ್ಕೆ ಬಂದು ಅದರ ಉಸ್ತುವಾರಿ ಹಾಗೂ ಪೂಜಾ ಕಾರ್ಯವನ್ನು ಕೈಗೊಂಡರು. ಅಂದಿನಿಂದ ಇಲ್ಲಿಯವರೆಗೆ ಶ್ರೀ ಶಂಕರಲಿಂಗನ ಮಠದಲ್ಲಿ ಶ್ರೀ ಶಂಕರಾಚಾರ್ಯರ ಸಂಪ್ರದಾಯ ಪ್ರಾರಂಭವಾಯ್ತು. ಕೂಡ್ಲಿಗಿ ಹಾಗೂ ಶೃಂಗೇರಿಗಳಲ್ಲಿ ಶಿಷ್ಯ ಪರಂಪರೆಯಾದರೆ ಸಂಕೇಶ್ವರದಲ್ಲಿ ಗುರುಪರಂಪರೆ ಪ್ರಾರಂಭವಾಯ್ತು.

೧೫೭೮ ರಲ್ಲಿ ಶ್ರೀ ದೇವಗೋಸ್ವಾಮಿ ಉರ್ಫ ವಿದ್ಯಾ ಶಂಕರ ಭಾರತಿಯಿಂದ ಸ್ಥಾಪನೆಗೊಂಡು ೧೯೫೦ರ ವೇಳೆಗೆ ೨೩ ಜನ ಗುರುಗಳು ಆಗಿಹೋಗಿದ್ದಾರೆ. ೨೪ನೇ ಗುರುಗಳ ಕಾಲಕ್ಕೆ ಇಲ್ಲಿಯ ಗುರುಪರಂಪರೆಯು ಪರಿಸಮಾಪ್ತಿ ಆಯಿತೆನ್ನಬೇಕು. ಮೊದಲಿನ ಗುರುಗಳು ಶೃಂಗೇರಿಯ ತಮ್ಮ ಸ್ಥಾನ ಕಳೆದುಕೊಂಡು ಮಾನಸಿಕವಾಗಿ ನೊಂದು ಕೊಂಡು ಇಲ್ಲಿ ಸ್ಥಾಪಿಸಿದ ಶೃಂಗೇರಿ ಶಾಖಾಮಠವು ೨೩ನೇ ನಂಬರಿನ ಶ್ರೀ ಸಂತಕಲ್ಯಾಣ ಸೇವಕ ಉರ್ಫ ವಿದ್ಯಾ ಶಂಕರ ಭಾರತಿಯವರಿಗೂ ಹಾಗೂ ೨೪ನೇ ನಂಬರಿನ ಶ್ರೀ ಯರಂಡೆ ಮಹಾರಾಜರವರಿಗೂ ಪೀಠದ ಬಗ್ಗೆ ಹುಟ್ಟಿಕೊಂಡ ವ್ಯಾಜ್ಯವು ನ್ಯಾಯಾಲಯದ ಕಟ್ಟೆಯನ್ನು ಏರಿ ತೀರ್ಪು ಹೊರಡುವ ಮುನ್ನವೇ ಶ್ರೀಸಂತಕಲ್ಯಾಣಸೇವಕರು ಪರಂಧಾಮ ವೈದಿದರು. ೨೪ನೇ ನಂಬರಿನ ಶ್ರೀಯರಂಡೆ ಮಹಾರಾಜರವರು ಈಗ ಬಂದಿದ್ದಾರೆ. ೪೧೨ ವರ್ಷ ಅತೀ ವಿಜೃಂಭಣೆಯಿಂದ ಈ ಭಾಗದ ರಾಜರಂತೆ ಆಳಿದ ಈ ಮಠಕ್ಕೆ ಭವ್ಯ ಇತಿಹಾಸವಿದೆ. ಆದರೆ ಕಾಲಚಕ್ರ ಉರುಳಿತು. ಪ್ರಜಾರಾಜ್ಯ ಬಂತು. ಉಳುವವನೇ ಭೂವಡೆಯನಾದ. ಇವರಿಗೆ ಉಂಬಳಿಯಾಗಿ

ಸಿಕ್ಕ ಭೂಮಿಗೆಲ್ಲ ರೈತರೇ ಮಾಲೀಕರಾದರು. ಕುದುರೆ, ಬಾಜಾ ಬಜಂತ್ರಿ, ವಾಲಗ, ಪಲ್ಲಕ್ಕಿ, ಸೈನ್ಯ, ನೃತ್ಯ, ಬಿರುದು ಬಾವಲಿ, ಬೆಳ್ಳಿ ಸಿಂಹಾಸನ, ಛತ್ರ, ಕಹಳೆ ಎಲ್ಲವೂ ತಾವಿದ್ದ ಸ್ಥಾನದಲ್ಲಿಯೇ ಇಂಗಿಕೊಂಡವು.

### ನಾರಾಯಣ ಮಂದಿರ

ಶಂಕರಲಿಂಗನ ಗುಡಿಯ ಭವ್ಯತೆ ಹಾಗೂ ಶ್ರೀಮಂತಿಕೆ ವೈಭವವನ್ನು ಕಂಡವರು ನಾರಾಯಣ ಗುಡಿಯ ಸೌಂದರ್ಯ ಹಾಗೂ ವಾಸ್ತು ಶಿಲ್ಪಗಳನ್ನು ಕಂಡು ಅಚ್ಚರಿಗೊಳ್ಳುತ್ತಾರೆ. ಅದರ ದುರ್ದೆಸೆಗೆ ದುಃಖಿಸುತ್ತಾರೆ. ಶಂಕರಲಿಂಗನ ಮಂದಿರಕ್ಕೆ ಹೋಗುವ ವಿಶಾಲವಾದ ದಕ್ಷಿಣೋತ್ತರವಾಗಿರುವ ದಾರಿಯ ಪಶ್ಚಿಮಕ್ಕೆ ಎತ್ತರದಲ್ಲಿ ಪೂರ್ವಾಭಿಮುಖವಾಗಿ ನಕ್ಷತ್ರಾಕಾರದ ವೇದಿಕೆಯ ಮೇಲೆ ಇದು ಇರುತ್ತದೆ. ಇದು ಕಲ್ಯಾಣ ಚಾಲುಕ್ಯರ ಶೈಲಿಯಲ್ಲಿಯೇ ನಿರ್ಮಿತವಾಗಿದೆ.

ಮುಖಮಂಟಪ, ಶುಕನಾಸಿ, ಗರ್ಭಗೃಹ, ಹೀಗೆ ಪ್ರಮುಖವಾಗಿ ಮೂರು ಭಾಗಗಳಾಗಿವೆ. ಮುಖ ಮಂಟಪದಲ್ಲಿ ಕಲಾತ್ಮಕವಾದ ಕಂಬಗಳಿದ್ದು ದಕ್ಷಿಣೋತ್ತರಕ್ಕೂ ಪಥಗಳಿವೆ. ಭುವನೇಶ್ವರಿಯಲ್ಲಿ ಕಲ್ಲಲ್ಲರಳಿದ ಹೂವಿದ್ದು ಸುತ್ತಲೂ ಪಟ್ಟೆಯಲ್ಲಿ ವೃಷಭಾರೂಢ ಶಿವಪಾರ್ವತಿಯರು ಹಾಗೂ ದಿಕ್ಪಾಲಕರ ಉಬ್ಬು ಚಿತ್ರಗಳಿವೆ ; ವಾದ್ಯ ವೃಂದವೂ ಇದೆ. ಇದು ಅತ್ಯುತ್ತಮ ಶಿಲ್ಪ ಕಲಾಕೃತಿಯಾಗಿದೆ.

ಗರ್ಭಗುಡಿಯ ಹೊರಭಾಗದಲ್ಲಿ ಉಬ್ಬುತಗ್ಗುಗಳಿದ್ದು ಭಿತ್ತಿಯಲ್ಲಿ ಅಪೂರ್ವವಾದ ಮೂರ್ತಿ ಶಿಲ್ಪಗಳಿರುತ್ತವೆ. ದರ್ಪಣ ಸುಂದರಿ ವೈಯ್ಯಾರದಲ್ಲಿ ತನ್ನ ಮುಖನೋಡಿ ಕೊಳ್ಳುತ್ತಿದ್ದರೆ ಮುರಳಿ ಕೃಷ್ಣನು ಪ್ರಣಯ ಭಂಗಿಯಲ್ಲಿ ಮುರಳಿ ನುಡಿಸುತ್ತಲಿದ್ದಾನೆ. ಲಕ್ಷ್ಮೀಸರಸ್ವತಿಯರು ತಮ್ಮ ತಮ್ಮ ಅಭಿನಯಗಳಲ್ಲಿದ್ದಾರೆ. ಅಲ್ಲಿರುವ ಶೃಂಗಾರ ಸ್ತ್ರೀಯರ ನಯನ ಮನೋಹರ ನಾಜೂಕು ಮೂರ್ತಿಗಳು ನಮ್ಮನ್ನು ಬೇಲೂರು ಹಳೇಬೀಡಿನ ಶಿಲ್ಪಗಳನ್ನು ನೆನೆಯುವಂತೆ ಮಾಡುತ್ತವೆ. ಗರ್ಭಗೃಹದ ದಕ್ಷಿಣ ಭಾಗದಲ್ಲಿನ ಅಪೂರ್ವ ಕಲಾಕೃತಿಯು ಅನೇಕ ವಿದ್ವಾಂಸರಿಗೆ ಶಿಲ್ಪಕಾರರಿಗೆ ಲಿಪಿ ಶಾಸ್ತ್ರಜ್ಞರಿಗೆ ಸವಾಲಾಗಿ ನಿಂತಿದೆ. ಅದೇ ''ಪತ್ರ ಲೇಖೆ''ಯನ್ನು ನಾನು ಡಾ॥ ಶ್ರೀನಿವಾಸರಿತ್ತಿಯವರಂತಹ ಅನೇಕ ವಿದ್ವಾಂಸರ ಗಮನಕ್ಕೆ ತಂದಾಗ ಅವಳು ತನ್ನ ಪ್ರಿಯುತಮನಿಗೆ ಪತ್ರ ಬರೆಯುತ್ತಿದ್ದಾಳೆ, ಅದರಲ್ಲಿ ''ಕುಲಹೀನಸ್ಯ ಕರ್ಮಹೀನಸ್ಯನ ಪೂಜಯಂತೆ'' ಎಂಬುದಾಗಿರುವದೆಂದು ಮೂರುವರೆ ಸಾಲುಗಳನ್ನು ಅರ್ಥೈಸಿದ್ದಾರೆ. ಮೂರ್ತಿ ನಿಂತು ಬರೆವ ಭಾವ ಭಂಗಿ ಅವಳ ವೈಯ್ಯಾರ ಶೃಂಗಾರ ಎಲ್ಲವೂ ಮೋಹಕವಾಗಿ ಆಕರ್ಷಣೀಯವಾಗಿದೆ. ಮೂರ್ತಿಯು ಒಳ್ಳೆಯ ಪ್ರಮಾಣ ಬದ್ಧವಾಗಿದ್ದು ಕರ್ನಾಟಕದಲ್ಲಿ ಜಲಸಂಗಿಯದು ಇಂಥ ಎರಡನೇಯ ಅಪರೂಪದ ಕಲಾಕೃತಿ ಎಂದು ವಿದ್ವಾಂಸರು ಅಭಿಪ್ರಾಯ ಪಟ್ಟಿದ್ದಾರೆ.

ಗರ್ಭಗೃಹದ ದ್ವಾರವು ಸುಂದರವಾಗಿದ್ದು ಮಗ್ಗಲಿಗೆ ಜಾಲಂಧ್ರಗಳಿವೆ. ಮಕರತೋರಣ ಶಿಖರಗಳಿಂದಲೂ ಬಾಗಿಲು ಸುಂದರವಾದ ಸುಳಿವಿನಿಂದ ಕಲಾತ್ಮಕ ಕಂಬಗಳಿಂದಲೂ ಆಕರ್ಷಕವಾಗಿದೆ. ಗರ್ಭಗೃಹದಲ್ಲಿ ಪೀಠದ ಮೇಲೆ ಇರುವ ನಾರಾಯಣಮೂರ್ತಿಯಂತೂ ಅತೀ ಸುಂದರವಾಗಿದ್ದು ಪ್ರಮಾಣಬದ್ಧವಾಗಿದೆ. ನಾಲ್ಕು ಕೈಗಳಲ್ಲಿ ಶಂಖ, ಚಕ್ರ, ಗದಾ, ಪದ್ಮಗಳಿವೆ. ಪಾದದಡಿಯಲ್ಲಿ ಸೇವೆಗಾಗಿ ಸಿದ್ಧರಾಗಿದ್ದ ಸೇವಕರು ಕಿಂಕರ ಭಾವದಿಂದ ನಿಂತಿದ್ದಾರೆ. ಪೀಠವು ಪ್ರಭಾವಳಿಯಿಂದಲೂ ಸುಂದರವಾದ ಸುಳುವಿನಿಂದಲೂ ಅಲಂಕೃತವಾಗಿದೆ. ಮಂದಿರದ ಸುತ್ತಲೂ ಇಳಿಜಾರಾದ ಕಲ್ಲಿನ ಚಪ್ಪರ ಇರುತ್ತದೆ. ಅಲ್ಲಲ್ಲಿ ಶಿಥಿಲಗೊಂಡಿದೆ. ಪ್ರಾಚ್ಯವಸ್ತು ಸಂಶೋಧನೆ ಇಲಾಖೆಯವರು ಇದನ್ನು ತಮ್ಮ ವಶಕ್ಕೆ ತೆಗೆದುಕೊಂಡು ಈ ಅಮೂಲ್ಯವಾದ ಶಿಲ್ಪಕಲಾ ಸಂಪತ್ತನ್ನು ರಕ್ಷಿಸುವುದು ಅತ್ಯಗತ್ಯ.

### ಪಾರ್ಶ್ವನಾಥ ಬಸದಿ

ಇದು ಒಂದು ಚಾಲುಕ್ಯ ಶೈಲಿಯ ಹಳೆಯ ಬಸದಿಯಾಗಿದೆ. ಮುಖಮಂಟಪ ನವರಂಗ ಹಾಗೂ ಶುಕನಾಸಿ ಹಾಗೂ ಗರ್ಭಗೃಹ ಇದೆ. ಹೊರಭಿತ್ತಿಯು ಉಬ್ಬು ತಗ್ಗುಗಳಿಂದ ಕೂಡಿದ್ದು ಒಳ್ಳೆಯ ಕಲಾತ್ಮಕವಾಗಿದೆ. ಶಿಥಿಲಗೊಂಡಿದ್ದ ಬಸ್ತಿಯ ಭಾಗವನ್ನು ಜೀರ್ಣೋದ್ಧಾರ ಮಾಡಿದ್ದಾರೆ. ಮುಖ ಮಂಟಪದಲ್ಲಿಯ ಕಂಬಗಳು ಸುಂದರವಾಗಿ ಸುಳಿವುಗಳಿಂದ ಕೂಡಿದ್ದವುಗಳಾಗಿದ್ದು ಬಸದಿಯು ಉತ್ತರಾಭಿಮುಖವಾಗಿದೆ. ನವರಂಗದ ಬಾಗಿಲಿನಲ್ಲಿ ಮಕರತೋರಣ ಕಳಸಗಳಿವೆ. ನವರಂಗದಲ್ಲಿ ಕಲ್ಲಲ್ಲರಳಿದ ಕಮಲವಿರುತ್ತದೆ. ಎರಡು ಜಿನ ಮೂರ್ತಿಗಳಿದ್ದು ಅವುಗಳ ಅಡಿಯಲ್ಲಿ ಕನ್ನಡ ಶಾಸನಗಳಿರುತ್ತವೆ. ಒಂದು ಸ್ಪಷ್ಟ ಓಧಲು ಬರುತ್ತದೆ. ಮತ್ತೊಂದು ಓದಲಿಕ್ಕೆ ಬಾರದಂತೆ ಬಣ್ಣ ಬಳಿದಿದ್ದಾರೆ. ಗರ್ಭಗೃಹದ ದ್ವಾರ ಬಾಗಿಲಲ್ಲಿ ಮಕರಣ ತೋರಣಗಳಿದ್ದು ಚೌಕಟ್ಟಿನಲ್ಲಿ ಜಿವಬಿಂಗಳಿರುತ್ತವೆ.

ಗರ್ಭಗುಡಿಯಲ್ಲಿ ಪೀಠದ ಮೇಲೆ ೩ ಅಡಿ ಎತ್ತರದ ಪಾರ್ಶ್ವನಾಥನ ಮೂರ್ತಿ ಸುಂದರವಾಗಿದೆ. ಬಸದಿಯ ಎದುರಿಗೆ ಇತ್ತಿತ್ತಲಾಗಿ ನಿರ್ಮಿಸಿದ ಮಾನಸ್ತಂಭವಿರುತ್ತದೆ. ಸುತ್ತಲೂ ವಿಶಾಲವಾದ ಹಾಸುಗಲ್ಲಿನ ಪೌಳಿ ಇರುತ್ತದೆ. ರಟ್ಟರ ಕಾಲದಲ್ಲಿ ಇದೊಂದು ಮಹತ್ವದ ವಿಶೇಷ ಸ್ಥಾನವಾಗಿತ್ತು.

ಬನಶಂಕರಿ ಗುಡಿಯು ನಾರಾಯಣ ಗುಡಿಯ ಎದುರಿಗೆ ಇದ್ದು ಗರ್ಭಗುಡಿ ಪುರಾತನವಾಗಿದ್ದು ಮಿಕ್ಕೆಲ್ಲ ನವೀಕರಿಸಿದ್ದಿದೆ. ಶಂಕರಲಿಂಗನ ದೇವರ ಜಾತ್ರೆಯಲ್ಲಿ ತೇರು ಇಲ್ಲಿಯವರೆಗೆ ಬಂದು ನಿಲ್ಲುತ್ತದೆ. ಗರ್ಭಗುಡಿಯಲ್ಲಿ ಬನಶಂಕರಿಯ ಮೂರ್ತಿ ಇದೆ. ಬನದ ಹುಣ್ಣಿಮೆಗೆ ಜಾತ್ರೆಯಾಗುತ್ತದೆ. ಲಕ್ಷ್ಮೀಗುಡಿಯು ಲಕ್ಷ್ಮೀಹಳ್ಳದ ದಡದಲ್ಲಿದ್ದು ಅದು ಹಳೇಸಂಕೇಶ್ವರದ ಪೂರ್ವ ಭಾಗದಲ್ಲಿ ಇರುತ್ತದೆ. ಗರ್ಭಗುಡಿಯ ಮೇಲೆ ಗೋಪುರವಿದ್ದು ಇದನ್ನು ಇತ್ತಿತ್ತಲಾಗಿ ನವೀಕರಿಸಿದ್ದಾರೆ. ಅರವತ್ತು ವರ್ಷಗಳ ಹಿಂದೆ ಜಾತ್ರೆಯಾಗಿತ್ತೆಂದು ಅದರ ನಂತರ ಈಗೊಂದು ದಶಕದ ಹಿಂದೊಮ್ಮೆ ದೊಡ್ಡ ಜಾತ್ರೆಯಾಯ್ತು. ನಂತರ ೧೧ ವರ್ಷಕ್ಕೆ ಜಾತ್ರೆ ಆಯ್ತು.

ಪಂಡರಪುರದ ಸಂಪ್ರದಾಯದ ವಿಠಲ ಮಂದಿರವೊಂದು ಸಂಕೇಶ್ವರದ ಮಧ್ಯಭಾಗದಲ್ಲಿ ನಿರ್ಮಿಸಿದ್ದಾರೆ. ಅದರ ಗೋಪುರ ಒಳಾಂಗಣ ಎಲ್ಲವೂ ಸುಂದರವಾಗಿದೆ. ಇದು ಪೂರ್ವಾಭಿಮುಖವಾಗಿದ್ದು ಈ ಮಂದಿರದ ಗರ್ಭ ಗುಡಿಯಲ್ಲಿ ವೇದಿಕೆಯ ಮೇಲೆ ವಿಠಲ ರುಕುಮಾಬಾಯಿಯರ ೨ ಅಡಿ ನಿಂತ ಮೂರ್ತಿಗಳಿರುತ್ತವೆ. ಅದರ ಎದುರಿಗೆ ೪ ವರ್ಷ ಹಿಂದೆ ಗಣಪತಿಯ ಗುಡಿಯನ್ನು ತಯಾರಿಸಿದ್ದು ಸಂಗಮರಿ ಕಲ್ಲಿನ ಗಣಪತಿಮೂರ್ತಿಯನ್ನು ಕೂಡ್ರಿಸಲಾಗಿದೆ. ಎದುರಿಗೆ ಹೊಳೆವ್ವನ ಗುಡಿಯು ಇರುತ್ತದೆ. ಹಳ್ಳದ ಪಕ್ಕದಲ್ಲಿ ಅಗಸಿಯ ಬಾಗಿಲ ಮುಂದೆ ಕಾಳಿಕಾ ಮಂದಿರವಿದೆ. ಅದು ಪುರಾತನವಿರುತ್ತದೆ.

ಊರಿನ ನಡು ಪೇಟೆಯಲ್ಲಿ ೧೮ನೇ ಶತಮಾನದಲ್ಲಿ ಸ್ಥಾಪಿಸಿದ ಶ್ರೀ ದುರದುಂಡೇಶ್ವರ ಮಠವಿರುತ್ತದೆ. ಇದು ನಿಡಸೋಸಿ ಸಿದ್ಧ ಸಂಸ್ಥಾನ ಮಠದ ಶಾಖೆಯಾಗಿದ್ದು ಶ್ರಾವಣ ಮಾಸದಲ್ಲಿ ಧಾರ್ಮಿಕ ಕಾಯ4ಕ್ರಮ ನಡಂಸುವುದರೊಂದಿಗೆ ಕೊನೆಯ ಶ್ರಾವಣ ರವಿವಾರ ದಾಸೋಹ ಮಾಡುತ್ತಾರೆ. ಅಂದು ನಿಡಸೋಸಿಯ ಮಹಾಸ್ವಾಮಿಗಳನ್ನು ಊರವರೆಲ್ಲ ಕೂಡಿ ವಿಜೃಂಭಣೆಯಿಂದ ಕರೆತಂದು ಪ್ರಸಾದ ಮಾಡಿಸುತ್ತಾರೆ. ಸಂಕೇಶ್ವರದ ಜನಸಂಖ್ಯೆಯ ಮೂರರ ಒಂದು ಭಾಗ ಲಿಂಗಾಯತ ಸಮಾಜವಿರುವದರಿಂದ ಈ ಮಠಕ್ಕೆ ವಿಶೇಷ ಮಹತ್ವ ಬಂದಿದೆ. ಶೃಂಗೇರಿ ಶಾಖಾಮಠಕ್ಕೂ ಶ್ರಿ ದುರದುಂಡೇಶ್ವರ ಮಠಕ್ಕೂ ಅತ್ಯಂತ ಮಧುರ ಬಾಂಧವ್ಯವುಂಟು. ಎರಡೂ ಮಠಾಧೀಶ್ವರರು ಅನ್ಯೋನ್ಯವಾಗಿ ನಡೆದುಕೊಳ್ಳುತ್ತಾರೆ. ಇದು ಸಾಂಸ್ಕೃತಿಕ ಹಾಗೂ ಧಾರ್ಮಿಕ ಕಾರ್ಯಕ್ರಮದ ಕೇಂದ್ರ ಸ್ಥಳವಾಗಿದೆ.

ಊರಲ್ಲಿ ಬಸವನ ಮಂದಿರಗಳು, ಮಾರುತಿ ಮಂದಿರಗಳು, ಮಸೀದಿಗಳು, ಬೀರದೇವರ ಗುಡಿ, ಚರ್ಚು ಹೀಗೆ ಊರಲ್ಲಿ ಅವರವರ ಇಷ್ಟ ದೇವರ ಮಂದಿರಗಳಿರುತ್ತವೆ. ಲಿಂಗಾಯತ, ಮರಾಠಾ, ಜೈನ, ಬ್ರಾಹ್ಮಣ, ಮುಸಲ್ಮಾನರು ಪರಿಶಿಷ್ಟ ಜಾತಿ, ಕ್ರೈಸ್ತ ಮುಂತಾದ ಎಲ್ಲ ರೀತಿಯ ಜನರಿದ್ದಾರೆ. ಈ ಊರಿನ ದಿ॥ಎಂ.ಪಿ.ಪಾಟೀಲರು ಮುಂಬೈ ಕರ್ನಾಟಕದಲ್ಲಿ ಕ್ಯಾಬಿಟ್ ದರ್ಜೆಯ ಸಚಿವರಾಗಿ ಸೇವೆ ಸಲ್ಲಿಸಿದ್ದಾರೆ. ಅದರಂತೆ ದಿ॥ ಶ್ರೀ ಅಪ್ಪಣ್ಣಗೌಡ ಪಾಟೀಲರು ರಾಜಕೀಯದಲ್ಲಿ ಬೆಳ್ಳಿಚುಕ್ಕೆಯಾಗಿದ್ದಾರೆ. ಯಾವ ಪಕ್ಷದವರೇ ಆಗಲಿ ಇವರನ್ನು ಇವರ ಕಾರ್ಯವನ್ನು ಶ್ಲಾಘಿಸದೇ ಇಲ್ಲ.

### ಆಧಾರ ಗ್ರಂಥಗಳು:


1. ಕರ್ನಾಟಕ ಗ್ಯಾಜೆಟಿಯರ್: (ಸಂ.) ಸೂರ್ಯನಾಥ ಕಾಮತ್
2. ರಟ್ಟರ ಕಾಲದ ಸಾಂಸ್ಕೃತಿಕ ಅಧ್ಯಯನ : ಡಾ॥ ಶಿ.ಬಾ.ಪಾಟೀಲ
3. ಕುಹಂಡಿ ನಾಡು
4. ಸಾಂಕೇಶ್ವರ (ಬಿಡಿ ಲೇಖನ): ಆರ್.ಆರ್.ಮುತಾಲಿಕ
5. Inscriptions in Southern Karnataka and Kolhapur State.
6. A History of Karnataka : P.B.Desai.

ಎಂ.ಎಸ್.ಪ್ರಭಾಕರ್ *

# ಮುಣ್ಡ ಪೊಯ್ಸಳ ( ಕ್ರಿ.ಶ.೧೦೦೬-೧೦೨೬ )

ಹೊಯ್ಸಳ ವಂಶದ ಆರಂಭದಲ್ಲಿ ಆಳಿದ ಮೊದಲ ಸಾಮಂತರುಗಳ ಬಗ್ಗೆ ಹಲವಾರು ಭಿನ್ನಾಭಿಪ್ರಾಯಗಳಿವೆ. ಈ ದಿಸೆಯಲ್ಲಿ ಹಿರಿಯ ವಿದ್ವಾಂಸರುಗಳಾದ ವಿಲಿಯಂ ಕೊಯಿಲ್ಹೋ, ಡರೆಟ್, ಶೆಟ್ಟರ್, ಜಾಗೀರ್‌ದಾರ್ ಮುಂತಾದವರ ಅಭಿಪ್ರಾಯಗಳನ್ನು ಅವಶ್ಯಕವಾಗಿ ಗಮನಿಸಬೇಕು. ಶಾಸನಾಧಾರಗಳಿಂದ ನಿರ್ಣಯಿಸಲ್ಪಟ್ಟು, ಈಗ ಲಭ್ಯವಿರುವ ಹೊಯ್ಸಳ ವಂಶದ ನಕಾಶೆಯನ್ನು ಪುನಃ ಪರಿಶೀಲಿಸಲಾಗಿದೆ. ಈ ಪರಿಷ್ಕರಣೆಯಲ್ಲಿ ಮುಣ್ಡಪೊಯ್ಸಳ ನೆಂಬ ಸಾಮಂತನ ಹೆಸರು ಸೇರ್ಪಡೆಯಾಗಿದೆ. ಇವನ ಖಚಿತ ಕಾಲಾವಧಿ (ಕ್ರಿ.ಶ. ೧೦೦೬ ರಿಂದ ೧೦೨೬.) ಮುಣ್ಡಪೊಯ್ಸಳನ ಬಗ್ಗೆ ಲಭ್ಯವಿರುವ ವಿವರಗಳನ್ನು ಗುರ್ತಿಸಿ, ಪರಿಷ್ಕೃತ ಹೊಯ್ಸಳ ವಂಶದ ಯಾದಿಯನ್ನು ಪ್ರಕಟಿಸುವುದು ಪ್ರಸ್ತುತ ಲೇಖನದ ಮೂಲ ಉದ್ದೇಶವೆನಿಸಿದೆ.

ಕಾವ್ಯಮಯವೆನಿಸುವ ಹೊಯ್ಸಳರ ಕೆಲವು ಶಾಸನ ಗಳನ್ನು ಖಂಡಕಾವ್ಯಗಳೆಂದು ಕರೆಯಬಹುದಾಗಿದ್ದು, ಈ ಶಾಸನಗಳು ಹೊಯ್ಸಳ ವಂಶದ ಯಶೋಗಾಥೆಯನ್ನು ಶ್ರೀಮಂತವಾಗಿ ಚಿತ್ರಿಸಿವೆ. ''ಈ ಯದುಕುಲ ವಂಶದೊಳ್ ವಿವಿಧ ವೀರರ ಚಾಗದ ಭೋಗದ ಬಳ್ಳಿನ ಆಖ್ಯಾಯಿಕೆ'' ಎನ್ನುವ ಈ ಆಖ್ಯಾಯಿಕೆಗಳಲ್ಲಿ ಗೆಲುವಿನ ಪ್ರಸ್ತಾಪಗಳಿವೆಯೇ ಹೊರತು ಸೋಲಿನ ಬಗ್ಗೆ ಮಾಹಿತಿಗಳಿಲ್ಲ. ವಿನಯಾದಿತ್ಯ ನಿಗಿಂತ ಮೊದಲಿಗೆ ಮಹಾರಾಜನೆಂದು ಗುರುತಿಸಿಕೊಂಡವನು ನೃಪಕಾಮ. ಈತ ಯುದ್ಧಗಳಲ್ಲಿ ಜಯಾಪಜಯಗಳೆರಡನ್ನು ಅನುಭವಿಸಿದ.

ನೃಪಕಾಮನನ್ನು ಕ್ರಿ.ಶ.೧೦೨೭ರ ಸಕಲೇಶಪುರ ತಾಲ್ಲೂಕಿನ ರಾಜೇಂದ್ರಪುರ ಶಾಸನವು ''ಶ್ರೀ ಮನ್ ನೃಪಕಾಮ ಮಹಾರಾಜ'' ಎಂದು ಅಧಿಕೃತವಾಗಿ ಗುರುತಿಸಿದೆ. ಹೊಯ್ಸಳರು ''ರಾಜ ಮಹಾರಾಜ''ರೆಂದು ಕರೆದುಕೊಂಡದ್ದು ಕಡಿಮೆ. ಚಾಲುಕ್ಯರಂತೆ ಚಕ್ರವರ್ತಿ, ಮಹಾಮಂಡಲೇಶ್ವರ, ಸಾಮಂತ ಮುಂತಾದ ಯಾದಿಯನ್ನು ಅನುಸರಿಸಿದ್ದಾರೆ.

ರಾಜೇಂದ್ರಪುರದ ಮತ್ತೊಂದು ಶಾಸನವು ನೃಪಕಾಮ ಪೊಯ್ಸಳನಿಗೂ ರಾಜೇಂದ್ರ ಚೋಳನಿಗೂ ನಡೆದ ಯುದ್ಧವನ್ನು ಸೂಚ್ಯವಾಗಿ ತಿಳಿಸಿದೆ. ಯುದ್ಧದ ಜಯಾ ಪಜಯಗಳ ಪಸ್ತಾಪವಿಲ್ಲ. ಶಾಸನದ ಕಾಲ ಕ್ರಿ.ಶ.೧೦೨೨-೨೩. ಶಾಸನವು ''ನೃಪಕಾಮ ಪೊಯ್ಸಳ'' ನೆಂದಿದೆಯೇ ಹೊರತು ''ನೃಪಕಾಮ ಮಹಾರಾಜ''ನೆಂದಿಲ್ಲ ಕ್ರಿ.ಶ. ೧೦೨೨ರಲ್ಲಿ ನೃಪಕಾಮನ ಉಲ್ಲೇಖವಿದ್ದರೂ ನೃಪಕಾಮನ ಆಳ್ವಿಕೆಯ ಕಾಲವನ್ನು ಕ್ರಿ.ಶ.೧೦೨೭ ರಿಂದ ೧೦೪೮ರವರೆಗೆ ಸೂಚಿಸಲಾಗಿದೆ. ನೃಪಕಾಮನೇ ಹೊಯ್ಸಳರ ಉದ್ಘೋಷಿತ ಮೊದಲ ಮಹಾರಾಜ, ನೃಪಕಾಮ ಪೊಯ್ಸಳ ಸಾಮಂತನೂ ಹೌದು, ಮಹಾರಾಜನೂ ಹೌದು. ಆತ ಸ್ವತಂತ್ರನಾಗಲು ಹವಣಿಸಿ ತನ್ನದೇ ಆದ ರಾಜ್ಯವನ್ನು ವಿಸ್ತರಿಸಲು ಪ್ರಯತ್ನಿಸಿದ್ದ. ಇವನ ಪೂರ್ವಜರು ಸಾಮಂತರಾಗಿದ್ದು ಇವರುಗಳು ನೆಡಿಸಿದ ಶಾಸನಗಳು ಲಭ್ಯವಿಲ್ಲ. ಇವರನ್ನು ಸೋಲಿಸಿದ ರಾಜ ಮಹಾರಾಜರ ದಿಗ್ವಿಜಯಗಳ ವಿವರಗಳಲ್ಲಿ ಅಥವಾ ಪರೋಕ್ಷ ವಿನಯಕ್ಕಾಗಿ ಇತರರು ನೆಟ್ಟ ವೀರಗಲ್ಲುಗಳ ಉಲ್ಲೇಖಗಳಲ್ಲಿ

* ಡೆಪ್ಯುಟಿ ಮ್ಯಾನೇಜರ್, ಸ್ಟೇಟ್ ಬ್ಯಾಂಕ್ ಆಫ್ ಮೈಸೂರು, ಕೃಷ್ಣಮೂರ್ತಿಪುರಂ ಶಾಖೆ, ಮೈಸೂರು ೫೭೦೦೦೪

ವರನ್ನು ಕೃಚಿತ್ತಾಗಿ ಕಾಣಬೇಕಾಗಿದೆ. ಈ ರೀತಿ ಬೆಳಕಿಗೆ ಂದವನು ಮುಣ್ಣಪೊಯ್ಸಳ.

ಅರಕಲಗೂಡು ತಾಲ್ಲೂಕು ಹೆಣ್ಣೂರು ಗ್ರಾಮದ ಾಸನದ ವಿವರಗಳು ಇಂತಿವೆ:

ಸ್ವಸ್ತಿ ಸಖವರ್ಷ ೯೪೭ ನೆಯ ಕ್ರೋಧನ ಸಂವತ್ಸರದ ಾಘ ಮಾಸದ ಪುಣ್ಣಮೆಯನ್ದು ಶ್ರೀ ರಾಜೇಂದ್ರ ಚೋಟಿ ಂಗಾಳ್ವಂ ಮುಣ್ಡ ಪೊಯ್ಸಳನ ಮೇಲೆ ನಡೆದು ಮಣ್ಣೆಯ ಾಳಗಮಂ ಗೆಲ್ದು ಇರ್ಗ್ಗಡಲ ಕೋಟೆಯಂ ಕೊಳ್ವನ್ದು ೆನ್ನಲೂರ ಕೊಂಗಳಾಚಾರಿಯ ಮಗಂಜಾಕವ ಸತ್ತಂ ಅವನತಾಯ್ವನ್ದಕಬ್ಬೆ ಕಲ್ಲ ನಿಜೆಸಿದಳ್.

ಶಾಸನದಲ್ಲಿ ಖಚಿತವಾದ ತೇದಿ ಇದೆ. ಕ್ರಿ.ಶ.೧೦೨೬ರ ೆಬ್ರವರಿ ೪ ರಾಜೇಂದ್ರ ಜೋಳಕೊಂಗಾಳ್ವನಿಗೂ ಮುಣ್ಡ ಪೊಯ್ಸಳನಿಗೂ ಮಣ್ಣೆಯಲ್ಲಿ ಯುದ್ಧನಡೆದು ಕೊಂಗಾಳ್ವನು ೆದ್ದು ಇರ್ಗ್ಗಡಲ ಕೋಟೆಯನ್ನು ವಶಪಡಿಸಿಕೊಂಡ. ಈ ಯುದ್ಧದಲ್ಲಿ ಸತ್ತ ಪೆಣ್ಣಲೂರ (ಹೆಣ್ಣೂರ) ಕೊಂಗಳಾ ಚಾರಿಯ ಮಗ ಜಾಕವನ ನೆನಪಿಗಾಗಿ ಅವನ ತಾಯಿ ವೆಂದಕಬ್ಬೆ ವೀರಗಲ್ಲು ಹಾಕಿಸಿದ್ದಾಳೆ.

ಕ್ರಿ.ಶ.೧೦೨೨-೨೩ರಲ್ಲಿ ರಾಜೇಂದ್ರ ಪೃಥ್ವೀ ಮಹಾರಾಜನಿಗೂ ನೃಪಕಾಮನಿಗೂ ಯುದ್ಧನಡೆದಿತ್ತು. ಈಗ ಕ್ರಿ.ಶ.೧೦೨೬ ರಲ್ಲಿ ರಾಜೇಂದ್ರ ಚೋಳ ಕೊಂಗಾಳ್ವನಿಗೂ ಮುಣ್ಡ ಪೊಯ್ಸಳನಿಗೂ ಯುದ್ಧನಡೆದಿದೆ.

ಕ್ರಿ.ಶ. ೧೦೨೨ ರಿಂದ ೧೦೨೬ರವರೆಗೆ ಮುಣ್ಡಪೊಯ್ಸಳ ಮತ್ತು ನೃಪಕಾಮ ಇಬ್ಬರನ್ನೂ ಗುರುತಿಸಬಹುದು. ಇವರಿಬ್ಬರಿಗೂ ತಂದೆ ಮಕ್ಕಳ ಸಂಬಂಧವೇ? ಖಚಿತವಿಲ್ಲ. ಕೇವಲ ಊಹೆಮಾತ್ರ. ಈ ಊಹೆಯೊಂದಿಗೆ ನೃಪಕಾಮನ ಆಳ್ವಿಕೆಯನ್ನು ಕ್ರಿ.ಶ. ೧೦೨೭ ರಿಂದ ಸೂಚಿಸಲಾಗಿದೆ. ಮುಣ್ಡ ಪೊಯ್ಸಳನಿಗೆ ಇರ್ಗ್ಗಡಲ ಕೋಟೆಯೂ ಸೇರಿತ್ತು. ಇರ್ಗ್ಗಡಲ ಕೋಟೆಯಾವುದು? ಆರಂಭದಲ್ಲಿ ಹೊಯ್ಸಳರು ಇಂದಿನ ಹಾಸನ ಮತ್ತು ಚಿಕ್ಕಮಗಳೂರು ಜಿಲ್ಲೆಗಳ ವ್ಯಾಪ್ತಿ ಯಲ್ಲಿದ್ದರೆಂದು ಸ್ಥೂಲವಾಗಿ ತಿಳಿಯಬಹುದು. ಈ ಜಿಲ್ಲೆಗಳಲ್ಲಿ ಅಥವಾ ಆಸುಪಾಸಿನಲ್ಲಿ ಇರ್ಗ್ಗಡಲ ಕೋಟೆ ಇರಲು ಸಾಧ್ಯ. ಮಣ್ಣೆಯೂ ಈ ಪರಿಸರದಲ್ಲಿ ಇದ್ದಿರ ಬಹುದೆಂದು ವಿದ್ವಾಂಸರು ಊಹಿಸುತ್ತಾರೆ.

ಮುಣ್ಡ(ಪೊಯ್ಸಳ)ನ ಹೆಸರು ಹೇಳುವ ಮತ್ತೊಂದು ಶಾಸನ ತಿ.ನರಸೀಪುರದ ಕಲಿಯೂರ ಎಳಗನ ಶಾಸನ. ಈ ಶಾಸನದಲ್ಲಿಯೂ ಖಚಿತವಾದ ತೇದಿ ಇದೆ; ಕ್ರಿ.ಶ.೧೦೦೬ ಮಾರ್ಚ್ ೨೨ ಶಕವರ್ಷ ೯೨೯ನೆಯ ಪರಾಭವ ಸಂವತ್ಸರದ ಚೈತ್ರ ಬಹುಳ ಪಂಚಮಿ

ಶ್ರೀಮತು ರಾಜಾರಾಜದೇವ ಪಾದ ಪಂಕಜ ಭ್ರಮರ ಜಿತಂಪು ಸಮರ ಕುಲಮಾಣಿಕ್ಕ ಕೊತ್ತ ಮಂಡಲನಾಥ ಶ್ರೀಮದಪ್ರಮೇಯನ ಜಯಸ್ತಂಭಂ

ಎಳಗನಿಗೆ ಸಮರ ಕುಲ ಮಾಣಿಕ್ಯ, ಕೊತ್ತ ಮಂಡಲನಾಥ, ಅಪ್ರಮೇಯ ಎಂಬ ಬಿರುದುಗಳಿದ್ದವು. ಈತ ಕಲಿಯೂರಲ್ಲಿ ಜಯಸ್ತಂಭವನ್ನು ನೆಡೆಸಿದ್ದಾನೆ. ಈ ಜಯಸ್ತಂಭವು ಈತನ ಸಮರಾಟೋಪಗಳನ್ನು ವರ್ಣಿಸುತ್ತಾ "ಕಲವೂರ ಮಾಳದೊಳ್ ಪೆಂಡಿರನಿಕ್ಕಿ ಓಡಿದವರ"ನ್ನು ಹೆಸರಿಸಿದೆ. ಅವರಲ್ಲಿ "ಗಣ್ಡರ ಗಣ್ಡ ಮುಣ್ಡ"ನೂ ಒಬ್ಬ.

ಗಣ್ಡರ ಗಣ್ಡ ಮುಣ್ಡ ಜಗಕಾರಿಗಬೀರುಗ ನಾಗವರ್ಮಮಾ
ಗುಣ್ಡರ ಕಿಲ್ಲಮುತ್ತರ ನೊಳಂಬರ ಚನ್ದಿಗ ಪೊನ್ನ ನನ್ನಿಗಂ
ಮುಣ್ಡರಿ ವರ್ಮರಾಜನರಗಂ ಸಿರಿಗಂ ಕಲವೂರ ಮಾಳದೊ
ಳ್ಪೆಣ್ಡಿರನಿಕ್ಕಿ ಯೋಡಿದವರಕ್ಕುಲಮಾಣಿಕಾಜಿ ರಂಗದೊಳ್

ಗಣ್ಡರ ಗಣ್ಡ ಮುಣ್ಡನೇ ಮುಣ್ಡ ಪೊಯ್ಸಳ, ಎಳಗನನ್ನುಎದುರಿಸಿದ ಶತ್ರು ಪಾಳೆಯದಲ್ಲಿ ಪೊಯ್ಸಳರೇ ಮಂಚೂಣಿ ಯಲ್ಲಿದ್ದವರು. ಅವನೊಂದಿಗೆ ಬೀರುಗ, ನಾಗವರ್ಮ, ಕಿಲ್ಲ ಮುತ್ತರ, ಚಂದಿಗ, ಪೊನ್ನ, ನನ್ನಿಗ, ನರಹ, ಸಿರಿಗ ಮುಂತಾದವರಿದ್ದಾರೆ. ನೊಳಂಬರು ಮೊದಲಿನಿಂದಲೂ ಸುಪ್ರಸಿದ್ಧರಾದವರು. ನೊಳಂಬರಚನ್ದಿಗ ಯಾರೆನ್ನುವುದು ಅಸ್ಪಷ್ಟ. ಮಾಗುಣ್ಡರಕಿಲ್ಲ ಮುತ್ತರ ಮತ್ತೊಬ್ಬ ಸಾಮಂತ. ಮಾಗುಣ್ಡರ ಸ್ಥಳನಾಮವೆನ್ನುವುದು ಖಚಿತ. ಧಾರವಾಡ ಜಿಲ್ಲೆಯ ಹಿರೇಮಾಗನೂರ ಪ್ರಾಚೀನ ಹೆಸರು 'ಮಾಗುಮ್ದರ' ಎಂದು ಕ್ರಿ.ಶ.೯೧೫ರ ಇಂದ್ರವಲ್ಲಭನ ಶಾಸನದಲ್ಲಿ ದಾಖಲಾಗಿರುವುದನ್ನು ಗಮನಿಸಬಹುದು. ಕಿಲ್ಲ ಮುತ್ತರ ಎನ್ನುವುದು ವ್ಯಕ್ತಿ ನಾಮ. ಪಟ್ಟದಕಲ್ಲಿನ ಪಾಪನಾಥ ದೇವಾಲಯದ ಶಾಸನದಲ್ಲಿ 'ಶಿಲೆಮುದ್ದರ' ಎಂದು ವ್ಯಕ್ತಿನಾಮವಿದೆ. ಕಿಲ್ಲಮತ್ತರ ಇಂತಹುದೇ ಒಂದು ಹೆಸರು.

" ಆಂ ಎನೆ ಸಂದ ಪೊಯ್ಸಳನದೊರ್ವ್ವನೆ ಗಣ್ಡರ ಭೀಮ" "ಬಲಯುತನಪ್ಪ ಪೊಯ್ಸಳನನಾಹವದೊಳ್ ಅಟ್ಟೆ", "ಪೊಯ್ಸಳ ನೆಂಬ ಅನನ್ತ ಬಳರಂ" ಇತ್ಯಾದಿ

ಶಾಸನದ ಉಲ್ಲೇಖಗಳು ಎಳಗನೊಂದಿಗೆ ಹೋರಾಡಿದ ಹೊಯ್ಸಳರನ್ನು ಪರೋಕ್ಷವಾಗಿ ಬಣ್ಣಿಸಿದೆ.

''ಮಲೆಪರ ಮಲ್ಲ ಜೊತ್ತತಳಿ ಗೋಯಿಗ ಬೂತುಗ ಸೇನವಾರ ಪೊಯ್ಸಳ ಬೆಳ್ಗುಪ್ಪನೀಚೋಜಿಗ ಸಂಚಿಗ ಕಕ್ಕಗ ಸಿನ್ನಿವರ ಮಾಗಲಯೆಜಿಗಂಗಮರ್ದಸ ಬರಮ್ಮಣನುಂ ಮೊದಲಾಗೆ ಕೊತ್ತಮುಂದೆಯಾಣ್ಮನಿಗೋಡೆ ಸತ್ತವರ ಲೆಖ್ಖಮನಾರ ಜೆವರ್ದ್ಧರಿತ್ರಿಯೊಳು''

ಗೋಯಿಗ, ಬೂತುಗ, ಸೇನವಾರ, ಪೊಯ್ಸಳ, ಚೋಟಿಗ, ಸಂಚಿಗ, ಕಕ್ಕಗ, ಮುಂತಾದವರು ಯುದ್ಧದಲ್ಲಿ ಹತರಾದರು. ಎಳೆಗನೊಂದಿಗೆ ಹೋರಾಡಿದವರಲ್ಲಿ ಒಬ್ಬ ಹೊಯ್ಸಳ ಸತ್ತ ಮತ್ತೊಬ್ಬ ಓಡಿಹೋದ. ಸತ್ತವನಾರೆಂದು ತಿಳಿಯದು. ಓಡಿಹೋದವನು ಮುಣ್ಣ(ಪೊಯ್ಸಳ). ಮುಣ್ಣನನ್ನು ಮುಣ್ಣಪೊಯ್ಸಳನೆಂದು ಗುರುತಿಸಲು ಸಾಧ್ಯವಾದದ್ದು ಹೆಣ್ಣೂರು ಶಾಸನದಿಂದ. ಮುಣ್ಣ ಪೊಯ್ಸಳನಿಗಿಂತ ಹಿಂದಿನ ಹೊಯ್ಸಳರ ಉಲ್ಲೇಖಗಳಿಗಾಗಿ ಮೊದಲು ಬೇಲೂರು ತಾಲ್ಲೂಕಿನ ತೂಳಲು ಶಾಸನವನ್ನು ಗಮನಿಸಬೇಕು.

ಸ್ವಸ್ತಿ ಶ್ರೀಮತ್ ಉತ್ತಮ

ಬಿಸಗೆಯ ಆರನೆಯ ಅಂಗಿರಸ ಸಂವ

ತ್ಸರದೊಳ್ ಶ್ರೀಮತ್ ಚೆಂಗನಾಡ ಗೋವಂ

ಹೊಶ್ಮಳ ಮಾರೆಯ ಸೊಸೆವುರ ಆಳುತ್ತಿರೆ.

ಶಾಸನದ ಲಿಪಿಯನ್ನಾಧರಿಸಿ ವಿದ್ವಾಂಸರು ಶಾಸನವನ್ನು ಕ್ರಿ.ಶ. ಹತ್ತನೆಯ ಶತಮಾನದ್ದೆಂದೂ ಆಂಗೀರಸ ಸಂವತ್ಸರವು ಕ್ರಿ.ಶ.೯೭೨ಕ್ಕೆ ಹೊಂದುವುದೆಂದು ಪರಿಗಣಿಸಿದ್ದಾರೆ. ಶಾಸನದ ಪ್ರಕಾರ ಹೊಯ್ಸಳ ಮಾರೆಯ ಸೊಸೆವೂರನ್ನು ಹತ್ತನೆಯ ಶತಮಾನದ ಕೊನೆಯಲ್ಲಿ ಆಳುತ್ತಿದ್ದ.

ನೃಪಕಾಮ ಮತ್ತು ವಿನಯಾದಿತ್ಯ ಇವರ ಕಾಲದಲ್ಲಿ ಹೊಯ್ಸಳರು ಶಶಕಪುರದಲ್ಲಿದ್ದರೆಂದು ಖಚಿತವಾಗಿ ತಿಳಿದಿತ್ತು. ಇಗ್ಗ್ರಡಲಕೋಟೆ ಮುಣ್ಣನ ಕಾಲದಲ್ಲಿ ಹೊಯ್ಸಳರ ಅಧೀನದಲ್ಲಿತ್ತು. ಈಗ ಹೊಯ್ಸಳ ಮಾರೆಯನ ಕಾಲದಲ್ಲಿಯೂ ಶಶಕ ಪುರ ಅಥವಾ ಸೊಸೆವೂರಲ್ಲಿ ಇದ್ದರು ಎಂದು ಖಚಿತವಾಗಿದೆ. ಮಾರೆಯನ ಬಗ್ಗೆ ಹೆಚ್ಚಿನ ಮಾಹಿತಿ ಲಭ್ಯವಿಲ್ಲ.

ಕ್ರಿ.ಶ.೯೭೮ರಲ್ಲಿ ರಚನೆಗೊಂಡ ಚಾವುಂಡರಾಯ ಪುರಾಣದಲ್ಲಿ ನೃಪಕಾಮನಕೋಟೆಯ ಉಲ್ಲೆಖವಿದೆ ಹೊಯ್ಸಳನೆಂಬ ಬಿರುದನನ್ನು ವಿದ್ವಾಂಸರು ಗಮನಿಸಿದ್ದಾರೆ

''ವೈರಿಕುಳಕಾಳದಂಡಂ ನೃಪಕಾಮನ ಕೋಟೆಯೊಳ ರಾಜನೆಂಬಧಟನುಮಂ ಬಾಸನೆಂಬ ಕಚೆಯನುಮಂ ಸಿವರನೆಂಬ ಜಟ್ಟಿಗನುಂ ಕೂಹಾಂಕನೆಂಬಕಟ್ಟುಗೊಂಡನುಮಂ ಪೊಯಿಸಳಮೆಂಬ ಬಿರುದನುಮಂ ಪೃಥುವನೆಂಬ ಬಿರುದುನುಮಂ ಬಿಹನೆಂಬ ಪೂಣಿಗನುಮಂ ಚಿಕ್ಕಗನುಮೆಂಬ ಪೂರ್ಗಾಯಿಗಳುಮಂ ಪೆಱರು ಕಲಿಗಳುಮಂ ಬಲ್ಲಾಳ್ಗಳುಮಮೊಂದೆ ಮೈಯೊಳ್ ಪೆಣೆದಿಚಿದುಗೆಲ್ದ ಭುಜವಿಕ್ರಮಮಂ''

ನೃಪಕಾಮ ಪೊಯ್ಸಳನ ಕಾಲವನ್ನು ಕ್ರಿ.ಶ.೧೦೨೭ ರಿಂದ ಈ ಹಿಂದೆಯೇ ಗುರುತಿಸಲಾಗಿದೆ. ಚಾವುಂಡರಾಯ ಪುರಾಣದ ರಚನೆಗೆ ಮುನ್ನ ಹೊಯ್ಸಳರಲ್ಲಿ ಮತ್ತೊಬ್ಬ ನೃಪಕಾಮ ನಿರಲು ಸಾಧ್ಯವಿದೆ. ಚಾವುಂಡರಾಯಪುರಾಣದ ನೃಪಕಾಮನನ್ನು ಕ್ರಿ.ಶ.೯೭೮ಕ್ಕೆ ಹಿಂದೆ ಸೂಚಿಸಬೇಕು. ಇವನು ಹೊಯ್ಸಳ ಮಾರೆಯನ ನಂತರ ಅಥವಾ ಮುಂಚೆ ಸೂಚಿಸಬೇಕು. ಮಾರೆಯನಿಗಿಂತ ಹಿಂದಕ್ಕೆ ಗುರುತಿಸುವುದು ಸಮಂಜಸವೆನಿಸುತ್ತದೆ. ಆದರೆ ಇದಮಿತ್ಥಂ ಎಂದು ವಾದವಿವಾದಗಳನ್ನು ಮಂಡಿಸಲು ಸಾಧ್ಯವಿಲ್ಲ. ಕೇವಲ ಊಹೆಯಷ್ಟೆ. ಇವನನ್ನು ಒಂದನೆಯ ನೃಪಕಾಮ ಎಂದು ಹೆಸರಿಸಬಹುದು.

ಚಿಕ್ಕಮಗಳೂರು ತಾಲ್ಲೂಕು ಅಂಬಳೆ ಹೋಬಳಿ ಮರಳೆ ಹೊಸಹಳ್ಳಿ ಮತ್ತು ಮರಳೆಯಲ್ಲಿ ಕ್ರಿ.ಶ. ಹತ್ತನೆಯ ಶತಮಾನದ ಮಧ್ಯ ಭಾಗಕ್ಕೆ ಸೇರಿದ ಒಂದೊಂದು ಶಾಸನಗಳಿವೆ. ಇವೆರಡೂ ಶಾಸನಗಳನ್ನು ಹೊಯ್ಸಳರ ಶಾಸನಗಳೆಂದು ಗುರುತಿಸಲಾಗಿದೆ. ಈ ಶಾಸನಗಳಲ್ಲಿ ಅರಕೆಲ್ಲನ ಹೆಸರಿದೆ. ಮರಳೆಹೊಸಹಳ್ಳಿಯ ಶಾಸನವು ಅರಕೆಲ್ಲ, ಅರಕೆಲ್ಲನ ಮಗ, ಮೊಮ್ಮಗ ಮಾರುಗ ಇವರುಗಳನ್ನು ಸೂಚಿಸಿದರೆ, ಮರಳೆಯ ಶಾಸನವು ಕೇವಲ ಅರಕೆಲ್ಲನನ್ನು ಹೆಸರಿಸಿದೆ. ಮರಳೆ ಹೊಸಹಳ್ಳಿಯ ಶಾಸನವು ಯುದ್ಧದಲ್ಲಿ ಸತ್ತ ಯೋಧನ ಹೆಸರಿನಲ್ಲಿ ನೀಡಿದ ದಾನ ಶಾಸನದ ದಾಖಲೆಯಾಗಿದೆ.

ಮಾನಜ್ಗೆಜೆಯ ಕಲ್ನಟ್ಟು ಮಜ್ಗಳ

ಸ್ವಸ್ತಿ ಶ್ರೀ ಸಾಮನ್ತ ರಾಮನ್ನಣ್ಣೆಕನ್ದ

ಪ್ರ್ವ ಸಿರಿವುರಮಾ ಅಣ್ಣೆಗನೊಳ್ಕಾದಿ

ಸತ್ತ ಅರಕೆಲ್ಲನ ಮಗ ಅವನ ಮ
ಮ ಪೊಯ್ಸಳಮಾರುಗಂ ಅವರ ಪಗೆಗೆ
ಅರಕೆಲ್ಲನ ಬೆಸದೊ ಮಹಾರಾಜನೊಳ್ಕಾದಿ
ಸತ್ತ ಕೆಲ್ಲಗಾವುಣ್ಡ ಚಾಮೊನ್ತ ಚೂಡಾಮಣಿ
ಚೆವಕೊಳ್ಗಣ್ಡ ಸಮರೈಕೆ ಪಾತ್ರ
ಮಾರ್ಬ್ಬಲ ರಾಮ ಶ್ರೀಮತ್ ಅ
ರಕೆಲ್ಲ ಕೊಟ್ಟ ಕೆಲ್ಲಗವುಣ್ಡ
ಜ್ಗೆ

ಶಾಸನದಲ್ಲಿರುವ ಮಾಹಿತಿ ಈ ರೀತಿಯದು: ೧) ಸಾಮಂತ ರಾಮನ್ನಣ್ಣೆ ಕಂದರ್ಪ ಸಿರಿವುರದ ಯುದ್ಧದಲ್ಲಿ ಅಣ್ಣಿಗನೊಡನೆ ಕಾದು ಮಡಿದ, ೨) ಅರಕೆಲ್ಲನ ಆಜ್ಞೆಯ ಮೇರೆಗೆ, ಅರಕೆಲ್ಲನ ಮಗ, ಮೊಮ್ಮ(ಗ) ಪೊಯ್ಸಳ ಮಾರುಗ ಮಹಾರಾಜ ನೊಡನೆ ಕಾದು ಸತ್ತರು, ೩) ಅವರೊಂದಿಗೆ ಕೆಲ್ಲಗಾವುಂಡನೂ ಸತ್ತ. ೪) ಸಾಮಂತ ಅರಕೆಲ್ಲ ಕೆಲ್ಲಗಾವುಂಡನಿಗೆ (ಅವನ ಸಂಬಂಧಿಗಳಿಗೆ) ಮಾನಂಗೆರೆಯನ್ನು ದಾನವಾಗಿ ನೀಡಿ ಕಲ್ಲು ಹಾಕಿಸಿದ. ಅರಕೆಲ್ಲನಿಗೆ ಸಾಮಂತ ಚೂಡಾಮಣಿ, ಚೆವಕೊಳ್ಗಣ್ಡ, ಸಮರೈಕ ಪಾತ್ರ, ಮಾರ್ಬಲ ರಾಮ ಇತ್ಯಾದಿ ಬಿರುದುಗಳಿವೆ. ವಿದ್ವಾಂಸರು ರಾಮನ್ನಣ್ಣೆಕಂದರ್ಪನನ್ನು ಅರಕೆಲ್ಲನ ಮಗನೆಂದು ಗುರುತಿಸಿದ್ದಾರೆ. ಆದರೆ ಸ್ಪಷ್ಟವಿಲ್ಲ. ಅವನೂ ಯುದ್ಧದಲ್ಲಿ ಸತ್ತಿದ್ದಾನೆ. ಶಾಸನದ ಅಣ್ಣಿಗನನ್ನು ಬೀರನೊಳಂಬ ನೆಂದು ವಿದ್ವಾಂಸರುಗಳು ಗುರುತಿಸಿದ್ದಾರೆ. ಇದರಿಂದ ಶಾಸನದ ಕಾಲವು ಕ್ರಿ.ಶ.೯೫೦. ಅರಕೆಲ್ಲನಿಗೆ ಚೆವಗೊಳ್ಗಣ್ಡ ಎಂದೂ ಹೊಯ್ಸಳ ಮಾರೆಯನಿಗೆ ಚೆಂಗನಾಡ ಗೋವ ಎಂದೂ ಬಿರುದುಗಳಿವೆ. ಆರಂಭದಲ್ಲಿ ಹೊಯ್ಸಳರು ಚೆಂಗನಾಡವರಲ್ಲಿ ಹಗೆತನ ಸಾಧಿಸಿ ಅವರನ್ನು ಸೋಲಿಸಿ ಚೆಂಗನಾಡನ್ನು ವಶಪಡಿಸಿ ಕೊಂಡಿರ ಬೇಕು ಪೊಯ್ಸಳ ಮಾರುಗನಿಂದ ಮುಣ್ಡಪೊಯ್ಸಳನವರೆಗೆ, ಅಂದರೆ ಕ್ರಿ.ಶ.೯೫೦ ರಿಂದ ಕ್ರಿ.ಶ. ೧೦೦೬ರ ಮಧ್ಯದಲ್ಲಿ ಒಂದನೆಯ ನೃಪಕಾಮ ಮತ್ತು ಹೊಯ್ಸಳ ಮಾರುಗ ಇಬ್ಬರನ್ನು ಸೂಚಿಸಲಾಗಿದೆ. ಕ್ರಿ.ಶ.೯೫೦ರಲ್ಲಿ ಅರಕೆಲ್ಲನ ಮಗ, ಮೊಮ್ಮಗ ಮಾರುಗ ಸತ್ತನಂತರ ಹೊಯ್ಸಳರು ಪುನ: ಚೇತರಿಸಿಕೊಳ್ಳಲು, ವಂಶದ ಕುಡಿಬೆಳೆಯಲು, ಸಾಕಷ್ಟು ಕಾಲ ಹಿಡಿದಿದೆ. ಈ ಅವಧಿಯಲ್ಲಿ ಮತ್ತೊಬ್ಬ ಸಾಮಂತನಿರಬಹುದು. ಈ ಅವಧಿ ಹೊಯ್ಸಳರ ಕಾಲದಲ್ಲಿ ಒಂದು ಕಪ್ಪು ಚುಕ್ಕೆ. ಪ್ರವರ್ಧಮಾನಕ್ಕೆ ಬರುತ್ತಿದ್ದ ಕಾಲದಲ್ಲಿ ಕೊಂಚ ಎಡವಿರಬಹುದು. ಸಾಧಾರಗಳಿಂದ ನಿರೂಪಿಸುವ ಅವಕಾಶ ಮುಂದಿನ ಶೋಧನಗಳಿಂದ ಸಾಧ್ಯವಾಗಬಹುದು. ಪ್ರಸ್ತುತ ಗಮನಿಸಿದ ಶಾಸನಗಳೆಲ್ಲವನ್ನೂ ಹಿರಿಯ ವಿದ್ವಾಂಸರು ಗಮನಿಸಿದ್ದಾರೆ. ಈ ಶಾಸನಗಳ ಪುನರಾವ ಲೋಕನವೇ ಈ ಲೇಖನದ ಫಲಶ್ರುತಿ. ಪರಿಷ್ಕೃತಗೊಂಡ ಪೊಯ್ಸಳ ವಂಶ ವೃಕ್ಷವನ್ನು ಈ ಕೆಳಗೆ ನೀಡಲಾಗಿದೆ.

**ಪೊಯ್ಸಳ ವಂಶ**

ಸಾಮಂತ ಚೂಡಾಮಣಿ ಅರೆಕಲ್ಲ (ಕ್ರಿ.ಶ.೯೫೦)

ಮಗ, ರಾಮನ್ನಣ್ಣೆ ಕಂದರ್ಪ(?) (ಕ್ರಿ.ಶ.೯೫೦)

ಮೊಮ್ಮಗ, ಪೊಯ್ಸಳ ಮಾರುಗ (ಕ್ರಿ.ಶ.೯೫೦)

ಒಂದನೆಯ ನೃಪಕಾಮ (?) (ಕ್ರಿ.ಶ.೯೭೪?) ಚಾ.ರಾ.ಪುರಾಣ.

ಹೊಯ್ಸಳ ಮಾರೆಯ (ಕ್ರಿ.ಶ.೯೭೨)

ಮುಣ್ಡ ಪೊಯ್ಸಳ (ಕ್ರಿ.ಶ.೧೦೦೬-೧೦೨೬)

ಎರಡನೆಯ ನೃಪಕಾಮ (ಕ್ರಿ.ಶ.೧೦೨-೧೦೪೮)

ವಿನಯಾದಿತ್ಯ (ಕ್ರಿ.ಶ.೧೦೪೮)

ಇತ್ಯಾದಿ.,

ಡಾ॥ ಜೆ. ಎಂ. ನಾಗಯ್ಯ*

# ಕಲಕೇರಿಯ ನಾಳ್ಪ್ರಭುಗಳು

ಧಾರವಾಡ ಜಿಲ್ಲೆಯ ಹಾನಗಲ್ಲು ತಾಲೂಕಿನ ಕಲಕೇರಿಯನ್ನು ಮುಖ್ಯ ಪಟ್ಟಣವನ್ನಾಗಿ ಮಾಡಿಕೊಂಡು ಅದರ ಸುತ್ತಲಿನ ಗ್ರಾಮಗಳನ್ನು ಶೆಟ್ಟಿಮನೆತನದ ನಾಳ್ಪ್ರಭುಗಳು ೧೧ನೇಯ ಶತಮಾನದಿಂದ ೧೩ನೇಯ ಶತಮಾನದ ಅಂತ್ಯದ ವರೆಗೆ ಅಳುತ್ತಿದ್ದುದು ಅಲ್ಲಿಯ ಸಾಸನಗಳಿಂದ ತಿಳಿದು ಬರುತ್ತದೆ. ಈ 'ಶೆಟ್ಟಿ' ಮನೆತನದ ನಾಳ್ಪ್ರಭುಗಳ ಮೇಲೆ ಬೆಳಕುಚೆಲ್ಲುವುದು ಈ ಉದ್ದೇಶವಾಗಿದೆ.

ಒಂದೇಹುದ್ದೆಯನ್ನು ನಿರ್ದೇಶಿಸುವ 'ನಾಳ್ಪ್ರಭು' ಪ್ರಭುಗಾವುಂಡ ಎಂಬ ಉಲ್ಲೇಖಗಳು ಶಾಸನಗಳಲ್ಲಿ ಬರುತ್ತವೆ. ಇವರು ಅಧಿಕಾರದಲ್ಲಿ ಮಹಾಸಾಮಂತರಿಗಿಂತ ಕೆಳಗಿನ ಹಾಗೂ ಗಾವುಂಡರಿಗಿಂತ ಹಿರಿಯರಾಗಿದ್ದಾರೆ. ಆರನೆಯ ವಿಕ್ರಮಾದ್ಯಿನು ಚಕ್ರವರ್ತಿಯಾಗಿ ಆಳುತ್ತಿರುವಾಗ ಮಾರಗಾವುಂಡ ಮತ್ತು ಕೇಶಿಗಾವುಂಡರು ಪ್ರಭುಗಾವುಂಡರಾಗಿದ್ದರು. ಗೋಡುವರ ಮಾರಗಾವುಂಡನು ಗಾವುಂಡುಗೆಯ್ಯುತ್ತಿರುವಾಗ ಈತನ ಮಗನಾದ ಕೇಶಿಯು ಯುದ್ಧದಲ್ಲಿ ಭಾಗವಹಿಸಿ ಜಯಗಳಿಸುತ್ತಾನೆ. ಈ ಕೇಶವಗಾವುಂಡನು 'ನಾಳ್ಪ್ರಭುತ್ವದಿಂದ' ಪೂಟ್ಟಿಯೂರ್ಗ್ಗೆ ಗಾವುಂಡುಗೆಯುತ್ತಿದ್ದನೆಂದು ಶಾಸನದಲ್ಲಿ[1] ಹೇಳಲಾಗಿದೆ. ಚನ್ನಗಿರಿ[2] ಶಾಸನದಲ್ಲಿ ಮಹಾಪ್ರಭು ಕೇಶಿರಾಜ ಮತ್ತು ಚಾರಣಬ್ಬೆಯರ ಪುತ್ರ ಇರುಗಮಯ್ಯನಾಯಕನನ್ನು 'ಮಹಾಪ್ರಭು ಇರುಗಮಯ್ಯನಾಯಕ' ಎಂದು ಕರೆಯುಲಾಗಿದೆ. ಈತನು ಬಸವಳಿ, ಸಾರತಿವಳ್ಳಿ, ನಲ್ಲೂ[...] ಮಲ್ಲಿಗೆಯ ಹರಕಲೆ, ಕುಂಕುವಹಳಿ ಈ ಐದು ಗ್ರಾಮಗಳಿ[...] ಒಡೆಯನಾಗಿದ್ದನು. ಕಾಗಿನೆಲೆಯ[3] ಶಾಸನದಲ್ಲಿ[...] ಬರ್ಮಗಾವುಂಡ ಮತ್ತು ಬೆಲಗಾವುಂಡರು ಮಹಾಪ್ರಭುವಾ[...] ಕಾಗಿನೆಲೆ ೧೨ನ್ನು ಅಳುತ್ತಿರುವುದನ್ನು "ಸ್ವಸ್ತಿಶ್ರೀ ಮನ್ಮಹಾ[...] ಪ್ರಭು ಬಮ್ಮಗಾವುಣ್ಡನುಂ ಬೆಲಗಾವುಣ್ಡನುಂ ಕಾಗಿನೆ[...] ಪನ್ನೆರಡಕ್ಕಂ ಪಾಂಡಿಯೂರ್ಗ್ಗಂ ಕುಪ್ಪಗೆಡೆಯುಲ[...] ಸುಕಸಂಕಥಾ ವಿನೋದದಿಂ ಗಾವುಂಡುಗೈಯುತ್ತವಿರ್ದ್ದ" ಎಂದು ಬರುತ್ತದೆ. ಈ ಆಧಾರಗಳಿಂದ 'ನಾಳ್ಪ್ರಭು' ಮತ್ತು 'ಪ್ರಭುಗಾವುಂಡ' ಎಂಬ ಪದಗಳು ಒಂದೇ ಹುದ್ದೆಯನ್ನು ಸೂಚಿಸುತ್ತವೆಂಬುದು ಸ್ಪಷ್ಟವಾಗುತ್ತದೆ.

ಕಲಕೇರಿಯ ಶೆಟ್ಟಿ ಮನೆತನದ ನಾಳ್ಪ್ರಭುಗಳು[...] ಕ್ರಿ.ಶ.ಸು.೧೦೫೩ ಕ್ಕೂ ಪೂರ್ವದಿಂದ ೧೩ನೆಯ ಶತಮಾನದ[...] ಕೊನೆಯಭಾಗದವರೆಗೂ ಕಲಕೇರಿಯನ್ನು ಕೇಂದ್ರಸ್ಥಳವನ್ನಾಗಿ[...] ಮಾಡಿಕೊಂಡು ಆಳಿದ್ದಾರೆ. ಶೈವಧರ್ಮಾವಲಂಬಿಗಳಾದ[...] ಇವರು ಬಣಜಿಗರಾಗಿದ್ದರು. ಈ ಮನೆತನದ[...] ಹರಿಯಮಶೆಟ್ಟಿಯನ್ನು "ವೀರಬಣಂಜುಸಮಯ ಧರ್ಮಪ್ರತಿ[...] ಪಾಳಕರುಮಪ್ಪ ಬನವಸೆ ಪ(ಂ)ನ್ನಿ ಛ್ಯಾಸಿರಕೆ ಸಿರೋಮಣಿ[...] ಅನಾದಿ ಹೆಗ್ಗಡೆಮನೆ ಕಲುಕೆಱಿಯ ನಾಳ್ಪ್ರಭು ಚಲದಂಕರಾಮ[...] ಹರಿಯಮ್ಮಸೆಟ್ಟಿ"[4] ಎಂದು ಕರೆಯಲಾಗಿದೆ. ಕಲಕೆರಿಯ[...] ಸೋಮೇಶ್ವರ ಭಕ್ತರಾದ ಈ ನಾಳ್ಪ್ರಭುಗಳು ಅನೇಕ[...]

---

* ಸಹಾಯಕ ಗ್ರಂಥಪಾಲಕರು,ಸ್ನಾತಕೋತ್ತರ ಕೇಂದ್ರ, ನಂದಿಹಳ್ಳಿ, ಸಂಡೂರು-೫೮೩೧೧೯

1. ಎ.ಇಂ.೧೬, ಸಂ..೧೧ಬಿ. ೧೦೬೪ ಡಿಸೆಂಬರ್ ೨೬ ಹೊಟ್ಟೂರು, ಶಿಗ್ಗಾವಿ (ತಾ) ಧಾರವಾಡ(ಜಿ)
2. ಎ. ಕ. ೮, ಚೆನ್ನಗಿರಿ, ಚೆನ್ನಗಿರಿ (ತಾ) ೬೧, ೧೧೨೫. ಚನ್ನಗಿರಿ, ಚನ್ನಗಿರಿ (ತಾ) ಶಿವಮೊಗ್ಗ (ಜಿ)
3. ಕ.ಸಾ.ಪ. ೩೧(೩-೪) ೧೯೪೬ ಕಾಗಿನೆಲೆ ಶಾಸನ ೧೧೨೧ ಜನವರಿ ೨೨ ಕಾಗಿನೆಲೆ, ಹಿರೇಕೆರೂರು (ತಾ) ಧಾರವಾಡ (ಜಿ)
4. ಸೌ. ಇಂ. ಇ, ೨೦, ೨೨೮, ೧೨೦೬ ನವಂಬರ್ ೧೩ ಕಲಕೇರಿ, ಹಾನಗಲ್ಲು (ತಾ)ಧಾರವಾಡ (ಜಿ)

ತ್ತಿದಾನಗಳನ್ನು ನೀಡಿದ್ದಾರೆ. ಬಸವಣ್ಣನವರ ಮಕಾಲೀನರೂ, ಪವಾಡ ಪುರುಷರೂ ಆದಬಿಕ್ಕೆಯ ಮೂರು ವಿದೇವರನ್ನು ಕಲಕೇರಿಗೆ ಅಮಂತ್ರಿಸಿ ಅವರ ಪಾದ ಜೆಯನ್ನು ಮಾಡಿದ ಶ್ರೇಯಸ್ಸು ಈ ನಾಳ್ಪ್ರಭುಗಳಿಗೆ ಇದೆ.

ಈ ನಾಳ್ಪ್ರಭುಗಳ ಆಳ್ವಿಕೆಗೊಳಪಟ್ಟ ಗ್ರಾಮಗಳ ವಿವರ ಳಿದು ಬರುವುದಿಲ್ಲವಾದರೂ ಕಲಕೇರಿಯ ಅಕ್ಕಪಕ್ಕದ ಗ್ರಾಮಗಳಾದ ಬೆಗೇರಿ, ಒಪ್ಪಣಸಿ, ಹುಲ್ಲವಾಳ ಈ ಗ್ರಾಮಗಳು ವರ ಆಳ್ವಿಕೆಗೊಳಪಟ್ಟಿದ್ದವು. ಕಲಕೇರಿಯು ನಾಳ್ಪ್ರಭುಗಳ ಮುಖ್ಯ ಪಟ್ಟಣವಾಗಿದ್ದುದಲ್ಲದೆ ಪ್ರಮುಖ ವ್ಯಾಪಾರೀ ಕೇಂದ್ರಸ್ಥಳವೂ ಆಗಿತ್ತು. ಅದುದರಿಂದಲೇ ಕಲಕೇರಿಯು ಬನವಾಸಿ ಪನ್ನಿರ್ಚ್ಛಾಸಿರಕೆ ಸಿರೋಮಣಿ' ಎನಿಸಿತ್ತು ಕಲ ಕೇರಿಯ ನಾಳ್ಪ್ರಭುಗಳು ಬಸವುರ ೧೪೦ರ ಮಹಾಸಾಮಂತರಿಗೆ ಅಧೀನರಾಗಿ ಆಳುತ್ತಿದ್ದರು. ವೀರಗುಣವನ್ನು ರಕ್ತಗತವಾಗಿ ಮಾಡಿಕೊಂಡಿದ್ದ ಈ ನಾಳ್ಪ್ರಭುಗಳು ತಮ್ಮದೇ ಆದ ಸೈನ್ಯವನ್ನು ಹೊಂದಿದ್ದು ಅದು ವೀರಭಟರಿಂದ ಕೂಡಿತ್ತು. ಈ ಮನೆತನದ ಮಾದಿಸೆಟ್ಟಿಯು' ಹಲವಾರು ಯುದ್ಧಗಳನ್ನು ಮಾಡಿ ಚಲದಂಕರಾಮ' ನೆಂಬ ಬಿರುದನ್ನು ಪಡೆದುಕೊಂಡಿದ್ದನು. ಇವನಿಂದಾಗಿ ಮುಂದೆ ಇವನ ವಂಶಸ್ಥರೆಲ್ಲರೂ ಚಲದಂಕರಾಮ'ನೆಂಬ ಪ್ರಶಸ್ತಿಯನ್ನು ಬಳಸುವುದು ಪ್ರಾರಂಭವಾಯಿತು. ಕಲಕೇರಿ ಪಟ್ಟಣದ ಶ್ರೇಯಸ್ಸಿಗೆ, ಸ್ವಾಭಿಮಾನಕ್ಕಾಗಿ ಹೋರಾಡಿದ ನಾಳ್ಪ್ರಭುಗಳ ವಿವರ ಇಂತಿದೆ.

**ನಾಭಿಸೆಟ್ಟಿ (೧೦೭೧-೭೨-೧೦೮೮):** ಕಲಕೇರಿ ನಾಳ್ಪ್ರಭುಗಳ ಇತಿಹಾಸವು ಉಪಲಬ್ಧ ಆಧಾರಗಳಿಂದ ಹೇಳುವುದಾದರೆ ಅದು ನಾಭಿಶೆಟ್ಟಿಯಿಂದ ಪ್ರಾರಂಭವಾಗುತ್ತದೆ. ಕ್ರಿ.ಶ.ಸು.೧೦೭೧-೭೨ರ ಶಾಸನದಲ್ಲಿ ಈತನ ಪ್ರಥಮ ಉಲ್ಲೇಖ ಬರುತ್ತದೆ. ಈತನು ಮಾರ್ತಂಡನ ಪುತ್ರನಾಗಿದ್ದಾನೆ. ಈ ಅಂಶವನ್ನು ಶಾಸನದಲ್ಲಿ.[5]

ಅನಘಂ ಮಾರ್ತ್ತಣ್ಡಾಂಗ
ವಿನಯಾಂಬು ×××× ಗಂ ಪುಟ್ಟಿ
ದನೊಳ್ವಿನಕಣಿ ಗುಣಗಣನಿಧಿ ಸ
ಜ್ಜನ ವಿನುತಂ ನಾಭಿಸೆಟ್ಟಿ ನಿಜಕುಳತಿಳಕಂ

ಎಂದು ಹೇಳಲಾಗಿದೆ. ಮಹಾಂಡಳೇಶ್ವರ ವೀರನೊಳಂಬ ಪಲ್ಲವ ಉದಯಾದಿತ್ಯದೇವ ಮತ್ತು ಮಾಳಲದೇವಿಯರು ಸೋಮೇಶ್ವರ ದೇವರಿಗೆ ಮಹಾಪೂಜೆಯನ್ನು ಸಲ್ಲಿಸಿದ ತರುವಾಯ ಬಾಸವುರ-೧೪೦ರ ಮನೆಯ ಕಲಿಯ ಮರಸರನ್ನು, ಬೇಗೇರಿಯ ಬರ್ಮಗಾವುಂಡನನ್ನು. ಈತನ ಮಗ ಕಾಳಗಾವುಂಡನನ್ನು ಮನ್ನೆಯ ಕಾವಿಸೆಟ್ಟಿಯನ್ನು ಕರೆದು ನಂತರ ನಾಭಿಸೆಟ್ಟಿಯನ್ನು ಕರೆಯಿಸುತ್ತಾನೆ. ಹೀಗೆ ಕರೆಯಿಸಿದ ಪ್ರಸ್ತಾಪ ಶಾಸನದಲ್ಲಿ.[6]

''ಶರಣಾಗತ ಜಳನಿಧಿಯಂ
ಪರಸೇನೆಗೆ ವಿಳಯಕಾಳ ಜಳನಿಧಿಯುಂ ಬಂ
ದರೆದಿಗೆ ನವನಿಧಿಯ
ಕರೆದಂ ಕಲ್ಕೆಜೆಯ ನಾಭಿಸೆಟ್ಟಿಯನಾಗಳ್''

ಎಂದು ಬರುತ್ತದೆ. ಇದರಿಂದ ನಾಭಿಸೆಟ್ಟಿಯು ಒಳ್ಳೆಯ ಭಟನಾಗಿದ್ದು ಪರಸೇನೆ ಸಂಹಾರಕನಾಗಿದ್ದ ಈತನನ್ನು ಕರೆಯಿಸಿ ಎಲ್ಲರಿಗೂ ತಾಂಬೂಲ ಕೊಟ್ಟು ಸೋಮೇಶ್ವರ ದೇವರಿಗೆಂದು 'ಪುಲ್ಲವಳ' ಗ್ರಾಮವನ್ನು ದೇವಸಿಂಗಜೀಯರ ಕಾಲುತೊಳೆದು ಬಿಡುತ್ತಾನೆ. ನಾಭಿಸೆಟ್ಟಿಯನ್ನು ಕರೆಯಿಸಿ ಆತನ ಸಮ್ಮುಖದಲ್ಲಿ ನೊಳಂಬವಾಡಿನಾಡಿನ ಮಹಾ ಮಂಡಲೇಶ್ವರ ಉದಯಾದಿತ್ಯನು ದಾನಬಿಡಬೇಕಾದರೆ ನಾಭಿಸೆಟ್ಟಿಯ ಸ್ಥಾನ ಉನ್ನತವಾಗಿತ್ತೆಂಬುದು ಸ್ಪಷ್ಟ ವಾಗುತ್ತದೆ. ಈ ನಾಭಿಸೆಟ್ಟಿಯ ಪುತ್ರನೇ ಜಯಸಿಂಗಸೆಟ್ಟಿ.

**ಜಯಸಿಂಗ ಸೆಟ್ಟಿ (೧೦೮೮-೧೧೨೦):** ಮಹಾ ಸಾಮಂತಾಧಿಪತಿ ಮಹಾಪ್ರಚಂಡದಂಡನಾಯಕ ಗೋವಿಂದನು ಬನವಾಸಿ-೧೨೦೦೦ ದ ಮೇಲ್ಪಟ್ಟಿಯ ವಡ್ಡರಾವುಳ ಸುಂಕವನ್ನು ಅಳುತ್ತಿರುವಾಗ ಇತನ ಪಾದಪದ್ಮೋಪಜೀವಿಯಾಗಿ ಜಯಲಿಂಗಸೆಟ್ಟಿಯು ಇದ್ದನು. ಈತನು ನಾಳ್ಪ್ರಭು ನಾಭಿಸೆಟ್ಟಿ ಮತ್ತು ಪತಿಭಕ್ತ ಮಹಾಸತಿ ಭೋಗ×××ರ ಪುತ್ರನಾಗಿದ್ದಾನೆ. ಈತನೂ ಒಳ್ಳೆಯ ಭಟನಾಗಿದ್ದು ಯುದ್ಧಾದಿ ಕಾರ್ಯಗಳಲ್ಲಿ ಭಾಗವಹಿಸಿದ್ದಾನೆ. ಅಲ್ಲದೆ ಸೈನ್ಯದ ದಂಡನಾಯಕನಾಗಿಯೂ ಕೆಲಸ ನಿರ್ವಹಿಸಿರಬೇಕು. ಶಾಸನದಲ್ಲಿ[7] ''ಜಯಸಿಂಗಸೆಟ್ಟಿ ದಣ್ಡನಾಯಕಂ'' ಎಂದು ಕರೆಯಲಾಗಿದೆ. ಈತನ ವೀರಗುಣದ ಬಗ್ಗೆ ವರ್ಣನಾತ್ಮಕವಾಗಿ ವಿವರಿಸಿದ್ದು ಅದು ಇಂತಿದೆ.

5. ಸೌ. ಇಂ. ಇ, ೨೦, ೮೭ (?) ಕಲಕೇರಿ, ಹಾನಗಲ್ಲು (ತಾ) ಧಾರವಾಡ (ಜಿ)
6. ಅದೇ, ೪೯, ೧೦೭೧-೭೨ ಕಲಕೇರಿ, ಹಾನಗಲ್ಲು (ತಾ) ಧಾರವಾಡ(ಜಿ)
7. ಅದೇ, ೮೭, (?) ಕಲಕೇರಿ, ಹಾನಗಲ್ಲು (ತಾ) ಧಾರವಾಡ (ಜಿ)

''ಜಯಸಿಂಗ ನಿನಗೆ ಜಯಮಂ
ಜಯಮದು ಮಾಡುತ್ತುವಿರ್ಕೆ ಜಯಧೀರ
ಜಯೋ ××××××××ಯ
ಜಯನಾಮ ಜಯಪ್ರಸನ್ನ ವಿದ್ವಿಷ್ಟ ಜಯಾ

ಎಂಬಂಥ ಹಾಗೂ ''ಸಮರಸಮಯದೊಲ್ ಜಯಸಿಂಗಂ ಕರವರಿಯ ಪಿರಿಯ ನೆರದರೀ ಪರಸಮೆಯ ಕರೀಂದ್ರ ಕುಂ ××××××× ನಖದಿಂದ ಸಿಂಗಮನೆ ಜಯಸಿಂಗ'' ಎಂಬಂಥ ಮಾತುಗಳು ಈತನ ವೀರತ್ವವನ್ನು, ತನ್ನ ಧರ್ಮದ ಮೇಲಿನ ನಿಷ್ಠೆಯನ್ನು ಎತ್ತಿ ತೋರಿಸುತ್ತದೆ. ಧರ್ಮಿಷ್ಟನಾದ ಈತನು ಸೋಮೇಶ್ವರ ದೇವರಿಗೆ ಹತ್ತಿದಾನ ಬಿಟ್ಟಿದ್ದುದು ಶಾಸನಗಳಿಂದ ತಿಳಿದು ಬರುತ್ತದೆ. ಕಲಕೇರಿಯ [8] ಇನ್ನೊಂದು ಶಾಸನದಲ್ಲೂ ಈತನ ಉಲ್ಲೇಖ ಬರುತ್ತಿದ್ದು ಅಲ್ಲಿ ಪೆರ್ಗಡೆ ಚಂಗದೇವಯ್ಯನು ಕಲಕೇರಿ ಸೋಮೇಶ್ವರದೇವರಿಗೆ ಪುನರ್ದತ್ತಿಯಾಗಿ ಸುಂಕ ಉಪ್ಪಿನಪೆಂಟೆ, ನಂದಾದೀವಿಗೆಯ ಎಣ್ಣೆಗಾಗಿ ತಿಂಗಳಿಗೆ ಒಂದು ಪಣವನ್ನು ಬಿಟ್ಟು ಅದನ್ನು ಜಯಸಿಂಗಸೆಟ್ಟಿ, ತಳದ ಬಣಂಜಿಗರು ರಕ್ಷಿಸಿಕೊಂಡು ಹೋಗಬೇಕೆಂದು ಹೇಳಲಾಗಿದೆ.

**ಕೇತಿಸೆಟ್ಟಿ (೧೧೨೦-೧೧೪೬):** ಈತನು ಜಯಸಿಂಗಸೆಟ್ಟಿಯ ಪುತ್ರನಾಗಿರಬೇಕು. ಕಲಕೇರಿ ನಾಳ್ಪ್ರಭುವಾದ ಇವನು ಶತ್ರುಗಳೊಂದಿಗೆ ಹೋರಾಡುತ್ತಾ ವೀರ ಸ್ವರ್ಗವನ್ನು ಪಡೆದಿದ್ದಾನೆ. ಈತನಿಗೂ ಕಾಗಿನೆಲೆಯ ಪ್ರಭುಗಾವುಂಡರಿಗೂ ವೈರತ್ವ ಇದ್ದು ಅದು ಯುದ್ಧದಲ್ಲಿ ಪರ್ಯಾವಸಾನಗೊಂಡಿದ್ದುದು ಶಾಸನದಿಂದ ಗೊತ್ತಾಗಿ ರುತ್ತದೆ. ಈ ಯುದ್ಧವು ಕ್ರಿ.ಶ.೧೧೪೬ ಜುಲೈ ೬ ರಂದು 'ಸಿರಿವೊಳಲು' ಗ್ರಾಮದಲ್ಲಿ ನಡೆದಿದ್ದು ಇದರಲ್ಲಿ ನಾಳ್ಪ್ರಭು ಕೇರೆಸೆಟ್ಟಿ ನೇರವಾಗಿ ಭಾಗವಹಿಸಿ ವೀರಾವೇಶದಿಂದ ಹೋರಾಡುತ್ತ ಮರಣವನ್ನು ಹೊಂದುತ್ತಾನೆ. ಈತನ ಜೊತೆಯಲ್ಲಿಯೇ ಯುದ್ಧ ಮಾಡುತ್ತಾ ಇವನ ಬಂಟರಾದ ಕಮ್ಮಾರಸಾಂತೋಜಮತ್ತು ಕೇತನ ಮಗನಾದ ಸೇಣಿಗ ಜಕಯ್ಯನು ಹೋರಾಡಿ ಮರಣಿಸುತ್ತಾರೆ. ಕಮ್ಮಾರಸಂತೋಜನು ಮರಣಿಸಿದುದನ್ನು ಶಾಸನದಲ್ಲಿ[9] 'ಅಕ್ಷಯ ಸಂವತ್ಸರದ ಆಶಾಡ ಬಹುಳ ಆದಿವಾರದಂ ಶ್ರೀಮಂನಾಳ್ಪ್ರಭು ಕಲ್ಕೆಜೆಯ ಕೇತಿಸೆಟ್ಟಿಯರು ಸಿರಿವೊಳಲ ಕಾಗಿನೆಲೆಯವರೊಡನೆ ಕಾದಿ ಸ್ವರ್ಗ್ಗಸ್ತನಾದಲ್ಲಿ ಕಮ್ಮಾ ಸಾಂತೋಜ ಜಗವಿದಿತವಾಗಿ ಕಾದಿ ಸುರಲೋಕಪ್ರಾಪ್ತನಾದ ಎಂದು ಹೇಳಿದೆ. ಇದೇ ರೀತಿಯಾಗಿ ಕೇತನ ಮಗನಾ ಸೇಣಿಗ ಜಕೆಯು ಹೋರಾಡುತ್ತಾ ಮರಣಿಸಿದುದನ ಇನ್ನೊಂದು[10] ಶಾಸನ ತಿಳಿಸುತ್ತದೆ. ತನ್ನ ಜನರಿಗಾಗಿ, ಕಲಕೇ ನಗರಕ್ಕಾಗಿ ಹೋರಾಡುತ್ತ. ವೀರಸ್ವರ್ಗವನ್ನು ಪಡೆ ನಾಳ್ಪ್ರಭು ಇವನಾಗಿದ್ದಾನೆ.

**ಮಾದಿಸೆಟ್ಟಿ (೧೧೪೬-೧೨೦೬):** ಕಲಕೇರಿ ಶೆಟ್ಟಿ ಮನೆತನದ ನಾಳ್ಪ್ರಭುಗಳಲ್ಲಿ ಹೆಚ್ಚು ಜನಪ್ರಿಯನೂ ಸುಭಟನೆಂಬ ಖ್ಯಾತಿಗೆ ಪಾತ್ರನಾದವನೆಂದರೆ ಮಾದಿಸೆಟ್ಟಿ ಇವನು ಯುದ್ಧಗಳಲ್ಲಿ ಛಲದಿಂದ ಹೋರಾಡಿ ಜಯ ಗಳಿಸಿದ್ದುದಕ್ಕೆ ಈತನಿಗೆ 'ಚಲದಂಕರಾಮ' ಎಂಬ ಬಿರುದು ಪ್ರಾಪ್ತವಾಯಿತು. 'ಚಲದಂಕರಾಮ' 'ಮಂನೆಯಜೂಬು ಎಂಬ ಬಿರುದನ್ನು ಇವನು ಹೊದಿದ್ದನು. ಕ್ರಿ.ಶ.೧೧೮೬ರ[11] ಶಾಸನದಲ್ಲಿ ಈತನ ಪ್ರಶಸ್ತಿಯನ್ನು ''ಸ್ವಸ್ತಿ ಸಮಸ್ತ ವಸು ವಿಸ್ತೀರ್ನ್ನ ಘೂರ್ನ್ನಿನತಾರ್ಣವವಳಾವಳಯಿತವ ಸುನ್ನ ರಾವಳಯ ಸಕಳವೇಳಾಮರ ಪಟ್ಟಣಾಧಿಪ್ಷಾಯಕನುಂ ವಂದಿ ಬ್ರಿಂದ ಪ್ರದಾಯಕನುಂ ಸತ್ಯವಾಕ್ಯಾಮೋಘಸಾಯಕನುಮಪ್ಪ ಶ್ರೀಮಚ್ಛಲದಂಕರಾಮ ಮಾದಿಸೆಟ್ಟಿಯರು ಕಲುಕೇಜಿಯ ಪಟ್ಟಣದೋಳು ಸುಖಸಂಕಥಾ ದಿನೋದದಿಂ ರಾಜ್ಯಂಗೆಯ್ಯು ತ್ತಮಿರಲ್'' ಎಂದು ಹೇಳಲಾಗಿದೆ. ಪರಾಕ್ರಮಿಯೆಂದು ಹೆಸರು ಪಡೆದ ಈತನು ಹಲವಾರು ಯುದ್ಧಗಳನ್ನು ಮಾಡಿದ್ದಾನೆ.

**ಮಾದಿಸೆಟ್ಟಿ-ತೈಲಹದೇವರ ಯುದ್ಧ:** ಈ ಯುದ್ಧ ನಡೆದದ್ದು ಕ್ರಿ.ಶ.೧೧೮೫ ಡಿಸೆಂಬರ್ ೨. ದೇವಂಗೇರಿಯ ತೈಲಹದೇವನು ಕಲಗೇರಿಯ ಗೋವುಗಳನ್ನು ಅಪಹರಿಸಲು ಬರುತ್ತಾನೆ. ಆಗ ಮಾದಿಸೆಟ್ಟಿಯ ಸೈನ್ಯಕ್ಕೂ ತೈಲಹದೇವನಿಗೂ ಯುದ್ಧವಾಗುತ್ತದೆ. ಈ ಯುದ್ಧದಲ್ಲಿ ಮಾದಿಸೆಟ್ಟಿಯ ಬಂಟನಾದ ಸೋಟ್ಟಿಮೆಯನಾಯ್ಕನು ತನ್ನೊಡೆಯನಾದ 'ಚಲದಂಕರಾಮ'ನು ಮೆಚ್ಚುವ ರೀತಿಯಲ್ಲಿ ಹೋರಾಡಿ ಮರಣಿಸುತ್ತಾನೆ.[12] ಇದೇ ರೀತಿ ಇನ್ನೊಬ್ಬ ಬಂಟನಾದ

8. ಸೌ. ಇಂ. ೯, ೨೦, ೬೦, ೧೧೮೮ ಡಿಸೆಂಬರ್ ೩೧, ಕಲಕೇರಿ, ಹಾನಗಲ್ಲು (ತಾ) ಧಾರವಾಡ (ಜಿ)
9. ಅದೇ, ೧೧೩, ೧೧೪೬ ಜುಲೈ ೬ ಕಲಕೇರಿ, ಹಾನಗಲ್ಲು (ತಾ) ಧಾರವಾಡ (ಜಿ)
10. ಅದೇ, ೧೧೪, ೧೧೪೬ ಜುಲೈ ೬ ಕಲಕೇರಿ, ಹಾನಗಲ್ಲು (ತಾ) ಧಾರವಾಡ(ಜಿ)
11. ಅದೇ, ೧೨೬,೧೧೮೬ ಮಾರ್ಚ್ ೩೦, ಕಲಕೇರಿ, ಹಾನಗಲ್ಲು (ತಾ) ಧಾರವಾಡ (ಜಿ)
12. ಅದೇ, ೧೨೪, ೧೧೮೫ ಡಿಸೆಂಬರ್ ೨, ಕಲಕೇರಿ, ಹಾನಗಲ್ಲು (ತಾ) ಧಾರವಾಡ (ಜಿ)

ಬೊಪ್ಪಣನು ತೈಲಹದೇವನೊಂದಿಗೆ ಹೋರಾಡಿ ವೀರಮರಣವನ್ನು ಅಪ್ಪುತ್ತಾನೆ. ಈ ಬೊಪ್ಪಣನು 'ಚಲದಂಕರಾಮನ ಗಂಧವಾರಣಂ' ಎಂಬ ಬಿರುದನ್ನು ಧರಿಸಿದ್ದನು. ಇದರಿಂದ ಬೊಪ್ಪಣನು ಮಾದಿಸೆಟ್ಟಿಯ ನೆಚ್ಚಿನ ಸೇವಕನಾಗಿದ್ದನೆಂಬುದು ಸ್ಪಷ್ಟವಾಗುತ್ತದೆ.[13] ಈ ಯುದ್ಧದಲ್ಲಿ ಮಾದಿಸೆಟ್ಟಿಯ ಸೈನಿಕರು ತೈಲಹದೇವನಿಗೆ ಮುಖಭಂಗಮಾಡಿ ಕಳುಹಿಸಿರ ಬೇಕು.

**ಕುಂದಗೋಳ ಯುದ್ಧ:** ಮಾದಿಸೆಟ್ಟಿಯು ತನ್ನ ಸೈನ್ಯವನ್ನು ತೆಗೆದುಕೊಂಡು ಕುಂದಗೋಳ ಕೋಟೆಗೆ ಮುತ್ತಿಗೆ ಹಾಕಿ ಯುದ್ಧವನ್ನು ಮಾಡುತ್ತಾನೆ. ಈ ಯುದ್ಧ ಯಾವ ಕಾರಣಕ್ಕಾಗಿ ನಡೆಯಿತೆಂಬುದು ತಿಳಿದು ಬರುವುದಿಲ್ಲ. ಕ್ರಿ.ಶ. ೧೧೮೬ ಮಾರ್ಚ್ ೩೦ ರಂದು ಈ ಯುದ್ಧ ಘಟಿಸಿದೆ. ಶಾಸನವು[14] ಈ ಯುದ್ಧ ನಡೆದ ಸನ್ನಿವೇಶವನ್ನು ಕಣ್ಣಿಗೆ ಕಟ್ಟುವಂತೆ ವರ್ಣಿಸುತ್ತದೆ. ಕೋಟೆಗಾಳದಲ್ಲಿ ಬಳಸುತ್ತಿದ್ದ ಆಯುಧ ಅಸ್ತ್ರಗಳು, ತಂತ್ರಗಳ ವಿವರಣೆಯಿದೆ. ಈ ಯುದ್ಧದಲ್ಲಿ ಮಾದಿಸೆಟ್ಟಿ ಭಾಗವಹಿಸಿದುದನ್ನು "ಚಲದಂಕರಾಮ ಮಾದಿಸೆಟ್ಟಿ ತಾನುಂ ತಂನ ಸಮಸ್ತ ಸಾಮಗ್ರಿಸಹಿತಂ ಬನ್ದಾ ದುರ್ಗ್ಗಮಂ ಮೂವಳಸಾಗೆ ಸುತ್ತಿ ಮುತ್ತಿ ಮಹಾಲಗ್ಗೆ ಮಾಳ್ಪುದುಂ" ಎಂದು ಶಾಸನದಲ್ಲಿ ಹೇಳಲಾಗಿದೆ. ಈ ಯುದ್ಧದಲ್ಲಿ ಮಾದಿಶೆಟ್ಟಿಯ ಸಂಕೆಯ ಸಾಹಣಿಯು ಕುದುರೆಯಿಂದ ಇಳಿದು ಕೋಟೆಯನ್ನು ಹತ್ತಿ ಹೋರಾಡುತ್ತ ಸುರಲೋಕಪ್ರಾಪ್ತ ನಾಗುತ್ತಾನೆ.

**ಒಪ್ಪುಣಸಿ ಯುದ್ಧ:** ಮಾದಿಸೆಟ್ಟಿಯು ಒಪ್ಪುಣಸಿಯಲ್ಲಿ ದೇವಂಗೇರಿಯ ತೈಲಹದೇವನೊಂದಿಗೆ ಒಂದು ಯುದ್ಧ ಮಾಡಿದ್ದಾನೆ. [15]ಈ ಯುದ್ಧದಲ್ಲಿ ದಾಸಣನು ಹೋರಾಡುತ್ತಾ ಸುರಲೋಕ ಪ್ರಾಪ್ತನಾಗುತ್ತಾನೆ. ಬಹುಶ: ತೈಲಹದೇವನು ಒಪ್ಪುಣಸೆಯ ಗೋಗ್ರಹಣಕ್ಕೆ ಕೈ ಹಾಕಿದ್ದು ಅವನ ವಿರುದ್ಧ ಈ ಮಾದಿಸೆಟ್ಟಿ ಹೋರಾಡಿದ್ದಾನೆ.

**ರಟ್ಟಿಹಳ್ಳಿ ಯುದ್ಧ:** ಮಾದಿಸೆಟ್ಟಿಯು ಕ್ರಿ.ಶ.೧೧೮೩ ಎಪ್ರಿಲ್ ೧೦ರಲ್ಲಿ ರಟ್ಟಿಹಳ್ಳಿಯೊಂದಿಗೆ 16 ಯುದ್ಧ ಮಾಡಿದ್ದಾನೆ. ಈಗಿನ ಹಿರೆಕೆರೂರು ತಾಲೂಕಿನ ರಟ್ಟಿಹಳ್ಳಿಯನ್ನು ಹಿಂದೆ ರಟ್ಟಪಳ್ಳಿ ಎಂದು ಕರೆಯುತ್ತಿದ್ದು ಅದು ೭೦-ಗ್ರಾಮಗಳಿಗೆ ರಾಜಧಾನಿಯಾಗಿತ್ತು. ಈ ರಟ್ಟಿಹಳ್ಳಿ ಯುದ್ಧವು ಯಾವ ಕಾರಣಕ್ಕಾಗಿ ನಡೆಯಿತೆಂಬುದು ತಿಳಿದು ಬರುವುದಿಲ್ಲ. ಈ ಯುದ್ಧದಲ್ಲಿ ಮದಿಸೆಟ್ಟಿಯ ಬಂಟ ಬಮ್ಮರಾಹುತನು ಹೋರಾಡಿ ಮರಣವನ್ನು ಅಪ್ಪುತ್ತಾನೆ.

ಹೀಗೆ ಮಾದಿಸೆಟ್ಟಿಯು ದೇವಂಗೇರಿಯ ತೆಲಹನೊಂದಿಗೆ ಎರಡು ಸಲ ಕುಂದಗೋಳದೊಂದಿಗೆ ಹಾಗೂ ರಟ್ಟಿಹಳ್ಳಿಯೊಂದಿಗೆ ಒಂದೊಂದು ಬಾರಿ ಯುದ್ಧ ಮಾಡಿದ್ದಾನೆ. ಈ ಯುದ್ಧಗಳ ಜಯಾಪಜಯಗಳ ಬಗ್ಗೆ ತಿಳಿದು ಬರುವುದುಲ್ಲವಾದರೂ ಈತನು ಪದೇ ಪದೇ ಯುದ್ಧಗಳಲ್ಲಿ ನಿರತನಾದುದನ್ನು ನೋಡಿದರೆ ಸದಾ ವಿಜಯಿಯಾಗುತ್ತಿದ್ದನೆಂದು ಭಾವಿಸಬೇಕಾಗುತ್ತದೆ. ಹೆರುರಿನಲ್ಲಿ ಕೆರೆಯ ಹತ್ತಿರ ಇರುವ ವೀರಗಲ್ಲು ಗೋಗ್ರಹಣದಲ್ಲಿ ಚಲದಂಕಸೆಟ್ಟಿಯ ವೀರಮರಣ[17] ವಾದುದನ್ನು ತಿಳಿಸುತ್ತದೆ. ಇದರಿಂದ ಈ ವೀರಗಲ್ಲು 'ಚಲದಂಕರಾಮ' ನೆಂಬ ಬಿರುದು ಪಡೆದುಕೊಂಡಿದ್ದ ಮಾದಿಸೆಟ್ಟಿಯದೇ ಆಗಿದೆ. ಗೋಗ್ರಹಣದಂಥ ಸಮಯದಲ್ಲಿ ಹೋರಾಡುತ್ತಾ ವೀರಮರಣವನ್ನು ಹೊಂದಿದ ಮಾದಿಸೆಟ್ಟಿಯದು ವಿಶಿಷ್ಟ ವ್ಯಕ್ತಿತ್ವವಾಗಿದ್ದು ಈತನು ವೀರಬದುಕಿಗೆ ಒಂದು ಉತ್ತಮ ಉದಾಹರಣೆಯಾಗಿ ನಿಂತಿದ್ದಾನೆ.

**ಹರಿಯಮ್ಮಸೆಟ್ಟಿ (೧೨೦೬-೧೨೫೦):** ಮಾದಿಸೆಟ್ಟಿ ತನ್ನ ಬದುಕಿನ ಕ್ಷಣಗಳನ್ನೆಲ್ಲ ಯುದ್ಧಗಳಲ್ಲಿ ಕಳೆದರೆ ಹರಿಯಮ್ಮಸೆಟ್ಟಿ ಮಾತ್ರ ಧಾರ್ಮಿಕ ಕಾರ್ಯಗಳಲ್ಲಿ ತನ್ನನ್ನು ತೊಡಗಿಸಿಕೊಂಡುದು ಶಾಸನಗಳಿಂದ ತಿಳಿದುಬರುತ್ತದೆ. ಮಾದಿಸೆಟ್ಟಿಯ ಪುತ್ರನಾಗಿರಬಹುದಾದ ಇವನ ಉಲ್ಲೇಖ ಕ್ರಿ.ಶ ೧೨೦೬ ನವೆಂಬರ್ ೧೩[18] ಶಾಸನದಲ್ಲಿ ಬರುತ್ತದೆ. ಶಾಸನದಲ್ಲಿ ಈತನನ್ನು "ಸಮಸ್ತ ಭುವನವಿಖ್ಯಾತ ಪಂಚಶತ ವೀರಸಾಸನ ಲಬ್ದನೇಕ ಗುಣಾಗಣಾಲಂಕ್ರಿತ ಸತ್ಯಸೌಚಾಚಾರ ಚಾರುಚಾರಿತ್ರ ನಯವಿನಯ ವಿನ್ಯಾಸ ವೀರಾವತಾರ ವೀರಬಣಂಜು ಸಮಯಧರ್ಮ ಪ್ರತಿಪಾಲಕರುಮಪ್ಪ ಬನವಸೆ

---

13. ಅದೇ, ೧೨೫, ೧೧೮೫ ಡಿಸೆಂಬರ್ ೨, ಕಲಕೇರಿ, ಹಾನಗಲ್ಲು (ತಾ) ಧಾರವಾಡ (ಜಿ)
14. ಅದೇ, ೧೨೬, ೧೧೮೬ ಮಾರ್ಚ್ ೩೦, ಕಲಕೇರಿ, ಹಾನಗಲ್ಲು (ತಾ) ಧಾರವಾಡ (ಜಿ)
15. ಕಲಬುರ್ಗಿ (ಎಂ.ಎಂ.): ಧಾರವಾಡ ಜಿಲ್ಲಾ ಶಾಸನಸೂಚಿ, ಉಪ್ಪಹುಣಸಿ. ಹಾನಗಲ್ಲು (ತಾ)
16. ಸೌ.ಇಂ. ಇ. ೨೦, ೧೬೯, ೧೧೮೩ ಎಪ್ರಿಲ್ ೧೦, ಕಲಕೇರಿ, ಹಾನಗಲ್ಲು (ತಾ) ಧಾರವಾಡ (ಜಿ)
17. ಕಲಬುರ್ಗಿ (ಎಂ.ಎಂ.): ಧಾರವಾಡ ಜಿಲ್ಲಾ ಶಾಸನಸೂಚಿ ೩೪೨, ಹೆರೂರ, ಹಾನಗಲ್ಲು (ತಾ)
18. ಸೌ.ಇಂ. ಇ. ೨೦, ೨೨೮, ೧೨೦೬ ನವಂಬರ್ ೧೩, ಕಲಕೇರಿ, ಹಾನಗಲ್ಲು (ತಾ) ಧಾರವಾಡ (ಜಿ)

ಪ (೦)ನ್ನಿ ಚ್ಚಾಸಿರಕೆ ಸಿರೋಮಣಿ ಅನಾದಿ ಹೆಗ್ಗಡೆಮನೆ ಕಲುಕೆಜಿಯ ನಾಳ್ಪ್ರಭು ಚಲದಂಕರಾಮ ಹರಿಯಮ್ಮ ಸೆಟ್ಟಿಯರುಂ'' ಎಂದು ಕರೆಯಲಾಗಿದೆ. ಇದರಿಂದ ಇವನು ಸಚ್ಚಾರಿತ್ರ್ಯವನ್ನು ನಯವಿನಯದಂಥ ಗುಣಗಳನ್ನು ಹೊಂದಿದ್ದನೆಂಬುದು ಗೊತ್ತಾಗೂತ್ತದೆ. ಮುಮ್ಮರಿದಂಡ, ಕಾಚೆಯ ಸಾಹಣಿ, ಅಮಿತೆಯ ಸಾಹಣಿ ಇವರ ಸಮ್ಮುಖದಲ್ಲಿ ಹರಿಯಮ್ಮ ಸೆಟ್ಟಿಯು ಸೋಮೇಶ್ವರ ದೇವರಿಗೆ ಗಂಧ, ಪುಷ್ಪ, ಧೂಪ, ದೀಪ, ನೈವೇದ್ಯ, ತಾಂಬೂಲಕ್ಕೆ ಹಾಗೂ ತಪೋಧನರ, ಬ್ರಾಹ್ಮಣರ ಅಹಾರ ದಾನಕ್ಕೆಂದು ಮೂರು ಜಾವಿದೇವರ ಕಾಲುತೊಳೆದು ಗದ್ದೆಯನ್ನು ದಾನ ಬಿಡುತ್ತಾನೆ. ಅಲ್ಲದೆ ಮಹಾಪಸಾಯ್ತ ವಾಸಿಯಣ್ಣ, ಸಮಸ್ತ ನಾಯಕರು, ಎಕ್ಕಟಿಗರು ಇವರ ಸಮ್ಮುಖದಲ್ಲಿ ''ಶ್ರೀ ಮನ್ನಾಳ್ಪ್ರಭು ಚಲದಂಕರಾಮ ಕಲುಕೆಜಿಯ ಹರಿಯಮ್ಮಸೆಟ್ಟಿಯರುಂ ಸಿವರಾತ್ರಿ ಪರ್ವದಲ್ಲಿ ದೇವರ ಜಳಗಂಧಾಕ್ಷತೆ ಪುಷ್ಪ ದೀಪಧೂಪ ನಿವೇದ್ಯ ತಾಂಬೂಳ ಆಚಾರಿಯರ ತಪೋಧನರ ಬ್ರಾಹ್ಮ(೦)ಣರ ಭೋಜನಕಂ ಜೀರ್ಣ್ನೋದ್ಧಾರಕ್ಕನೆಂದು ಮತ್ತಿಹಳ್ಳಿಯ ಹೆಗ್ಗೆಜಿಯ ಬಡಗಣ ಕೋಡಿಯ ಸಂಕಿನ ಯೇರಿಯ ಕೆಳಗೆ ಬೆಸು ಕಂ೧೧೦ ಆ ಸ್ಥಳದಲ್ಲಿ ಹಕ್ಕಲು ಕಂ೨೦ವಂ ನಾಳ್ಪ್ರಭು ಚಲದಂಕರಾಮ ಹರಿಯಮ್ಮ ಸೆಟ್ಟಿಯರುಂ ಮಗ ವೀರಯಗೌಡನುಂ ಮೂಜುಜಾವಿದೇವರ ಪಾದಪ್ರಕ್ಷಾಳನಂ ಮಾಡಿ' ದಾರಾಪೂರ್ವಕವಾಗಿ ಬೆಡುತ್ತಾನೆ.

ಈ ಹರಿಯಮ್ಮಸೆಟ್ಟಿಯ ಮಗ ವೀರಯನು ಬನದೆಯನಾಯಕ, ಜೋಯನಾಯಕ, ರಾಗವನಾಯಕ, ಸೇನಬೋವ ಚಟ್ಟಯ್ಯ, ಎಕ್ಕಟಿಗರು ಚೈತ್ರದ ಪರ್ವದಲ್ಲಿ ದೇವರಿಗೆ 'ಜಳಗಂಧಾಕ್ಷತೆ ಪುಷ್ಪ ಧೂಪದೀಪ ನಿವೇದ್ಯ ತಾಂಬೂಳ ತಪೋಧನರ ಬ್ರಾಹ್ಮಣರ ಆಹಾರದಾನಕ್ಕಂ ಜೀರ್ಣೋದ್ಧಾರಕ್ಕಂ. ೧೦ ಕಮ್ಮ ಗದ್ದೆಯನ್ನು ಬಿಡುತ್ತಾರೆ. ನಾಳ್ಪ್ರಭು ಮಾದಿಸೆಟ್ಟಿ ಯುದ್ಧವೀರನಾದರೆ ಹರಿಯಮ್ಮಸೆಟ್ಟಿ ದಾನವೀರನಾಗಿದ್ದಾನೆ.

**ಸೋಯಸೆಟ್ಟಿ ( ೧೨೫೦-೮೦ ):** ಇವನು ಹರಿಯಮ್ಮ ಸೆಟ್ಟಿಯ ಹಿರಿಯ ಇಲ್ಲವೆ ಕಿರಿಯ ಪುತ್ರನಾಗಿರಬೇಕು. ಸೋಯಸೆಟ್ಟಿಯು ತನ್ನ ಅಜ್ಜ ಮಾದಿಸೆಟ್ಟಿಯ ಹಾಗೆ ವೀರನಾಗಿದ್ದು ಯುದ್ಧಗಳಲ್ಲಿ ನಿರತನಾಗಿದ್ದುದು ತಿಳಿದು ಬರುತ್ತದೆ. ಈತನ ಇಬ್ಬರು ಪುತ್ರರು ಯುದ್ಧಮಾಡುತ್ತ ವೀರಮರಣವನ್ನು ಹೊಂದಿದ್ದಾರೆ. ಅವರೆಂದರೆ ಹಿರಿಯ ನಾಗಯ್ಯ ಮತ್ತು ಚಿಕ್ಕನಾಗಯ್ಯ ಇವರು ಯುದ್ಧದಲ್ಲಿ ಹೋರಾಡುತ್ತ ವೀರಸ್ವರ್ಗ ಹೊಂದಿದ ಅಂಶವನ್ನು ಶಾಸನದಲ್ಲಿ[19] ''ಶ್ರೀಮಂನಾಳ್ಪ್ರಭು ಸೋಯಸೆಟ್ಟಿಯ ತನೂಜಾತಂ ಮಹಾವೀರ ಭೂನಾಥಂ ಶಕ್ತಿಕುಮಾರನಂತೆ ಚಲದಂಕಂ ಶಸ್ತ್ರ ಸಂಘಾತ ಸಂಘಟ್ಟೋದ್ಘಟ್ಟನ ವಿಸ್ಫುಳಿಂಗ ಸಮರೋದಗ್ರಾರಿ ಸಂಹಾರ ಭೂಸ್ವರ್ಗಾಭೋಗಮನಿದ್ದು ನಾಗನೆರದಂ ಸ್ವರ್ಗೋತ್ಥ ಸಂಭೋಗಮಂ ಹಿರಿಯ ನಗ್ಗೆಯನ ಕಲು'' ಎಂದು ಬರುತ್ತದೆ. ಇದೇ ರೀತಿಯಲ್ಲಿ ಚಿಕ್ಕ ನಾಗಯ್ಯನು ವೀರಸ್ವರ್ಗ ಪಡೆದುದನ್ನು ಇನ್ನೊಂದು ಶಾಸನ[20] ನಿರೂಪಿಸ್ತುತ್ತದೆ.

ಉಪಲಬ್ದ ಆಧಾರಗಳಿಂದ ಕಲಕೇರಿ ಶೆಟ್ಟಿ ಮನೆತನದ ಇತಿಹಾಸ ಸೋಯಸೆಟ್ಟಿಯ ವರೆಗೆ ತಿಳಿದು ಬರುತ್ತದೆ. ಅಂದರೆ ೧೩ನೆಯ ಶತಮಾನದ ಅಂತ್ಯದವರೆಗೆ ಈ ಮನೆತನದವರು ಆಳಿದ್ದಾರೆ. ಇವರ ಕಾಲದಲ್ಲಿ ನೆಟ್ಟ ಅನೇಕ ವೀರಗಲ್ಲುಗಳು, ಮಾಸ್ತಿಕಲ್ಲುಗಳು, ಸೋಮೇಶ್ವರ ದೇವರಿಗೆ ಬಿಟ್ಟ ದತ್ತಿ ದಾನಗಳನ್ನು ತಿಳಿಸುವ ಶಾಸನಗಳು ಇಂದಿಗೂ ನಿಂತಿವೆ. ಶೈವರಾದ ಈ ನಾಳ್ಪ್ರಭುಗಳು ಬೌದ್ಧ, ಜೈನ, ವೈಷ್ಣವ ಧರ್ಮದ ಜನರನ್ನು ಸಮಾನವಾಗಿ ಕಂಡಿದ್ದಾರೆ. ಕಲಕೇರಿಯನ್ನು ಬನವಾಸಿ-೧೨೦೦೦ ವಿಭಾಗಕ್ಕೆ ಒಂದು ಪ್ರಮುಖ ಪಟ್ಟಣವನ್ನಾಗಿ ಮಾಡಿದ ಶ್ರೇಯಸ್ಸು ಇವರದಾಗಿದೆ. ಈಗ ಕಲಕೇರಿಯಲ್ಲಿ ವೀರಶೈವ ಬಣಜಿಗರಾರು ಇಲ್ಲ. ಇದ್ದ ಒಂದು ಮನೆತನ ಇಲ್ಲಿಯ ತಮ್ಮ ಅಪಾರ ಗದ್ದೆ, ಹೊಲವನ್ನು ಮಾರಿಕೊಂಡು ಬೇರೆಡೆ ವಾಸವಾಗಿದ್ದಾರೆ. ಇವರನ್ನು ಅಲ್ಲಿ ಕಲಕೇರಿ ಶೆಟ್ಟರೆಂದು ಕರೆಯಲಾಗುತ್ತದೆ. ಇವರಿಗೆ ಕಲಕೇರಿಯಲ್ಲಿ ನಡೆಯುವ ಬಸವಣ್ಣದೇವರ ಮತ್ತು ವೀರಭದ್ರದೇವರ ರಥೋತ್ಸವದಲ್ಲಿ ಇಂದಿಗೂ ವಿಶೇಷ ಸ್ಥಾನವಿರುವುದನ್ನು ಸ್ಥಳೀಯರು ತಿಳಿಸುತ್ತಾರೆ. ಹೀಗಾಗಿ ಈ ಮನೆತನದವರೇ ಹಿಂದೆ ಕಲಕೇರಿಯ ನಾಳ್ಪ್ರಭುಗಳದಾಗಿರಬಹುದು. ಈ ದಿಶೆಯಲ್ಲಿ ಇನ್ನೂ ಹೆಚ್ಚಿನ ಶೋಧ ಬಯಸುತ್ತದೆ. ○

---

19. ಅದೇ, ೩೧೭, ೧೨-೧೩ನೇ ಶತಮಾನ ಕಲಕೇರಿ, ಹಾನಗಲ್ಲು (ತಾ) ಧಾರವಾಡ (ಜಿ)
20. ಅದೇ, ೩೧೮೭, ೧೨-೧೩ನೇ ಶತಮಾನ, ಕಲಕೇರಿ, ಹಾನಗಲ್ಲು (ತಾ) ಧಾರವಾಡ (ಜಿ).

ಹನುಮಾಕ್ಷಿ ಗೋಗಿ *

# ಆರನೆಯ ವಿಕ್ರಮಾದಿತ್ಯನ ಇನ್ನೊಬ್ಬ ರಾಣಿ ಧಾರಲದೇವಿ

ಕಲ್ಯಾಣಚಾಲುಕ್ಯ ಚಕ್ರವರ್ತಿಗಳಲ್ಲಿ ಅತ್ಯಂತ ದೀರ್ಘ ಕಾಲದವರೆಗೆ ಆಳಿದ 'ನಿತ್ಯಭೂಮಿದಾನಲೋಲ'ನಾಗಿ ಸಹಸ್ರಾರು ಸಂಖ್ಯೆಯ ದಾನಶಾಸನಗಳನ್ನು ಬರೆಯಿಸಿದ, ಬಿಲ್ಹಣ ಕವಿಯಿಂದ

ನಾಸೀದಸ್ತಿ ಭವಿಷ್ಯತಿ ಕ್ಷಿತೀತಲೇ ಕಲ್ಯಾಣಕಲ್ಪಂ ಪುರಂ।
ನೋದೃಷ್ಟಃ ಶ್ರುತ ಏವವಾ ಕ್ಷಿತಿಪತಿಃ
ಶ್ರೀ ವಿಕ್ರಮಾರ್ಕೋಪಮಃ॥

ಎಂದು ಹೊಗಳಿಸಿಕೊಂಡ ತ್ರಿಭುವನಮಲ್ಲ ೬ನೆಯ ವಿಕ್ರಮಾದಿತ್ಯನ ಹೆಸರು ದಕ್ಷಿಣಭಾರತದ ಇತಿಹಾಸದಲ್ಲಿಯೇ ತುಂಬ ಸುಪ್ರಸಿದ್ಧವಾದ ಹೆಸರು. ಆತ 'ಸ್ತ್ರೀಲೋಲ ರತಿಲೋಲ'ನೂ ಆಗಿದ್ದನೆಂಬುದನ್ನು ಈ ಪ್ರಬಂಧ ತಮ್ಮೆದುರಿಗೆ ತೆರೆದಿಡುತ್ತಲಿದೆ.

'ರಾಜಾನೋ ಬಹುವಲ್ಲಭಾಃ' ಎಂಬುದನ್ನು ನಮ್ಮ ನಾಡಿನ ಸಮಾಜ-ಸಂಸ್ಕೃತಿಗಳೆರಡೂ ಒಪ್ಪಿಕೊಂಡಿರುವ ಮಾತು. ಚಕ್ರವರ್ತಿಗಳಾದವರು ಪ್ರತಿಷ್ಠೆಯ ಕಾರಣವಾಗಿ, ಸಾಮ್ರಾಜ್ಯವನ್ನು ವಿಸ್ತರಿಸುವ ಸಂದರ್ಭದಲ್ಲಿ ನೆರೆಹೊರೆಯ ಪ್ರಬಲ ರಾಜಮನೆತನಗಳನ್ನು ವಿರೋಧಿಸದೇ ವೈವಾಹಿಕ ಸಂಬಂಧಗಳನ್ನು ಬೆಳೆಸಿದ ಕಾರಣವಾಗಿ, ದುರ್ಬಲ ಅರಸುಮನೆತನದವರು ಸೋತಾಗ ಅಥವಾ ಸೋಲುವ ಸಂದರ್ಭದಲ್ಲಿ ತಮ್ಮ ಮಕ್ಕಳನ್ನು ಮದುವೆ ಮಾಡಿಕೊಡುವ ಕಾರಣವಾಗಿ, ಸಾಮಂತರು-ಮಹಾಮಂಡಲೇಶ್ವರರು-ಇನ್ನಿತರ ಅಧಿಕಾರಿಗಳ ನಿಷ್ಠೆ ಅಚಲವಾಗಿ ಉಳಿಯಲು ಚಕ್ರವರ್ತಿಗಳಾದವರು ಅವರ ಮನೆತನಗಳೊಂದಿಗೆ ವೈವಾಹಿಕ ಸಂಬಂಧಗಳನ್ನು ಬೆಳೆಸುತ್ತಿದ್ದುದರಿಂದಾಗಿ, ಚಕ್ರವರ್ತಿಯ ಭೇಟಿಯ ಸಂದರ್ಭದಲ್ಲಿ ಇನ್ನಿತರ ಉಡುಗೊರೆಗಳ ಜೊತೆಗೆ ಕನ್ಯೆಯರನ್ನೂ ಉಡುಗೊರೆಯಾಗಿ ನೀಡುತ್ತಿದ್ದುದರಿಂದಾಗಿ, ಸ್ವಯಂವರ ಸಂದರ್ಭಗಳಲ್ಲಿ ತಮ್ಮ ಶೌರ್ಯ-ಧೈರ್ಯ-ಕ್ಷಾತ್ರತೇಜಗಳನ್ನು ಮೆರೆಯುವ ಚಕ್ರವರ್ತಿಗಳ ಹೆಬ್ಬಯಕೆಯ ಕಾರಣದಿಂದಾಗಿ ಬಹುಜನ ಪತ್ನಿಯರನ್ನು ಹೊಂದುವ ಸಂದರ್ಭ ಅವರಿಗೆ ಪ್ರಾಪ್ತವಾಗುತ್ತಿತ್ತು. ಇದಕ್ಕೆ ಉದಾಹರಣೆಯಾಗಿ ಹೊಯ್ಸಳ ವಿಷ್ಣುವರ್ಧನ, ಹೊಯ್ಸಳ ವೀರಬಲ್ಲಾಳ, ವಿಜಯನಗರದರಸು ಶ್ರೀಕೃಷ್ಣದೇವರಾಯರಾದಿಯಾಗಿ ೬ನೆಯ ವಿಕ್ರಮಾದಿತ್ಯನನ್ನೂ ಹೆಸರಿಸಬಹುದು. ಆದರೆ ದಾಖಲೆಗಳ ಆಧಾರದಿಂದ ಇದುವರೆಗೆ ದೊರೆತ ರಾಣಿಯರ ಹೆಸರುಗಳನ್ನು ಗಮನಿಸಿದಾಗ ಸಂಖ್ಯೆಯಲ್ಲಿಯೂ ಉಳಿದೆಲ್ಲ ಅರಸರನ್ನು ಮೀರಿಸಿದ ಹೆಗ್ಗಳಿಕೆ ೬ನೆಯ ವಿಕ್ರಮಾದಿತ್ಯನದು. ಇದುವರೆಗೆ ೯೬,೦೦೦ ಹೆಂಡಿರನ್ನು ಹೊಂದಿದ ಭರತೇಶ ಚಕ್ರವರ್ತಿ, ೧೬,೦೦೦ ಹೆಂಡಿರನ್ನು ಹೊಂದಿದ ಶ್ರೀಕೃಷ್ಣನಂತಹ ಪೌರಾಣಿಕ ವ್ಯಕ್ತಿಗಳನ್ನು ಹೊರತುಪಡಿಸಿದರೆ ಐತಿಹಾಸಿಕವಾಗಿ ಅತಿ ಹೆಚ್ಚಿನ ಸಂಖ್ಯೆಯ ಹೆಂಡಿರನ್ನು ಹೊಂದಿದ ಹೆಗ್ಗಳಿಕೆಯೂ ವಿಕ್ರಮಾದಿತ್ಯನಿಗೇ ಸಲ್ಲುತ್ತದೆ.

ವಿಕ್ರಮಾದಿತ್ಯನ ಪತ್ನಿಯರಲ್ಲಿ ಪಿರಿಯರಸಿಯರಿದ್ದಾರೆ, ಪಿರಿಯರಸಿ ಪಟ್ಟಮಹಾದೇವಿಯರಿದ್ದಾರೆ, ಪಟ್ಟಮಹಾದೇವಿಯರಿದ್ದಾರೆ, ನೃಪಾಂಗನೆಯರಿದ್ದಾರೆ, ಅರ್ಧಾಂಗಿಯರಿದ್ದಾರೆ ಅಲ್ಲದೆ ತ್ರಿಭುವನಮಲ್ಲದೇವ ವಿಶಾಲ-ವಿಶಾಲ-ವಿಶಾಲ ವಕ್ಷಸ್ಥಲ ನಿವಾಸಿನಿಯರೂ ಇದ್ದಾರೆ! ಇವರಲ್ಲಿ ಪಿರಿಯರಸಿಯರೆಂದರೆ ಯಾರೆಂಬ ಬಗ್ಗೆ ಖಚಿತ

* "ಕಾರ್ತಿಕ ಶ್ರೀ", ನವನಗರ, ಹುಬ್ಬಳ್ಳಿ, ೫೮೦ ೦೨೫

ವಿವರಗಳಿಲ್ಲ. ಅರಸನ ಪಟ್ಟಬನ್ಧೋತ್ಸವದ ಘಟನೆಗೆ ಹಿಂದೆ ಮದುವೆಯಾದವರಲ್ಲ ಪಿರಿಯರಸಿಯರೇ ಅಥವಾ ವಯಸ್ಸಿನಲ್ಲಿ ಉಳಿದ ರಾಣಿಯರಿಗಿಂತ ಹಿರಿಯರಾದವರೇ ಅಥವಾ ಅರಸನ ಅತ್ಯಂತ ಪ್ರೀತಿ ಪಾತ್ರರಾದ ರಾಣಿಯರೇ ಎಂಬುದೂ ಸ್ಪಷ್ಟವಾಗುವುದಿಲ್ಲ. ಇನ್ನು ಪಟ್ಟಬನ್ಧ ಕಾಲದಲ್ಲಿ ಚಕ್ರವರ್ತಿಯೊಂದಿಗೆ ಪಟ್ಟಾಭಿಷಿಕ್ತಗೊಂಡ ರಾಣಿ ಪಟ್ಟಮಹಾದೇವಿಯಾಗುತ್ತಾಳೆ. ಆಕೆ ಪಿರಿಯರಸಿಯಾಗಿದ್ದರೆ ಪಿರಿಯರಸಿಪಟ್ಟಮಹಾದೇವಿಯೆಂದು ಕರೆಯಿಸಿ ಕೊಳ್ಳುತ್ತಾಳೆ. ಒಂದು ಕಾಲಕ್ಕೆ ಒಬ್ಬಳೇ. ಪಟ್ಟಮಹಾದೇವಿಯಿದ್ದು ಅವಳು ಗತಿಸಿದರೆ, ಅವಳಿಗೆ ಮಕ್ಕಳಾಗದಿದ್ದರೆ ಇನ್ನೊಬ್ಬ ರಾಣಿಯನ್ನು ಪಟ್ಟಮಹಾದೇವಿಯನ್ನಾಗಿ ಮಾಡಿಕೊಳ್ಳ ಲಾಗುತ್ತಿತ್ತು. ಹಾಗೆಯೇ ವಿಕ್ರಮಾದಿತ್ಯನಿಗೆ ಮೊದಲು ಮೈಳಲದೇವಿ, ನಂತರ ಮಲಯಮತಿದೇವಿ, ಮಲ್ಲಣಿ ದೇವಿಯರು ಪಟ್ಟಮಹಾದೇವಿಯರಾಗುತ್ತಾರೆ. ಆದರೆ ಮೈಳಲದೇವಿ ಮತ್ತು ಆಕೆಯ ಮಗ ಯುವರಾಜ ಮಲ್ಲಿಕಾರ್ಜುನ ಮಡಿದು[1], ಮಲೆಯಮತಿ ದೇವಿಗೆ ಒಬ್ಬಳೇ ಮಗಳು ಹುಟ್ಟಿ[2] ಗಂಡು ಮಕ್ಕಳಿಲ್ಲದುದರಿಂದ ಪಿರಿಯರಸಿ ಚಂದಲದೇವಿಯ ಮಗ ಮೂರನೆಯ ಸೋಮೇಶ್ವರ, ೬ನೆಯ ವಿಕ್ರಮಾದಿತ್ಯನ ನಂತರ ಪಟ್ಟವೇರುತ್ತಾನೆ.[3] ಕರಹಾಡ ಶಿಲಾಹಾರ ರಾಜಕುಮಾರಿ ಚಂದಲದೇವಿ ಯಾವ ದಾಖಲೆಗಳಲ್ಲಿಯೂ ಪಟ್ಟ ಮಹಾದೇವಿ ಎಂದು ಕರೆಸಿಕೊಳ್ಳುವುದಿಲ್ಲ. ಬಹುಶಃ ಮಲಯಮತಿದೇವಿಗಿಂತ ಮುಂಚೆಯೇ ಆಕೆ ಕ್ರಿ.ಶ. ೧೧೧೦ರಲ್ಲಿ[4] ಮಡಿದಿರಬೇಕೆಂದು ತೋರುತ್ತದೆ.

ಇದುವರೆಗೆ ಸಂಶೋಧಕರು ೬ನೆಯ ವಿಕ್ರಮಾದಿತ್ಯನ ೨೨ ಜನ ರಾಣಿಯರನ್ನು ಗುರುತಿಸಿದ್ದಾರೆ. ಡಾ॥ ಚೆನ್ನಕ್ಕ ಎಲಿಗಾರರು, ತಮ್ಮ ಮಹಾಪ್ರಬಂಧ 'ಶಾಸನಗಳಲ್ಲಿ ಕರ್ನಾಟಕದ ಸ್ತ್ರೀ ಸಮಾಜ' ದಲ್ಲಿ ೧೬ ಜನ ರಾಣಿಯರೆಂದು ಹೇಳಿ ೧೧ ಜನರನ್ನು ಹೆಸರಿಸುತ್ತಾರೆ.[5] ನಂತರ ಡಾ॥ ಜೆ. ಎಂ. ನಾಗಯ್ಯನವರು ತಮ್ಮ ಮಹಾಪ್ರಬಂಧ, 'ಆರನೆಯ ವಿಕ್ರಮಾದಿತ್ಯನ ಶಾಸನಗಳು ; ಒಂದು ಅಧ್ಯಯನ'ದಲ್ಲಿ ೧೯ ಜನ ರಾಣಿಯರನ್ನು ಹೆಸರಿಸುತ್ತಾರೆ.[6] ತದನಂತರ ಡಾ॥ ಚೆನ್ನಕ್ಕ ಎಲಿಗಾರರು ತಮ್ಮ 'ಪ್ರಾಚೀನ ಕರ್ನಾಟಕದ ರಾಣಿಯರು' ಕೃತಿಯಲ್ಲಿ ೨೦ ಜನ ರಾಣಿಯರ ಪಟ್ಟಿಯನ್ನು ನೀಡುತ್ತಾರೆ[7]. ಅವರು ಹೆಸರಿಸಿದ ರಾಣಿಯರೆಂದರೆ-

೧) ಚೋಳರಾಣಿ[8] ೨) ಕದಂಬರಾಣಿ[9] ೩) ಸಾವಳದೇವಿ[10] ೪) ಪದ್ಮಲ ದೇವಿ[11] ೫) ಕೇತಲದೇವಿ[12] ೬) ಲಕ್ಷ್ಮೀದೇವಿ[13] ೭) ಚಂದಲದೇವಿ[14] ೮) ಪಿರಿಯ ಕೇತಲ

1. ವಿಕ್ರಮಾದಿತ್ಯನ ಶಾಸನಗಳು - ಜೆ. ಎಂ. ನಾಗಯ್ಯ, ಪು. ೫೩
2. SII XI (ii) ೧೫೪, ೧೧೦೪ ಜನೇವರಿ ೧೧, ಕನಕೂರು, ಧಾರವಾಡ
3. Corpus of Inscriptions in the Telangana Districts, Part IV ೨೧, ೧೧೨೭ ಫೆಬ್ರವರಿ ೨೦, ಪಟ್ಟಣಚೆರು
4. ARIE ೧೯೬೦-೬೧, ನಂ.೮೬ ಕೊಲ್ಹಾಪುರ. ಈ ಶಾಸನದಲ್ಲಿ ಆಕೆಯ ಮಗ ಕುಮಾರ ತೈಲಪದೇವ ಚಂದಲೇಶ್ವರ ದೇವಸ್ಥಾನ ಕಟ್ಟಿಸಿದ
   ಉಲ್ಲೇಖವಿರುವುದರಿಂದ (ಕ್ರಿ.ಶ.೧೧೧೦) ಆ ವೇಳೆಗಾಗಲೇ ಮಡಿದಿರಬೇಕೆಂದು ಊಹಿಸಬಹುದಾಗಿದೆ.
5. ಶಾಸನಗಳಲ್ಲಿ ಕರ್ನಾಟಕದ ಸ್ತ್ರೀಸಮಾಜ, ಚೆನ್ನಕ್ಕ ಎಲಿಗಾರ.
6. ವಿಕ್ರಮಾದಿತ್ಯನ ಶಾಸನಗಳು, ಜೆ.ಎಂ.ನಾಗಯ್ಯ ಪು. ೩೧
7. ಪ್ರಾಚೀನ ಕರ್ನಾಟಕದ ರಾಣಿಯರು, ಅನುಬಂಧ
8. ಬಿಲ್ಹಣನ ವಿಕ್ರಮಾಂಕದೇವಚರಿತ, ಸಂಧಿ V ನು, ೨೯-೮೦
9. EI XIII No.28 (A) ೧೧೨೫ ಆಗಸ್ಟ್ ೨೮, ಕುಂಭಾಪುರ ಬಿಲ್ಹಣನ ವಿಕ್ರಮಾಂಕದೇವ ಚರಿತ, ಸಂಧಿ V ನು, ೨೫
10 ARIE 1946 No. 227 ನರೇಗಲ್ಲು ಧಾರವಾಡ; Bombay Gazetteer, Vol. I (ii) P. 446 & 448
11. SII IX (i) ೧೯೫ ೧೧೧೬ ಡಿಸೆಂಬರ್ ೨೪, ರಂಗಪುರಂ, ಹಡಗಲಿ (ತಾ)
12. SII XX ೫೧, ೧೦೭೭ ಡಿಸೆಂಬರ್ ೨೪, ಕುಳೇಕುಮಟ್ಟಿ, ಸಿಂದಗಿ (ತಾ)
13. SII XI (ii) ೧೨೬, ೧೦೮೦ ಡಿಸೆಂಬರ್ ೧೪, ಡೋಣಿ, ಮುಂಡರಗಿ (ತಾ); EI XV No.೬, ೧೦೮೪ ಡಿಸೆಂಬರ್ ೨೪, ಸೂಡಿ, ರೋಣ (ತಾ)
   SII XX ೯೪, ಖೇಡಗಿ, ಇಂಡಿ (ತಾ); IA 10.No. CXVI ೧೦೯೬ ಜನೇವರಿ ೩, ಡಂಬಳ, ಗದಗ (ತಾ); ಹರಿಹರನ ತೆಲುಗು ಜೊಮ್ಮಯ್ಯ ರಗಳೆ
   ಪು. ೩೩೦ ೩೪೭; ಲಕ್ಕಣ್ಣ ದಂಡೇಶನ ಶಿವತತ್ವಚಿಂತಾಮಣಿ ಪು ೩೫೪-೩೫೬;
14. ಬಿಲ್ಹಣನ ವಿಕ್ರಮಾಂಕದೇವಚರಿತೆ, ಅಧ್ಯಾಯ VIII-XIII APGAS ೩, ೧೦೮೨ ಡಿಸೆಂಬರ್ ೨೫, ಅಳಂದ, ಅಳಂದ (ತಾ); Jainism in South
   India & Some Jaina Epigraphs, No. 2, 1098 ಜನವರಿ ೫, ಹುಣಸಿಹಡಗಲಿ, ಚಿತಾಪುರ (ತಾ); H & C 45, 1110, ಕಾಳಗಿ, ಚಿತಾಪುರ
   (ತಾ); SII XI (ii) ೧೪೨, ೧೦೯೬ ಡಿಸೆಂಬರ್ ೨೨, ಕಟ್ಗೇರಿ, ಬಾದಾಮಿ (ತಾ) ; H & C ೩೪, ೧೧೦೩ ಡಿಸೆಂಬರ್ ೧೦, ರುದ್ರವಾಡಿ, ಅಳಂದ
   (ತಾ); SII IX (i) ೧೬೧, ೧೦೯೨ ಏಪ್ರಿಲ್ ೨೪, ಚಿನ್ನತುಂಬಳ, ಅದೋನಿ (ತಾ); SII XVIII No. ೯೭, ೧೦೯೦ ಫೆಬ್ರವರಿ ೭, ಬಂಕಾಪುರ
   ಶಿಗ್ಗಾಂವ (ತಾ); ಅಪ್ರಕಟಿತ ಧರಿಯಾಪುರ ಶಾಸನ, ಶಹಾಪುರ (ತಾ) -ಹನುಮಾಕ್ಷಿಗೋಗಿ

ವಿ [15] ೯) ಇಂಗುಳಿಗೆಯ ಜಾಕಲದೇವಿ[16] ೧೦) ಮೈಳಲ
ಹಾದೇವಿ[17] ೧೧) ಶ್ರೀಯಾದೇವಿ[18] ೧೨) ಮನ್ನಾದೇವಿ[19]
೩) ಮಲೆಯಮತಿದೇವಿ[20] ೧೪) ಮಲ್ಲಣಿದೇವಿ[21] ೧೫)
ಗ್ಗಲದೇವಿ[22] ೧೬) ಅಬ್ಬಲದೇವಿ[23] ೧೭) ಭಾಗಲದೇವಿ[24]
೮)ಮಾಳಲದೇವಿ[25] ೧೯)ಯಂಗಲದೇವಿ[26] ಮತ್ತು ೨೦)
ಬ್ಬಲದೇವಿಯರು.[27]

ಇವರಲ್ಲಿ ಯಂಗಲದೇವಿಯನ್ನು ಚೆನ್ನಕ್ಕನವರು ಂದಿಗ್ಧರಾಣಿ ಎನ್ನುತ್ತಾರೆ.[28] ರೆಬ್ಬಲ ದೇವಿಯನ್ನು ಡಾ॥ ್ರೀನಿವಾಸ ರಿತ್ತಿಯವರು ಗುರುತಿಸಿದ್ದು ಶಾಸನದಲ್ಲಿ ಪ್ರಷ್ಟವಾಗಿಲ್ಲ ಎಂದು ಚೆನ್ನಕ್ಕನವರು ಹೇಳುತ್ತಾರೆ.[29] ಇಲ್ಲಿ ಡಾ॥ ರಿತ್ತಿಯವರು ಸಂಗ್ರೋಳಿ ಶಾಸನದಲ್ಲಿ ಚಾಲುಕ್ಯ ಕ್ರಮ ವರ್ಷದಲ್ಲಿ ರೆಬ್ಬಲದೇವಿಯೆಂಬವಳು ನೀಡಿದ ದಾನದ ಗ್ಗೆ ಶಾಸನಪಾಠವನ್ನು ನೀಡಿದ್ದಾರೆಯೇ ಹೊರತು ಆಕೆ ವಿಕ್ರಮಾದಿತ್ಯನ ರಾಣಿಯೆಂದು ಹೇಳುವುದಿಲ್ಲ. ಕಾರಣ ಅವಳನ್ನು ಈ ಪಟ್ಟಿಯಿಂದ ಕೈಬಿಡಬಹುದಾಗಿದೆ. ಮೊದಲ ಆರು ಜನರನ್ನು ಡಾ॥ ನಾಗಯ್ಯನವರು ಪಟ್ಟಾಭಿಷೇಕ ಪೂರ್ವದ ರಾಣಿಯರೆನ್ನುತ್ತಾರೆ.[30] ಇವರೇ ಹೆಸರಿಸಿದ ಅಂಗಬ್ಬರಸಿ[31] ಮತ್ತು ಹಿರೇಲಿಂಗದಳ್ಳಿ ಜಾಕಲ ದೇವಿಯರನ್ನು[32] ಸೇರಿಸಿದರೆ ಈ ರಾಣಿಯರ ಸಂಖ್ಯೆ ೨೧ಕ್ಕೆ ಏರುತ್ತದೆ. ಡಾ॥ಚೆನ್ನಕ್ಕನವರು ತಮ್ಮ 'ಪ್ರಾಚೀನ ಕರ್ನಾಟಕದ ರಾಣಿಯರು' ಕೃತಿಯಲ್ಲಿ ಜಾಕಲದೇವಿಯರು ಮೂರುಜನ ಎಂದು ಹೇಳಿ ಇಂಗಳಗಿ ಮತ್ತು ಹಿರೇಲಿಂಗದಳ್ಳಿಯ ಜೌಕಲದೇವಿಯರ ಜೊತೆ ಹುಣಸೀಹಡಗಲಿ ಶಾಸನೋಕ್ತ ಜೌಕಲದೇವಿ ಧಾರವಾಡ ಜಿಲ್ಲೆಯ ಭಾಗವನ್ನು ಆಳುತ್ತಿದ್ದಳೆಂದು ಹೇಳುತ್ತಾರೆ.[33] ಇಲ್ಲಿ ಅವರ ಗಮನ ಹಿರೇಲಿಂಗದಳ್ಳಿ ಶಾಸನೋಕ್ತ ಜಾಕಲದೇವಿಯ ಮೇಲಿದೆ. ಹುಣಸೀಹಡಗಲಿ ಶಾಸನದಲ್ಲಿ ಉಕ್ತಳಾದವಳು ಚಂದಲ ದೇವಿಯೇ ಹೊರತು ಜಾಕಲದೇವಿಯಲ್ಲ. ಹೀಗೆ ಕಾವ್ಯ ಮತ್ತು ಇದುವರೆಗೆ ಶಾಸನಗಳಲ್ಲಿ ದೊರೆತ ೬ನೆಯ ವಿಕ್ರಮಾದಿತ್ಯನ ರಾಣಿಯರ ಪಟ್ಟಿಗೆ 'ಧಾರಲದೇವಿ' ಎಂಬ ಇನ್ನೊಬ್ಬಳನ್ನು ಈ ಪ್ರಬಂಧ ಸೇರಿಸುತ್ತದೆ.

ಇತ್ತೀಚೆಗೆ ಗುಲ್ಬರ್ಗ ಜಿಲ್ಲೆಯ ಸುರಪುರ ತಾಲ್ಲೂಕಿನಲ್ಲಿ ಕೈಕೊಂಡ ಶಾಸನಗಳ ಪರಿವೀಕ್ಷಣೆ ಸಮಯದಲ್ಲಿ ಬೊಮ್ಮನಹಳ್ಳಿಯ ಗುಡ್ಡದಲ್ಲಿ ನೆಲಸಮವಾದ

15. SII IX (i) ೧೫೯, ೧೯೨, ಸಿರುಗುಪ್ಪ, ಸಿರುಗುಪ್ಪ (ತಾ)
16. H & C ೨೧, ೧೯೪ ಫೆಬ್ರವರಿ ೨೭, ಇಂಗಳಗಿ, ಚಿತಾಪುರ (ತಾ)
17. SII XX ೬೧, ೧೯೪ ಮಾರ್ಚ್ 19, ಕನ್ನೊಳ್ಳಿ, ಸಿಂದಗಿ (ತಾ)
18. H & C ೨೨, ೧೯೬ ಬಗದಾಳ, ಬೀದರ (ತಾ)
19. APGAS ೩, ೩೬, ೧೧೦೧ ಡಿಸೆಂಬರ್ ೨೪, ಆಲಂಪುರ
20. APGAS ೯ No.೧೭, ೧೧೦೭ ಡಿಸೆಂಬರ್ ೧೬, ದಿಗ್ಗಾಂವ, ಚಿತಾಪುರ (ತಾ); SII IX (i) ೧೭೫, ೧೧೦೭ ಡಿಸೆಂಬರ್ ೩೧, ಚಿನ್ನತುಂಬಳಮ್, ಆದೋನಿ (ತಾ); KI V ೧೬, ೧೧೧೭ ಡಿಸೆಂಬರ್ 24, ಧಾರವಾಡ (ತಾ); ARIE ೧೯೬೧-೬೨, ೫೩೦, ೧೦೯೬, ಬಾಗಲವಾಡ; ARIE ೧೯೫೯-೬೦ No.೧೨೪, ೧೧೦೫ ಅಲಂಪುರ ; ಅದೇ ೧೨೫, ೧೧೦೮; ಅದೇ ೧೨೬, ೧೧೦೯; SII XI (ii) ೧೫೪, ೧೧೦೪ ಜನವರಿ ಕನಕೂರು, ಧಾರವಾಡ (ತಾ); KI V ೩೩, ೧೧೭೬ ಫೆಬ್ರವರಿ ೨೪, ಗೋಲಿಹಳ್ಳಿ, ಖಾನಾಪುರ (ತಾ); ಹುಣಸಗಿಶಾಸನ (ಸುರಪುರ ತಾಲ್ಲೂಕು); ೧೧೨೦ ಅಕ್ಟೋಬರ್ ೨೪-ಹನುಮಾಕ್ಷಿಗೋಗಿ
21. Inscriptions from Nanded District No. ೨೩, ೧೧೨೨ ಡಿಸೆಂಬರ್ ೬, ಭಿವ್ರಾ, ದೆಗಲೂರು (ತಾ)
22. ಮೇಲಿನಂತೆ
23. HAS ೧೮, No ೯, ೧೧೨೪ ಡಿಸೆಂಬರ್ ೨೪, ಲಿಂಗಸುಗೂರು (ತಾ)
24. SII XI (ii) ೨೦೬, ಸಿರೂರು, ಮುಂಡರಗಿ (ತಾ)
25. ಪ್ರಾಚೀನ ಕರ್ನಾಟಕದ ರಾಣಿಯರು
26. Inscriptions from Nanded District, ಸಂಗ್ರೋಳಿ ಶಾಸನ
27. ಪ್ರಾಚೀನ ಕರ್ನಾಟಕದ ರಾಣಿಯರು
28. ಮೇಲಿನದೇ
29. ಮೇಲಿನದೇ
30. ಜೆ.ಎಂ. ನಾಗಯ್ಯ, ಪು. ೩೦
31. SII XVIII No. ೯೪, ೧೦೮೯ ಜೂನ್ ೧೧, ದೇವರಗೆಣ್ಣೂರು, ವಿಜಾಪುರ (ತಾ)
32. SII XVIII No ೧೨೭, ಹಿರೇಲಿಂಗದಳ್ಳಿ, ಹಾವೇರಿ (ತಾ)
33. ಪ್ರಾಚೀನ ಕರ್ನಾಟಕದ ರಾಣಿಯರು

ಚಿಕ್ಕಗುಡಿಯೊಂದರ ಸಮೀಪ ಬಿದ್ದಿರುವ ಶಾಸನದ ಕಲ್ಲಿನಲ್ಲಿ 'ಧಾರಲದೇವಿ' ಎನ್ನುವ ಹೆಸರಿನ ರಾಣಿಯ ಉಲ್ಲೇಖವಿದೆ. ಶಾಸನವು ೨'×೪' ಗಾತ್ರದ ಸೇದಿ ಬಂಡಿ(ಸುಣ್ಣದಕಲ್ಲು-Lime Stone)ಯ ಮೇಲೆ ಕೆತ್ತಲಾಗಿದ್ದು ಅಕ್ಷರಗಳು ಸವೆದುಹೋಗಿ, ಬಂಡೆ ಚಕ್ಕಳೆ ಹಾರಿರುವುದರಿಂದ ಮತ್ತು ತುಂಬ ನುಣುಪಾಗಿರುವುದರಿಂದ ಪಡಿಯಚ್ಚನ್ನು ಸರಿಯಾಗಿ ತೆಗೆಯಲು ಸಾಧ್ಯವಾಗಲಿಲ್ಲ. ಶಾಸನದ ಮೇಲ್ಭಾಗ ಒಡೆದು ಕಳೆದು ಹೋಗಿದೆ.

ಶಾಸನವು ಕಲ್ಯಾಣ ಚಾಲುಕ್ಯ ಚಕ್ರವರ್ತಿ ತ್ರಿಭುವನ ಮಲ್ಲನು ಆಳುವಾಗ ಆತನ ವಿಶಾಳ ವಕ್ಷಸ್ಥಳ ನಿವಾಸಿ ನಿಯಾದ ಶ್ರೀ ಮದ್ಧಾರಲದೇವಿಯರು ಮಹಾ ಮಂಡಳೇಶ್ವರ ರೇವರಸರ ಸಮ್ಮುಖದಲ್ಲಿ ದಂಡನಾಯಕ ಧುರಿಮಯ್ಯ ಮತ್ತು ದಣ್ಣನಾಯಕ ಭೋಗಿಮಯ್ಯರಿಗೆ ವ್ರತನೋಂಪಿ ನಿಮಿತ್ತವಾಗಿ ೨೫ ಮತ್ತರು ಗದ್ದೆಯನ್ನು ದಾನವಾಗಿ ಬಿಟ್ಟಳೆಂದು ಹೇಳಿ ಅದರ ಮೇರೆಗಳನ್ನು ತಿಳಿಸುತ್ತದೆ. ಹಾಗೂ ಕನ್ನಡ ಮತ್ತು ಸಂಸ್ಕೃತ ಭಾಷೆಗಳಲ್ಲಿ ಫಲಶ್ರುತಿಯನ್ನು ಅರುಹುತ್ತದೆ. ನಂತರ ದಂಡನಾಯಕ ಭೋಗದೇವನ ಬಗ್ಗೆ ಸುಂದರವಾದ ಕಾವ್ಯಾತ್ಮಕವಾದ ವರ್ಣನೆ ಬರುತ್ತದೆ.

ಶಾಸನದಲ್ಲಿ ಧಾರಲದೇವಿಯನ್ನು "ಸ್ವಸ್ತ್ಯನವರತ ಪರಮಕಲ್ಯಾಣಾಭ್ಯುದಯ, ಸಹಸ್ರಫಳ ಭೋಗಭಾಗಿನಿ ದ್ವಿತೀಯ ಲಕ್ಷ್ಮೀ ಸಮಾನೆ, ಕಳಹಂಸಯಾನೆ, ಅಗಣ್ಯ ಪುಣ್ಯ ಲಾವಣ್ಯಮೂರ್ತಿ, ಗುಣದಂಕಕಾರ್ತಿ, ವಿಕ್ರಮಾದಿತ್ಯದೇವ ಹ್ರಿತ್ಕಂಜಕಿಂಜಲ್ಕಿ, ಪೂಜಾರಜೋರಂಜಿತಾಂಗಗುಣ ಮತ್ತ ಮಧುಕರಿ, ರೂಪವಿದ್ಯಾಧರಿ, ಶ್ರೀಂಗಾರಸಾರಸರ್ಬ್ಬಸ್ವ ಜಿನ ಪೂಜಾಲತೆ, ಅತಿಲೋಕಕಲ್ಪಿತೆ, ಪಲವಿಯ ಕಲ್ಪಲತೆ, ಸಕಳಭುವನವಿಖ್ಯಾತೆ, ಲಜಿವಿ ಪಯೋಧೀಸ್ವರ ಶ್ರೀ ಧರ್ಮದೇವ ಪ್ರಿಯಾತ್ಮಜೆ, ಪ್ರತ್ಯಕ್ಷಗಿರಿಜೆ, ರಿಪುರಾಯ ಕಂಠೀರವನ ಕೀರ್ತ್ತಿಪತಾಕೆ, ಮಹಾಸತಿ ತಿಳಕೆ, ಸಮಸ್ತಾಂತಃ ಪುರ ಚೂಡಾಮಣಿ, ಲಲನಾಜನಾಗ್ರಣಿ, ಶ್ರೀಮತ್ರಿಭುವನ ಮಲ್ಲದೇವ ವಿಸಾಳ ವಕ್ಷಸ್ಥಳ ನಿವಾಸಿನಿ" ಎಂದು ವರ್ಣಿಸಲಾಗಿದೆ.

ಇಲ್ಲಿ 'ಲಜಿವಿಪಯೋಧೀಶ್ವರ ಶ್ರೀ ಧರ್ಮದೇವ ಪ್ರಿಯಾತ್ಮಜೆ' ಎನ್ನುವುದು ಧರ್ಮದೇವನ ಪ್ರೀತಿಯ ಮಗಳು ಧಾರಲದೇವಿ ಎಂಬ ಅರ್ಥ ಕೊಡುತ್ತದೆ. ಆಕೆ ಜೈನ ಧರ್ಮಾವಲಂಬಿಯಾಗಿರಬೇಕೆಂದು ಭಾವಿಸಲು ವ್ರತನೋಂಪಿ ನಿಮಿತ್ತವಾಗಿ ಕೊಡುವ ದಾನ ಮತ್ತು ದಾನಚಿಂತಾವ ಅತ್ತಿಮಬ್ಬೆಗಿರುವ ಪ್ರಶಸ್ತಿಗಳಾದ 'ಗುಣದಂಕಕಾ ಮಹಾಸತಿತಿಳಕೆ' ಪ್ರಶಸ್ತಿಗಳು ಇವಳಿಗೂ ಇರುವು ಪುಷ್ಟಿಯನ್ನೊದಗಿಸುತ್ತದೆ. ಧಾರಲಾ, ಧಾರಲೆ, ಧಾರಲದ ಎನ್ನುವ ಈ ಹೆಸರು ಜೈನಮೂಲದ್ದೇ ಎಂದು ಪ್ರಶ್ನಿಸಿಕೊಂಡ ತೀರ್ಥಂಕರರ ಯಕ್ಷಿಯರಲ್ಲಿ ಈ ಹೆಸರಿನವರಿಲ್ಲ. ಜ ಸಾಹಿತ್ಯದಲ್ಲಿ ಈ ಹೆಸರು ಎಲ್ಲಿಯಾದರೂ ಬ ಗೊಂಡಿದೆಯೇ ಎಂಬುದರ ಬಗ್ಗೆ ಹುಡುಕಬೇಕಾಗಿದೆ. 'ಧ ಧರ' ಎನ್ನುವುದು ಧರಿಸಿದ, ಹೊತ್ತುಕೊಂಡ, ವಶಪ ಕೊಂಡ, ಭೂಷಿತ ಎನ್ನುವ ಅರ್ಥ ನೀಡಿದರೆ 'ಧಾ ಎನ್ನುವ ಶಬ್ದಕ್ಕೆ ಹಿಡಿ, ಆಧರಿಸು, ಪ್ರವಹಿಸು ಎನ್ನುವ ಅರ್ಥ ಜೊತೆಗೆ ವೃಷ್ಟಿ, ಮಂಜು ಎನ್ನುವ ಅರ್ಥಗಳೂ ಇವೆ. ಇ ಶ್ರೀಮತ್ + ಹಾರಲದೇವಿ ಎನ್ನುವುದು ಸಂಧಿಯ ಶ್ರೀಮದ್ಧಾರಲದೇವಿ ಎಂದಾಗಿರಬಹುದೇ ಎಂಬ ಸಂದೇಹ ಮೂಡುತ್ತದೆ.

ಒಟ್ಟಿನಲ್ಲಿ ಜೈನಧರ್ಮಾವಲಂಬಿಯಾದ 'ಧಾ ದೇವಿ' ಹೆಸರಿನ ಒಬ್ಬ ರಾಣಿ ಕಲ್ಯಾಣಚಾಲುಕ್ಯ ಚಕ್ರವ ೬ನೆಯ ವಿಕ್ರಮಾದಿತ್ಯನಿಗಿದ್ದು, ಇದುವರೆಗೆ ದೊರೆತ ಅ ರಾಣಿಯರಲ್ಲಿ ಇವಳು ೨೨ನೆಯವಳಾಗುತ್ತಾಳೆ ಎಂಬುದ ವಿದ್ವಾಂಸರು ಗಮನಿಸಬೇಕು.

ಶಾಸನದ ಪೂರ್ಣಪಾಠ ಈ ಕೆಳಗಿನಂತಿದೆ :

೧ . . . . . . . . . . .ಲ್ಲದೇವನ . . . . . . . . .

೨ . . . . . . . . . . .ಚಂದ್ರಾರ್ಕ. . . . . . . . .

೩ . . . . . . . . . . ಸುಕಸಂಕಥಾ ವಿನೋದದಿಂ....

೪ ಸ್ವಸ್ತ್ಯನವರತ ಪರಮಕಲ್ಯಾಣಾಭ್ಯುದಯ ಸಹಸ್ರ ಭೋಗಭಾಗಿನಿ ದ್ವಿತೀಯ ಲಕ್ಷ್ಮೀಸ

೫ ಮಾನೆ ಕಳಹಂಸಯಾನೆ ಅಗಣ್ಯಪುಣ್ಯ ವಲಾವ ಮೂರ್ತ್ತಿ ಗುಣದಂಕಕಾರ್ತ್ತಿ ವಿಕ್ರಮಾ

೬ ದಿತ್ಯದೇವ ಹ್ರಿತ್ಕಂಜಕಿಂಜಲ್ಕಿ ಪೂಜಾರಜೋರ ತಾಂಗ ಗುಣ ಮುದಿತ ಮತ್ತ ಮಧು

೭ ಕರಿ ರೂಪವಿದ್ಯಾಧರಿ ಶ್ರಿಂಗಾರಸಾರಸರ್ಬ್ಬಸ ಜಿನಪೂಜಾಲತೆ ನಿಜಸಾಮ್ರಾಜ್ಯಲ

೮ ಕ್ಷ್ಮೀ ಅತಿಲೋಕಲ್ಪಿತೆ ಪಲವಿಯ ಕಲ್ಪಲತೆ ಸ 'ಭುವನವಿಖ್ಯಾತೆ ಲಜಿವಿಪಯೋಧೀ

ಸ್ವರ ಶ್ರೀ ಧರ್ಮದೇವ ಪ್ರಿಯಾತ್ಮಜೆ ಪ್ರತ್ಯಕ್ಷಗಿರಿಜೆ ರಿಪುರಾಯ ಕಂಠೀರವನ ಕೀರ್ತ್ತಿಪತಾಕೆ

ಮಾಹಾಸತಿ ತಿಳಕೆ ಸಮಸ್ತಂತಪ್ಪರ ಚೂಡಾಮಣಿ ಲಲನಾಜನಾಗ್ರಣಿ ಶ್ರೀಮತ್ರಿಭುವನಮ

ಲ್ಲದೇವ ವಿಸಾಳವಕ್ಷಸ್ತಳನಿವಾಸಿನಿಯರಪ್ಪ ಶ್ರೀ ಮದ್ವಾರಲದೇವಿಯರು [ಧರೆಗೆ] ಬ್ರತದನೋಂ

ಪಿನಿಮಿತ್ತವಾಗಿ ಶ್ರೀಮನ್ಮಹಾಮಂಡಳೇಶ್ವರಂ ರೇವರಸರು ಶ್ರೀ ಮಚ್ಚಾಳುಕ್ಯ ವಿಕ್ರಮ ಕಾಲ

ದ ೩೧ನೆಯ ವ್ಯಯ ಸಂವತ್ಸರದ ಮಾರ್ಗ್ಗಸಿರ ಸುದ್ಧ ಏಕಾದಸಿ ಬ್ರಿಹಸ್ಪತಿ ವಾರದಂದು ಗೋನಾ

ಲದ ಪ್ರಭು ಶ್ರೀಮನ್ಮಹಾಪ್ರಧಾನಂ....ಶ್ರೀಕರಣ ದಣ್ಣನಾಯಕ ಧುರಿಮಯ್ಯಂಗ

ಳ್ಗೆದಣ್ಣನಾಯಕ ಭೋಗಿಮಯ್ಯಗಳ್ಗೆ ಶ್ರೀಮದ್ವಾ ರಲದೇವಿಯರು ಧಾರಾಪೂರ್ವ್ವಕಂ ಮಾಡಿ

ವತ್ತುಗೆಜೆಯ...ಗಟ್ಟಿ ನೀರ್ವ್ವರಿ ಮೇರೆಯಾಗಿ ಬಿಟ್ಟರ್ ಅರಕಜೆಯು (ಗ್ಗಜಿ) ತಾನ

ಗೆಯಿ.ದ ಬಟ್ಟೆಗೆಲ್ಲಿ ತೆಂಕಣಪಳ್ಳ ಮೇರೆಯಾಗಿ ಬಿಟ್ಟ ಮತ್ತರಿಪ್ಪತ್ತಯ್ದು

ಇದನಾಚಂದ್ರಾರ್ಕ್ಕಂಬರವುದಿತೋದಿತವಾಗೆ ಪಾಳಿಪಂ ಪರಮ ಸು ಖಾ ಙ್ಬದನಕ್ಕುಂ

ಇದನಳಿದ ದುರಾತ್ಮ ನರಕ ಗತಿಗೆ ಗಳಗಳನಿಳಿಗುಂ॥ ಗಂಗಾಸಾಗರ ಯಮುನಾಸಂಗ

೨೦ ಮದೊಳೆ ವಾರಣಾಸಿ ಗಯೆಯೆಂಬೀ ತೀರ್ಥಂಗ ಳೊಳಾತ್ಮ ಕುಲಂ ದ್ವಿಜಪುಂಗವರಾ ಗೋಕುಳ

೨೧ ಮನಳಿದನಿನ್ತಿದನಳಿದ ॥ಸ್ವದತ್ತಂ ಪರದವತ್ತ ವಾಯೋ ಹರೇತಿ ವಸುಂಧರಪ

೨೨ ಷ್ಟಿರ್ವ್ವರ್ಷ ಸಹಶ್ರಾಣಿ ವಿಷ್ಟಾಯಾಂ ಜಾಯತೇಕ್ರಿಮಿ॥ ಪದೆದೆರದಂಗೆ ಬಂದು ಮ .

೨೩ ಣಸದವಂಗೆ ಮನಂ ಮರಲ್ದು ನೋಡಿದ ಗಣಿಕಾಜನಕ್ಕೆ ಮಲೆದೊಡ್ಡಿದ ವೈರಿಬಳಕ್ಕೆ ಕರ್ಣನೆಂ

೨೪ ಬುದು ಖಚರೇಂದ್ರನೆಂಬುದು ಮನೋಭವ ನೆಂಬುದಕಾಳ ಮ್ರಿತ್ತುವೆಂಬುದು ಜಗವೆಲ್ಲಮಂ

೨೫ ದೆಣೆಯಾವನೊ ಭಾವಿಸೆ ಭೋಗದೇವನ ॥ ಕುರುಳ ತಗುಳ್ಪು ಕೆಣ್ಮ(ನವೆ) ನಿಪ್ಪು ಕದಪಿನ ತೆಳ್ಪು .

೧೬ ತ್ರ ಸುರರುಹದ ಕಾಯ್ಪು ಬಾಯ್ತೆಱಿಯೆ ಕಂಪು ಲತಾಂಗದ ಸೊಂಪು ಪುರ್ವ್ವಿನವ್ವರಿಪುವ ಜರ್ಬ್ಬ

೨೭ ಸೋಮ್ಮುಡಿಯ (ಪ)ರ್ಬ್ಬ ಭುಜಂಗಳ ಕೊರ್ಬ್ಬ ನಿಲೆವೆತ್ತಿರೆ ನಡೆ ನೋಡಿದಡೆ ಸುಭಗ ರೂಪಮನೋ

೨೮ ಜನ ಭೋಗದೇವನ । ಅರಸರ್ಗ್ಗೆ ಸೇಸೆಯದವಸರ ಕಾಣಿಕೆಯದು ಆಯದಾಯದ ತೆಱ

೨೯ ಯೆ ಧರ್ಮ್ಮವನೊರ್ವ್ವಂದುಂಬಳಿಯದುವೆ ವೀಸ ವನಕ್ಕೆ ಕೊಣ್ಡವರ್ಚ್ಚಣ್ಣಾಳರು॥

೦

ಡಾ|| ಗಣಪಯ್ಯ ಭಟ್. ಪಿ*

# ಆಳುಪ ಅರಸರ ಹೆಸರುಗಳು

ಕ್ರಿಸ್ತಶಕ ೫ನೇ ಶತಮಾನದಿಂದ ೧೪ನೇ ಶತಮಾನಾಂತ್ಯದತನಕ, ಸುಮಾರು ಒಂಭತ್ತು ಶತಮಾನಗಳ ಕಾಲ, ನಿರಂತರವಾಗಿ ತುಳುನಾಡನ್ನಾಳಿದವರು ಆಳುಪವಂಶದ ಅರಸರು. ಒಂದು ಪ್ರದೇಶವನ್ನು ಇಷ್ಟೊಂದು ಸುದೀರ್ಘವಾಗಿ ಒಂದೇ ಅರಸುಮನೆತನದವರು ಆಳಿದ ಉದಾಹರಣೆ ಭಾರತದಲ್ಲಿ ಪ್ರಾಯಶಃ ಇನ್ನೊಂದಿರಲಾರದು. ಆಳುಪರಸರ ಆಳ್ವಿಕೆಗೆ ಅನ್ವಯಿಸುವ ಹತ್ತಾರು ಶಾಸನಗಳು ತುಳುನಾಡಿಲ್ಲಿ ಮತ್ತು ತುಳುನಾಡಿನ ಹೊರಗೆ ಕಂಡುಬಂದಿವೆ. ಸುಮಾರು ೯ ಶತಮಾನಗಳ ಸುದೀರ್ಘ ಅವಧಿಯಲ್ಲಿ ತುಳುನಾಡಿನಲ್ಲಿ ಆಳ್ವಿಕೆನಡೆಸಿದ ೩೦ ಮಂದಿ ಆಳುಪರಸರ ಹೆಸರುಗಳು ಶಾಸನಗಳಲ್ಲಿ ಉಲ್ಲೇಖಿತವಾಗಿವೆ. ಆಳುಪರಸರ ಹೆಸರುಗಳ ಮತ್ತು ಅವರ ಕುಲನಾಮಗಳ ಅಧ್ಯಯನವು ತುಳುನಾಡಿನ ಇತಿಹಾಸದ ಹೊಸ ಮುಖವೊಂದನ್ನು ನಮಗೆ ಪರಿಚಯಿಸುತ್ತದೆಂದರೆ ತಪ್ಪಾಗಲಾರದು.

ಕ್ರಿ. ಶ. 5ನೇ ಶತಮಾನದ ಹಲ್ಮಿಡಿ ಶಾಸನವೇ[1] ಆಳುಪರಸನೊಬ್ಬನ ಹೆಸರನ್ನು ಉಲ್ಲೇಖಿಸುವ ಪ್ರಾಚೀನತಮ ಶಾಸನ. ಇದರಲ್ಲಿ ಪ್ರಸ್ತಾಪಿಸಲಾದ 'ಅಳಪಗಣ ಪಶುಪತಿ' ಎಂಬಲ್ಲಿನ ಪಶುಪತಿ ಆಳುಪ ಅರಸನೊಬ್ಬನ ಹೆಸರು ಎಂಬುದು ಇತಿಹಾಸಜ್ಞರ ಅಭಿಪ್ರಾಯ.[2] ಕ್ರಿ.ಶ. ೧೪೯೭ರ ಮೂಡುಬಿದಿರೆ ಶಾಸನದಲ್ಲಿ[3] ಹೆಸರಿಸಲಾದ ವೀರಪಾಂಡ್ಯನೇ ಸದ್ಯ ನಮಗೆ ತಿಳಿದಿರುವಂತೆ ಆಳುಪರ ಕೊನೆಯದೊರೆ. ಶಾಸನದಲ್ಲಿ ಈತನನ್ನು ''ಸಮಸ್ತ ಭುವನ ವಿಖ್ಯಾತ, ಸೋಮಕುಳತಿಳಕ, ಪಾಂಡ್ಯಮಹಾರಾಜಾಧಿರಾಜ ಪರಮೇಶ್ವರ, ಪರಮ ಭಟ್ಟಾರಕ, ಸತ್ಯ ರತ್ನಾಕರ, ಸರಣಾಗತ ವಜ್ರ ಪಂಜರ....ಪಾಂಡ್ಯ ಚಕ್ರವರ್ತಿ[4], ರಾಯಗಜಾಂಕುಸ'' ಎಂದು ಮುಂತಾದ ಸಾರ್ವಭೌಮತ್ವ ಸೂಚಕ ಬಿರುದುಗಳಿಂದ ಗುರುತಿಸಲಾಗಿದ್ದರೂ, ಆ ಕಾಲದ ಹೊತ್ತಿಗೆ ಆಳುಪರು ತುಳುನಾಡಿನ ಮೇಲಿನ ತಮ್ಮ ಪ್ರಭುತ್ವವನ್ನು ಸಂಪೂರ್ಣವಾಗಿ ಕಳೆದುಕೊಂಡಿದ್ದರೆಂಬ ವಿಚಾರ ಶಾಸನಗಳಿಂದ ವ್ಯಕ್ತವಾಗುತ್ತದೆ.

ಆಳುಪವಂಶದ ಮೂಲದ ಬಗ್ಗೆ ಖಚಿತವಾದ ಮಾಹಿತಿ ಲಭ್ಯವಿಲ್ಲ. ಬಹುತೇಕ ಶಾಸನಗಳಲ್ಲಿ ಈ ರಾಜ ಮನೆತನವನ್ನು 'ಆಳುಪ' 'ಆಳುವ' ಎಂಬ ಹೆಸರಿನಿಂದ ಗುರುತಿಸಲಾಗಿದೆ. ತುಳುನಾಡಿನ ಹೊರಗೆ ಲಭ್ಯವಾದ ಕೆಲವು ಶಾಸನಗಳಲ್ಲಿ ಹಾಗೂ ಪುರಾಣ ಕೃತಿಗಳಲ್ಲಿ 'ಅಳಪ, ಆಳುಕ, ಆಲಿಕ, ಆಲಕ, ಆಲಿವ' ಎಂಬ ಉಲ್ಲೇಖಗಳು ಕಂಡು ಬಂದಿದ್ದರೂ 'ಆಳುಪ-ಆಳುವ' ಎಂಬುದೇ ಸರಿಯಾದ ಉಲ್ಲೇಖ ಎನ್ನಬಹುದು.[4] ಆಳುವ, ಆಳುಪ ಎಂಬ ಪದಗಳು ದ್ರಾವಿಡ ಪದವಾದ ಆಳ್=ಆಳ್ವಿಕೆ ನಡೆಸು ಎಂಬ ಮೂಲದಿಂದ ಹುಟ್ಟಿದ್ದಿರಬೇಕೆಂದು ಬಹಳ ಹಿಂದೆಯೇ ಹುಲ್ಶ್‌ರವರು ಅಭಿಪ್ರಾಯಪಟ್ಟಿದ್ದರು.[5] ಡಾ|| ಕೆ. ವಿ. ರಮೇಶ್, ಡಾ. ಪಿ.ಗುರುರಾಜಭಟ್ ಮೊದಲಾದ ತುಳುನಾಡಿನ ಇತಿಹಾಸಕಾರರೂ ಈ ಅಭಿಪ್ರಾಯವನ್ನೇ ಸಮರ್ಥಿಸಿದ್ದಾರೆ.[6] ತುಳುನಾಡಿನಲ್ಲಿ ದೊರಕಿದ ಪ್ರಾಚೀನತಮ ಶಾಸನವಾದ

* ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ವಿಭಾಗ, ಶ್ರೀಧವಲಾ ಕಾಲೇಜು, ಮೂಡಬಿದಿರೆ ೫೭೪೨೨೭

1. Mys. Arch. Rep. 1936, pp 72 ff
2. Ramesh K.V., 1970, A History of South Kanara, p.30-31
3. SII, VII. No.221
4. Ramesh K.V., ibid. pp. 36-37
5. EI, IX, pp. 15-16
6. Ramesh K.V., ibid, p.37; Gururaja Bhatt, 1975, Studies in Tuluva History and Culture, p.19

ಡ್ನರ್ಸೆ ಶಾಸನದಲ್ಲಿ[7] ಪ್ರಸ್ತಾಪಿಸಲಾದ ಅರಸ 'ಆಳುವರಸ'. ಇವನಲ್ಲದೆ ಇನ್ನೂ ೫ ಮಂದಿ ಆಳುಪರಸರಿಗೆ (ಎರಡನೇ ಆಳುವರಸ, ಚಿತ್ರವಾಹನ, ಪೃಥ್ವೀಸಾಗರ, ವಿಜಯಾದಿತ್ಯ ಮಾರಮ್ಮ, ಕುಲಶೇಖರ)[8] ಆಳುವರಸ ಎಂಬ ಹೆಸರೂ ಇತ್ತೆಂಬುದು ಶಾಸನಾಧಾರಗಳಿಂದ ಸ್ಪಷ್ಟವಾಗುತ್ತದೆ. ಈ ಹಿನ್ನೆಲೆಯಲ್ಲಿ 'ಆಳುವ' ಎಂಬುದೇ ಈ ವಂಶದ ಮೂಲನಾಮವಾಗಿದ್ದು 'ಆಳುವ' ಎಂಬುದು ಆಳುಪ ಎಂಬ ಪದದ ಸಂಸ್ಕೃತೀಕರಣದಿಂದ ಹುಟ್ಟಿಕೊಂಡ ಹೆಸರು ಎಂಬ ಅಭಿಪ್ರಾಯ ಹೆಚ್ಚು ಪ್ರಸ್ತುತವೆನಿಸುತ್ತದೆ.[9] 'ಆಳುವ' ಎಂಬುದು ಈ ಅರಸು ಮನೆತನದ ಮೂಲ ಪುರುಷನ ಹೆಸರಾಗಿರುವ ಸಾಧ್ಯತೆಯನ್ನು ಅಲ್ಲಗಳೆವಂತಿಲ್ಲ.

ಶಾಸನಗಳಿಂದ ತಿಳಿದುಬರುವಂತೆ ೩೦ ಮಂದಿ ಆಳುಪರಸರ ಹೆಸರುಗಳು ಅನುಕ್ರಮವಾಗಿ ಈ ರೀತಿ ಇವೆ:

೧.ಪಶುಪತಿ, ೨. ಆಳುವರಸ, ೩. ಚಿತ್ರವಾಹನ, ೪. ಆಳುವರಸ, ೫. ಚಿತ್ರವಾಹನ, ೬. ರಣಸಾಗರ, ೭. ಶ್ವೇತವಾಹನ, ೮. ಪೃಥ್ವೀಸಾಗರ, ೯. ವಿಜಯಾದಿತ್ಯ ಮಾರಮ್ಮ, ೧೦. ವಿಮಳಾದಿತ್ಯ, ೧೧. ರಣಂಜಯ, ೧೨. ದತ್ತಾಳುಪ, ೧೩. ಕುಂದವರ್ಮ, ೧೪. ಬಂಕಿದೇವ, ೧೫. ಪಟ್ಟಿಯೊಡೆಯ, ೧೬. ಪಾಂಡ್ಯಪಟ್ಟಿಯೊಡೆಯ ೧೭. ಕವಿಯಾಳುಪ ೧೮. ಬಮ್ಮದೇವ ೧೯. ಕುಲಶೇಖರ, ೨೦. ದತ್ತಾಳುಪೇಂದ್ರ ಶ್ರೀಮಾರ ಒಡ್ಡಮದೇವ, ೨೧. ಬಿಟ್ಟಿದೇವಾಳುಪ, ೨೨. ವೀರಪಾಂಡ್ಯ ೨೩. ಬಲ್ಲ ಮಹಾದೇವಿ, ೨೪. ನಾಗದೇವರಸ, ೨೫. ಬಂಕಿದೇವ, ೨೬. ಸೋಯಿದೇವ, ೨೭. ಕುಲಶೇಖರ, ೨೮. ಬಂಕಿದೇವ ೨೯. ಕುಲಶೇಖರ, ೩೦. ವೀರಪಾಂಡ್ಯ

ಆಳುಪರಸರ ಹೆಸರುಗಳ ಪೈಕಿ ಗುಣವಾಚಕಗಳದೇ ಬಹುಸಂಖ್ಯೆ. ಚಿತ್ರ ವಾಹನ, ಶ್ವೇತ ವಾಹನ, ರಣ ಸಾಗರ, ವಿಮಳಾದಿತ್ಯ, ರಣಂಜಯ, ಕುಲಶೇಖರ, ವೀರ ಪಾಂಡ್ಯ ಮುಂತಾದ ಹೆಸರುಗಳು ಗುಣವಿಶೇಷಗಳನ್ನು ಸೂಚಿಸುವ ಹೆಸರುಗಳಾಗಿದ್ದು ಅವು ಈ ವರ್ಗಕ್ಕೆ ಸೇರುತ್ತವೆ. ಆಳುಪರಸರು ಪ್ರಾರಂಭದಿಂದಲೇ ಶೈವ ಧರ್ಮಾನುಯಾಯಿಗಳಾಗಿದ್ದರೆಂಬುದು ನಿಜವಾದರೂ[10] ಹೆಸರಿಡುವ ಕ್ರಮದ ಮೇಲೆ ಅವರ ಧಾರ್ಮಿಕ ನಂಬಿಕೆಯು ವಿಶೇಷವಾದ ಪ್ರಭಾವವನ್ನು ಬೀರಿದಂತೆ ತೋರುವುದಿಲ್ಲ. ಪಶುಪತಿ ಎಂಬ ಹೆಸರನ್ನು ಹೊರತುಪಡಿಸಿ ಪ್ರಾರಂಭದ ಹೆಸರುಗಳು ಶೈವಧರ್ಮದ ಯಾವುದೇ ಪ್ರಭಾವವನ್ನು ಸೂಚಿಸುವುದಿಲ್ಲ ಎಂಬುದಿಲ್ಲಿ ಗಮನಾರ್ಹ. ನಂತರದ ಅರಸರ ಹೆಸರುಗಳ ಪೈಕಿ ಕುಂದವರ್ಮ (< ಕಂದ < ಸ್ಕಂದ), ಬಂಕಿದೇವ, ಬಲ್ಲಮಹಾದೇವಿ, ಮತ್ತು ನಾಗದೇವರಸ ಎಂಬ ಹೆಸರುಗಳು ಶೈವ ಪಂಥದ ಹಿನ್ನೆಲೆಯನ್ನು ಹೊಂದಿರುವವು. ವೈಷ್ಣವ ಧರ್ಮದ ಹಿನ್ನೆಲೆಯನ್ನು ಹೊಂದಿರುವ ದತ್ತಾಳುಪ, ಶ್ರೀಮಾರ, ಬಿಟ್ಟಿದೇವ (< ವಿಷ್ಣು) ಎಂಬ ಹೆಸರುಗಳೂ ಇಲ್ಲಿ ಕಂಡುಬರುತ್ತವೆ. ಬ್ರಹ್ಮನ ಹೆಸರನ್ನು ಹೊಂದಿರುವ ಬಮ್ಮದೇವ ಎಂಬ ಆಳುಪರಸನೂ ಇಲ್ಲದಿಲ್ಲ. ಈ ಹಿನ್ನೆಲೆಯಲ್ಲಿ ಹೇಳುವುದಾದಲ್ಲಿ ಆಳುಪರಸರ ಹೆಸರುಗಳು ಅವರು ಅನುಸರಿಸುತ್ತಿದ್ದ ಧರ್ಮಗಳಿಂದ ಪ್ರಭಾವಿತವಾಗಿಲ್ಲ ಹಾಗೂ ಅವುಗಳು ಆ ಅರಸರ ಧಾರ್ಮಿಕ ನಂಬಿಕೆಗಳನ್ನು ವಿಶೇಷವಾಗಿ ಬಿಂಬಿಸುವುದಿಲ್ಲ ಎನ್ನುವುದು ಸ್ಪಷ್ಟ.

ಕ್ರಿ.ಶ. ೭-ಅನೇ ಶತಮಾನದಲ್ಲಿ ಆಳ್ವಿಕೆ ನಡೆಸಿದ ಒಂದನೆಯ ಆಳುವರಸ ಮತ್ತು ಎರಡನೆಯ ಆಳುವರಸರನ್ನು ಇತಿಹಾಸಕಾರರು ಆಳುವರಸ ಎಂಬ ಹೆಸರಿನಿಂದಲೇ ಗುರುತಿಸಿದ್ದಾರೆ.[11] ಆದರೆ ಆಳುವರಸ ಎಂಬುದು ಇವರ ಕುಲನಾಮವೇ ಹೊರತು ವ್ಯಕ್ತಿನಾಮವಲ್ಲ ಎಂಬುದು ಶಾಸನಾಧಾರಗಳಿಂದ ಸ್ಪಷ್ಟವಾಗುತ್ತದೆ. ಒಂದನೆಯ ಆಳುವರಸನಿಗೆ ಗುಣಸಾಗರ ಎಂಬ ಹೆಸರಿತ್ತೆಂಬವಿಚಾರ ಕಿಗ್ಗ ಶಾಸನದಲ್ಲಿರುವ ಶ್ರೀಮತ್ ಆಳುವರಸರ್ ಗುಣಸಾಗರ ದ್ವಿತೀಯ ನಾಮಧೇಯನ್'' ಎಂಬ ಉಲ್ಲೇಖದಿಂದ ತಿಳಿದು ಬರುತ್ತದೆ.[12] ಚಲುಕ್ಯ ವಿನಯಾದಿತ್ಯನ ಸೊರಬ ತಾಮ್ರ ಶಾಸನದಲ್ಲಿ[13] ಒಂದನೆಯ ಆಳುವರಸನ ಮಗನಾದ ಚಿತ್ರವಾಹನನನ್ನು ಗುಣಸಾಗರ ಆಳುಪೇಂದ್ರನ ಮಗ ಎಂಬುದಾಗಿ ಸೂಚಿಸಿರುವುದೂ ಮೇಲಿನ ಹೇಳಿಕೆಯನ್ನು

---

7. ARISE, 1931-32, No. 296
8. ತುಳುನಾಡಿನ ಶಾಸನಗಳು, No.3; Ind. Antiquery, VII pp.300ff; EI XI, p.21; EI 4, pp 23-24, MAR 1930, pp. 223-26
9. Ramesh K.V., Ibid p.37
10. ರಮೇಶ್ ಕೆ. ವಿ., 1968, ತುಳುನಾಡಿನ ಇತಿಹಾಸ p.46
11. Ramesh K.V., ibid, p. 43 & 62, Gururaja Bhatt, ibid pp. 22-23.
12. Ec VI, Kp. No. 38
13. Ind. Antiquary XiX, p.146ff

ಸ್ಪಷ್ಟೀಕರಿಸುತ್ತದೆ. ಇದರಿಂದ, ಗುಣಸಾಗರ ಎಂಬುದು ಒಂದನೆಯ ಆಳುವರಸನ ನಿಜನಾಮಧೇಯ ಎಂದು ತೀರ್ಮಾನಿಸಬಹುದು. ಅದೇ ರೀತಿ ಎರಡನೆಯ ಆಳುವರಸನ ನಿಜವಾದ ಹೆಸರು ಬಬ್ರುವಾಹನ ಎಂಬುದಾಗಿ ಜಂಬಾಣಿ ಶಾಸನದ ಆಧಾರದಂತೆ ಕೆ.ವಿ. ರಮೇಶರು ವ್ಯಕ್ತ ಪಡಿಸಿದ ಅಭಿಪ್ರಾಯವೂ ಸ್ವೀಕಾರಾರ್ಹ.[14]

ವರಾಂಗ ಶಾಸನದಲ್ಲಿ ಪಟ್ಟಿಯೊಡನೆಯ ಮತ್ತು ಪಾಂಡ್ಯಪಟ್ಟಿಯೊಡೆಯ ಎಂಬ ಇಬ್ಬರು ಆಳುಪರಸರ ಹೆಸರುಗಳ ಉಲ್ಲೇಖವಿದೆ.[15] ಆದರೆ ಇವು ಆ ಅರಸರ ನಿಜನಾಮಧೇಯುಗಳೆಂದು ತೋರುವುದಿಲ್ಲ. ಪಟ್ಟಿ, ಪಟ್ಟಿಪೊಂಬುಚ್ಚಪುರ ಎಂಬುದು ಇಂದಿನ ಶಿವಮೊಗ್ಗ ಜಿಲ್ಲೆಯ ಹೊಂಬುಜ ಪ್ರದೇಶ ಈ ಪ್ರದೇಶವು ಕೆಲಕಾಲ ಆಳುಪರಸರ ವಶದಲ್ಲಿತ್ತೆಂಬುದಕ್ಕೆ ದಾಖಲೆಗಳಿವೆ. ಆದ್ದರಿಂದ ಪಟ್ಟಿಯೊಡೆಯ ಎಂಬ ಹೆಸರು ಹೊಂಬುಜ ಪ್ರದೇಶದ ಮೇಲಿನ ಆಳುಪರಸರ ಪ್ರಭುತ್ವದ ಸೂಚಕವೇ ಹೊರತು ಅದೊಂದು ವ್ಯಕ್ತಿನಾಮವಾಗಿರಲಾರದು. ಆಳುಪರಸ ರಣಸಾಗರನಿಗೂ ಪಟ್ಟಿಯೊಡೆಯ ಎಂಬ ಬಿರುದಿತ್ತು ಎಂಬುದನ್ನಿಲ್ಲಿ ಉಲ್ಲೇಖಿಸಬಹುದು.[16] ಪಟ್ಟಿಯೊಡೆಯ, ಪಾಂಡ್ಯಪಟ್ಟಿಯೊಡೆಯ ಎಂದು ಕರೆಯಲಾದ ಆಳುಪರಸರ ನಿಜನಾಮಧೇಯುವೇನಿದ್ದಿರಬಹುದೆಂದು ತಿಳಿಯದು. ಇನ್ನು ಸೋಯಿದೇವ ಎಂಬ ಹೆಸರಿನ ಕುರಿತು; ಸೋಯಿದೇವ ಎಂಬುದು ಸ್ವಾಮಿದೇವ ಎಂಬ ಹೆಸರಿನ ಅಪಭ್ರಂಶವಿರಬೇಕು (ಸ್ವಾಮಿ > ಸೋಮಿ > ಸೋವಿ > ಸೋಯಿ). ಕ್ರಿ.ಶ. ೧೩೩೭ರ ವರಾಂಗ ಶಾಸನದಲ್ಲಿ ಸೋಯಿದೇವನನ್ನು "ಸೋವೀಶ್ವರ ರಾಯ" ಎಂದು ಉಲ್ಲೇಖಿಸಿಲಾಗಿರುವುದು ಮೇಲಿನ ಹೇಳಿಕೆಯನ್ನು ಸಮರ್ಥಿಸುತ್ತದೆ.

ಆಳುಪರಸರು ಪಾಂಡ್ಯ, ಪಾಂಡ್ಯ ಚಕ್ರವರ್ತಿ, ಉತ್ತಮ ಪಾಂಡ್ಯ, ಪಾಂಡ್ಯ ಮಹಾರಾಜ, ಪಾಂಡ್ಯ ಧನಂಜಯ ಮುಂತಾದ ಬಿರುದುಗಳನ್ನು ಹೊಂದಿದ್ದರೆಂಬುದು ಶಾಸನಗಳಿಂದ ತಿಳಿದುಬರುವ ವಿಚಾರ. ಆಳುಪರಸರ ಪೈಕಿ ವೀರಪಾಂಡ್ಯ ಎಂಬ ಹೆಸರಿನ ಈರ್ವರು ಅರಸರೂ ಇದ್ದರು. ಶಾಸನಗಳಲ್ಲಿ ಎರಡನೆಯ ಚಿತ್ರವಾಹನ ಮತ್ತು ಎರಡನೆಯ ಆಳುವರಸನನ್ನು ಪಾಂಡ್ಯ ಕುಲದವರೆಂದೂ ಸೂಚಿಸಲಾಗಿದೆ.[17] ಆಳುಪರಸರ ಹೆಸರಿನ ಜೊತೆ ಪಾಂಡ್ಯ ಎಂಬ ಕುಲನಾಮವು ಸೇರಿಕೊಂಡಿರುವುದು ವಿದ್ವಾಂಸರಲ್ಲಿ ಸಾಕಷ್ಟು ಜಿಜ್ಞಾಸೆಗೆ ಎಡೆಮಾಡಿಕೊಟ್ಟಿರುವುದು ಸರ್ವವಿದಿತ.

ಆಳುಪರಿಗೂ ತಮಿಳುನಾಡಿನ ಪಾಂಡ್ಯರಿಗೂ ಯಾವರೀತಿಯ ರಕ್ತಸಂಬಂಧವೂ ಇಲ್ಲ; ಆದರೆ ಚಿತ್ರವಾಹನನು ತುಳುನಾಡಿನ ಮೇಲೆ ಆಕ್ರಮಣ ಮಾಡಿದ ಪಾಂಡ್ಯರ ಪಡೆಯನ್ನು ಹಿಮ್ಮೆಟ್ಟಿಸಿದ ಜ್ಞಾಪಕಾರ್ಥವಾಗಿ 'ಪಾಂಡ್ಯ' ಎಂಬ ಹೆಸರನ್ನು ಕುಲನಾಮವನ್ನಾಗಿ ಸ್ವೀಕರಿಸಿರಬೇಕು ಎಂಬ ಅಭಿಪ್ರಾಯ ಕೆ. ವಿ. ರಮೇಶ್ ಅವರದು.[18] ಈ ಅಭಿಪ್ರಾಯಕ್ಕೆ ಪಾಂಡ್ಯದೊರೆ ಜಟಿಲ ಪರಾಂತಕನ ವೇಳ್ವಿಕುಡಿ ಶಾಸನವನ್ನು ಆಧಾರವಾಗಿ ಸೂಚಿಸಲಾಗಿದೆ.[19] ಈ ಶಾಸನದಲ್ಲಿ ಜಟಿಲ ಪರಾಂತಕನ ಅಜ್ಜ ಕೋಚೆಡೈಯನ್ ಮಂಗಲಪುರವೆಂಬ ಮಹಾನಗರದಲ್ಲಿ ಮಹಾರಥನನ್ನು ಸೋಲಿಸಿದ ಪ್ರಸ್ತಾಪವಿದೆ. ತುಳುನಾಡಿನ ಮೇಲೆ ಪಾಂಡ್ಯರ ಧಾಳಿಯನ್ನು ನಿರೂಪಿಸಲು ಶಾಸನದಲ್ಲಿ ಹೇಳಲಾದ ಮಂಗಲಪುರವನ್ನು ಮಂಗಳೂರೆಂದು ಗುರುತಿಸಿರುವುದೇ ಆಧಾರ.[20] ಆದರೆ ವೆಳ್ವಿಕುಡಿ ಶಾಸನದಲ್ಲಿ ಹೇಳಲಾದ ಮಂಗಲಪುರವು ತುಳುನಾಡಿನ ಮಂಗಳೂರು ಅಲ್ಲ ಎಂದು ಕೆ. ಜಿ. ಕೃಷ್ಣನ್‌ರವರು ಪಾಂಡ್ಯದೊರೆ ಚೆಂಡನ್‌ನ ಮಧುರೆ ಶಾಸನದ ಆಧಾರದಿಂದ ನಿರೂಪಿಸಿದ್ದಾರೆ.[21] ಕ್ರಿ.ಶ. ೭ನೇ ಶತಮಾನಕ್ಕನ್ವಯಿಸುವ ಈ ಶಾಸನದಲ್ಲಿ ಪಾಂಡ್ಯ ದೊರೆ ಚೆಂಡನ್ ಎಂಬಾತ ಮಂಗಲಪುರ ಎಂಬ ನಗರವನ್ನು ಸ್ಥಾಪಿಸಿ ಅಲ್ಲಿಂದ ಆಳ್ವಿಕೆ ನಡೆಸಿದ ವಿವರಣೆಯಿದೆ. ಈ ಶಾಸನದಲ್ಲಿ ಹೇಳಲಾದ ಮಂಗಲಪುರ ಮತ್ತು ವೆಳ್ವಿಕುಡಿ ಶಾಸನದಲ್ಲಿ ಸೂಚಿತವಾದ ಮಂಗಲಪುರವು ಒಂದೇ ಎಂದು ಗುರುತಿಸಿರುವ ಕೃಷ್ಣನ್ ಅವರು ವೆಳ್ವಿಕುಡಿ ಶಾಸನದ ಮಂಗಲಪುರವು ಪಾಂಡ್ಯದೇಶದೊಳಗೇ ಇದ್ದು ಅದು ಇಂದಿನ ರಾಮನಾಥಪುರಂ ಜಿಲ್ಲೆಯ ಸತ್ತೂರ್ ತಾಲೂಕಿನ

14. ರಮೇಶ್ ಕೆ. ವಿ ಮತ್ತು ಎಂ. ಜೆ. ಶರ್ಮ., 1985, ತುಳುನಾಡಿನ ಅರಸು ಮನೆತನಗಳು ಪು.5
15. EI. XXXVII, pp. 269-276
16. ARSIE, 1928-29, No.527
17. EI, XXXII pp.317 ff. ತುಳುನಾಡಿನ ಶಾಸನಗಳು, No.3
18. Ramesh K.V., ibid, pp.56-58
19. EI XVII, pp. 291 ff.
20. Ramesh K.V., ibid, pp.56-59; Gururaja Bhatt, ibid, p.28
21. EI XXXVIII, pp. 27-32

"ಮಂಗಲಂ" ಎಂಬ ಸ್ಥಳವಿರಬೇಕೆಂದು ಸಮರ್ಥವಾಗಿ ನಿರೂಪಿಸಿದ್ದಾರೆ. ಈ ಹಿನ್ನೆಲೆಯಲ್ಲಿ ಕ್ರಿ.ಶ. ೮ನೇ ಶತಮಾನದಲ್ಲಿ ತುಳುನಾಡಿಗೆ ಪಾಂಡ್ಯರು ದಾಳಿಮಾಡಿ ದರೆನ್ನುವ ವಿಚಾರ ಸತ್ಯ ದೂರವಾದದ್ದು ಎಂಬುದು ಸಿದ್ಧಪಡುತ್ತದೆ. ಇದರಿಂದ ತಮಿಳುನಾಡಿನ ಪಾಂಡ್ಯರಿಗೂ ಆಳುಪರಸರು ಹೊಂದಿದ್ದ ಪಾಂಡ್ಯ ಎಂಬ ಕುಲನಾಮಕ್ಕೂ ಯಾವುದೇ ಸಂಬಂಧವಿಲ್ಲವೆಂಬುದು ಸ್ಪಷ್ಟವಾಗದಿರದು.

ಆಳುಪ ಅರಸರು ಕುಲನಾಮವಾಗಿ, ಬಿರುದಾಗಿ ಉಪಯೋಗಿಸಿರುವ ಪಾಂಡ್ಯ ಎಂಬ ಪದಕ್ಕೂ ತಮಿಳುನಾಡಿನ ಪಾಂಡ್ಯರಿಗೂ ಯಾವುದೇ ಸಂಬಂಧವಿಲ್ಲವೆಂಬುದು ಸತ್ಯ. ಪಾಂಡ್ಯ ಎಂಬ ಹೆಸರು ಆಳುಪರಸರಿಗೆ ಮಾತ್ರ ಸೀಮಿತವಾಗಿಲ್ಲ. ತುಳು ನಾಡಿನಲ್ಲಿ ಪಾಂಡ್ಯ ಎಂಬ ಹೆಸರು ಬೇರೆ ವ್ಯಕ್ತಿಗಳಿಗೆ, ರಾಜ ಮನೆತನಗಳಿಗೆ ಅನ್ವಯಿಸಿದ ಸಾಕಷ್ಟು ಉದಾಹರಣೆಗಳಿವೆ. ಚಿತ್ರವಾಹನನ ಆಳ್ವಿಕೆಯಲ್ಲಿ ಕಿರಿಯನಾಗದತ್ತ ಎಂಬಾತನಿಗೆ 'ಪಾಂಡ್ಯನಾಯಕ'ನೆಂಬ ಬಿರುದನ್ನಿತ್ತು ಆತನಿಗೆ ಮಂಗಲಪುರವನ್ನು ಬಿಟ್ಟುಕೊಡ ಲಾಯಿತು ಎಂಬ ವಿವರಣೆಯಿದೆ ಉದ್ಯಾವರ ಶಾಸನದಲ್ಲಿ.[22] ಶ್ವೇತವಾಹನನ ಉದ್ಯಾವರ ಶಾಸನದಲ್ಲಿ ಪಾಂಡ್ಯವಿಲ್ಲರಸ ಎಂಬಾತನ ಮಗ ದೇವು ಎಂಬವನು ಶ್ವೇತವಾಹನನ ಪರವಾಗಿ ಹೋರಾಡಿದ ಉಲ್ಲೇಖವಿದೆ.[23] ತುಳುನಾಡಿನ ಸ್ಥಳೀಕ ಅರಸುಮನೆತನಗಳಾದ ಬೈರರಸ, ಬಂಗ ಮತ್ತು ಅಜಿಲರಲ್ಲಿ ಪಾಂಡ್ಯ ಎಂಬ ಹೆಸರನ್ನು ಹೊಂದಿದ ಒಟ್ಟು ೮ ಮಂದಿ ಅರಸರು ಆಳ್ವಿಕೆನಡೆಸಿದ್ದಿದೆ.[24] ಈ ಹಿನ್ನೆಲೆಯಲ್ಲಿ ಅವಲೋಕಿಸಿದಾಗ ಪಾಂಡ್ಯ ಎಂಬ ಹೆಸರಿಗೆ ಪ್ರಾದೇಶಿಕವಾದ ಮಹತ್ವವಿರುವುದು ಖಚಿತವಾಗುತ್ತದೆ. ಈ ಸಂದರ್ಭ ಖ್ಯಾತ ವಿದ್ವಾಂಸ ಸೇಡಿಯಾಪು ಕೃಷ್ಣಭಟ್ಟರು, ಪಾಂಡಿ, ಪಾಂಡ್ಯ ಎಂಬ ಪದದ ಕುರಿತು ನೀಡಿದ ವ್ಯಾಖ್ಯೆ ಗಮನಾರ್ಹ. ತುಳುನಾಡಿನ ಕರಾವಳಿ ಪ್ರದೇಶದಲ್ಲಿ ಪಾಂಡಿ ಎಂಬ ಶಬ್ದಕ್ಕೆ ಆಡುಮಾತಿನಲ್ಲಿ ನೌಕೆ, ಸರಕುಸಾಗಿಸುವ ಹಡಗು ಎಂಬ ಅರ್ಥವಿರುವುದನ್ನು ಸೂಚಿಸುವ ಅವರು ಪಾಂಡಿ, ಪಾಂಡ್ಯ ಎಂಬ ಪದ ಸಾಗರ ವ್ಯಾಪಾರದಿಂದ ಬಂದ ಹೆಸರೆಂದೂ, ಅದು ಆಳುಪವಂಶದ ಮೂಲಪುರುಷರಿಗೂ ಸಮುದ್ರಕ್ಕೂ ಇದ್ದ ನಂಟಿನ ಸೂಚಕವೆಂದೂ ಅಭಿಪ್ರಾಯ ಪಡುತ್ತಾರೆ[25] ಆಳುಪರ ಮಾನಲಾಂಛನಕ್ಕೂ ಪ್ರಾಯಶಃ ಇದುವೇ ಹಿನ್ನೆಲೆಯಾಗಿರಬೇಕೆಂದ ಊಹಿಸಬಹುದು.

ಪಾಂಡ್ಯ ಎಂಬ ಪದಕ್ಕೂ ನೌಕೆ ಅಥವಾ ಸಮುದ್ರಕ್ಕೂ ಇರುವ ನಂಟನ್ನು ಚಿತ್ರವಾಹನನ ಉದ್ಯಾವರ ಶಾಸನವು ಪರೋಕ್ಷವಾಗಿ ನಿರೂಪಿಸುತ್ತದೆ.[26] ಈ ಮೊದಲೇ ಪ್ರಸ್ತಾಪಿಸಲಾದಂತೆ ಆ ಶಾಸನದಲ್ಲಿ ಕಿರಿಯನಾಗದತ್ತ ಎಂಬಾತನಿಗೆ 'ಪಾಂಡ್ಯನಾಯಕ' ಎಂಬ ಬಿರುದನ್ನಿತ್ತು ಆತನಿಗೆ ಮಂಗಲಪುರವನ್ನು ಬಿಟ್ಟುಕೊಡಲಾಯಿತು ಎಂಬ ಉಲ್ಲೇಖವಿದೆ. ಮಂಗಲಪುರವನ್ನು ಬಿಟ್ಟುಕೊಡಲಾಯಿತು ಎಂಬ ಶಾಸನದಲ್ಲಿರುವ ವಿವರಣೆಯನ್ನು ಮಂಗಲಪುರದ ರಾಜಕೀಯ ಅಧಿಕಾರವನ್ನು ಬಿಟ್ಟುಕೊಡಲಾಯಿತು. ಎಂದು ತಿಳಿಯುವಂತಿಲ್ಲ. ಯಾಕೆಂದರೆ ಮಂಗಳೂರು ಆಳುಪರಸರ ರಾಜಕೀಯ ಕೇಂದ್ರವಾಗಿದ್ದು ಅದು ಅವರ ನೇರ ಆಳ್ವಿಕೆಯ ಲ್ಲಿತ್ತೆಂಬುದು ಈಗಾಗಲೇ ಸ್ಪಷ್ಟವಾಗಿರುವ ವಿಚಾರ. ಮಂಗಲಪುರ ಅಥವಾ ಮಂಗಳೂರು ಪ್ರಾಚೀನ ಕಾಲದಿಂದಲೇ ಸಮುದ್ರವ್ಯಾಪಾರದ ಕೇಂದ್ರವಾಗಿತ್ತು. ಶಾಸನದಲ್ಲಿ ಕೊಡಲಾದ ವಿವರಣೆಯಂತೆ ಪಾಂಡ್ಯನಾಯಕ ಅಂದರೆ ನೌಕಾಧಿಪತಿ ಎಂಬ ಬಿರುದನ್ನಿತ್ತು ಕಿರಿಯನಾಗದತ್ತ ಎಂಬಾತನಿಗೆ ಮಂಗಳೂರಿನ ಸಮುದ್ರ ವ್ಯಾಪಾರದ ಅಧಿಕಾರ ವನ್ನು ನೀಡಲಾಯಿತು ಎಂದು ಊಹಿಸಿದರೆ ತಪ್ಪಾಗಲಾರದು. ಈ ವ್ಯಾಖ್ಯೆಯು ಸತ್ಯಕ್ಕೆ ಹೆಚ್ಚು ಸಮೀಪವಾದದ್ದು ಎಂದು ತಿಳಿದುಕೊಂಡಲ್ಲಿ ಪಾಂಡ್ಯ ಎಂಬ ಪದಕ್ಕೂ ನೌಕಾವ್ಯಾಪಾರಕ್ಕೂ ಇರುವ ಸಂಬಂಧ ಸ್ಥಿರವಾಗುತ್ತದೆ. ಈ ಎಲ್ಲ ಆಧಾರಗಳ ಹಿನ್ನೆಲೆಯಲ್ಲಿ ಆಳುಪರಸರ ಪಾಂಡ್ಯ ಎಂಬ ಕುಲನಾಮಕ್ಕೂ ತಮಿಳುನಾಡಿನ ಪಾಂಡ್ಯ ಅರಸು ಮನೆತನಕ್ಕೂ ಯಾವುದೇ ಸಂಬಂಧವಿಲ್ಲ ಎಂಬುದು ಖಚಿತವಾಗುತ್ತದಲ್ಲದೆ ಆಳುಪರಸರ ಪಾಂಡ್ಯ ಕುಲನಾಮದ ಸ್ವತಂತ್ರ ಮೂಲವು ಸ್ಪಷ್ಟವಾಗುತ್ತದೆ.

ವ್ಯಕ್ತಿನಾಮ ಮತ್ತು ಕುಲನಾಮಗಳ ಅಧ್ಯಯನ ಈವರೆಗೆ ನಿರ್ಲಕ್ಷಿತವಾಗಿದ್ದ ಮತ್ತು ಇತ್ತೀಚೆಗಷ್ಟೇ ಜನಪ್ರಿಯ ಗೊಳ್ಳುತ್ತಿರುವ ಒಂದು ಅಧ್ಯಯನ ವಿಭಾಗ. ಪ್ರಸ್ತುತ ಲೇಖನದ ಸೀಮಿತ ಪರಿಧಿಯೊಳಗೆ ಆಳುಪರಸರ ಹೆಸರುಗಳನ್ನು ವಿಶ್ಲೇಷಿಸುವ ಒಂದು ಕಿರು ಪ್ರಯತ್ನವನ್ನಷ್ಟೇ ಮಾಡಲು ಸಾಧ್ಯವಾಗಿದೆ. ಹಾಗಿದ್ದರೂ ಈ ರೀತಿಯ ಪ್ರಯತ್ನವು ಇತಿಹಾಸದ ಅಧ್ಯಯನದಲ್ಲಿ ಕೆಲವು ಹೊಸ ಸಾಧ್ಯತೆಗಳನ್ನು ಗುರುತಿಸಲು ಸಹಕಾರಿಯಾಗಿದೆ ಎನ್ನಬಹುದು.

---

22. ತುಳುನಾಡಿನ ಶಾಸನಗಳು, No. 5.
23. EI, IX, p.19
24. ರಮೇಶ್ ಕೆ. ವಿ ಮತ್ತು ಎಂ.ಜೆ. ಶರ್ಮ., ಅದೇ ಪು.65-95
25. 'ಪಾಂಡಿ ಮತ್ತು ಪಾಂಡ್ಯ', ಕೆಲವು ದೇಶನಾಮಗಳು, ಪು. 31-55
26. ತುಳುನಾಡಿನ ಶಾಸನಗಳು, No.5

ಡಾ|| ಚೆನ್ನಕ್ಕ ಪಾವಟೆ

# ಬಾಸವೂರು ಖಚರ ಮನೆತನದ ಮತಾಂತರ

ಕಲ್ಯಾಣದ ಚಾಲುಕ್ಯರ ಮಹಾಮಂಡಳೇಶ್ವರರಲ್ಲಿ ಬಾಸವೂರಿನ ನೂರನಾಲ್ವತ್ತು ವಿಭಾಗದ ಅಧಿಕಾರವನ್ನು ನಿರ್ವಹಿಸಿದ ಖಚರ ಮನೆತನವೂ ಒಂದು. ಸುಮಾರು ಇನ್ನೂರು ವರ್ಷಗಳವರೆಗೆ ಆಳ್ವಿಕೆಯಲ್ಲಿದ್ದ ಈ ಮನೆತನ ಸಾಂಸ್ಕೃತಿಕ, ಸಮಾಜೋ ಧಾರ್ಮಿಕ ಕಾರ್ಯಪ್ರವೃತ್ತಿಯಿಂದ ಪ್ರಸಿದ್ಧವಾದುದು. ಬಾಸವೂರು ನೂರನಾಲ್ವತ್ತರ ಮನ್ನೆಯದ ಅಧಿಕಾರಿಗಳಾಗಿದ್ದ ಇವರು ಕಾಲಾಂತರದಲ್ಲಿ ಮಹಾಮಂಡಳೇಶ್ವರ ಹುದ್ದೆ ನಿರ್ವಹಿಸಿದ್ದು ತಿಳಿದು ಬರುತ್ತದೆ. ಬಂಕಾಪುರದ ಕ್ರಿ.ಶ. 1090ರ ಶಾಸನವೊಂದು 'ಪಾನುಂಗಲ್ಲ ಯ್ನೂಱಱ' ಮಾಂಡಲಿಕತ್ವವೂ ಕೆಲಕಾಲ ಈ ಮನೆತನಕ್ಕೆ ಸಂಬಂಧಿಸಿತ್ತು ಎಂದು ತಿಳಿಸಿದೆ. ಕಲ್ಯಾಣ ಚಾಲುಕ್ಯ ಆರನೆಯ ವಿಕ್ರಮಾದಿತ್ಯನ ಪಿರಿಯರಸಿ 'ಚಂದಲದೇವಿಯರ ಗಂಧವಾರಣ ತ್ರಿಭುವನಮಲ್ಲದೇವ ಪಾದಸಳ್ಚರಣ ಗುಣಾಭರಣ' ಎಂದು ಖ್ಯಾತನಾಗಿದ್ದಾನೆ ಈ ಮನೆತನದ ಕಲಿಯಮರಸ ಹೀಗೆ ರಾಜಕೀಯವಾಗಿ ಪ್ರಸಿದ್ಧಿ ಪಡೆದಿದ್ದ ಈ ಮನೆತನದಲ್ಲಿ ಜರುಗಿದ ಮತಾಂತರ ಪ್ರಕ್ರಿಯೆ ತೀವ್ರ ಗಮನ ಸೆಳೆಯುವಂತಾಗಿದೆ.

ಖಚರ ಮನೆತದ ಮೂಲ ಪ್ರದೇಶ ಬಾಸವೂರು. (ಪಾವರಿ) ಹಾವೇರಿ, (ದೆಯ್ವದ ಪೊಸವೂರು) ದೇವಿ ಹೊಸೂರು, (ಚೆಂಗಾಪುರ) ಸಂಗೂರು, ಕೋಳೂರು (ಮಲ್ಲವುರ) ಮಲ್ಲೂರು, (ಕಲ್ಕೆಱೆ) ಕಲಕೇರಿ, (ತಮ್ಮುಗೆ) ಕೋಣನ ತಂಬುಗೆ, (ವೊಮ್ಮರಡಿ), ಹೊಮ್ಮರಡಿ (ಕಬ್ಬೂರು) ಕಬ್ಬೂರು, (ಕುಳುವನೂರು) ಕುಳೇನೂರು, (ದೇವಂಗೇರಿ) ದೇವಗಿರಿ, ಹಿರೇಬಾಸೂರು, ಚಿಕ್ಕಬಾಸೂರುಗಳು ಇವರ ಆಳ್ವಿಕೆಗೆ ಸಂಬಂಧಿಸಿದ ಪ್ರದೇಶಗಳು. ಈ ಮನೆತನದಲ್ಲಿ ಮುಖ್ಯವಾಗಿ ಕಲಿಯಮರಸ, ನಲ್ಲಿಯಮರಸ, ರಾಜಾದಿತ್ಯ, ಜೋಯಿದೇವರಸ, ಹೆವ್ಮಾಡಿಯರಸ, ಮಾಚಿಯರಸ, ಮಲ್ಲಿದೇವರಸ ಮುಂತಾದವರು ಆಳ್ವಿಕೆ ನಡೆಸಿದುದು ತಿಳಿದು ಬರುತ್ತದೆ. ಈ ಮನೆತನದ ಕೆಲವು ಅರಸರ ಬಿರುದಾವಳಿಗಳಲ್ಲಿ ಕಂಡು ಬರುವ 'ಪದ್ಮಾವತಿ ದೇವೀಲಬ್ಧವರ ಪ್ರಸ್ಸಾದರು' ಎಂಬುದು ಇವರ ಜೈನತ್ವವನ್ನು ಸ್ಪಷ್ಟಪಡಿಸುತ್ತದೆ.

ಜೈನಧರ್ಮವು ಈ ಕಾಲದ ಸನ್ನಿವೇಶಕ್ಕನುಗುಣವಾಗಿ ಇತರ ಧರ್ಮಗಳೊಡನೆ ಪ್ರತಿಸ್ಪರ್ಧಿಸಿ ಬದುಕಬೇಕಿತ್ತು. ಈ ಸ್ಪರ್ಧೆಯ ವಿವರಗಳು ನಮಗೆ ತಿಳಿದುಬರುವದಿಲ್ಲವಾದರೂ ಅದರ ಕುರುಹುಗಳು ಅಲ್ಲಲ್ಲಿ ದೊರೆಯುತ್ತವೆ. ಕಾಳಾಮುಖ ಗುರುಗಳು ಮಹಾವಿದ್ವಾಂಸರಾದ್ದರಿಂದ ಪ್ರತಿಪಕ್ಷದವರನ್ನು ಸೋಲಿಸಿ 'ಪರವಾದಿ ಮದಮರ್ದನ', 'ಕಾಳಾಮುಖ ಸಮಯ ಸಮುದ್ಧರಣ', 'ಸಮಯಸಂರಕ್ಷಣೈಕ ದಕ್ಷ' ಮುಂತಾದ ಬಿರುದಗಳನ್ನು ಧರಿಸಿದ್ದು ತಿಳಿದುಬರುತ್ತದೆ. ಇವರ ಪ್ರಭಾವಕ್ಕೆ ಸಿಕ್ಕು ಮತಾಂತರಗೊಂಡು ಗಮನ ಸೆಳೆದ ಮನೆತನ ಭಾಸವೂರು ಖಚರ ಮನೆತನದ್ದು.

ಜೀಮೂತವಾಹನಾನ್ವಯದ ಖಚರವಂಶದ 'ರಾಜಾದಿತ್ಯನ ಸಿಂಗ'ನೆಂಬ ಬಿರುದು ಹೊತ್ತ ಕಲಿಯಮರಸನು ತನ್ನನ್ನು 'ಪದ್ಮಾವತಿ ವರಲಬ್ಧ ಪ್ರಸಾದ ಜಿನಪಾದ ಪಂಕಜ ರಜಃಪುಂಜ ಪಿಂಜರಿತಗಾತ್ರ'ನೆಂದು ಕರೆದು ಕೊಂಡಿರುವನು. ಈ ಕಲಿಯಮರಸ ಬಾಸವೂರು ನೂರ ನಾಲ್ವತ್ತರ ಮನ್ನೆಯದ ಅರಸುತನಗೆಯ್ಯುತ್ತಿರುವ ಸಂದರ್ಭದಲ್ಲಿ 'ಮಾಹೇಶ್ವರದೀಕ್ಷೆಯಂ ತನಗೆ ಮಾಡಿಸಿಕೊಂಡು' ಸಮಸ್ತ ದೇವದೇವೇಶ್ವರ ಕಂಕಾಳೇಶ್ವರ ಮಹಾಮಹಿಮಂಗೆ ನಿವೇದ್ಯ

* ಕನ್ನಡ ಅಧ್ಯಯನ ಪೀಠ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ ೫೮೦ ೦೦೩.

ಾಜಿಗೆ ದತ್ತಿ ಬಿಟ್ಟಿರುವನು. ಕಲ್ಯಾಣಿ ಚಾಲುಕ್ಯ ಅರಸ ಂದನೆಯ ಸೋಮೇಶ್ವರನ ಕ್ರಿ. ಶ. ೧೦೪೫ರ ಶಾಸನದಲ್ಲಿ ಲಿಯಮರಸ ಬಾಸವೂರು ನೂರನಾಲ್ಕತ್ತು ಆಳುವಾಗ ಾಜಗುರುದೇವರೊಂದಿಗೆ ಕೋಳೂರಿನಲ್ಲಿ ತನ್ನ ಹೆಸರಿನ ಲಿಯುಮೇಶ್ವರ ದೇವಸ್ಥಾನ ಕಟ್ಟಿಸಿ ಆ ದೇವರ ಂದಾದೀವಿಗೆಗೆ ಮೂವತ್ತು ಪರಿಸೂತ್ರದ ಮನೆಗಳನ್ನು ಾನವಾಗಿ ಕೊಟ್ಟಿರುವನು ಬಂಕಾಪುರದ ಇಂದ್ರೇಶ್ವರದೇವರ್ಗಾಳ್ಳ, ಪನ್ನೆರಡು ಬಾಡ'ಗಳಲ್ಲಿ ಒಂದಾದ ೋಳೂರು ಬಾಸವೂರು ನೂರನಾಲ್ಕತ್ತರ ಮನ್ನೆಯದ ಗ್ರಾಮ. ಾಜಗುರು ದೇವರು ಇಂದ್ರೇಶ್ವರದ ಆಚಾರ್ಯರೆನಿಸಿದ್ದರು. ಾಲುಕ್ಯ ಭುವನೈಕಮಲ್ಲನ ರಾಜಗುರುವಾಗಿದ್ದ ರಾಜಗುರು ೇವರದು ಬಹುದೊಡ್ಡ ಹೆಸರು.

'ಸ್ವಸ್ತಿ ಯಮನಿಯಮ ಸ್ವಾಧ್ಯಾಯ ಧ್ಯಾನ ಧಾರಣ ಪ್ರಾಣಾಯಾಮ ಪ್ರತ್ಯಾಹಾರ ಜಪಸಮಾಧಿ ಸಂಪನ್ನರ್ ಈಶ್ವರಪಾದ ಕಮಲಬೃಂಗ ಸಾಹಸೋತ್ತುಂಗಾಶ್ರಿತ ಜನಕಲ್ಪ ವೃಕ್ಷ ಶರಣಾಗತಸುರಕ್ಷ ನುಡಿದಂತೆ ಮಾರ್ಪ, ಕುರೆ ಕೂರ್ಪಂ ಪ್ರತಿಪನ್ನಮೇರುವೇಕಾಂಗವೀರ ಆಸಂದುಧೀರಂ ವೀರಾವತಾರಂ ವೀರಚೂಡಾಮಣಿ, ಗೋತ್ರಚಿಂತಾಮಣಿ, ರೊಡ್ಡಕೈವಾರಂ ಶೈವಪ್ರಾಕಾರಂ ಸಾರ ಪರಿಪರಿಣತ ನಿಸ್ಸಂಕ ವೈರಿಂಬ್ರಂದಕ ಸಾರಸಂಧಾನ ಬಾಣಶಿಕ್ಷಾಗುರು ಕಲಿಯುಗ ದ್ರೋಣಾಚಾರ್ಯ ಸರ್ವಶಸ್ತ್ರಶಾಸ್ತ್ರವಿಶಾರದಂ ನಾರಾಚ ಪರಶುರಾಮ ಗಿರಿದುರ್ಗಭಂಜನಾಂಜನೇಯ ತ್ರೈಲೋಕ್ಯ ರಾಮಜನಂ ಕಟಕಮಾಭೀಸಂ ಕೊಂಕಣ ರಕ್ಷಾಲಂ ಕಡಂಬಾನ್ವಯ ಸಮುದ್ಧರಣ ನಾಮಾದಿ ಸಮಸ್ತ ಪ್ರಶಸ್ತಿ ಸಹಿತಂ ಶ್ರೀಮತ್ ರಾಜಗುರುದೇವರ್‌' ಇದು ರಾಜಗುರು ವರುಣಶಿವಪಂಡಿತರ ಗೌರವಪೂರ್ಣ ವ್ಯಕ್ತಿತ್ವದ ಚೌಕಟ್ಟು.

ಇವರು ಇಂದ್ರೇಶ್ವರದೇವರಿಗೆ ಬಿಟ್ಟ ಹನ್ನೆರಡು ಹಳ್ಳಿಗಳ ಆಡಳಿತ ಜವಾಬ್ದಾರಿ ನೋಡಿಕೊಳ್ಳುತ್ತಿದ್ದರು. ಈ ಕಲಿಯ ಮರಸ ರಾಜಗುರುದೇವರೊಂದಿಗೆ ಕೋಳೂರಿನ ಕಲಿದೇ ವೇಶ್ವರ ದೇಗುಲಕ್ಕೆ ಭೂದಾನ ನೀಡಿದ ಸಂದರ್ಭ, ಮೂಲತಃ ಜೈನಮತೀಯನಾದ ಕಲಿಯಮರಸ ರಾಜಗುರು ವರಣಶಿವಪಂಡಿತರಿಂದ ಮತಾಂತರಗೊಂಡಂತೆ ಕಾಣುತ್ತದೆ. ನಂತರ ಕೋಳೂರು ಕಲಿದೇವೇಶ್ವರದೇಗುಲದ ಆಚಾರ್ಯ ವಾಮರಾಸಿದೇವರ ಶಿಷ್ಯ ಮಲ್ಲಿಕಾರ್ಜುನ ಭಟ್ಟಾರಕರ ಕಾಲು ತೊಳೆದು ಹತ್ತು ಮತ್ತರು ಭೂಮಿಯನ್ನು ಕೊಟ್ಟಿರುವನು.

ಮಹಾಮಂಡಳೇಶ್ವರ ಕಲಿಯಮರಸ ಮತ್ತು ಲಚ್ಚಲ ದೇವಿಯರ ಮಗ ಹೆಮ್ಮಾಡಿಯರಸನ ಉಲ್ಲೇಖ ದೇವಗಿರಿ ಶಾಸನದಲ್ಲಿ ಬರುತ್ತದೆ. ಚಕ್ರವರ್ತಿ ವಿಕ್ರಮಾದಿತ್ಯನ ಮಹಾಸಾಮಂತಾಧಿಪತಿ ಮನೆವೆರ್ಗಡೆ ಈಶ್ವರಯ್ಯ ದಂಡನಾಯಕರು ಬನವಾಸಿ ಪನ್ನಿರ್ಚಾಸಿರ ಬೆಳ್ವೊಲ ಮೂನ್ನೂರು ಪುಲಿಗೆರೆ ಮೂನ್ನೂರನ್ನು ಆಳುತ್ತಿರುವಾಗ ಈ ಖಚರ ಮನೆತನದ ಹೆಮ್ಮಾಡಿಯರಸನು ಬಾಸವೂರು ನೂರನಾಲ್ಕತ್ತನ್ನು ಆಳುತ್ತಿದ್ದನು.

ಈತನು ಜೀಮೂತವಾಹನಾನ್ವಯ ಪ್ರಸೂತನೆಂದು ಹೇಳಿಕೊಂಡಿರುವುದರಿಂದ ಖಚರವಂಶದವನೆಂಬುದು ಸ್ಪಷ್ಟ. ಬನ್ದುಜನ ಕಮಳಿನೀ ರಾಜಹಂಸ, ಖಚರವಂಸೋತ್ತಮ ಪದ್ಮಾವತೀಲಬ್ಧವರ ಪ್ರಸಾದಂ, ತ್ಯಾಗ ವಿನೋದಂ, ಮನ್ನೆಯ ಮದನಿವಾರಣ ಮೊದಲಾದ ಪ್ರಶಸ್ತಿಗಳನ್ನು ಹೊಂದಿದ್ದನು. ಈತನು ಚಾಲುಕ್ಯ ವಿಕ್ರಮ ವರ್ಷದ ೪೬ ನೆಯ ಪ್ಲವ ಸಂವತ್ಸರ ಪೌಶ್ಯಶುದ್ಧ ಪುಣ್ಯಮಿ ಆದಿತ್ಯವಾರ 'ಮಾಹೇಶ್ವರ ದೀಕ್ಷೆ' ತೆಗೆದುಕೊಂಡು ತ್ರಿಭುವನೇಶ್ವರದೇವರ ನೈವೇದ್ಯಕ್ಕಾಗಿ ದೇವಗಿರಿಯಲ್ಲಿ ತ್ರಿಭುವನಪಂಡಿತರ ಪಾದ ತೊಳೆದು ಧಾರಾಪೂರ್ವಕ ಭೂಮಿದಾನ ಮಾಡಿರುವನು.

ಕರ್ನಾಟಕದಲ್ಲಿ ಕಾಪಾಲಿಕರಿಂದ ಬಂದಿರಬಹುದಾದ ಭೈರವಾರಾಧನೆ ಈ ಮತಾಂತರಗೊಂಡು ಬಾಸವೂರ ಖಚರಮನೆತನದ ಮೇಲೆ ಪ್ರಭಾವ ಬೀರಿದೆ. ಹೆಮ್ಮಾಡಿಯರಸ ಮತಾಂತರಗೊಂಡ ನಂತರ ಭೈರವದೇವರಿಗೆ ದತ್ತಿಕೊಟ್ಟ ದಾಖಲೆ ಇದೇ ಕೋಳೂರಿನ ಶಾಸನದಲ್ಲಿದೆ.

ಖಚರಮನೆತನದ ಕಲಿಯಮರಸ, ಹೆಮ್ಮಾಡಿಯರಸರ ಶೈವಧರ್ಮ ಮತಾಂತರ ಈ ಮನೆತನದಲ್ಲಿಯ ಬಹಳ ದೊಡ್ಡತಿರುವು. ಅಂದಿನ ಕಾಲದಲ್ಲಿ ಕಾಳಾಮುಖ ಶೈವರ ಉದಾರ ಧೋರಣೆ ಈ ಮತಾಂತರಕ್ಕೆ ಹೆಚ್ಚು ಪ್ರೋತ್ಸಾಹ ವಿತ್ತಂತಿದೆ. ಇಲ್ಲಿ ಗಮನಿಸಬೇಕಾದ ಒಂದಂಶ ಮನೆಯಲ್ಲಿ ಹಿರಿಯರೊಬ್ಬರು ಮತಾಂತರ ಮಾಡಿದರೆ ಅದು ಮನೆತನದ ಎಲ್ಲರಿಗೂ ಅನ್ವಯಿಸುವ ವಾಡಿಕೆ. ಆದರೆ ಇಲ್ಲಿ ಕಲಿಯಮರಸ ಮಾಹೇಶ್ವರ ದೀಕ್ಷೆಯನ್ನು 'ತನಗೆ ಮಾಡಿಸಿಕೊಂಡುದು' ಅಂತೆಯೇ ಹೆಮ್ಮಾಡಿಯರಸ ಮಾಹೇಶ್ವರ ದೀಕ್ಷೆಯನ್ನ 'ಕೆಯ್‌ಕೊಂಡುದು', ವೈಯಕ್ತಿಕ ಮತಾಂತರಕ್ಕೆ ಸೂಚನೆ ಯೆನಿಸಿದೆ.

ಒಬ್ಬ ಮಂಡಲೇಶ್ವರ ಒಂದು ಧರ್ಮವನ್ನು ಬಿಟ್ಟು ಮತ್ತೊಂದು ಧರ್ಮವನ್ನು ಅಪ್ಪಿದರೆ ಅವನ ಆಳ್ವಿಕೆಯಲ್ಲಿರುವ ಜನರ ಮೇಲೆ ಅದು ಬೀರುವ ಪ್ರಭಾವವನ್ನು ಊಹಿಸಿಕೊಳ್ಳ ಬಹುದು. ಜೈನಧರ್ಮ ಮತ್ತು ಶೈವಧರ್ಮಗಳ ಸ್ಪರ್ಧೆಯ ಈ ಕಾಲದಲ್ಲಿ ಪರಸ್ಪರ ದೇವಾಲಯ ನಾಶದ ಉಲ್ಲೇಖಗಳು ಕಾವ್ಯ ಶಾಸನಗಳಲ್ಲಿ ನಮಗೆ ಸಿಗುತ್ತವೆ. ಆದರೆ ಮತಾಂತರ ಗೊಂಡ ಉಲ್ಲೇಖ ಶಾಸನಗಳಲ್ಲಿ ಸಿಗುವುದು ಈ ಖಚರ ಮನೆತನಕ್ಕೆ ಸಂಬಂಧಪಟ್ಟ ಮತಾಂತರ ಮಾತ್ರವೆಂಬುದು ಗಮನಿಸಬೇಕಾದ ಅಂಶವಾಗಿದೆ. ೦

ಆರ್ ಕವಿತ*

# ನಿಡುಗಲ್ಲು ಪ್ರದೇಶದ ಚೋಳ ಮನೆತನದ ವಂಶಾವಳಿ ಮತ್ತು ಕಾಲಗಣನೆ-ಪುನರ್‌ಪರಿಶೀಲನೆ

ಕ್ರಿ.ಶ.೧೧ನೆಯ ಶತಮಾನದ ಪ್ರಾರಂಭದಿಂದ ೧೩ನೆಯ ಶತಮಾನದ ಅಂತ್ಯದ ವರೆಗೆ ಸುಮಾರು ಮೂರು ಶತಮಾನಗಳ ಕಾಲ ಚೋಳರೆಂದು ಕರೆದುಕೊಳ್ಳುತ್ತಿದ್ದ ಅರಸುಮನೆತನ ದವರು ಕರ್ನಾಟಕದ ದಕ್ಷಿಣ ಪೂರ್ವಭಾಗ ಮತ್ತು ಆಂಧ್ರಪ್ರದೇಶದ ಪಶ್ಚಿಮ ಭಾಗದಲ್ಲಿ ಪ್ರಭಾವಯುತವಾಗಿ ಆಳ್ವಿಕೆ ನಡೆಸಿದರು. ಸಾಮಾನ್ಯವಾಗಿ ನಿಡುಗಲ್ಲಿನ ಚೋಳರೆಂದು ಇವರನ್ನು ಕರೆಯಲಾಗುತ್ತಿದೆ. ಆದರೆ ಇವರು ತಮ್ಮ ರಾಜಕೀಯ ಪ್ರಾತಿನಿಧ್ಯವನ್ನು ರೊದ್ದ ಪ್ರದೇಶದಲ್ಲಿ ಆರಂಭಿಸಿದಂತೆ ಕಾಣುತ್ತದೆ. ಇವರ ಮೊದಲ ಆಡಳಿತ ವಿಭಾಗವು ರೊದ್ದ-೩೦೦ ಆಗಿತ್ತೇ ಹೊರತು ನಿಡುಗಲ್ಲು ಅಲ್ಲ. ಅಲ್ಲಿಂದ ಪ್ರಬಲರಾದ ಇವರು ರೊದ್ದದ ಗೋವರೆಂದೇ ಕರೆದುಕೊಂಡಿದ್ದಾರೆ. ಕಲ್ಯಾಣ ಚಾಳುಕ್ಯರ ಮಹಾಮಂಡ ಲೇಶ್ವರರಾದ ಇವರು ನಿಡುಗಲ್ಲು ಮತ್ತು ಪಾವಗಡ ಪ್ರದೇಶದ ಸುತ್ತಮುತ್ತಲಿನ ಭಾಗಗಳನ್ನೂ ಆಳಿದರು. ರೊದ್ದ-೩೦೦, ಕನಿಯಕಲ್ಲು-೩೦೦, ಬಂಗಿಚೇರು-೩೦, ಸಿರೇನಾಡು-೩೦೦, ಸಿಂದವಾಡಿ-೧೦೦೦ ಮತ್ತು ಹರುವೆ-೩೦೦ ಇವು ಇವರ ಆಡಳಿತ ವಿಭಾಗಗಳು. ಇವರ ರಾಜ್ಯ ವಿಸ್ತಾರವು ಚಿತ್ರದುರ್ಗದ ಪೂರ್ವಭಾಗ, ತುಮಕೂರಿನ ಉತ್ತರಭಾಗ ಮತ್ತು ಆಂಧ್ರ ಪ್ರದೇಶದ ಅನಂತಪುರದ ಮಡಕಸಿರಾ, ಗೂಟಿ, ಕಲ್ಯಾಣಿದುರ್ಗ ಮತ್ತು ಪುಲಿದೇವೇನ್‌ಡ್ಲ ತಾಲೂಕುಗಳ ಪಶ್ಚಿಮ ಭಾಗದ ವರೆಗೆ ಸೀಮಿತವಾಗಿತ್ತು. ಕಾರಣಾಂತರಗಳಿಂದ ಬೇರೆ ಬೇರೆ ಕಾಲಾವಧಿಯಲ್ಲಿ ಗೋವಿಂದವಾಡಿ (೧೧ನೇ ಶತಮಾನದ ಪ್ರಾರಂಭದಿಂದ ಕ್ರಿ.ಶ.೧೧೪೩ರ ವರೆಗೆ) ಹೆಂಜೇರು (ಕ್ರಿ.ಶ.೧೧೪೩ ರಿಂದ ಕ್ರಿ.ಶ.೧೧೯೬) ಮತ್ತು ನಿಡುಗಲ್ಲು (೧೨೧೯ ರಿಂದ ೧೨೮೦) ಇವರ ರಾಜಧಾನಿಯಾಗಿದ್ದವು.

ಇವರು ತಮ್ಮ ಶಾಸನಗಳಲ್ಲಿ ಸಂಗಮ ಕಾಲದ ಕರಿಕಾಲಚೋಳನ ವಂಶಜರೆಂದು ಕರೆದುಕೊಂಡಿದ್ದಾರೆ. ಇದಲ್ಲದೇ ಇವರ ಬಿರುದಾದ 'ಉರೈಯೂರಪುರ ವರಾಧೀಶ್ವರ' ಕೂಡ ಇವರು ಮೂಲ ಚೋಳ ಸಂತತಿಗೆ ಸೇರಿರಬೇಕೆಂಬುದಕ್ಕೆ ಸಾಕ್ಷಿಯಾಗಿದೆ. ಆದ್ದರಿಂದ ಇವರು ಮೂಲತ: ಚೋಳ ರೆಂಬುದು ಸಂಶಯಾತೀತವಾಗಿದೆ. ಆದರೆ ತಮಿಳುನಾಡಿನ ಚೋಳಮನೆತನದವರೋ ಅಥವಾ ತೆಲಗುಚೋಳರ ಮನೆತನಕ್ಕೆ ಸೇರಿದವರೋ ಎಂಬುದು ಮಾತ್ರ ಸ್ಪಷ್ಟವಿಲ್ಲ. ಈ ಲೇಖನದಲ್ಲಿ ಈ ಚೋಳ ಮನೆತನದ ವಂಶಾವಳಿ ಮತ್ತು ಕಾಲಗಣನೆಯು ಕುರಿತು ಪುನರ್ಪರಿಶೀಲಿಸಲಾಗಿದೆ.

ಈ ಕೆಳಗಿನ ಶಾಸನಗಳಲ್ಲಿ ಈ ಚೋಳರ ವಂಶಾವಳಿಯ ಉಲ್ಲೇಖಗಳಿವೆ:

೧. ಇರಂಗೋಳದೇವ ಚೋಳಮಹಾರಾಜನ ಕಂಬದೂರು( ಕಲ್ಯಾಣದುರ್ಗ ತಾಲೂಕು, ಅನಂತಪುರ ಜಿಲ್ಲೆ) ಶಾಸನ. ಕಾಲ ಸುಮಾರು ೧೨ನೆಯ ಶತಮಾನದ ಪೂರ್ವಾರ್ಧ (ಸೌ.ಇಂ.ಇ. ೯-ಭಾ-೨ ಸಂ.೨೦೯)

೨. ಮಹಾಮಂಡಲೇಶ್ವರ ವೀರನೊಳಂಬ ಜಗದೇಕ ಮಲ್ಲಮಲ್ಲಿದೇವ ಚೋಳಮಹಾರಾಜನ ಓಬಲಪುರ (ಚಳ್ಳಕೆರೆ ತಾಲೂಕು, ಚಿತ್ರದುರ್ಗ ಜಿಲ್ಲೆ) ಶಾಸನ. ಕಾಲ ಕ್ರಿ.ಶ.೧೧೪೮. (ಎ.ಕ. ೧೧, ಚಕೆ ೨೧)

---

* ೧೫೯೪, ೧೨ನೇ 'ಎ' ಮೆಯಿನ್, 4ನೇ ಬ್ಲಾಕ್, ಕೋರಮಂಗಲ, ಬೆಂಗಳೂರು-೫೬೦೦೩೪

೩. ಬಮ್ಮಿದೇವ ಚೋಳಮಹಾರಾಜನ ಬ್ರಹ್ಮಗಿರಿ ಮೊಳಕಾಲ್ಮುರು ತಾಲೂಕು, ಚಿತ್ರದುರ್ಗ ಜಿಲ್ಲೆ) ಶಾಸನ. ಾಲ ಕ್ರಿ.ಶ.೧೨೯೯.(ಎ.ಕ. ೧೧, ಮೊಳಕಾಲ್ಮೂರು ೨೦)

೪. ಇರಂಗೋಳದೇವ ಚೋಳಮಹಾರಾಜನ ಡುಗಲ್ಲಬೆಟ್ಟ (ಪಾವುಗಡ ತಾಲೂಕು, ತುಮಕೂರು ಜಿಲ್ಲೆ) ಾಸನ. ಕಾಲ ಕ್ರಿ.ಶ. ೧೨೩೨.(ಎ.ಕ.೧೨, ಪಾವುಗಡ ೫೨)

೫. ಇರಂಗೋಳದೇವ ಚೋಳಮಹಾರಾಜನ ಡುಗಲ್ಲು (ಪಾವುಗಡ ತಾಲೂಕು, ತುಮಕೂರು ಜಿಲ್ಲೆ) ಾಸನ. ಕಾಲ ಕ್ರಿ.ಶ. ೧೨೪೮. (ಎ.ಕ. ೧೨.ಪಾವುಗಡ ೫೦)

೬. ಕ್ರಿ.ಶ.೧೨೯೨ರ ಗಣೇಶನ ನಿಡುಗಲ್ಲು (ಪಾವುಗಡ ತಾಲೂಕು, ತುಮಕೂರು ಜಿಲ್ಲೆ ಶಾಸನ. (ಎ.ಕ.೧೨,ಪಾವುಗಡ ೫೦)

ಈ ಮೇಲೆ ತಿಳಿಸಿದ ಶಾಸನಗಳ ಸಹಾಯದಿಂದ ಈ ಚೋಳಮನೆತನದ ವಂಶಾವಳಿ ಮತ್ತು ಕಾಲಗಣನೆಯನ್ನು ಈ ಕೆಳಗಿನಂತೆ ಪುನಾರಚಿಸಬಹುದು:

೧. ಜಟ: ಇವನ ಯಾವುದೇ ಶಾಸನವು ನಮಗೆ ದೊರೆತಿಲ್ಲ. ಆದರೆ ಇರುಂಗೋಳದೇವ ಚೋಳ ಮಹಾರಾಜನ ನಿಡುಗಲ್ಲು ಶಾಸನದ ವಂಶಾವಳಿಯಲ್ಲಿ ಇವನು ಈ ಚೋಳ ಮನೆತನದ ಮೊದಲನೆಯ ಅರಸನೆಂದು ಗುರುತಿಸಲ್ಪಟ್ಟಿದ್ದಾನೆ.

**ಗೋವಿಂದವಾಡಿಯಿಂದ ಆಳಿದ ಅರಸರು**

೨. ಬ್ರಹ್ಮದೇವ/ಭೋಗೇಂದ್ರ/ಭೋಗಿ: ಇವನ ಒಂದೇ ಒಂದು ಶಾಸನ ಕ್ಯಾರ್ಯ (ಸಿರಾ ತಾಲೂಕು, ತುಮಕೂರು ಜಿಲ್ಲೆ) ಪ್ರದೇಶದ್ದು. ಕಲ್ಯಾಣ ಚಾಲುಕ್ಯ ಜಗದೇಕಮಲ್ಲನ ಉಲ್ಲೇಖವಿರುವುದರಿಂದ ಕ್ರಿ.ಶ.೧೦೧೫-೧೦೪೪ರ ಅವಧಿಗೆ ಸಲ್ಲುತ್ತಾನೆ. (ಎ.ಕ. ೧೨, ಸಿರಾ ೩೭) ಇದರಲ್ಲಿ ಇವನು ಗೋವಿಂದವಾಡಿಯನ್ನು ಆಳುತ್ತಿದ್ದನೆಂದು ತಿಳಿದುಬರುತ್ತದೆ. ಅಲ್ಲದೇ ನೊಳಂಬನಾಳಿಮನ್ನಿರಿವ ಹಾಗೂ ರೊದ್ದವಗೋವ ಎಂಬುದು ಇವನ ಬಿರುದುಗಳಾಗಿದ್ದವು ಎಂಬುದು ತಿಳಿಯುತ್ತದೆ.

೩. ಮಂಗರಸ/ಇರಿವಮಂಗರಸ/ಕಲೆಮಂಗಿ: ಇವನ ಎರಡು ಶಾಸನಗಳು ದೊರೆತಿದ್ದು ಮೊದಲನೆಯದರ ಕಾಲ ಕ್ರಿ.ಶ.೧೦೭೯ (ಸೌ. ಇಂ.ಇ. ೯-ಭಾ-೧ ಸಂ. ೧೪೬) ಹಾಗೂ ಎರಡನೆಯದರ ಕಾಲ ಸುಮಾರು ೧೦೮೨-೮೩ (ಸೌ. ಇಂ.ಇ. ೯-ಭಾ-೧ ಸಂ. ೧೪೬) ಇವನ ಆಡಳಿತ ಪ್ರದೇಶ ರೊದ್ದ ೩೦೦ ಮತ್ತು ಕನಿಯಕಲ್ಲು-೩೦೦ ವಿಭಾಗಗಳನ್ನೊಳಗೊಂಡಿತ್ತು.

ಗೋವಿಂದವಾಡಿಯು ಈತನ ರಾಜಧಾನಿಯಾಗಿತ್ತು.

೪. **ಬೀಚಿ** : ಇರುಂಗೋಳದೇವ ಚೋಳಮಹಾರಾಜನ ನಿಡುಗಲ್ಲು ಶಾಸನದ ಪ್ರಕಾರ ಇವನು ಮಂಗರಸನ ಮಗನೆಂದು ತಿಳಿಯುತ್ತದೆ. ಇವನ ಯಾವುದೇ ಶಾಸನವು ದೊರೆತಿಲ್ಲ.

೫. **ಗೋವಿಂದರಸ/ಗೋವಿಂದಮಹಿಪ**: ಇರುಂಗೋಳದೇವ ಚೋಳಮಹಾರಾಜನ ನಿಡುಗಲ್ಲಿನ ಕ್ರಿ.ಶ.೧೨೩೨ (ಎ. ಕ. ೧೨, ಪಾವಗಡ ೫೨), ಕ್ರಿ.ಶ. ೧೨೪೮ (ಎ. ಕ. ೧೨, ಪಾವಗಡ ೫೦) ಹಾಗೂ ಕಣೇಶ್ವರನ ನಿಡುಗಲ್ಲಿನ ಕ್ರಿ.ಶ. ೧೨೯೨ರ (ಎ. ಕ. ೧೨, ಪಾವಗಡ ೫೩) ಶಾಸನದಲ್ಲಿ ಇವನು ಬೀಚಿಯ ಮಗನೆಂದು ಉಲ್ಲೇಖವಿದೆ. ಇವನ ಯಾವುದೇ ಶಾಸನವು ದೊರೆತಿಲ್ಲ.

೬. **ಇರುಂಗೋಳದೇವ**: ಕಾಲ ಸುಮಾರು ಕ್ರಿ.ಶ.೧೧೦೭ ರಿಂದ ಕ್ರಿ.ಶ. ೧೧೪೩ರ ವರೆಗೆ. ಇವನ ಸುಮಾರು ೧೦ ಶಾಸನಗಳು ದೊರೆತಿದ್ದು ಮೊದಲನೆಯದರ ಕಾಲ ಕ್ರಿ.ಶ.೧೦೭ ಹಾಗೂ ಕೊನೆಯದು ಕ್ರಿ.ಶ.೧೧೪೩. ಇವನು ಕನಿಯಕಲ್ಲು - ೩೦೦, ರೊದ್ದ-೩೦೦ ಹಾಗೂ ಸಿಂದವಾಡಿ-೧೦೦೦ ಭಾಗಗಳನ್ನು ರಾಜಧಾನಿ ಗೋವಿಂದವಾಡಿಯಿಂದ ಆಳುತ್ತಿದ್ದನು.

೭. **ಮಲ್ಲಿದೇವ/ಪಿರಿಯಭೋಗ/ಭೋಗೇಂದ್ರದೇವ**: ಇವನ ಸುಮಾರು ಹತ್ತೊಂಭತ್ತು ಶಾಸನಗಳು ದೊರಕಿದ್ದು. ಮೊದಲ ಶಾಸನವು ಕ್ರಿ.ಶ.೧೧೩೯-೪೦ ಹಾಗೂ ಕೊನೆಯದು ಕ್ರಿ.ಶ.೧೧೯೬. ಇವನ ರಾಜ್ಯವು ರೊದ್ದನಾಡು, ಕನಿಯಕಲ್ಲು ನಾಡು,ಸಿರೇನಾಡು, ಹರುವೇನಾಡಿನವರೆಗೂ ಹಬ್ಬಿತ್ತು. ಇವನ ರಾಜಧಾನಿಯು ಹೆಂಜೇರು ಅಂದರೆ ಹೇಮಾವತಿ.ಇವನ ಓಬಲಪುರ (ಎ. ಕ. ೧೧, ಚಳ್ಳಕೆರೆ ೨೧)ಶಾಸನದಲ್ಲಿ ಇವನನ್ನು ವೀರನೊಳಂಬ ಜಗದೇಕಮಲ್ಲ ಮಲ್ಲಿದೇವ ಚೋಳಮಹಾರಾಜನೆಂದು ಕರೆಯಲಾಗಿದೆ. ಇದರಿಂದ ಇವನು ನೊಳಂಬ ರಾಜಕುಮಾರಿಯಿಂದ ಹುಟ್ಟಿರಬಹುದು ಮತ್ತು ನೊಳಂಬ ರಾಜ್ಯದಲ್ಲಿ ಯಾರೂ ಉತ್ತರಾಧಿಕಾರಿ ಇಲ್ಲದ್ದರಿಂದ ನೊಳಂಬರ ರಾಜಕೀಯ ಆಡಳಿತ ಇವನ ಕೈಸೇರಿರುವ ಸಾಧ್ಯತೆಯಿದೆ.

೮. **ಇರುಂಗೋಳ II** : ಮಹಾಮಂಡಲೇಶ್ವರ ತ್ರಿಭುವನಮಲ್ಲ ಮಲ್ಲಿದೇವ ಚೋಳಮಹಾರಾಜನ ಮಂಗಳವಾಡ (ಪಾವುಗಡ, ತುಮಕೂರು ಜಿ.) ಶಾಸನದಲ್ಲಿ (ಮೈ ಆರ್ಕಿ ೧೯೪೧ ಸಂ. ೪೭) ಇವನು ಮಲ್ಲಿದೇವನ ಮಗನೆಂದು ಉಲ್ಲೇಖವಿದೆ. ಇವನ ಕಾಲವು ಸುಮಾರು ಕ್ರಿ.ಶ.೧೧೯೬ ರಿಂದ ೧೨೧೯ರ ವರೆಗೆ.

೯. **ಬೊಮ್ಮಿದೇವ II /ಬ್ರಹ್ಮ**: ಇವನ ಎರಡು ಶಾಸನಗಲು ದೊರಕಿದ್ದು ಮೊದಲನೆಯದರ ಕಾಲ ಕ್ರಿ.ಶ.೧೨೧೯ (ಎ.ಕ. ೧೧ ಮೊಳಕಾಲ್ಮೂರು ೨೦) ಹಾಗೂ ಎರಡನೆಯದು ಸುಮಾರು ೧೩ನೆಯ ಶತಮಾನದ್ದು (ಎ.ಕ. ೧೧ ಮೊಳಕಾಲ್ಮೂರು ೨೪). ಇವನು ಮಲ್ಲಿದೇವನ ಎರಡನೆಯ ಮಗ. ಇವನ ಆಡಳಿತ ವಿಭಾಗಗಳು ರೊದ್ದ, ಸಿರೇನಾಡು, ಮದಯಮ್ಮೆನಾಡು, ಲುಂಕೇನೊರುಬ, ನೊಳಂಬವಾಡಿ ಹಾಗೂ ರೇಮಾಡಿ (ಇರ್‌ಮಾಡಿ). ಇವನ ರಾಜಧಾನಿ ನಿಡುಗಲ್ಲು. ಹೊಯ್ಸಳರ ಕಿರುಕುಳ ಹಾಗೂ ರಾಜಕೀಯ ಒತ್ತಡ ಇವರು ನಿಡುಗಲ್ಲಿಗೆ ಬರಲು ಕಾರಣವಾಗಿರಬೇಕು.

೧೦. **ಇರುಂಗೋಳ III** : ಇವನು ಬೊಮ್ಮಿದೇವ IIನ ಮಗ. ಇವನ ಸುಮಾರು ೮ ಶಾಸನಗಳು ದೊರೆತಿದ್ದು ಮೊದಲ ಶಾಸನದ ಕಾಲ ಸುಮಾರು ಕ್ರಿ.ಶ ೧೨೩೨ ಹಾಗೂ ಕೊನೆಯ ಶಾಸನದ ಕಾಲ ಸುಮಾರು ಕ್ರಿ.ಶ.೧೨೭೭. ಇವನ ರಾಜಧಾನಿಯು ನಿಡುಗಲ್ಲು. ಅಬ್ಬಿನಪೊಳೆ (ಚಿತ್ರದುರ್ಗ), ಕಂಬದೂರು (ಅನಂತಪುರ) ಹಾಗೂ ನಿಡುಗಲ್ಲು ಶಾಸನಗಳು ಅವನ ರಾಜ್ಯವಿಸ್ತಾರವು ಈ ವಿಭಾಗದಲ್ಲಿ ಹಬ್ಬಿತ್ತೆಂದು ತಿಳಿಸುತ್ತದೆ. ಇವನ ರಾಜಧಾನಿ ನಿಡುಗಲ್ಲು. ಇವನಿಗೆ ಮೂರು ಜನ ಮಕ್ಕಳು, ತ್ರಿಪುರಾಂತಕದೇವ, ಪೆರುಮಾಳದೇವ, ಬೊಮ್ಮ III .

೧೧. ತ್ರಿಪುರಾಂತಕದೇವ (ಕ್ರಿ.ಶ.೧೨೬೨): ಇವನು ಇರುಂಗೋಳ III ಮಗನೆಂದು ಅಮರಾಪುರ (ಸಿರಾ ತಾಲೂಕು, ತುಮಕೂರು ಜಿಲ್ಲೆ) ಶಾಸನದಿಂದ ತಿಳಿಯುತ್ತದೆ. ಇದರ ಕಾಲ ಸುಮಾರು ಕ್ರಿ.ಶ. ೧೨೬೨. ಇವನು ಹನಿಯದುರ್ಗವನ್ನು ಆಳುತ್ತಿದ್ದನೆಂದು ಉಲ್ಲೇಖವಿದೆ.

೧೨. **ಪೆರುಮಾಳದೇವ**: ಇವನ ಮೂರು ಶಾಸನಗಳು ಸಿಕ್ಕಿದ್ದು ಮೊದಲನೆಯದರ ಕಾಲ ಸುಮಾರು ಕ್ರಿ.ಶ.೧೨೮೦ ಹಾಗೂ ಕೊನೆಯದರದೂ ಕ್ರಿ.ಶ.೧೨೮೬. ಇವನ ರಾಜಧಾನಿ ನಿಡುಗಲ್ಲು.

೧೩. **ಬೊಮ್ಮ III**: ಇವನ ಯಾವುದೇ ಶಾಸನ ದೊರೆತಿಲ್ಲ. ಗಣೇಶ್ವರನ ಕ್ರಿ.ಶ.೧೨೯೨ರ ನಿಡುಗಲ್ಲು ಶಾಸನದಲ್ಲಿ ಇವನು ಇರುಂಗೋಳನ ಮಗನೆಂದು ಉಲ್ಲೇಖವಿದೆ.

೧೪. **ಗಣೇಶ್ವರದೇವ ಚೋಳಮಹಾರಾಜ**: ಇವನ ಸುಮಾರು ಎರಡು ಶಾಸನಗಳು ದೊರಕಿದ್ದು ಇವುಗಳ ಕಾಲ ಕ್ರಿ.ಶ. ೧೨೯೨. ಇವನ ರಾಜ್ಯವು ನಿಡುಗಲ್ಲಿನ ಸುತ್ತಮುತ್ತಲಿನ ಪ್ರದೇಶವನ್ನೊಳಗೊಂಡಿತ್ತು.

೧೫. **ಬೊಮ್ಮಿದೇವ IV**: ಇವನ ಒಂದು ಶಾಸನ ಮೊಪುರು (ಪುಲಿವೇನ್‌ಡ್ಲ ತಾಲೂಕು ಅನಂತಪುರ ಜಿಲ್ಲೆ) ಪ್ರದೇಶದಲ್ಲಿ ಸಿಕ್ಕಿದೆ. ಇದರ ಕಾಲ ಕ್ರಿ.ಶ.೧೩೦೯.

೧೬. **ಇರುಂಗೋಳ IV**: ಇವನು ಪೆರುಮಾಳದೇವನ ಮಗನೆಂದು ಗುಡ್ಡಹಳ್ಳಿ (ಪಾವುಗಡ ತಾಲೂಕು, ತುಮಕೂರು ಜಿಲ್ಲೆ) ಶಾಸನ (ಕ್ರಿ.ಶ.೧೩೨೦) ರಿಂದ ತಿಳಿಯುತ್ತದೆ. ಇವನು ಗುಡ್ಡಹಳ್ಳಿಯಿಂದ ರಾಜ್ಯಭಾರ ಮಾಡುತ್ತಿದ್ದನು.

೧೭. **ನಾಚಯ್ಯನಾಯಕ**: ನಾಚಯ್ಯನಾಯಕನು ಇರುಂಗೋಳ IV ನ ಮಗನೆಂದು ಗುಡ್ಡಹಳ್ಳಿ ಶಾಸನದಿಂದಲೇ ತಿಳಿಯುತ್ತದೆ. ಇವನ ಯಾವುದೇ ಶಾಸನವು ದೊರಕಿಲ್ಲ.

೧೮. **ಭೈರರಸ**: ಇವನ ಒಂದು ಶಾಸನವು ಕ್ರಿ.ಶ೧೩೩೭ ದೊಡ್ಡಬಾಣಗೆರೆ (ಸಿರಾ ತಾಲೂಕು, ತುಮಕೂರು ಜಿಲ್ಲೆ)ಯಲ್ಲಿ ದೊರಕಿದೆ. ಇವನ ತಂದೆ ನಾಚಯ್ಯ ನಾಯಕನೆಂದು ಈ ಮೇಲಿನ ಶಾಸನದಿಂದ ತಿಳಿಯುತ್ತದೆ. ಇವನು ನಿಡುಗಲ್ಲಿನಿಂದ ಆಳುತ್ತಿದ್ದನು. ಇವನಿಗೆ ಇಬ್ಬರು ಮಕ್ಕಳು-ಕೇಸರಸ ಹಾಗೂ ವಿಜಯರಸ.

ಈ ಪಟ್ಟಿಯಲ್ಲಿ ಈ ಕೆಳಗಿನ ಅರಸರ ಹೆಸರನ್ನು ಮುಂಚೆ ಚೋಳ ವಂಶದವರನ್ನು ಕುರುತು ಅಧ್ಯಯನ ಮಾಡಿದ ವಿದ್ವಾಂಸರು ಗಣನೆಗೆ ತೆಗೆದುಕೊಂಡಿಲ್ಲ.

೧. **ಇರುಂಗೋಳ II** : ಮಲ್ಲಿದೇವ ಚೋಳ ಮಹಾರಾಜನ ಮಂಗಳವಾಡ (ಪಾವುಗಡ ತಾಲೂಕು, ತುಮಕೂರು ಜಿಲ್ಲೆ) ಶಾಸನದಲ್ಲಿ ಇವನ ಉಲ್ಲೇಖವಿದೆ. ಕಾಲ ಕ್ರಿ.ಶ.೧೧೬೦ (ಮೈ. ಆರಿ. ೧೯೪೧, ಸಂ. ೪೭)

೨. ತ್ರಿಪುರಾಂತಕದೇವ: ಇವನ ಅಮರಾಪುರ ಶಾಸನ ಸಿರಾ ತಾಲೂಕು, ತುಮಕೂರು ಜಿಲ್ಲೆ). ಕಾಲ ಕ್ರಿ.ಶ.೧೨೬೨ ಎ.ಕ. ೧೨, ಸಿರಾ. ೩೪)

೩. ಪೆರುಮಾಳದೇವ: ಇವನ ಮೂರು ಶಾಸನಗಳು ಳ ನಿಡುಗಲ್ಲು, ಕಾಲ ಕ್ರಿ.ಶ.೧೨೮೦ (ಎ.ಕ. ೧೨, ಪಾವಗಡ ೭)

೪. ಚೊಮ್ಮ IV: ಇವನ ಮೊಪುರು ಶಾಸನ ಪುಲಿವೆನ್ಡ್ಲ ತಾಲೂಕು, ಅನಂತಪುರ ಜಿಲ್ಲೆ), ಸುಮಾರು ್ರಿ.ಶ.೧೩೦೯ರಂದು (ಸೌ. ಇಂ. ಇ. ೧೦,ಸಂ. ೪೯೮).

೫. ಇರುಂಗೋಳ VI: ಗುಡ್ಲ ಹಳ್ಳಿ ಶಾಸನ (ಪಾವುಗಡ ತಾಲೂಕು, ತುಮಕೂರು ಜಿಲ್ಲೆ) ಕ್ರಿ.ಶ.೧೩೨೦(ಎ.ಕ. ೧೨, ಪಾವಗಡ ೧೪)

೬. ನಾಚಯ್ಯನಾಯಕ ಹಾಗೂ ಬೈರರಸ : ಅದೇ.

೭. ಕೇಸರಸ ಹಾಗೂ ವಿಜಯರಸ: ಬೈರರಸನ ದೊಡ್ಡಬಾಣಗೆರೆ ಶಾಸನ ಕ್ರಿ.ಶ.೧೩೩೭(ಎ.ಕ. ೧೨, ಚಳ್ಳಕೆರೆ ೮)

ಉಪಸಂಹಾರ : (೧)ರೊದ್ದ ಪ್ರದೇಶದಲ್ಲಿ ರಾಜಕೀಯ ಚಟುವಟಿಕೆಯ ಆರಂಭ

(೨) ಬಹುಶಃ ನೊಳಂಬರ ಅಧೀನರಾಗಿ ಗೋವಿಂದ ವಾಡಿಯಿಂದ ಆಳ್ವಿಕೆ.

(೩) ನೊಳಂಬರ ರಾಜಧಾನಿ ಹೆಂಜೇರಿನಲ್ಲಿ ಆಡಳಿತ. ಬಹುಶಃ ಮದುವೆ ಇಲ್ಲವೇ ರಕ್ತಸಂಬಂಧಿಯಾಗಿ ನೊಳಂಬರ ಆಧಿಕಾರ ಇವರಿಗೆ ವರ್ಗಾವಣೆಯಾಯಿತು.

(೪) ನಿಡುಗಲ್ಲಿನ ಆಡಳಿತ ರಾಜಕಿಯ ಪರಿಸರ ಕಾರಣವೇ?

(೫) ಹೊಸದಾಗಿ ಬೆಳಕಿಗೆ ಬಂದಿರುವ ಅರಸರು.

## ಗ್ರಂಥ ಋಣ


1. Abhishankar K. 1969 Mysore State District Gazetteer: Tumkur District. Government Press, Bangalore, PP.593-94.

2. Cheluvrajan V.R 1984 "Pavugada Taluk" (Kannada) Nayakavani Itihasa Svarnaputadalli. Pavugada (Tumkur) Dt.19.11.1994.

3. Cheluvarajan V.R.1987 Pavugada Taluku Darsana (Kannada) I.B.H.Pubication, Bangalore

4. Divakar, R.R. 1968 Karnataka Through The Ages, The Government of Mysore, Mysore. pp 412-413.

5. Kavitha, R. 1994 The Cholas of Nidugal: A Study The M.Phil.dissertation submitted to Karnatak University, Dharwad-3.

6. A Topographical List of the Inscriptions of Madras Presidency. Vol.I, II and III.Ed.by Rangacharya, The Government Press, Madras,1919.

7. Annual Report of the Mysore Archaeologicaal Department, 1938. University of Mysore, Mysore, 1940.

8. Annual Report of the Sourth Indian Epigraphy for the years 117, 1950-51, 1956-57, 1957-58, 1960-61. Archaeological Survey of India, Delhi.

9. Epigraphia Carnatica. Vol. IV, V, X, XI, Xii, Archaeological Survey of Mysore, Mysore.

10. Epigraphia Indica, Vols.XII (1912) XXVII (1956) XXXI. Department of Archaeology, Delhi,1994.

11. South Indian Inscriptions. Vol. IX pt I & II, Archaeological Survey of India, New Delhi, 1939.

## ನಿಡುಗಲ್ಲು ಪ್ರದೇಶದ ಚೋಳಮನೆತನದ ವಂಶಾವಳಿ ಮತ್ತು ಕಾಲಗಣನೆ



ಡಾ || ಎಂ.ಬಿ. ನೇಗಿನಹಾಳ *

# ಬೆಳಗಾವಿ ಪ್ರದೇಶದ ಪ್ರಾಚೀನ ಇತಿಹಾಸ

ಕರ್ನಾಟಕದ ಸಾಂಸ್ಕೃತಿಕ ಮತ್ತು ಐತಿಹಾಸಿಕ ಮಹತ್ವವುಳ್ಳ ಕೆಲವೇ ನಗರಗಳಲ್ಲಿ ಬೆಳಗಾವಿಯೂ ಒಂದು. ಈಗ ಬೆಂಗಳೂರು ಮತ್ತು ಹುಬ್ಬಳ್ಳಿಗಳ ತರುವಾಯ ರಾಜ್ಯದ ಮೂರನೆಯ ದೊಡ್ಡನಗರ. ಇದರ ಬೆಳವಣಿಗೆ ಶತಶತಮಾನಗಳಿಂದ ಹೆಚ್ಚುತ್ತಲೇ ಬಂದಿದೆ. ಒಂದು ಶತಮಾನದ ಮುಂಚೆ ವಡಗಾಂವಿ, ಶಹಾಪೂರ ಮತ್ತು ಬೆಳಗಾವಿಗಳು ಪ್ರತ್ಯೇಕ ನಗರಗಳೆಸಿದ್ದರೆ ಇಂದು ಈ ಮೂರೂ ಪಟ್ಟಣಗಳು ಏಕೀಭವಿಸಿ ಒಂದು ಮಹಾನಗರವಾಗಿ ರೂಪಗೊಂಡಿದೆ. ಈಗಲೂ ಈ ನಗರ ಗರ್ಭದಲ್ಲಿ ಕನಿಷ್ಠ ಎಂಟು ಹರಿಜನಕೇರಿಗಳನ್ನು ಗುರುತಿಸಬಹುದು. ಎಂದರೆ ಈಗಿನ ಬೆಳಗಾವಿಯಲ್ಲಿ ಕನಿಷ್ಟ ಎಂಟು ಊರುಗಳಾದರೂ ಸಮಾವೇಶಗೊಂಡಿರುವುದು ಖಚಿತ.

ಈಗ ಸ್ಪಷ್ಟವಾಗಿ ಗುರುತಿಸಬಹುದಾದ ಮೂಲ ಬೆಳಗಾವಿ ನಗರವೆಂದರೆ– ಈಗಿರುವ ಶನಿದೇವರ ಗುಡಿಯಿಂದ ಉತ್ತರದ ವೆಂಕಟರಮಣನ ಗುಡಿ. ಪೂರ್ವದ ಮಠಬೀದಿಯ ತುದಿಯಲ್ಲಿರುವ ವೀರಶೈವ ಮಠದಿಂದ ಪಶ್ಚಿಮದ ಹನುಮಂತದೇವರ ಗುಡಿ (ಮಾರುತಿ ವೀಧಿಯ ಪಶ್ಚಿಮ ತುದಿ) ವರೆಗಿನ ಪ್ರದೇಶ ಮಾತ್ರ. ಈಗಲೂ ಈ ಪ್ರದೇಶ ಪ್ರತಿ ಶತ ೮೦% ರಷ್ಟು ಕನ್ನಡಿಗರಿಂದಲೇ ತುಂಬಿರುವುದನ್ನು ಯಾರಾದರೂ ನೋಡಬಹುದು.

ಮೇಲೆ ತಿಳಿಸಿದ ಪ್ರಾಚೀನ ಬೆಳಗಾವಿ ನಗರ ಇತಿಹಾಸದ ಕಾಲಕಲ್ಪದಲ್ಲಿ ನಿಜವಾಗಿ ನಾಲ್ಕನೆಯದು ಎಂದು ಹೇಳಿದರೆ ಯಾರೂ ಬೆಚ್ಚಿಬೀಳಬೇಕಾದುದಿಲ್ಲ. ಮೊದಲ ಬೇಳಗಾವಿ ಈಗಿನ ರೇಲ್ವೆ ಸ್ಟೇಶನ್ನಿನ ಉತ್ತರ ಬದಿಯಲ್ಲಿ, ದಂಡಿನ ಶಿಬಿರದ ಪೂರ್ವಕ್ಕೆ ನೆಲಸಿತ್ತು. ಈಗಲೂ ಅಲ್ಲೊಂದು ಪುರಾತನ ಬಾವಿಯ ಅವಶೇಷಗಳಿವೆ. ಅಲ್ಲದೆ 'ನಾಗರ ಕೆರೆ' ಎಂಬ ಹೆಸರಿನ ಭಾರೀಗಾತ್ರದ ಕೆರೆಯೊಂದು ಈ ಪ್ರದೇಶದ ಮೇಲ್ ಭಾಗದಲ್ಲಿ ಅಸ್ತಿತ್ವದಲ್ಲಿತ್ತು. ಈಗಿರುವ ರೇಲ್ವೆ ಸೇತುವೆಯು ಪ್ರಸ್ತುತ ಕೆರೆಯ ಪೂರ್ವಏರಿಯ ಮೇಲೆಯೇ ಕಟ್ಟಲ್ಪಟ್ಟಿದೆ. ಗೋವಾ ಅಗಸಿಯ ಬಸ್ ನಿಲ್ದಾಣದ ಸಮೀಪದಿಂದ ಈ ಕೆರೆಯ ಒಂದು ಕೋಡಿ ಈಗಲೂ ಹರಿಯುತ್ತಿರುವುದನ್ನು ನೋಡ ಬಹುದು. ಈ ಕೆರೆ ಪಶ್ಚಿಮದಲ್ಲಿ ಒಂದು ಕಿಲೋ ಮೀಟರ ದೂರಕ್ಕೆ ಪಸರಿಸಿತ್ತು. ಪಶ್ಚಿಮದಲ್ಲಿ ಈಗಿರುವ ಕನ್ನಡ ಶಾಲೆಗೆ ಈಗಲೂ ''ನಾಗ ಝರಿ ಶಾಲೆ'' ಎಂದೇ ಜನ ಕರೆಯುತ್ತಾರೆ. ಈಗ್ಗೆ ಸುಮಾರು ಒಂದು ನೂರು ವರ್ಷಗಳ ಹಿಂದೆ ಹನ್ನೆರಡೂ ತಿಂಗಳು ನೀರು ಚಿಮ್ಮುವ ಝರಿಯೊಂದು ಅಲ್ಲಿ ಇದ್ದುದೇ ಹೀಗೆ ಹೆಸರಾಗಲು ಕಾರಣ.

ಇಷ್ಟು ದೊಡ್ಡದಾದ ಕೆರೆ ಮತ್ತು ಅದಕ್ಕೆ ತಾಗಿದ ಪೂರ್ವಕ್ಕಿರುವ ಪ್ರಾಚೀನ ವಸತಿಸ್ಥಾನ ಇವು 'ಸಾತವಾಹನ' ಕಾಲಕ್ಕಿಂತ ಪೂರ್ವದವು. ಬಹುಶಃ ನಾಗರ ಸಂಸ್ಕೃತಿಗೆ ಸಂಬಂಧಪಟ್ಟವು. ಆದ್ದರಿಂದ ಇದನ್ನು 'ನಾಗರ ಬೆಳಗಾವಿ' ಎಂದು ಕರೆಯ ಬಹುದು.

ತರವಾಯದ್ದು ಸಾತವಾಹನರ ಕಾಲದ ಬೆಳಗಾವಿ. ಇದು ಈಗಿನ ಹಳೆಯ ಬೆಳಗಾವಿಯ ಉತ್ತರಭಾಗ ವಡಗಾಂವಿಯ ಪೂರ್ವಭಾಗ ಮತ್ತು ಮಾಧವಪುರ ಒಳ ಪ್ರದೇಶವನ್ನೊಳಗೊಂಡಿತ್ತು. ಇಲ್ಲಿ ಸಾತವಾಹನರ ಕಾಲದ ನಗರಾವಶೇಷಗಳು ಪತ್ತೆಯಾಗಿರುವುದು, ಹಾಗೂ ಕ್ರಿ.ಶ.ಪೂರ್ವ ೧ನೆಯ ಶತಮಾನದ ಬ್ರಾಹ್ಮೀಲಿಪಿಯ ಶಾಸನ

---

* ಅಧ್ಯಕ್ಷರು, ಕನ್ನಡ ಅಧ್ಯಯನ ಪೀಠ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ ೫೮೦೦೦೩

ಸಿಕ್ಕಿರುವುದು ಎಲ್ಲರಿಗೂ ತಿಳಿದಿದೆ. ಈ ಪ್ರದೇಶವನ್ನು ವಿದ್ವಾಂಸರು ಕಂದಾಯ ಇಲಾಖೆಯ ದಾಖಲೆಗಳನ್ನನುಸರಿಸಿ 'ಮಾಧವಪುರ ವಡಗಾವಿ' ಪ್ರದೇಶವೆಂದು ಕರೆದಿದ್ದಾರೆ ಹೊರತು ವಾಸ್ತವವಾಗಿ ಈ ಪ್ರದೇಶ ಈಗಲೂ ಹಳೇ ಬೆಳಗಾವಿಯೆಂದು ಹೇಳಲಾಗುವ ಊರಿನ ಒಂದು ಭಾಗ.

ಮೂರನೆಯದು ರಟ್ಟರ ಬೆಳಗಾವಿ ಎಂದರೆ ಈಗಿನ ಕೋಟೆ ಪ್ರದೇಶ. ಇದು ಸುಮಾರು ೧೧ನೆಯ ಶತಮಾನಕ್ಕಾಗಲೇ ಕೋಟೆ ಅಸ್ತಿತ್ವಪಡೆಯಿತು. ಸೌದತ್ತಿಯ ರಟ್ಟರಿಗೆ ಇದು ಎರಡನೆಯ ರಾಜಧಾನಿ. ಈ ಕೋಟೆಯ ಉತ್ತರಕ್ಕಿರುವ ಬೃಹತ್ತಾದ ಕೆರೆ ಮತ್ತು ಇದರ ಸುತ್ತಲೂ ಇರುವ ಅಗಳು ಗಮನಾರ್ಹವಾಗಿದೆ. ಈ ಕೋಟೆಯ ಈ ಅಗಳಿಗೆ ರಕ್ಷಣೆಯ ದೃಷ್ಟಿಯಿಂದ ತುಂಬಾ ಮಹತ್ವವಿದ್ದುದು ಐತಿಹಾಸಿಕ ದಾಖಲೆಗಳಿಂದ ಸ್ಪಷ್ಟವಾಗಿದೆ. ಶಾಸನಗಳಲ್ಲಿ ಉಲ್ಲೇಖ ಗೊಂಡಿರುವ 'ಆನೆಯ ಕೆರೆ' ಎಂಬುದು ಪ್ರಸ್ತುತ ಕೋಟೆಯ ಉತ್ತರ ಬದಿಯಲ್ಲಿರುವ ಕೆರೆಯೇ ಎಂದು ವಿದ್ವಾಂಸರು ಊಹಿಸುವರಾದರೂ ಆನೆಗೊಳ (ಈಗ ಆನಿಗೋಳ) ಎಂಬ ಪ್ರಾಚೀನಕೊಳವೊಂದು, 'ನಾಗರ್ಝುರಿಯ' ದಕ್ಷಿಣಕ್ಕೆ ಮೊದಲಲ್ಲಿ ಇತ್ತೆಂಬುದನ್ನು ಇಲ್ಲಿ ಗಮನಿಸಬಹುದು.

ಈ ರೀತಿ ಕ್ರಿ.ಶ.ಪೂರ್ವಕಾಲದಿಂದಲೂ ತನ್ನ ಅಸ್ತಿತ್ವವನ್ನುಳಿಸಿಕೊಂಡು ಬೆಳೆಯುತ್ತಲೇ ಬಂದ ಮಹಾನಗರ 'ಬೆಳಗಾವಿ' ಎಂಬುದು ಸ್ಪಷ್ಟ.

ಬೆಳಗಾವಿಯಂತೆ ಪ್ರಾಕ್ತನ ಅವಶೇಷಗಳು ದೊರೆಯುವ ಖಾನಾಪುರ ತಾಲೂಕಿನ 'ಹಲಸಿಗೆ' ಇನ್ನೊಂದು ಪುರಾತನವಾದ ನಗರ. ಕ್ರಿ.ಶ.ಸು. ೪೫೦ರಿಂದಲೇ ಈ ಪಟ್ಟಣ ಅಸ್ತಿತ್ವದಲ್ಲಿದ್ದ ಬಗ್ಗೆ ಶಾಸನಾಧಾರಗಳಿವೆ. ಈಗಿರುವ ಹಾಳು ಜಿನಾಲಯವೊಂದು ಅಷ್ಟು ಹಿಂದಿನಿಂದಲೇ ಅಸ್ತಿತ್ವದಲ್ಲಿತ್ತು. ಗುಹಾಂತರದೇವಾಲಯವನ್ನು ಬಿಟ್ಟರೆ ಕರ್ನಾಟದಲ್ಲಿ ಅತ್ಯಂತ ಪ್ರಾಚೀನ ವಾಗಿರುವ ಕಟ್ಟಡವೆಂದರೆ ಈ ಜಿನಾಲಯವೇ. ಬನವಾಸಿ ಕದಂಬರಿಗೆ ಇದು ಇನ್ನೊಂದು ರಾಜಧಾನಿ ಯಾಗಿದ್ದುದು ಇನ್ನೊಂದು ಮುಖ್ಯ ಅಂಶ.

ಈ ಎರಡೂ ಪುರಾತನ ನಗರಗಳ ತರುವಾಯ ಬೆಳಗಾವಿ ಜಿಲ್ಲೆಯಲ್ಲಿ ವಿಖ್ಯಾತವಾಗಿರುವ ಪಟ್ಟಣವೆಂದರೆ ತೊರಗಲ್ಲು. ರಾಮದುರ್ಗ ತಾಲೂಕಿನಲ್ಲಿ ಮಲಪ್ರಭಾನದಿಯ ಉತ್ತರ ಬದಿಯಲ್ಲಿರುವ ಈ ಊರಿಗೆ ಏಳು ಸುತ್ತಿನ ಕೋಟೆಯಿದೆ. ಅವಶೇಷಗಳ ದೃಷ್ಟಿಯಿಂದ ಇಲ್ಲಿ ಅಷ್ಟು ಪ್ರಾಚೀನವಾದ ದಾಖಲೆಗಳಿಲ್ಲ. ಆದರೂ ಕ್ರಿ.ಶ.೧೧ನೆಯ ಶತಮಾನಕ್ಕಾಗಲೆ ಈ ಪಟ್ಟಣ ಅಸ್ತಿತ್ವದಲ್ಲಿತ್ತೆಂಬುದರಲ್ಲಿ ಅನುಮಾನವಿಲ್ಲ. 'ಕಾವ್ಯಾವಲೋಕನದಲ್ಲಿ' ತೊರಗಲೆ ರಾಜ್ಯದ ಉಲ್ಲೇಖವಿದೆ. ಬೆಳಗಾವಿ ವಿಜಾಪೂರ ಜಿಲ್ಲೆಗಳ ದಲಿತ ಜನಾಂಗಗಳಲ್ಲಿ ಪ್ರಚಲಿತವಿರುವ ವಂದತಿಗಳ ಪ್ರಕಾರ ಕಂಚಿ, ಅದರ ತರುವಾಯ ಮುದಗಲ್ಲು, ಆ ತರುವಾಯ ತೊರಗಲ್ಲು ಈ ಭಾಗ ಸ್ಥಳೀಯ ಕೇಂದ್ರ ಪಟ್ಟಣ. ಕವಿರಾಜಮಾರ್ಗದಲ್ಲಿ ಬೈಲಹೊಂಗಲ ತಾಲೂಕಿನ 'ಒಕ್ಕುಂದ' ಅಚ್ಚಕನ್ನಡ ಪ್ರದೇಶವೆಂದು ಉಲ್ಲೇಖಿಸಲ್ಪಟ್ಟಿದೆ. ಸೌದತ್ತಿ, ಮುನವಳ್ಳಿ, ಹೂಲಿ, ಗೊಡಚಿ, ಮುದಗವಿ, ಸಂಗೊಳ್ಳಿ, ಕಾದರವಳ್ಳಿ, ಕಲಭಾವಿ (ಕುಮ್ಮುದವಾಡ), ದೇಗಲಳ್ಳಿ, ಗೋಲಿಹಳ್ಳಿ-ಬೀಡಿ, ನೇಸರಗಿ, ಮೊದಲಾದವು ದಾಖಲೆಗಳಲ್ಲಿ ಕಂಡು ಬರುವ ಪ್ರಾಚೀನ ಆಡಳಿತ ಕೇಂದ್ರಗಳು.

ಇದೇ ರೀತಿ ತಾಲೂಕಾ ಸ್ಥಳವಾದ ಗೋಕಾಕ, ಹುಕ್ಕೇರಿ, ಎಕ್ಕಸಂಬುಗೆ, ಸಿಂದಿಕುರುಚಿಟ್ಟ, ಕಲ್ಲೊಳೆ, ಬೆಟಗೇರಿ, ಮಮದಾಪೂರ, ಕೌಜಲಗಿ, ನಣದಿ (ನಿಪ್ಪಾಣಿ), ಸಂಕೇಶ್ವರ, ರಾಯಬಾಗ, ಕೊಕಟನೂರ, ತೇಲಸಂಗ, ರಾಮತೀರ್ಥ, ಸತ್ತಿ ಮೊದಲಾದ ಮಧ್ಯ ಮತ್ತು ಉತ್ತರದ ಊರುಗಳು ಇತಿಹಾಸ ಪ್ರಸಿದ್ಧವಾಗಿದೆ. ಈ ಊರುಗಳಲ್ಲಿ ದೊರೆಯುತ್ತಿರುವ ಶಿಲಾ ಶಾಸನಗಳಿಂದ ಹಾಗೂ ಕೃಷ್ಣಾ ಘಟಪ್ರಭಾ ನದೀ ತೀರಗಳಲ್ಲಿ ಕಂಡುಬಂದಿರುವ ಪ್ರಾಕ್ತನ ಅವಶೇಷಗಳಿಂದ ಬೆಳಗಾವಿ ಜಿಲ್ಲೆಯ ಇತಿಹಾಸ ಬಲು ಹಿಂದೆ ಹೋಗುತ್ತದೆ.

ಬೆಳಗಾವಿ ನಗರದಲ್ಲಿ ಸಾತವಾಹನರ ಕಾಲದ ನಗರಾವಶೇಷಗಳು ಮತ್ತು ಬ್ರಾಹ್ಮಿಲಿಪಿಯ ಶಾಸನ ಪತ್ತೆಯಾಗಿರುವುದನ್ನು ಈ ಹಿಂದೆ ನೋಡಿದ್ದೇವೆ. ಈ ಶಾಸನವಲ್ಲದೆ ಕ್ಷತ್ರಪ ಮತ್ತು ರೋಮನ್ ನಾಣ್ಯಗಳು, ಬುದ್ಧನ ವಿಗ್ರಹ ಮೊದಲಾದ ಅವಶೇಷಗಳಿಂದೊಡಗೂಡಿರುವ ಬೆಳಗಾವಿ ಒಂದು ದೊಡ್ಡ ಪ್ರಮಾಣದ ಸಾತವಾಹನ ಕಾಲದ ನೆಲೆ. 'ಸನ್ನತಿ' ಯನ್ನು ಬಿಟ್ಟರೆ ಕರ್ನಾಟಕದಲ್ಲಿ ಇಂಥದು ಮತ್ತೊಂದಿಲ್ಲ. ಖಾನಾಪೂರ ತಾಲೂಕಿನಲ್ಲಿರುವ ನಂದಗಡವು 'ನಂದ'ರ ಆಳ್ವಿಕೆಯ ಕುರುಹು ಎಂದು ಕೆಲವು ಜನ ವಿದ್ವಾಂಸರು ಊಹಿಸುತ್ತಾರೆ. ಅದೇ ರೀತಿ ಮೌರ್ಯರ ಆಳ್ವಿಕೆಯ ಉಲ್ಲೇಖಗಳು ಈ ಜಿಲ್ಲೆಯಲ್ಲಿ ಪತ್ತೆಯಾಗಿಲ್ಲ.

ಮಳವಳ್ಳಿ ಮತ್ತು ಚಂದ್ರವಳ್ಳಿ ಲಿಪಿಗಳ ತರುವಾಯ ದಂಬರ ಅತಿ ಪ್ರಾಚೀನವಾದ ತಾಮ್ರಶಾಸನ ೂರೆಯುತ್ತಿರುವುದು ಹಲಸಗಿಯಲ್ಲಿ. ಗಂಗರ ಬೆಂಡಿ ನಹಳ್ಳಿ, ಚುಕುಟ್ಟೂರು, ಪೆನಗೊಂಡೆ ಈ ಮೂರು ನಾಲ್ಕು ್ರಾಚೀನ ಸಂಸ್ಕೃತ ಶಾಸನಗಳಂತೆ ಕಾಕುಸ್ಥವರ್ಮನು ುವರಾಜನಾಗಿದ್ದಾಗ ಹೊರಡಿಸಿದ ಹಲಸಿಗೆಯ ತಾಮ್ರ ಟಕೂಡ ಕರ್ನಾಟಕದ ಕೆಲವೇ ಪುರಾತನ ದಾಖಲೆಗಳಲ್ಲಿ ಂದು. ಇವರ ಹಲವಾರು ವಾಸ್ತುರಚನೆಗಳ ಅವಶೇಷಗಳು ಹಲಸಿಗೆಯಲ್ಲಿ ಈಗಲೂ ಕಾಣಬರುತ್ತವೆ. ಇಲ್ಲಿನ ಭೂವರಾಹ ದೇವಸ್ಥಾನದಲ್ಲಿರುವ ವರಾಹ ಮೂರ್ತಿ ಅಪೂರ್ವ ಕಾಲಕೃತಿಗಳಲ್ಲಿ ಒಂದು. ಇದೇ ದೇವಸ್ಥಾನದಲ್ಲಿರುವ ನರಸಿಂಹನ ವಿಗ್ರಹವು ಅತೀ ಪುರಾತನವಾದ ಎಂದರೆ ಕ್ರಿ.ಶ. ಪ್ರಾರಂಭಕಾಲದ ನರಸಿಂಹನ ವಿಗ್ರಹವೆಂದು ಡಾ॥ ಅ.ಸುಂದರ ತಿಳಿಸುತ್ತಾರೆ. ಇದಲ್ಲದೆ ಇವರ ಒಂದು ಶಾಸನ, (ಬೈಲಹೊಂಗಲ ತಾಲೂಕಿನ) ಸಂಗೊಳ್ಳಿಯಲ್ಲಿ ದೊರೆತಿದೆ.

ತರುವಾಯದಲ್ಲಿ ಕಂಡುಬರುವ ಗೋವೆಯ ಕದಂಬರಿಗೆ ಖಾನಾಪೂರ ತಾಲೂಕಿನ 'ಗೋಲಿಹಳ್ಳಿ-ಬೀಡಿ'ಕೂಡ ಒಂದು ರಾಜಧಾನಿಯಾಗಿತ್ತು. ಅವರ ಶಾಸನಗಳಲ್ಲಿ ಈ ಊರನ್ನು, ''ಸಂಪಗಾಡಿ'' ಎಂದು ಹೆಸರಿಸಿದೆ. ಈ ವಂಶದ ಶಿವಚಿತ್ತ, ವಿಷ್ಣುಚಿತ್ತ, ಸಹೋದರರು ಕಲ್ಯಾಣ ಚಾಲುಕ್ಯ ಮತ್ತು ಕಲಚೂರಿಗಳ ಅವಸಾನ ಕಾಲದಲ್ಲಿ ತಾವೇ ಚಕ್ರವರ್ತಿಗಳೆಂದು ಕೊಂಡು ಆಳುತ್ತಿದ್ದರು. ದಕ್ಷಿಣ ಕೊಂಕಣ, ಗೋವೆ, ಉತ್ತರ ಕನ್ನಡ ಜಿಲ್ಲೆ, ಬೆಳಗಾಂವಿ ಜಿಲ್ಲೆಯ ಪಶ್ಚಿಮ ಭಾಗ, ಚಂದಗಡ, ಸಾವಂತವಾಡಿ ಪ್ರದೇಶಗಳು ಇವರ ಅಧೀನದಲ್ಲಿದ್ದವು. ''ಪಶ್ಚಿಮಾಬ್ಧಿಪ, ಅಪರಾಬ್ಧಿಪ, ಕಾದಂಬ ಚಕ್ರೇಶ್ವರ ಇತ್ಯಾದಿ ಬಿರುದುಗಳು ಈ ಕದಂಬರ ಆಧಿಕ್ಯವನ್ನು ಸೂಚಿಸುತ್ತವೆ. ೧೨ನೆಯ ಶತಮಾನದಲ್ಲಿದ್ದ ಗಣಿತಜ್ಞ 'ರಾಜಾದಿತ್ಯ' ಕುಂತನಾಬಾಗೆ (ರಾಯಬಾಗ)ಯವನಾದರೂ ಆತ ರಾಜಾಶ್ರಯ ಪಡೆದದ್ದು ಈ ಕದಂಬ ದೊರೆಗಳಲ್ಲಿ. ಈತ ಹೊಯ್ಸಳರ ಆಸ್ಥಾನದಲ್ಲಿದ್ದನೆಂದು ಹೇಳಿದುದು ಶುದ್ಧ ತಪ್ಪು

ಕದಂಬರ ತರುವಾಯ ಬಾದಾಮಿ ಚಾಲುಕ್ಯರು ಹಲವು ಶಾಸನಗಳಲ್ಲಿ ಕಂಡು ಬರುತ್ತಾರೆ. ಒಂದನೆಯ ಕೀರ್ತಿವರ್ಮನ (?) ಗೊಡಚಿಯ ತಾಮ್ರಪಟ, ಮಂಗಲೇಶನ ಹೂಲಿಯ ತಾಮ್ರಪಟ, ಇಮ್ಮಡಿ ಪುಲಕೇಶಿಯ ಎಕ್ಕೇರಿ ಬಂಡೆಗಲ್ಲು ಶಾಸನ ಮೊದಲಾದ ಲಿಪಿಗಳು ಪ್ರಸಿದ್ಧವಾಗಿವೆ. ಕ್ರಿ.ಶ.ಸು.೯ನೆಯ ಶತಮಾನದಲ್ಲಿ 'ಪರಹಿತ' ಎಂಬ ಚಾಲುಕ್ಯ ರಾಜನೊಬ್ಬ ಇದ್ದನೆಂದು ಸವದತ್ತಿ ತಾಲೂಕಿನ 'ಕೋಟೂರ' ಶಾಸನ ತಿಳಿಸುತ್ತದೆ. ತರುವಾಯದ ಕಲ್ಯಾಣ ಚಾಲುಕ್ಯರು ಹೊರಡಿಸಿರುವ ಹಲವಾರು ಶಾಸನಗಳು 'ರಾಮತೀರ್ಥ' ಕೊಕಟನೂರು, ಸತ್ತಿ, ಬೆಡಕಿಹಾಳ (ಇಜಿವಬೆಡಂಗ) ಎಕ್ಸಂಬಿ, ರಾಯಬಾಗ, ಮುಗುಟಖಾನ ಹುಬ್ಬಳ್ಳಿ, ಮುನವಳ್ಳಿ, ತುರಮರಿ, ಕಲಭಾವಿ, ದೇಗಾವಿ ಮೊದಲಾದ ಊರುಗಳಲ್ಲಿ ಕಂಡುಬರುತ್ತವೆ. ಕ್ರಿ.ಶ.೧೦೪೭ರ ಅರಸೀಬೀಡಿ ಶಾಸನ (E.I.,XVII, P-21) ಚಾಲುಕ್ಯರಾಣಿ ಅಕ್ಕಾದೇವಿ ಗೋಕಾಕ ಕೋಟೆಯಲ್ಲಿ ಕೆಲಕಾಲ ತಂಗಿದ್ದಳೆಂದು ತಿಳಿಸುತ್ತದೆ.

ಚಾಲುಕ್ಯರಂತೆ ರಾಷ್ಟ್ರಕೂಟರೂ ಕೂಡ ಬೆಳಗಾವಿ ಪ್ರದೇಶದಲ್ಲಿ ಬಹು ಹಿಂದಿನಿಂದ ನೆಲೆಯೂರಿದ್ದರೆಂದು ರಾಷ್ಟ್ರಕೂಟರ 'ಜೆಜ್ಜ' ಮಹಾರಾಜನ ಗೋಕಾಕ ಶಾಸನ ಹೇಳುತ್ತದೆ. ಆದಿ ರಾಷ್ಟ್ರಕೂಟರನ್ನು ಉಲ್ಲೇಖಿಸುವ ತಿವರಖೇಡದ 'ನನ್ನ' ರಾಜನ ಶಾಸನ, 'ಊಂಡಿಕವಾಟಿಕೆಯ' ಅಭಿಮನ್ಯುವಿನ ಶಾಸನ, 'ಪಾಂಡುರಂಗ ಪಳ್ಳಿ'ಯ ಅವಿಧೇಯನ ಶಾಸನ. ಈ ಮೂರು ಪ್ರಾಚೀನ ಶಾಸನಗಳಂತೆ ಗೋಕಾಕ ಶಾಸನವೂ ಕೂಡ ಬಹುಮಹತ್ವದ ದಾಖಲೆಯಾಗಿದೆ. ಈ ಶಾಸನ ತಿಳಿಸುವ ಇನ್ನುಳಿದ ವಿವರಗಳು ಕೂಡ ಆಶ್ಚರ್ಯಕರವಾಗಿದೆ. ಮಹಾವೀರ ತೀರ್ಥಂಕರನ (ಜೈನ ಧರ್ಮದ) ಆಗುಪ್ತಾಯಿಕ ರಾಜರ ೮೪೫ನೆಯ ವರ್ಷದಲ್ಲಿ ಪ್ರಸ್ತುತ ಶಾಸನ ಸೃಷ್ಟಿಯಾಗಿದೆ. ಈ ರಾಜ ವಂಶದ ಹೆಸರು ಬೇರೆ ಯಾವ ಶಾಸನಗಳಲ್ಲಿಯೂ ಕಂಡುಬರುವುದಿಲ್ಲ. ಅದೇ ರೀತಿ ಆರ್ಯನಂದಿ ಎಂಬ ಜೈನಾಚಾರ್ಯ ಜಂಬೂಖಂಡ ಗಣದವನೆಂದು ಹೇಳಿದೆ. ಇಲ್ಲಿ ಬಂದಿರುವ ಜಂಬೂಖಂಡ ಎಂಬ ಗಣದ ಜೈನ ಪಂಗಡಕೂಡ ಅಪರೂಪದ್ದು. ಆರ್ಯನಂದಿಗೆ 'ಕಷ್ಮಾಂಡಿ' ವಿಷಯದ 'ಜಳಾರ'ಗ್ರಾಮವನ್ನು ದತ್ತಿಬಿಡಲಾಯಿತಂತೆ. ಇಲ್ಲಿರುವ 'ಕಷ್ಮಾಂಡಿ' ಎಂಬ ಹೆಸರು ಬಹುಶ: ಕೂಷ್ಮಾಂಡಿ ಎಂಬುದರ ತಪ್ಪು ಪ್ರಯೋಗವಿರಬೇಕು. ಕುಹುಂಡಿ ನಾಡಿನ ಪ್ರಾಚೀನ ರೂಪವೇ ಕುಷ್ಮಾಂಡಿ ವಿಷಯವಾಗಿರಬೇಕು.

ಕಲ್ಯಾಣ ಚಾಲುಕ್ಯ ಒಂದನೆಯ ಸೋಮೇಶ್ವರನ ಕಾಲದ ಕಲಭಾವಿ ಮತ್ತು ತುರಮುರಿಯ ಶಾಸನಗಳು ರಾಷ್ಟ್ರಕೂಟ ದೊರೆಗಳ ಹೆಸರು ಹೇಳುತ್ತವೆ. ತುರಮರಿಯ ಶಾಸನದಲ್ಲಿ ರಾಷ್ಟ್ರಕೂಟ ಸಾಮಂತ ದೊರೆ, ಭೀಮದೇವನೆಂಬವನ

ರಾಣಿಯ ಹೆಸರನ್ನು ಹೇಳಿದೆ. ಈ ಭೀಮನರಾಣಿ 'ದೇಯಿಬ್ಬೆ' ಎಂಬವಳು ಪಟ್ಟಕುರುಗುಂದದ ಕೆರೆಯೊಂದಕ್ಕೆ ಕೆಲವು ದತ್ತಿಗಳನ್ನು ಬಿಟ್ಟಿದ್ದಾಳೆ. ಡಾ||ಫ್ಲೀಟರು ಈ ಭೀಮದೇವನ ಹೆಸರು ಬಿಜಾಪೂರ ಜಿಲ್ಲೆಯ ಬನಶಂಕರಿ ಕ್ಷೇತ್ರದ ಶಾಸನ ಮತ್ತು ಧಾರವಾಡ ಜಿಲ್ಲೆಯ ಕನ್ನೇಶ್ವರ, ಶಾಸನಗಳಲ್ಲಿ ಬಂದಿರುವುದನ್ನೂ ಸೂಚಿಸುತ್ತಾರೆ. ಇದೀಗ ಕನ್ನೇಶ್ವರ ಶಾಸನದ ಪೂರ್ಣ ಪಾಠ ಲಭ್ಯವಾಗಿದ್ದು ಅದರಲ್ಲಿ ಭೀಮ ದೇವನು ಚಾಲುಕ್ಯ ಆಹವಮಲ್ಲ ತೈಲಪನ ನಿಷ್ಠ ಅನುಯಾಯಿಯಾಗಿದ್ದನೆಂದು ಹೇಳಿದೆ. ತುರುಮರಿಯ ಶಾಸನ ಕ್ರಿ.ಶ. ೧೦೫೧ನೆಯ ವರ್ಷದ್ದಾಗಿದೆ. ಶಾಸನದಲ್ಲಿ ಭೀಮದೇವನ ರಾಣಿ 'ದೇಯಿಬ್ಬೆ'ಯ ಹೆಸರು ಬಂದಿರುವುದರಿಂದ ಆ ಅವಧಿಯಲ್ಲಿ ಭೀಮದೇವ ಜೀವಿಸಿರಲಿಲ್ಲವೆಂದು ಹೇಳಬಹುದು. ದೇಯಿಬ್ಬೆ, ಮತ್ತು ಅವಳ ಮನೆತನ ಮಲಪ್ರಭಾ ನದಿಯ ಪರಿಸರದ್ದೆಂದು ಪ್ರಸ್ತುತ ತುರುಮುರಿ ಶಾಸನದಿಂದ ಊಹಿಸಬಹುದು. ಭೀಮದೇವ ಅಳುತ್ತಿದ್ದುದು ಮಾತ್ರ ಬನವಾಸಿ 'ಸಾಂತಳಿಗೆನಾಡು' ನಾಗರಖಂಡ ೭೦ ಮತ್ತು ಕಿಸುಕಾಡು-೭೦ ಪ್ರದೇಶ.

ಸೌದತ್ತಿ ರಟ್ಟರ ವಂಶಾವಳಿಯಲ್ಲಿ ಈ 'ಭೀಮದೇವ'ನ ಹೆಸರಾಗಲೀ 'ದೇಯಿಬ್ಬೆ'ಯ ಹೆಸರಾಗಲೀ ಎಲ್ಲಿಯೂ ಕಂಡುಬರುವುದಿಲ್ಲ. ಆದ್ದರಿಂದ ಗೋಕಾಕಿನ ದೆಜ್ಜ ಮಹಾರಾಜನ ಮನೆತನ, ಸವದತ್ತಿಯ ಮನೆತನ ಮತ್ತು ಈ ಭೀಮದೇವನ ಮನೆತನಗಳು ಬೇರೆ ಬೇರೆಯಾಗಿವೆಯೆಂದು ಸ್ಪಷ್ಟವಾಗಿದೆ. ಸವದತ್ತಿಯಲ್ಲಿಯೇ ದೊರೆಯುವ ಕ್ರಿ.ಶ.೮೭೬ರ ರಾಷ್ಟ್ರಕೂಟ ದೊರೆ ಕನ್ನರ ಅಥವಾ ಇಮ್ಮಡಿ ಕೃಷ್ಣನ ಶಾಸನದಿಂದ ಚಕ್ರವರ್ತಿಗಳಾದ ರಾಷ್ಟ್ರಕೂಟರ ಆಡಳಿತ ಇಲ್ಲಿಯೂ ಪಸರಿಸಿದ್ದುದನ್ನು ಖಚಿತಪಡಿಸಿದಂತಾಗಿದೆ. ಸವದತ್ತಿಯ ರಟ್ಟರು ತಮ್ಮ ಮೂಲ ಪುರುಷನೆಂದು ಹೇಳಿಕೊಳ್ಳುವ ರಾಷ್ಟ್ರಕೂಟರ 'ಕೃಷ್ಣಕನ್ನರ'ನು ಪ್ರಸ್ತುತ ಶಾಸನದ ಕನ್ನರ ಆಗಿರಬಹುದೆ?

ಇನ್ನು ತೀರ ಇತ್ತೀಚೆಗೆ ಎಂದರೆ ಬೆಳವಡಿಯ ಮಲ್ಲಮ್ಮನ ಮನೆತನ ರಾಷ್ಟ್ರಕೂಟರ ಶಾಖೆಯೇ ಎಂದು ಬೈಲಹೊಂಗಲ ತಾಲೂಕಿನಲ್ಲಿ ಪ್ರಬಲವಾದ ವದಂತಿಯಿದೆ. ಎಂದರೆ ಬೆಳಗಾವಿ ಜಿಲ್ಲೆಯಲ್ಲಿ ಕ್ರಿ.ಶ.ಸು.೫-೬ನೆಯ ಶತಮಾನಗಳಿಂದ-೧೯ನೆ, ಶತಮಾನದವರೆಗೂ ರಾಷ್ಟ್ರಕೂಟರ ಮೂರು-ನಾಲ್ಕು ಮನೆತನಗಳು ಅಸ್ತಿತ್ವದಲ್ಲಿದ್ದುದು ಕಂಡುಬರುತ್ತದೆ. ಇದರಿಂದ ರಾಷ್ಟ್ರಕೂಟರ ಮೂಲನೆ ಲಾತೂರು-ಕಾಂಧಾರಗಳೇ? ಅಥವಾ ಗೋಕಾಕ ಬೈಲಹೊಂಗಲ ಪ್ರದೇಶಗಳೆ? ಎಂಬ ಪ್ರಶ್ನೆ ಉದ್ಭವಿಸುತ್ತದೆ

ಕ್ರಿ.ಶ.೧೦೫೨ನೆಯ ವರ್ಷದ ತುರಮುರಿಯ ಶಾಸನ ಮತ್ತು ಸುಮಾರು ಅದೇ ಕಾಲದ ಕಲಭಾವಿಯ ಶಾಸನಗಳಲ್ಲಿ ಕಂಚರಸನೆಂಬ ಗಂಗದೊರೆಯ ಹೆಸರು ಕಂಡುಬರುತ್ತದೆ ಕಲಭಾವಿ ಶಾಸನ ಗಂಗರ ಪ್ರಾಚೀನ ದೊರೆ ಸೈಗೊಟ್ಟ ಶಿವಮಾರನ ಹೆಸರು ಹೇಳುವುದಾದರೂ ಶಿವಮಾರನ ಜತೆಗೆ ಹೇಳಿಕೊಳ್ಳುವಂಥ ಸಂಬಂಧ ಯಾವುದೂ ಬೆಳಗಾವಿ ಪ್ರದೇಶಕ್ಕಿಲ್ಲ. ಚೋಳರು ತಲಕಾಡನ್ನು ಸುಟ್ಟು ಸೂರೆಗೊಂಡಾಗ ಕಲ್ಯಾಣದ ಚಾಲುಕ್ಯರು ಗಂಗದೊರೆ ಕಂಚರಸನನ್ನು ಬೆಳಗಾವಿ ಪ್ರದೇಶಕ್ಕೆ ಕರೆತಂದು ನೆಲೆಗೊಳಿಸಿದರೆಂದು ಹೇಳಬಹುದು.

ಪ್ರಾಚೀನ ಕಾಲದ ಈ ಮುಖ್ಯ ರಾಜಮನೆತನಗಳಲ್ಲದೆ ಬೆಳಗಾವಿ ಜಿಲ್ಲೆಯ ಪಶ್ಚಿಮಭಾಗದಲ್ಲಿ ಭೋಜರು ಎಂಬ ಚಿಕ್ಕ ರಾಜಮನೆತನದವರು ಆಳುತ್ತಿದ್ದ ಬಗ್ಗೆ ಇತ್ತೀಚೆಗೆ ಬೆಳಕಿಗೆ ಬಂದ ತಾಮ್ರಪಟವೊಂದರಿಂದ ಉಹಿಸಬಹುದಾಗಿದೆ. ಖಾನಾಪೂರ ತಾಲೂಕಿನ ಕಾಪೋಲಿ ಗ್ರಾಮದಲ್ಲಿ ದೊರೆತ ಕ್ರಿ.ಶ.ಸು. ೭ನೆಯ ಶತಮಾನದ ತಾಮ್ರಪಟದಲ್ಲಿ ಭೋಜದೊರೆ ಅಸಂಕಿತವರ್ಮನ ಅಧಿಕಾರಿಗಳು ಹಲಸಿಗೆ ನಾಡಿನ ಸೊಲ್ಲೊಂದೂರು-೭೦ರಲ್ಲಿದ್ದ ಗ್ರಾಮವೊಂದನ್ನು ಪುನರ್‌ದತ್ತಿಬಿಟ್ಟರೆಂದು ತಿಳಿಸುತ್ತದೆ. ಆ ಗ್ರಾಮ ಎಲಾಕೆಲ್ಲ ಎಂಬ ಕೈಕೇಯ ದೊರೆಯಿಂದ ಆ ಮೊದಲೇ ದತ್ತಿಯಾಗಿ ನೀಡಲ್ಪಟ್ಟದ್ದೆಂದು ಅದೇ ಶಾಸನದಲ್ಲಿ ಹೇಳಿದೆ. ಇದರಿಂದ ಬನವಾಸಿಯ ಕದಂಬರು ಅಧಿಕಾರ ಕಳೆದುಕೊಂಡು ಬಾದಾಮಿ ಚಾಲುಕ್ಯರು ಇನ್ನು ತಮ್ಮ ಆಡಳಿತವನ್ನು ಬೆಳಗಾವಿ ಉತ್ತರ ಕನ್ನಡ ಪ್ರದೇಶಗಳಲ್ಲಿ ಭದ್ರಗೊಳಿಸದಿದ್ದ ಮಧ್ಯಂತರ ಕಾಲದಲ್ಲಿ ಕೈಕೇಯ ಮತ್ತು ಭೋಜರು ಈ ಪ್ರದೇಶದಲ್ಲಿ ತಮ್ಮ ಸ್ವತಂತ್ರ ರಾಜ್ಯ ಸ್ಥಾಪಿಸುವ ಪ್ರಯತ್ನ ಮಾಡಿದರೆಂದು ಹೇಳಬಹುದು.

ಈ ರೀತಿ ಹನ್ನೆರಡನೆಯ ಶತಮಾನದವರೆಗೆ ಬೆಳಗಾವಿ ಪ್ರದೇಶದ ರಾಜಕೀಯ ನಕ್ಷೆಯಲ್ಲಿ ಹಲವಾರು ರಾಜಮನೆತನಗಳು ತಮ್ಮ ಹೆಸರು ನೋಂದಾಯಿಸಿವೆ. ಇವರಂತೆ ಸೌದತ್ತಿಯ ರಟ್ಟರು, ಸಿರಸಂಗಿಯ ಬೈಸರು ದೇವಗಿರಿಯ ಯಾದವರು, ವಿಜಯನಗರದವರು, ದಿಲ್ಲಿ,

ಜಾಪುರಗಳ ಸುಲ್ತಾನರು, ಮರಾಠರು ಹಾಗೂ ಇಂಗ್ಲಿಷರು ಮ್ಮ ಆಡಳಿತ ನಡೆಸಿದ್ದಾರೆ. ತರುವಾಯದ ಈ ಅವಧಿಯ ಹೆಚ್ಚಿನ ವಿವರಗಳನ್ನು ಸ್ಟೋಕ್ಸ ಎಂಬ ಆಂಗ್ಲ ಲೇಖಕನು ಬರೆದ ಪುಸ್ತಿಕೆಯಲ್ಲಿ ನೋಡಿಕೊಳ್ಳಬಹುದು.

## ಆಧಾರ ಸಾಹಿತ್ಯ


1. Indian Antquary-Volumes
2. Epigraphia Indica-Volumes
3. Dynasties of Canarese Districts-Fleet.
4. Progress Reports of K.R.I. Dharwad.
5. A Historical Account of Belgaum District-Stokes.
6. ಕರ್ನಾಟಕದ ಅರಸುಮನೆತನಗಳು-ಆರ್.ಎಸ್.ಪಂಚಮುಖಿ ಮತ್ತು ನೆಲಮಂಗಲ ಲಕ್ಷ್ಮೀನಾರಾಯಣರಾಯರು.
7. Mysore Archaeological Reports.

ಎಸ್.ಎಸ್. ಪಾಟೀಲ *

# ನಾಗನೂರ ರುದ್ರಾಕ್ಷಿ ಮಠದ ಇತಿಹಾಸ ಹಾಗೂ ಪರಂಪರೆ

ನಾಗನೂರು ಬೆಳಗಾವಿ ಜಿಲ್ಲೆಯ ಬೈಲಹೊಂಗಲ ತಾಲೂಕಿನ ಒಂದು ಹಳ್ಳಿ, ಬೈಲಹೊಂಗಲದ ಪಶ್ಚಿಮಕ್ಕೆ ೮ ಕಿ.ಮೀ. ಅಂತರದಲ್ಲಿದೆ. ಕಿತ್ತೂರಿನ ವೀರಶ್ರೀ ಚನ್ನಮ್ಮ ಬ್ರಿಟೀಷರ ವಿರುದ್ಧ ನಡೆಸಿದ ಹೋರಾಟ ಪ್ರಸಿದ್ಧ ನಾಗನೂರು ಕೂಡಾ ಈ ದಿಶೆಯಲ್ಲಿ ತನ್ನ ವೀರಶ್ರೀಯನ್ನು ಮೆರೆದಿದೆ. ನಾಗನೂರಿನ ಶ್ರೀ ಮತಿ ನಾಗಮ್ಮಾ ರಾಚನಾಯ್ಕರ ಎಂಬ ಮಹಿಳೆ ೨೦ನೆಯ ಶತಮಾನದ ಸ್ವಾತಂತ್ಯ ಚಳುವಳಿಯ ಕಾಲದಲ್ಲಿ ಗಾಂಧೀಜಿಯ ಭಾವಚಿತ್ರಕ್ಕೆ ಅವಮಾನಮಾಡಿದ ವೆಲ್ಸ್ ಎಂಬ ಆಂಗ್ಲ ಅಧಿಕಾರಿಗೆ ತಟ್ಲೆ(ಚಪ್ಪಲಿ)ಯಿಂದ ಕಪಾಳ ಮೋಕ್ಷ ಮಾಡಿದ್ದಳು.

ಇಂಥ ಇತಿಹಾಸ ಸೃಷ್ಟಿಸಿದ ನಾಗನೂರಿನಲ್ಲಿ ರುದ್ರಾಕ್ಷಿ ಮಠವು ತನ್ನ ಇತಿಹಾಸ ನಿರ್ಮಿಸಿದ್ದು ಸುಮಾರು ಕ್ರಿ.ಶ. ೧೮೨೦ರಲ್ಲಿ ಎಂದು ಡಾ॥ ಆರ್.ಸಿ.ಹಿರೇಮಠರು ಸಂಪಾದಿಸಿದ ಶಿವದೀಪ್ತಿ ಹಾಗೂ ಸ್ಮೃತಿಗ್ರಂಥ ಶಿವ ಪ್ರಸಾದದಿಂದ ತಿಳಿದು ಬರುತ್ತದೆ. ಈ ಊರಲ್ಲಿ ಏಳು ಮಠಗಳಿವೆ. ಅವುಗಳಲ್ಲಿ (ಶ್ರೀ ರುದ್ರಾಕ್ಷಿ ಮಠವೂ ಒಂದು. ಈ ಮಠದಲ್ಲಿ ರುದ್ರಾಕ್ಷಿಯಿಂದ ಮಾಡಿದ ಕಿರೀಟವೊಂದಿದೆ. ಪ್ರತಿ ವರ್ಷ ಶ್ರಾವಣ ಮಾಸದಲ್ಲಿ ನಡೆಯುವ ಉತ್ಸವದಲ್ಲಿ ಪಾದಪೂಜೆಗೆ ಬಂದ ಶ್ರೀಗಳು ಇದನ್ನು ಶಿರೋಭೂಷಣದಂತೆ ಧರಿಸಿ ತೆಗೆಯುವ ಸಂಪ್ರದಾಯ. ಈ ಕಾರಣಕ್ಕಾಗಿಯೇ ಇದಕ್ಕೆ ರುದ್ರಾಕ್ಷಿ ಮಠವೆಂದು ಹೆಸರು ಬಂದಿರಬಹುದು.

ಕಿತ್ತೂರ ದೊರೆ ಶಿವಲಿಂಗ ರುದ್ರಸರ್ಜರು ಒಮ್ಮೆ ಸ್ವಾಮಿ ಸಮೂಹದ ಅಚಲ ಬ್ರಹ್ಮಚರ್ಯ ಪರೀಕ್ಷೆಯನ್ನು ರೂಪವತಿ ಸ್ತ್ರೀಯರ ಮುಖೇನ ಏರ್ಪಡಿಸಿದರಂತೆ. ಆ ಪರೀಕ್ಷೆಲ್ಲಿ ಕೇವಲ ಮೂವರು ಸ್ವಾಮಿಗಳನ್ನುಳಿದು ಎಲ್ಲರೂ ಸ್ಖಲಿತ ವೀರ್ಯರಾಗಿದ್ದರಂತೆ. ಆ ಮೂವರಾರೆಂದರೆ ಗರಗದ ಶ್ರೀ ಮಡಿವಾಳ ಸ್ವಾಮಿಗಳು ಹಾಗೂ ಶ್ರೀ ಅಲ್ಲಮಪ್ರಭು ಮತ್ತು ಶ್ರೀ ಸಿದ್ಧರಾಮ ಸ್ವಾಮಿಗಳು. ಸ್ವತಃ ಶ್ರೀ ಮಡಿವಾಳ ಮಹಾಸ್ವಾಮಿಗಳೇ ಶ್ರೀಅಲ್ಲಮಪ್ರಭು, ಶ್ರೀಸಿದ್ಧರಾಮ ಸ್ವಾಮಿಗಳು ಸುಸ್ಥಿರ ಬ್ರಹ್ಮಚರ್ಯನಿಷ್ಠೆಯನ್ನು, ಅವಿಚಲ ಮನಸ್ಸನ್ನು ಮನಸಾರೆ ಕೊಂಡಾಡಿದ್ದಾರೆ. ಶ್ರೀ ಅಲ್ಲಮ ಪ್ರಭು ಸ್ವಾಮಿಗಳು ಹಾಗೂ ಶ್ರೀ ಸಿದ್ಧರಾಮ ಶ್ರೀ ಗಳೀರ್ವರು ಮೂಲತಃ ಬಿಜಾಪುರ ಜಿಲ್ಲೆಯವರು. ಕಿತ್ತೂರಿನಿಂದ ಉಭಯ ಶ್ರೀಗಳು ನಾಗನೂರಿಗೆ ದಯಮಾಡಿಸಿದರು.

ನಾಗನೂರ ಭಕ್ತಾದಿಗಳ ಪ್ರಾರ್ಥನೆಯನ್ನು ಮನ್ನಿಸಿ ಉಭಯ ಶ್ರೀಗಳು ಊರ ಹೊರಗಿನ ಚೌಕಿಯಲ್ಲಿ ಚಿಕ್ಕದಾದ ಪರ್ಣಕುಟೀರವನ್ನು ನಿರ್ಮಿಸಿಕೊಂಡು ಅಲ್ಲಿಯೇ ಇರಹತ್ತಿದರು. ಊರ ಭಕ್ತಾದಿಗಳು ಊರೊಳಗೊಂದು ಮಠವನ್ನು ಕಟ್ಟಿಸಿ ಶ್ರೀಗಳೀರ್ವರಿಗೆ ವಸತಿ ಸೌಕರ್ಯ ಒದಗಿಸಿಕೊಟ್ಟರು.

ರುದ್ರಾಕ್ಷಿ ಮಠದ ಸ್ಥಾಪಕರಾದ ಶ್ರೀ ಅಲ್ಲಮಪ್ರಭು ಹಾಗೂ ಶ್ರೀ ಸಿದ್ಧರಾಮೇಶ್ವರ ಶ್ರೀಗಳೀರ್ವರೂ ಉಗ್ರ ತಪಸ್ವಿಗಳು ಉಜ್ವಲ ತೇಜಸ್ವಿಗಳೂ ಆಗಿದ್ದರು. ಉಭಯ ಶ್ರೀಗಳು ಶಿವಾಧೀನರಾದ ಮೇಲೆ ಅವರ ಚಿರಂತನ ಸಮಾಧಿಯನ್ನು ರುದ್ರಾಕ್ಷಿ ಮಠದ ಉತ್ತರ ದಿಕ್ಕಿನಲ್ಲಿ ಚೌಕಿ ಮಠದಲ್ಲಿ ಮಾಡಲಾಗಿದೆ. ಈ ಚೌಕಿ ಮಠದ ಸುತ್ತಲೂ

* ಮುಖ್ಯಾಧ್ಯಾಪಕರು, ಶ್ರೀ ಸಿದ್ಧರಾಮೇಶ್ವರ ಪೂರ್ಣಪ್ರಾಥಮಿಕ ಪಾಠಶಾಲೆ, ಶಿವಬಸವನಗರ, ಬೆಳಗಾವಿ-೧೦

ಚ್ಚಹಸುರಿನ ಮಾವಿನ ತೋಪು ಇದೆ. ಪ್ರಶಾಂತವಾದ ಯೋಗ್ಯವಾದ ಅಂತರ್ಮುಖತೆಯ ಮೌನ ಮಾಧಿಗಿಳಿಯುವಂಥ ಏಕಾಂತ ಸ್ಥಳವಾಗಿದೆ. ಸಮೀಪ ಲ್ಲಿಯೇ ತಿಳಿನೀರಿನ ಝುರಿ ಎಡ-ಬಲದಲ್ಲಿ ಎತ್ತರವಾಗಿ ಳೆದ ತೆಂಗುಗಳು, ಬಿಲ್ವ ವೃಕ್ಷಗಳು ರಾರಾಜಿಸುತ್ತಿವೆ.

ಶ್ರೀ ಅಲ್ಲಮ ಪ್ರಭು ಮತ್ತು ಶ್ರೀ ಸಿದ್ಧರಾಮೇಶ್ವರರಿಂದ ರ್ಮಿತವಾದ ರುದ್ರಾಕ್ಷಿ ಮಠದ ಇತಿಹಾಸ ಪರಂಪರೆಯನ್ನು ಈವರೆಗೆ ಅದಕ್ಕೆ ಎಳ್ಳಷ್ಟು ಚ್ಯುತಿ ಬರದಂತೆ ಕಾಪಾಡುತ್ತಾ ಬಂದಿದ್ದಾರೆ. ತದನಂತರದಲ್ಲಿ ಮೂರನೆಯವರಾಗಿ ಶ್ರೀ ಸಿದ್ಧರಾಮೇಶ್ವರ ಸ್ವಾಮಿಗಳು ಆಗಮಿಸಿದರು. ಇವರ ನಡೆ ನುಡಿ, ಆಚಾರ-ವಿಚಾರಗಳಿಂದ ಪ್ರಭಾವಿತರಾದ ಜನರು ಮಠಕ್ಕೆ ನಡೆದುಕೊಳ್ಳಲು ಪ್ರಾರಂಭಿಸಿದರು. ದಿನದಿನಕ್ಕೆ ಭಕ್ತರ ಗುಂಪು ಸಾಲುಗಳಿಂದ ಹಿಂಡಾಗತೊಡಗಿತು. ಅಂತಹದರಲ್ಲಿ ಶ್ರೀಗಳು ಒಂದು ಪವಾಡವನ್ನು ಮಾಡಿದರು. ತಿಗಡಿಯ ಜಕಾತಿ ಎಂಬುವವರ ಮನೆಯಲ್ಲಿ ಪಿಶಾಚಿಯೊಂದು ಇತ್ತಂತೆ. ಶ್ರೀಸಿದ್ಧರಾಮೇಶ್ವರರು ಅಲ್ಲಿಗೆ ಹೋಗಿ ಶಿವಸ್ತೋತ್ರ, ಪಂಚಾಕ್ಷರಿ ಮಂತ್ರವನ್ನು ಪ್ರಾರಂಭಿಸಿದೊಡನೆ ಆ ಪಿಶಾಚಿ ಇವರ ಪಾದಕ್ಕೆರಗಿ ಅಲ್ಲಿಂದ ಹೋಗಿಯೇ ಬಿಟ್ಟಿತಂತೆ. ಇದರಿಂದ ಭಕ್ತರು ಇವರ ಮೇಲೆ ಅಪಾರ ಶ್ರದ್ಧೆಯನ್ನು ಇಟ್ಟು ಭಯಭಕ್ತಿ ವಿಶ್ವಾಸಗಳಿಂದ ನಡೆದು ಕೊಳ್ಳು ವದಷ್ಟೇಯಲ್ಲ ಹೊಲದಲ್ಲಿ ಬೆಳೆದ ಮೊದಲ ಬೆಳೆಯ ಕೆಲ ಭಾಗವನ್ನು ಎಡೆಯ (ನೈವೇದ್ಯ) ರೂಪದಲ್ಲಿ ಮಠಕ್ಕೆ ಮುಟ್ಟಿಸತೊಡಗಿದರು. ಈ ಪರಂಪರೆ ಇಂದಿಗೂ ನಡೆದುಕೊಂಡು ಬಂದಿದೆ.

ನಾಲ್ಕನೆಯವರಾಗಿ ಶ್ರೀ ಗುರುಸಿದ್ಧ ಸ್ವಾಮಿಗಳು, ಐದನೆಯವರಾಗಿ ಶ್ರೀಗುರುಲಿಂಗಸ್ವಾಮಿಗಳು, ಆರನೆಯವರಾಗಿ ಶ್ರೀ ವೀರಭದ್ರ ಸ್ವಾಮಿಗಳು ಈ ರುದ್ರಾಕ್ಷಿ ಮಠಕ್ಕೆ ಉತ್ತರಾಧಿಕಾರಿಗಳಾಗಿ ಬಂದರು. ಇವರುಗಳು ಮೂಲ ಪುರುಷರು ಹಾಕಿಕೊಟ್ಟ ಧರ್ಮ ಮಾರ್ಗದಲ್ಲಿ ನಡೆದು ಮಠದ ಘನತೆಯನ್ನು ಹೆಚ್ಚಿಸಿದ್ದಾರೆ. ಇವರ ನಂತರ ಏಳನೆಯವರಾಗಿ ಕಳೆದ ವರ್ಷ ದಿನಾಂಕ ೯-೯-೧೯೪೪ರಂದು ಶಿವಾಧೀನರಾದ ಶತಾಯುಷಿ, ಕಾಯಕಯೋಗಿ, ಜ್ಞಾನ ದಾಸೋಹಿ ಮಹಾಪ್ರಸಾದಿ, ಡಾ॥ಶ್ರೀ.ಮ.ಪ್ರ.ಸ್ವ.ಶಿವಬಸವಶ್ರೀಗಳು ಮಠದ ಹೊಣೆಯನ್ನು ಹೊತ್ತುಕೊಂಡರು.

ಅನಿಮಿಷನಿಂದ ಅಲ್ಲಮನಿಗೆ ಆತ್ಮಲಿಂಗ ಹೇಗೆ ದೊರೆಯಿತೋ ಹಾಗೆ ಹಾನಗಲ್ಲ ಕುಮಾರ ಶ್ರೀಗಳ ಉಪದೇಶ ಶಿವಬಸವ ಶ್ರೀಗಳಿಗೆ ಆದಂದಿನಿಂದ "ಹಸಿದ ಹೊಟ್ಟೆಗೆ ನಿನ್ನ ವೇದಾಂತ ಬೇಡ, ಉಪದೇಶ ಬೇಡ, ಮೊದಲು ಅನ್ನ ನೀಡು" ಎನ್ನುವ ಜಗತ್ತಿಗೆ ಸ್ವಾಮಿ ಎಂದೆನಿಸಿದ ಸ್ವಾಮಿ ವಿವೇಕಾನಂದರ ಕಠೋರಸತ್ಯ ಘರ್ಜನೆ ಶ್ರೀಗಳ ಕರ್ಣರಂಧ್ರಗಳಲ್ಲಿ ಗುಡುಗಿತು. ಹೃದಯ ಮಿಡಿಯಿತು. "ಅನ್ನದ ಅಭಾವದಿಂದ ಕಣ್ಣು ಮುಚ್ಚಿ ಮಣ್ಣುಗೂಡುವ ಅಸಂಖ್ಯಾತ ಬಡಜನತೆಗೆ ಅರಿವು ನೀಡಬೇಕೆನ್ನುವವನು ಮೊದಲು ಅನ್ನಕೊಡು," ಅನ್ನದೇವರ ಮುಂದೆ ಇನ್ನು ದೇವರುಂಟೆ? ಆಹಾರಸಿಗದೆ ಕೊರಗಿ ಅರಿವಿನ ಲೋಕವನ್ನೇ ಕಾಣದೆ ಕತ್ತಲೆಯಲ್ಲಿ ತೆವಳಿ ತಡವರಿಸಿ ಸತ್ತು ಹೋಗುತ್ತಿರುವ ಬಡ ವಿದ್ಯಾರ್ಥಿಗಳಿಗೆ ಅನ್ನದ ವ್ಯವಸ್ಥೆ ಮಾಡಬೇಕು, ಅಂದರೆ ಜ್ಞಾನದ ವ್ಯವಸ್ಥೆ ತಂತಾನೆ ಆಗುವದೆಂದು ಬಗೆದರು.

ಅದಾಗಿ ಆ ಕಾಲದಲ್ಲಿ ಶಿಕ್ಷಣ ಸಂಸ್ಥೆಗಳು ಈಗಿನಂತೆ ಸ್ಥಾಪಿತಗೊಂಡಿರಲಿಲ್ಲ. ಹೀಗಾಗಿ ಹಳ್ಳಿಯ ಹಾಗೂ ಬಡಮಕ್ಕಳು ಶಿಕ್ಷಣದಿಂದ ವಂಚಿತರಾಗಿದ್ದರು. ಸಮಾಜ ಮುಂದುವರಿಯಬೇಕಾದರೆ ನಿರಕ್ಷರತೆಯನ್ನು ಅಳಿಸಿಬೇಕು, ಎಂದು ಆ ದಿಶೆಯಲ್ಲಿ ಶ್ರೀಗಳು ಕಂಕಣಬದ್ಧರಾದರು. ಈ ಕೆಲಸ ನಾಗನೂರಿನಲ್ಲಿದ್ದುಕೊಂಡು ಮಾಡಲು ಸಾಧ್ಯವಿಲ್ಲವೆಂದು ಬಗೆದು ಬೆಳಗಾವಿಗೆ ದಯಮಾಡಿಸಿದರು. ೧೯೩೨ ರಲ್ಲಿ ಜೂನ ೭ನೇ ತಾರೀಕಿನಂದು ಶಹಾಪೂರದಲ್ಲಿ "ಶ್ರೀಮದ್ ವೀರಶೈವ ಫ್ರೀ ಬೋರ್ಡಿಂಗ" ಎಂಬ ಹೆಸರಿನಿಂದ ಚಿಕ್ಕ ಪ್ರಮಾಣದ ಪ್ರಸಾದ ನಿಲಯವನ್ನು ಸ್ಥಾಪಿಸಿಯೇ ಬಿಟ್ಟರು. ಹೊಟ್ಟೆಗೆ ಅನ್ನ, ಜ್ಞಾನಗಳೆರಡು ಒಂದೆಡೆ ಸಿಗುವಂತಾಯಿತು.

ಅಂದು ಪ್ರಾರಂಭಗೊಂಡ ಪ್ರಸಾದ ನಿಲಯ ಬರಬರುತ್ತ ಚಿಕ್ಕದೆನಿಸತೊಡಗಿತು. ಶ್ರೀಗಳು ಮತ್ತೆ ತಮ್ಮ ಜೋಳಿಗೆ ಹಿಡಿದು ಬೆಳಗಾವಿ ಜಿಲ್ಲೆಯ ಪ್ರತಿಯೊಂದು ಹಳ್ಳಿ, ಪಟ್ಟಣ ಗ್ರಾಮ ಖೇಡಗಳೆನ್ನದೆ ಸಂಚರಿಸಹತ್ತಿದರು. ಇವರ ಪಾದಸ್ಪರ್ಶವಾದ ಹಳ್ಳಿ ಪಾವನ ವಾಯಿತೆಂದು ಭಕ್ತರು ಶ್ರೀಗಳ ಜೋಳಿಗೆ ತುಂಬಿಸತೊಡಗಿದರು. ಹುಬ್ಬಳ್ಳಿಯ ಮೂರುಸಾವಿರ ಮಠದ ಜಗದ್ಗುರುಗಳ ಉದಾರ ಹೃದಯದಿಂದ ಕೊಡುಗೈಗಳಿಂದ ಆಶೀರ್ವದಿಸಿದರು. ಈ ಪರಿಣಾಮವಾಗಿ ೧೯೪೩ರಲ್ಲಿ ಹನುಮನ ಬೀದಿಯಲ್ಲಿರುವ ಭವ್ಯ ಕಟ್ಟಡಕ್ಕೆ ಪ್ರಸಾದ ನಿಲಯವನ್ನು ಸ್ಥಳಾಂತರಿಸಲಾಯಿತು. ದಿನಾಂಕ ೧೦-೯-೧೯೫೧ ರಂದು ಅಂದಿನ ಮೈಸೂರಿನ ಶ್ರೀ

ಜಯಚಾಮರಾಜೇಂದ್ರ ಒಡೆಯರ್ ಪ್ರಸಾದ ನಿಲಯದ ಉದ್ಘಾಟನೆಯನ್ನು ಮಾಡಿದರು.

ಮುಂದೆ ೧೯೬೨ರಲ್ಲಿ ಶೆಟ್ಟಿಬೀದಿಯಲ್ಲಿ ಬಾಡಿಗೆ ಮನೆ ಹಿಡಿದು ಹೆಣ್ಣುಮಕ್ಕಳಿಗಾಗಿ ಪ್ರತ್ಯೇಕ ವಿದ್ಯಾರ್ಥಿನಿಯರ ಪ್ರಸಾದ ನಿಲಯವನ್ನು ಸ್ಥಾಪಿಸಿದರು. ಐವರು ವಿದ್ಯಾರ್ಥಿನಿಯರಿಂದ ಪ್ರಾರಂಭಗೊಂಡ ಆ ಪ್ರಸಾದ ನಿಲಯ ಇಂದು ಭಾರೀ ಸಂಖ್ಯೆಯಲ್ಲಿ ವಿದ್ಯಾರ್ಥಿನಿಯರನ್ನು ಹೊಂದಿದ್ದು ಮನೆ ಚಿಕ್ಕದಾಗತೊಡಗಿ ಹೊಸಕಟ್ಟಡದ ಕಾರ್ಯವನ್ನು ಶ್ರೀ ಮ.ನಿ.ಪ್ರ.ಸಿದ್ಧರಾಮ ಶ್ರೀಗಳು ಕೈಗೆತ್ತಿಕೊಂಡಿದ್ದಾರೆ. ಅದು ಈಗ ಮುಗಿಯುವ ಹಂತದಲ್ಲಿದೆ. ಪ್ರಸಾದ ನಿಲಯ ಹಾಗೂ ಶಾಲೆ ಒಂದೇ ಕಡೆ ಇದ್ದರೆ ಮಕ್ಕಳಿಗೆ ಅತಿ ಅನುಕೂಲವೆಂದು ಬಗೆದು ಊರ ಗಡಿಬಿಡಿಯಿಂದ ದೂರವಿರುವ ಪುಣೆ ಬೆಂಗಳೂರು ಹೆದ್ದಾರಿಯ ಮೇಲೆ ಗುರುಕುಲ ಮಾದರಿಯ(ಶಿಕ್ಷಕ, ವಿದ್ಯಾರ್ಥಿ ಒಂದೆಡೆವಾಸಿಸುವ) ಭವ್ಯವಾದ ಪ್ರಸಾದ ನಿಲಯವನ್ನು ಕಟ್ಟಿಸಿ ದಿನಾಂಕ ೧೯-೨-೧೯೬೯ ರಂದು ಶ್ರೀ ಎಸ್.ನಿಜಲಿಂಗಪ್ಪ ಇವರಿಂದ ಶ್ರೀ ಕುಮಾರೇಶ್ವರ ಪ್ರಸಾದ ನಿಲಯ ಹಾಗೂ ಶ್ರೀ ಸಿದ್ಧರಾಮೇಶ್ವರ ಪ್ರೌಢ ಶಾಲೆಗಳನ್ನು ಉದ್ಘಾಟಿಸಲಾಯಿತು.

ಈ ಪ್ರಸಾದ ನಿಲಯಗಳಲ್ಲಿ ಪ್ರಸಾದ ಸೇವಿಸಿ ವಿದ್ಯೆಗಳಿಸಿದ ಅನೇಕ ಮಹನೀಯರು ದೇಶ ವಿದೇಶಗಳ ತುಂಬ ಹರಡಿಕೊಂಡು ದೊಡ್ಡ ದೊಡ್ಡ ಹುದ್ದೆಗಳನ್ನು ಅಲಂಕರಿಸಿಕೊಂಡಿದ್ದಾರೆ. ಅವರುಗಳಲ್ಲಿ ಕೆಲವರ ಹೆಸರನ್ನು ತಿಳಿಸಲಾಗಿದೆ. ಶ್ರೀ ಗೌರಿಯೆನ್ನುವವರು (ಖಾನಾಪೂರ ತಾಲೂಕಿನವರು) ಸಂಯುಕ್ತ ರಾಷ್ಟ್ರಸಂಘದಲ್ಲಿ ಕಾರ್ಯಮಾಡಿದವರಾಗಿದ್ದಾರೆ. ಶ್ರೀ ಮಹಾಲಿಂಗ ಶೆಟ್ಟಿಯವರು ಅಂತರ ರಾಷ್ಟ್ರೀಯ ಗುತ್ತಿಗೆದಾರರಾಗಿದ್ದಾರೆ. ವಿಭಾಗ ಮಟ್ಟದ ಅಧಿಕಾರಿಗಳಲ್ಲಿ ಶ್ರೀ ಬಿ.ಎಸ್ ಹಾವಣ್ಣವರ್, ಶ್ರೀ ಎಸ್.ಕೆ. ಕುಂಬಾರರು, ಲೋಕೋಪಯೋಗಿ ಇಲಾಖೆಯ ಸೂಪರಿಂಟೆಂಡಿಂಗ್ ಇಂಜನೀಯರರಾಗಿದ್ದರು. ಶ್ರೀ ಜಿ.ಎಸ್ ಮುಗಳಿಯವರು ಜಾಯಿಂಟ್ ರಜಿಸ್ಟ್ರಾರ (ಸಹಕಾರ ಇಲಾಖೆ) ಸರ್ಕಾರದ ಮೂರು ಅಂಗಗಳಲ್ಲಿ ಕೂಡಾ ಕಾರ್ಯಮಾಡಿದವರಿದ್ದಾರೆ. ಶಾಸಕಾಂಗದಲ್ಲಿ ಶ್ರೀ ಬಣಕಾರರು ಮಂತ್ರಿಗಳಾಗಿ ಹಾಗೂ ವಿಧಾನ ಸಭೆಯ ಸಭಾಪತಿಗಳೂ ಆಗಿದ್ದರು. ಶ್ರೀ ಸಿ. ಗುಡ್ನಾಕಾಯು, ಶ್ರೀ ಎಂ. ಎಲ್. ಮುತ್ತಣ್ಣವರ, ಶ್ರೀ ಟಿ. ಕೆ. ಟಕ್ಕೇದ ಎಂ.ಎಲ್.ಎ (ಶಾಸಕರಾಗಿದ್ದರು), ಕಾರ್ಯಾಂಗದಲ್ಲಿ ಶ್ರೀ ಬಿ.ವಿ.ಕತ್ತಿಯವರು ಕಂದಾಯ ಇಲಾಖೆಯ ವಿಭಾಗಾಧಿಕಾರಿಗಳಾಗಿದ್ದರು. ಡಾ॥ ಆರ್.ಸಿ.ಹಿರೇಮಠರು ಕರ್ನಾಟಕ ವಿಶ್ವವಿದ್ಯಾನಿಲಯದ ಉಪಕುಲಪತಿಗಳಾಗಿ ನಿವೃತ್ತರಾಗಿದ್ದಾರೆ. ಡಾ॥ ಚಂದ್ರಶೇಖರ ಕಂಬಾರ ಕನ್ನಡ ವಿಶ್ವವಿದ್ಯಾಲಯ ಹಂಪಿಯಲ್ಲಿ ಕುಲಪತಿಗಳಾಗಿ ಕಾರ್ಯ ಮಾಡುತ್ತಿದ್ದಾರೆ. ನ್ಯಾಯಾಂಗದಲ್ಲಿ ಡಿ.ಎಂ.ಎಸ್ ವೀರಾಪೂರ ಹಾಗೂ ವಿ. ಎನ್.ಎಂ. ಚಗರಗರು ಜಿಲ್ಲಾ ಹಾಗೂ ಸೆಷನ್ಸ್ ನ್ಯಾಯಾಧೀಶರಾಗಿದ್ದ ಶ್ರೀ ಶ್ಯಾಮ ಹೂಗಾರ ಹಾಗೂ ಶ್ರೀ ಜಿ.ಎಸ್.ಹಿರೇಮಠ ಜಿಲ್ಲಾ ಹಾಗೂ ಸೆಶನ್ಸ್ ನ್ಯಾಯಾಧೀಶರಾಗಿದ್ದಾರೆ.

ಶ್ರೀಗಳ ಕಾರ್ಯಕ್ಷೇತ್ರ ವಿಸ್ತರಿಸುತ್ತ ನಡೆದಂತೆ ಅದನ್ನೆಲ್ಲ ನಿಭಾಯಿಸುವ, ಹೊಣೆಗಾರಿಕೆಯ ಭಾರವನ್ನು ಹೊರಲು ರುದ್ರಾಕ್ಷಿ ಮಠಕ್ಕೆ ಅಷ್ಟಮ ಉತ್ತರಾಧಿಕಾರಿಯನ್ನಾಗಿ ಶ್ರೀ ರಾಜಶೇಖರ ಹಿರೇಮಠ ಎನ್ನುವವರನ್ನು ಆರಿಸಿ ಅವರಿಗೆ ಪ್ರಭುದೇವರೆಂದು ನಾಮಕರಣ ಮಾಡಿ ಪಟ್ಟಾಭಿಷೇಕ ಮಾಡಿದರು. ಇವರು ಕೂಡಾ ಪ್ರಸಾದ ನಿಲಯದಲ್ಲಿ ಕಲಿತವರು. ಪೂಜ್ಯ ಪ್ರಭುಸ್ವಾಮಿಗಳು ಶಿಶು ವಿಹಾರದಿಂದ ಹಿಡಿದು ಪದವೀಪೂರ್ವ ಮಹಾ ವಿದ್ಯಾಲಯದ ವರೆಗೆ ಶಾಲೆಗಳನ್ನು ಪ್ರಾರಂಭಿಸಿದರು. ಜೂನ್ ೧೯೬೯ ರಂದು ಮಾಧ್ಯಮಿಕ ಶಾಲೆಯನ್ನು ಆಗಸ್ಟ್ ೧೯೭೫ರಲ್ಲಿ ಪ್ರಾಥಮಿಕ ಶಾಲೆಯನ್ನು ೧೯೮೩ ರಲ್ಲಿ ಪದವೀ ಪೂರ್ವ ಕಾಲೇಜನ್ನು ೧೯೮೩ರಲ್ಲಿ ಔದ್ಯೋಗಿಕ ತರಬೇತಿ ಸಂಸ್ಥೆಯನ್ನು ೧೯೮೬ರಲ್ಲಿ ಆರ್.ಎನ್.ಶೆಟ್ಟಿ ತಾಂತ್ರಿಕ ಶಿಕ್ಷಣ ವಿದ್ಯಾಲಯವನ್ನು ಸ್ಥಾಪಿಸಿದರು. ಪ್ರತಿ ವರ್ಷ ಡಿಸೆಂಬರ್ ೭,೮, ಹಾಗೂ ೯ರಂದು ವರ್ಧಂತಿ ಉತ್ಸವ ಆಚರಿಸುತ್ತ ನಾಡಿನ ಗಣ್ಯರನ್ನು ಸತ್ಕರಿಸುವ ಮಹತ್ ಕಾರ್ಯ ಹಾಗೂ ಬಡ ಜನರ ಮದುವೆ ಅನ್ನ ದಾಸೋಹ ಮಾಡುತ್ತಿರುವುದು, ಅಷ್ಟೇ ಅಲ್ಲದೇ ಪುರಾಣವನ್ನು ಹೇಳಿಸಿ ಜ್ಞಾನ ದಾಸೋಹ ಮಾಡುತ್ತ ನಡೆದಿರಲು ಪೂಜ್ಯ ಪ್ರಭು ಸ್ವಾಮಿಗಳು ಹಠಾತ್ತನೆ ಲಿಂಗೈಕ್ಯರಾದರು. ಸಮಸ್ತ ಸಮಾಜ ಶೋಕ ಸಾಗರದಲ್ಲಿ ಮುಳುಗಿತು.

ಬಿಜಾಪೂರ ಜಿಲ್ಲೆಯ ಶ್ರೀ ಗುರುಪಾದ ಸ್ವಾಮಿಗಳನ್ನು ಒಂಬತ್ತನೇ ಉತ್ತರಾಧಿಕಾರಿಯನ್ನಾಗಿ ಶ್ರೀ ಶಿವಬಸವ ಸ್ವಾಮಿಗಳು ಆರಿಸಿ ಶ್ರೀ ಸಿದ್ಧರಾಮ ಸ್ವಾಮೀಜಿ ಎಂದು ನಾಮಕರಣ ಮಾಡಿ ಪಟ್ಟಾಬಿಷೇಕ ಮಾಡಿಸಿದರು. ಉತ್ತರಾಧಿಕಾರಿಯನ್ನು ಆರಿಸುವಾಗ ಹಿರಿಯ ಶ್ರೀಗಳು ಊರಿನ ಗಣ್ಯಭಕ್ತಾದಿಗಳನ್ನು ಹಾಗೂ ನಾಡಿನ ಹಿರಿಯ ಸ್ವಾಮಿಗಳನ್ನು

ಚಾರಿಸಿ ಉನ್ನತ ವ್ಯಾಸಂಗ ಮಾಡಿದ ಸಂಸ್ಕೃತ ಕನ್ನಡದಲ್ಲಿ ಚ್ಚಿನ ಪರಿಣತಿ ಹೊಂದಿದ ತತ್ವಶಾಸ್ತ್ರ ಅಭ್ಯಸಿಸಿದ ಪುಣರನ್ನು ಆರಿಸುವುದು ವಾಡಿಕೆ. ೯ನೇ ರತ್ನವೆನಿಸಿದ ಪೂಜ್ಯ ಶ್ರೀ ಸಿದ್ಧರಾಮ ಶ್ರೀಗಳು ಉತ್ತರಾಧಿಕಾರಿಗಳಾಗಿ ಬಂದ ಸ್ವಲ್ಪ ಸಮಯದಲ್ಲಿಯೇ ಶ್ರೀಗಳ ಸಂಕಲ್ಪದಂತೆ ಸ್ಪಂದಿಸುತ್ತ ಅಪಾರ ಸೇವೆ ಮಾಡುವುದನ್ನು ನೋಡಿದರೆ ಮಹಾಂತಪ್ಪ ಮೃತ್ಯುಂಜಯ ಸ್ವಾಮಿಗಳ ನೆನಪುಬಾರದೇ ಇರದು. ಮಠದ ಸಮಸ್ತ ಭಾರವನ್ನು ಹೊತ್ತು ಇದರ ಪರಂಪರೆಗೆ ಚ್ಯುತಿ ಬಾರದಂತೆ ಅದನ್ನು ಉತ್ತುಂಗ ಶಿಖರಕ್ಕೆ ಕೊಂಡೊಯ್ಯುತ್ತಿರುವ ಸಮಯದಲ್ಲಿಯೇ ಸಮಸ್ತ ಭಾರವನ್ನು ಶ್ರೀ ಮ. ನಿ. ಪ್ರ. ಸಿದ್ಧರಾಮ ಶ್ರೀಗಳ ಮೇಲೆ ಹೊರಿಸಿ ದಿ ೯-೯-೧೯೯೪ ರಂದು. ಶ್ರೀ ಡಾ॥ ಶಿವಬಸವ ಶ್ರೀಗಳು ಲಿಂಗೈಕ್ಯರಾದರು.

**ಗ್ರಂಥ ಋಣ:**

ಶಿವಪ್ರಸಾದ ಸ್ಮೃತಿ ಗ್ರಂಥ, ಸಂಪಾದಕರು, ದಿ.ಎಸ್ ಡಿ ಇಂಚಲ್,
ಶಿವದೀಪ್ತಿ, ಡಾ॥ ಆರ್.ಸಿ.ಹಿರೇಮಠ.

ಡಾ|| ಸಿ. ನಾಗಭೂಷಣ *

# ವಚನಕಾರ ಆದಯ್ಯನ ಜನ್ಮಗ್ರಾಮ ಮರುಪರಿಶೀಲನೆ

ಮಧ್ಯಕಾಲೀನ ಯುಗದಲ್ಲಿ ಪುಲಿಗೆರೆಯು ಸಾಂಸ್ಕೃತಿಕವಾಗಿ, ಧಾರ್ಮಿಕವಾಗಿ ಮಹತ್ವದ ಸ್ಥಾನವನ್ನು ಪಡೆದುದಾಗಿದೆ. ಹನ್ನೊಂದನೇ ಶತಮಾನದ ಕೊನೆಯ ಭಾಗದಲ್ಲಿ ನಡೆಯಿತೆಂದು ಭಾವಿಸಲಾದ ಪುಲಿಗೆರೆಯಲ್ಲಿಯ 'ಸೋಮನಾಥನ ಪ್ರತಿಷ್ಠಾಪನೆ' ವೀರಶೈವಧಾರ್ಮಿಕ ಚರಿತ್ರೆಯಲ್ಲಿ ಪ್ರಾಮುಖ್ಯತೆಯನ್ನು ಪಡೆದಿದೆ. ಈ ಪ್ರತಿಷ್ಠಾಪನೆಯ ವಿವರ ಪ್ರತ್ಯಕ್ಷವಾಗಿ ಶಾಸನಗಳಲ್ಲಿ ಎಲ್ಲಿಯೂ ದೊರೆಯುವುದಿಲ್ಲವಾದರೂ ವೀರಶೈವ ಸಾಹಿತ್ಯದಲ್ಲಿ ಸಮಗ್ರವಾಗಿ ಮತ್ತು ಸಂಪೂರ್ಣವಾಗಿ ಇಪ್ಪತ್ತೈದು ಕಾವ್ಯ-ಪುರಾಣಗಳಲ್ಲಿ ನಿರೂಪಿತವಾಗಿದೆ. ಈ ಘಟನೆಯ ಕೇಂದ್ರ ವ್ಯಕ್ತಿಯಾದ 'ಆದಯ್ಯನ' ಹೆಸರು ವೀರಶೈವ ಧಾರ್ಮಿಕ ಚರಿತ್ರೆ ಮತ್ತು ವಚನಕಾರರ ಸಾಲಿನಲ್ಲಿ ಎದ್ದು ಕಾಣುವಂತಹದ್ದಾಗಿದೆ. ವೀರಮಾಹೇಶ್ವರ ನಿಷ್ಠೆಯ ಮೂಲಕ ಏಕದೇವನಲ್ಲಿ ಉಗ್ರನಂಬಿಕೆ ಇರಿಸಿ ಈಗಾಗಲೇ ಅಸ್ತಿತ್ವದಲ್ಲಿ ಇದ್ದ ಅನ್ಯಮತಗಳ ವಿರುದ್ಧ ಹೋರಾಡಿ ವೀರಶೈವಮತ ಮತ್ತು ವೀರಶೈವ ಸಂಸ್ಕೃತಿಯನ್ನು ರಕ್ಷಿಸಿದ ಶಿವಶರಣರುಗಳಲ್ಲಿ ಒಬ್ಬನಾದ ಆದಯ್ಯನು 'ಸೌರಾಷ್ಟ್ರ ಸೋಮೇಶ್ವರ' ಅಂಕಿತದಲ್ಲಿ ನಾಲ್ಕುನೂರ ಐದು ವಚನಗಳನ್ನು ರಚಿಸಿದ್ದಾನೆ. ಇಲ್ಲಿಯವರೆಗೂ ಆದಯ್ಯನ ಜನ್ಮ ಸ್ಥಳ 'ಸೌರಾಷ್ಟ್ರ' ಎಂದು ಅದು ಈಗಿನ ಗುಜರಾತ್ ರಾಜ್ಯದಲ್ಲಿದೆ ಎಂದು ಹೇಳುತ್ತಾ ಬಂದಿರುತ್ತಾರೆ. ಪ್ರಸಕ್ತ ಈ ಸಂಶೋಧನಾ ಲೇಖನದಲ್ಲಿ ಸಾಹಿತ್ಯ ಕೃತಿಗಳು, ಪೂರಕ ಶಾಸನಗಳು ಮತ್ತು ಕ್ಷೇತ್ರಕಾರ್ಯದ ಮೂಲಕ ದೊರೆತ ಕೆಲವೊಂದು ಆಧಾರಗಳ ಬೆಳಕಿನಲ್ಲಿ ಆದಯ್ಯನ ಜನ್ಮಗ್ರಾಮವನ್ನು ಪುನರ್ ಪರಿಶೀಲಿಸುವುದಾಗಿದೆ.

ಆದಯ್ಯನನ್ನು ಕುರಿತ ಕಾವ್ಯ-ಪುರಾಣಗಳಲ್ಲಿ ಜನ್ಮಗ್ರಾಮದ ಬಗೆಗೆ ವಿಭಿನ್ನ ಹೆಸರುಗಳಿವೆ. ರಾಘವಾಂಕನ ಸೋಮನಾಥ ಚಾರಿತ್ರದಲ್ಲಿ. "ನಾನೊಲಿದು ನೆಲಸಿಪ ಸೌರಾಷ್ಟ್ರವೆಂಬ ಸುಸ್ಥಾನವುಂಟದರೊಳಗೆ ಜನಿಸು ಹೋಗೆನೆ" ಎಂಬ[1] ಹೇಳಿಕೆ ಮತ್ತು ಭೈರವೇಶ್ವರ ಕಾವ್ಯದ ಕಥಾಮಣಿ ಸೂತ್ರರತ್ನಾಕರದಲ್ಲಿಯ ಉತ್ತರ ದೇಶ ದೊಳೊಪ್ಪುವ ಸೌರಾಷ್ಟ್ರ ಪುರದಲ್ಲಿ ಅನಾದಿ ಗಣೇಶ್ವರ ನೆಂಬಾತನೆ ಶಿವಭಕ್ತರು ದರದಲ್ಲಿ ಜನಿಸಿ ಆದಯ್ಯನೆಂಬ ಹೆಸರಿನಿಂದ . . . ."[2] ಎಂಬ ಹೇಳಿಕೆಗಳಿಂದ ಸೌರಾಷ್ಟ್ರವು ಆದಯ್ಯನ ಜನಗ್ರಾಮ ಎಂಬುದಾಗಿ ವ್ಯಕ್ತ ಪಡುತ್ತದೆ. ಸಿದ್ಧನಂಜೇಶನ ರಾಘವಾಂ ಚರಿತೆಯಲ್ಲಿ, "ಪೋಗೆಂದು ಬೀಳ್ಕೊಡಲು ಬಂದಾದಿಗಣನಾಥ ನಾಗಭೂಷಣನ ನಚ್ಚಿನ ದೇಶ ಸೊರಟದೊ ಗಾಗೂಣೋತ್ತುಂಗ ಶಿವಭಕ್ತ ರುದರದಿ ಜನಿಸಿ"[3] ಎಂಬ ಉಲ್ಲೇಖದಿಂದ ಸೊರಟೂರು ಆದಯ್ಯನ ಜನ್ಮಸ್ಥ ಎಂಬುದಾಗಿ ವ್ಯಕ್ತಪಡುತ್ತದೆ. ಸೊರಟ ಎಂಬುದು ಸೌರಾಷ್ಟ್ರ ತದ್ಭವವಾಗಿ ಬಳಕೆಯಾಗಿದೆ. ಹಲವಾರು ಸೌರಾಷ್ಟ್ರಗಳ ಕಂಡು ಬರುವುದರಿಂದ ವಿದ್ವಾಂಸರು ಆದಯ್ಯನ ಜನಗ್ರಾ

---

* ಉಪನ್ಯಾಸಕರು, ಕನ್ನಡ ಅಧ್ಯಯನ ಸಂಸ್ಥೆ, ಗುಲಬರ್ಗಾ ವಿಶ್ವವಿದ್ಯಾಲಯ.

1. ಸೋಮನಾಥ ಚಾರಿತ್ರ (ಸಂ|| ಆರ್.ಸಿ.ಹಿರೇಮಠ, ಎಂ.ಎಸ್ ಸುಂಕಾಪುರ) ಸ್ಥ.೧. ಪ.ಸಂ.೫೬
2. ಭೈರವೇಶ್ವರ ಕಾವ್ಯದ ಕಥಾಮಣಿ ಸೂತ್ರರತ್ನಾಕರ ಭಾಗ.೨.(ಸಂ|| ಆರ್.ಸಿ.ಹಿರೇಮಠ, ಎಂ.ಎಸ್. ಸುಂಕಾಪುರ) ಪು.೭೧.
3. ರಾಘವಾಂಕ ಚರಿತೆ (ಸಂ|| ಸ.ಸ.ಮಾಳವಾಡ)ಸಂ.೧೩ ಪ.ಸಂ.೨೦

ೌರಾಷ್ಟ್ರವು' ಗುಜರಾತ್ ರಾಜ್ಯದಲ್ಲಿದ್ದು, ಆದಯ್ಯನು ರ್ನಾಟಕದವನಾಗಿರದೆ ಹೊರನಾಡಿವನು ಆಗಿದ್ದಾನೆ ಎಂದು ೂಹಿಸಿದ್ದಾರೆ.[4]. ವೀ.ರು. ಕೊಪ್ಪಳರವರು 'ಆದಯ್ಯನ ಚನಗಳು' ಪ್ರಸ್ತಾವನೆಯಲ್ಲಿ 'ಸೊರಟೂರು' ಎಂಬ ಗ್ರಾಮಗಳು ಕನ್ನಡನಾಡಿನಲ್ಲಿ ಅನೇಕ ಕಡೆ ಇರುತ್ತವೆ. ೌರಾಷ್ಟ್ರದ ಸೋಮನಾಥನ ಮೇಲಿನ ಭಕ್ತಿಯಿಂದಾಗಿ ಇಂಥ ಊರುಗಳನ್ನು ಕಟ್ಟಿಸಿ ಅಲ್ಲಲ್ಲಿ ಸೋಮನಾಥ' ದೇವಾಲಯಗಳನ್ನು ಸ್ಥಾಪಿಸಿದಂತಿದೆ. ಪುಲಿಗೆರೆಯ ಹತ್ತಿರವೆ ಸೊರಟೂರೆಂಬ ಗ್ರಾಮ ಇದೆ. ಇಲ್ಲಿ ಜಕ್ಕಣಾರ್ಯನ ಶೈಲಿಯಂತಿರುವ ಗುಡಿಗಳು ಇರುತ್ತವೆ. ಆದಯ್ಯನು ಇಲ್ಲಿಯಾಗಲಿ ಅಥವಾ ಸಮೀಪದ ಸೊರಟೂರೆಂಬ ಇನ್ನಾವುದಾದರೊಂದು ಗ್ರಾಮದಲ್ಲಾಗಲೀ ಇರುತ್ತಿದ್ದನೇ ಎಂಬಿವು ಸಂಶೋಧನೆಯ ಸಂಗತಿಗಳಾಗಿರುತ್ತವೆ.[5] ಎಂಬ ಅನಿಸಿಕೆಯನ್ನು ವ್ಯಕ್ತ ಪಡಿಸಿದ್ದಾರೆ.

ಆದಯ್ಯನು ಸೌರಾಷ್ಟ್ರದಿಂದ ಬಂದಿರುವನಾಗಿರದೆ ಕನ್ನಡ ನಾಡಿನವನೇ ಎಂದೆನಿಸುತ್ತದೆ. ಆದಯ್ಯನ ಜನ್ಮಗ್ರಾಮ ಹೊರನಾಡಿನ ಸೌರಾಷ್ಟ್ರವಾಗಿದ್ದರೆ ಚಿಕ್ಕ ಸಂದೇಹ ನಮ್ಮಲ್ಲಿ ಉಂಟಾಗುತ್ತದೆ. ಆದಯ್ಯನನ್ನು ಕುರಿತ ಕಾವ್ಯಗಳಲ್ಲಿ ಆದಯ್ಯ-ಪದ್ಮಾವತಿಯರ ವಿವಾಹ ಪ್ರಸಂಗದ ನಂತರ ಬೋನದ ವಿಷಯದಲ್ಲಿ ಆದಯ್ಯ ಮತ್ತು ಮಾವ ಪಾರಿಸ ಪಂಡಿತನ ಜೊತೆಯಲ್ಲಿ ಉಂಟಾದ ವಾದವಿವಾದದಲ್ಲಿ ಸೌರಾಷ್ಟ್ರದ ಸೋಮೇಶನನ್ನು ಪುಲಿಗೆರೆಯ ಸುರಹೊನ್ನೆ ಬಸದಿಯಲ್ಲಿ ತಂದು ಪ್ರತಿಷ್ಠಾಪಿಸದ ಹೊರತು ಉಣ್ಣಲಾರೆ ಎಂಬ ಮಾವನ ಕಟಕಿ ನುಡಿಯನ್ನೇ ಪ್ರತಿಜ್ಞೆಯಾಗಿ ಸ್ವೀಕರಿಸಿ ಆದಯ್ಯನು ಕಾರ್ಯತತ್ಪರನಾಗುತ್ತಾನೆ. ಆದಯ್ಯನು ಪುಲಿಗೆರೆಯ ಸುರಹೊನ್ನೆ ಬಸದಿಗೆ ಸೋಮೇಶನನ್ನು ಕರೆತರಲು ಸೌರಾಷ್ಟ್ರಕ್ಕೆ ಹೋದ ಎಂಬುದು ಇಲ್ಲಿ ವಿದಿತವಾಗಿರುವ ಸಂಗತಿ. ಆದಯ್ಯನ ಜನ್ಮಗ್ರಾಮ 'ಸೌರಾಷ್ಟ್ರ' ಎಂಬುದನ್ನು ಲಕ್ಷ್ಯದಲ್ಲಿಟ್ಟುಕೊಂಡರೆ ಸೋಮೇಶನನ್ನು ಕರೆತರಲು ತನ್ನ ಹುಟ್ಟೂರು ಆದ 'ಸೌರಾಷ್ಟ್ರಕ್ಕೆ' ಪ್ರಯಾಣ ಬೆಳಸಿದನೆ ಎಂದೆನಿಸುತ್ತದೆ. ಈ ಸೌರಾಷ್ಟ್ರವು ಒಂದು ವೇಳೆ ಆದಯ್ಯನ ಜನ್ಮಗ್ರಾಮವಾಗಿದ್ದರೆ ಪಯಣ ಮಾರ್ಗದಲ್ಲಿ ಅನೇಕ ಕಷ್ಟಗಳನ್ನು ಎದುರಿಸದೆ ಸುಗಮವಾಗಿ ತಲುಪಬಹುದಾಗಿತ್ತು. ಅಂದರೆ ಈಗಾಗಲೇ ಆತನಿಗೆ ಮಾರ್ಗದ ಪರಿಚಯವಿತ್ತು ಎಂಬುದಾಗಿ ಭಾವಿಸಬಹುದು. ಆದರೆ ಆದಯ್ಯನು ಸೌರಾಷ್ಟ್ರ ಸೋಮಯ್ಯನನ್ನು ಕರೆತರಲು ಹೊರಟ ಪಯಣದ ವಿವರ ತ್ರಾಸದಾಯಕವಾಗಿತ್ತು ಎಂಬುದು ಕಾವ್ಯಗಳಿಂದ ವ್ಯಕ್ತವಾಗುತ್ತದೆ. ಏಕಾಂಗಿಯಾಗಿ ಹೊರಟ ಆದಯ್ಯ ಭಯಂಕರವಾದ ಕಾಡಿನಲ್ಲಿ ಹಸಿವು ನೀರಡಿಕೆಯಿಂದ ಹಾದಿಗೆಟ್ಟ ಹೊಲಬನಂತೆ ಪರಿತಪಿಸುವ ಪ್ರಸಂಗವು ಸೋಮನಾಥ ಚಾರಿತ್ರದಲ್ಲಿ[6] ನಿರೂಪಿತವಾಗಿದೆ. ಸೌರಾಷ್ಟ್ರವು ಈತನ ಜನ್ಮಸ್ಥಳವಾಗಿದ್ದರೆ ಪಯಣ ಮಾರ್ಗದ ಪರಿಚಯ ಇದ್ದೇ ಇರುತ್ತಿತ್ತು ಎಂದೆನಿಸುತ್ತದೆ. ಸೌರಾಷ್ಟ್ರವು ಆದಯ್ಯನ ಮನೆದೇವರು ಆಗಿರುವ ಸ್ಥಳ ಎಂಬುದಾಗಿ 'ಭೈರವೇಶ್ವರ ಕಾವ್ಯ' ಮತ್ತು 'ಭೈರವೇಶ್ವರ ಕಾವ್ಯದ ಕಥಾಮಣಿ ಸೂತ್ರರತ್ನಾಕರ' ಕಾವ್ಯಗಳಿಂದ ತಿಳಿದುಬರುತ್ತದೆ. ಹೀಗಾಗಿ ಆದಯ್ಯನ ಜನ್ಮಸ್ಥಳವು ಕರ್ನಾಟಕದ ಒಂದು ಊರು ಆಗಿದೆ. ಅಲ್ಲದೆ ಈತನ ವಚನಗಳ ಭಾಷೆ, ಶೈಲಿ, ಪಾಂಡಿತ್ಯ ಇತ್ಯಾದಿಗಳನ್ನು ಪರಿಶೀಲಿಸಿದರೆ ಹೊರನಾಡಿನವನಲ್ಲ ಅಚ್ಚಗನ್ನಡ ಪ್ರದೇಶದವನೇ ಎಂದೆನಿಸುತ್ತದೆ.

ಕರ್ನಾಟಕದ ಯಾವುದೋ ಊರು ಆದಯ್ಯನ ಜನ್ಮಸ್ಥಳವಾಗಿರಬೇಕು ಎಂದೆನಿಸುತ್ತದೆ. ವೀ.ರು. ಕೊಪ್ಪಳರವರು ಹುಲಿಗೆರೆಗೆ ಹನ್ನೆರಡು ಮೈಲಿ ದೂರದಲ್ಲಿರುವ ಸೊರಟೂರು ಆದಯ್ಯನ ಜನ್ಮಸ್ಥಳ ಎಂದಿದ್ದಾರೆ.[7] ಸೊರಟೂರಿನಲ್ಲಿ ಆದಯ್ಯನ ಬಗೆಗೆ ಸಂಬಂಧಿಸಿದ ಕುರುಹುಗಳಾಗಲೀ, ಐತಿಹ್ಯಗಳಾಗಲೀ ಇದ್ದಂತೆ ತಿಳಿದು ಬರುವುದಿಲ್ಲ. ಲಭ್ಯವಿರುವ ಮಿತವಾದ ಆಧಾರಗಳಿಂದ 'ಸಾಸಲು' ಆದಯ್ಯನ ಜನ್ಮಗ್ರಾಮ ಎಂಬುದನ್ನು ಇಲ್ಲಿ ಸೂಚಿಸಲಾಗಿದೆ. ಸಾಸಲುವಿನಲ್ಲಿ ಸೋಮನಾಥ ದೇವಾಲಯ ಇದೆ. ಸೋಮನಾಥ ದೇವಾಲಯದ ನವರಂಗದಲ್ಲಿ ಆದಿಸೆಟ್ಟಿಯ ವಿಗ್ರಹ ಇದೆ. 'ಭೈರವೇಶ್ವರ ಕಾವ್ಯ'ದ ಪ್ರಸ್ತಾವನೆಯಲಿ ತಿಳಿಸಲಾಗಿದೆ.[8] Mysore Archaeologi-

---

4. ಸೋಮನಾಥ ಚಾರಿತ್ರ [ಸಂ॥ ಆರ್.ಸಿ ಹಿರೇಮಠ, ಎಂ.ಎಸ್ ಸುಂಕಾಪುರ] ಪ್ರಸ್ತಾವನೆ ಪು.I XLVIII
5. ಆದಯ್ಯನ ವಚನಗಳು [ಸಂ॥ ಉತ್ತಂಗಿ ಚೆನ್ನಪ್ಪ] ಪ್ರಸ್ತಾವನೆ. ಪು.VI
6. ಸೋಮನಾಥ ಚಾರಿತ್ರ ಸ್ಥ.೩. ಪ.ಸಂ.೧೬ ರಿಂದ೭೪.
7. ಆದಯ್ಯನ ವಚನಗಳು ಪ್ರಸ್ತಾವನೆ. ಪು.VI
8. ಭೈರವೇಶ್ವರ ಕಾವ್ಯ [ಸಂ॥ ಶಿವರುದ್ರ ಸ್ವಾಮಿಗಳು] ಪ್ರಸ್ತಾವನೆ. ಪು.೨೮.
9. Mysore Archaeological Report ೧೯೧೪. pp. ೨೨.೨೩

cal Reportನಲ್ಲಿಯೂ'The Someswara temple in navaranga figures of Adisetti' ಎಂಬ ಉಲ್ಲೇಖ ದಾಖಲಾಗಿದೆ.[9] ಈ ಹೇಳಿಕೆಗಳನ್ನು ಆಧರಿಸಿ ಸಾಸಲು ಗ್ರಾಮವನ್ನು ಪರಿವೀಕ್ಷಿಸಲು ಕ್ಷೇತ್ರಕಾರ್ಯವನ್ನು ಕೈಗೊಂಡಾಗ ಮೂರು ಸಾಸಲು ಗ್ರಾಮಗಳು ನನ್ನ ಗಮನಕ್ಕೆ ಬಂದವು. ಚಿತ್ರದುರ್ಗ ಜಿಲ್ಲೆಯ ಹೊಳಲ್ಕೆರೆ ತಾಲ್ಲೋಕಿನ ಸಾಸಲು ಗ್ರಾಮ, ತುಮಕೂರು ಜಿಲ್ಲೆಯ ಚಿಕ್ಕನಾಯಕನ ಹಳ್ಳಿ ತಾಲ್ಲೋಕಿನ ಸಾಸಲುಗ್ರಾಮ. ಮಂಡ್ಯಜಿಲ್ಲೆಯ ಕೆ.ಆರ್.ಪೇಟೆ ತಾಲ್ಲೋಕಿನ ಕಿಕ್ಕೇರಿ ಸಮೀಪದ ಸಾಸಲು ಗ್ರಾಮದಲ್ಲಿ ಮಾತ್ರ ಮೇಲೆ ಉಲ್ಲೇಖಿಸಿದ ಕೃತಿಗಳಲ್ಲಿ ದಾಖಲಾಗಿರುವ ವಿವರಗಳು ಕಂಡು ಬಂದವು. ಸಾಸಲುವಿನಲ್ಲಿ ಸೋಮೇಶ್ವರ ದೇವಾಲಯ ಇದೆ. ದೇವಾಲಯವು ಚೋಳರ ಕಾಲಕ್ಕೆ ಸೇರಿದುದಾಗಿ ಕಂಡುಬರುತ್ತದೆ. ನವರಂಗದ ಬಲಭಾಗದಲ್ಲಿ ಎರಡು ವಿಗ್ರಹಗಳು ಇದ್ದು ವಿಗ್ರಹಗಳಲ್ಲಿನ ವ್ಯಕ್ತಿಗಳನ್ನು 'ಆದಿಸೆಟ್ಟಿ' ಮತ್ತು 'ಕೋರಿಸೆಟ್ಟಿ' ಎಂದು ಈಗಲೂ ಕರೆಯುತ್ತಾರೆ. ಗರ್ಭಗೃಹದಲ್ಲಿ ಲಿಂಗ ಇದೆ. ಈ ವಿಗ್ರಹಗಳಲ್ಲಿಯ ವ್ಯಕ್ತಿಗಳ ಬಗೆಗೆ ಪ್ರಸ್ತಾಪಿಸಿದಾಗ ಜನರು ಹರಿಹರನ ಆದಯ್ಯನರಗಳೆ ಮತ್ತು ಸೋಮನಾಥ ಚಾರಿತ್ರದ ಆದಯ್ಯನ ಕಥೆಯನ್ನು ಹೋಲುವ ಆದಿಸೆಟ್ಟಿಯ ಕಥೆ ಹೇಳುತ್ತಾರೆ. ಕುತೂಹಲಕರ ಸಂಗತಿ ಎಂದರೆ ಶ್ರವಣಬೆಳ್ಗೊಳವು ಸಾಸಲುವಿಗೆ ಸುಮಾರು ಇಪ್ಪತ್ತು ಕಿ.ಮೀ. ದೂರದಲ್ಲಿದೆ. ಇಲ್ಲಿಯೂ ಮೊದಲು ಜೈನರಿದ್ದು ನಂತರ ಶೈವರಿಗೂ ಮತ್ತು ಜೈನರಿಗೂ ಕಲಹವಾಗಿ ಜೈನರೆಲ್ಲರೂ ಸಾಸಲನ್ನು ಬಿಟ್ಟು ಶ್ರವಣಬೆಳ್ಗೊಳದಲ್ಲಿ ನೆಲೆನಿಂತರೆಂಬ ಹೇಳಿಕೆಯನ್ನು ಸಾಸಲುವಿನಲ್ಲಿಯ ವೃದ್ಧರೊಬ್ಬರು ನಮಗೆ ತಿಳಿಸಿದರು. ಈ ವಿಷಯದಲ್ಲಿ ಖಚಿತತೆ ಸಾಲದು. ಸಾಸಲುವಿನ ಸುತ್ತಮುತ್ತಲೂ ಈಗಲೂ ವೀರಶೈವರೇ ಅಧಿಕವಾಗಿದ್ದು ಸೋಮೇಶ್ವರದೇವರ ಭಕ್ತವೃಂದದವರೇ ಆಗಿದ್ದಾರೆ. ಆದಯ್ಯನಿಗೆ ಆದಿಸೆಟ್ಟಿ ಎಂಬುದು ಪರ್ಯಾಯ ಹೆಸರಾಗಿತ್ತು ಎಂಬುದನ್ನು ಕಾವ್ಯ-ಪುರಾಣಗಳಲ್ಲಿಯ ''ಖುಲ್ಲ ಶ್ರವಣರ ಕೊಲ್ವ ಮಿತ್ರಾದಿ ಸೆಟ್ಟಿ ಮುದದಲ್ಲಿರಲು; ಇಂದು ಪದ್ಮಾವತಿಯನಾದಿಸೆಟ್ಟಿಯನು ನಲವಿಂದೊಲಿದು; ಆದಿಸೆಟ್ಟಿಗೆ ಸೋತು ಪದ್ಮಾವತಿಯು ಶೈವೆಯಾದಳೆಂಬುದನವಳು; ಭಕ್ತಾದಿಸೆಟ್ಟಿಮಿಗೆ ನಿನ್ನ ಕಾಡಿದೆನು ತಪ್ಪುಂಟೆನ್ನೊಳು,'' ಎಂಬ[10] ಹೇಳಿಕೆಗಳು ಸಮರ್ಥಿಸುತ್ತವೆ. ಸೋಮನಾಥ ಚಾರಿತ್ರವನ್ನು ಒಂದೆಡೆ 'ಆದಿಸೆಟ್ಟಿ ಪುರಾಣ' ಎಂದೇ ಕರೆದಿದ್ದಾರೆ. ಈ ಮೇಲಿನ ಹೇಳಿಕೆಯನ್ನು ಬೆಂಬಲಿಸುವಂತೆ 'ಭೈರವೇಶ್ವರ ಕಾವ್ಯ' ಮತ್ತು 'ಭೈರವೇಶ್ವರ ಕಾವ್ಯದ ಕಥಾಮಣಿಸೂತ್ರರತ್ನಾಕರ' ಕಾವ್ಯಗಳಲ್ಲಿ ಆದಯ್ಯನ ವಂಶಜರು ಸಾಸಲುವಿನಲ್ಲಿ ಇದ್ದ ಬಗೆಗೆ ಉಲ್ಲೇಖ ಇದೆ. ಆದಯ್ಯನ ಮೇಲಿನ ಅಭಿಮಾನದಿಂದ ಹುಲಿಗೆರೆಯಲ್ಲಿರ್ದ ಆದಯ್ಯನ ಗುರು ಸಂಪ್ರದಾಯಕ್ಕೆ ಮುಖ್ಯರಾದ ಚಿಕ್ಕಣಾರ್ಯ ಮೊದಲಾದ ಭಕ್ತರು ಆದಯ್ಯನ ಜನ್ಮಸ್ಥಳವಾದ ಸಾಸಲಿಗೆ, ಅಲ್ಲಿಯ ಸೋಮೇಶ್ವರ ದೇವರ ನೋಡಬೇಕೆಂದು ಶಿವಭಕ್ತರೊಡಗೂಡಿ ಬಂದಾಗ ಆದಯ್ಯನ ವಂಶೋಜನಾದ ಚಿಕ್ಕೊಡೆಯರು ಬಂದು ಸ್ವಾಗತಿಸಿದರು ಎಂದಿದೆ.[12] ಈ ಉಲ್ಲೇಖವು ಆದಯ್ಯನ ನಂತರವೂ ಆತನ ವಂಶಜರು 'ಸಾಸಲು' ವಿನಲ್ಲಿಯೇ ಬದುಕಿದ್ದರು ಎಂಬ ಸಂಗತಿಯನ್ನು ಧ್ವನಿಸುತ್ತದೆ. ಮಹತ್ತರ ಸಂಗತಿ ಎಂದರೆ ಆದಯ್ಯನ ವಂಶಜರಿಗೆ ಸೌರಾಷ್ಟ್ರದ ಸೋಮೇಶನು ಮನೆದೇವರು ಆಗಿದ್ದಿತು ಎಂಬುದು 'ಶಿವರಾತ್ರಿಯೋಳು ಪೋಗಿ ಸೌರಾಷ್ಟ್ರಪತಿಯ ಪಾದವ ಕಂಡು ವರುಷಕ್ಕೊಮ್ಮೆ ಅವರು ಬರಲು . . . . . . '[13] ಎಂಬ ಹೇಳಿಕೆಯಿಂದ ವ್ಯಕ್ತಪಡುತ್ತದೆ. ಆದಯ್ಯನು ಸೌರಾಷ್ಟ್ರ ಸೋಮೇಶನನ್ನು ಸುರಹೊನ್ನೆ ಬಸದಿಯಲ್ಲಿ ಪ್ರತಿಷ್ಠಾಪಿಸಿ ಜಿನಾಲಯವನ್ನು ಶಿವಾಲಯವನ್ನಾಗಿ ಪರಿವರ್ತಿಸಿದ್ದರಿಂದ ವಂಶಜರಿಗೆ ಸೌರಾಷ್ಟ್ರ ಸೋಮನಾಥ ಒಂದು ರೀತಿಯಲ್ಲಿ ಮನೆದೇವರು ಎನಿಸಿರಬೇಕು. ವಿಶೇಷ ಸಂಗತಿ ಎಂದರೆ ಪುಲಿಗೆರೆಯ ಸೋಮೇಶ್ವರ ದೇವಾಲಯದ ದಕ್ಷಿಣ ಬಾಗಿಲ ಎಡಬದಿಯಲ್ಲಿ ಶಿಲ್ಪವೊಂದಿದ್ದು ಆ ಶಿಲ್ಪದಲ್ಲಿರುವ ವ್ಯಕ್ತಿಗಳ ಹೆಸರು ಶಿವರಾಮ ಒಡೆಯ, ಪೂಜಾರಿ ಚಿಕ್ಕಣ್ಣ ಎಂಬುದಾಗಿ ಅಲ್ಲಿಯ ಕ್ರಿ.ಶ. ೧೪ನೆಯ ಶತಮಾನಕ್ಕೆ ಸೇರಿದ ಶಾಸನದ ವಿವರದಿಂದ[14] ತಿಳಿದುಬರುತ್ತದೆ. ಶಿಲ್ಪದಲ್ಲಿ ಈ ಇಬ್ಬರು ವ್ಯಕ್ತಿಗಳ ಜೊತೆ ಸೋಮನಾಥ ದೇವರ ಚಿತ್ರವು ಇದೆ. ಶಿವರಾಮ ಒಡೆಯರು ಮತ್ತು ಚಿಕ್ಕಣರು ಬಹುಶ: ಆದಯ್ಯನ ವಂಶಜರೇ ಇರಬೇಕೆಂದು ಊಹಿಸಲು ಅವಕಾಶ ಇದೆ. ಈ ಮಿತವಾದ ಆಧಾರಗಳಿಂದ ಸಾಸಲು ಆದಯ್ಯನ ಜನ್ಮಸ್ಥಳ ವಾಗಿದ್ದಿರಬಹುದು ಎಂದೆನಿಸುತ್ತದೆ. ಈ ಹೇಳಿಕೆ ಸತ್ಯದ ಹತ್ತಿರದಲ್ಲಿದೆ. ಈ ಅಂಶವನ್ನು ಬೆಂಬಲಿಸುವ ಹೆಚ್ಚಿನ ಆಧಾರಗಳು ದೊರೆತರೆ 'ಸಾಸಲು' ಆದಯ್ಯನ ಜನ್ಮಸ್ಥಳ ಎಂದು ಸ್ವೀಕರಿಸ ಬಹುದಾಗಿದೆ.

O

---

10. ರಾಘವಾಂಕಚರಿತೆ [ಸಂ॥ ಸ.ಸ. ಮಾಳವಾಡ ] ಸಂ.೧೩ ಪ.ಸಂ.೨೨.೨೩.೪೨.೫೬.
11. ಆದಿಶೆಟ್ಟಿ ಪುರಾಣ [ಸಂ॥ ಬಿ.ಬಸವಾರಾಧ್ಯ] ಅಂಬಿಕಾ ಗ್ರಂಥ ಮಾಲೆ. ೧೯೧೦.
12. ಭೈರವೇಶ್ವರ ಕಾವ್ಯದ ಕಥಾಮಣಿ ಸೂತ್ರರತ್ನಾಕರ ಭಾಗ.೨ [ಸಂ॥ ಆರ್.ಸಿ.ಹಿರೇಮಠ. ಎಂ.ಎಸ್. ಸುಂಕಾಪುರ] ಪು.೬೯
13. ಅದೇ, ಪು.೭೧
14. South Indian Inscriptions Vol. No XX. No.೩೬೬. ಲಕ್ಷ್ಮೇಶ್ವರ.

ಪ್ರೊ॥ ರಾಜಶೇಖರ ಇಚ್ಚಂಗಿ *

# ಹಿಂದು-ಮುಸ್ಲಿಂ ಧರ್ಮಸಮನ್ವಯದ ಪ್ರತೀಕ: ಶಿರಹಟ್ಟಿಯ ಜಗದ್ಗುರು ಶ್ರೀ ಫಕೀರೇಶ್ವರರ ಸಂಸ್ಥಾನಮಠ.

ಕರ್ನಾಟಕದಲ್ಲಿ ಹಿಂದು-ಮುಸ್ಲಿಂ ಧರ್ಮಸಮನ್ವಯದ ಪ್ರತೀಕವಾಗಿ ಅನೇಕ ಸ್ಥಳಗಳುಂಟು. ಅವುಗಳಲ್ಲಿ ಪ್ರಮುಖವಾಗಿ ಸಾವಳಗಿಯ ಜಗದ್ಗುರು ಶ್ರೀ ಶಿವಲಿಂಗೇಶ್ವರ ಸಿದ್ಧಸಂಸ್ಥಾನಪೀಠ ಅಥಣಿಯ ಮೌನೇಶ್ವರರಮಠ. ಶಿಶುವಿನಾಳ ಶರೀಫ ಶಿವಯೋಗಿಗಳ ಗದ್ದುಗೆ, ಯಮನೂರು ಚಾಂಗದೇವರ ಮಠ, ಕೋಡೆಕಲ್ ಶ್ರೀ ಬಸವೇಶ್ವರರು ಹಾಗೂ ಗುಲಬುರ್ಗಾದ ಬಂದೇನವಾಜ, ಇಂತಹ ಇನ್ನೂ ಕೆಲವು ಶರಣರ ಜಾಗೃತ ಸ್ಥಳಗಳುಂಟು. ಅವುಗಳಲ್ಲಿ ಶಿರಹಟ್ಟಿಯ ಜಗದ್ಗುರು ಶ್ರೀ ಫಕೀರೇಶ್ವರ ಸಂಸ್ಥಾನ ಮಠವು ಒಂದು.

ಧಾರವಾಡ ಜಿಲ್ಲೆ ಶಿರಹಟ್ಟಿಯ ಶ್ರೀ ಜಗದ್ಗುರು ಫಕೀರೇಶ್ವರ ಅಥವಾ ಫಕೀರಸ್ವಾಮಿಯ ಮಠವು ಬಹು ಪ್ರಾಚೀನವಾಗಿದ್ದು. ಹಿಂದು-ಮುಸ್ಲಿಂ ಸಾಮರಸ್ಯದ ಪ್ರತೀಕವಾಗಿದೆ. ವಿವಿಧತೆಯಲ್ಲಿ ಏಕತೆಯನ್ನು ಸಾರುತ್ತ ಅದ್ಭುತ ಸೇವೆ ಗೈಯುತ್ತ ಬಂದಿದೆ. ಆ ಪರಂಪರೆ ಇಂದಿಗೂ ಮುಂದುವರೆದಿದೆ.

**ಹಿಂದು-ಮುಸ್ಲಿಂ ಸಮನ್ವಯ ಸಂಕೇತ:** ಫಕೀರೇಶ್ವರ ಅಥವಾ ಫಕೀರಸ್ವಾಮಿ ಎಂಬ ಹೆಸರೇ ಸೂಚಿಸುವಂತೆ ಫಕೀರ ಮುಸ್ಲಿಂಮರ ಹೆಸರನ್ನು ಸೂಚಿಸಿದರೆ, ಸ್ವಾಮಿ ಎಂಬುದು ಹಿಂದುಗಳ ಹೆಸರನ್ನು ಸೂಚಿಸುತ್ತದೆ. ಸುಕ್ಷೇತ್ರ ಶಿರಹಟ್ಟಿಯ ಫಕೀರೇಶ್ವರ ಮಠದ ವಾಸ್ತು ಶಿಲ್ಪವೂ ಹಿಂದು-ಮುಸ್ಲಿಂ ಸಮನ್ವಯದ ಪ್ರತೀಕವಾಗಿದೆ. ಒಂದು ಮಹಾದ್ವಾರ ಹಿಂದೂ ಕಲಾಕೃತಿಗಳಿಂದ ಕೂಡಿದ್ದರೆ, ಇನ್ನೊಂದು ಮಹಾದ್ವಾರ ಮಹಮ್ಮದೀಯರ ಕಲಾಕೃತಿಯನ್ನು ಒಳಗೊಂಡಿದೆ. ನಗಾರಿಖಾನೆಯು ಮುಸ್ಲಿಂ ವಾಸ್ತುಶಿಲ್ಪದಿಂದ ರಚನೆಯಾಗಿದೆ. ಇಲ್ಲಿ ನಗಾರಿ ತಾಳಕರಣಿ ಪಂಚವಾದ್ಯಗಳ ಸೇವೆ ದಿನಕ್ಕೆರಡುಬಾರಿ ನಡೆಯುತ್ತದೆ. ಒಂದೆಡೆ 'ಹರಹರ ಮಹಾದೇವ' ಎಂಬ ಮಂತ್ರಘೋಷ ಮೊಳಗಿದರೆ, ಇನ್ನೊಂದೆಡೆ . . . "ಫಕೀರೇಶ್ವರ ಕೀ ದೋಸ್ತರಾವೋ ಧೀನ" ಎಂಬ ಮಂತ್ರ ಘೋಷ ನಿನದಿಸುತ್ತಿದೆ. ಒಂದೆಡೆ ಅಗರಬತ್ತಿಗಳ ಸುವಾಸನೆ, ಮತ್ತೊಂದೆಡೆ ಊದಿನ ಪರಿಮಳ ಹೊಮ್ಮುತ್ತದೆ. ಒಂದೆಡೆ ಸಕ್ಕರೆಯನ್ನು ಓದಿಸಿದರೆ ಮತ್ತೊಂದೆಡೆ, ಕಾಯಿಕರ್ಪೂರಗಳ ಸುರಿಮಳೆ ಕಂಡು ಬರುತ್ತದೆ. ದಸರಾ ಉತ್ಸವದಲ್ಲಿ ಒಂಟೆ, ಆನೆಗಳು ಎರಡು ಇರಬೇಕು. ಒಂಟೆ ಮುಸ್ಲಿಂಮರ ಸಂಕೇತ, ಆನೆ ಹಿಂದುಗಳ ಸಂಕೇತ. ಧ್ವಜದಲ್ಲಿ 'ಹಸಿರು ಕೇಸರಿ' ಎರಡೂ ಬಣ್ಣಗಳು ಕಂಡು ಬರುತ್ತವೆ. ಹಸಿರು ಮುಸ್ಲಿಂಮರ ಸಂಕೇತ, ಕೇಸರಿ ಹಿಂದೂಗಳ ಸಂಕೇತ. ಕೇಸರಿ ತ್ಯಾಗದ ಸಂಕೇತವಾದರೆ ಹಸಿರು ಸಮೃದ್ಧಿಯ ಸಂಕೇತವೂ ಆಗಿದೆ. ನಿತ್ಯ ಕಾವಿಧರಿಸುವ ಜಗದ್ಗುರುಗಳು ಜಾತ್ರಾ ಮಹೋತ್ಸವಗಳಂಥ ವಿಶೇಷ ಸಂದರ್ಭದಲ್ಲಿ ಮುಸ್ಲಿಂ ಸಾಂಪ್ರದಾಯಿಕ ಹಸಿರು ರೇಷ್ಮೆ ಜರಿಯ ರಾಜ ಪೋಷಾಕಿನಲ್ಲಿ ದರ್ಶನ ನೀಡುವುದು ವಾಡಿಕೆ. ದಸರಾದಲ್ಲಿ ಲಕ್ಷ್ಮೇಶ್ವರದ ಜುಮ್ಮಾ ಮಸೂತಿಯ ಮುಂದೆ, ಶಿರಹಟ್ಟಿಯ ಗರಿಬನವಾಜಮಸೀದಿಯ ಮುಂದೆ ಡಂಕೆ ಇತ್ಯಾದಿ ವಾದ್ಯ ಬಾರಿಸುವರು. ಬನ್ನಿಮುಡಿಯುವಾಗ ಸಕಲ ವಾದ್ಯ ಬಾರಿಸುವದುಂಟು. ಫಕೀರಸ್ವಾಮಿಗೆ ಎಲ್ಲೆಡೆಗೂ ವಾದ್ಯ ಬಾರಿಸುವ ಹಕ್ಕಿದೆ. ಅದಕ್ಕೆಂದೆ ಫಕೀರಸ್ವಾಮಿಯು ಹಿಂದು ಮುಸ್ಲಿಂಮರ ಸಾಮರಸ್ಯದ ಗುರುವಾಗಿರುವನು.

ಸ್ವಾಮಿಗಳವರ ಪಟ್ಟಾಧಿಕಾರದಲ್ಲಿ ಮಹಮ್ಮದಿಯರ ಗುರು ಹಾಗೂ ವೀರಶೈವರ ಗುರುಗಳಿಂದ ವಿಧಿ ವಿಧಾನಗಳು

* ಕಲಾ ಹಾಗೂ ವಾಣಿಜ್ಯ ಮಹಾವಿದ್ಯಾಲಯ, ಹುಕ್ಕೇರಿ-೫೯೧೩೦೯, ಬೆಳಗಾವಿ ಜಿಲ್ಲೆ

ನಡೆಯುವವು. ಸ್ವಾಮಿಗಳು ಲಿಂಗೈಕ್ಯವಾದಾಗ ಮೊದಲು ಮುಸ್ಲಿಂ ಬಾಂಧವರು ಶವಸಂಸ್ಕಾರವನ್ನು ಮಾಡುವರು. ನಂತರ ಹಿಂದುಗಳು ಶವಸಂಸ್ಕಾರ ಮಾಡುವರು.

**ಪೂರ್ವೇತಿಹಾಸ:** ಕರ್ತೃ ಶ್ರೀ ಜಗದ್ಗುರು ಫಕೀರ ಮಹಾಸ್ವಾಮಿಗಳವರು ೧೬ನೆಯ ಶತಮಾನದಲ್ಲಿ ಈ ಸಂಸ್ಥಾನ ಮಠವನ್ನು ಸ್ಥಾಪಿಸಿದರು. ಬಿಜಾಪೂರದ ಶಿವಯ್ಯಗೌರಮ್ಮ ದಂಪತಿಗಳ ಗರ್ಭದಲ್ಲಿ ಖಾಜಾರ ವರದಿಂದ ಜನಿಸಿದರು.

ಹಿಂದು-ಮುಸ್ಲಿಂ, ಹೆಣ್ಣು-ಗಂಡು, ಅಗ್ರಜ-ಅಂತ್ಯಜ, ಹೀಗೆ ಯಾವೊಂದು ಲಿಂಗ, ಮತ, ಧರ್ಮಗಳ ಭೇದ ಭಾವ ವಿಲ್ಲದೆ, ಅಖಂಡ ಬಂಧು ಭಕ್ತಗಣವಾಗಿ, ಸ್ನೇಹಭಾವನೆ ಮೂಡಿಸಲೆಂದು ಬಂದ ಅವತಾರಪುರುಷರಿವರು. ಪೂಜ್ಯ ಖಾಜಾಅಮೀನವುದ್ಧೀನರು ಪಡೆದ ಪುತ್ರರಾಗಿ ದಿವ್ಯ ಆತ್ಮಜ್ಞಾನ ಸಂಪಾದನೆ ಮಾಡಿದರು. ಬಿಜಾಪೂರದ ಆದಿಲ ಶಾಹಿಯು ಫಕೀರೇಶ್ವರರ ಅದ್ಭುತ ಶಕ್ತಿಗೆ ಮಾರು ಹೋಗಿದ್ದರು. ಹಳ್ಳಿಯಿಂದ ದಿಲ್ಲಿಯವರೆಗೆ ಸಂಚರಿಸಿ ಧರ್ಮ ಪ್ರಚಾರಗೈದು ಮಾನವೀಯತೆಯನ್ನು ಜನತೆಯ ಹೃದಯದಲ್ಲಿ ಬಿತ್ತಿದರು.

ಚಿತ್ರದುರ್ಗದ ಮುರಘಾಮಠಕ್ಕೆ ಹೋಗಿ ಅನೇಕ ಲೀಲೆಗಳನ್ನು ತೋರಿಸಿದರು. ಅಲ್ಲಿಂದ ದಿಲ್ಲಿಯ ಅಕ್ಬರ ಬಾದಶಹನಿಗೆ, ಹೈದರಾಬಾದ ನಿಜಾಮನಿಗೆ(?)ಲಕ್ಷ್ಮೇಶ್ವರ ಅಂಕುಶಖಾನನಿಗೆ ಅನೇಕ ಲೀಲೆಗಳನ್ನು ತೋರಿಸಿ ಅವರ ಹೃದಯದಲ್ಲಿ ಭಕ್ತಿ ಭಾವುಕತೆಗಳನ್ನು ಹುಟ್ಟಿಸಿ, ಸಕಲ ಜೀವಗಳಲ್ಲಿ ಪ್ರೇಮಭಾವನೆ ಕಾಣುವಂತೆ ಮಾಡಿದರು. ಈ ರಾಜರುಗಳಿಂದ ರಣಬಿಲ್ಲೆ, ಶೈಲಸಿಕ್ಕಾ, ಕಠಾರಿ, ವಿಶೇಷ ಉಡುಗೆ ತೊಡಿಗೆ ಮುಂತಾದವುಗಳನ್ನು ಕಾಣಿಕೆಯಾಗಿ ಪಡೆದರು ಫಕೀರೇಶ್ವರರು ಯುದ್ಧಕ್ಕೆ ಹೋಗುವವರಲ್ಲ. ಇವರಿಗೆ ರಣಬಿಲ್ಲೆ ಕಾಣಿಕೆ ಏಕೆ? ಯೋಧನು ರಣರಂಗದಲ್ಲಿ ವೈರಿಯೊಡನೆ ಯುದ್ಧ ಮಾಡಿದರೆ, ಯೋಗಸಾಧಕನು ಅಂತ ರಂಗದ ರಣರಂಗದಲ್ಲಿ ಯುದ್ಧಕ್ಕೆ ತೊಡಗುವನು. ಅಂತ ರಂಗದ ಯುದ್ಧದಲ್ಲಿ ಫಕೀರೇಶ್ವರರು ವಿಜಯ ಶಾಲಿಗಳಾದ ಕಾರಣ ಬಾದುಷಹಾ ಅಕ್ಬರನು ಅವರಿಗೆ ರಣಬಿಲ್ಲೆಯನ್ನು ಕಾಣಿಕೆಯಾಗಿತ್ತನು. ಇದು ಬಂಗಾರದ ಆಭರಣವಾಗಿದೆ. ಯುದ್ಧಕ್ಕೆ ಹೋಗುವ ಶೂರನು ಎಡಪಾದದಲ್ಲಿ ಧರಿಸುವ ಒಡವೆ, ಯುದ್ಧದಲ್ಲಿ ಗೆಲ್ಲುವೆನೆಂಬ ಛಲದ ಸಂಕೇತ, ಫಕೀರೇಶ್ವರರು ಸಂಸ್ಥಾನ ಮಠದ ಪೀಠಾಧೀಶ್ವರರು ವಿಶೇಷ ಪ್ರಸಂಗಗಳಲ್ಲಿ ಈ ರಣಬಿಲ್ಲೆಯನ್ನು ಧರಿಸುವರು. ಶೈಲ-ಸಿಕ್ಕೆ ಇವೆರಡೂ ಅಣ್ಣಿಗೇರಿಯ ಸಿಕ್ಕೇ ದೇಸಾಯರ ಮನೆಯಲ್ಲಿರುತ್ತವೆ. ಪ್ರತಿದಿನ ಮೂರು ಹೊತ್ತು ಮಡಿಯಿಂದ ಇವುಗಳ ಪೂಜೆ ನಡೆಯುತ್ತಿದೆ. ಇವುಗಳ ಪೂಜೆ ಮಾಡುವದರಿಂದ ದೇಸಾಯಿ ಮನೆತನಕ್ಕೆ ಸಿಕ್ಕೆ ದೇಸಾಯಿ ಎಂದು ಹೆಸರು ಬಂದಿದೆ. ಶಿರಹಟ್ಟಿಯ ಮಠದ ಜಗದ್ಗುರುಗಳ ಲಿಂಗೈಕ್ಯರಾದಾಗ ಹೊಸ ಜಗದ್ಗುರುಗಳವರ ಕೊರಳಲ್ಲಿ ಈ ಶೈಲ ಸಿಕ್ಕೆಯನ್ನು ಹಾಕುವರು. ಶಿರಹಟ್ಟಿಯ ಮಠದ ನೂತನ ಜಗದ್ಗುರುಗಳೆಂದು ಸಿಕ್ಕೆಹಾಕಿದಂತೆ ಎಂದು ಜನರ ಭಾವನೆಯಿದೆ. ಶೈಲ ಎಂದರೆ ಮಠದ ಕೀರ್ತಿಯನ್ನು ಬೆಟ್ಟದಷ್ಟು ಎತ್ತರಕ್ಕೆ ಒಯ್ಯುವರೆಂದು ಅರಬ್ಬೀಲಿಪಿ ಈ ಸಿಕ್ಕಾದಲ್ಲಿದೆ.

ಈ ಮಠದ ಉಳಿದ ಪೀಠಾಧೀಶ್ವರರು ಸವಣೂರ ನವಾಬರಿಂದ ಮೈಸೂರ ದೊರೆಯಿಂದ ಭಕ್ತಜನ ಭಕ್ತಿಯ ಕಾಣಿಕೆಯೆಂದು ಶಿರಪೇಚು, ಪೋಚೆ, ರತ್ನದಹಾರ, ಆನೆ, ಒಂಟೆ, ಮೇಣೆ, ಇನ್ನಿತರ ಅನೇಕ ಬಿರುದಾವಳಿ ದಾನ ದತ್ತಿಗಳನ್ನು ಪಡೆದರು. ಉದಾಹರಣೆಗೆ ಐದನೆಯ ಪಟ್ಟದ ಎರಡನೆಯ ಶಿವಯೋಗಿ ಸ್ವಾಮಿಗಳಿಗೆ ಮೈಸೂರ ಮಹಾ ರಾಜರು ಬರೆಸಿ ಅರ್ಪಿಸಿದ ದಾನ ಪತ್ರವ ಗಮನಿಸಬಹುದು.

ಐದನೆಯ ಪಟ್ಟದ ಎರಡನೆಯ ಶಿವಯೋಗಿ ಸ್ವಾಮಿಗಳಿಗೆ ಮೈಸೂರ ಮಹಾರಾಜರು ಬರೆಸಿ ಅರ್ಪಿಸಿದ ದಾನ ಪತ್ರ:

| ಹಿಂದೂಸ್ತಾನಿಯಲ್ಲಿ ಮೊಹರು ಇರುತ್ತದೆ |
| --- |

ಶ್ಲೋಕ: ಶ್ರೀ ಕಂಠಾಚ್ಯುತ ಪದ್ಮಜಾದಿ ದಿವಿಷದ್ವಕ್ರೊದ್ಧ ತೇಜಃ ಛಟಂ
ಸಂಭೂತಾ ಮತಿಭೀಷಣ ಪ್ರಹರಣ ಮೊದ್ಭಾಸಿ ಬಾಹಾಷ್ಟಕಾಂ
ಗರ್ಜತ್ವೈರಿಥಧ್ವತ್ಯ ಪಾತಿಠಮಹಾ ಶೂತಾರತ್ರಿ
ಲೊಕೀಭಯ ಪ್ರೂನ್ಮಾಥವ್ರತದೀತ ದೀಕ್ಷಿತಾಂ ಭಗವತೀಂ
ಚಾಮುಂಡಿಕಾಂ ಭಾವಯೇ॥
ಸದಾಸಂಸಿದ್ಧೀನಾನ ನಿಖಿಲ ಜಗತಾಂ ಮೂಲಮನಘಂ
ಪ್ರಮಾಣಂ ಲೋಕಾನಂ ಪ್ರಣಯ ಪರಮ ಪ್ರಾಕೃತಗಿರಾಂ।
ಪರಂವಸ್ತು ಶ್ರೀ ಮತ್ಪರಮ ಕರುಣಾಸಾರಭರಿತಂ
ಪ್ರಮೋದಾನಸ್ಮಾಕಂ ದಿಶತು ಭವತಾಪ್ಯವಿಕಲಂ॥
ಹರೇರ್ಲಿಲಾವರಾಹಸ್ಯದಂಷ್ಟ್ರಾ ದಂಡೆಸ್ಸ ಪಾತುನಃ।
ಹೇಮಾದ್ರಿ ಕಲಶಾಯತ್ರ ಧಾತ್ರಿ ಛತ್ರಶ್ರೀಯಂ ದಧೌ॥

ಶ್ರೀ ಫಕೀರ ಚನ್ನವೀರಸ್ವಾಮಿ ನಿತ್ಯನಿರಂಜನ ನಿರಾಕಾರ ನಿಗಮ ಗೋಚರ ಸಚ್ಚಿದಾನಂದ ನಿತ್ಯಪರಿಪೂರ್ಣ ಅವಿರಳ ಪರಂಜ್ಯೋತಿ ಅಲ್ಲಮ ಮಹಾಪ್ರಭು ಆತ್ಮಾರಾಮ ಶಾಂಭವ ಲೋಕಕರ್ತೃ ಶಾಪದಪಿ [ಶರಾದ]ಪಿ. [ಶಾರದಾದೇ]ವಿ ಅಗಣಿತ ಗುಣಮಹಿಮ ಅನ್ನಧಾತೃ ಭಕ್ತವತ್ಸಲ ದತ್ತಾವಧೂತ

ದಿಗಂಬರ ಬಾದಷಾ [ಷ]ಹಾ ಅಭಿನವ ಸಿದ್ಧರಾಮ ಸ್ವಾಮಿಗಳವರ ಕರಕಮಲ ಸಂಜಾತರಾದ [ಶಿ [ರ.] ಪುರ] ಶಿ [ವ]ಪುರ ಶೂನ್ಯ ಸಿಂಹಾಸ[ದಾ] ನಾಧೀಶ್ವರರಾದ ಶ್ರೀ ಮದಭಿನದ ಶಿವಯೋಗಿಂದ್ರ ಸ್ವಾಮಿಗಳವರ ಚರಣ ಸನ್ನಿದಾನಂಗಳಿಗೆ.

ಸ್ವಸ್ತಿಶ್ರೀ ವಿಜಯಾಭ್ಯುದಯ ಶಾಲಿವಾಹನ ಶಕೆ ವರ್ಷಗಳು ೧೭೭೨ ಸಂದ ವರ್ತಮಾನವಾದ ಸಾಧಾರಣ ಸಂವತ್ಸರ ಮಾಘ ಶು॥ ೧ ಭಾನುವಾರದಲ್ಲು ಅತ್ರೇಯ ಸಗೋತ್ರ, ಅಶ್ವಲಾಯನ ಸೂತ್ರ ಋಕ್ ಶಾಖಾನು ವರ್ತಿಗಳಾದ ಇಮ್ಮಡಿ ಕೃಷ್ಣರಾಜ ಒಡೆಯರು ಅವರ ಪೌತ್ರರಾದ ಚಾಮರಾಜ ಒಡೆಯರವರ ಧರ್ಮಪತ್ನಿ ಕೆಂಪನಂಜಮ್ಮಾಂಬಾ ಗರ್ಭಸುಧಾಂಬುಧಿರಾಕಾರ ಸುಧಾಕರಾಯಮಾನರಾದ ಶ್ರೀ ಚಾಮುಂಡಾಂಬಿಕಾ ವರಪ್ರಸಾದೋದ್ಭವರಾದ ಶ್ರೀ ಮತ್ ಸಮಸ್ತ ಭೂಮಂಡಲ ಮಂಡಲನಾಯ [ಕ] ಮಾನನಿಖಿಲ ದೇಶಾವತಂಸ ಕರ್ನಾಟಕ ಜನಪದ ಸಂಪಧಿಷಾನಭೂತ ಶ್ರೀ. ಮನ್ಮಹಿಶೂರ ಮಹಾಸಂಸ್ಥಾನ ಮಧ್ಯ ದೇದಿಪ್ಯಮಾನ ವಿಕಲಕಲಾನಿಧಿ ಕುಲ ಕ್ರಮಾಗತ ರಾಜಕ್ಷಿತಿಪಾಲ ಪ್ರಮುಖ ನಿಖಿಲ ರಾಜಾಧಿರಾಜ ಮಹಾರಾಜ ಚಕ್ರವರ್ತಿ ಮಂಡಲಾನುಯಾತ ದಿವ್ಯರತ್ನ ಸಿಂಹಾಸನಾರೂಢ ಶ್ರೀ ಮದ್ರಾಜಾಧಿರಾಜ ರಾಜಪರಮೇಶ್ವರ ಪ್ರೌಢಪ್ರತಾಪ ಅಪ್ರತಿಮವೀರ ನರಪತಿ ಬಿರುದೆಂತೆಂಬರ ಗಂಡಲೋಕೈಕ ವೀರ ಯಕುಲ ಪಯಃ ಪಾರಾವಾರ ಕಳಾನಿಧಿ ಶಂಖ ಚಕ್ರಾಂಕುಶ [ಕುಂಠಾರ] ಕುಠಾರ ಮಕರ ಮತಸ್ಯ ಶರಭ [ಶಾಳ್ವ]ಸಾಳ್ವ ಗಂಡಭೇರುಂಡ ಧರಣೇವರಾಹ ಹನುಮದ್ಗರುಡ ಕಂಠೀರವಾದ್ಯನೇಕ ಬಿರುದಾಂಕೀತರಾದ [ಮಹೂರ] ಮಹಿಶೂರ ಪುರವರಾಧೀಶ ಶ್ರೀ ಕೃಷ್ಣರಾಜ ಒಡೆಯರವರು ಬರೆಸಿ ಒಪ್ಪಿಸಿದ ವರ್ಷಾಸನ ಶಾಸನ ಕ್ರಮವೆಂತೆಂದರೆ ಸ್ವಾಮಿಗಳನ್ನು ಶಿರಹಟ್ಟಿಗ್ರಾಮ ದಿಂದ ಮೈಸೂರಿಗೆ ಕರೆಸಿ ಅರ ಮನೆಯಲ್ಲಿ ಸ್ವಾಮಿಗಳು ಶಿವಪೂಜೆಮಾಡಿ ಶಿವಾರ್ಪಣವನ್ನು ಮಾಡಿದ ವೇಳೆಯಲ್ಲಿ ಜವಾಹಿರಪದಕ, ಜವಾಹಿರಬಿಲ್ಲೆ, ಬಾಬತು ಚಿನ್ನದ ಪಾದಾಭರಣ, ಗೌರೀ ಶಂಕರ ರುದ್ರಾಕ್ಷಿ ಕಂಠಮಾಲೆ, ಪಾಲಕಿ, ಛತ್ರಿ, ಕಲಾಬತು, ಬೀಸಣಿಗೆ, ಮೊಹರು ಚಾಲಜೊಡಿ, ಚೌರಿಜೋಡಿ, ಬೆಳ್ಳಿ ತಾರಕಕಷಿಕಲಸದ ಕುರ್ಚಿ ಆನೆ, ಕುದುರೆ ಖಿಲ್ಲತ್ತು ಸಹ ಒಪ್ಪಿಸಿ ಮೈಸೂರಲ್ಲಿ ಒಂದು ಮಠವನ್ನು ಕಟ್ಟಿಸಿ ಕೊಟ್ಟು [ಕಳುಹಿಸಿ] ಮಠವನ್ನು ತಮ್ಮ [ಹವಾಲು] ಅಹವಾಲು ಮಾಡಿಕೊಳ್ಳುವಂತೆ ಮಾಡಿಸಬೇಕು. ತಮ್ಮ ಇರುವುದರಿಂದ ಈ ಮಠ ಪೂರಾತಯಾರಾದಕೂಡಲೇ ತಮ್ಮ ಕಡೆಯವರನ್ನು ಮಠಕ್ಕೆ ಶಿವಯೋಗದ ಖರ್ಚಿನ ಬಗ್ಗೆ ಈ ಸಂಸ್ಥಾನದ ಧರ್ಮವಾಗಿ ವರ್ಷಂಪ್ರತಿ ಕುಂಪಿಣಿ [೧೨೦೦] ಸಾವಿರದ ಇನ್ನೂರು ರೂಪಾಯಿ ಕೊಡುವದಾಗಿ [ನಿಶ್ಚೈ] ನಿಶ್ಚೈಯಿಸಿ ಈಗ ಸಾವಿರದಾ ಇನ್ನೂರು ರೂಪಾಯಿ ಕೊಟ್ಟು ಇದೆ. ಮುಂದೆ ವರ್ಷಂಪ್ರತಿ ತಮ್ಮ ಮಠದಲ್ಲಿರುವ ಜನಗಳ ಮಾರೀಪತ್ತು ಅಪ್ಪಣೆ ಕೊಡಿಸುತ್ತಾ ಇದೆ. ಇದನ್ನು ವರ್ಷಂಪ್ರತಿ ಮಾಘ ಮಾಸದಲ್ಲಿ ತರಿಸಿಕೊಂಡು ನಮ್ಮ ಹೆಸರಿನಲ್ಲಿ ಈ ಧರ್ಮವನ್ನು ನಡೆಸುತ್ತಾ ಬಾಲಕನ ಮೇಲೆ ತಮ್ಮ ಆಶೀರ್ವಾದ ಕಟಾಕ್ಷವನ್ನು ಶಾಶ್ವತವಾಗಿ ಇರಿಸಬೇಕೆಂದು ಬರೆಸಿ ಒಪ್ಪಿಸಿದ ವರ್ಷಾಸನ ಶಾಸನ ಸಹಿ.

ಶ್ಲೋಕ :ಆದಿತ್ಯ ಚಂದ್ರಾವನಿಲೊನಶ್ಚ ದ್ಯೌರ್ಭೂಮಿ ರಾಪೊ
ಹೃದಯಂಯಮಶ್ಚ।
ಅಹಶ್ಚ ರಾತ್ರಿಶ್ಚ ಉಭೆಚ ಸಂಧ್ಯ ಧರ್ಮಶ್ಚಜಾನಾತಿನರಸ್ಯ
ದೃತ್ತಂ॥
ಸ್ವದತ್ತಾ ದ್ವಿಗುಣಂ ಪುಣ್ಯಂ ಪರದಾತ್ತಾನು ಪಾಲನಂ
ಪರದತ್ತಾಪಹಾರೇಣ ಸ್ವದತ್ತಂ ಇಷ್ಫಲಂ ಭವೇತ್॥
ಮದ್ವಂಶಜಾಃ ಪರಮಹೀಪತಿ ವಂಶಜಾವಾಯೇ
ಭೂಮಿಪಾಸ್ಸತತ ಮುಜ್ವಲ ಧರ್ಮಚಿತ್ತಾ।
ಮದ್ಧರ್ಮ ಮೇವ ಸತತಂ ಪರಿಪಾಲಯಂತಿತಸ್ಯಾದ
ಪದ್ಮ [ಯುಗಳಂ] ಯುಗಂಗಳಂ ಶಿರಸಾನಮಾಮಿ॥

೭ ತಾರೀಖು ೨ನೇ ಮಾಹೆ ಫೆಬ್ರುವರಿ ಸನ್ ೧೮೫೧ನೇ ಇಸವಿ [ಖತ್ತ] ಅರಮನೆ ಸುಬ್ಬರಾಯ ಗುರಿಕಾರ ಇಲಾಖೆ ಖಾಸ ಬೊಕ್ಕಸ ಹಣ(ರು)ವು ಸದರಿಲಿ ಮಾಹೆಕೊಡಿಸಿರುವ ಮೇರೆಗೆ ಶಿವಯೋಗದ ಧರ್ಮಕ್ಕೆ ಸಾಲಿಯಾನಾ ಸಾವಿರದಾ ಇನ್ನೂರು ಕುಂಪಿಣಿ ರೂಪಾಯಿಲಿ ಮಾಹೆ ಕೊಡಿಸುತ್ತಾ ಇದೆ. ಇದನ್ನು ಪರಿಗ್ರಹಿಸಿ ಬಾಲಕನ ಮೇಲೆ ಕೃಪಾದೃಷ್ಟಿಯಿಂದ ಶಿವ ಪೂಜಾ ಕಾಲದಲ್ಲಿ ಆಶೀರ್ವಾದ ಮಾಡುತ್ತಾ ಬರಬೇಕು.

ಇಂತಿ ಶರಣಾರ್ತಿ ರುಜು ಶ್ರೀ ಕೃಷ್ಣ

"ಶ್ರೀ ಚಾಮರಾಜೇಂದ್ರ ಮಹಿಪಾಲ ಧರ್ಮ ಪತ್ನಿ ಕೆಂಪನಂಜಂಮ್ಮಾಂಬಾ ಗರ್ಭಸುಧಾಬ್ಧಿ ರಾಕಾಸುಧಾಕರಾಯ ಮಾನ ಶ್ರೀ ಚಾಮುಂಡಿ ವರ ಪ್ರಸಾದೋದ್ಭವ ಶ್ರೀ ಮಹಿಸೂರ ಸಂಸ್ಥಾನ ಪುರವರಾಧೀಶರತ್ನ ಸಿಂಹಾಸನಾರೂಢ ಶ್ರೀ ಕೃಷ್ಣ ರಾಜೇಂದ್ರ ವಡೆಯರವರು".

[ಬಾಳಬಂಧು ಮೊಹರು ಇದೆ]

ಕರ್ನಾಟಕದಲ್ಲಿ ೪೩ಕ್ಕೂ ಹೆಚ್ಚು ಫಕೀರೇಶ್ವರ ಮಠಗಳು



ಹಸಿರು ಅರಿವೆಯಲ್ಲಿ ಸುತ್ತಿದ ನಿಜಾಮರು ಕೊಟ್ಟ ಕಠಾರಿ. ಪದಕದ ರುದ್ರಾಕ್ಷಿ ಸರ, ಗೌರಿಶಂಕರ ರುದ್ರಾಕ್ಷಿ, ಗೌರಿಶಂಕರ ರುದ್ರಾಕ್ಷಿ ಸರ, ಶಿರಪೇಚು, ೨ ಉಂಗುರ ಪೋಚೆ ಮೈಸೂರು ಮಹಾರಾಜರು ಕೊಟ್ಟವುಗಳು. ರಣಬಿಲ್ಲ-ಶೈಲ-ಸಿಕ್ಕ ಅಕಬರ ಬಾದಶಹ ಕೊಟ್ಟ ಆಭರಣಗಳು. ಶಿಲಮಣಿ-ವಿಶೇಷ ರೇಶಿಮೆ-ಜರಿ ಮಿಶ್ರಿತ ಮಹಮ್ಮದೀಯ ದ್ಯೋತರ ಉಡುಪುಗಳು.



ಶಿರಹಟ್ಟಿಯ ಶ್ರೀ ಜಗದ್ಗುರು ಫಕೀರೇಶ್ವರ ಸಂಸ್ಥಾನ ಮಠ

ಇವೆ. ಪ್ರತಿ ವರ್ಷ ಆಗಿಹುಣ್ಣಿಮೆಗೆ ಶಿರಹಟ್ಟಿಯ ಶ್ರೀ ಜಗದ್ಗುರು ಫಕೀರೇಶ್ವರ ಸಂಸ್ಥಾನಮಠದ ಜಾತ್ರೆ ಜರಗುವುದು. ಒಟ್ಟಿನಲ್ಲಿ ಶಿರಹಟ್ಟಿಯ ಶ್ರೀ ಜಗದ್ಗುರು ಫಕೀರೇಶ್ವರರು

"ಹರನ ಭಕ್ತರಿಗೆ ಹರನಾಗಿ
ಹರಿಯ ಭಕ್ತರಿಗೆ ಹರಿಯಾಗಿ
ಹಜರತನ ಭಕ್ತರಿಗೆ ಹಜರತನಾಗಿ
ಸಕಲರನು ಉದ್ಧರಿಸಿದಾ ತಂದೆ
ಮೂಲಕರ್ತೃ ಶ್ರೀ ಜಗದ್ಗುರು ಫಕೀರೇಶ್ವರರು."

ಈ ಲೋಕದಲ್ಲಿ ಅಜರಾಮರರಾಗಿ ನಿಂತಿದ್ದಾರೆ.

"ಅಲ್ಲಾ ಏಕಹೈ ನಾಮ ತೋ ಫರಕ ಹೈ.
ಸಬ್ ಕಾ ಮಾಲೀಕ್ ಏಕ ಹೈ
ಏಕಂಸತ್ ವಿಪ್ರಾ ಬಹುದಾ ವದಂತಿ"

ದೇವರು ಒಬ್ಬನೆ. ಆತನಿಗೆ ಹಲವು ಹೆಸರು ರೂ
ಕೊಟ್ಟವರು ನಾವು.

## ಆಕರ ಗ್ರಂಥಗಳು:


1. ಶ್ರೀ ಚನ್ನಕವಿ ವಿರಚಿತ ಫಕೀರೇಶ್ವರ ಪುರಾಣ.
2. ಹಾಲೇಶ ಮೇಟಿ ವಿರಚಿತ ಶ್ರೀ ಫಕೀರೇಶ್ವರ ಚರಿತ್ರೆ
3. ಶ್ರೀ ಫಕೀರ ಮಲ್ಲಿಕಾರ್ಜುನ ದೇವರು ವಿರಚಿತ, ಫಕೀರೇಶ್ವರ ಚರಿತ್ರೆ ಪ್ರ: ಶ್ರೀ ಫಕೀರೇಶ್ವರ ಶಿವಾನುಭವ ಸಮಿ
ಶಿರಹಟ್ಟಿ ೧೯೮೯.

ಬಿಂದಿಗಿ ರಾಜಶೇಖರ*

# ೀ ಕೃಷ್ಣ ದೇವರಾಯನ ದಿನಚರಿ ಮತ್ತು ರಾಯವಾಚಕಮು–ಒಂದು ಟಿಪ್ಪಣಿ

ಮಹಾಮಂಡಳೇಶ್ವರ ಕಾಶಿ ವಿಶ್ವನಾಥನ ಸ್ಥಾನಪತಿ ಂದ ರಚಿತವಾದ ತೆಲುಗು ಭಾಷೆಯಲ್ಲಿರುವ ರಾಯ ಚಕಮು ಕೃಷ್ಣದೇವರಾಯನ ಸಾಧನೆಗಳನ್ನು ತಿಳಿಯಲು ಖ್ಯವಾದ ಮೂಲಾಧಾರಗಳಲ್ಲಿ ಒಂದೆಂದು ಪರಿಗಣಿತ ಗಿದೆ. ರಾಯವಾಚಕಮು ಹದಿನಾರನೆಯ ಶತಮಾನದ ನೆಯಲ್ಲಿ ಅಸ್ತಿತ್ವಕ್ಕೆ ಬಂದ ಕೆಲವು ಪಟ್ಟಣಗಳನ್ನು ಸರಿಸುವುದರಿಂದ, ಈ ಗ್ರಂಥವು ಬಹುಶಃ ೧೫೯೨ ಮತ್ತು ೦೨ರ ಮಧ್ಯಭಾಗದಲ್ಲಿ ರಚಿಸಲಾಯಿತೆಂದು ಬಹುಜನ ದ್ವಾಂಸರ ಅಭಿಪ್ರಾಯವಾಗಿದೆ.

೧೯೮೩ರಲ್ಲಿ ಬೆಂಗಳೂರಿನ ಬಿ.ಎಂ.ಶ್ರೀ.ಸ್ಮಾರಕ ತಿಷ್ಠಾನದವರು ಶ್ರೀ ಕೃಷ್ಣ ದೇವರಾಯನ ದಿನಚರಿ (Diary Sri Krishnadevaraya) ಎಂಬ ತಾಳೆಗರಿಯ ಹಸ್ತಪ್ರತಿ ಯೊಂದನ್ನು ಪ್ರಕಟಿಸಿದರು. ಇದನ್ನು ಶ್ರೀ ಎಂ. ವಿ. ೀತಾರಾಮಯ್ಯನವರು ಸಂಪಾದಿಸಿದ್ದಾರೆ. ಹದಿನೇಳನೆಯ ತಮಾನದ ಈ ಹಸ್ತಪ್ರತಿ ೬೩ ಪುಟಗಳದ್ದಾಗಿದ್ದು ಇದನ್ನು ದಿನಾರನೆಯ ಶತಮಾನದ ಮೂಲ ಪ್ರತಿಯಿಂದ ಕಲುಮಾಡಲಾಗಿದೆ. ಹದಿನಾರನೆಯ ಶತಮಾನದಲ್ಲಿ ಈ ಮೂಲ ಶ್ರೀ ಕೃಷ್ಣದೇವರಾಯನ ದಿನಚರಿಯನ್ನು ರಚಿಸಿದವರು ಮುಕ್ಕುತಿಮ್ಮಯ್ಯ ಮತ್ತು ಮಾದಯ್ಯನವರ ಮಲ್ಲಯ್ಯ ಎಂಬ ಕೃಷ್ಣ ದೇವರಾಯನ ಆಸ್ಥಾನಕವಿಗಳು. ಈ ದಿನಚರಿ ನ್ನಡ ಭಾಷೆಯ ಆಡುನುಡಿಯಲ್ಲಿದೆ.

ಈ ದಿನಚರಿ ಕೃಷ್ಣದೇವರಾಯನ ಚರಿತ್ರೆಗೆ ಒಂದು ಮುಖ್ಯವಾದ ಮೂಲಾಧಾರಗ್ರಂಥವಾಗಿದೆ. ಈ ದಿನಚರಿಯೇ ಮುಂದೆ ತೆಲುಗು ಭಾಷೆಯಲ್ಲಿ ರಾಯವಾಚಕಮು ಎಂದು ಅಕ್ಷರಶಃ ಭಾಷಾಂತರಗೊಂಡಿತು. ಈ ಭಾಷಾಂತರ ಮಾಡುವಾಗ ಕಾಶಿವಿಶ್ವನಾಥನಯ್ಯನ ಸ್ಥಾನಪತಿಯು ಅನೇಕ ವಿಷಯಗಳನ್ನು ಅದರಲ್ಲಿ ಸೇರಿಸಿರುವುದು ಕಂಡು ಬರುತ್ತದೆ. ಕನ್ನಡದ ದಿನಚರಿ ಮತ್ತು ತೆಲುಗಿನ ರಾಯವಾಚಕಮುಗಳನ್ನು ಹೋಲಿಸಿ ನೋಡಿದಾಗ, ದಿನಚರಿಯಿಂದ ಭಾಷಾಂತರ ಮಾಡುವಾಗ ಸ್ಥಾನಪತಿಯು ಹೊಸದಾಗಿ ಸೇರಿಸಿದ ವಾಕ್ಯಗಳನ್ನು ಮತ್ತು ಇತರ ಭಾಗಗಳನ್ನು ಗುರುತಿಸಲು ಸಾಧ್ಯವಿದೆ. ಈ ರೀತಿ ಹೊಸ ವಿಷಯಗಳನ್ನು–ವ್ಯಕ್ತಿಗಳ ಮತ್ತು ಸ್ಥಳಗಳ ಹೆಸರುಗಳನ್ನು ಒಳಗೊಂಡಂತೆ–ಸೇರಿಸುವ ಸ್ಥಾನಪತಿಯು ಮೂಲಕೃತಿ ರಚಿತವಾದ ಸಂದರ್ಭದಲ್ಲಿ ಅವು ಇದ್ದವೇ ಇಲ್ಲವೇ ಎಂಬುದರ ಬಗೆಗೆ ಆಲೋಚಿಸಿಲ್ಲ. ಕನ್ನಡದ ಮೂಲ ದಿನಚರಿ ಸಹಾಯದಿಂದ ಅಂತಹ ಸೇರ್ಪಡೆಗಳನ್ನು ಗುರುತಿಸಲು ಸಾಧ್ಯವಿದೆ. ಅದರಂತೆ ರಾಯವಾಚಕಮುನಲ್ಲಿ ಅಪೂರ್ಣವಾಗಿರುವ ಅಥವಾ ಬಿಟ್ಟು ಹೋಗಿರುವ ಭಾಗವನ್ನು ತುಂಬಿಕೊಳ್ಳಲು ಕೂಡ ದಿನಚರಿ ಉಪಯುಕ್ತವಾಗಿದೆ.

ರಾಯವಾಚಕಮುನ ಪ್ರಾರಂಭ ಭಾಗದಲ್ಲಿ ಮಹಾಮಂಡಳೇಶ್ವರ ಶ್ರೀ ಕಾಶಿವಿಶ್ವನಾಥನಯ್ಯನ ಸ್ಥಾನಪತಿಯ ಉಲ್ಲೇಖವಿದೆ. ಎನ್. ವೆಂಕಟರಮಣಯ್ಯ ಮತ್ತು ಸಿ. ವಿ. ರಾಮಚಂದ್ರರಾವು ಇವರು ರಾಯವಾಚಕಮುವಿನ ರಚನಾ ಕಾಲ ಮತ್ತು ಕಾಶಿವಿಶ್ವನಾಥನಯ್ಯನ ಕಾಲದ ಬಗೆಗೆ ಚರ್ಚಿಸಿದ್ದಾರೆ. ರಾಮಚಂದ್ರರಾವು ಅವರು ಕಾಶಿ ವಿಶ್ವನಾಥನಯ್ಯನು ಮಧುರೆಯ ಎರಡನೇ ಕೃಷ್ಣಪ್ಪನಾಯಕನ ಸಹೋದರ ವೀಸಪ್ಪನೆಂದು ಪ್ರತಿಪಾದಿಸಿದ್ದಾರೆ. ಇಲ್ಲಿ ಗಮನಿಸ ಬೇಕಾದ ಅಂಶವೆಂದರೆ ಕನ್ನಡ ದಿನಚರಿಯಲ್ಲಿ ಸ್ಥಾನಪತಿ

* ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ವಿಭಾಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ-೫೮೦೦೦೩

ಮತ್ತು ಕಾಶಿವಿಶ್ವನಾಥನಯ್ಯನ ಉಲ್ಲೇಖವೇ ಇಲ್ಲ. ಇದೊಂದು ಮಹತ್ವದ ಅಂಶವಾಗಿದ್ದು, ರಾಯವಾಚಕಮು ಸ್ಥಾನಪತಿಯ ಮೂಲ ರಚನೆಯಾಗಿರದೆ, ಅದು ಮೂಲ ಕನ್ನಡ ದಿನಚರಿಯ ಭಾಷಾಂತರವಾಗಿದ್ದು, ಈ ಕಾರ್ಯವನ್ನು ಕಾಶಿವಿಶ್ವನಾಥನಯ್ಯನ ಆಸ್ಥಾನದಲ್ಲಿ ಮಾಡಲಾಯಿತು ಮತ್ತು ಹೀಗೆ ಭಾಷಾಂತರವಾದ ಈ ಕೃತಿಯನ್ನು ರಾಯವಾಚಕಮು ಎಂದು ಕರೆದಿರುವುದು ಸ್ಪಷ್ಟವಾಗುತ್ತದೆ. ಆದರೆ ಸ್ಥಾನಪತಿಯು ತಾನು ಕನ್ನಡ ಕೃತಿ ದಿನಚರಿಯನ್ನು ಉಪಯೋಗಿಸಿದಂತೆ ಎಲ್ಲಿಯೂ ಹೇಳಿಲ್ಲ.

ಈ ಎರಡೂ ಕೃತಿಗಳನ್ನು ಪರಿಶೀಲಿಸಿ ನೋಡಿದಾಗ ಕೆಲವು ವ್ಯತ್ಯಾಸಗಳು ಕಂಡು ಬರುತ್ತವೆ. ಅವುಗಳಲ್ಲಿ ಕೆಲವನ್ನು ಮಾತ್ರ ಇಲ್ಲಿ ಸೂಚಿಸಲಾಗಿದೆ.

೧. ರಾಯವಾಚಕಮು ವೀರನರಸಿಂಹನೇ ಸ್ವತಃ ಕೃಷ್ಣದೇವರಾಯನ ಪಟ್ಟಾಭಿಷೇಕವನ್ನು ನೆರವೇರಿಸಿದನೆಂದು ತಿಳಿಸುತ್ತದೆ. ಇದು ಯಾವ ತರಹದ ಪಟ್ಟಾಭಿಷೇಕ ಎನ್ನುವ ಸಂಶಯಕ್ಕೆ ಎಡೆಮಾಡುತ್ತದೆ. ಇದಕ್ಕೆ ಉತ್ತರ ದಿನಚರಿಯಲ್ಲಿದೆ. ದಿನಚರಿಯು ವೀರನರಸಿಂಹನು ಕೃಷ್ಣ ದೇವರಾಯನ ಯುವರಾಜ ಪಟ್ಟಾಭಿಷೇಕವನ್ನು ನೇರವೇರಿಸಿದನೆಂದು ನಿಶ್ಚಿತವಾಗಿ ತಿಳಿಸುತ್ತದೆ. ರಾಯ ವಾಚಕಮು ''ಯುವರಾಜ'' ಎನ್ನುವ ಶಬ್ದವನ್ನು ಉಲ್ಲೇಖಿಸುವುದಿಲ್ಲ. ಕನ್ನಡದ ದಿನಚರಿಯಿಂದ ತಿಳಿಯುವ ಒಂದು ಮುಖ್ಯ ಅಂಶವೆಂದರೆ, ಕೃಷ್ಣದೇವರಾಯನು ವೀರನರಸಿಂಹನ ಕಾಲದಲ್ಲಿಯೇ ಆಡಳಿತದಲ್ಲಿ ಸಕ್ರಿಯ ಪಾತ್ರವಹಿಸಿದ್ದನೆಂದು ತಿಳಿದು ಬರುತ್ತದೆ.

೨. ರಾಯವಾಚಕಮು ಹಾಗೂ ದಿನಚರಿಗಳಲ್ಲಿ ಕೃಷ್ಣದೇವರಾಯನ ಗೂಢಚಾರಿಗಳು ಯಾವ ಯಾವ ಪ್ರದೇಶಗಳಲ್ಲಿ, ಊರುಗಳಲ್ಲಿ ಕಾರ್ಯನಿರ್ವಹಿಸುತ್ತಿದ್ದರೆಂದು ತಿಳಿಸುತ್ತವೆ. ಉದಾಹರಣೆಗೆ ಕೃಷ್ಣದೇವರಾಯನ ಗೂಢಚಾರಿಗಳು ಚೋಳದೇಶ, ಮಲೆಯಾಳ ಮತ್ತು ತುಳುವ ಪ್ರದೇಶಗಳು ಹಾಗೂ ಚೆನ್ನಪಟ್ಟಣ, ಗೋಲಕೊಂಡ, ಬೀದರ, ಅಹಮ್ಮದನಗರ, ರಾಜಮಹೇಂದ್ರಿ, ಇಕ್ಕೇರಿ, ಶ್ರೀರಂಗಪಟ್ಟಣ, ಉಮ್ಮತ್ತೂರು, ಶಿವನಸಮುದ್ರ, ಪೆನುಗೊಂಡ, ಕಾಂಚಿ, ಚಂದ್ರಗಿರಿ, ತಿರುಪತಿ, ಗಂಡಿಕೋಟೆ, ಗುತ್ತಿ, ನಂದ್ಯಾಲ, ರಾಯಚೂರು, ಮುದಗಲ್‌ಗಳಲ್ಲಿ, ಸಂಚರಿಸುತ್ತಿದ್ದರೆಂದು ತಿಳಿಸುತ್ತದೆ. ಆದರೆ ರಾಯವಾಚಕಮು, ದಿನಚರಿಯಲ್ಲಿ ಹೆಸರಿಸಿರುವ ಇಕ್ಕೇರಿ, ತಿರುಪತಿ, ಗುತ್ತಿ, ಚೋಳದೇಶ ಮತ್ತು ತುಳುವ ಪ್ರದೇಶಗಳನ್ನು ಉಲ್ಲೇಖಿಸಿಲ್ಲ. ರಾಯವಾಚಕಮು ದಿನಚರಿಯಲ್ಲಿ ಹೆಸರಿಸದ ಅನೇಕ ಊರುಗಳನ್ನು, ಪ್ರದೇಶಗಳನ್ನು ಉಲ್ಲೇಖಿಸುತ್ತದೆ. ಉದಾಹರಣೆಗೆ ಶ್ರೀರಂಗಂ, ಮಧುರೈ, ರಾಮೇಶ್ವರಂ, ಗುರ್ರಮಕೊಂಡ, ಮೈಸೂರು, ನಿಡುಗಲ್, ಕಡಪ, ಬೆಲ್ಲಮಕೊಂಡ, ದೆಹಲಿ, ವಿರಾಟಪುರಂ, ಕೊಂಕಣ, ವಿರಾಟದೇಶಂ, ಮಗಧದೇಶಂ, ವಿದರ್ಭದೇಶಂ, ಕಾಂಭೋಜನಗರ, ಕಾಶ್ಮೀರ ಮತ್ತು ಮತ್ಸ್ಯದೇಶ.

೩. ಈ ಎರಡೂ ಕೃತಿಗಳು ಕೃಷ್ಣ ದೇವರಾಯನು ಸೈನ್ಯಾಡಳಿತಹಾಗೂ ಆನೆ, ಕುದುರೆದಳ ಬಗೆಗೆ ಅಧಿಕಾರಿಗಳೊಂದಿಗೆ ಸಮಾಲೋಚನೆ ನಡೆಸಿದುದನ್ನು ತಿಳಿಸುತ್ತವೆ. ಇಂತಹವರಲ್ಲಿ ಗನ್ನೆತಿಮ್ಮನಾಯಕ, ಪೆಮ್ಮಸಾನಿ ರಾಮಲಿಂಗನಾಯಕ, ಬೇಡರ ರಾಮಪ್ಪ ಮುಂತಾದವರನ್ನು ಎರಡೂ ಕೃತಿಗಳು ಹೆಸರಿಸುತ್ತವೆ. ಆದರೆ ದಿನಚರಿಯು ಹೆಸರಿಸುವ ಅನೇಕ ಅಧಿಕಾರಿಗಳು ರಾಯವಾಚಕಮುದಲ್ಲಿ ಉಲ್ಲೇಖಿತಗೊಂಡಿಲ್ಲ. ಉದಾಹರಣೆಗಾಗಿ ಶಂಕರನಾಯಕ, ಹಂಡೆದೇವಣ್ಣ, ಗುಜ್ಜರಿ ಬಸವಂತರಾವು, ನಂಜಪ್ಪ, ಕುಮಾರ ತಿಮ್ಮಪ್ಪ, ಪ್ರಧಾನಿತಿಪ್ಪರಸ ಮತ್ತು ಅಪ್ಪನಾಯಕ. ರಾಯವಾಚಕಮು, ದಿನಚರಿಯಲ್ಲಿ ಹೆಸರಿಸದ ಅನೇಕ ಅಧಿಕಾರಿಗಳನ್ನು ಉಲ್ಲೇಖಿಸುತ್ತದೆ. ಇವರಾರೆಂದರೆ ರಾಚೂರಿ ರಾಮನಾಯುಡು, ಹಂಡೆ ಮಲ್ಲಾರಾವು, ಅಕ್ಕಪ್ಪನಾಯುಡು, ಕೃಷ್ಣಪ್ಪನಾಯುಡು, ಮಟ್ಲ ಅನಂತರಾಜು, ಸಾಳುವ ಮಾಕರಾಜು, ಕನ್ನಡ ಬಸವಪ್ಪನಾಯುಡು, ಮತ್ತು ವೇಲುಗೋಟಿಯಾಚಮನಾಯುಡು. ಜೊತೆಗೆ ರಾಯವಾಚಕಮು ಕೆಲವು ರೆಡ್ಡಿ ಅಧಿಕಾರಿಗಳನ್ನು ಕೂಡ ಹೆಸರಿಸುತ್ತದೆ. ಉದಾಹರಣೆಗೆ ; ಬೊಮ್ಮಿರೆಡ್ಡಿ, ಬಸವಾರೆಡ್ಡಿ ಮತ್ತು ನಾಗರೆಡ್ಡಿ. ರಾಯವಾಚಕಮುದಲ್ಲಿ ಹೆಸರಿಸಿರುವ ಆದರೆ ದಿನಚರಿಯಲ್ಲಿಲ್ಲದ ಕೆಲವ್ಯಕ್ತಿಗಳು ಕೃಷ್ಣದೇವರಾಯನ ಸಮಕಾಲೀನರಲ್ಲವೆಂಬುದನ್ನು ಇಲ್ಲಿ ಗಮನಿಸಬೇಕು. ಇವರಲ್ಲಿ ಕೆಲವರು:

ಅ) ಮಟ್ಲ ಅನಂತರಾಜು : ಇವನು ಎಲ್ಲಮ ರಾಜನ ಮಗ. ಇವನೊಬ್ಬ ಸೈನ್ಯಾಧಿಕಾರಿ ಹಾಗೂ ಹೆಸರಾಂತ ತೆಲುಗು ಕವಿ. ಕ್ರಿ.ಶ. ೧೬೦೫ರ ಸಿದ್ಧವಟಂ ಶಾಸನದಲ್ಲಿ ಮಟ್ಲ ಅನಂತರಾಜುವನ್ನು ಕರ್ನಾಟಚಕ್ರವರ್ತಿ ಎರಡನೆಯ

ಂಕಟಪತಿಯ (೧೫೮೬-೧೬೧೪) ಬಲಗೈ ಬಂಟನೆಂದು, ಕುಸ್ವವಿಜಯಮು ಮತ್ತು ಇತರ ಕೃತಿಗಳ ಕರ್ತೃವೆಂದು, ರಾಚಬೆಬ್ಬುಲಿ'' ಎಂಬ ಬಿರು ದಾಂಕಿತನೆಂದು, ಮ್ಮಲಮಡುಗು ಕಾಳಗದಲ್ಲಿ ಅಪ್ರತಿಮ ಶೌರ್ಯ ಪ್ರದರ್ಶಿಸಿದವನೆಂದು ಹಾಗೂ ಸಿದ್ಧವಟರಿ ಪಟ್ಟಣದ ಸುತ್ತಲೂ ಕೋಟೆಯೊಂದನ್ನು ನಿರ್ಮಿಸಿದವನೆಂದು ತಿಳಿಸುತ್ತದೆ. ಇದರಿಂದ ಮಟ್ಲ ಅನಂತರಾಜು ಕೃಷ್ಣದೇವರಾಯನ ಕಾಲದಲ್ಲಿರಲಿಲ್ಲವೆಂಬುದು ಸ್ಪಷ್ಟವಾಗುತ್ತದೆ.

ಬ) **ಸಾಳುವ ಮಾಕರಾಜು :** ಸಾಳುವ ತಿಮ್ಮ ರಾಜನ ಪುತ್ರ, ಸಾಳುವ ಮಾಕರಾಜು, ಎರಡನೆಯ ವೆಂಕಟಪತಿ (೧೫೮೬-೧೬೧೪) ಮತ್ತು ಎರಡನೆಯ ಶ್ರೀರಂಗನ (೧೬೧೪-೧೬೧೯) ಸಮಕಾಲೀನರು. ಗೊಬ್ಬೂರಿ ಜಗ್ಗರಾಜನ ಪಕ್ಷವಹಿಸಿ ಎರಡನೇ ವೆಂಕಟಪತಿಯ ವಿರುದ್ಧ ತೊಪ್ಪುರು ಕದನದಲ್ಲಿ ಭಾಗವಹಿಸಿದ ಸೈನ್ಯಾಧಿಕಾರಿ. ಇವನೂ ಸಹ ಕೃಷ್ಣದೇವರಾಯನ ಸಮಕಾಲೀನನಲ್ಲ.

೪. ಎರಡೂ ಕೃತಿಗಳಲ್ಲಿ ಸಾಮ್ರಾಜ್ಯದ ಕಂದಾಯ ಪದ್ಧತಿಗೆ ಸಂಬಂಧಿಸಿದಂತೆ ಕೋಟೆಗಳ ಉಲ್ಲೇಖವಿದೆ. ಇಲ್ಲಿಯೂ ಅನೇಕ ವ್ಯತ್ಯಾಸಗಳನ್ನು ಗಮನಿಸಬಹುದು. ಈ ಎರಡೂ ಕೃತಿಗಳಲ್ಲಿ ರಾಯದುರ್ಗ, ಆದವಾನಿ, ಗುತ್ತಿ, ಗಂಡಿಕೋಟೆ, ಚಂದ್ರಗಿರಿ, ಪೆನುಗೊಂಡ ಮುಂತಾದ ಕೋಟೆಗಳನ್ನು ಹೆಸರಿಸಲಾಗಿದೆ. ಆದರೆ ದಿನಚರಿಯಲ್ಲಿ ರಾಯವಾಚಕಮುನಲ್ಲಿಲ್ಲದ ಕಾಂಚಿ, ತಿರುಚಿನಾಪಲ್ಲಿ, ಪಡ್ಡೈವೀಡು ಮತ್ತು ಶಿವನಸಮುದ್ರಗಳ ಉಲ್ಲೇಖವಿದೆ. ದಿನಚರಿಯಲ್ಲಿಲ್ಲದ ಪಾಲಯಂಕೋಟ, ಕುನ್ನತ್ತೂರು ಮತ್ತು ಮಧರೈಗಳು ರಾಯವಾಚಕಮುನಲ್ಲಿ ಹೆಸರಿಸಲ್ಪಟ್ಟಿವೆ.

೫. ಈ ಕೃತಿಗಳಲ್ಲಿ ಕೃಷ್ಣದೇವರಾಯನ ಕಲಿಂಗ ದಿಗ್ವಿಜಯದ ವಿವರಗಳಿದ್ದು ರಾಯನಿಗೂ ಗಜಪತಿಗೂ ಒಪ್ಪಂದವೇರ್ಪಟ್ಟ ವಿಷಯದ ಬಗೆಗೆ ಕೂಡ ಮಾಹಿತಿ ಇದೆ. ದಿನಚರಿಯಲ್ಲಿ ಕೃಷ್ಣದೇವರಾಯನು ಗಜಪತಿಯ ಮಗಳನ್ನು ಮದುವೆಯಾದ ವಿಷಯವಿದೆ. ರಾಯವಾಚಕಮು ನಲ್ಲಿ ಈ ಗಜಪತಿ ರಾಜಕುಮಾರಿಯನ್ನು ಮೋಹಿನಿ ಎಂದು ಕರೆಯಲಾಗಿದೆ.

೬. ಈ ಎರಡೂ ಕೃತಿಗಳು, ರಾಯನು ಕಲುಬರಿಗೆಯ ವಿಜಯದ ಅನಂತರ ತಿರುಪತಿಯ ವೆಂಕಟೇಶ್ವರನ ದರ್ಶನ ಗೈದು, ದೇವಾಲಯಕ್ಕೆ ಕಾಣಿಕೆಗಳನ್ನಿತ್ತ ವಿವರಗಳನ್ನು ನೀಡುತ್ತವೆ. ರಾಯವಾಚಕಮುದಲ್ಲಿ ಈ ವಿವರಗಳ ಜೊತೆಗೆ, ದಿನಚರಿಯಲ್ಲಿಲ್ಲದ ಕೆಲವಿಷಯಗಳಿವೆ. ದಿನಚರಿ ಕೇವಲ ರಾಯನು ವೆಂಕಟೇಶ್ವರನ ದರ್ಶನಗೈದು ಕಾಣಿಕೆಯನ್ನರ್ಪಿಸಿದ ವಿಷಯ ತಿಳಿಸಿದರೆ, ರಾಯವಾಚಕಮು ರಾಯನು ಈ ಸಂದರ್ಭದಲ್ಲಿ ತನ್ನ ಹಾಗೂ ತನ್ನ ರಾಣಿಯರಾದ ತಿರುಮಲಾದೇವಿ ಮತ್ತು ಚಿನ್ನಾದೇವಿಯರ ಕಂಚಿನ ಪ್ರತಿಮೆಗಳನ್ನು ದೇವಾಲಯದಲ್ಲಿ ಪ್ರತಿಷ್ಠೆ ಮಾಡಿದನೆಂದು ತಿಳಿಸುತ್ತದೆ. ಇದು ದಿನಚರಿ ರಚಿತವಾದ ಅನಂತರ ಮತ್ತೊಂದು ಸಂದರ್ಭದಲ್ಲಿ ರಾಯನು ತಿರುಪತಿಗೆ ಹೋದಾಗ ಈ ಪ್ರತಿಮೆಗಳನ್ನು ದೇವಾಲಯದಲ್ಲಿ ನಿಲ್ಲಿಸಿದನೆಂದು ಖಚಿತವಾಗುತ್ತದೆ.

೭. ರಾಯವಾಚಕಮುನಲ್ಲಿ ಭಾಗ್ಯನಗರದ ಉಲ್ಲೇಖ ವಿದೆ. ದಿನಚರಿಯಲ್ಲಿ ಭಾಗ್ಯನಗರದ ಉಲ್ಲೇಖವಿಲ್ಲ. ಭಾಗ್ಯನಗರ ನಮಗೆಲ್ಲರಿಗೂ ತಿಳಿದಿರುವಂತೆ ಕ್ರಿ. ಶ. ೧೫೯೧ರಲ್ಲಿ ಮೊಹಮ್ಮದ್ ಕುಲಿ ಕುತುಬ್ ಷಹನ ಕಾಲದಲ್ಲಿ ಅಸ್ತಿತ್ವಕ್ಕೆ ಬಂದಿತು. ಕೃಷ್ಣದೇವರಾಯನ ಕಾಲದಲ್ಲಿ ಭಾಗ್ಯನಗರ ಅಂದರೆ ಈಗಿನ ಹೈದರಾಬಾದ ಅಸ್ತಿತ್ವದಲ್ಲಿರಲಿಲ್ಲ. ಈ ಸಂಗತಿ ರಾಯವಾಚಕಮು ಕ್ರಿ. ಶ. ೧೫೯೧ರ ಅನಂತರ ರಚಿತವಾದ ಕೃತಿಯಾಗಿದ್ದುದನ್ನೂ ಖಚಿತ ಪಡಿಸುತ್ತದೆ. ಮತ್ತು ಸ್ಥಾನಪತಿಯು ಕನ್ನಡದಲ್ಲಿರುವ ದಿನಚರಿಯನ್ನು ತೆಲುಗಿಗೆ ಭಾಷಾಂತರಿಸುವಾಗ ಅನೇಕ ಹೊಸ ಅಂಶಗಳನ್ನು ಸೇರಿಸುವ ಜೊತೆಗೆ ಕೆಲ ಅಂಶಗಳನ್ನು ಕೈಬಿಟ್ಟಿರುವುದು ಕಂಡುಬರುತ್ತದೆ.

೮. ರಾಯವಾಚಕಮುದ ಕೊನೇಭಾಗದಲ್ಲಿ, ರಾಯನು ಅಲ್ಲಸಾನಿ ಪೆದ್ದನ್ನ ಮತ್ತು ಮುಕ್ಕು ತಿಮ್ಮನ್ನರನ್ನು, ಮನು ಚರಿತ ಮತ್ತು ಪಾರಿಜಾತಾಪಹರಣಂ ಕಾವ್ಯಗಳನ್ನು ರಚಿಸುವಂತೆ ನಿರ್ದೇಶಿಸಿದನೆಂದು ಬರುತ್ತದೆ. ದಿನಚರಿಯಲ್ಲಿ ಕೇವಲ ಮುಕ್ಕು ತಿಮ್ಮನ್ನ ಮತ್ತು ಮಾದಯ್ಯಗಾರಿ ಮಲ್ಲನ್ನ ರನ್ನು ಹೆಸರಿಸಲಾಗಿದೆ. ಇದರಲ್ಲಿ ಅಲ್ಲಸಾನಿ ಪೆದ್ದನ್ನನ ಹೆಸರು ಬರುವುದಿಲ್ಲ. ಹೀಗಾಗಿ ದಿನಚರಿಯನ್ನು ರಚಿಸಿದ ಅನಂತರ ಮನುಚರಿತ ಮತ್ತು ಪಾರಿಜಾತಾಪಹರಣಂ ಕಾವ್ಯಗಳು ರಚನೆಗೊಂಡಿರಬೇಕೆಂಬ ಅಂಶ ಬೆಳಕಿಗೆ ಬರುತ್ತದೆ.

ಕೊನೆಯಲ್ಲಿ ಇಷ್ಟನ್ನು ಹೇಳಬಹುದು: ರಾಯ ವಾಚಕಮು ಮತ್ತು ಶ್ರೀ ಕೃಷ್ಣದೇವರಾಯನ ದಿನಚರಿಗಳ ಕೂಲಂಕಷ ಅಧ್ಯಯನದ ಅವಶ್ಯಕತೆ ಇದೆ. ಇಂತಹ

ಅಧ್ಯಯನದಿಂದ ರಾಯವಾಚಕಮುನಲ್ಲಿರುವ ಅನೇಕ ದೋಷಗಳನ್ನು ಸರಿಪಡಿಸಲು ಸಾಧ್ಯವಿದೆ. ಹಾಗೆಯೇ ರಾಯವಾಚಕಮು ಎಷ್ಟೋ ಪ್ರಕ್ಷಿಪ್ತ ವಿಷಯಗಳನ್ನು ಒಳಗೊಂಡಿದ್ದರೂ, ದಿನಚರಿಯಲ್ಲಿ ಅಸಮರ್ಪಕ ಓದಿನಿಂದಾಗಿ ಬಿಟ್ಟು ಹೋಗಿರುವ ಇಲ್ಲವೇ ತಪ್ಪಾ ಓದಲಾಗಿರುವ ಅಂಶಗಳನ್ನು ಸರಿಪಡಿಸಿಕೊಳ್ಳಲ ಸಹಾಯಕವಾಗಿದೆ ಎಂಬುದನ್ನು ಮರೆಯಲಾಗದು.

## ಗ್ರಂಥ ಋಣ


1. ರಾಯವಾಚಕಮು, ಡಾ॥ ಸಿ. ವಿ. ರಾಮಚಂದ್ರರಾವು (ಸಂಪಾದಕರು) ಹೈದರಾಬಾದ, ೧೯೮೨.
2. ಶ್ರೀ ಕೃಷ್ಣದೇವರಾಯನ ದಿನಚರಿ, ಪ್ರೊಫೆಸರ್ ಎಂ. ವಿ. ಸೀತಾರಾಮಯ್ಯ (ಸಂಪಾದಕರು), ಬೆಂಗಳೂರು, ೧೯೮೩.
3. ಸಿ. ವಿ. ರಾಮಚಂದ್ರರಾವು, ''ರಾಮವಾಚಕಮು, ಇಟ್ಸ್ ಡೇಟ್ ಅಂಡ್ ಹಿಸ್ಟಾರಿಸಿಟಿ''. ಗಿರಿಧರಶ್ರೀ-ಎಸ್ಸೆಸ್ ಆನ ಇಂಡಾಲಜಿ (ಡಾ॥ ಜಿ. ಎಸ್. ದೀಕ್ಷಿತ ಸಂಭಾವನಾ ಗ್ರಂಥ), ದೇಹಲಿ, ೧೯೮೭.

ಡಾ|| ರಾಧಾ ಕೃಷ್ಣಮೂರ್ತಿ *

# ಸೇವಂತಿಕಾಪರಿಣಯ -ಕೆಳದಿ ಇತಿಹಾಸದ ಆಕರ ಗ್ರಂಥ

'ಸೇವಂತಿಕಾ ಪರಿಣಯ' ಐದು ಅಂಕಗಳನ್ನು ಒಳಗೊಂಡ ಸಂಸ್ಕೃತದ ಒಂದು ನಾಟಕ. ಕರ್ನಾಟಕದ ಕೆಳದಿಯ ರಾಣಿ ಚೆನ್ನಮ್ಮ ಧೈರ್ಯ-ಸ್ಥೈರ್ಯ, ಸಾಹಸಗಳಿಗೆ ಹೆಸರಾಗಿದ್ದಳು. ತನ್ನ ರಕ್ಷಣೆ ಬಯಸಿ ಬಂದ ಶಿವಾಜಿಯ ಪುತ್ರ, ರಾಜಕುಮಾರ ರಾಜಾರಾಮ್ ಮತ್ತು ಔರಂಗಜೇಬ್ ಹಾಗೂ ಅವನ ಸೈನಿಕರ ನಡುವೆ ನಡೆದ ಕಾಳಗದಲ್ಲಿ ರಾಣಿ ಚೆನ್ನಮ್ಮ ತೋರಿಸಿದ ಧೈರ್ಯ, ಸಾಹಸ ಎಂದೆಂದಿಗೂ ಅವಿಸ್ಮರಣೀಯ ಹಾಗೂ ಅಭಿನಂದನೀಯ. ಇಂತಹ ಚೆನ್ನಮ್ಮನ ದತ್ತುಪುತ್ರ ಬಸವಭೂಪಾಲ. ಕೇರಳದ ರಾಜ ಕುಮಾರಿ ಸೇವಂತಿಕಾ ಹಾಗೂ ವಿದ್ಯಾಸಂಪನ್ನನಾದ ಕೆಳದಿಯ ರಾಜ ಕುಮಾರ ಬಸವ ಭೂಪಾಲರ ಪ್ರೇಮ ಕಥೆ ಮತ್ತು ಅವರ ಕಲ್ಯಾಣ ಈ ನಾಟಕದ ಕಥಾವಸ್ತು.

ಬಸವ ಭೂಪಾಲ (ಕ್ರಿ.ಶ.೧೬೯೪-೧೭೧೪)ನ ಆಸ್ಥಾನದಲ್ಲಿ ಚೊಕ್ಕನಾಥನೆಂಬ ಕವಿ ಸೇವಂತಿಕಾ ಪರಿಣಯ ನಾಟಕವನ್ನು ಬರೆದರು. ಈ ನಾಟಕದ ಒಂದು ವಿಶೇಷವೆಂದರೆ, ಇದು ಉಡುಪಿಯ ಬಳಿ ಇರುವ ಸುಬ್ರಹ್ಮಣ್ಯ ಕ್ಷೇತ್ರದಲ್ಲಿ ಸುಬ್ರಹ್ಮಣ್ಯ ಸ್ವಾಮಿಯ ಸನ್ನಿಧಿಯಲ್ಲಿ ಅಭಿನಯಿಸಲ್ಪಟ್ಟಿತು. ಆ ಸಮಯದಲ್ಲಿ ಭಾರತದ ಮೂಲೆ ಮೂಲೆಗಳಿಂದ ಪಂಡಿತರು, ಜ್ಞಾನಿಗಳು, ಯಾತ್ರಿಕರು, ಮಹಾಪುರುಷರು ಹಾಗೂ ವೀರನಾರಿಯರು ಬಂದು ಸೇರಿದ್ದರು. ವಿದ್ವಜ್ಜನ ಗೋಷ್ಠಿಯೇ ಸೇರಿತು. ಈ ನಾಟಕದ ನಾಯಕ-ನಾಯಕಿಯರು ಉಪಸ್ಥಿತರಿದ್ದರು.

ಸೇವಂತಿಕಾ ಪರಿಣಯ ನಾಟಕದ ಕರ್ತೃ ಚೊಕ್ಕನಾಥ ಮಖಿ ಮಹಾ ಪಂಡಿತರಾಗಿದ್ದರು. ಮತ್ತು ದಕ್ಷಿಣ ಭಾರತದ ಕುಂಭಕೋಣದ ಸಮೀಪವಿರುವ ತಿರುವಿಷಲೂರಿನ ವಾಸಿಯಾಗಿದ್ದರು. ತಂಜಾಊರಿನ ಷಹಜೀ ಮಹಾರಾಜರ ಸಮಕಾಲೀನರಾಗಿದ್ದರು ಮತ್ತು ಅವರ ಆಶ್ರಯದಲ್ಲಿದ್ದರು. ಷಹಜೀ ( ಕ್ರಿ.ಶ. ೧೬೮೪-೧೭೧೦) ಅನೇಕ ವಿಷಯಗಳಲ್ಲಿ ಜ್ಞಾನ ಪಡೆದಿದ್ದರು. ಕವಿಗಳು ಹಾಗೂ ಕಲಾವಿದರಿಗೆ ಆಶ್ರಯ ನೀಡಿದ್ದರು. ತಮ್ಮ ಆಸ್ಥಾನದಲ್ಲಿ ಅನೇಕ ಕವಿಗಳನ್ನು ಸನ್ಮಾನಿಸಿದ್ದರು. ಚೊಕ್ಕನಾಥ ಮಖಿಯೂ ಸಹ ಷಹಜಿಯವರಿಂದ ಸನ್ಮಾನಿತನಾಗಿದ್ದನು. ಈ ಕವಿ ''ಕಾಂತಿಮತಿ ಪರಿಣಯ' ವೆಂಬ ನಾಟಕವನ್ನು ಬರೆದಿದ್ದನು. ಷಹಜಿ ಹಾಗೂ ಕಾಂತಿ ಮತಿಯವರ ಪ್ರೇಮಕಥೆ ಹಾಗೂ ಅವರಿಬ್ಬರ ಕಲ್ಯಾಣ ಈ ನಾಟಕದ ಕಥಾವಸ್ತು. ಇದೇ ಕವಿ ಬಸವರಾಜರ ಸಮಯದಲ್ಲಿ ಕರ್ನಾಟಕಕ್ಕೆ ಭೇಟಿ ನೀಡಿದ್ದರು. ಆಗ ಸೇವಂತಿಕಾ ಪರಿಣಯವನ್ನು ಬರೆದರು.

ಭಾರದ್ವಾಜ ಗೋತ್ರದ ಮಹಾ ಪಂಡಿತ ತಿಪ್ಪಾಧ್ವರಿಗೆ ಆರು ಜನ ಗಂಡುಮಕ್ಕಳು. ಅವರಲ್ಲಿ ಐದನೆಯವರೇ ಚೊಕ್ಕನಾಥ ಕವಿ. ಈ ಕವಿಯ ತಾಯಿ ನರಸಾಂಬಿಕೆ, ಧರ್ಮ ಶ್ರದ್ಧೆಯುಳ್ಳ ಕುಲೀನ ಮನೆತನದ ಹೆಣ್ಣು. ಕಾಂತಿಮತಿ ಪರಿಣಯದ ಸೂತ್ರಧಾರ ಹಾಗೂ ಪರಿಪಾರ್ಶ್ವಕರ ಸಂಭಾಷಣೆಯಿಂದ ಈ ವಿಷಯ ನಮಗೆ ತಿಳಿದು ಬರುತ್ತದೆ. ಸೇವಂತಿಕಾ ಪರಿಣಯದ ಪ್ರಸ್ತಾವನೆಯಲ್ಲಿ ಕವಿ ತಮ್ಮ ತಂದೆ ಹಾಗೂ ಸಹೋದರರ ವಿಷಯವನ್ನು ತಿಳಿಸಿದ್ದಾರೆ. ಅವರ ಹಿರಿಯ ಅಣ್ಣ ಮಹಾ ಕಲಾವಿದ. 'ಸಕಲ ಕಲಾ ವಲ್ಲಭ' ಎಂದು ಪ್ರಸಿದ್ಧರಾಗಿದ್ದರು. ಎರಡನೆಯ ಅಣ್ಣ ಒಳ್ಳೆಯ ವಾಕ್ಪಟು. 'ವಾದಿ ಕೇಸರಿ' ಎಂದು ಹೆಸರು

* 'ಶುಭೋದಯ', ೩೮, ೧೧ನೇ ಮುಖ್ಯರಸ್ತೆ, ಮಲ್ಲೇಶ್ವರ ಪಶ್ಚಿಮ, ಬೆಂಗಳೂರು - ೫೬೦ ೦೫೫.

ಪಡೆದಿದ್ದರು. ಮೂರನೆಯ ಅಣ್ಣ ಸ್ವಾಮಿಶಾಸ್ತ್ರಿ ಮತ್ತು ನಾಲ್ಕನೆಯ ಅಣ್ಣ ಸೀತಾರಾಮಶಾಸ್ತ್ರಿ ಹಾಗೂ ತಮ್ಮ ಯಜ್ಞೇಶ್ವರ ಬೃಹಸ್ಪತಿಯನ್ನೇ ಮೀರಿಸುವಂಥ ಜಾಣರಾಗಿದ್ದರು. ಆರೂ ಜನ ಅಣ್ಣತಮ್ಮಂದಿರು ಮಹಾ ಪಂಡಿತರಾಗಿ ಖ್ಯಾತಿ ಗೌರವಗಳನ್ನು ಪಡೆದಿದ್ದರು.

ಸೇವಂತಿಕಾ ಪರಿಣಯದ ಕರ್ತೃ ಚೊಕ್ಕನಾಥ ಕವಿ ಹಾಗೂ ಬಹಳ ಹಿಂದೆ ಇದ್ದ ಚೊಕ್ಕನಾಥ ಮಖಿ ಇಬ್ಬರೂ ಬೇರೆ ಬೇರೆ. ಚೊಕ್ಕನಾಥ ಮಖಿ ಮಹಾ ಪಂಡಿತನಾಗಿದ್ದುದಲ್ಲದೆ, ಶಬ್ದ ಕೌಮುದಿಯಂತಹ ಅನೇಕ ಗ್ರಂಥಗಳನ್ನು ಬರೆದಿದ್ದರು. ಮತ್ತು ಸುವಿಖ್ಯಾತ ರಾಮಭದ್ರ ದೀಕ್ಷಿತರ ಗುರುವಾಗಿದ್ದರು. ಶಿಷ್ಯ ರಾಮಭದ್ರ ದೀಕ್ಷಿತರೂ ಸಹ ''ಷಡ್‌ದರ್ಶಿನಿ ಸಾರ ಸಂಗ್ರಹ'' ದಂತಹ ಗ್ರಂಥಗಳ ಕರ್ತೃವಾಗಿದ್ದರು. ಸೇವಂತಿಕಾ ಪರಿಣಯದ ಕರ್ತೃ, ತಂಜಾಊರಿನ ಷಹಜೀಯವರ ಆಸ್ಥಾನದಲ್ಲಿ ಕೆಲಕಾಲ ಇದ್ದರು. ಅದೇ ಸಮಯದಲ್ಲಿ ಷಹಜೀಯವರ ಕಲ್ಯಾಣಕ್ಕೆ ಸಂಬಂಧಪಟ್ಟ ಐತಿಹಾಸಿಕ ನಾಟಕ ಕಾಂತಿಮತಿ ಪರಿಣಯ ಮತ್ತು ರಾಸವಿಲಾಸದ ತುಲನೆ ಮಾಡಿದ್ದರು.

ಚೊಕ್ಕಣ್ಣ ಕವಿ ಸುಮಾರು ಕ್ರಿ.ಶ ೧೭೦೦ರಲ್ಲಿ ಕೆಳದಿ ಬಸವರಾಜರ ಆಸ್ಥಾನಕ್ಕೆ ಭೇಟಿನೀಡಿದ್ದರು. ಆಗ ಈ ಕವಿ ಆ ರಾಜನಿಂದ ಬಹಳ ಪ್ರಭಾವಿತರಾಗಿದ್ದರು. ಆ ರಾಜ ನಾದರೋ ನಾಟಕದಲ್ಲಿ 'ಧೀರೋದಾತ್ತನಾಯಕ'' ನೆಂದು ವರ್ಣಿಸಲ್ಪಟ್ಟನು. ಕಾಂತಿಮತಿ ಪರಿಣಯ ನಾಟಕ ಬರೆದ ಅನುಭವದಿಂದ ಹಾಗೂ ಬಸವರಾಜನ ಉದಾತ್ತಗುಣಗಳ ಸ್ಫೂರ್ತಿಯಿಂದ ಕವಿ ಸಂಸ್ಕೃತದಲ್ಲಿ ''ಸೇವಂತಿಕಾ ಕಾಪರಿಣಯ'' ಎಂಬ ಮತ್ತೊಂದು ಸುಂದರ ನಾಟಕ ಬರೆದರು. ಪ್ರಾಚೀನ ಕವಿಗಳಾದ ಕಾಳಿದಾಸ ಮತ್ತು ಭವಭೂತಿಯು ತಮ್ಮ ತಮ್ಮ ನಾಟಕಗಳಲ್ಲಿ ನಾಯಕನನ್ನು ವರ್ಣಿಸಿರುವಂತೆ ಈ ನಾಟಕದಲ್ಲಿಯೂ ಸಹ ರಾಜ ಬಸವರಾಜನಿಗೆ ಮನ್ನಣೆ ಕೊಟ್ಟು ಆತನನ್ನು ನಾಯಕನಂತೆ ವರ್ಣಿಸಿದ್ದಾರೆ.

ಕಾಳಿದಾಸ ಮುಂತಾದ ಕವಿಗಳ ಪರಂಪರೆಯನ್ನು ಅನುಸರಿಸಿ ''ಸೇವಂತಿಕಾ ಪರಿಣಯ'' ರಚಿಸಲ್ಪಟ್ಟಿದೆ. ಈ ನಾಟಕ ನಾಂದಿಶ್ಲೋಕ ದೊಂದಿಗೆ ಪ್ರಾರಂಭವಾಗುತ್ತದೆ. ತದನಂತರ ಸೂತ್ರಧಾರ, ವಿದೂಷಕ ಹಾಗೂ ಆತನ ಸಹಾಯಕನ ಮಧ್ಯೆ ಸಂಭಾಷಣೆಗಳಿವೆ. ಪ್ರಸ್ತಾವನೆ ಅಥವಾ ಪೀಠಿಕಾ ಭಾಷಣದಲ್ಲಿ ನಾಟಕದ ರಚನೆಕಾರನ ಪರಿಚಯ ಪ್ರೇಕ್ಷಕರಿಗೆ ಮಾಡಿಸಲಾಗುತ್ತದೆ. ಪೀಠಿಕಾ ರೂಪದ ಈ ದೃಶ್ಯ ಆ ಕಾಲದ ಸಾಮಾಜಿಕ ಹಾಗೂ ಸಾಂಸ್ಕೃತಿಕ ಸ್ಥಿತಿಗತಿಗಳ ಮೇಲೆ, ಪವಿತ್ರ ಯಾತ್ರಾಕ್ಷೇತ್ರ ವಾದ ಸುಬ್ರಹ್ಮಣ್ಯದ ಮೇಲೆ ಹಾಗೂ ನಾಯಕ ಬಸವರಾಜನ ಉದಾತ್ತಗುಣಗಳ ಮೇಲೆ, ಹೀಗೆ ಇನ್ನೂ ಅನೇಕ ವಿಷಯಗಳ ಮೇಲೆ ಬೆಳಕನ್ನು ಚೆಲ್ಲುತ್ತದೆ.

ಈ ನಾಟಕದ ೫ ಅಂಕಗಳ ಸಾರಾಂಶ ಕೆಳಕಂಡಂತೆ ಇವೆ:

ಭೀಕರ ಕಾಳಗದಲ್ಲಿ ಕೇರಳದ ರಾಜ ಮಿತ್ರವರ್ಮನು ಗೋದವರ್ಮನಿಂದ ಸೋಲಿಸಲ್ಪಟ್ಟನು ಮತ್ತು ಸೆರೆಹಿಡಿಯಲ್ಪಟ್ಟನು. ಆತನ ಪತ್ನಿ ಹಾಗೂ ಮಗಳು ಸೇವಂತಿಕಾ ಬಂಧು ಬಾಂಧವರೊಂದಿಗೆ ಮತ್ತು ಸೇವಕರೊಂದಿಗೆ ಕೆಳದಿಯಿಂದ ಅಷ್ಟೇನು ದೂರವಲ್ಲದ ಮೂಕಾಂಬಿಕಾ ಕ್ಷೇತ್ರ (ಕೊಲ್ಲೂರು) ದಲ್ಲಿ ಆಶ್ರಯ ಪಡೆದರು. ಈ ವಿಷಯವನ್ನು ಅರಿತ ಕೆಳದಿಯರಾಜ ಬಸವರಾಜ, ಮಿತ್ರವರ್ಮನ ಕುಟುಂಬದವರು ನೆಮ್ಮದಿಯಿಂದಿರುವಂತೆ ಹೊಸ ಭವ್ಯಭವನ ಮುಂತಾದ ಅನುಕೂಲಗಳನ್ನು ಮಾಡಿಕೊಟ್ಟನು. ಒಮ್ಮೆ ಮೂಕಾಂಬಿಕಾ ರಥೋತ್ಸವದಂದು ಪವಿತ್ರಕ್ಷೇತ್ರಕ್ಕೆ ಭೇಟಿ ನೀಡಿ ಬಸವರಾಜ ಈ ಕುಟುಂಬದವರೊಂದಿಗಿದ್ದನು. ಒಂದು ದಿನ ಬಸವರಾಜ ಆನೆಸವಾರಿ ಮಾಡುತ್ತಿದ್ದಾಗ ತನ್ನ ಭವನದ ಮಾಳಿಗೇ ಮೇಲೆ ನಿಂತಿದ್ದ ಕೇರಳದ ರಾಜಕುಮಾರಿ ಸೇವಂತಿಕೆಯ ಸೌಂದರ್ಯಕ್ಕೆ ಮರುಳಾದನು. ಆ ಸುಂದರ ಕನ್ಯೆಯ ಪ್ರೇಮಪಾಶದಿಂದ ಬಂಧಿಸಲ್ಪಟ್ಟನು. ಆಕೆಯ ಅದ್ವಿತೀಯ ಸೌಂದರ್ಯವನ್ನು ತನ್ನ ವಿದೂಷಕ ಕೌಶಿಕನೆದುರು ವರ್ಣಿಸುತ್ತಿದ್ದಾಗ ಅದನ್ನು ಅಕಸ್ಮಾತ್ ಕೇಳಿಸಿಕೊಂಡ ಆತನ ರಾಣಿಯು ಸಂದೇಹಗೊಂಡಳು. ಆದರೂ ವಿದೂಷಕ ಆಕೆಯನ್ನು ಸಮಾಧಾನಪಡಿಸಿದನು.

ಸೇವಂತಿಕಾ ಸಹ ಬಸವರಾಜನನ್ನು ಕಂಡು ಮೋಹಗೊಂಡಳು, ಮತ್ತು ಆತನನ್ನೇ ಮದುವೆಯಾಗಬೇಕೆಂದು ನಿಶ್ಚಯಿಸಿಕೊಂಡಳು. ತನ್ನ ಅಭೀಷ್ಟಸಿದ್ಧಿಗಾಗಿ ಕಾಡಿನ ಮಧ್ಯದಲ್ಲಿದ್ದ ಕಾಳಿಮಾತೆಯ ಗುಡಿಗೆ ನಡೆದುಹೋಗಿ ಪ್ರತಿನಿತ್ಯವೂ ಪ್ರಾರ್ಥನೆ ಸಲ್ಲಿಸಿ ಆರಾಧಿಸಲಾರಂಭಿಸಿದಳು. ಒಂದು ದಿನ ಪೂಜಿಸಿ ತನ್ನ ಗೆಳತಿಯರೊಂದಿಗೆ ಹಿಂತಿರುಗಿ ಬರುತ್ತಿದ್ದಾಗ ಗೋದವರ್ಮನ ಪ್ರೇರಣೆಯಿಂದ ಬೇಟೆಗಾರನ ನಾಯಕನೊಬ್ಬನು (ನಿಷಾದೇಶ:) ತನ್ನ ಬೃಹತ್ ಸೇನೆ

ಯೊಂದಿಗೆ ಆಕೆಯನ್ನು ಅಪಹರಿಸಿಕೊಂಡು ಹೋದನು. ಕಾಳಿ ದೇವಸ್ಥಾನದ ಪೂಜಾರಿಯಿಂದ ಈ ವಿಷಯವನ್ನು ತಿಳಿದ ಬಸವರಾಜನು ಬಿಚ್ಚುಗತ್ತಿ ಹಿಡಿದು ಬೇಟೆಗಾರನ ಸೈನಿಕರನ್ನು ಬೆಂಬಾಲಿಸಿ ಎಲ್ಲರನ್ನೂ ಸೋಲಿಸಿ ಸೇವಂತಿಕಾಳನ್ನು ಹಿಂತಿರುಗಿ ಕರೆತಂದನು. ಇದಾದ ಮೇಲೆ ತೋಟದಲ್ಲಿ ತನ್ನ ಸ್ನೇಹಿತ ಕೌಶಿಕನೊಂದಿಗೆ ಕುಳಿತಿದ್ದಾಗ ಸೇನಾಧಿಪತಿಯು, ಹಿಂದೆ ತನ್ನ ವಿಶೇಷವಾದ ಮೂಲಿಕೆಯ ಪ್ರಭಾವದಿಂದ ಅಂತರ್ಧಾನನಾಗಿದ್ದ ಬೇಟೆಗಾರನ ಮುಖಂಡನನ್ನು ಹಗ್ಗದಿಂದ ಕಟ್ಟಿ ಕರೆತಂದನು. ಅವನಿಂದ ಬಸವರಾಜನು ಕೆಳಕಂಡ ವಿಷಯಗಳನ್ನು ಸಂಗ್ರಹಿಸಿದನು. ಅವೇನೆಂದರೆ, ಗೋದವರ್ಮನು ಸೇವಂತಿಕಾಳಿಂದ ತಿರಸ್ಕೃತನಾದಾಗ ಮಿತ್ರ ವರ್ಮನ ಭರ್ತ್ಸನೆಗೆ ಒಳಗಾದನು. ಇದರಿಂದ ಕುಪಿತಗೊಂಡ ಗೋದವರ್ಮನು ಬೇಟೆಗಾರರ ಮುಖಂಡನಿಗೆ ಹಣದಾಸೆ ತೋರಿಸಿ ಸೇವಂತಿಕಾಳನ್ನು ಅಪಹರಿಸಲು ಪ್ರೇರೇಪಿಸಿದನು.

ಈ ಘಟನೆಯ ನಂತರ ರಾಜ ಜ್ಯೋತಿಷಿ ಮಹಾಮತಿ ಬಂದು ಮಿತ್ರನ ಭವಿಷ್ಯ ಸೂಚಿಸಿದರು. ಮಿತ್ರವರ್ಮನು ತಾನೇ ಬಂದು ಸೇವಂತಿಕಾಳನ್ನು ವರಿಸಲು ಬಸವ ಭೂಪಾಲನನ್ನು ಕೇಳುವನು, ಎಂದು ತಿಳಿಸಿದರು. ಮತ್ತು ಈ ಭವಿಷ್ಯವಾಣಿಯನ್ನು ಬರೆದು ಆ ಪತ್ರವನ್ನು ವಿದೂಷಕನಿಗೆ ಕೊಟ್ಟರು.

ಈ ಘಟನೆಯಾದ ನಂತರ ರಾಜನ ಮನಸ್ಸು ಸೇವಂತಿ ಕಾಳಲ್ಲಿ ನೆಟ್ಟಿತು. ಬೇಟೆಯ ನೆಪ ಮಾಡಿಕೊಂಡು ಕಾಡಿಗೆ ಹೊರಟನು. ಅಲ್ಲಿ ಕಾಳಿಗುಡಿಗೆ ಹೋಗಿ, ತನ್ನ ಲಗ್ನ ಸೇವಂತಿಕಾಳೊಂದಿಗೆ ನೆರವೇರಿಸಿಕೊಡಬೇಕೆಂದು ಕಾಳಿ ದೇವಿಯಲ್ಲಿ ಪ್ರಾರ್ಥಿಸುತ್ತಿದ್ದನು. ಸೇವಂತಿಕಾಳು ತಾನು ಕಂಡ ಕನಸನ್ನು ತನ್ನ ಗೆಳತಿಗೆ ಹೇಳುತ್ತಿದ್ದುದನ್ನು ಕೇಳಿಸಿಕೊಂಡ ವಿದೂಷಕನು ರಾಜನಿಗೆ ವಿಷಯವನ್ನು ತಿಳಿಸಿದನು. ಅವಳೂ ಸಹ ತನ್ನನ್ನು ಬಯಸುತ್ತಿರಬಹುದೆಂದು ರಾಜನು ಊಹಿಸಿ ಆಕೆಯನ್ನು ಹುಡುಕುತ್ತಾ ಹೊರಟನು. ಮಾರ್ಗದಲ್ಲಿ ಆಕೆಯನ್ನು ಕಂಡನು. ಅವರಿಬ್ಬರೂ ತಮ್ಮ ತಮ್ಮ ಪ್ರೀತಿಯ ವಿನಿಮಯ ಮಾಡಿಕೊಂಡರು. ಈ ಮಧ್ಯೆ ಮಿತ್ರವರ್ಮನಿಂದ ರಾಜನಿಗೆ ಒಂದು ಪತ್ರ ಬಂದಿತು. ಆ ಪತ್ರದವಿಷಯ ಹೀಗಿತ್ತು: ''ಜಹಗೀರುದಾರ ಚಿತ್ರವರ್ಮನ ಪ್ರಯತ್ನದಿಂದ ಮಿತ್ರವರ್ಮನ ಬಿಡುಗಡೆಯಾಗಿದೆ. ಮತ್ತು ಆತನನ್ನು ಪುನಃ ಕೇರಳದ ರಾಜನನ್ನಾಗಿ ಮಾಡಲಾಗಿದೆ. ಆದ್ದರಿಂದ ಅವರ ಕುಟುಂಬದವರನ್ನು ಕೇರಳಕ್ಕೆ ಹಿಂತಿರುಗಿ ಕಳುಹಿಸಬಹುದು''. ಬಸವ ರಾಜನು ಸಕಲಮರ್ಯಾದೆಗಳಿಂದ ಸೇವಂತಿ ಕಾಳೊಂದಿಗೆ ಆಕೆಯ ಕುಟುಂಬದವರನ್ನು ಕೇರಳಕ್ಕೆ ಕಳುಹಿಸಿಕೊಟ್ಟನು. ಆದರೆ ವಿರಹವ್ಯಥೆಯಿಂದ ಬಳಲಲಾರಂಭಿಸಿದನು.

ಕೇರಳಕ್ಕೆ ಬಂದ ಮೇಲೆ ಸೇವಂತಿಕಾ ಯಾವಾಗಲೂ ಅರಮನೆಯ ತೋಟದಲ್ಲಿ ಕುಳಿತು ಬಸವರಾಜನ ಯೋಚನೆ ಯಲ್ಲಿಯೇ ಮುಳುಗಿರುತ್ತಿದ್ದಳು. ಮೂಕಾಂಬಿಕಾ ಕ್ಷೇತ್ರದಲ್ಲಿ ವಿದೂಷಕನ ಪತ್ನಿಯ ಮೂಲಕ ತನ್ನ ಭಾವಚಿತ್ರವನ್ನು ರಾಜನಿಗೆ ತಲುಪಿಸಿ, ತಾನು ಪಡೆದ ರಾಜನ ಭಾವಚಿತ್ರವನ್ನು ತನ್ನೆದುರಿಗೆ ಇಟ್ಟುಕೊಂಡು ತನ್ನ ಪ್ರೇಮಿಯ ಲಾವಣ್ಯ ಮತ್ತು ಶೌರ್ಯ ವನ್ನು ಬಣ್ಣಿಸುತ್ತಿದ್ದಳು. ಮಿತ್ರವರ್ಮನು ಯಾರ ಸಹಾಯ ದಿಂದ ಪುನಃ ತನ್ನ ರಾಜ್ಯವನ್ನು ಪಡೆದನೋ, ಅವನ ಋಣವನ್ನು ತೀರಿಸುವ ಸಲುವಾಗಿ ಸೇವಂತಿಕಾಳನ್ನು ಅವನಿಗೆ ಮದುವೆ ಮಾಡಿಕೊಡಲು ನಿಶ್ಚಯಿಸಿದನು. ಇದಕ್ಕೆ ಚಿತ್ರವರ್ಮನು ಒಪ್ಪಿರುವನೆಂದು, ಮದುವೆ ಮಾರನೆಯ ದಿನವೇ ನಡೆಯ ಲಿರುವುದೆಂದು ಸೇವಂತಿಕಾಳ ಗೆಳತಿ ಆಕೆಗೆ ತಿಳಿಸಿದಳು. ಈ ವಿಷಯ ತಿಳಿದಕೊಡಲೆ ಬಸವರಾಜನಿಗೆ ಪತ್ರ ಬರೆದಳು. ಮತ್ತು ತಾನು ಆತ್ಮಹತ್ಯೆ ಮಾಡಿಕೊಳ್ಳಲು ಪ್ರಯತ್ನಿಸಿದಳು. ಶುಭ ಶಕುನಗಳನ್ನು ಕಂಡ ಫಲವಾಗಿ ಹಾಗೂ ಆ ಸಮಯಕ್ಕೆ ಸರಿಯಾಗಿ ಗೆಳತಿಯು ಬಂದಿದ್ದರಿಂದ ಆಕೆಯ ಆತ್ಮಹತ್ಯೆಯ ಪ್ರಯತ್ನ ವಿಫಲವಾಯಿತು. ಜ್ಯೋತಿಷಿಯೊಬ್ಬನು ಅಲ್ಲಿಗೆ ಬಂದು ತನ್ನ ಅತೀತ ಶಕ್ತಿಯಿಂದ ಬಸವರಾಜನ ಅರಮನೆಯಲ್ಲಿ ಏನು ನಡೆಯುತ್ತಿದೆ ಎಂಬುದನ್ನು ತೋರಿಸಿದನು. ಇದರಿಂದ ಸೇವಂತಿಕಾಳಿಗೆ ಸಮಾಧಾನವಾಯಿತು. ತಾನು ಪುನಃ ತನ್ನ ಪ್ರೇಮಿಯನ್ನು ಸೇರಬಹುದೆಂಬ ಭರವಸೆ ಆಕೆಗೆ ಮೂಡಿತು. ಆಕೆಯ ಗೆಳತಿಯು ಒಂದು ಉಪಾಯವನ್ನು ಸೂಚಿಸಿ, ಚಿತ್ರವರ್ಮನೊಂದಿಗೆ ನಿಶ್ಚಯವಾಗಿದ್ದ ಮದುವೆಯಿಂದ ತಪ್ಪಿಸಿಕೊಳ್ಳುವ ವಿಧಾನವನ್ನು ತಿಳಿಸಿದಳು.

ಈ ನಾಟಕ ಪ್ರಾಚೀನ ನಾಟಕಗಳಾದ ಮಾಳವಿಕಾಗ್ನಿ ಮಿತ್ರ ಮುಂತಾದ ನಾಟಕಗಳಂತೆ ಇದ್ದರೂ ಸಹ ಕೆಲವು ವಿಷಯಗಳಲ್ಲಿ ಭಿನ್ನತೆ ಇದೆ. ತನ್ನದೇ ಆದ ಸ್ವಂತಿಕೆಯನ್ನು ಹೊಂದಿದೆ. ಹೆಚ್ಚು ಕಡಿಮೆ ಎಲ್ಲಾ ನಾಟಕ ಕಾರರು ತಮಗೆ ಬೇಕಾದ ವಿಷಯಗಳನ್ನು ಎರಡು ಬೃಹತ್ ಗ್ರಂಥಗಳಾದ, ರಾಮಾಯಣ, ಮಹಾಭಾರತಗಳಿಂದ ಹಾಗೂ 'ಬೃಹತ್ ಕಥಾ' ಗ್ರಂಥದಿಂದ ಆರಿಸಿಕೊಳ್ಳುತ್ತಾರೆ. ಆದರೆ ಚೊಕ್ಕನಾಥ ಕವಿ, ''ಕಾಂತಿಮತಿ ಪರಿಣಯ'' ಮತ್ತು ''ಸೇವಂತಿಕಾ

ಪರಿಣಯ'' ಎಂಬ ಎರಡು ನಾಟಕಗಳನ್ನು ಸಮಕಾಲೀನ ಐತಿಹಾಸಿಕ ಘಟನೆ ಹಾಗೂ ಶ್ರೇಷ್ಠ ವ್ಯಕ್ತಿಗಳನ್ನು ಆರಿಸಿಕೊಂಡು ಬರೆದಿರುತ್ತಾರೆ. ಮನಸ್ಸಿನ ಮೇಲೆ ಅಚ್ಚೊತ್ತುವ ಈ ನಾಟಕದ ಲಕ್ಷಣವೆಂದರೆ, ಈ ನಾಟಕ ನಾಯಕ ನಾಯಕಿಯರ ಸಮ್ಮುಖದಲ್ಲಿ ಅಭಿನಯಿಸಲ್ಪಟ್ಟಿತು. ಇದಕ್ಕಿಂತಲೂ ಹೆಚ್ಚಾಗಿ, ೧೭ನೇ ಹಾಗೂ ೧೮ನೇ ಶತಮಾನಗಳಲ್ಲಿ ಸಂಸ್ಕೃತವು ಕುಂದಿಲ್ಲದ ಪ್ರಭಾವ ಬೀರಿತ್ತೆಂಬುದು, ಆಗಿನ ಕಾಲದ ದಕ್ಷಿಣ ಭಾರತದ ರಾಜರುಗಳ ಆಸ್ಥಾನಗಳಲ್ಲಿ ಜಾತಿ ಮತಗಳ ಭೇದವಿಲ್ಲದೆ, ಸಂಸ್ಕೃತದ ಕವಿಗಳಿಗೆ ದೊರಕುತ್ತಿದ್ದ ಪ್ರೋತ್ಸಾಹದಿಂದ ತಿಳಿದುಬರುತ್ತದೆ. ಸಂಸ್ಕೃತ ನಾಟಕ ಸೇವಂತಿಕಾ ಪರಿಣಯವನ್ನು ಕೆಳದಿಯ ಆಸ್ಥಾನದಲ್ಲಿ ತಂಜಾ ಊರಿನ ಕವಿ ಬರೆದುದ್ದುದರಿಂದ ದಕ್ಷಿಣ ಭಾರತದಲ್ಲೆಲ್ಲಾ, ಕೆಳದಿ ರಾಜರುಗಳ ಆಸ್ಥಾನಗಳಲ್ಲಿ, ಅದರಲ್ಲೂ ಬಸವರಾಜನ ಆಸ್ಥಾನದಲ್ಲಿ ಅನೇಕ ವಿದ್ವಾಂಸರೂ, ಪಂಡಿತರುಗಳು ಆಶ್ರಯ ಪಡೆದಿದ್ದರೆಂದು ತಿಳಿದುಬರುತ್ತದೆ. ತಿಪ್ಪಧ್ವಾರಿಯ ಮಗ ಮಹಾ ವಿದ್ವಾಂಸನಾದ ಚೊಕ್ಕನಾಥನು ಈ ನಾಟಕ ಬರೆದು ಸದ್ಗುಣಗಳ ಖಣಿಯಾದ ಬಸವರಾಜನನ್ನು ಸಂತೋಷ ಪಡಿಸಿ, ಅವನಿಂದ ಅನೇಕ ಬಹುಮಾನಗಳನ್ನು ಪಡೆದುಕೊಂಡು ತನ್ನ ಊರಿಗೆ ಹಿಂತಿರುಗಿದನು, ಎಂದು ನಾಟಕದಲ್ಲಿ ಸೂತ್ರಧಾರನ ಮೂಲಕ ಸ್ವತಃ ಕವಿಯೇ ಹೇಳಿಸಿದ್ದಾನೆ.

ಈ ನಾಟಕದ ನಾಯಕ ಒಬ್ಬ ಚಾರಿತ್ರಿಕ ವ್ಯಕ್ತಿಯಾಗಿದ್ದರೂ ಸಹ ಈ ಬರಹವನ್ನು ಅರೆಚಾರಿತ್ರಿಕ ಎಂದು ಕರೆಯಬಹುದು. ಏಕೆಂದರೆ ಇದರಲ್ಲಿ, ಕೆಳದಿಯರಾಜ ಬಸವರಾಜನ ಅನೇಕ ಚಾರಿತ್ರಿಕ ಘಟನೆಗಳು ಒಳಗೊಂಡಿಲ್ಲ. ಆದರೆ ಕೇವಲ ಒಂದೆರಡು ಘಟನೆಗಳು ಮಾತ್ರ ಇದರಲ್ಲಿವೆ. ಅವು ಯಾವುದೆಂದರೆ, ಕೇರಳದ ರಾಜನೊಂದಿಗೆ ಇದ್ದ ಸ್ನೇಹ-ಸಂಬಂಧ, ಹಾಗೂ ಶತ್ರು ಗೋದವರ್ಮನಿಂದ ಸೋಲಿಸಲ್ಪಟ್ಟ ಮಿತ್ರವರ್ಮನ ಕುಟುಂಬಕ್ಕೆ ನೀಡಿದ ಆಶ್ರಯ.

ದಕ್ಷಿಣ ಭಾರತದ ಪ್ರಸಿದ್ಧ ಕವಿ ಚೊಕ್ಕನಾಥ ಸಂಸ್ಕೃತದಲ್ಲಿ ಮತ್ತೆರಡು ಕೃತಿಗಳನ್ನು ರಚಿಸಿರುತ್ತಾನೆ. ಈತನು ತಂಜಾಊರಿನ ಷಹಜೀ ಕಾಲಕ್ಕೆ ಸೇರಿದವನು. ಇವನು ಬಸವರಾಜನ ಆಸ್ಥಾನಕ್ಕೆ ಭೇಟಿ ನೀಡಿದ್ದನು. ''ಬಸವರಾಜನು ತಂಜಾಊರಿನ ಮರಾಠ ರಾಜರೊಂದಿಗೆ ಸ್ನೇಹದಿಂದಿರುತ್ತಿದ್ದನು. ಹಾಗೂ ಅವರಲ್ಲಿ ವಿದ್ವಾಂಸರ ಮತ್ತು ಕವಿಗಳ ಪರಸ್ಪರ ವಿನಿಮಯ ನಡೆಯುತ್ತಿತ್ತು'' ಎಂಬುದನ್ನು ಕವಿ ಉಲ್ಲೇಖಿಸಿರುತ್ತಾನೆ.

ಸೇವಂತಿಕಾ ಪರಿಣಯ ನಾಟಕ ಬಸವರಾಜನ ಗುಣಗ[ಳ] ಮೇಲೆ ಪ್ರಕಾಶ ಬೀರಿದರೂ ಎಲ್ಲ ಇತಿಹಾಸಕಾರರು, ರಾಜನ[ು] ವಿದ್ವಾಂಸರಿಗೆ ಹೇಗೆ ಆಶ್ರಯ ನೀಡುತ್ತಿದ್ದನೆಂದು ಹೊಗಳಿದ್ದಾರೆ. ಕವಿ, ಬಸವರಾಜನನ್ನು ''ಬಸವರಾಜ ಭೂಪ[...] ಮಣಿ'', ''ರಾಜರತ್ನ'' ಎಂದು ವರ್ಣಿಸಿದ್ದಾನೆ. ಅವನ[...] ಪರೋಪಕಾರ ಗುಣ, ಕಲ್ಪವೃಕ್ಷವನ್ನು ಮೀರಿಸುತ್ತದೆಂದು ಅವನ ಸೌಂದರ್ಯ, ಮನ್ಮಥನ ಸೌಂದರ್ಯಕ್ಕಿಂತಲೂ ಮಿಗಿಲಾದುದೆಂದು, ಮತ್ತು ಅವನ ಶೌರ್ಯ, ಅರ್ಜುನ[...] ಮತ್ತು ಭೀಮರ ಶೌರ್ಯಕ್ಕಿಂತಲೂ ಹೆಚ್ಚಿನದೆಂದು ವರ್ಣಿಸಿದ್ದಾನೆ. ಅವನಲ್ಲಿ ಸಕಲ ಸದ್ಗುಣಗಳು ಮ[...] ಮಾಡಿದ್ದವು. ಎಲ್ಲ ಇತಿಹಾಸಕಾರರು ರಾಜನ ಔದಾರ್ಯ[...] ಗುಣಗಳನ್ನು ಪ್ರಶಂಸಿಸಿದ್ದಾರೆಂಬುದು ಒಪ್ಪುವ ವಿಷಯ[...] ಹಾಗೂ ರಾಜನು ''ಸುರನಿಕರಕಲ್ಪದ್ರುಮ'' (ವಿದ್ವಾಂಸ[...] ಅಪೇಕ್ಷೆಗಳನ್ನು ಈಡೇರಿಸುವ ಮರ) ಎಂಬ ಬಿರುದಿನಿಂ[...] ಪುರಸ್ಕರಿಸಲ್ಪಟ್ಟವನಾಗಿದ್ದನು.

ರಾಜನಲ್ಲಿದ್ದ ಕಲಾಪೋಷಣೆ ಮತ್ತು ಕಲಾ ಅಭ್ಯಾ[...] ಮಾಡುವ ಗುಣಗಳಲ್ಲದೆ, ಅವನು ''ಶಿವತತ್ವರತ್ನಾಕರ'' ಎಂಬ ಸಂಸ್ಕೃತ ವಿಶ್ವಜ್ಞಾನಕೋಶದ ಕರ್ತೃವಾಗಿದ್ದನು ''ಸುಭಾಷಿತ ಸುರದ್ರುಮ'' ಎಂಬ ಸಂಸ್ಕೃತ ಕೃತಿಯನ್ನು ರಚಿಸಿದ್ದನು ಮತ್ತು ''ಸೂಕ್ತಿ ಸುಧಾಕರ'' ಎಂಬ ಕೃತಿಯನ್ನು ಅರ್ಧ ಸಂಸ್ಕೃತದಲ್ಲಿ, ಅರ್ಧ ಕನ್ನಡದಲ್ಲಿ ರಚಿಸಿದ್ದನು ಮೂಕಾಂಬಿಕಾ ದೇವಿ ಹಾಗೂ ಸುಬ್ರಹ್ಮಣ್ಯ ದೇವರಲ್ಲಿ ಅಪಾರ ಶ್ರದ್ಧಾಭಕ್ತಿಯನ್ನಿಟ್ಟಿದ್ದನು. ಆಕ್ರಮಣ ಮಾಡಿ[...] ವರನ್ನು ಸೋಲಿಸಿ ಹೊಡೆದೋಡಿಸುವ ಕೆಚ್ಚು ಅವನಲ್ಲಿತ್ತು ಕೇರಳದ ನಾಯಕರೊಂದಿಗೆ ಸ್ನೇಹಸಂಬಂಧ ಇಟ್ಟು[...] ಕೊಂಡಿದ್ದನು. ಈ ಎಲ್ಲಾ ವಿಷಯಗಳನ್ನು ಕವಿ ತನ್ನ ನಾಟಕದಲ್ಲಿ ವಿವರಿಸಿದ್ದಾನೆ.

ಸೇವಂತಿಕಾ ಪರಿಣಯದಿಂದ ನಾವು ಸಾಕಷ್ಟು ಚಾರಿತ್ರಿ[...] ಮಾಹಿತಿಗಳನ್ನು ಪಡೆದರೂ ಅದು ತೃಪ್ತಿಕರವಾಗಿಲ್ಲ. ಆದ[...] ಕೆಳದಿಯ ರಾಜ್ಯದ ಸುತ್ತಮುತ್ತಲಿನ ಸಾಮಾಜಿಕ ಹಾಗ[ೂ] ಸಾಂಸ್ಕೃತಿಕ ಸ್ಥಿತಿಗತಿಗಳ ಮೇಲೆ ಸಾಕಷ್ಟು ಬೆಳಕನ್[ನು] ಚೆಲ್ಲುತ್ತದೆ.

ಸೂತ್ರಧಾರ ಸುಬ್ರಹ್ಮಣ್ಯ ಕ್ಷೇತ್ರದ ವಿವರಣೆ ನೀಡುತ[್ತಾ] ತಿಳಿಸುತ್ತಾನೆ. ''ವೇದಿಶಿಕಾ:ದೇಶಿಕಾ:'' ಅಂದರೆ ಹೊರದೇಶ[...] ವಿದ್ವಾಂಸರು ನಿಲುವಂಗಿಗಳನ್ನು ಧರಿಸಿ, ರಸ್ತೆಯ ಬದಿಗಳ[...]

ಲ್ಲಿಂದ ಇಲ್ಲಿಗೆ ಮತ್ತು ಇಲ್ಲಿಂದ ಅಲ್ಲಿಗೆ ಓಡಾಡುತ್ತಿರುತ್ತಿದ್ದರು. ಆಗ ಅವರ ಕರ್ಣಕುಂಡಲಗಳ ಪ್ರಕಾಶ ಕೆನ್ನೆಗಳ ಮೇಲೆ ಬೀಳುತ್ತಿದ್ದವು. ರಾಜರುಗಳಿಂದ ಪುರಸ್ಕಾರ ರೂಪದಲ್ಲಿ ಕೊಡಲ್ಪಟ್ಟ ಹಾರಗಳನ್ನು ಕುತ್ತಿಗೆಯಲ್ಲಿ ಧರಿಸಿ ತಮ್ಮ ದೊಡ್ಡಸ್ತಿಕೆಯನ್ನು ಪ್ರದರ್ಶಿಸುತ್ತಿದ್ದರು. ಅವರ ಹಿಂದೆ ಶಿಷ್ಯ ಹಾಗೂ ಪ್ರಶಿಷ್ಯರ ಒಂದು ದೊಡ್ಡ ಗುಂಪೇ ಹಿಂಬಾಲಿಸುತ್ತಿತ್ತು.

ಈ ಒಂದು ವಿವರಣೆಯಿಂದ ನಮಗೆ ತಿಳಿಯುವುದೇನೆಂದರೆ, ಸುಬ್ರಹ್ಮಣ್ಯ ಕ್ಷೇತ್ರ ಹಾಗೂ ಅದರ ಸುತ್ತಮುತ್ತಲ ನಗರಗಳು ಪಂಡಿತ-ವಿದ್ವಾಂಸರ ಆವಾಸ ಸ್ಥಾನವಾಗಿದ್ದವು. ವಿದ್ಯಾಕೇಂದ್ರಗಳಾಗಿದ್ದವು. ನಾನಾ ದೇಶಗಳಿಂದ ವಿದ್ವಾಂಸರುಗಳು ಆಗಾಗ್ಗೆ ಬಂದು ಪುರಸ್ಕೃತ ರಾಗುತ್ತಿದ್ದರು.

ಪ್ರಸ್ತಾವನೆಯಲ್ಲಿ ಆ ಪಟ್ಟಣದ ಧಾರ್ಮಿಕ ಪ್ರಾಮುಖ್ಯತೆ, ಜನಗಳ ಅಂಧವಿಶ್ವಾಸ, ಭೂಮಿಯ ಮಣ್ಣಿನ ಗುಣ, ಸುಂದರವಾದ ಚಿತ್ರೋಪಮ ಪ್ರಕೃತಿ ಮುಂತಾದವುಗಳನ್ನು ಕವಿ ವಿವರಿಸಿದ್ದಾನೆ. ಈ ಸ್ಥಳದಲ್ಲಿ ನವಿಲುಗಳು ಸ್ವಲ್ಪವೂ ಭಯವಿಲ್ಲದೆ ಹಾವುಗಳೊಂದಿಗೆ ಆಡುತ್ತಿರುತ್ತವೆ. ಸದಾಚಾರಿಗಳು ಊಟ ಮಾಡಿ ಬಿಟ್ಟ ಎಲೆಗಳ ಮೇಲೆ ಭಕ್ತರು ಅಭೀಷ್ಟ ಸಿದ್ಧಿಗಾಗಿ ಹೊರಳುತ್ತಾರೆ. ಅಲ್ಲಿಯ ಗೆದ್ದಲು ಮಣ್ಣು, ಕುಷ್ಠರೋಗ ಮತ್ತು ಬುದ್ಧಿಮಾಂದ್ಯದಂತಹ ರೋಗಗಳನ್ನು ನಿವಾರಿಸುತ್ತದೆ. ಮಕ್ಕಳಿಲ್ಲದ ಹೆಂಗಸರು ''ಶಾಂತಿವ್ರತ'' ಮಾಡಿ ಮಕ್ಕಳನ್ನು ಪಡೆಯುತ್ತಾರೆ. ೧೬ನೇ ಶತಮಾನದ ವಾದಿರಾಜಸ್ವಾಮಿಗಳು ತಮ್ಮ ''ತೀರ್ಥ ಪ್ರಬಂಧ''ದಲ್ಲಿ, ಸುಬ್ರಹ್ಮಣ್ಯ ಕ್ಷೇತ್ರದ ವರ್ಣನೆಯನ್ನು ಇದೇ ರೀತಿ ಮಾಡಿದ್ದಾರೆ.

ಮಧ್ಯಯುಗದ ಸಮಯದಲ್ಲಿ ರಂಗದ ಮೇಲೆ ನಾಟಕವನ್ನು ಅಭಿನಯಿಸುವಾಗ ಹೆಣ್ಣು ಪಾತ್ರವನ್ನು ಗಂಡಸರೇ ಅಭಿನಯಿಸುತ್ತಿದ್ದರು. ಪ್ರಸ್ತಾವನೆಯಲ್ಲಿನ ಸಂಭಾಷಣೆಯಿಂದ ಇದು ಸ್ಪಷ್ಟವಾಗುತ್ತದೆ. ''ಸೇವಂತಿ ಕಾಯಾ: ಪಿತೃವ್ಯ ನಂದನಃ ತಸ್ಯಾಃ ಸಖೀನೋ ಗೃಹಿಣೀ ಸಹೋದರಾ''

ಮಲ್ನಾಡು ಪ್ರದೇಶದ ಸುತ್ತಮುತ್ತ ಕಾಡು ಮತ್ತು ಬೆಟ್ಟಗಳಿದ್ದುದರಿಂದ ದಂಗೆಕೋರರು ಹಾಗೂ ಬೇಟೆಗಾರರು ಯಾವಾಗಲೂ ಆಕ್ರಮಣ ಮಾಡುತ್ತಿದ್ದರು. ತಮ್ಮ ಶತ್ರುಗಳನ್ನು ಎದುರಿಸಲು, ರಾಜರ ಕುಟುಂಬದವರನ್ನು ಅಪಹರಿಸಲು, ಹೀಗೆ ಮುಂತಾದ ಕೆಲಸಗಳಿಗೆ ರಾಜರು ಮತ್ತು ರಾಜಕುಮಾರರು ಇವರ ಸಹಾಯವನ್ನು ಪಡೆಯುತ್ತಿದ್ದರು. ಎಲ್ಲಕ್ಕಿಂತ ಹೆಚ್ಚಾಗಿ ಜನಗಳು ಭವಿಷ್ಯದಲ್ಲಿ ಹಾಗೂ ಕಣ್ಣುಕಟ್ಟೋ ವಿದ್ಯೆಯಲ್ಲಿ ನಂಬಿಕೆ ಇಟ್ಟಿದ್ದರು. ಪಶ್ಚಿಮ ಕರಾವಳಿ ಪ್ರದೇಶಗಳಲ್ಲಿ ಮತ್ತು ಕೇರಳದಲ್ಲಿ ಶತ್ರುಗಳನ್ನು ನಾಶಗೊಳಿಸಲು ಕಣ್ಣುಕಟ್ಟು ವಿದ್ಯೆಯ ಅಭ್ಯಾಸ ಮಾಡುತ್ತಿದ್ದರು. ಶತ್ರುಗಳನ್ನು ವಶಪಡಿಸಿಕೊಳ್ಳಲು ಮಾಟ-ಮಂತ್ರ-ತಂತ್ರಗಳನ್ನು ಆಗಾಗ್ಗೆ ಉಪಯೋಗಿಸುತ್ತಿದ್ದರು. ದುರ್ಬಲ ರಾಜರು ಇವುಗಳನ್ನು ಒಂದು ಶಿಕ್ಷೆಯಂತೆ ಉಪಯೋಗಿಸುತ್ತಿದ್ದರು ಎಂದು ಬಸವರಾಜನು ತನ್ನ ''ಶಿವ ತತ್ವರತ್ನಾಕರ''ದಲ್ಲಿ ಬರೆದಿದ್ದಾನೆ. ಮತ್ಸ್ಯ, ಅಗ್ನಿ ಮುಂತಾದ ಪುರಾಣಗಳಲ್ಲಿ ಯಂತ್ರವಿದ್ಯೆಯ ಅನುಷ್ಠಾನಗಳ ಬಗ್ಗೆ ಸಂಪೂರ್ಣ ಅಧ್ಯಾಯಗಳೇ ಇವೆ. ಇಂದ್ರಜಾಲ ಅಥವಾ ಮಾಯ ಮಾಡುವುದು ರಾಜನೀತಿಯ ಒಂದು ಅವಶ್ಯಕ ವಿಷಯವೆಂದು ಮತ್ಸ್ಯಪುರಾಣದಲ್ಲಿ ತಿಳಿಸಿದ್ದಾರೆ. 'ಶಿವ ತತ್ವರತ್ನಾಕರ'ದಲ್ಲಿ ಬಸವರಾಜನು, ಒಂದು ದೊಡ್ಡ ಅಧ್ಯಾಯವನ್ನೇ ಈ ವಿಷಯಗಳಿಗಾಗಿ ಮೀಸಲಿಟ್ಟಿದ್ದಾನೆ.

ಅಪರೂಪದ ಹಾಗೂ ಪ್ರಕಾಶವಾಗದ ಈ ಸಂಸ್ಕೃತ ನಾಟಕವನ್ನು ೧೯೫೪ರಲ್ಲಿ ಮೈಸೂರಿನ ಪ್ರಾಚ್ಯ ಸಂಶೋಧನಾ ಸಂಸ್ಥೆಯವರು ಪ್ರಕಾಶನ ಮಾಡಲು ಸ್ವೀಕರಿಸಿದರು. ಈ ಸಂಸ್ಥೆಯ ನಿರ್ದೇಶಕರಾದ ಶ್ರೀ ಎಚ್. ದೇವೀರಪ್ಪನವರೇ ಸಂಪಾದಕರಾಗಿದ್ದರು. ಈ ಸಂಸ್ಥೆಯಲ್ಲಿ ಹಿರಿಯ ಪಂಡಿತರಾಗಿದ್ದ ವಿದ್ವಾನ್. ಎಸ್. ನಾರಾಯಣಸ್ವಾಮಿ ಶಾಸ್ತ್ರಿಯವರು ಈ ಕೆಲಸವನ್ನು ವಿಮರ್ಶಾತ್ಮಕವಾಗಿ ಪರಿಷ್ಕರಿಸಿದರು. ಸಂಸ್ಕೃತದಲ್ಲಿಯೇ ಒಂದು ವಿದ್ವತ್ ಪೂರ್ಣ ಪ್ರಸ್ತಾವನೆಯನ್ನು ನೀಡಿದರು. ನಾಗರೀಲಿಪಿಯಲ್ಲಿದ್ದ ಎರಡು ಮತ್ತು ತೆಲುಗು ಲಿಪಿಯಲ್ಲಿದ್ದ ಒಂದು ತಾಳೆಗರಿಯ ಹಸ್ತಲಿಪಿಯನ್ನು ಜಾಗರೂಕತೆಯಿಂದ ಪರೀಕ್ಷಿಸಿದ ನಂತರ ಸಂಪಾದನೆಯ ಕೆಲಸವನ್ನು ಮಾಡಿದರು. ಪ್ರೌಢಶಾಲೆಯ ಮುಖ್ಯ ಅಧಿಕಾರಿ ವಿದ್ವಾನ್ ಶ್ರೀ ಶಂಕರ ಕಾಮೇಶ್ವರ ಐಯ್ಯರ್ ಎಂಬುವರು ಬಹಳ ಮುಂಚೆ ಅಂದರೆ ಸುಮಾರು ೭೫ ವರ್ಷಗಳ ಹಿಂದೆಯೇ, ಒಂದು ಮಾಸಪತ್ರಿಕೆ ''ನವಸಲಪುರಿ''ಯಲ್ಲಿ ಈ ನಾಟಕವನ್ನು ಪ್ರಕಟಿಸಿದ್ದರು. ಎಂದು ಸಂಪಾದಕರ ಟಿಪ್ಪಣಿಯಿಂದ ನಮಗೆ ತಿಳಿದುಬರುತ್ತದೆ. ಆದರೆ ಇದು ಈಗ ಎಲ್ಲಿಯೂ ದೊರೆಯುವುದಿಲ್ಲ. ಮತ್ತು ಆ ವಿದ್ವಾಂಸರು ಹಸ್ತಪ್ರತಿಗಳನ್ನು ಹೇಗೆ ಪಡೆದರೆಂಬ ಬಗ್ಗೆಯೂ ತಿಳಿಯುವುದಿಲ್ಲ. ಎ. ಬಿ. ಕೈತ್ ಎಂಬುವರು ''ಸಂಸ್ಕೃತ ನಾಟಕದ ಮೂಲ ಹಾಗೂ ಬೆಳವಣಿಗೆ'' ಎಂಬ

ತಮ್ಮ ಗ್ರಂಥದಲ್ಲಿ ಈ ನಾಟಕದ ಬಗ್ಗೆ ಪ್ರಸ್ತಾಪ ಮಾಡದಿದ್ದರೂ ಸಹ ಸಂಸ್ಕೃತ ಸಾಹಿತ್ಯ ಗ್ರಂಥಗಳ ಇತಿಹಾಸದಲ್ಲಿ ಶ್ರೀ ಕೃಷ್ಣಮಾಚಾರಿಯವರು ಪ್ರಸ್ತಾಪ ಮಾಡಿದ್ದಾರೆ. ಭರತ ಮುನಿ, ಧನಂಜಯ ಮುಂತಾದವರು ತೋರಿಸಿಕೊಟ್ಟ ನಾಟಕದ ನಿಯಮಗಳನ್ನು ಗಮನದಲ್ಲಿಟ್ಟು ಕೊಂಡು ಅದರಂತೆ ಶಾಸ್ತ್ರೀಯ ಶೈಲಿಯಲ್ಲಿ ಈ ನಾಟಕದ ಕರ್ತೃ ಸೇವಂತಿಕಾ ಪರಿಣಯವನ್ನು ಬರೆದಿದ್ದಾರೆ.

ಚೊಕ್ಕನಾಥ ಕವಿಯು, ಕಾಳಿದಾಸ ಮುಂತಾದವರನ್ನು ಅನುಕರಿಸಿದ್ದರೂ ಸಹ ಮಾಳವಿಕಾಗ್ನಿಮಿತ್ರ ಅಥವಾ ಮಾಲತಿಮಾಧವ ಕಾವ್ಯ ನಾಟಕಗಳಲ್ಲಿರುವ ಸಕಲ ಲಕ್ಷಣಗಳೂ ಈ ಸೇವಂತಿಕಾ ಪರಿಣಯದಲಿಲ್ಲ. ಆದರೆ ಮೊದಲೇ ತಿಳಿಸಿದಂತೆ, ೧೬, ೧೭ ಹಾಗೂ ೧೮ನೇ ಶತಮಾನಗಳಲ್ಲಿದ್ದ ಧಾರ್ಮಿಕ, ಸಾಮಾಜಿಕ ಮತ್ತು ಸಾಂಸ್ಕೃತಿಕ ಚಿತ್ರಣಗಳು ನಾಟಕದಲ್ಲಿ ಮುಖ್ಯವಾದ ಅಂಶಗಳಾಗಿವೆ. ಬಿದನೂರು, ಮೈಸೂರು, ಕೇರಳ, ತಂಜಾಊರು ಮುಂತಾದ ಊರುಗಳು ಮತ್ತು ದಕ್ಷಿಣ ಪ್ರಾಂತದ ರಾಜರುಗಳು ಸಾಂಸ್ಕೃತಿಕ ಒಗ್ಗಟ್ಟಿನಿಂದ ಬಂಧಿಸಲ್ಪಟ್ಟಿದ್ದರು. ಹಾಗೂ ಸಾಂಸ್ಕೃತಿಕ ಏಕತೆಯನ್ನು ಪೋಷಿಸುತ್ತಿದ್ದರು. ದಕ್ಷಿಣ ಭಾರತದ ನಾನಾ ಭಾಗಗಳಿಂದ ಬಂದ ಪಂಡಿತರು ಕೆಳದಿಯ ರಾಜರ ಆಸ್ಥಾನದಲ್ಲಿ ಆಶ್ರಯ ಪಡೆದಿದ್ದರು, ಎಂದು ಕೆಳದಿಯರಾಜ ಬಸವರಾಜನ ಆಸ್ಥಾನದಲ್ಲಿ ಬರೆದ ಈ ನಾಟಕದಿಂದ ಸ್ಪಷ್ಟವಾಗಿ ತಿಳಿಯುತ್ತದೆ. ಅವರು ವೀರಶೈವ ಸಂಪ್ರದಾಯ ನಿಷ್ಠರಾಗಿದ್ದರೂ, ಸಹ ಬೇರೆ ಸಂಪ್ರದಾಯದ ಅಥವಾ ದಾರ್ಶನಿಕ ವಿದ್ವಾಂಸರುಗಳಿಗೂ ಪ್ರೋತ್ಸಾಹ ನೀಡುತ್ತಿದ್ದರು. ಧಾರ್ಮಿಕ ಸಹನಶಕ್ತಿ, ಗ್ರಂಥಗಳ ಒಲವು, ಕಲೆಗಳ ಒಲವು ಮತ್ತು ಸಮೀಪದ ಅಧಿಕಾರಿಗಳೊಂದಿಗೆ ಸ್ನೇಹ, ಇನ್ನೂ ಮುಂತಾದ ವಿಷಯಗಳು ಈ ನಾಟಕದಲ್ಲಿವೆ. ಈ ಎಲ್ಲಾ ದೃಷ್ಟಿಯಿಂದ ಈ ನಾಟಕದ ಐತಿಹಾಸಿಕ ಮೌಲ್ಯವನ್ನು ನಿರ್ಣಯಿಸಬಹುದು.

ಮಧ್ಯಯುಗದ ಸಂಸ್ಕೃತ ಗ್ರಂಥನಿಧಿಯ ವಿಚಾರ ಮಾಡಿದರೆ, 'ಸೇವಂತಿಕಾ ಪರಿಣಯ' ಹಾಗೂ 'ಕಾಂತಿಮತಿ ಪರಿಣಯ' ದಂತಹ ಐತಿಹಾಸಿಕ ಮೌಲ್ಯಾಧಾರಿತ ಅನೇಕ ಗ್ರಂಥಗಳನ್ನು ನಾವು ವೀಕ್ಷಿಸಬಹುದು. ೧೭ನೇ ಮತ್ತು ೧೮ನೇ ಶತಮಾನದಲ್ಲಿ ಉತ್ತರ ಭಾರತದಲ್ಲಿ ಸಂಸ್ಕೃತ ನಾಟಕಗಳಿಗೆ ಸಾಕಷ್ಟು ಪ್ರೋತ್ಸಾಹ ಸಿಗಲಿಲ್ಲವೆಂಬುದು ಕಂಡು ಬರುತ್ತದೆ. ಆದರೆ ದಕ್ಷಿಣ ಭಾರತದಲ್ಲಿ ಕರ್ನಾಟಕ, ಕೇರಳ ಮತ್ತು ತಮಿಳು ನಾಡಿನ ರಾಜರುಗಳು ಹಾಗೂ ಕುಟುಂಬದ ಮುಖ್ಯಸ್ಥರು ಕಲೆ, ಕಲೆಗಾರರು ಮತ್ತು ಕವಿಗಳಿಗೆ ಯಥೇಚ್ಛವಾಗಿ ಬಹುಮಾನಗಳನ್ನು ಕೊಟ್ಟು ಪ್ರೋತ್ಸಾಹಿಸುತ್ತಿದ್ದರು.

○

. ಪಾಂಡುಕುಮಾರ್ *

# ಮಧುಗಿರಿ ಪಾಳೆಯಗಾರರ ಕೈಫಿಯತ್ತು – ಒಂದು ಚಾರಿತ್ರಿಕ ಪರಿಶೀಲನೆ

ಮಧುಗಿರಿ ಮಹಾನಾಡ ಪ್ರಭುಗಳಿಗೆ ಸಂಬಂಧಿಸಿದಂತೆ ಶಾಸನಾಧಾರಗಳು ಕಡಿಮೆಯಾದರೂ ನಾಲ್ಕಾರು ಕೈಫಿಯತ್ತುಗಳು ಲಭ್ಯವಿದ್ದು ಅವು ಐತಿಹಾಸಿಕ ಅಂಶಗಳಿಗಿಂತ ಐತಿಹ್ಯ ಅಂಶಗಳಿಂದ ಕೂಡಿವೆಯೆಂದರೆ ತಪ್ಪಾಗಲಾರದು. ಈ ಕೈಫಿಯತ್ತುಗಳಲ್ಲಿ ಕಂಡುಬರುವ ತೇದಿ ವಿವರಗಳು ಬಹಳಷ್ಟು ಕಡೆ ಚಾರಿತ್ರಿಕವಾಗಿ ತಾಳೆಯಾಗುವುದಿಲ್ಲ.

ಪ್ರಸ್ತುತ ಮಧುಗಿರಿ ತಾಲೂಕಿನ ಬೇಡತೂರು ಗ್ರಾಮದಲ್ಲಿ ವಾಸವಾಗಿರುವ ಡಾ॥ ರಾಮಾಂಜನೇಯರವರ ಬಳಿಯಿರುವ ಕೈಫಿಯತ್ತು ಸುಮಾರು ಎಂಟು ಅಂಗುಲ ಅಗಲ ಹಾಗು ಸುಮಾರು ಆರು ಅಡಿ ಉದ್ದ; ಎರಡೂ ಕಡೆ ಒಂದು ರೀತಿಯ ಕಪ್ಪು ಮಸಿಯಿಂದ ಬರೆಯಲಾಗಿರುವ ಈ ಕೈಫಿಯತ್ತಿನಲ್ಲಿ ದಾಖಲಾಗಿರುವ ಹಲವು ವಿವರಗಳು ಅಷ್ಟಾಗಿ ಈವರೆಗೆ ಚಾರಿತ್ರಿಕ ಪರಿಶೀಲನೆಗೆ ಒಳಪಟ್ಟಿಲ್ಲದ ಕಾರಣ ಅವುಗಳನ್ನು ಪರಿಶೀಲಿಸುವುದು ಅಗತ್ಯವಾಗಿದೆ.

ಈ ಕೈಫಿಯತ್ತಿನಲ್ಲಿ ಟಿಪ್ಪು ಸುಲ್ತಾನನ ಆಳ್ವಿಕೆಯ ಆಚೀಚಿನ ಕಾಲಕ್ಕೆ ಸಂಬಂಧಿಸಿದಂತೆ ದಾಖಲಾಗಿರುವ ವಿವರಗಳು ಹೆಚ್ಚು ವಿಶ್ವಸನೀಯವಾಗಿದ್ದು ಅವುಗಳನ್ನು ಈ ರೀತಿ ಸಂಗ್ರಹಿಸಬಹುದು :

ವಿಜಯನಗರದಲ್ಲಿ ಶ್ರೀರಂಗರಾಯರು ಪಟ್ಟಕ್ಕೆ ಬಂದ ಮೇಲೆ ಮಧುಗಿರಿಯಲ್ಲಿ ಚಿಕ್ಕಗೌಡರು ಆಳುತ್ತಿದ್ದರು. ಇವರಿಗೆ ಮುಮ್ಮಡಿ ರಾಮಪ್ಪಗೌಡ ಹಾಗೂ ತಿಮ್ಮಪ್ಪಗೌಡ ಎಂಬ ಇಬ್ಬರು ಮಕ್ಕಳಿದ್ದರು. ಜೇಷ್ಠ ಪುತ್ರನಾದ ರಾಮಪ್ಪಗೌಡನಿಗೆ ಪಟ್ಟಾಭಿಷೇಕವಾಯಿತು. ಕಾಲಾನಂತರದಲ್ಲಿ ಇವರಲ್ಲಿ ಅನ್ಯೋನ್ಯತೆಯಿಲ್ಲದೆ ಕಿರಿಯವನಾದ ತಿಮ್ಮಪ್ಪಗೌಡ ಮೈಸೂರಿಗೆ ಹೋಗಿ ಅಲ್ಲಿನ ಅರಸರ ನೆರವನ್ನು ಪಡೆದು ಮಧುಗಿರಿ ಚನ್ನರಾಯದುರ್ಗಗಳ ಮೇಲೆ ಠಾಣೆ ಹಾಕಿಸಿದನು. ಅದೇ ಸಮಯಕ್ಕೆ ಶ್ರೀರಂಗರಾಯರು ಮೃತರಾದುದರಿಂದ ರಾಮಪ್ಪಗೌಡರಿಗೆ ಅವರಿಂದ ನೆರವು ದೊರೆಯದಂತಾಯಿತು. ಕಾಲಾನಂತರ ಶ್ರೀ ರಂಗಪಟ್ಟಣಕ್ಕೆ ತೆರಳಿದ ಸಹೋದರರು ಅಲ್ಲಿ ಕೆಲವು ಕಾಲವಿದ್ದು ಅಲ್ಲಿ ಮೃತ ರಾದರು. ಅನಂತರದಲ್ಲಿ ರಾಮಪ್ಪಗೌಡನ ಮಗನಾದ ಮುಮ್ಮಡಿ ಹಿರೇಗೌಡ ಸಾಹಸ ಧೈರ್ಯದಿಂದ ಕುಟುಂಬ ಸಮೇತರಾಗಿ ಶ್ರೀ ರಂಗಪಟ್ಟಣದಿಂದ ಬಂದು ಮಿಡಿಗೇಶಿಯಲ್ಲಿ ಠಾಣೆಹಾಕಿಕೊಂಡು ರಾಜ್ಯವಾಳುತ್ತಿದ್ದರು. ನಂತರ ಇವನ ಮಗನಾದ ಮುಮ್ಮಡಿ ತೋಂಟದ ರಾಯರು ಅಧಿಕಾರಕ್ಕೆ ಬಂದು, ಆತ ದೈವಾಧೀನರಾದ ಸಂದರ್ಭದಲ್ಲಿ ಮಧುಗಿರಿಯಲ್ಲಿದ್ದ ಮಲ್ಲರಾಜಯ್ಯನೆಂಬುವವನು ಮೈಸೂರು ಅರಸರ ಸಹಕಾರದಿಂದ ಮಿಡಿಗೇಶಿಗೆ ಠಾಣೆ ಹಾಕಿಕೊಂಡು ತೋಂಟದರಾಯ ಕುಟುಂಬದವರಿಗೆ ಜೀವನಾರ್ಥಕ್ಕಾಗಿ ಕೆರೆಯೂರು ಎಂಬ ಎರಡು ಸಾವಿರ ವರಹ ಆದಾಯ ವಿರುವ ಸೀಮೆಯನ್ನು ನೀಡಲಾಯಿತು. ಅದೇ ಸಮಯಕ್ಕೆ ಟಿಪ್ಪು ಸುಲ್ತಾನ, ಮೊಗಲ ಬಾದಷಹ[1] ಹಾಗೂ ಮರಾಠರಿಗೂ ದ್ವೇಷದ ಕಾರಣ ಚನ್ನಬಸಪ್ಪಗೌಡರು ಸಂಸ್ಥಾನವನ್ನು ಬಿಟ್ಟು ವೇಮಲಪಾಳ್ಯದಲ್ಲಿ ತಂಗಿದ್ದು ಕಡೆಗೆ ಕೃಷ್ಣಗಿರಿಗೆ ಹೋಗಿ ಕರ್ನಲ್ ರೀಟ್ಸ್ ಸಾಹೇಬರವರನ್ನು ಕಂಡು ನಡೆದ ಸಂಗತಿಯನ್ನು ತಿಳಿಸಿ ತಮಗೆ ಸಹಾಯ ಬೇಕೆಂದು ಯಾಚಿಸಲಾಗಿ, ಕರ್ನಲ್ ರೀಟ್ಸ್ ಸಾಹೇಬರು ತಮ್ಮ ಕಂಪನಿಯ ಫೌಜು ದಂಡು ಸಮೇತ ಬರುತ್ತಾಯಿದೆ, ಬಂದ ಕೂಡಲೆ

---

* ಇತಿಹಾಸ ಅಧ್ಯಾಪಕರು. ವಿವೇಕಾನಂದ ಪದವಿ ಕಾಲೇಜು, ಡಾ॥ ರಾಜಕುಮಾರ್ ರಸ್ತೆ, ರಾಜಾಜಿನಗರ, ಬೆಂಗಳೂರು-೧೧

1 ಹೈದರಾಬಾದ್ ನಿಜಾಮ?

ಬೆಂಗಳೂರಿಗೆ ಬರುತ್ತೇವೆ. ಅಷ್ಟರಲ್ಲಿ ನಿಮ್ಮವರನ್ನು ಕಲೆಹಾಕಿ ನಮ್ಮ ಕಂಪನಿಯ ದಂಡಿಗೆ ಅನುಕೂಲ ಮಾಡಿಕೊಡಿ ಎಂದು ಅಪ್ಪಣೆ ಕೊಟ್ಟರು. ಅದರಂತೆ ವಾಪಸ್ಸು ಬರಲಾಗಿ ಜನರಲ್ ಹ್ಯಾರಿಸರ ದಂಡು ಟಿಪ್ಪುವನ್ನು ಪರಾಜಿತರನ್ನಾಗಿ ಮಾಡಿದ ಸುದ್ದಿ ತಿಳಿಯಿತು. ಅದೇ ಸಮಯಕ್ಕೆ ಕಂಪನಿಯವರು ಹಾಗು ನಿಜಾಮರಿಗೆ ದ್ವೇಷ ಉಂಟಾಯಿತು. ಸ್ಥಳೀಯ ನಾಯಕರಿಗೆ ನಾವು ಉಪದ್ರವ ಕೊಡುವುದಿಲ್ಲ, ಎಲ್ಲ ವಿಧದಲ್ಲೂ ನಿಮ್ಮನ್ನು ಕಾಪಾಡುತ್ತೇವೆ. ಟಿಪ್ಪುವಿನ ಎಲ್ಲ ಪ್ರದೇಶಗಳೂ ಕಂಪನಿಗೆ ಸೇರಿದ್ದು ನೀವುಗಳು ಕಂಪನಿಯ ಪರ ಕೆಲಸ ಮಾಡಬೇಕು ಎಂದು ಅಪ್ಪಣೆ ಕೊಡಿಸಿದರು. ಬೆಂಗಳೂರಿನಲ್ಲಿ ರೀಟ್ಸ್ ಸಾಹೇಬರನ್ನು ಕಂಡುಬರಲು ತಮ್ಮ ವಕೀಲರೊಂದಿಗೆ ಹೋಗಿಬಂದರು. ಕೆಲವು ಕಾಲದ ನಂತರ ಚನ್ನಬಸಪ್ಪಗೌಡರು ಸಹೋದರನ ಮಗ ದೊಡ್ಡ ಕಣ್ಣೇಗೌಡರ ಮಗ ತೋಂಟದರಾಯಗೌಡರು ಅಧಿಕಾರಕ್ಕೆ ಬಂದರು ಹಾಗೂ ಕಂಪನಿಯ ಪರವಾಗಿದ್ದರು. ಅದೇ ಸಮಯಕ್ಕೆ ವೆಂಕಟಗಿರಿ ತಾಲೂಕು ಬಚರಹಳ್ಳಿ, ಪಯಿನುಗಂಟರಹಳ್ಳಿ ಗ್ರಾಮದಲ್ಲಿ ಕೆರೆಗಳು ತುಂಬಿ ಹರಿದು ಪ್ರವಾಹ ಬಂದು ಗ್ರಾಮಗಳನ್ನು ರಕ್ಷಿಸುವ ಮನವಿಯಲ್ಲಿ ಸ್ಥಳೀಯ ದೊರೆಗಳ ವಂಶಾವಳಿ ಯನ್ನು ಬರೆಸಲಾಗಿದೆ. ೧೭೫೭ನೇ ಮನ್ಮಥನಾಮ ಸಂವತ್ಸರ ಆಷಾಢಮಾಸದಲ್ಲಿ ತೋಂಟದ ರಾಯಗೌಡರು ಮೃತರಾಗಿ ಅವರ ಮಕ್ಕಳಾದ ಚಿಕ್ಕಪ್ಪಗೌಡರಿಗೆ ಪಟ್ಟಾಭಿಷೇಕವಾಯಿತು. (ಇದು ಕೈಫಿಯತ್ತಿನ ಮುಖ್ಯ ಅಂಶಗಳ ಸಾರ).

**ಚಾರಿತ್ರಿಕ ಪರಿಶೀಲನೆ**

ತುಮಕೂರು ಜಿಲ್ಲೆಯ ಮಧುಗಿರಿಯು ವಿಜಯನಗರ ಅರಸರ ಕಾಲದ ಪಾಳೆಯ ಪಟ್ಟುಗಳಲ್ಲಿ ಗಮನಾರ್ಹವಾದ ಪಾಳೆಯ ಪಟ್ಟಾಗಿತ್ತೆಂದು ಅಲ್ಲಿನ ಕೋಟೆಯು ಸಾಕ್ಷಿಯಾಗಿದೆ. ಮೈಸೂರಿನ ಇತಿಹಾಸದಲ್ಲಿ ಮದ್ದಗಿರಿ, ಟಿಪ್ಪುವಿನ ಕಾಲದಲ್ಲಿ ಪತ್ತಹಬಾದ್, ಪ್ರಸ್ತುತ ಮಧುಗಿರಿ ಇತ್ಯಾದಿಯಾಗಿ ಕರೆಯ ಲಾಗಿರುವ ಇದು ಕ್ರಿ.ಶ. ೧೭ ಮತ್ತು ೧೮ನೇ ಶತಮಾನದಲ್ಲಿ ಮೈಸೂರು ಒಡೆಯರು, ಮರಾಠರು, ಬ್ರಿಟಿಷರ ಗಮನ ಸೆಳೆದಿತ್ತು ಎಂದರೆ ತಪ್ಪಾಗಲಾರದು.

ಚಾರಿತ್ರಿಕವಾಗಿ ಕೈಫಿಯತ್ತಿನ ವಿವರಗಳನ್ನು ಗಮನಿಸು ವುದಾದರೆ ಮದ್ದಗಿರಿ ಅಥವಾ ಮಧುಗಿರಿಯ ಪಾಳೆಯಗಾರರು ಮಧುಗಿರಿ ಸೇರಿದಂತೆ ಚನ್ನರಾಯನದುರ್ಗದವರೆವಿಗೂ ತಮ್ಮ ರಾಜ್ಯವನ್ನು ವಿಸ್ತರಿಸಿದ್ದರು. ವಿಜಯನಗರದ ಮಹಾಪ್ರಭುಗಳಾದ ಶ್ರೀರಂಗರಾಯರ ಉಲ್ಲೇಖ ಕೈಫಿಯತ್ತಿನಲ್ಲಿ ಬಂದಿದೆ. ಮೂರನೇ ಶ್ರೀರಂಗರಾಯರ ಪಟ್ಟಕ್ಕೆ ಬಂದ ತರುವಾಯ ಅಂದರೆ ಕ್ರಿ. ಶ. ೧೬೪೨- ಕ್ರಿ.ಶ. ೧೬೪೬ (ಪರಾಜಿತನಾಗಿ ೧೬೮೧ ವರೆಗೆ)ರಲ್ಲಿ ಅಸ್ತಿತ್ವದಲ್ಲಿದ್ದ ಈ ಪಾಳೆಯಪಟ್ಟನ್ನು ರಾಮಪ್ಪಗೌಡ ಮತ್ತು ತಿಮ್ಮಪ್ಪ ಗೌಡರೆಂಬ ಸಹೋದರರು ಆಳುತ್ತಿದ್ದರು. ಕಾಲಾನಂತರ ಸಹೋದರರಲ್ಲಿ ಅನ್ಯೋನ್ಯತೆಯಿರಲಿಲ್ಲ.

ಮೈಸೂರು ಒಡೆಯರ ಕಾಲದಲ್ಲಿ ಮೈಸೂರ ಒಡೆಯರು ದುರ್ಬಲರಾಗುತ್ತಾ ನಡೆದಂತೆ ನಂಜರಾಜಯ ಹಾಗೂ ದೇವರಾಜ ಎಂಬ ಇಬ್ಬರು ಸರ್ವಾಧಿಕಾರಿಗಳು ತಲೆ ಎತ್ತಿ ಸುತ್ತಮುತ್ತಲಿನ ಪಾಳೆಯಪಟ್ಟುಗಳನ್ನು ವಶಪಡಿಸಿ ಕೊಳ್ಳುತ್ತಾ ನಡೆದರು. ಹಾಗೆ ಅವರ ವಶಕ್ಕೆ ಬಂದ ಪಾಳೆಯಪಟ್ಟಿನಲ್ಲಿ ಮದ್ದಗಿರಿಯೂ ಒಂದು. ಮದ್ದಗಿರಿಯ ಪಾಳೆಗಾರರ ಸಹೋದರರಲ್ಲಿ ಅನೈಕ್ಯಮತ ಮುಖ್ಯ ಕಾರಣವಾಗಿ ಅವರನ್ನು ಬಂಧಿಸಿ ಶ್ರೀರಂಗಪಟ್ಟಣ ಕಾರಾಗೃಹಕ್ಕೆ ತಳ್ಳಿದರು. ಕೆಲವು ಕಾಲದ ನಂತರ ಹೆಚ್ಚಿನ ದಂಡ ತೆತ್ತು ಅಲ್ಲಿಂದ ಬಿಡುಗಡೆ ಹೊಂದಿದರು.

ತಮಗೆ ವಿಧೇಯರಾಗಿರುವರೆಂಬ ಭರವಸೆಯ ಮೇಲೆ ಅವರ ಊಟ, ವಸತಿ ಇತರೆ ಸೌಕರ್ಯಕ್ಕಾಗಿ ತೋಂಟದ ರಾಯನ ಕುಟುಂಬ ವರ್ಗಕ್ಕೆ ಕೆರೆಯೂರು ಎಂಬ ಗ್ರಾಮವನ್ನು ಬಹುಶಃ ವಾರ್ಷಿಕ ಪೊಗದಿಯ ಆಧಾರದ ಮೇಲೆ ನೀಡಿದರು.

ಕಾಲಾನಂತರ ಹೈದರ್ ಅಲಿ ಹಾಗು ಟಿಪ್ಪುಸುಲ್ತಾನರು ಮೈಸೂರಿನ ಸರ್ವಾಧಿಕಾರಿಗಳಾಗಲಾಗಿ ಮಧುಗಿರಿ ಸೇರಿದಂತೆ ಸುತ್ತಲಿನ ಎಲ್ಲ ಪ್ರದೇಶಗಳನ್ನು ತಮ್ಮ ವಶಕ್ಕೆ ತೆಗೆದು ಕೊಂಡುದಲ್ಲದೆ ಹೆಚ್ಚಿನ ತೆರಿಗೆಯನ್ನು ವಿಧಿಸಿದರು. ಕ್ರಿ.ಶ. ಹದಿನೆಂಟನೇ ಶತಮಾನದಲ್ಲಿ ಅಂದರೆ ೧೭೬೭ರಲ್ಲಿ ಕೆಲವು ಕಾಲ ಮರಾಠರ ಮಾಧವರಾವನ ನೇತೃತ್ವದಲ್ಲಿ ಮಿಡಿಗೇಶಿಯು ಮರಾಠರ ವಶವಾಗಿತ್ತು. ಟಿಪ್ಪು ಪ್ರಬಲವಾದಂತೆಲ್ಲ ಮರಾಠರು ಅಲ್ಲಿಂದ ಕಾಲ್ಕಿತ್ತರು. ಸ್ವಾಭಾವಿಕವಾಗಿ ಮಧುಗಿರಿ ಸೇರಿದಂತೆ ಹಲವಾರು ಪ್ರದೇಶಗಳು ಟಿಪ್ಪುವಿನ ಕೈಸೇರಿತು. ಟಿಪ್ಪುವಿನ ಕಾಲದಲ್ಲಿ ವ್ಯಾಪಾರ ವಾಣಿಜ್ಯದ ಕೇಂದ್ರವಾಗಿದ್ದು ಇದನ್ನು ಪತ್ತಹಬಾದ್ ಎಂದು ಕರೆಯಲಾಗುತ್ತಿತ್ತು.

ಮಿಡಗೇಶಿಗೆ ಚನ್ನಬಸಪ್ಪಗೌಡರು ಅಧಿಕಾರಕ್ಕೆ ಬರಲಾಗಿ ತಮ್ಮ ಸಂಸ್ಥಾನವನ್ನು ಮತ್ತೆ ಪಡೆಯಲು ಟಿಪ್ಪುವಿನ ಶತ್ರುಗಳಾದ ಬ್ರಿಟಿಷರ ಪರ ನಿಂತರು. ಮೂರನೇ ಆಂಗ್ಲೋ

ಮೈಸೂರು ಯುದ್ಧದಲ್ಲಿ ಟಿಪ್ಪು ದಯನೀಯ ಸೋಲನ್ನು ಕಂಡಿದ್ದ. ನಾಲ್ಕನೇ ಆಂಗ್ಲೋ ಮೈಸೂರು ಯುದ್ಧವು ನಿಹವಾದಂತೆಲ್ಲ ಬ್ರಿಟೀಷರು ಹೈದರಾಬಾದಿನ ನಿಜಾಮ, ಮರಾಠರ ಸಹಾಯದೊಂದಿಗೆ ಟಿಪ್ಪುವಿನ ಪ್ರದೇಶಗಳನ್ನು ವಶಪಡಿಸಿಕೊಳ್ಳುತ್ತಾ ಬಂದರು. ಚನ್ನಬಸಪ್ಪಗೌಡರು ಮದ್ರಾಸ್ ಪ್ರಾಂತ್ಯದ ಕೃಷ್ಣಗಿರಿಯಲ್ಲಿ ಬೀಡುಬಿಟ್ಟಿದ್ದ ಸೈನ್ಯದ ಮುಖಂಡ ಕರ್ನಲ್ ರೀಟ್ಸ್‌ರನ್ನು ಭೇಟಿಮಾಡಿ ತಮಗೆ ಸಹಾಯ ಮಾಡಬೇಕೆಂದು ಕೇಳಿಕೊಳ್ಳಲು ತಾವು ತೊಂದರೆ ಯಲ್ಲಿರುವರಿಗೆ ಸಹಾಯಮಾಡುತ್ತೇವೆ, ಜನರಲ್ ಹ್ಯಾರಿಸರ ನೇತೃತ್ವದ ಸೈನ್ಯ ಬೆಂಗಳೂರಿನ ಕಡೆ ಬರುತ್ತದೆ, ನಮ್ಮ ಕಂಪನಿಯ ದಂಡಿಗೆ ಊಟ, ವಸತಿ ಇತ್ಯಾದಿ ಸೌಲಭ್ಯ ಒದಗಿಸಿ ಕೊಡಬೇಕೆಂದು ಹೇಳಲಾಗಿ ಅದರಂತೆ ತಮ್ಮ ಪ್ರದೇಶಕ್ಕೆ ಹಿಂತಿರುಗಿದ ಚನ್ನಬಸಪ್ಪಗೌಡರು ಬ್ರಿಟೀಷರ ಆಗಮನಕ್ಕಾಗಿ ತವಕಿಸುತ್ತಿದ್ದರು.

ಹೈದರ್ ಹಾಗೂ ಟಿಪ್ಪುಸುಲ್ತಾನರ ವೈರಿಗಳಾದ ಬ್ರಿಟೀಷರ ಆಶ್ರಯ ಪಡೆದರೆ ತಮ್ಮ ಪ್ರದೇಶಗಳು ತಮ್ಮ ಕೈಸೇರುವುದೇನೋ ಎಂಬ ಆಸೆಯಿಂದ ನಾಲ್ಕನೇ ಮೈಸೂರು ಯುದ್ಧದಲ್ಲಿ ಸ್ಥಳೀಯ ನಾಯಕರು ಬ್ರಿಟೀಷರ ಪರನಿಂತ ರೆನ್ನಲು ಈ ದಾಖಲೆ ಅತ್ಯುತ್ತಮ ಉದಾಹರಣೆಯಾಗಿದೆ. ಇಂತಹ ಪಾಳೆಯಗಾರರು ಬ್ರಿಟಿಷರಿಗೆ ಪ್ರತ್ಯೇಕವಾಗಿ ಇಲ್ಲವೆ ಪರೋಕ್ಷವಾಗಿ ಸಹಾಯ ಮಾಡಿದುದರಿಂದಾಗಿ ಬ್ರಿಟೀಷರು ನಾಲ್ಕನೆಯ ಮೈಸೂರು ಯುದ್ಧದಲ್ಲಿ ಗೆಲ್ಲಲು ಸಹಾಯ ವಾಯಿತು. ಅಂತಿಮವಾಗಿ ಬ್ರಿಟೀಷರು ಟಿಪ್ಪು ಗಳಿಸಿದ ರಾಜ್ಯವನ್ನು ನಾಲ್ಕು ಭಾಗಗಳಾಗಿ ವಿಂಗಡಿಸಿ ಅದರಲ್ಲಿ ಒಂದು ಭಾಗವನ್ನು ಮೈಸೂರು ಒಡೆಯರಿಗೆ ಕೊಡಲು, ಒಡೆಯರಿಂದ ಜೀವನಾಂಶಕ್ಕಾಗಿ ಸನ್ನದು ಪಡೆಯಲು ತಯಾರಿಸಿದ ಕೈಫಿಯತ್ತು ಇದಾಗಿದೆಯೆಂದು ಕೂಡ ಹೇಳಬಹುದು. ಉದ್ದನೆಯ ಸುರಳಿ ಸುತ್ತಿದ ಈ ಪತ್ರ ಮೇಲುನೋಟಕ್ಕೆ ಮೋಡಿ ಅಕ್ಷರದಂತೆ ಕಂಡುಬರುತ್ತದೆ. ಈ ಪತ್ರವನ್ನು ಕಾಲಕಾಲಕ್ಕೆ ನಕಲು ಮಾಡಿದಂತೆ ತೋರುತ್ತದೆ.

○

ಚಂದನ್ ವೈ. ನೀಲಪ್ಪ*

# ಹರಿಹರದ ಕಾರಣೀಕ

"ಕಾರಣೀಕ" ಎಂದರೆ ಪವಾಡ ಎಂದರ್ಥ. ಒಬ್ಬ ದೈವ ಸಂಭೂತನಾದ ವ್ಯಕ್ತಿಯು, ದೇವರ ಹೆಸರಲ್ಲಿ ಹೇಳುವ ಭವಿಷ್ಯವಾಣಿಯೇ "ಕಾರಣೀಕ"ವಾಗಿದೆ. ಈ ವಾಣಿಯು ಆ ಒಂದು ವರುಷದೊಳಗೆ ಸತ್ಯವಾಗುವುದು ಎಂಬ ನಂಬಿಕೆಯು ಜನಜನಿತವಾಗಿದೆ. ಪ್ರತಿಯೊಂದು ಕಡೆ ನಡೆಯುವ ಕಾರಣೀಕವು ನಿರ್ದಿಷ್ಟವಾಗಿ ಒಂದು ವಿಷಯಕ್ಕೆ ಸಂಬಂಧಿಸಿದ್ದು ಎಂದು ನಂಬಲಾಗುತ್ತದೆ. ಮೈಲಾರ ಲಿಂಗೇಶ್ವರನ ಹೆಸರಿನಲ್ಲಿ ಮೈಲಾರದಲ್ಲಿ ಭರತ ಹುಣ್ಣಿಮೆಯ ದಿನ ನಡೆಯುವ ಕಾರಣೀಕ ಮಳೆ ಮತ್ತು ಬೆಳೆಯ ಭವಿಷ್ಯ ನುಡಿದರೆ, ಹರಿಹರದ ತುಂಗಭದ್ರಾ ತೀರದಲ್ಲಿ ನಡೆಯುವ ಕಾರಣೀಕವು ದೇಶದ ರಾಜಕೀಯದ ಭವಿಷ್ಯವಾಣಿ ಎಂಬ ವದಂತಿ ಇದೆ.

ಶ್ರಾವಣಮಾಸವು ಹಬ್ಬಗಳಿಂದ ತುಂಬಿ ತುಳುಕುತ್ತಿರುವ ಮಾಸವಾಗಿದೆ. ಈ ನಾಗರ ಪಂಚಮಿಯ ಮಾರನೇ ದಿನವಾದ ಸಿರಿಯಾಳ ಷಷ್ಠಿಯಂದು ಹರಿಹರದಲ್ಲಿ ನಡೆಯುವ ಕಾರಣೀಕವು ಊರಿಗೆ ವಿಭಿನ್ನ ರೀತಿಯ ಕಳೆಯನ್ನು ತಂದು ಕೊಟ್ಟಿದೆ. ಹರಿಹರದ ತುಂಗಭದ್ರಾ ನದೀ ತೀರದಲ್ಲಿರುವ ಯೋಗೀಶ್ವರ ದೇವಾಲಯದ ಬಯಲು ಪ್ರದೇಶವೇ ಈ ಕಾರಣೀಕ ನಡೆಯುವ ಸ್ಥಳ (ಈ ಹಿಂದಿನ ನನ್ನ ಪ್ರಬಂಧದಲ್ಲಿ ಯೋಗೀಶ್ವರ ದೇವಾಲಯವನ್ನು ಪರಿಚಯಿಸಿದೆ). "ಕೂಡಲೂರು" ಪ್ರದೇಶವೆಂದು ಇತಿಹಾಸ ಕಾಲದಲ್ಲಿ ಉಲ್ಲೇಖಿತವಾಗಿರುವ ಈ ಪ್ರದೇಶದಲ್ಲಿ ಅಂದಿನ ದಿನ ಹಲವಾರು ದೇವಾಲಯಗಳ ಉತ್ಸವಮೂರ್ತಿಗಳು ಒಂದುಗೂಡುವುದು ಮಹತ್ವದ ವಿಷಯವಾಗಿದೆ.

ಸಿರಿಯಾಳ ಷಷ್ಠಿಯ ದಿನ ಸಾಮಾನ್ಯವಾಗಿ ಇಲ್ಲಿಯ ಮನೆಗಳಲ್ಲಿ ಹಬ್ಬದ ವಾತಾವರಣವಿರುತ್ತದೆ. ಮನೆ ಮನೆಗಳಲ್ಲೂ ಹೋಳಿಗೆ ಮಾಡಿ ನಂತರ ನದೀ ದೇವತೆಗೆ ಅವುಗಳನ್ನು ಎಡೆ ಇಟ್ಟು ಗಂಗೆ ಪೂಜೆ ಪೂರೈಸಿದ ನಂತರವೇ ಇಂದಿನ ಊಟ ನಡೆಯುತ್ತದೆ. ಹಬ್ಬದ ಹೊಸ ಬಟ್ಟೆಯನ್ನು ಧರಿಸಿದ ಜನ ಹಿಂಡುಹಿಂಡಾಗಿ ಕಾರಣೀಕ ನಡೆಯುವ ಸ್ಥಳಕ್ಕೆ ಧಾವಿಸುತ್ತಾರೆ.

ಆ ದಿನ ಸುಮಾರು ಮಧ್ಯಾಹ್ನದ ಮೂರು ಘಂಟೆಯಿಂದಲೇ ಅಕ್ಕಪಕ್ಕ ಹಳ್ಳಿಗಳ ದೇವರುಗಳ ಉತ್ಸವ ಮೂರ್ತಿಗಳು ಸರ್ವಾಲಂಕೃತವಾಗಿ ತಮ್ಮ ತಮ್ಮ ಗುಡಿಗಳಿಂದ ಡೊಳ್ಳು ಸಮಾಳ ಜಾಗಟೆಗಳ ಜೊತೆಗೆ ಮೆರವಣಿಗೆಯಿಂದ ಹರಿಹರಕ್ಕೆ ಆಗಮಿಸುತ್ತವೆ. ಈ ಹಿಂದೆ ಎಲ್ಲಾ ದೇವರುಗಳನ್ನು ಕಾಲುನಡಿಗೆಯಲ್ಲೇ ಹೊತ್ತುಕೊಂಡು ಬರುತ್ತಿದ್ದರು. ಆದರೆ ಈಗೀಗ ಟ್ರ್ಯಾಕ್ಟರ್ ಮತ್ತು ಟ್ರಕ್ಕುಗಳ ಮೇಲೆ ಕೂಡ ಇಲ್ಲಿಗೆ ಬರುವುದು ಆರಂಭವಾಗಿದೆ. ಈ ದೇವರುಗಳು ನೇರವಾಗಿ ಕಾರಣೀಕ ನಡೆಯುವ ಸ್ಥಳಕ್ಕೆ ಹೋಗುವುದಿಲ್ಲ. ನದೀ ತೀರದಿಂದ ಅನತಿ ದೂರದಲ್ಲಿರುವ ಬಯಲಲ್ಲಿ ಸೇರುತ್ತವೆ. ಇವುಗಳು ಸೇರಿದ ಸ್ಥಳದಲ್ಲೇ ಮೊದಲು ಜನಸ್ತೋಮ ನೆರೆದಿರುತ್ತದೆ. ಹಲವು ಜನರು ಇಲ್ಲಿ ತಮ್ಮ ತಮ್ಮ ಮನೆ ದೇವರುಗಳಿಗೆ, ಇಷ್ಟ ದೇವರುಗಳಿಗೆ ಪೂಜಾ ಸೇವೆ ಸಲ್ಲಿಸುತ್ತಾರೆ. ಈ ಸ್ಥಳ ಸೇರುವ ಮೊದಲು ಕೆಲವು ದೇವರುಗಳು ಹೊಳೆ ಪೂಜೆ ಮಾಡಿಕೊಂಡು ಬಂದು ಹರಿಹರದ ಇತಿಹಾಸ ಪ್ರಸಿದ್ಧವಾದ ಹರಿಹರೇಶ್ವರನ ಗುಡಿಗೆ ಹೋಗಿ ಅಲ್ಲಿ ಹರಿಹರನಿಗೆ ತಮ್ಮ ಸೇವೆಯನ್ನು ಸಲ್ಲಿಸಿ ಸ್ವಲ್ಪ ಕಾಲ ಅಲ್ಲೇ

* ಮನೆ ನಂ. ೩೧೨, 'ಇ' ವಿಭಾಗ, ಶ್ರಾವಣ ಟುಟ್ಯೋರಿಯಲ್, ನಡುವಲ ಪೇಟೆ, ಹರಿಹರ.

ದ್ದು ನಂತರ ಈ ಸ್ಥಳಕ್ಕೆ ಬರುವ ವಾಡಿಕೆ ಇದೆ. ಇಲ್ಲಿ ಅಂದಿನ ದಿನ ಬಂದು ಸೇರುವ ಉತ್ಸವ ಮೂರ್ತಿಗಳ ವಿವರ ಈ ಕೆಳಗಿನಂತಿದೆ.

೧) ಎಲವಟ್ಟಿಯ ಹನುಮಪ್ಪ ಮತ್ತು ಅವನ ಚರ್ಮದ ಪಾದುಕೆಗಳು, ೨) ಜಿಗಳಿ ರಂಗನಾಥಸ್ವಾಮಿ, ೩) ಜಿಗಳಿಯ ಹನುಮಪ್ಪ, ೪) ಬೆಳ್ಳೂಡಿ ಚಂದ್ರಗುತ್ತಿಯಮ್ಮ, ೫) ಬೆಳ್ಳೂಡಿ ಹನುಮಪ್ಪ, ೬) ಬೆಳ್ಳೂಡಿ ಬೀರಪ್ಪ, ೭) ಲಕ್ಕ್ಮೇಟಹಳ್ಳಿ ಕಾಳಮ್ಮ, ೮) ಹರಿಹರದ ಏಕನಾಥೇಶ್ವರಿ, ೯) ಹರಿಹರದ ಕಾಶೀದುರ್ಗಮ್ಮ, ೧೦) ಹಳ್ಳದಕೇರಿ ದುರ್ಗಮ್ಮ, ೧೧) ಹಳೇಬಾತಿ ದುರ್ಗಮ್ಮ, ೧೨) ಹಳೇಬಾತಿ ಆಂಜನೇಯ ಮತ್ತು ೧೩) ಎಲೆಬೇತೂರು ದುರ್ಗಮ್ಮ. ಈ ಎಲ್ಲಾ ಮೂರ್ತಿಗಳೂ ಎಲವಟ್ಟಿ ಹನುಮಪ್ಪನ ಮೂರ್ತಿ ಬರುವ ಮೊದಲೇ ಈ ಸ್ಥಳಕ್ಕೆ ಆಗಮಿಸಿ ಕಾರಣೀಕ ಹೇಳುವ ಮೂಲ ದೇವರು ಎಲವಟ್ಟಿ ಹನುಮಪ್ಪನ ನಿರೀಕ್ಷೆಯಲ್ಲಿ ಕುಳಿತಿರುತ್ತವೆ. ಎಲವಟ್ಟಿಯ ಆಂಜನೇಯ ಗುಡಿಯ ಪುರೋಹಿತರೇ ಇಂದು ಕಾರಣೀಕ ಹೇಳುವ ವ್ಯಕ್ತಿಯಾಗಿರುತ್ತಾರೆ. ಹರಿಹರಕ್ಕೆ ಆ ದೇವರ ಉತ್ಸವದೊಂದಿಗೆ ಬಂದು ಮೊದಲು ಗುಹಾಸುರನನ್ನು ಕೊಂದು ದೇವತಾ ಕುಲದ ಸಂರಕ್ಷಣೆಗೈದನೆನ್ನಲಾದ ಹರಿಹರನಿಗೆ ಪೂಜೆ ಸಲ್ಲಿಸಿ ನಂತರ ಕಾರಣೀಕ ಹೇಳಲ್ಪಡುವ ಸ್ಥಳಕ್ಕೆ ಧಾವಿಸುತ್ತಾರೆ. ಎಲವಟ್ಟಿ ಹನುಮಪ್ಪನ ಅಡ್ಡಪಲ್ಲಕ್ಕಿ ಮುನ್ನಡೆದ ಬಳಿಕ ಇತರ ದೇವರುಗಳು ಅವಸರವಸರವಾಗಿ ಅದನ್ನು ಹಿಂಬಾಲಿಸುತ್ತವೆ.

ತುಂಗಭದ್ರಾ ತೀರದ ಸಂಗಮೇಶ್ವರ (ಯೋಗೀಶ್ವರ) ದೇವಾಲಯದ ಬಯಲನ್ನು ತಲುಪುತ್ತಿದ್ದಂತೆಯೇ ಕಾರಣೀಕದ ಹನುಮಪ್ಪ (ಕಾರಣೀಕ ಹೇಳುವ ವ್ಯಕ್ತಿಯನ್ನು ಇದೇ ಹೆಸರಿನಿಂದ ಕರೆಯುವುದು ವಾಡಿಕೆ) ತನ್ನ ಜೊತೆಗೆ ತಂದ ಎರಡು ಭಾರೀ ಬಾಣಗಳನ್ನು ಒಂದು ಸ್ಥಾನದಲ್ಲಿ ನೇರವಾಗಿ ನೆಲದಲ್ಲಿ ಹೂಡುತ್ತಾನೆ. ಇವುಗಳಲ್ಲಿ ಒಂದು ಬಾಣ ದೊಡ್ಡದು, ಇನ್ನೊಂದು ಚಿಕ್ಕದಿರುತ್ತದೆ. ದೊಡ್ಡ ಬಾಣ ಸುಮಾರು ೮ ಅಡಿ ಎತ್ತರ ಇದ್ದು, ಚಿಕ್ಕದು ೬ ಅಡಿಗಳಷ್ಟು ಎತ್ತರ ಇದೆ. ಈ ಬಾಣಗಳು ನೆಟ್ಟ ಕೂಡಲೇ ಕಾರಣೀಕದ ಸ್ಥಳ ನಿಗದಿಯಾದಂತೆ. ತಕ್ಷಣ ಎಲ್ಲಾ ದೇವರುಗಳು ಈ ಬಾಣದ ಹಿನ್ನೆಲೆಯಲ್ಲಿ ಬಂದು ನೆಲದ ಮೇಲೆ ಸಾಲುಗಟ್ಟಿ ಕುಳಿತುಕೊಳ್ಳುತ್ತವೆ. ಜನರೆಲ್ಲಾ ಈ ಸ್ಥಳದ ಸುತ್ತಲೂ ನೆರೆಯುತ್ತಾರೆ.

ಎಲವಟ್ಟಿಯ ಆಂಜನೇಯ ದೇವಾಲಯದ ಪೂಜಾರಿಯು ಈ ಕಾರಣೀಕ ಹೇಳುವ ತಯಾರಿಗಾಗಿ ಮೂರು ದಿನಗಳಿಂದ ಉಪವಾಸ ಮಾಡಿರುತ್ತಾನೆ. ಮಡಿಯನ್ನು ಅನುಸರಿಸಿರುತ್ತಾನೆ. ಕಾರಣೀಕ ಸ್ಥಳ ಗೊತ್ತುಪಡಿಸಿದ ನಂತರ ಈ ವ್ಯಕ್ತಿ ಮತ್ತು ಹನುಮಪ್ಪನ ಉತ್ಸವ ಮೂರ್ತಿ ಪಾದುಕೆಗಳು ಎಲ್ಲವೂ ಹೊಳೆ ಕಡೆಗೆ ಹೋಗುತ್ತವೆ. ಕಾರಣೀಕದ ಹನುಮಪ್ಪನು ಹೊಳೆ ಸ್ನಾನ ಮಾಡುತ್ತಾನೆ; ಮಡಿಯುಟ್ಟು, ನದೀ ತೀರದಲ್ಲಿ ಹನುಮಪ್ಪನ ಉತ್ಸವ ಮೂರ್ತಿಗೆ ಊದಿನಕಡ್ಡಿ ಬೆಳಗುತ್ತಾನೆ. ನಂತರ ಆಂಜನೇಯನ ಹಳೇ ಪಾದುಕೆಗಳನ್ನು ನದಿಯಲ್ಲಿ ವಿಸರ್ಜಿಸಿ ಹೊಸ ಪಾದುಕೆಗಳನ್ನು ಆಂಜನೇಯನಿಗೆ ತೊಡಿಸಿ ಕಾರಣೀಕದ ಸ್ಥಳಕ್ಕೆ ಕರೆದುಕೊಂಡು ಬರುತ್ತಾರೆ. ಇಲ್ಲಿ ಈ ಪಾದುಕೆಗಳ ಬಗ್ಗೆ ಸ್ವಲ್ಪ ವಿವರವಾಗಿ ಹೇಳುವುದು ಸೂಕ್ತವೆನಿಸುತ್ತದೆ.

ಎಲವಟ್ಟಿ ಹನುಮಪ್ಪನ ಪಾದುಕೆಗಳು ಸುಮಾರು ಒಂದೂವರೆ ಅಡಿ ದೊಡ್ಡವಾಗಿದ್ದು, ದಪ್ಪ ಚರ್ಮದಿಂದ ಮಾಡಲ್ಪಟ್ಟಿರುತ್ತವೆ. ಈ ಪಾದುಕೆಗಳನ್ನು ಎಲವಟ್ಟಿಯ ದೇವಾಲಯದಲ್ಲಿ ಪೂಜೆಗಾಗಿ ಇಟ್ಟಿರುತ್ತಾರೆ. ಆಂಜನೇಯನು ಪ್ರತೀರಾತ್ರಿ ಅವುಗಳನ್ನು ಧರಿಸಿ ಅಡ್ಡಾಡುತ್ತಿರುತ್ತಾನೆ, ಆದ್ದರಿಂದ ಎಲ್ಲಾ ಆಗುಹೋಗುಗಳನ್ನು ತಿಳಿದಿರುತ್ತಾನೆ, ಹೀಗೆ ಅಡ್ಡಾಡುವುದಿರಂದ ಈ ಪಾದುಕೆಗಳು ಪ್ರತಿವರ್ಷ ಸವೆಯುತ್ತವೆ ಎಂದು ನಂಬಿಕೆ. ಪ್ರತೀವರ್ಷ ಹೊಸ ಪಾದುಕೆಗಳನ್ನು ತಯಾರಿಸಿ ಆಂಜನೇಯನಿಗೆ ತುಂಗಾತೀರದಲ್ಲಿ ತೊಡಿಸುವುದು ''ಕಾರಣೀಕ''ದ ಒಂದು ಅಂಗವಾಗಿದೆ. ಹೊಸ ಪಾದುಕೆಗಳನ್ನು ತೊಟ್ಟ ಆಂಜನೇಯ, ಅವನ ಹಿಂದೆ ಕಾರಣೀಕದ ಹನುಮಪ್ಪ ಮತ್ತು ಜೊತೆಗಾರರು ಸಮಾಳ, ಡೊಳ್ಳುಗಳ ಆರ್ಭಟಗಳ ಜೊತೆಗೆ ಕಾರಣೀಕದ ಸ್ಥಳಕ್ಕೆ ಧಾವಿಸುತ್ತಾರೆ.

ಹಣೆಗೆ ಕುಂಕುಮ ತಿಲಕವನಿಟ್ಟು, ಕೊರಳಲ್ಲಿ ಹೂವಿನ ಹಾರ ತೊಟ್ಟು, ಒಂದು ಕೈಯಲ್ಲಿ ಬಿದಿರಿನ ಬೆತ್ತ, ಮತ್ತೊಂದು ಕೈಯೊಳಗೆ ನಿಂಬೆಹಣ್ಣು ಹಿಡಿದ ''ಕಾರಣೀಕದ ಹನುಮಪ್ಪ'' ಬಾಣಗಳನ್ನು ನೆಟ್ಟ ಸ್ಥಳ ಸೇರುತ್ತಾನೆ. ಬಾಣಗಳಿಗೆ ರೊಟ್ಟಿ ಮತ್ತು ಬುತ್ತಿಯ ನೈವೇದ್ಯ ಅರ್ಪಿಸಿ ಊದಿನಕಡ್ಡಿ, ಕರ್ಪೂರದಾರತಿ ಬೆಳಗಿ ತೆಂಗಿನಕಾಯಿ ಒಡೆಯುತ್ತಾರೆ. ನಂತರ ಕಾರಣೀಕದ ಹನುಮಪ್ಪ ಚಿಕ್ಕ ಬಿಲ್ಲನ್ನು ಆಧಾರವಾಗಿಟ್ಟು ದೊಡ್ಡ ಬಿಲ್ಲನ್ನು ಏರುತ್ತಾನೆ. ಬಿಲ್ಲಿನ ಮೇಲೆ ನಿಲ್ಲುತ್ತಾನೆ.

ಷ್ಟೊತ್ತು ಗಲಾಟೆ ಗದ್ದಲಗಳಿಂದ ಕೂಡಿದ ಸ್ಥಳ ಒಮ್ಮೆಲೇ ಶ್ಯಬ್ದವಾಗುತ್ತದೆ.

ಇಲ್ಲಿ ನಡೆಯುವ ಕಾರಣೀಕ ದೇಶದ ರಾಜಕೀಯದ ಗ್ಗೆ ಮುನ್ನೆಚ್ಚರಿಕೆಯ ಘಂಟೆ ಎಂಬ ಪ್ರತೀತಿಯೂ ಇದೆ. ಗ ಬಾಣವನ್ನೇರಿದ ಹನುಮಪ್ಪ ಏನು ಮಾಡುತ್ತಾನೆಂದು ಳಿಯೋಣ. ಸೂರ್ಯಾಸ್ತದ ವೇಳೆ ಪಶ್ಚಿಮಾಭಿಮುಖವಾಗಿ, ಬಾಣದ ಮೇಲೆ ಎಲವಟ್ಟೆ ಹನುಮಪ್ಪ ನಿಂತಿರುತ್ತಾನೆ. ಎಲಗೈಯಲ್ಲಿಯ ನಿಂಬೆಹಣ್ಣನ್ನು ಹಿಂದೆ ಎಸೆಯುತ್ತಾನೆ. ಎಡಗೈಯಲ್ಲಿಯ ಬಿದಿರ ಕೋಲನ್ನು ಬಹು ಮೆಲ್ಲಗೆ ಸುತ್ತಲೂ ಆಡ್ಡಾಡಿಸುತ್ತಾನೆ. ತನ್ನ ದೃಷ್ಟಿಯನ್ನು ಆಕಾಶದ ಕಡೆಗೊಯ್ದು ಏನನ್ನೋ ಆಕಾಶದಲ್ಲಿ ಹುಡುಕುತ್ತಿರುವವನಂತೆ ಕಾಣುತ್ತಾನೆ. ಒಮ್ಮೆಗೇ ಬಾಣದ ಮೇಲಿನ ಹನುಮಪ್ಪನ ದೈವೀ ಸಂಭೂತವಾದ ನಾಲಿಗೆಯಿಂದ ನುಡಿಮುತ್ತುಗಳು ವಿಸರ್ಜನೆ ಯಾಗುತ್ತವೆ. ಕಾರಣೀಕದ ಹೇಳಿಕೆ ಮುಗಿಯುತ್ತಿದ್ದಂತೆಯೇ ಪೂಜಾರಿ ಬಾಣದಿಂದ ಕೆಳಗುರುಳುತ್ತಾನೆ. ಅವನು ನೆಲಕ್ಕೆ ಬೀಳದಂತೆ ಆತನ ಜೊತೆಗಾರರು ಅವನನ್ನು ಹಿಡಿಯುತ್ತಾರೆ. ಬಾಣಗಳನ್ನು ಕಿತ್ತು ಅಲ್ಲಿಂದ ಒಂದೇ ಸಮನೆ ದೌಡಾಯಿ ಸುತ್ತಾರೆ. ಇತರ ದೇವರುಗಳೂ ತಮ್ಮ ಗುಡಿ ಸೇರಲು ಅವಸರವಾಗಿ ಓಡತೊಡಗುತ್ತವೆ. ಈ ದೇವರುಗಳು ಓಡುವ ದೃಶ್ಯ ಕೂಡ ಚಿತ್ರವಿಚಿತ್ರವೆನಿಸುತ್ತದೆ. ಮುಂದಾಗ ಲಿರುವ ಅನಾಹುತದ ಬಗ್ಗೆ ಎಚ್ಚರಿಕೆ ಕೇಳಿಸಿಕೊಂಡು ಹೆದರಿಕೊಂಡಂತೆ ಅನಿಸುತ್ತದೆ. ಜನರು ಮಾತ್ರ ಸಾವಕಾಶವಾಗಿ ಅಲ್ಲಿಂದ ಚದುರುತ್ತಾರೆ. ಕೆಲವರು ತಿಳಿದವರಿಂದ ಕಾರಣೀಕದ ನುಡಿಗಳನ್ನು ಹೇಳಿಸಿ ಬರೆಯಿಸಿಕೊಂಡರೆ ಉಳಿದವರು ರಾಜಕೀಯಕ್ಕೂ ಕಾರಣೀಕಕ್ಕೂ ಹೋಲಿಸುತ್ತಾ, ತಮ್ಮದೇ ಆದ ಅರ್ಥಗಳನ್ನು ಕೊಟ್ಟು ಚರ್ಚಿಸುತ್ತಾ ಮನೆಯ ಕಡೆಗೆ ಕಾಲು ಹಾಕುತ್ತಾರೆ.

ಸುಮಾರು ಇಪ್ಪತ್ತಮೂರು ವರುಷಗಳ ಕಾರಣೀಕದ ಪಟ್ಟಿ ಈ ರೀತಿ ಇದೆ.

೧೯೭೩-ಮುತ್ತಿನ ರಾಶಿಗೆ ಕೋಲ್ಮಿಂಚು ಹೊಡೆದೀತು ಮುತ್ತಿನೊಳಗಿನ ಮುತ್ತು ಸಿಡಿದೀತು ಎಚ್ಚರಿಕೆ

೧೯೭೪-ಕೈಯಿಲ್ಲದವನು ಬಿತ್ತಿದನು, ಕಣ್ಣಿಲ್ಲದವನು ಕೊಯ್ದನು. ಅದನ್ನು ಕೇಳುವವರುಂಟು ತಿನ್ನುವವರಿಲ್ಲ ಎಚ್ಚರಿಕೆ

೧೯೭೫-ಮುತ್ತಿನ ರಾಶಿಗೆ ಮಂಜು ಮುಸುಕೀತು ಅದು ಕಲ್ಬರ್ ಮಲಕ್ ಆದೀತು ಎಚ್ಚರಿಕೆ

೧೯೭೬-ನಂಬಿ ಬಿತ್ತಿದ ಹೊನ್ನು ಮಣ್ಣಾದೀತು ಸಮುದ್ರದ ಉಪ್ಪು ನೀರಾಗಿ ಹರಿದೀತು ಎಚ್ಚರಿಕೆ

೧೯೭೭-ರಷ್ಯಾದ ಮುತ್ತು ಛಿದ್ರವಾದೀತು ಮಣ್ಣಾದ ಹೊನ್ನು ಚಿನ್ನಾದೀತು ಎಚ್ಚರಿಕೆ

೧೯೭೮-ನಂಬಿದ ಹೊನ್ನು ಮಣ್ಣಾದೀತು, ಆಗಿದ್ದ ಮುತ್ತಿನ ರಾಶಿ ಕದಲೀತು ಎಚ್ಚರಲೇ

೧೯೭೯-ಉಕ್ಕಿದ ಸಮುದ್ರದ ನೀರು ಹೆಪ್ಪುಗಟ್ಟೀತು ಉಪ್ಪಿನ ಅಗಳುಗಳು ಕರಗಿ ನೀರಾಗಿ ಹರಿದಾವು ಎಚ್ಚರಿಕೆ

೧೯೮೦-ಸುಂಕಿನ ರಾಶಿ ಕಲಕ್ ಮಲಕ್ ಆದಾವು, ಅಂಗೈಯೊಳಗಿನ ಗಿಣಿ ಹಾರೀತು ಎಚ್ಚರಲೇ

೧೯೮೧-ಗರ್ಭದೊಳಗಿನ ಶಿಶುವು ಹೊರ ಬಿದ್ದೀತು, ಎದ್ದ ಹುಳುಗಳು ಬೆದರಿ ಹೋದಾವು ಎಚ್ಚರಿಕೆ

೧೯೮೨-ಅಂಗೈಯೊಳಗಿನ ಗಿಣಿ ಆಕಾಶಕ್ಕೆ ಹಾರೀತು ಕಟ್ಟಿದ ಬುತ್ತಿ ಒಡೆದು ಛಿದ್ರವಾದೀತು ಎಚ್ಚರಲೇ

೧೯೮೩-ಹೆಜ್ಜೇನಿನ ಹುಟ್ಟು ಒಡೆದು ಛಿದ್ರವಾದೀತು ಎಚ್ಚರಲೇ

೧೯೮೪-ಆಕಾಶದೊಳು ಗುಂಡು ತೇಲಾಡೀತು, ಅಂಗೈಯೊಳಗಿನ ಗಿಣಿ ಅದ ನೋಡಿ ಒಡೆದು ಚೂರು ಚೂರು ಮಾಡೀತು ಎಚ್ಚರಲೇ

೧೯೮೫-ನೊಣ ಜೇನಿನ ತುಪ್ಪಕ್ಕೆ ಹೆಜ್ಜೇನು ಮುತ್ತ್ಯಾವು ಆ ಹೆಜ್ಜೇನಿಗೆ ಗರುಡ ಪಕ್ಷಿ ಹೊಡೆದೀತು ಎಚ್ಚರಲೇ

೧೯೮೬-ಕೊರಳೊಳು ಶಿವದಾರ, ಕೈ ಬಳೆ ಮುಂಗೈಗೆ ಸುರಿದಾವು ಛಿದ್ರವಾದ ಹೊನ್ನು ಮತ್ತೆ ದುಂಡಾದೀತು ಎಚ್ಚರಲೇ

೧೯೮೭-ಸಿಂಹಾಸನಕ್ಕೆ ಸರ್ಪ ಮುಸುಕೀತು ಛಿದ್ರವಾದ ಹೊನ್ನು ಹೆಪ್ಪುಗಟ್ಟೀತು ಎಚ್ಚರಲೇ

೧೯೮೮-ಎರಡು ಗುಡ್ಡದ ನಡುವೆ ಕಾಮನಬಿಲ್ಲು ಆ ಕಾಮನ ಬಿಲ್ಲಿಗೆ ಎರಡು ಕಣ್ಣಿಗೆ ರಕ್ಕೆ ಹೊಡೆದಾವು ಎಚ್ಚರಿಕೆ

೧೯೮೯-ಕಟ್ಟಿದ ಬುತ್ತಿ ಆ ಬುತ್ತಿಗೆ ಜನಿವಾರ ಮುಸುಕೀತು ಎಚ್ಚರಲೇ

೧೯೯೦-ಅಂಗೈಯೊಳಗೆ ಬಂಗಾರದ ಹೂವು ಆ ಬಂಗಾರದ ಹೂವಿಗೆ ಗರುಡ ಸರ್ಪ ಮುಸುಕೀತು ಎಚ್ಚರಲೇ

೧೯೯೧-ತುಂಬಿದ ಹಾಲಿನ ಕೊಡ, ಆ ಹಾಲಿನ ಕೊಡಕೆ ಉದ್ರೇಕಗೊಂಡ ಸರ್ಪವು ಬಂದು ಮುಸುಕೀತು ಎಚ್ಚರಲೇ

೧೯೯೨-ಕಟ್ಟಿದ ಬುತ್ತಿಗೆ ಹುತ್ತದ ಸರ್ಪ ಮುಸುಕೀತು ಎಚ್ಚರಲೇ

೧೯೯೩-ಅಂಗೈ ಹಕ್ಕಿ ಹಾರೀತು, ಆ ಹಕ್ಕಿಗೆ ಸರ್ಪ ಮುಸುಕೀತು ಎಚ್ಚರಿಕೇ

೧೯೯೪-ಹತ್ತಿದ ಕುದುರೆ, ಆ ಕುದುರೆಯ ಮೇಲೆ ಕಾಳಿಂಗ ಸರ್ಪ ಕುಂತೀತು, ಅದಕ್ಕೆ ಸಿಡಿಲು ಹೊಡೆದೀತು ಎಚ್ಚರಲೇ

೧೯೯೫-ಬಂಗಾರದ ಚೌಕ ಛಿದ್ರವಾದೀತು, ಛಿದ್ರವಾದ ಚೌಕ ಮತ್ತೆ ದುಂಡಾದೀತು ಎಚ್ಚರಲೇ

ದಾವಣಗೆರೆಯ ಅನೆಕೊಂಡದಲ್ಲಿ ನಿಟುವಳ್ಳಿ ದೇವರ ಕಾರಣೀಕವು ಶ್ರಾವಣ ಮಾಸದ ಕಡೇ ಸೋಮವಾರದಂದು ನಡೆಯುತ್ತದೆ. ಬಾನುವಳ್ಳಿಯ ಬಸವಣ್ಣದೇವರ ಕಾರಣೀಕವು ಶ್ರಾವಣ ಮಾಸದ ಕೊನೆಯ ಸೋಮವಾರ ಎಕ್ಕೆಗುಂದಿ ಎಂಬ ಗ್ರಾಮದಲ್ಲಿ ನಡೆಯುತ್ತದೆ. ಮೈಲಾರದ ಕಾರಣೀಕವು ಭರತ ಹುಣ್ಣಿಮೆಯ ಮಾರನೆ ದಿನ ನಡೆಯುತ್ತದೆ. ಆಲೂರಲ್ಲಿ ಹನುಮಪ್ಪನ ಕಾರಣೀಕ ಶ್ರಾವಣದ ಕೊನೆ ಸೋಮವಾರ ನಡೆಯುತ್ತದೆ. ಆದರೆ ದೇವರು ಮಾತ್ರ ಒಂದು ವಾರದ ಮುಂಚಿತವಾಗಿ ಹರಿಹರೇಶ್ವರನಿಗೆ ಸೇವೆ ಸಲ್ಲಿಸಲು ಹರಿಹರಕ್ಕೆ ಬರುವ ವಾಡಿಕೆ ಇದೆ.

ಡಾ॥ ಶ್ರೀನಿವಾಸ ಹಾವನೂರ *

# ದತ್ತಕ ವಿಧಿ-ಮುಂಬಯಿ ಕರ್ನಾಟಕದ ಕೆಲವು ಘಟನೆಗಳು

ಅತಿ ಪ್ರಾಚೀನ ಕಾಲದಲ್ಲಿ, ಕುಟುಂಬದಲ್ಲಿ ಓರ್ವ ಮಗ ಅವಶ್ಯವಾಗಿ ಬೇಕಾಗುತ್ತಿದ್ದ. ಉದ್ದೇಶ, ಕುಟುಂಬ ದಲ್ಲಿಯ ಇಳಿ ವಯದವರ ರಕ್ಷಣೆ ಮಾಡಬೇಕೆಂದು. ಗಂಡು ಮಗ ಒಂದು ವೇಳೆ ಇರದೆ ಹೋದರೆ, ಬೇರೊಬ್ಬನನ್ನು ಕುಟುಂಬದೊಳಗೆ ಸೇರಿಸಿಕೊಳ್ಳುತ್ತಿದ್ದರು. ಇದಕ್ಕೆ ಯಾವುದೇ ಧಾರ್ಮಿಕ ಸ್ವರೂಪವಿರಲಿಲ್ಲ. ಆ ಸ್ವರೂಪ ಬಂದದ್ದು ಆರ್ಯನ್ ಪ್ರಭಾವದಿಂದ. ಕ್ರಮೇಣ ಎಂದರೆ ವೇದೋತ್ತರ ಕಾಲದಲ್ಲಿ ಅದಕ್ಕೆ ಸಾಮಾಜಿಕ ನೆಲೆಯೂ ಸೇರಿಕೊಂಡಿತು. ಪುರಾಣಕಥೆಗಳಲ್ಲಿ ಒಂದೆರಡು ದೃಷ್ಟಾಂತಗಳೂ ಇವೆ. ಅತ್ರಿ ಋಷಿಯು ತನ್ನೊಬ್ಬ ಮಗನನ್ನು ದತ್ತಾಗಿ ಬೇರೊಬ್ಬರಿಗೆ ಕೊಟ್ಟನೆಂದು ತೈತ್ತಿರೀಯ ಸಂಹಿತೆಯಲ್ಲಿ ಬಂದಿದೆ. ಅದಕ್ಕಿಂತ ದತ್ತಕ ವಿಶಿಷ್ಟವಾಗಿದೆ. ಶುನಶ್ಯೇಪನ ತಂದೆ ಅಜೀಗರ್ತ. ಶುನಶ್ಯೇಪನ ತಂದೆಯು ಮಾತುಕೊಟ್ಟಿದ್ದ ಕಾರಣಾಗಿ ಶುನಶ್ಯೇಪನನ್ನು ಯಜ್ಞದಲ್ಲಿ ಬಲಿಕೊಡಬೇಕಾಗಿ ಬಂದಾಗ, ವಿಶ್ವಾಮಿತ್ರ ಮುನಿಯು ಅದರಿಂದ ಅವನನ್ನು ಪಾರು ಮಾಡಿದ. ವಿಶ್ವಾಮಿತ್ರನಿಗೋ ಅದಾಗಲೇ ಹಲವಾರು ಮಕ್ಕಳು. ಅವರಲ್ಲಿಯೇ ಒಬ್ಬನನ್ನಾಗಿ ಶುನಶ್ಯೇಪನನ್ನು ದತ್ತು ತೆಗೆದುಕೊಂಡನಂತೆ.

ಪ್ರಾಚೀನ ಇತಿಹಾಸ ಕಾಲದಲ್ಲಿ ದತ್ತಕ ವಿಧಿಯನ್ನು ನಿಯಮಿತಗೊಳಿಸಲು ಕೆಲವು ಸ್ಮೃತಿ ಗ್ರಂಥಗಳು ಪ್ರಯತ್ನಿಸಿ ದುವು. ಅವುಗಳಲ್ಲಿ ಮನುಸ್ಮೃತಿ, ವಾಶಿಷ್ಠ, ಬೌಧಾಯನ, ಶೌನಕ ಮತ್ತು ಸಾಕಲ್ಯ ಇವು ಹೆಚ್ಚು ಪ್ರಸಿದ್ಧವಾದವುಗಳು. ಅವುಗಳ ಮೇಲೆ ಪ್ರತ್ಯೇಕವಾಗಿ ದತ್ತಕ ವಿಧಿಯನ್ನು ಕುರಿತೇ ಟೀಕಾ ಗ್ರಂಥಗಳು ಹೊರಟವು. ಅವುಗಳಲ್ಲಿ ನೀಲಕಂಠನ 'ಮಯೂಖ', ನಂದಪಂಡಿತನ 'ದತ್ತಕ ಚಂದ್ರಿಕಾ', ಹಾಗೆಯೇ 'ದತ್ತಕ ಮಿಮಾಂಸಾ' ಇವು ಮೂರನ್ನು ಪ್ರಸಂಗ ಬಂದಾಗ, ಪರಿಶೀಲಿಸಿ ನಿರ್ಣಯಕ್ಕೆ ಬರುವುದು ರೂಢಿಗತವಾಯಿತು.

ಆದರೆ ಈ ಟೀಕಾಗ್ರಂಥಗಳ ವಿವರಣೆ ಒಂದರ ಹಾಗೆ ಇನ್ನೊಂದು ಇಲ್ಲ. ಅದಕ್ಕೆ ಕಾರಣವೆಂದರೆ ನಮ್ಮ ದೇಶದಲ್ಲಿಯ ಹಿಂದೂ ಸಮಾಜವು ಬೆಳಬೆಳದಂತೆಲ್ಲ ಪ್ರಾದೇಶಿಕ ಬದಲಾವಣೆಗಳನ್ನು, ಮೈಗೂಡಿಸಿಕೊಂಡದ್ದು. ಉದಾಹರಣೆಗೆ 'ಪುತ್ರ' ಎಂಬವನು ದತ್ತಕ ಹೋಗಲು ಸಾಧ್ಯವಷ್ಟೆ. ಆದರೆ ನಂದಪಂಡಿತನು 'ಪುತ್ರ'. ಇದರಲ್ಲಿ 'ಪುತ್ರಿ'ಯೂ ಅಂತರ್ಗತವೆಂದು ತಿಳಿಯಬೇಕು ಎನ್ನುತ್ತಾನೆ. ಅರ್ಥಾತ್ ಸ್ತ್ರೀಯನ್ನೂ ದತ್ತು ತೆಗೆದುಕೊಳ್ಳಬಹುದು ಎಂದಾಯಿತು. ಅದಕ್ಕೆ ಅವನು ಎರಡು ಪೌರಾಣಿಕ ಉದಾಹರಣೆಗಳನ್ನು ಕೊಟ್ಟಿದ್ದಾನೆ. ಒಂದು, ಶಾಂತಾ ಎಂಬ ದಶರಥನ ಮಗಳು, ವ್ಯೋಮಪಾದರಾಜನಿಗೆ ದತ್ತಕ ಹೋದುದಂತೆ. ಇನ್ನೊಂದು ಉದಾಹರಣೆ, ಕುಂತೀಭೋಜನು ಸುರ ಎಂಬವನ ಮಗಳು ಕುಂತಿಯನ್ನು ದತ್ತು ತೆಗೆದು ಕೊಂಡದ್ದು.

## ಮಧ್ಯಯುಗದಲ್ಲಿ

ಮಧ್ಯಯುಗದಲ್ಲಿ 'ದತ್ತಕ'ದ ಉದ್ದೇಶಗಳನ್ನು (concept) ನಿರ್ದಿಷ್ಟಗೊಳಿಸಲಾಗಿದ್ದಿತು. ಅವೆಂದರೆ

- ಸ್ವರ್ಗದಲ್ಲಿಯ ಪಿತೃಗಳಿಗೆ ಸದ್ಗತಿ-ಪ್ರಾಪ್ತಿ
- ಕುಟುಂಬದ ವಂಶ ಪರಂಪರೆಯನ್ನು ಮುಂದು ವರಿಸುವುದು.

* ೯೦೯, ನಾಲ್ಕನೆಯ ಕ್ರಾಸ್, ಹನ್ನೊಂದನೆಯ ಮೈನ್, ಮೈಕೋಲೇಔಟ್, ಬಿಟಿಎಂ II ಹಂತ, ಬೆಂಗಳೂರು ೫೬೦ ೦೭೬

ವಂಶಾನುಗತವಾದ ಹಕ್ಕುಗಳನ್ನು ಮತ್ತು ಆಸ್ತಿಯನ್ನು ಉಪಭೋಗಿಸುವುದು.

ಮೇಲಿನವುಗಳಲ್ಲಿ ಧಾರ್ಮಿಕ ಹಾಗೂ ಸಾಮಾಜಿಕ ಇವೆರಡೂ ಸೇರಿರುತ್ತವೆ ಎಂಬುದನ್ನು ಗಮನಿಸಬೇಕು. ಇವುಗಳಲ್ಲಿ ಯಾವುದಕ್ಕೆ ಹೆಚ್ಚು ಒತ್ತು ಎಂದು ಹೇಳುವುದು ಕಷ್ಟ. ಅದು ಆ ಕುಟುಂಬಗಳ ಪರಿಸ್ಥಿತಿಯನ್ನು ಅವಲಂಭಿಸಿರುತ್ತದೆ.

ಮೇಲಿನವುಗಳಲ್ಲಿ ಮೂರನೆಯದರ ಕಾರ್ಯಾಚರಣೆಯ ಬಾಬತ್ತಿನಲ್ಲಿ ಸರಕಾರೀ ಯಂತ್ರದ ಅಗತ್ಯ ಬೀಳತೊಡಗಿತು. ಆಸ್ತಿಯ ಹಸ್ತಾಂತರ ಅಷ್ಟು ಸುಲಭವಾದದ್ದಲ್ಲ. ಆದ್ದರಿಂದ ಮಧ್ಯಯುಗದಲ್ಲಿ ಆ ಆ ಪ್ರದೇಶಗಳ ಸರಕಾರದವರು (ಅದು ಸಂಸ್ಥಾನವೂ ಆಗಿರಬಹುದು) ಒಂದಿಷ್ಟು 'ನಜರಾಣಾ' ಪಡೆದು ದತ್ತಕ್ಕೆ ಅಧಿಕೃತ ಮುದ್ರೆಯನ್ನೊತ್ತುವ ಕ್ರಮವು ಬಳಕೆಯಲ್ಲಿ ಬಂದಿತು. ಸಾಮ್ರಾಜ್ಯವನ್ನೇ ಆಳುತ್ತಿದ್ದ ಪೇಶ್ವೆಯರೂ ಸಂಬಂಧಪಟ್ಟ ಪ್ರದೇಶದ ಅಧಿಕಾರಿಗಳಿಗೆ ಮುಂಚಿತ ತಿಳಿಸಿಯೇ ದತ್ತಕ ತೆಗೆದುಕೊಳ್ಳಬೇಕೆಂದು ವಿಧಿಸಿದ್ದರು. ಆದರೇನು, ಅವರುಗಳು ಲಂಚ ತೆಗೆದುಕೊಂಡು ದತ್ತಕ-ಪಶ್ಚಾತ್ ಎಷ್ಟೋ ಬಾರಿ ಮಂಜೂರನ್ನು ಕೊಟ್ಟದ್ದುಂಟು.

ಎಲ್ಲರಿಗೂ ತಿಳಿದಿರುವ ಹಾಗೆ ದತ್ತಕ ವಿಧಿಯು ಮೂವರು ಗಂಡಸರನ್ನು ಒಳಗೊಳ್ಳುತ್ತದೆ. ಮಗನನ್ನು ದತ್ತು ಕೊಡುವ ತಂದೆ, ಅದನ್ನು ಸ್ವೀಕರಿಸುವವ, ಮತ್ತು ಸ್ವತಹ ದತ್ತು ಹೋಗುವವ. ಈ ಮೂವರ ಕಾರ್ಯದಲ್ಲಿ ನ್ಯಾಯಕ್ಷಮತೆ ಇದೆಯೆಂಬುದನ್ನು ಖಾತ್ರಿ ಮಾಡಿಕೊಳ್ಳಬೇಕಾಗುತ್ತದೆ. ಆದರೆ ಎಷ್ಟೋ ಬಾರಿ ಇಲ್ಲಿ ಆ ಮೂವರಲ್ಲದೆ, ಸಂಬಂಧ ಪಟ್ಟ ಸ್ತ್ರೀಯರದೂ ಪಾತ್ರವಿರುತ್ತದೆ. ಇವರೆಲ್ಲ ಸೇರಿದಾಗ ನ್ಯಾಯ ಕ್ಷಮತೆಯು (Competence) ಪ್ರಶ್ನಾರ್ಹವಾಗುತ್ತದೆ.

## ಬ್ರಿಟಿಶರ ಕಾಲದಲ್ಲಿ

ಬ್ರಿಟಿಶರ ಕಾಲದಲ್ಲಿ ಎಂದರೆ ೧೯ನೆಯ ಶತಮಾನದಲ್ಲಿ ದತ್ತಕ ವಿಧಿಯಲ್ಲಿ ಹತ್ತಾರು ತೊಡಕುಗಳು ಕಾಣಿಸಿಕೊಂಡವು. ಹಿಂದೂಗಳ ದತ್ತಕ ವಿಧಿ-ಎನ್ನುವುದೇ ಅವರಿಗೆ ಹೊಸತು. ಅವರು ಎದುರಿಸಬೇಕಾಗಿಬಂದ ಕೆಲವು ತೊಡಕುಗಳಿವು :

- ಶಾಸ್ತ್ರದ ಪ್ರಕಾರ ದತ್ತಕ ವಿಧಿ ಜರುಗಿತೆ?
- ದತ್ತಕ ಹೋದ ಹುಡುಗನ ಮದುವೆಯಾಗಿತ್ತೆ?
- ದತ್ತಕದ ಕಾಲಕ್ಕೆ ಮೃತನಾದವನ ಹೆಂಡತಿ ಗರ್ಭಿಣಿ ಇದ್ದರೆ ?
- ದತ್ತಕ ವಿಧಿಗೆ ಸವತಿಯರ ಒಪ್ಪಿಗೆಯನ್ನು ಪಡೆದಿತ್ತೆ?
- ಆಸ್ತಿಯನ್ನು ದತ್ತಕಕ್ಕೆ ಮುಂಚೆ ಅಥವಾ ಆ ಕೂಡಲೇ ಬೇರೆ ರೀತಿಯಲ್ಲಿ ವಿಲೇವಾರಿ ಮಾಡಿದ್ದಿತೆ?

ಇಂಥ ಅಂಶಗಳ ಬಗ್ಗೆ ನಿರ್ಣಯ ತೆಗೆದುಕೊಳ್ಳುವಲ್ಲಿ ಮುಂಬಯಿಯ ಪ್ರಥಮ ಗವರ್ನರ್ ಎಲ್‌ಫಿನ್‌ಸ್ಟನ್ ಪುಣೆಯಲ್ಲಿಯ ಶಾಸ್ತ್ರಿಗಳನ್ನು ಕೇಳುವ ಕ್ರಮವನ್ನು ರೂಢಿಸಿದ್ದ ಒಂದು ವಿಷಯದಲ್ಲಿ ಮಾತ್ರ-ಆಸ್ತಿ ಇದ್ದವರು, ಸಂಸ್ಥಾನಿಕರು ಪೂರ್ವ ಪರವಾನಿಗೆ ಪಡೆದಿರಬೇಕು ಎನ್ನುವ ಬಾಬತಿನಲ್ಲಿ ಕಟ್ಟುನಿಟ್ಟಾಗಿ ವರ್ತಿಸುತ್ತಿದ್ದರು. ಆಮೇಲೆ ಅದಕ್ಕೆ ಇನ್ನೆರಡು ನಿಯಮಗಳನ್ನು ಸೇರಿಸಿದರು :

೧) ಸರಕಾರವು ದತ್ತಕವನ್ನು ಮಾನ್ಯ ಮಾಡಬಹುದು. ಅದರರ್ಥ ಅವನು ತಂತಾನೆ ಹಕ್ಕಿನಿಂದ ಆ ಆಸ್ತಿಗೆ ಒಡೆಯನಾಗಲಾರ. ಆ ಹಕ್ಕುದಾರಿಕೆಯನ್ನು ನಿರ್ದಿಷ್ಟವಾಗಿ ಪಡೆದಿರಬೇಕಾಗುತ್ತದೆ.

೨) ಯಾವದೊಂದು ದತ್ತಕ ವಿಧಿಯನ್ನು ಸರಕಾರವು ಆ ವ್ಯಕ್ತಿಯ ಮೇಲೆ ಉಪಕಾರಗೈದಂತೆಯೇ ಎಂದು ತಿಳಿಯತಕ್ಕದು.

ಇದರಲ್ಲಿ ಅವರ ಅಪ್ಪಟ ಸ್ವಾರ್ಥವಿತ್ತೆಂದು ಬೇರೆ ಹೇಳಬೇಕಿಲ್ಲ. ಯಾರೊಬ್ಬ ದೇಸಾಯಿ/ಸಂಸ್ಥಾನಿಕ ತೀರಿ ಹೋದರೆ, ಮಕ್ಕಳಿಲ್ಲವೆಂಬ/ವಾರಸುದಾರರಿಲ್ಲೆಂಬ ಕಾರಣ ಕೊಟ್ಟು ಆ ಪ್ರದೇಶವನ್ನು ತಮ್ಮ ನೇರ ಆಡಳಿತಕ್ಕೆ ಒಳಗಾಗಿಸಬಹುದು. ಡಾಲಹೌಸಿ ವ್ಹಾಯಿಸರಾಯನ 'Doctrine of Lapse' ಈ ವಿಷಯದಲ್ಲಿ ಸುಪ್ರಸಿದ್ಧವಿದೆ. ಅದರ ಬಹು ದೊಡ್ಡ ಉದಾಹರಣೆ ಝಾಂಸಿಯ ರಾಣಿ ಲಕ್ಷ್ಮೀಬಾಯಿಯದು. ಅಲ್ಲಿಯ ರಾಜನು ಜೀವಂತ ಇದ್ದಾಗಲೇ ಒಬ್ಬ ಹುಡುಗನನ್ನು ದತ್ತು ತೆಗೆದುಕೊಂಡಿದ್ದನು. ರಾಣಿಯು ಅದಕ್ಕೆ ಮಂಜೂರಾತಿಯನ್ನು ಕೇಳಿದಾಗ ಡಾಲಹೌಸಿ ಕೊಡಲಿಲ್ಲ. ಆ ಮುಂದೆ ೧೮೫೭ರ ವಿಪ್ಲವದಲ್ಲಿ ರಾಣಿಯು ಯಾವ ರೀತಿ ಪ್ರತಿಕ್ರಿಯೆ ತೋರಿದಳೆಂಬುದನ್ನು ಬಲ್ಲೆವು.

ಮುಂಬಯಿ ಕರ್ನಾಟಕದಲ್ಲಿ

ಬ್ರಿಟಿಷರು ಈ ಭಾಗವನ್ನು ವಶಪಡಿಸಿಕೊಂಡಾಗ ಇಲ್ಲಿ ನಾನಾ ಬಗೆಯ ವತನದಾರರು (ದೇಸಾಯಿ, ದೇಶಪಾಂಡೆ, ಇನಾಂದಾರ ಇ.) ಆರಂಭದ ವರ್ಷಗಳಲ್ಲಿಯ (೧೮೨೦ರ ದಶಕ) ದತ್ತಕ ವ್ಯಾಜ್ಯದ ಪ್ರಕಣರಗಳು ತಲೆದೋರಿದುವು. ಆ ಕಾಲಕ್ಕೆ ಇಲ್ಲಿ ಸೆಂಟ್ ಜಾನ್ ಥ್ಯಾಕರೆ ಇಡೀ ಧಾರವಾಡ ಸುಭಾದ (ಬೆಳಗಾಂವಿ, ವಿಜಾಪುರಗಳೂ ಸೇರಿದಂತೆ) ಕಲೆಕ್ಟರನಾಗಿಯೂ, ದಕ್ಷಿಣ ಮಹಾರಾಷ್ಟ್ರ ಸಂಸ್ಥಾನಗಳ ಪೊಲಿಟಿಕಲ್ ಏಜಂಟ್ ಎಂದೂ ನೇಮಕವಾಗಿ ಇದ್ದನು. ಅವನ ಮೇಲಿನ ಅಧಿಕಾರಿಯಾಗಿ ಚಾಪ್ಲಿನ್ ಎಂಬಾತ ಕಮಿಶ್‌ನರ್ ಆಗಿದ್ದನು.

೧೮೨೦ರ ಆಗಸ್ಟ್ ೧೨ರಂದು ಚಾಪ್ಲಿನ್ ಈ ಕೆಳಗಿನ ಆಶಯದ ಹುಕುಮನ್ನು ಹೊರಡಿಸಿದನು : ಈ ಹಿಂದೆ ಪೇಶ್ವೆಯರ ಕಾಲದಲ್ಲಿ ದತ್ತಕ ತೆಗೆದುಕೊಳ್ಳುವವರು ಆ ಸರಕಾರದ ಪರವಾನಿಗೆಯನ್ನು ಪಡೆಯಬೇಕೆಂದು ವಿಧಿಸಿದ್ದರೂ ಅನೇಕರು ಹಾಗೆ ಮಾಡುತ್ತಿಲ್ಲ. ಆದ್ದರಿಂದ ಈ ಮೂಲಕ ತಿಳಿಸುವದೇನೆಂದರೆ, ಯಾರೇ ವತನದಾರರು ದತ್ತಕ ತೆಗೆದುಕೊಳ್ಳುವ ಮುಂಚೆ ಸುಭಾದ (ಧಾರವಾಡ) ಮುಖ್ಯಸ್ಥನ ಲಿಖಿತ ಅನುಮತಿಯನ್ನು ಪಡೆದಿರಲೇಬೇಕು. ಹಾಗೆ ಅರ್ಜಿ ಸಲ್ಲಿಸಿದಾಗ ಆ ಮುಖ್ಯಸ್ಥನು ವಿಚಾರಣೆ ನಡೆಸಿ, ಶಾಸ್ತ್ರ ರೀತ್ಯಾ ಅದು ಸರಿಯಾದದ್ದೆಂದು ಖಾತ್ರಿ ಮಾಡಿಕೊಂಡು ಅನುಮತಿ ನೀಡುವನು. ಇಲ್ಲವೆ ನಿರಾಕರಿಸಬಹುದು. ಅದನ್ನು ಪೂರ್ಣತಃ ಪಾಲಿಸತಕ್ಕದ್ದು. ಇದಕ್ಕೆ ತಪ್ಪಿದಲ್ಲಿ ಸರಕಾರವು ಅಂಥ ದತ್ತಕವನ್ನು ಮಾನ್ಯ ಮಾಡುವದಿಲ್ಲ ಮತ್ತು ದತ್ತು ಹೋದ ಹುಡುಗನಿಗೆ ಯಾವುದೇ ಹಕ್ಕು-ಆಸ್ತಿ ಪಡೆಯುವದನ್ನು ನಿರ್ಬಂಧಿಸಲಾಗುವುದು.

ಕಿತ್ತೂರಿನ ಕೊನೆಯ ದೇಸಾಯಿ ಶಿವಲಿಂಗರುದ್ರ ಸರ್ಜನು ದತ್ತಕ ತೆಗೆದುಕೊಂಡು ಮರುಗಳಿಗೆಗೆ ತೀರಿಕೊಂಡ ನಷ್ಟೆ. ಆಗ ಥ್ಯಾಕರೆ ಕಿತ್ತೂರಿಗೆ ಬಂದು ಇದೇ ಹುಕುಮನ್ನು ರಾಣಿ ಚೆನ್ನಮ್ಮ ಹಾಗೂ ಇತರ ಗಣ್ಯರಿಗೆ ಓದಿ ತೋರಿಸಿದ್ದು (ಅಕ್ಟೋಬರ್ ೧೮೨೪) ಮತ್ತು ಅದರನ್ವಯ ಮಾಸ್ತ ಮರಡಿಯ ಆ ಹುಡುಗನ ದತ್ತಕವನ್ನು ಮಾಡದೇ ಕಿತ್ತೂರ ದೇಸಗತಿಯನ್ನು ನೇರ ಬ್ರಿಟಿಷ್ ಆಡಳಿತದಲ್ಲಿ ತರಬಯಸಿದ.

ಆದರೆ ಬಿಟಿಷರು ಬರುವುದಕ್ಕೆ (೧೮೧೮) ಮುಂಚೆ ಜರುಗಿದ್ದ ದತ್ತಕಗಳ ಸ್ಥಾನಮಾನ ಏನೆಂದು ಇರಬೇಕು? ಇಂಥವು ಸಾಕಷ್ಟು ಇದ್ದುದರಿಂದ ೨೫ ಅಕ್ಟೋಬರ್ ೧೮೩೧ರಲ್ಲಿ ಸರಕಾರವು ಬೇರೊಂದು ಹುಕುಮನ್ನು ಹೊರಡಿಸಿ.

As the Government admits that children adopted should succeed to Inam lands. But with regard to Jagirs, no adoption can have any effect unless it is expressly so declared by Govt.

'ಇನಾಮ' ಮತ್ತು 'ಜಹಗೀರು' ಇವುಗಳ ಅಂತರವನ್ನೂ ತುಸು ವಿವರಿಸಬೇಕು. ಇನಾಮ ಜಮೀನುಆಸ್ತಿ ವಂಶಪಾರಂಪರ್ಯವಾಗಿ ಬಂದಿರುವಂತಹದು. ಜನ್ಮ ಜಾತವಾಗಿ ಅದರ ಹಕ್ಕುದಾರಿಕೆ ಪ್ರಾಪ್ತವಾಗುವುದು. ದೇಸಾಯಿಗಳು, ದೇಶಪಾಂಡೆಗಳು, ಇತರ ಸಂಸ್ಥಾನಿಕರು ಈ ಸದರಿನಲ್ಲಿ ಬರುವರು. ಅದೇ 'ಜಹಗೀರ' ಎನ್ನುವುದು. ಸರಕಾರವು ವ್ಯಕ್ತಿಯೊಬ್ಬ ತನಗೆ ಸಲ್ಲಿಸಿದ ಸೇವೆಯ ಪ್ರತಿಫಲವೆಂದು ಉದಾರವಾಗಿ ಕೊಟ್ಟಿರುವಂತಹದು. ಪಟೇಲರು, ಕುಲಕರ್ಣಿಗಳು, ಕೊತ್ವಾಲರು ಇದರಡಿಯಲ್ಲಿ ನಿಲ್ಲುತ್ತಾರೆ.

ದತ್ತಕ ಪೂರ್ವದ ಅಥವಾ ಅನಂತರದ ಆಸ್ತಿಯ ವಿಲೇವಾರಿಯ ಸಾಧಕ ಬಾಧಕಗಳನ್ನು ತಿಳಿಯಲು, ಸರಕಾರವು ಮಾಹಿತಿಯನ್ನು ಸಂಗ್ರಹಿಸಿ, ಅದೇ ಆಗ ನೇಮಕವಾಗಿದ್ದ, ಮತ್ತು ಇಂಥ ಸಂದಿಗ್ಧಗಳನ್ನು ಪರಿಹರಿಸಲು ಅನುಜ್ಞೆಯನ್ನು ಹೊಂದಿದ್ದ ಇನಾಮ ಕಮಿಶನ್ನಿಗೆ ಕಳಿಸಿಕೊಟ್ಟಿತು. ಅದರ ಕಮೀಷನರ್ ಆಗಿದ್ದ ಹಾರ್ಟ್ ಈ ಕುರಿತು ತನ್ನ ವರದಿಯನ್ನು ಸಾದರಪಡಿಸಿದ. (೨೭ ಮಾರ್ಚ್ ೧೮೪೭). ಅದರಲ್ಲಿ ಇನಾಮ ಆಸ್ತಿಯ ದಾನ/ವಿಕ್ರಯಗಳಿಗೂ ಸರಕಾರದ ಪೂರ್ವಾನುಮತಿ-ಬೇಕೆಂದು ಸ್ಪಷ್ಟಪಡಿಸಿದ್ದಾರೆ.

ಮರುವರ್ಷ (೨೯ ಮಾರ್ಚ್ ೧೮೪೮) ಹಾರ್ಟ್ ದತ್ತಕ ವಿಧಿಯ ಪೂರ್ವಾಪರಗಳನ್ನು ಕುರಿತು ಇಡೀ ಪ್ರಾಂತಕ್ಕೆ ಅನ್ವಯಿಸುವ ಸವಿವರ ನಿಯಮಾವಳಿಯನ್ನು ಸಿದ್ಧಗೊಳಿಸಿ ಸರಕಾರಕ್ಕೆ ಹಾಜರುಪಡಿಸಿದನು. ಅದರ ಒಂದು ಮೋಜೆಂದರೆ ಈ ನಿಯಮಾವಳಿಯ 'ಗಟ್ಟಿತನ' (Efficacy) ಅಥವಾ ಯುಕ್ತಾಯುಕ್ತತೆಯನ್ನು ಪರೀಕ್ಷೆಗೆ ಒಳಪಡಿಸಲು, ಮೊದಲು ಅವನ್ನು ಮುಂಬಯಿ ಕರ್ನಾಟಕ ಪ್ರದೇಶದಲ್ಲಿ ಪ್ರಯೋಗಿಸಿ ನೋಡಬೇಕು-ಎಂಬುದು. ಇದನ್ನೆ ತಳಹದಿಯಾಗಿಟ್ಟುಕೊಂಡು ಇಡೀ ದೇಶಕ್ಕೆ ಅನ್ವಯಿಸುವ 'The Hindu Law of Adoption' ೧೮೭೯ರಲ್ಲಿ ಸಿದ್ಧವಾಯಿತು.

### ವಿಧವೆಯರು ದತ್ತಕ ತೆಗೆದುಕೊಳ್ಳುವುದು

ಹೆಚ್ಚಿನ ತೊಡಕುಗಳು ವಿಧವೆಯರು ದತ್ತಕ ತೆಗೆದುಕೊಳ್ಳ ಹೊರಟಾಗ ತೋರಿಬಂದುವು. ನಮ್ಮ ಸಮಾಜದ ನಡವಳಿಕೆಯಲ್ಲಿ ಗಂಡಸು ತನಗೆ ಬೇಕೆಂದವರನ್ನು ದತ್ತು ತೆಗೆದುಕೊಳ್ಳುವನು. ಅದಕ್ಕೆ ಅವನ ಸಹಧರ್ಮಿಣಿಯ ಒಪ್ಪಿಗೆ ಸ್ವಯಂಸಿದ್ಧವಾದದ್ದಾಗುತ್ತಿತ್ತು . ಆದರೆ ಗಂಡ ಜೀವಂತ ಇಲ್ಲದಾಗ ಅಷ್ಟೇ ಸ್ವತಂತ್ರವಾಗಿ ಆಕೆ ತನಗೆ ಬೇಕೆಂದವನನ್ನು ದತ್ತು ತೆಗೆದುಕೊಳ್ಳುವುದು ಸುಲಭವಿರಲಿಲ್ಲ. ತನ್ನ ಖಾಸ ತವರಿನವರನ್ನೊ ಅಥವಾ ಯಾರಯಾರನ್ನೊ ಆಕೆ ದತ್ತು ತೆಗೆದುಕೊಂಡು, ಆಸ್ತಿ ಇನ್ನೆಲ್ಲಿಯೋ ಹರಿದು ಹೋಗಬಾರ ದೆಂದು, ಆಗಿನ ಅವಿಭಕ್ತ ಕುಟುಂಬದ ಇತರ ಹಿರಿಯರಾಗಲೀ ಸವತಿಯರಾಗಲೀ ಸಮ್ಮತಿಸದೇ ಹೋಗಬಹುದು. (ಆಸ್ತಿ ವಂತ ತನಗೆ ಮಕ್ಕಳಿಲ್ಲದಾಗ ಇನ್ನೊಂದು/ಎರಡು ಹೆಚ್ಚಿನ ಹೆಣ್ಣನ್ನು ತರತ್ತಿದ್ದುದು ಸ್ವಾಭಾವಿಕವೇ ತಾನೇ.) ಅಂತೂ ಕುಟುಂಬದಲ್ಲಿ ಅವಳ ದುಯ್ಯಮ ಸ್ಥಾನ ವಿಧವೆಯ ದತ್ತಕ ವಿಚಾರಗಳಿಗೆ ಅಡ್ಡಗಾಲು ಹಾಕಬಹುದಿತ್ತು. ಸಾಲದ್ದಕ್ಕೆ ಈ ಮೊದಲು ಹೇಳಿದಂತೆ ಸ್ಮೃತಿಗಳಲ್ಲಿಯ ದತ್ತಕ ವಿಷಯದ ಟೀಕಾಗ್ರಂಥಗಳು ಪರಸ್ಪರ ವಿರೋಧರೂಪದ ನಿಲುವನ್ನು ತಳೆದದ್ದು ಬ್ರಿಟಿಷರಿಗೆ ಬಗೆಹರಿಯದ ಸಮಸ್ಯೆಯಾದದ್ದುಂಟು.

ಬ್ರಿಟಿಶರ ಆಡಳಿತದ ಸುರುವಾತಿಗೆ ತಲೆದೋರಿದ ದತ್ತಕ ಸಮಸ್ಯೆಗಳು ಬಂದಾಗ, ಶಾಸ್ತ್ರಿಗಳನ್ನು ಕೇಳುವ ಪರಿಪಾಠ, ಪುಣೆಯಲ್ಲದೆ ಇತರ ಕಡೆಗಳಿಗೂ ನಡೆದು ಬಂದ ಪ್ರಸಂಗಗಳಿವೆ. ಉದಾಹರಣೆಗೆ ಕಲೆಕ್ಟರ್ ಥ್ಯಾಕರೆ ಹುಬ್ಬಳ್ಳಿಯ ಓರ್ವ ಶಾಸ್ತ್ರಿಗಳನ್ನು ಈ ರೀತಿ-ಕೇಳಿ ಉತ್ತರ ಪಡೆದನೆಂದು ಒಂದೆಡೆ ದಾಖಲೆಗೊಂಡಿದೆ (೧೮೨೦).

ಪ್ರಶ್ನೆ : ಸಾಯುವಾಗ ಗಂಡನು ದತ್ತಕ ತೆಗೆದುಕೊಳ್ಳುವ ಬಗ್ಗೆ ಏನೂ ಹೇಳದಿದ್ದಾಗ ವಿಧವೆಯಾದ ಹೆಂಡತಿ ದತ್ತು ತೆಗೆದುಕೊಳ್ಳಬಹುದೊ? ಈ ರೀತಿ ದತ್ತು ಹೋದವನಿಗೆ ಆಸ್ತಿಯ ಹಕ್ಕುದಾರಿಕೆ ಪ್ರಾಪ್ತವಾಗುವದೊ?

ಉತ್ತರ : 'ಧರ್ಮಸಿಂಧು'ವಿನ ಪ್ರಕಾರ ಆಕೆ ದತ್ತಕ ತಗೊಳ್ಳಬಹುದು. ಆದರೆ ನಂದ ಪಂಡಿತನು ಇದನ್ನು ಒಪ್ಪುವುದಿಲ್ಲ. ಗಂಡನ ಒಪ್ಪಿಗೆ ಇಲ್ಲದಂಥ ಯಾವ ಕೆಲಸವನ್ನೂ ಆಕೆ ಮಾಡಬಾರದು, ಎನ್ನುತ್ತಾನೆ. ಅದೇ, ವಿಜ್ಞಾನೇಶ್ವರನು, ವಿಧವೆ ದತ್ತಕ ತಗೊಳ್ಳುವರೆ ಸಾಯುವ ಮುಂಚೆ ಗಂಡನು ಅದಕ್ಕೆ ಒಪ್ಪಿರಬೇಕು-ಎನ್ನುತ್ತಾನೆ. ಏನಿದ್ದರೂ ನಮ್ಮ ಭಾಗದ (ಮುಂಬಯಿ ಪ್ರಾಂತ) ಪದ್ಧತಿಯು ವಿಧವೆಯು ದತ್ತಕ ತೆಗೆದುಕೊಳ್ಳಬಹುದೆಂತಲೇ ಹೇಳುತ್ತದೆ.

ಪ್ರಶ್ನೆ: ಹಾಗಿದ್ದರೆ ಕೆಲವು ಉದಾಹರಣೆಗಳನ್ನು ಕೊಡುವಿರ ?

ಉತ್ತರ : ರಾಮದುರ್ಗ ಸಂಸ್ಥಾನದಲ್ಲಿ, ಸಂಸ್ಥಾನಿಕ ಗೋವಿಂದರಾಯನು ತೀರಿಕೊಂಡಮೇಲೆ ವಿಧವೆ ರಾಧಾ ಬಾಯಿಯು ರಾಮರಾವ ಎಂಬವನನ್ನು ದತ್ತಕ ತೆಗೆದು ಕೊಂಡಿದ್ದಾಳೆ. ಜಾಲಿಹಾಳ ದೇಸಗತಿಯಲ್ಲಿ, ವಿಧವೆ ಲಕ್ಷ್ಮವ್ವನೂ ಹಾಗೇ ಮಾಡಿದ್ದಾಳೆ. ಆದರೆ ದತ್ತಕ ಹೋದ ಪಟೇಲ, ಕುಲಕರ್ಣಿಗಳು ಸರಕಾರದ ವಿರುದ್ಧ ಏನಾದರೂ ಮಾಡಿದ್ದರೆ, ಅವರ ಆಸ್ತಿಯನ್ನು ಸರಕಾರವು ವಶಪಡಿಸಿ ಕೊಂಡಿದೆ. ಮತ್ತು ನಜರಾಣೆಯನ್ನು ಕೊಟ್ಟಮೇಲೆ ಅವರ ಆಸ್ತಿಯನ್ನು ಮರಳಿ ಕೊಟ್ಟದ್ದುಂಟು.

ಒಟ್ಟಿನಲ್ಲಿ ಮುಂಬಯಿ ಸರಕಾರವು ವಿಧವೆಯರ ದತ್ತಕ ವಿಧಿಯನ್ನು ಮಾನ್ಯ ಮಾಡುವ ಒಲವನ್ನೆ ತೋರಿದೆ.

ಪ್ರಕೃತ ಮುಂಬಯಿ ಕರ್ನಾಟಕಕ್ಕೆ ಸಂಬಂಧಿಸಿದ ೧೮೨೦ರ ದಶಕದ ಎರಡು ದತ್ತಕ ಪ್ರಕರಣಗಳನ್ನು ನೋಡುವಾ.

### ೧. ಡಂಬಳ ದೇಸಾಯಿಣಿ

ಈ ಭಾಗದಲ್ಲಿ ಬ್ರಿಟಿಷ್ ಆಡಳಿತದ ವಿರುದ್ಧ ಮೊದಲು ಸಿಡಿದೆದ್ದ ಸಂಸ್ಥಾನವೆಂದರೆ ಡಂಬಳ. ಕ್ರಿ.ಶ. ೧೮೦೦ರಲ್ಲಿ ಕರ್ನಲ್ ವೆಲ್ಲಸ್ಲಿಯು ಮರಾಠಾ ಸೈನ್ಯದೊಡನೆ ಸೇರಿ ಡಂಬಳ ಕೋಟೆಯನ್ನು ಗೆದ್ದುಕೊಂಡನು. ಆದ ಕಾರಣ ಡಂಬಳ ದೇಸಾಯಿಯು ಧುಂಡಿಯಾ ವಾಘನಿಗೆ ಆಶ್ರಯ ನೀಡಿದ್ದುದು. ಕೋಟೆಯು ವಶವಾಗಿ ಡಂಬಳದ ವೆಂಕಪ್ಪ ದೇಸಾಯಿಯು ಸೆರೆ ಸಿಕ್ಕ ಮೇಲೆ ವೆಲ್ಲಸ್ಲಿಯು ಅವನನ್ನು ಗಲ್ಲಿಗೇರಿಸಿದನು. ತಾನು ಮಾಡಿದ್ದುದು ತಪ್ಪೆಂದು ತೋರಿತು-ವೆಲ್ಲಸ್ಲಿಗೆ. ಅವನು ಇಂಗ್ಲೆಂಡಿಗೆ ಹಿಂತಿರುಗುವ ಮುಂಚೆ, ವೆಂಕಪ್ಪನಾಯಕನ ಹೆಂಡತಿಯು ದತ್ತಕ ತೆಗೆದುಕೊಳ್ಳುವುದಕ್ಕೂ ಆ ಹುಡುಗನು ಡಂಬಳದ ಬಹದ್ದೂರದೇಸಾಯಿ ಎಂಬ ಬಿರುದನ್ನೂ, ದೇಸಗತಿಯ ಹಕ್ಕುದಾರಿಕೆಯನ್ನೂ ಪಡೆಯುವುದಕ್ಕೆ ಸಮ್ಮತಿಸಬೇಕೆಂದು ಬರೆದಿಟ್ಟು ಹೋದನು. ಆ ಪ್ರಕಾರ ವಿಧವೆ ಮಥುರಾಬಾಯಿಯು ಶಿವಪ್ಪ ಎಂಬವನನ್ನು ದತ್ತಕ ತೆಗೆದುಕೊಂಡಳು.

ಯಾವಾಗ ಥ್ಯಾಕರೆ ಧಾರವಾಡ ಸುಭಾದ ಆಡಳಿತವನ್ನು

ವಹಿಸಿಕೊಂಡನೋ ಆಗಿನಿಂದ ಈ ದತ್ತಕವನ್ನು ಅಲ್ಲಗಳೆದು, ದೇಸಗತಿಯನ್ನು ಮುಣುಗಿಸಬೇಕೆಂದೇ ಎಣಿಸಿದ ಕಮಿಶನರ್ ಚಾಪ್ಲಿನ್‌ಗೆ ಪತ್ರ ಬರೆದನು (೩೦-೭-೧೮೨೦). ಅವನು ಕೊಟ್ಟ ಕಾರಣವೆಂದರೆ ವೆಲ್ಲಸ್ಲಿಯದು ಸಾಮಾನ್ಯ ಸ್ವರೂಪದ ಅನುಮತಿ ಇತ್ತಲ್ಲದೆ, ಶಿವಪ್ಪನೆಂಬ ಹುಡುಗನನ್ನು ದತ್ತು ತೆಗೆದುಕೊಳ್ಳಲೆಂದು ಸರಕಾರದ ಪೂರ್ವಾನುಮತಿಯನ್ನು ಪಡೆದಿಲ್ಲ-ಎಂಬುದಾಗಿತ್ತು! ಈ ಉದ್ದೇಶವನ್ನಿಟ್ಟುಕೊಂಡು ಇತರರಿಗೂ ಅನ್ವಯಿಸುವ ಒಂದು ಜಾಹೀರನಾಮೆಯ ಕರಡನ್ನೂ ಸಿದ್ಧಗೊಳಿಸಿದನು! ಮುಂದೆ ೧೮೨೪ರಲ್ಲಿ ಕಿತ್ತೂರ ಸಂಸ್ಥಾನವನ್ನೂ ಇದೇ ರೀತಿ ಮುಣುಗಿಸಬೇಕೆನ್ನುವ ಅವನ ಮನೀಷೆಗೆ ಇದು ಸಮರ್ಥನೆಯನ್ನು ಕೊಡಬಲ್ಲುದು. ಡಾಲ್‌ಹೌಸಿಯ ನೀತಿಯನ್ನು ಮೂರು ದಶಕಗಳ ಹಿಂದೆಯೇ ಥ್ಯಾಕರೆ ಸಾಹೇಬನು ಕಾರ್ಯಾಚರಣೆಗೆ ತರುವ ಹವಣಿಕೆಯಲ್ಲಿದ್ದನೆಂದ ಹಾಗಾಯಿತಲ್ಲವೆ!

ಚಾಪ್ಲಿನ್ ಮಾತ್ರ ಅದಕ್ಕೆ ಅನುಮತಿ ಕೊಡಲಿಲ್ಲ. ೪-೮-೧೮೨೦ರಂದು ಆತ ಥ್ಯಾಕರೇಗೆ ಈ ರೀತಿ ಉತ್ತರಿಸಿದ:

For the reasons, however stated by you I am unwilling to set aside the adoption by the widow of the Dumbal Desaee. But with a view to prevent these irregularities in future, the proclamation you recommend may be issued.

ಈ ಜಾಹೀರನಾಮೆಯನ್ನು ಈ ಹಿಂದೆ ಪ್ರಸ್ತಾಪಿಸಿದ್ದಾಗಿದೆ.

**೨. ರಂಗಾಪುರ ದತ್ತಕ ಪ್ರಕರಣ**

ಡಂಬಳದ ಹತ್ತಿರವೇ ಇರುವ ಊರು ಈ ರಂಗಾಪುರ. ಅಲ್ಲಿಯ ಮಹಾಪುರುಷ ಮನೆತನದವರು ಆ ಹಳ್ಳಿಯನ್ನು ಇನಾಮ ರೂಪದಲ್ಲಿ ಉಪಭೋಗಿಸುತ್ತಿದ್ದರು. ಕುಟುಂಬದ ಯಜಮಾನ ಶಿವಯ್ಯನು ಗಂಡು ಸಂತಾನವಿಲ್ಲದೆ ತೀರಿಕೊಂಡನು. ಅವನ ಹೆಂಡಂದಿರಾದ ತ್ರಿವೇಣಿ ಮತ್ತು ಪಾರ್ವತಿಯರಲ್ಲಿ ತ್ರಿವೇಣಿಗೆ ಗಂಗಾಬಾಯಿ ಎಂಬ ಮಗಳಿದ್ದಳು. ಆದ್ದರಿಂದ ಹಿರಿಯ ಹೆಂಡತಿಯಾದ ತ್ರಿವೇಣಿಯು ಮಹದೇವಯ್ಯ ಎಂಬವನನ್ನು ದತ್ತಕ ತೆಗೆದುಕೊಂಡಳು. ಅದಕ್ಕೆ ಪಾರ್ವತಿಯ ಸಮ್ಮತಿಯೂ ಇದ್ದಿತು.

ಕೆಲವು ವರ್ಷಗಳಾದ ಮೇಲೆ ತ್ರಿವೇಣಿಗೂ ದತ್ತಕ ಮಗನಿಗೂ ಹೊಂದಿಕೆಯಾಗಲಿಲ್ಲ. ಆಕೆ ತನ್ನ ಮಗಳು ಗಂಗಾಬಾಯಿ ಮಗನನ್ನು ದತ್ತಕ ತೆಗೆದುಕೊಳ್ಳಬಯಸಿದಳು. ಆದರೆ ಇದಕ್ಕೆ ಜ್ಞಾತಿಗಳ ಹಾಗೂ ಸವತಿಯ ಒಪ್ಪಿಗೆ ಇರಲಿಲ್ಲ. ಆದರೂ ಹಟಹಿಡಿದು, ತ್ರಿವೇಣಿಯು ನೆರೆಯ ಊರಾದ ಬಿದರಹಳ್ಳಿಯಲ್ಲಿ (ಇದು ಪಟವರ್ಧನರ ಶಿರಹಟ್ಟಿ ಸಂಸ್ಥಾನದ ಹದ್ದಿನಲ್ಲಿ ಇದ್ದುದರಿಂದ) ದತ್ತಕ ವಿಧಿಯನ್ನು ನಡೆಸಲಾಯಿತು. ಇನ್ನು ಆಸ್ತಿ ಗಂಗಾಬಾಯಿಯ ಮನೆತನಕ್ಕೆ ಹೋಗುವುದಾಯಿತಲ್ಲ! ಮೋಜೆಂದರೆ ದತ್ತಕ ವಿಧಿಯ ಕಾಲಕ್ಕೆ ತ್ರಿವೇಣಿ ಬಿದಹಳ್ಳಿಗೆ ಹೋಗಿರಲಿಲ್ಲ. (ಏನಿದ್ದರೂ ವಿಧವೆಯೇ ನೇರವಾಗಿ ದತ್ತಕ ವಿಧಿಯಲ್ಲಿ ಭಾಗವಹಿಸ ಬರುವುದಿಲ್ಲ.) ಗಂಗಾಬಾಯಿ ಹಾಗೂ ಅವಳ ಗಂಡನೂ ಹೋಗಿರಲಿಲ್ಲ.

ಅದೇ ಆಗ ಅಧಿಕಾರ ಸ್ಥಾನ ವಹಿಸಿದ್ದ (೧೮೧೮) ಬ್ರಿಟಿಷ ಸರಕಾರಕ್ಕೆ ಇದೆಲ್ಲ ಹೊಸತು. ೧೨ ಜನ ಸದ್ಗೃಹಸ್ಥರ ಪಂಚಾಯತಿಯನ್ನು ಧಾರವಾಡದಲ್ಲಿ ನೆರೆಸಿದರು.

ವಿಚಾರಣೆಯ ಆರಂಭಕ್ಕೆ ಮೊದಲ ದತ್ತಕದ ಹುಡುಗನನ್ನು ಸ್ವಗೋತ್ರದಿಂದ ಯಾಕೆ ತರಲಿಲ್ಲ, ತೀರ ಹೊರಗಿನವನನ್ನು ತಂದದ್ದೇಕೆ, ಎಂಬ ಪ್ರಶ್ನೆಯೂ ಬಂದಿತು. ಅವನ ಉಪನಯನವೂ ನಿರ್ಣಯಕ್ಕೆ ಬರುವಲ್ಲಿ ಪ್ರಸ್ತಾಪಿಸಲ್ಪಟ್ಟಿತ್ತು. ಸಂಬಂಧಪಟ್ಟವರ ಗೈರುಹಾಜರಿಯೂ ಚರ್ಚಾಸ್ಪದವೆನಿಸಿತು. ಕೊನೆಗೆ ಶಾಸ್ತ್ರಾಧಾರವನ್ನು ಹುಡುಕಿ, ಮೊದಲ ದತ್ತಕವು ಕಾನೂನು ರೀತ್ಯಾ ಮತ್ತು ಶಾಸ್ತ್ರರೀತ್ಯಾ ಸಿಂಧುವಾಗಿ ಇರುವಾಗ ಇನ್ನೊಂದು ದತ್ತಕ ಹುಡುಗನ್ನು ತರುವುದಕ್ಕೆ ಶಾಸ್ತ್ರ ಸಮ್ಮತಿಯಿಲ್ಲ-ಎಂದು ಪಂಚಾಯ್ತಿಯು ನಿರ್ಧರಿಸಿತು.

ಇಂಥವೇ ಸೂಕ್ಷ್ಮ ಸಮಸ್ಯೆಗಳುಳ್ಳ ಹಲವಾರು ವಾಜ್ಯ ಸರಕಾರದ ಮುಂದೆ ಬಂದವು. ವಿಶೇಷತಃ ಇನಾಮ ಕಮೀಷನ್ನಿನ ಆಸ್ತಿಯ ಹಕ್ಕುದಾರಿಕೆಯನ್ನು ನಿರ್ಣಯಿಸುವಾಗ ಇವುಗಳ ಹೆಚ್ಚಳ ಕಂಡುಬರುತ್ತದೆ. ಈ ಭಾಗದ ಅತ್ಯಂತ ದೊಡ್ಡ ವ್ಯಾಜ್ಯವೆಂದರೆ, ಕುರ್ತಕೋಟಿ ಗೌಡರ ಮನೆತನದ್ದು, ಅವರೇನು ಮಹಾ ಶ್ರೀಮಂತರಲ್ಲ. ಆದರೂ ಅತ್ಯಂತ ತುರುಸಿನಿಂದ ಹಲವಾರು ವರ್ಷಗಳವರೆಗೆ ಎರಡೂ ಪಕ್ಷಗಳು ಹೋರಾಡಿದುವು. ೧೯ನೇ ಶತಮಾನದ ಕೊನೆಯಲ್ಲಿ ಈ ವ್ಯಾಜ್ಯವು ಲಂಡನ್ನಿನ ಪ್ರಿವಿಕೌನ್ಸಿಲ್‌ವರೆಗೂ ಹೋಗಿ ಬಂದಿತು!

**ಸೂಚನೆ :** ಮಹಾರಾಷ್ಟ್ರ ರಾಜ್ಯ ಪತ್ರಾಗಾರದ ಹಲವಾರು ದಾಖಲೆಗಳನ್ನು ಪರಿಶೀಲಿಸಿ ಅವುಗಳ ಆಧಾರದಿಂದ ಸಿದ್ಧವಾದ ಲೇಖನದು. ○

ಡಾ|| ಎಸ್. ಆರ್. ಗುಂಜಾಳ *

# ಭಾರತೀಯ ಭಾಷೆಗಳಲ್ಲಿ ಬಸವ ಚರಿತ್ರೆ

ಹನ್ನೆರಡನೆಯ ಶತಮಾನದ ಜನಜೀವನದ ಸಮಗ್ರ ಕ್ರಾಂತಿಗೆ ಕಾರಣರಾದವರು ಬಸವಾದಿ ಶರಣರು. ಶರಣ ಗಣದ ಸಮರ್ಥ ನೇತಾರರಾಗಿ ಶ್ರಮಿಸಿದವರು ಬಸವಣ್ಣನವ ರೆಂಬುದರಲ್ಲಿ ಭಿನ್ನಾಭಿಪ್ರಾಯವಿಲ್ಲ. ಜ್ಞಾನವೇ ಕ್ರಿಯೆ; ಕ್ರಿಯೆಯೇ ಜ್ಞಾನವೆಂಬ ಸಮರ್ಣಸೂತ್ರವನ್ನು ಪ್ರತಿಯೊಬ್ಬ ಶರಣನು ಅನುಸರಿಸಬೇಕೆಂಬ ಕಟ್ಟಳೆಯನ್ನು ರೂಢಿಯಲ್ಲಿ ತಂದರು. ಸತ್ಕ್ರಿಯಾ ಹೀನನಾದವನ ಪರ್ವತಪ್ರಾಯವಾದ ಜ್ಞಾನದಿಂದ ಪ್ರಯೋಜನವಿಲ್ಲವೆಂದು ಅನುಭವ ಮಂಟಪದ ಮೂಲಕ ಪ್ರಚಾರದಲ್ಲಿ ತಂದರು. ಅವರು ಹೊಸದಾದ ಸುಂದರ ಸಮಾಜಕ್ಕೆ ಹುಟ್ಟುಹಾಕಿದರು. ರಾಜನಿರಲಿ, ಸ್ವಾಮಿಯಿರಲಿ, ಶ್ರೀಮಂತನಿರಲಿ, ಬಡವನಿರಲಿ ಕಾಯಕದಿಂದ (ಕಾಯ ಕಷ್ಟ ಮಾಡಿಯೆ) ದುಡಿದು ಉಣ್ಣಬೇಕೆಂಬುದನ್ನು ಶರಣ ಸಮೂಹದಲ್ಲಿ ಕಡ್ಡಾಯಗೊಳಿಸಿದರು. 'ದುಡಿತವೇ ದುಡ್ಡಿನ ತಾಯಿ'. ಸಮಾಜವು ಇದರಿಂದ ಸಂಪತ್‌ಭರಿತವಾಯಿತು. ಪ್ರತಿಯೊಬ್ಬ ವ್ಯಕ್ತಿಗೂ ಆರ್ಥಿಕ ಭದ್ರತೆಯುಂಟಾಯಿತು. ತನ್ನ ಹೆಚ್ಚಿನ ಸಂಪತ್ತನ್ನು ಸಮಾಜದ ಪ್ರಗತಿಗೆ-ಅಭಿವೃದ್ಧಿಗೆ ನೀಡುವ ಸ್ಥೈರ್ಯ, ಧೈರ್ಯ, ದಾಸೋಹ ಭಾವ ಹುಟ್ಟಿತು. ಬಸವಣ್ಣನವರು ಒಂದು ವಚನದಲ್ಲಿ ಈ ಭಾವನೆಯನ್ನು ಬಹು ಅಂದವಾಗಿ ವ್ಯಕ್ತಪಡಿಸಿರುವರು :

> ಎಂಬತ್ತು ನಾಲ್ಕು ಲಕ್ಷ ಮುಖದೊಳಗೊಂದೆ ಮುಖವಾಗಿ
> ಕಾಡಿನೋಡೆನ್ನನು, ಬೇಡಿನೋಡೆನ್ನನು, ಬೇಡದಿದ್ದಡೆ
> ಅಯ್ಯಾ, ನಿಮ್ಮ ಪ್ರಮಥರಾಣೆ, ನೀನಾವ ಮುಖದಲ್ಲಿ
> ಬಂದು ಬೇಡಿದೊಡೀವೆನು, ಕೂಡಲ
> ಸಂಗಮದೇವಾ (ವ:೪೩೦)

ಇಂಥ ಸಂಪತ್ತು – ಧನ– ಕನಕದ ಬಗೆಗಿನ ದಾಸೋಹ ಭಾವ ಪ್ರತಿಯೊಬ್ಬ ಶರಣನಲ್ಲೂ ಉಂಟಾಯಿತು. ಆ ಶರಣಸಮಾಜದಲ್ಲಿ ಎಲ್ಲರೂ ಕೊಡುವವರೇ ಆದರು. ಬೇಡುವವರು (ಭಿಕ್ಷುಕರು) ಇಲ್ಲವಾದರು. ಅಂತೆಯೇ ''ಬೇಡುವುದೆನ್ನ ತನು-ಮನ-ಧನವ,'' ಎಂಬ ಕೆಚ್ಚು ಮೂಡಿತು. ''ಬೇಡಲಾರದ ಹಂದೇ, (ಹೇಡಿ) ನೀ, ಕೇಳಾ : ಈ ಬಿರುದು ಸಂದಿತ್ತು. ಕೂಡಲಸಂಗಮದೇವಾ'' (ವ : ೭೦೪) ಎಂಬ ದೇವರಿಗೂ ಹೆದರದ ಮನೋಧೈರ್ಯ ಉಂಟಾಯಿತು. ಹೀಗೆ ಬಸವಣ್ಣನವರು ಜೀವನದ ಪ್ರತಿ ಯೊಂದು ಕ್ಷೇತ್ರದಲ್ಲಿ ಹೊಸಬೆಳಕನ್ನು ತಂದರು. ಅದನ್ನು ಕಂಡುಂಡ ಶರಣ ಸಮೂಹವೂ, ವಿರೋಧಿಸಿದ ಸನಾತನವಾದಿ ಜನಸಮೂಹವೂ ಬಸವಣ್ಣನವರಿಗೆ ಹೊಸ ಧರ್ಮವೊಂದರ ಸಂಸ್ಥಾಪಕನೆಂದು ಹೊಗಳಹತ್ತಿದರು. 'ಸಮಯಾಚಾರಿ' (ಸಮಯ-ಧರ್ಮ; ಆಚಾರಿ-ಆಚಾರ್ಯ, ಹೊಸದಾಗಿ ಆಚಾರದಲ್ಲಿ ತಂದವನು) ಎಂದು ಕರೆಯಹತ್ತಿದರು. ಈ ಹೊಗಳಿಕೆಯಿಂದ ದೂರವಿದ್ದ ಬಸವಣ್ಣನವರ ಮನಸ್ಸು ಮುದುಡಿತು. ಹೀಗೆ 'ಹೊಗಳಿ ಹೊಗಳಿ ಹೊನ್ನ ಶೂಲದಲ್ಲಿ ಇಕ್ಕದಿರಿ' ಎಂದು ವಿನಯಪೂರ್ವಕ ಅವರಿಗೆ ಹೇಳಿದರು:

'ಎನ್ನಲ್ಲಿ ಭಕ್ತಿ ಸಾಸುವೆ ಷಡ್‌ಭಾಗದನಿತಿಲ್ಲ – ಎನ್ನ ಭಕ್ತನೆಂಬರು, ಎನ್ನ 'ಸಮಯಾಚಾರಿ'ಯೆಂಬರು–ನಾನೇನ ಪಾಪವ ಮಾಡಿದೆನೋ ?! ಬೆಳೆಯದ ಮುನ್ನವೇ ಕೊಯ್ವರೇ ಹೇಳಯ್ಯ ? ಇರಿಯದ ವೀರ, ಇಲ್ಲದ ಸೊಬಗುವ ಬಲ್ಲ ಒಡೆಯರು ಏರಿಸಿ ನುಡಿವರು- ಎನಗಿದು ವಿಧಿಯೇ ಕೂಡಲಸಂಗಮದೇವ? (ವ: ೩೮೫)' ಎಂದು ಉತ್ತರಿಸಿದರು.

ಅಂದು ಜನರು ಬಸವಣ್ಣನವರಿಗೆ ಭಕ್ತಿ ಭಂಡಾರಿ

---

* ನಿರ್ದೇಶಕರು, ಸಂಶೋಧನಾ ವಿಭಾಗ, ಶ್ರೀ ನಾಗನೂರು ರುದ್ರಾಕ್ಷಿ ಮಠ, ಬೆಳಗಾವಿ.

ಯೆಂದೂ, ಹೊಸ ಧರ್ಮಸಂಸ್ಥಾಪಕನೆಂದೂ ಕರೆಯಲು ಪ್ರಾರಂಭಿಸಿದರೆಂಬುದು ಮೇಲಿನ ಅವರದೇ ವಚನದಿಂದ ಸ್ಪಷ್ಟವಾಗುತ್ತದೆ. 'ದೇವಾ, ನೀನೆನಗೊಳ್ಳಿದನಾದಡೆ ಎನ್ನ ಹೊಗಳತೆಗಡ್ಡ ಬಾರಾ, ಧರ್ಮೀ' (ವ:386) ಎಂದು ಬೇಡಿಕೊಂಡರೂ ಜನರು ಕೇಳಬೇಕಲ್ಲ. 'ಶಿವನೇ ಬಸವ, ಬಸವ ಶಿವನೇ' ಎಂದು ಕೊಂಡಾಡಹತ್ತಿದರು. ಅವನ ಹೆಸರು ಮಂತ್ರರೂಪ ಪಡೆಯಿತು. 'ಶಿವಾಯ ನಮಃ' ಎಂಬ ಪಂಚಾಕ್ಷರಿ ಮಂತ್ರಕ್ಕೆ ಸರಿದೊರೆಯಾಗಿ 'ಬಸವಲಿಂಗಾಯ ನಮಃ' ಎಂಬ ಅಷ್ಟಾಕ್ಷರಿ ಮಂತ್ರವನ್ನು ರೂಢಿಯಲ್ಲಿ ತಂದರು. ಭೀಮಕವಿಯು ತನ್ನ ಬಸವ ಪುರಾಣದ ಪ್ರಾರಂಭದ ಪದ್ಯದಲ್ಲಿ :

> 'ಶ್ರೀಗುರುವೆ ದೀಕ್ಷಾಗುರುವೆ ಶಿ
> ಕ್ಷಾಗುರುವೆ, ರಕ್ಷಾಗುರುವೆ ಸ
> ರ್ವಾಗಮೋಕ್ತ ಕಳಾಗುರುವೆ ಶಿವಯೋಗಧರ್ಮಾರ್ಥ
> ಭೋಗ ಗುರುವೆ ತ್ಯಾಗ ಗುರುವೆ ಸು
> ಧೀ ಗುರುವೆ ವಾಚಾ ಗುರುವೆ ಭವ
> ರೋಗ ಹರ ಶರಣಾಗು ಬಸವ ಮಹಾಗುರುವೆ ನಮಗೆ
> ||೧||

ಎಂದು ಹೇಳಿರುವನು. ಅಲ್ಲದೆ 'ಎನಗೆಯೀತಂಗೆ ಭೇದವಿಲ್ಲ' ವೆಂದು ಶಿವನು ಬಸವಣ್ಣನವರನ್ನು ಕುರಿತು ಹೇಳಿರುವ ವಿಷಯ ಬಂದಿದೆ. (ಸಂ.೨:೩೦). 'ಇವನು ದ್ವಿತೀಯ ಶಂಭು, ನಾನೇ ಬಸವೇಶ್ವರನು' ಎಂದು ಶಿವನು ಭಾವಾಭಿವ್ಯಕ್ತ ಮಾಡುತ್ತಾನೆ. ಪರಂಜ್ಯೋತಿ ಸ್ವರೂಪನಾದ ಶಿವನೇ - ಬಸವೇಶ್ವರನ ಹೃದಗತನಾಗಿದ್ದ ಶಿವನೇ-ಬಸವೇಶ್ವರನಿಗೆ ಲಿಂಗದೀಕ್ಷೆ ಮಾಡಿದನೆಂಬುದಾಗಿ ಬಸವ ಪುರಾಣ ಹೇಳುತ್ತದೆ. (ಸಂಧಿ ೩, ಪದ್ಯ ೬೬,೭೩). ಇದು ಇಷ್ಟಲಿಂಗ ಜನಕನೂ, ಇಷ್ಟಲಿಂಗ ಮೂಲವಾದ ಧರ್ಮದ ಸಂಸ್ಥಾಪಕನೂ ಬಸವಣ್ಣನೇ ಎಂದು ಬಸವ ಪುರಾಣವು ಘಂಟಾ ಘೋಷವಾಗಿ ಸಾರುತ್ತದೆ. ಚಾಮರಸ ಕವಿಯು ಪ್ರಭುಲಿಂಗ ಲೀಲೆಯಲ್ಲಿ 'ರಾಯ ಪೂರ್ವಾಚಾರ್ಯ ಸಂಗನಬಸವ ಶರಣಾರ್ಥಿ' (ಮಂಗಲಾ ಚರಣದ ಗತಿ ೨) ಎಂದೂ ಮೊಗ್ಗೆಯ ಮಾಯಿದೇವರು 'ವೀರಶೈವ ನಿರ್ಣಯ ಪರಮಾವತಾರಿ' ಎಂದೂ (ವೃಷಾಧಿಪ ಶತಕ) ಹೇಳಿರುವರು. ಹೀಗೆ ಬಸವಣ್ಣನವರು ಲಿಂಗಾಯತ ಧರ್ಮಪಿತನೆಂದು ಬಗೆದು ನೂರಾರು ಕವಿಗಳು ತಮ್ಮ ಕಾವ್ಯ-ಪುರಾಣಗಳಲ್ಲಿ ವರ್ಣಿಸುತ್ತಾ ಬಂದಿದ್ದಾರೆ. 'ಪೂರ್ವಾಚಾರ್ಯ', 'ವೀರಶೈವ ನಿರ್ಣಯ ಪರಮಾವತಾರಿ'-ಪದಗಳು 'ಸಮಯಾಚಾರಿ' ಪದಕ್ಕೆ ಸಮನಾಗಿವೆ. ಅದೇನೆ ಇರಲಿ ಒಂದು ಮಾತು ಸ್ಪಷ್ಟವಿದೆ; ಕಳೆದ ೮೦೦ ವರುಷಗಳಲ್ಲಿ ಬಸವಣ್ಣನವರು ಸಾಮಾಜಿಕ ಜೀವನದ ಮೇಲೆ ತಮ್ಮ ಗಾಢವಾದ ಪ್ರಭಾವ ಮುದ್ರೆಯನ್ನು ಒತ್ತುತ್ತಲೆ ಬಂದಿದ್ದಾರೆ. ಇದರ ಪರಿಣಾಮವಾಗಿ ಕನ್ನಡ, ತೆಲುಗು, ತಮಿಳು, ಸಂಸ್ಕೃತ, ಮರಾಠಿ, ಉರ್ದು, ಹಿಂದೀ ಭಾಷೆಗಳಲ್ಲಿ ಅವರನ್ನು ಕುರಿತ ವಿಪುಲ ಸಾಹಿತ್ಯ ಹುಟ್ಟಿಕೊಂಡು ಬಂದಿರುವದನ್ನು ಕಾಣುತ್ತೇವೆ. ಹೀಗೆ ಹುಲುಸಾಗಿ ಬೆಳೆದ ಸಾಹಿತ್ಯದ ಸಿಂಹಾವಲೋಕನ ಈ ಲೇಖನದ ಉದ್ದೇಶವಾಗಿದೆ.

## 1. ಕನ್ನಡ ಭಾಷೆಯಲ್ಲಿ

ಬಸವಣ್ಣನವರನ್ನು ಕುರಿತು ಕನ್ನಡದಲ್ಲಿ ರಚಿತವಾದಷ್ಟು ಗ್ರಂಥಗಳು ಮತ್ತಾವ ಧಾರ್ಮಿಕ ಪುರುಷನ ಮೇಲೆ ರಚಿತವಾದಂತೆ ತೋರುವುದಿಲ್ಲ. ಅವರೇ ರಚಿಸಿದ ವಚನಗಳು ಸಿಹಿರಸದಿಂದ ತುಂಬಿಕೊಂಡಿವೆ. ಅವುಗಳನ್ನು ಓದಿದವನ ಹೃದಯವನ್ನು ಹಸನುಗೊಳಿಸುವುದರ ಜೊತೆಗೆ ಸಾಹಿತ್ಯ ರಚನೆಗೆ ಪ್ರೇರಣೆ ನೀಡಿವೆ. ತಲೆ ತಲಾಂತರದಿಂದ-ಶತಶತಮಾನಗಳಿಂದ ಅವು ಸ್ಫೂರ್ತಿಯ ನೆಲೆಯಾಗಿ, ಕಾವ್ಯರಚನೆಯಲ್ಲಿ ಆಕರಗಳಾಗಿ ಬಗೆಬಗೆಯ ಛಂದಸ್ಸುಗಳಲ್ಲಿ ಅವರ ಘನ ವ್ಯಕ್ತಿತ್ವವನ್ನು ಕಂಡರಿಸುತ್ತಲೇ ಬಂದಿದ್ದಾರೆ. ರಗಳೆ, ಪುರಾಣ, ಚಂಪೂ, ನಾಮಾವಳಿ, ಹಾಡು, ಲಾವಣಿ, ಯಕ್ಷಗಾನ, ಸ್ತೋತ್ರ, ಸಾಂಗತ್ಯ - ಇತ್ಯಾದಿ ಛಂದಗಳಲ್ಲಿ ಸಾಹಿತ್ಯ ಸ್ವಚ್ಛಂದವಾಗಿ ಹುಟ್ಟಿ ಬೆಳೆದು ಬಂದಿದೆ. ಕಥೆ, ಕಾದಂಬರಿ, ನಾಟಕ, ಕೀರ್ತನ, ಭಜನೆಗಳ ರೂಪದಲ್ಲೂ ಆವಿರ್ಭವಿಸಿದೆ.

ಅವರ ವಚನಗಳು ರಚಿತವಾದ ಸಮಯದಲ್ಲೇ ಅವರ ಭವ್ಯದಿವ್ಯ ವ್ಯಕ್ತಿತ್ವಕ್ಕೆ ಮಾರುಹೋಗಿದ್ದ ಅನೇಕ ಶಿವಶರಣ-ಶರಣೆಯರು ತಮ್ಮ, ತಮ್ಮ ವಚನಗಳಲ್ಲಿ ಸ್ತೋತ್ರ ಮಾಡಿದ್ದಾರೆ. 'ಬಸವ ಸ್ತೋತ್ರದ ವಚನ' ಗಳನ್ನೇ ಆಯ್ದು ಸಂಗ್ರಹಿಸಿದ ಅನೇಕ ತಾಳೆ ಗ್ರಂಥಗಳು ಲಭ್ಯವಾಗಿವೆ. ಕನ್ನಡದಲ್ಲಿ ಬಸವಣ್ಣನವರ ಚರಿತ್ರೆಯನ್ನು (ಸು.೧೨೦೦) ಮೊದಲು ಬರೆದವನು ಮಹಾಕವಿ ಹರಿಹರ. ಅವನ 'ಬಸವರಾಜ ದೇವರ ರಗಳೆ' ಶ್ರೇಷ್ಠ ಕಾವ್ಯವೆಂದು ಪಂಡಿತರಿಂದ ಪರಿಗಣಿಸಲ್ಪಟ್ಟಿದೆ. ಅದು ವಚನಗಳನ್ನಾಧರಿಸಿ ಹಿಗ್ಗಿಸಿ ಬರೆದ ಬಸವಣ್ಣನವರ ಚರಿತ್ರೆಯಾಗಿದೆ.

ಭೀಮಕವಿಯ 'ಬಸವ ಪುರಾಣ (ಷಟ್ಪದಿ) (೧೩೬೯),

ಸಿಂಗಿರಾಜನ 'ಸಿಂಗಿರಾಜ ಪುರಾಣ' (೧೫೦೦, ಷಡಕ್ಷರದೇವನ 'ವೃಷಭೇಂದ್ರ ವಿಜಯ' (ಚಂಪೂ) ೧೬೫೫), ಶಂಕರ ಕವಿಯ 'ಚೋರಬಸವ ಪುರಾಣ' ೧೭೬೩), ಮಂಚಯ್ಯ ಕವಿಯ 'ಭಕ್ತಿರಸ ಸೋನೆ', ಸಾಂಗತ್ಯ), (೧೬೫೦), ವೀರಸಂಗಯ್ಯನ 'ನಂದಿಯಾಗಮ ಲೀಲೆ' (೧೯೮೯; ಷಟ್ಪದಿ)-ಹೀಗೆ ಬಸವಣ್ಣನವರನ್ನು ಕುರಿತ ಸ್ವತಂತ್ರ ಕಾವ್ಯಗಳು ಕನ್ನಡದಲ್ಲಿ ಹುಟ್ಟಿಬಂದಿವೆ. ಸಿಂಗಿರಾಜನ ಪುರಾಣದಲ್ಲಿ ಸುಮಾರು ೬೭ ಬಸವಣ್ಣನವರ ವಚನಗಳು ಆದ್ಯಂತವಾಗಿ ಉದಾಹರಿಸಲ್ಪಟ್ಟಿವೆ.

ಇಪ್ಪತ್ತನೆಯ ಶತಮಾನದಲ್ಲಿ ಬಸವಣ್ಣನವರ ಜೀವನ-ಸಾಹಿತ್ಯ ಸಿದ್ಧಾಂತಗಳ ಬಗೆಗೆ ಸಂಶೋಧಕರು ಹೆಚ್ಚು ಗಮನ ಹರಿಸಿದ್ದಾರೆ. ವಿವಿಧ ದೃಷ್ಟಿ ಕೋನಗಳಿಂದ ಅಭ್ಯಸಿಸಿ ಗ್ರಂಥ ರಚಿಸಿದ್ದಾರೆ. ಇವುಗಳಲ್ಲಿ ಎಂ. ಆರ್. ಶ್ರೀನಿವಾಸ ಮೂರ್ತಿಯವರು ಬರೆದ 'ಭಕ್ತಿ ಭಂಡಾರಿ ಬಸವಣ್ಣನವರು' ಗ್ರಂಥವು ಮೊಟ್ಟಮೊದಲನೆಯ (೧೯೩೧) ಶ್ರೇಷ್ಠದರ್ಜೆಯ ಚರಿತ್ರೆ. ಐತಿಹಾಸಿಕ ಅಂಶಗಳನ್ನೊಳಗೊಂಡ ವಚನಗಳನ್ನು ಆಧರಿಸಿ ಬರೆವ ಉತ್ತಮ ಗ್ರಂಥ. ಸಿದ್ದಪ್ಪಾರಾಧ್ಯರ 'ಅಣ್ಣನ ಆದರ್ಶ' (೧೯೩೬), ಜಚನಿ ಅವರ 'ಅಣ್ಣನ ಬದುಕು (೧೯೫೦), ಸಿಂಪಿ ಲಿಂಗಣ್ಣನವರ 'ಕನ್ನಡ ಕುಲದೀಪ ಶ್ರೀ ಬಸವಣ್ಣನವರ ಜೀವನ' (೧೯೫೭), ಪಾವಟೆ ಸಿದ್ಧರಾಮಪ್ಪನವರ 'ಬಸವ ಭಾನು' (೧೯೨೨), ಬಸವರಾಜ ಜವಳಿ ಅವರ 'ಧರ್ಮ ಭಂಡಾರಿ ಬಸವಣ್ಣನವರು' (೧೯೬೩) ಉತ್ತಂಗಿ ಚೆನ್ನಪ್ಪನವರ 'ಬಸವೇಶ್ವರನೂ ಅಸ್ಪೃಶ್ಯರ ಉದ್ಧಾರವೂ' (೧೯೩೨) ಮತ್ತು 'ಬಸವೇಶ್ವರನೂ ಕರ್ನಾಟಕದ ಅಭ್ಯುದಯವೂ' (೧೯೨೮), ಹಂಜಿಯವರ 'ಮಹಾನುಭಾವರಾದ ಬಸವಣ್ಣನವರು' (೧೯೫೦), ಹಳಪೇಟೆ ಚಿಂತಾಮಣಿಯವರ 'ಯುಗಪ್ರವರ್ತಕ ಬಸವಣ್ಣನವರು ' (೧೯೪೪), ಅನಕೃರ 'ವಿಶ್ವಬಂಧು ಬಸವೇಶ್ವರ' (೧೯೫೯), ದೇಶಪಾಂಡೆ ಮನೋಹರ ರಾಯರ 'ಶ್ರೀ ಬಸವಣ್ಣನವರ ದಿವ್ಯ ಜೀವನ' (೧೯೬೬), ಮಲ್ಲಿಕಾರ್ಜುನರ 'ಶ್ರೀ ಬಸವೇಶ್ವರನ ಕಾಲ' (೧೯೫೦), ಸಿಂದಗಿ ಸಿದ್ದಪ್ಪನವರ 'ಶ್ರೀ ಬಸವೇಶ್ವರನ ಚರಿತ್ರೆ' (೧೯೨೭), ಎಂ. ಪಿ. ಪಾಟೀಲರ 'ಶ್ರೀ ಬಸವೇಶ್ವರ ಚರಿತ್ರೆಯ ಮೇಲೆ ಹೊಸಬೆಳಕು' (೧೯೬೬), ಗ. ಸ. ಹಾಲಪ್ಪನವರ 'ಸಮಾಜೋದ್ಧಾರಕ ಬಸವಣ್ಣನವರು' (೧೯೫೭)-ಹೀಗೆ ಹಲವಾರುಲೇಖಕರ ಗ್ರಂಥಗಳ ಯಾದಿಯನ್ನು ಕೊಡಬಹುದು.

ಬಸವಣ್ಣನವರನ್ನು ಕುರಿತು ಕಾದಂಬರಿಗಳು ಹುಟ್ಟಿಕೊಂಡಿವೆ. ಅವುಗಳಲ್ಲಿ ತಿಪ್ಪೇರುದ್ರಸ್ವಾಮಿಯವರ 'ಕರ್ತಾರನ ಕಮ್ಮಟ' (೧೯೭೨) ಬೃಹತ್ ಕಾದಂಬರಿ ಜನಪ್ರಿಯತೆ ಗಳಿಸಿದೆ. ಬಿ. ಪುಟ್ಟಸ್ವಾಮಯ್ಯನವರು ಬರೆದ 'ಉದಯರವಿ', 'ರಾಜ್ಯಪಾಲ', 'ಕಲ್ಯಾಣೇಶ್ವರ', 'ನಾಗಬಂಧ', 'ಮುಗಿಯದ ಕನಸು', 'ಕ್ರಾಂತಿ ಕಲ್ಯಾಣ' (೧೯೬೩)-ಈ ಆರು ರಮ್ಯ ಕಾದಂಬರಿಗಳು ಬಸವಣ್ಣನವರ ಜೀವನದ ಸುತ್ತ ಹೆಣೆದವುಗಳಾಗಿವೆ. ಜಿ.ಹೆಚ್. ಹನ್ನೆರಡುಮಠರ ಬಸವ ಪರಿಸರದ 'ಕೂಗಿತ್ತು ಕೂಡಲ ಸಂಗಮ' (೧೯೮೦-೮೨) ಆದಿಯಾಗಿ ಎಂಟು ಕಾದಂಬರಿಗಳೂ ಬಂದಿವೆ.

ಬಸವಣ್ಣನವರ ಭವ್ಯ ಚರಿತ್ರೆಯನ್ನು ಬಿಂಬಿಸುವ ನಾಟಕಗಳಿಗೂ ಕೊರತೆಯಿಲ್ಲ. ಸಿದ್ಧಯ್ಯಪುರಾಣಿಕರ 'ಆತ್ಮಾರ್ಪಣ' (೧೯೪೨) ಉತ್ತಮ ನಾಟಕ. ಏಣಗಿ ಬಾಳಪ್ಪನವರ 'ಜಗಜ್ಯೋತಿ ಬಸವೇಶ್ವರ' (೧೯೫೬) ನಾಟಕದ ಐದು ಸಾವಿರಕ್ಕೂ ಮೀರಿದ ಪ್ರದರ್ಶನಗಳು ಕರ್ನಾಟಕದಾದ್ಯಂತ ಜರುಗಿವೆ. ಇಂದಿಗೂ ಆ ನಾಟಕದ ಜನಪ್ರಿಯತೆ ಕಡಿಮೆಯಾಗಿಲ್ಲ. ಅನಕೃರ 'ಜಗಜ್ಯೋತಿ ಬಸವೇಶ್ವರ' (೧೯೪೯), ಪುಟ್ಟಸ್ವಾಮಯ್ಯನವರ 'ಭಗವಾನ್ ಬಸವೇಶ್ವರ, (೧೯೫೬) ಮುಂತಾದ ನಾಟಕಗಳೂ ಪ್ರಸಿದ್ಧಿ ಪಡೆದಿವೆ. ಇತ್ತೀಚೆಗೆ ಕ್ಯಾಸೆಟ್ಟುಗಳಲ್ಲೂ ಬಸವೇಶ್ವರನನ್ನು ಕುರಿತ (ಧ್ವನಿ ಸುರುಳಿ) ನಾಟಕಗಳೂ ಬಂದಿವೆ. ಹೀಗೆ ಸುಮಾರು ೩೦೦ ಗ್ರಂಥಗಳು ಈ ಶತಮಾನದಲ್ಲಿ ಪ್ರಕಟವಾಗಿವೆ.

## 2. ತೆಲುಗು ಭಾಷೆಯಲ್ಲಿ

ಒಂದು ವಾದದ ಪ್ರಕಾರ ಬಸವಣ್ಣನವರು ಕನ್ನಡ ನಾಡಿನಲ್ಲಿ ಅಚ್ಚ ಕನ್ನಡಿಗರಾಗಿ ಜನಿಸಿ, ಸುಲಭ ಕನ್ನಡದಲ್ಲಿ ಧರ್ಮತತ್ವಗಳನ್ನು ಚಿತ್ತಾಕರ್ಷಕವಾಗಿ ವಚನಗಳ ಮೂಲಕ ಬಿತ್ತರಿಸಿರುವದು ಸರ್ವವಿದಿತ. ಆದರೆ ಅವರ ಜೀವನ ಚರಿತ್ರೆಯು ಕಾವ್ಯಝರಿಯಾಗಿ ಮೊಟ್ಟಮೊದಲು ಹರಿದು ಬಂದದ್ದು ತೆಲುಗು ಭಾಷೆಯಲ್ಲಿ ಎಂಬುದು ಆಶ್ಚರ್ಯವನ್ನುಂಟು ಮಾಡುವ ಸಂಗತಿಯಾದರೂ, ಸತ್ಯ ಸಂಗತಿಯಾಗಿದೆ. ಪಾಲ್ಕುರಿಕೆ ಸೋಮನಾಥ ಕವಿಯು 'ಬಸವ ಪುರಾಣ'ವನ್ನು ತೆಲುಗಿನಲ್ಲಿ ರಚಿಸಿದನು (ಸು. ೧೨೦೦). ಅನಂತರ ಕೆಲವೇ ವರುಷಗಳ ಅಂತರದಲ್ಲಿ ಅಥವಾ ಸ್ವಲ್ಪ ಹೆಚ್ಚು ಕಡಿಮೆ ಅದೇ ಕಾಲಕ್ಕೆ ಹರಿಹರ ಕವಿಯು 'ಬಸವರಾಜ ದೇವರ

ರಗಳೆ'ಯನ್ನು ಕನ್ನಡದಲ್ಲಿ ಬರೆದಿದ್ದಾನೆ. ಇಬ್ಬರೂ ಮಹಾಕವಿಗಳು ತಮ್ಮ ಕಾವ್ಯಗಳಲ್ಲಿ ಒಬ್ಬರನ್ನೊಬ್ಬರು ಸಾಂಪ್ರದಾಯಿಕವಾಗಿ ಸ್ಮರಿಸಿಕೊಂಡಿಲ್ಲದಿರುವದರಿಂದ ಇಬ್ಬರೂ ಸಮಕಾಲೀನರೆಂದೂ ಊಹಿಸಬಹುದು. ಆದರೆ ಸೋಮನಾಥನ ಬಸವಪುರಾಣವು ಜನಾದರಣೆಯನ್ನು ಪಡೆದಷ್ಟು 'ಬಸವರಾಜ ದೇವರ ರಗಳೆ' ಪಡೆಯಲಿಲ್ಲ. ಭೀಮ ಕವಿಯು ದ್ವಿಪದಿ ಛಂದಸ್ಸಿನ ತೆಲಗು ಬಸವ ಪುರಾಣವನ್ನು ಕನ್ನಡಕ್ಕೆ ಷಟ್ಪದಿಯಲ್ಲಿ ಅನುವಾದಿಸಿದ (೧೩೬೯) ನಂತರವಂತೂ ಅದು ಜನಮನವನ್ನು ಸೂರೆಗೊಂಡಿತು. ಇಂದಿಗೂ ಅದು ಅತ್ಯಂತ ಜನಪ್ರಿಯಕಾವ್ಯ.

ಇಲ್ಲಿ ನಾವು ಹೇಳಬೇಕಾದುದೇನೆಂದರೆ ಬಸವಣ್ಣನವರ ಪ್ರಭಾವ ಮುದ್ರೆಯು ತೆಲುಗು ದೇಶದಲ್ಲಿ ಗಾಢವಾಗಿ ಬಿದ್ದಿದೆ. ಪಾಲ್ಕುರಿಕೆ ಸೋಮನಾಥನ ಶಿಷ್ಯ ಪರಂಪರೆಯವರು ಬವಸಣ್ಣನವರ ಮೇಲೆ ಅನೇಕ ಕೃತಿ ರಚಿಸಿದ್ದಾರೆ. ಪಿಡುಪರ್ತಿ ಸೋಮನಾಥನ ಬಸವ ಪುರಾಣಮು (೧೫೧೦) ಚಂಪೂ ಛಂದಸ್ಸಿನಲ್ಲಿದೆ. ಕಾನೂರು ವೀರಭದ್ರುಡು ಕವಿಯ 'ಬಸವ ಮಹಿಮಾಮೃತ ವಿಲಾಸಮು' (೧೮೦೦), ನಾಗಭೂಷಣ ತುಮ್ಮಲವಲ್ಲಿ ಕವಿಯ 'ಬಸವ ವಿಜಯಮು' (೧೭೫೦), ಬಚ್ಚುಸಿದ್ಧಕವಿಯ 'ಮರಿಬಸವ ಪುರಾಣ' (೧೮೯೬) ಮುಂತಾದವುಗಳನ್ನು ಇಲ್ಲಿ ಹೆಸರಿಸಬಹುದು.

ತೆಲುಗಿನಲ್ಲಿ ಶ್ರೀಪತಿಪಂಡಿತ, ಮಲ್ಲಿಕಾರ್ಜುನ ಪಂಡಿತ-ಈರ್ವರೂ ಹೆಸರಿಗೆ ತಕ್ಕಂತೆ ಉದ್ದಾಮ ಪಂಡಿತರು. ಅನೇಕ ವೀರಶೈವಪರ ಗ್ರಂಥಗಳನ್ನು ರಚಿಸಿದವರು. ಮಲ್ಲಿಕಾರ್ಜುನ ಪಂಡಿತನು ಬಸವೇಶ್ವರನನ್ನು ಕಾಣಲೆಂದು ಕಲ್ಯಾಣಕ್ಕೆ ಹೊರಟಾಗ ಮಾರ್ಗ ಮಧ್ಯದಲ್ಲಿ ಬಸವೇಶ್ವರನು ಲಿಂಗದೊಳಗಾದನೆಂಬ ಸುದ್ದಿ ತಿಳಿದು ಬಹುವಾಗಿ ಪ್ರಲಾಪಿಸಿದನಂತೆ. ಬಸವಾಕ್ಷರತ್ರಯಗಳನ್ನು ಪಠಿಸಿದಾಗ ಕನ್ನಡ ಭಾಷೆ ಅವನಿಗೆ ಬಂತೆಂದು ಹೇಳಲಾಗಿದೆ. 'ಬಸವ ಮಹಿಮಲು' ಅವನೇ ರಚಿಸಿದ್ದಾನೆ. ಶಿವಲೆಂಕ ಮಂಚಣ್ಣನು ತೆಲುಗು ದೇಶದವನಾದರೂ ಕನ್ನಡದಲ್ಲಿ ವಚನ ರಚಿಸಿದ್ದಾನೆ. ಆದರೆ ತೆಲುಗು ಭಾಷೆಯಲ್ಲಿ ಶರಣ ವಚನಗಳು ಆಗ ಅನುವಾದಗೊಂಡಿಲ್ಲ; ಇದು ಆಶ್ಚರ್ಯ ಪಡುವ ವಿಷಯವೇ ಸರಿ.

ಪಾಲ್ಕುರಿಕೆ ಸೋಮನಾಥ ಕವಿಯ ಉಸುರೇ ಬಸವಣ್ಣ ನಾಗಿದ್ದನೆಂದು ಹೇಳಬಹುದು. 'ಬಸವಾಷ್ಟಕ', 'ಬಸವ ಪಂಚರತ್ನಮುಲು' 'ಬಸವ ರಗಡಮು', 'ಬಸವೋದಾಹರಣಮು', 'ವೃಷಾಧಿಪ ಶತಕಮುಲು' ಇತ್ಯಾದಿ ಕೃತಿಗಳನ್ನೂ ಅವನು ರಚಿಸಿದ್ದಾನೆ.

ಕಳೆದ ಒಂದು ಶತಮಾನದಲ್ಲಿ ತೆಲುಗು 'ಬಸವ ಪುರಾಣ'ದ ಅನೇಕ ಆವೃತ್ತಿಗಳು ಪ್ರಕಟವಾಗಿವೆ. ಜೊತೆಗೆ ಆಧುನಿಕ ತೆಲುಗು ಲೇಖಕರೂ ಬಸವಣ್ಣನನ್ನು ಕುರಿತು ಬರೆದಿರುವರು. ಬಾಡಾಲ ರಾಮಯ್ಯನವರು ಬಸವೇಶ್ವರನನ್ನು ಕುರಿತು ಬರೆದ ಸಂಶೋಧನ ಗ್ರಂಥ ಮೌಲಿಕವಾಗಿದೆ.

### 3. ತಮಿಳು ಭಾಷೆಯಲ್ಲಿ

ಬಸವಣ್ಣನವರ ತತ್ವಗಳನ್ನು ತಮಿಳು ನಾಡಿನಲ್ಲಿ ಹೆಚ್ಚಾಗಿ ಪ್ರಚಾರದಲ್ಲಿ ತಂದವರು ಕ್ರಿ. ಶ. ೧೭೦೦ರಲ್ಲಿ ಜೀವಿಸಿದ್ದ ಶಿವಪ್ರಕಾಶ ಸ್ವಾಮಿಗಳು. ಇವರು ಬೊಮ್ಮಯ್ಯ ಪಾಳ್ಯದ ಪಿರಿಯ ಮಠದ ಅಧಿಕಾರಿಗಳಾಗಿದ್ದು ಕನ್ನಡ, ಸಂಸ್ಕೃತ, ತಮಿಳು ಭಾಷೆಗಳನ್ನು ಚೆನ್ನಾಗಿ ಅರಿತವರಾಗಿದ್ದರು. ಭೀಮಕವಿಯ ಬಸವ ಪುರಾಣವನ್ನು 'ಬಸವ ಪುರಾಣಂ' ಎಂಬ ಹೆಸರಿನಲ್ಲಿ ಅನುವಾದಿಸಿದ್ದಾರೆ. ಇದಲ್ಲದೆ ವೀರಶೈವ ಧರ್ಮದ ಅನೇಕ ಕೃತಿಗಳನ್ನು ಬರೆದಿರುವರು. ನಮಗೆ ತಿಳಿದ ಮಟ್ಟಿಗೆ ೨೧ ಗ್ರಂಥಗಳು ಅವರ ಹೆಸರಿನಲ್ಲಿ ಲಭ್ಯವಿವೆ. ಅವುಗಳಲ್ಲಿ ಚಾಮರಸ ಕವಿಯ ''ಪ್ರಭುಲಿಂಗಲೀಲೆ'' ಗ್ರಂಥವೂ ಒಂದಾಗಿದೆ. 'ಸಿದ್ಧಾಂತ ಶಿಖಾಮಣಿ'ಯ ಅನುವಾದ ಗ್ರಂಥ ಮತ್ತೊಂದಾಗಿದೆ. ತನ್ನೆಲ್ಲ ಜೀವನವನ್ನು ಬಸವ ಧರ್ಮ ಪ್ರಚಾರಕ್ಕಾಗಿ ಮೀಸಲಿಟ್ಟ ಮಹಾಸ್ವಾಮಿಗಳಿವರು. ಬಸವ ಸಮಿತಿ ಹಾಗೂ ಕೂಡಲ ಸಂಗಮ ಕ್ಷೇತ್ರದ ಲಿಂ॥ ಜಗದ್ಗುರು ಲಿಂಗಾನಂದಸ್ವಾಮಿಗಳ ಮತ್ತು ಜಗದ್ಗುರು ಮಾತೆ ಮಹಾದೇವಿ ಅವರ ಪರಿಶ್ರಮದ ಫಲವಾಗಿ ಕೆಲವು ಗ್ರಂಥಗಳು ಬಸವಣ್ಣನವರನ್ನು ಕರಿತು ತಮಿಳಿನಲ್ಲಿ ಮೂಡಿ ಬಂದಿವೆ.

### 4. ಸಂಸ್ಕೃತ ಭಾಷೆಯಲ್ಲಿ

ಕ್ರಿ. ಶ. ೧೪೦೦ರಲ್ಲಿ ಜೀವಿಸಿದ್ದ ಕಂಚಿ ಶಂಕರಾಧ್ಯ ಕವಿಯು ಭೀಮಕವಿಯ 'ಬಸವ ಪುರಾಣ' (ವೃಷಭ ಪುರಾಣ) ವನ್ನು ಸಂಸ್ಕೃತದಲ್ಲಿ ಅನುವಾದಿಸಿದ್ದಾನೆ. ಇದರ ಕನ್ನಡ ಗದ್ಯಾನುವಾದವನ್ನು ಮೈಸೂರಿನ ಎನ್.ಆರ್. ಕರಿಬಸವ ಶಾಸ್ತ್ರಿಗಳು ಮಾಡಿದ್ದು, ೧೮೯೪ರಲ್ಲಿ ಪ್ರಕಟವಾಗಿದೆ. ಮಲ್ಲಿಕಾರ್ಜುನ ಮತ್ತು ವೆಂಕಯ್ಯಭೂಪ ಎಂಬ ಇಬ್ಬರು

ದ್ವಾಂಸ ಕವಿಗಳು ಸಹ ಇದಕ್ಕೆ ಟೀಕೆ ಬರೆದಂತೆ ತಿಳಿಯುತ್ತದೆ. ವ್ಯಾಸೋಕ್ತ ಬಸವ ಪುರಾಣ' ಅಥವಾ 'ಸಾರ್ಥಬಸವೇಶ್ವರ ಪುರಾಣ' ಎಂಬ ಹೆಸರಿನ ಪುರಾಣವನ್ನು ಮರಾಠಿ ವ್ಯಾಖ್ಯಾನದೊಂದಿಗೆ ಸೊಲ್ಲಾಪುರ ದಿಂದ ವಾರದ ಮಲ್ಲಪ್ಪನವರು (೧೯೦೫-೧೯೦೬) ಪ್ರಕಟಿಸಿರುವರು. ಇದು ಬಸವೇಶ್ವರರ ಹಿರಿಮೆ ಗರಿಮೆಗಳನ್ನು ಅರುಹವುವದಕ್ಕಾಗಿ, ಅವನ ಚಾರಿತ್ರಿಕ ಪ್ರಾಚೀನತೆಯನ್ನು ತಿಳಿಸುವದಕ್ಕಾಗಿ ವ್ಯಾಸ ಮಹರ್ಷಿಯಿಂದ ರಚಿಸಿಟ್ಟಿರುವದೆಂದೂ ಹೇಳಲಾಗಿದೆ. ತೆಲುಗಿನಲ್ಲಿ ಬಸವಣ್ಣನ ತತ್ವಪ್ರಚಾರ ಕಾರ್ಯದ ಅಧ್ವರ್ಯು ವಾದ ಪಾಲ್ಕುರಿಕೆ ಸೋಮನಾಥ ಕವಿಯೇ ಸಂಸ್ಕೃತದಲ್ಲಿ 'ಬಸವ ನಮಾಸ್ಕಾರ ಸ್ತೋತ್ರ 'ಬಸವಮುಕ್ತ ಪದಗ್ರಸ್ತ ಸ್ತೋತ್ರ' 'ಬಸವ ಪಂಚರತ್ನಂ' 'ಬಸವರಾಜೀಯಂ'- ಮುಂತಾದ ಕೃತಿಗಳನ್ನೂ ರಚಿಸಿದ್ದಾನೆ.

ಭಾರತದ ಪ್ರಾಚೀನ ಸಂಪರ್ಕಭಾಷೆಯಾಗಿದ್ದ ಸಂಸ್ಕೃತದ ಮೂಲಕ ಲಿಂಗಾಯತ ಧರ್ಮ ತತ್ವಗಳನ್ನು ಪಂಡಿತ ಜನರಿಗೆ ತಿಳಿಸಿ ಅವುಗಳನ್ನೂ ಭಾರತದ ಆದ್ಯಂತ ಪ್ರಚಾರ ಮಾಡಬೇಕೆಂಬ ವಿಚಾರವು ಕಂಚಿ ಶಂಕರಾಧ್ಯ ಕವಿಗಳಿಗೂ ವ್ಯಾಸೋಕ್ತ ಬಸವ ಪುರಾಣದ ಕರ್ತೃವಿಗೂ ಬಂದಿರಲು ಸಾಕು. ಅಂತೆಯೇ ಮಗ್ಗೆಯ ಮಾಯಿದೇವ (೧೪೩೦), ಮರಿ ತೋಂಟದಾರ್ಯ (೧೭೪೦-೧೭೫೫), ನಂದಿಕೇಶ್ವರ ಶಿವಾಚಾರ್ಯ (೧೭೦೦), ಕಂಥೆಯ ಸಿದ್ಧಲಿಂಗ ಶಿವಯೋಗಿ (೧೬೦೦), ಬಿಜಯಾಚಾರ್ಯ (೧೫೦೦), ಷಡಕ್ಷರದೇವ (೧೬೦೦), ಮಲ್ಲಣಾರ್ಯ (೧೬೦೦), ಶಿವಯೋಗಿ ಶಿವಾಚಾರ್ಯ (೧೪೦೦), ಸೋಸಲೆ ರೇವಣಾರಾಧ್ಯ (೧೬೨೩), ತೋಂಟದ ಸಿದ್ಧಲಿಂಗಯತಿ (೧೫೬೦), ಉದ್ಧಾನ ಸಿದ್ಧಲಿಂಗ ದೇಶಿಕ(೧೫೦೦), ಉತ್ತರ ದೇಶದ ಬಸವಲಿಂಗ ಕವಿ (೧೬೦೦) ಮುಂತಾದ ಲಿಂಗವಂತ ಕವಿಗಳು ಬಸವಾದಿ ಶರಣರ ವಿಚಾರಧಾರೆಯನ್ನು, ಚಾರಿತ್ರಿಕ ವಿಷಯಗಳನ್ನು ಸಂಸ್ಕೃತ ಭಾಷೆಯ ಮೂಲಕ ಅನ್ಯಭಾಷಿಕರಿಗೆ ತಿಳಿಸಲೆತ್ನಿಸಿದ್ದಾರೆಂದು ಹೇಳಬಹುದು. ಲಿಂಗಾಯತ ಧರ್ಮದ ಮೇಲಿನ ಶಾಸ್ತ್ರ ಗ್ರಂಥಗಳೆಲ್ಲವೂ ಬಸವೇಶ್ವರನ ಮುಂದಾಳ್ತನದಲ್ಲಿ ಘಟಿಸಿ ಕಲ್ಯಾಣ ಕ್ರಾಂತಿಯ (೧೧೬೭) ನಂತರವೇ ರಚಿತವಾಗಿರುವದು ಗಮನಾರ್ಹ ಸಂಗತಿಯಾಗಿದೆ.

**೫. ಮರಾಠಿ ಭಾಷೆಯಲ್ಲಿ**

ಮರಾಠಿಯಲ್ಲಿ ಲಿಂಗಾಯತ ಧರ್ಮವನ್ನು ಕುರಿತು 'ಸುಮಾರು (ಕೇವಲ) ೧೨೫ ಗ್ರಂಥಗಳು ಇಂದಿನವರೆಗೆ ಪ್ರಕಟವಾಗಿವೆಯೆಂದು ನಾವು ನಡೆಯಿಸಿದ ಪರಿವೀಕ್ಷಣೆಯಿಂದ (ಸರ್ವೆ) ತಿಳಿದು ಬರುತ್ತದೆ. ಇವೆಲ್ಲ ಗ್ರಂಥಗಳು ಕ್ರಿ.ಶ.೧೯೦೦ ರಿಂದ ಈಚೆಗೆ ಪ್ರಕಟವಾಗಿರುವದು ಸೋಜಿಗಪಡುವ ಸಂಗತಿಯಾಗಿದೆ. ಇಂದು ಕರ್ನಾಟಕದ ಗಡಿಭಾಗಗಳಾದ ಕೊಲ್ಲಾಪುರ, ಸೊಲ್ಲಾಪುರ, ನಾಂದೇಡ, ಲಾತೂರ, ಉದ್ಗೀರ- ಮುಂತಾದ ಪ್ರದೇಶಗಳಲ್ಲಿ ಲಿಂಗಾಯತ ಜನವಸತಿ ದಟ್ಟವಾಗಿದ್ದು ಅವರು ತಮ್ಮ ಶರಣ ಸಂಸ್ಕೃತಿಯನ್ನು ಉಳಿಸಿಕೊಂಡು ಬಂದಿದ್ದಾರೆ. ಅವರ ಜೀವನಕ್ರಮವನ್ನು ಸೂಕ್ಷ್ಮವಾಗಿ ಗಮನಿಸಿದಾಗ ಅವರ ಮನೆಮಾತು ಕನ್ನಡವಾಗಿ ಇಂದಿಗೂ ಉಳಿದು ಬಂದಿರುವ ವಿಷಯ ವ್ಯಕ್ತವಾಗುತ್ತದೆ. ಇಂದಿನ ಪರಿಸ್ಥಿತಿಯನ್ನು ದೃಷ್ಟಿಸಿ ನೋಡಿದರೆ ಬಸವ ಕಲ್ಯಾಣಕ್ಕೆ ಅತ್ಯಂತ ಸಮೀಪದ ಪ್ರದೇಶ ಮರಾಠಿ ಭಾಷಿಕವಾಗಿದೆ. ಅದರೂ ೧೨ನೇ ಶತಮಾನದಿಂದ ೧೯ನೇ ಶತಮಾನದವರೆಗಿನ ದೀರ್ಘಾವಧಿಯಲ್ಲಿ ಬಸವಣ್ಣನವರನ್ನು ಕುರುತು ಒಂದೆರಡೇ ಗ್ರಂಥಗಳು ಪ್ರಕಟವಾಗಿವೆ. ೧೨ನೇ ಶತಮಾನದಲ್ಲಿ ಮರಾಠಿ ಭಾಷೆ ಬಾಲ್ಯಾವಸ್ಥೆಯಲ್ಲಿತ್ತೆಂದು ಇತಿಹಾಸಜ್ಞರ ಅಭಿಮತವಾಗಿದೆಯಲ್ಲದೆ ಅದರ ಅಸ್ತಿತ್ವವು ಗೋದಾವರಿ ನದಿಯಿಂದಾಚೆಗೆ ಇತ್ತೆಂದು ತಿಳಿದು ಬರುತ್ತದೆ. ಕನ್ನಡದ ಆದಿ ಲಾಕ್ಷಣಿಕ ಗ್ರಂಥದಲ್ಲಿ 'ಕಾವೇರಿಯಿಂದ ಮಾ ಗೋದಾವರಿಯ'ವರೆಗೆ ಕನ್ನಡ ನಾಡಾಗಿತ್ತೆಂದು ಹೇಳಲಾಗಿದೆ. ಈ ಕಾರಣದಿಂದಾಗಿ ಮರಾಠಿಯಲ್ಲಿ ಲಿಂಗಾಯತ ಧರ್ಮ ಗ್ರಂಥಗಳು ೧೨ ರಿಂದ ೧೯ನೇ ಶತಮಾನದ ಮಧ್ಯಂತರ ಪ್ರಕಟವಾಗಿಲ್ಲ. ಒಂದನೆಯದು ಬಸವ ಪುರಾಣ, ಎರಡನೆಯದು ಪ್ರಭುಲಿಂಗ ಲೀಲೆ. ಇವೆರಡೂ ಗ್ರಂಥಗಳು ಮುದ್ರಣಗೊಂಡು ಬೆಳಕು ಕಂಡದ್ದು ಇಪ್ಪತ್ತನೆಯ ಶತಮಾನದಲ್ಲಿ ಎಂದರೆ ಆಶ್ಚರ್ಯಪಡಬೇಕಾಗಿಲ್ಲ. ಸಂಸ್ಕೃತ ಬಸವಪುರಾಣವು ಮರಾಠಿಗೆ ಅನುವಾದಿಸಲ್ಪಟ್ಟು ೧೯೧೦ರಲ್ಲಿ ಸೊಲ್ಲಾಪುರದಿಂದ ಪ್ರಕಟವಾಗಿದೆ. ಶಂಭು ತುಕಾರಾಮ ಅವಟೆ-ಎಂಬ ಮಹನೀಯರು ಅನುವಾದಿಸಿರುವುದಾಗಿ ತಿಳಿದು ಬರುತ್ತದೆ. ಅನಂತರ ಬಸವಣ್ಣನವರ ಜೀವನ ಚರಿತ್ರೆ- ವಚನಗಳನ್ನು ಕುರಿತ ಸುಮಾರು ೨೫ ಗ್ರಂಥಗಳು ಮರಾಠಿಯಲ್ಲಿ ಮೂಡಿ ಬಂದಿವೆಯಷ್ಟೆ. ಇವುಗಳಲ್ಲಿ ಲಕ್ಷ್ಮಣ ರಘುನಾಥ ಭಿಡೆಯವರ (೧೯೨೪) 'ಬಾರವ್ಯಾ ಶತಮಾನತಿಲ್ ಕರ್ನಾಟಕ ಚಾ ಸತ್ಯಾಗ್ರಹಿ ಬಸವೇಶ್ವರ', ರಾಜೇಂದ್ರ ಜೀರೋಬೆಯವರ 'ಶ್ರೀ ಬಸವೇಶ್ವರ ಅಣಿ ಪದದಲಿತ ಶಿವಶರಣ' (೧೯೭೯),

ಜೋಶಿಯವರ 'ಶ್ರೀ ಬಸವೇಶ್ವರ' (೧೯೬೨), ಎಸ್.ಎಂ. ಕಲ್ಯಾಣಶೆಟ್ಟಿಯವರ 'ಜಗಜ್ಯೋತಿ ಬಸವೇಶ್ವರ' (೧೯೩೮), ಗಂಗಾಧರ ಕೋಠಾವಳೆಯವರ 'ಗೀತ ಬಸವೇಶ್ವರ' (೧೯೮೫), ಮತ್ತು 'ಮಹಾತ್ಮಾ ಬಸವೇಶ್ವರ' (೧೯೬೬), ಜಯದೇವಿತಾಯಿ ಲಿಗಾಡೆಯವರ 'ಬಸವ ವಚನಾಮೃತ' (೧೯೬೮) 'ಅಣ್ಣ ಬಸವಣ್ಣ' (೧೯೭೬), 'ಬಸವ ದರ್ಶನ', ರಘುನಾಥ ಲೋಹಾರರ 'ಶ್ರೀ ಬಸವ ಬೋಧ' (೧೯೩೬), ಆರ್.ಡಿ. ಗುರವ ಮತ್ತು ಎಂ.ಜಿ. ಮಾಯಿನಕರರ 'ಶ್ರೀ ಬಸವೇಶ್ವರ' (೧೯೪೭), ಸುಧಾಕರ ಮೋಗಳೆಕರರ 'ಶ್ರೀ ಬಸವಗೀತ ಪುರಾಣ (೧೯೬೭), ಬಸವರಾಜ ನಾಟಕ (೧೯೮೨) ಶಿವಗುರುದಾಸಸ್ವಾಮಿಯವರ 'ಬಸವ ಜನ್ಮಾಖ್ಯಾನ ಚರಿತ (೧೯೧೮) ಇತ್ಯಾದಿ ಗ್ರಂಥಗಳನ್ನು ಹೆಸರಿಸಬಹುದು. ಕಳೆದ ಎರಡು ದಶಕಗಳಲ್ಲಿ ಬಸವೇಶ್ವರನನ್ನು ಕುರಿತ ಚಿಂತನಮಂಥನವು ಮರಾಠಿಯಲ್ಲಿ ಬಹಳಷ್ಟು ನಡೆದಿದೆ. ಸೊಲ್ಲಾಪುರದ ಬಸವೇಶ್ವರನ ಕಟ್ಟಾಭಕ್ತ ದಂಪತಿಗಳಾದ ಶ್ರೀ ರಾಜಶೇಖರ ಮಡಕಿ ಮತ್ತು ಸೌ॥ ಶಶಿಕಲಾ ಮಡಕಿ ಇವರು 'ಬಸವ ಸೆಂಟರ್' ಎಂಬ ಸಂಸ್ಥೆಯನ್ನು ಸ್ಥಾಪಿಸಿ ಅದರ ಮೂಲಕ ಕಳೆದ ೨೫ ವರುಷಗಳಿಂದ ಬಸವ ತತ್ವ ಪ್ರಚಾರ ಮಾಡುತ್ತ ಬಂದಿರುವದು ಶ್ಲಾಘನೀಯ ಕಾರ್ಯವಾಗಿದೆ. ಮಹಾತ್ಮಾ ಬಸವೇಶ್ವರ ಪುಣ್ಯ ಸ್ಮರಣ ಗ್ರಂಥ ಅವರ ಮೌಲಿಕ ಪ್ರಕಟಣೆಯಾಗಿದೆ. ಕಳೆದ ವರುಷ (1994) ಪ್ರೊ. ಡಿ. ಜವರೇಗೌಡರಿಂದ ಬರೆಯಲ್ಪಟ್ಟು, ಭಾಲ್ಕಿ ಹಿರೇಮಠ ಸಂಸ್ಥಾನದ ಶ್ರೀ ಬಸವಲಿಂಗ ಪಟ್ಟದ್ದೇವ ರಿಂದ ಪ್ರಕಾಶಿತವಾದ, ಕರ್ನಾಟಕ ಸಾಹಿತ್ಯ ಅಕಾಡೆಮಿ ಪ್ರಶಸ್ತಿ ಪಡೆದ 'ಬಸವೇಶ್ವರ ಮತ್ತು ಅಂಬೇಡಕರ' ಎಂಬ ಸುಪ್ರಸಿದ್ಧ ಗ್ರಂಥವನ್ನು ಶ್ರೀಮತಿ ಶಶಿಕಲಾ ಮಡಕಿ ಅವರು ಮರಾಠಿಗೆ ಅನುವಾದಿಸಿರುವರು.

**6. ಹಿಂದೀ ಭಾಷೆಯಲ್ಲಿ**

ನಮ್ಮ ರಾಷ್ಟ್ರ ಭಾಷೆಯು ಹಿಂದೀ ಭಾಷೆಯಾಗಿದ್ದರೂ ಲಿಂಗಾಯತ ಧರ್ಮವನ್ನು ಕುರಿತು ಪ್ರಕಟವಾದ ಗ್ರಂಥಗಳ ಸಂಖ್ಯೆ ೪೦ ಮೀರುವುದಿಲ್ಲ. ಇವುಗಳಲ್ಲಿ ಬಸವೇಶ್ವರನ ವಚನ, ಸಿದ್ಧಾಂತ, ಚರಿತ್ರೆಗಳನ್ನು ಕುರಿತಾದವುಗಳೇ ಅಧಿಕ ಸಂಖ್ಯೆಯಲ್ಲಿವೆಯಾದರೂ ಒಟ್ಟಾರೆ ಹಿಂದೀ ಭಾಷೆಯಲ್ಲಿ ಮೂಡಿಬಂದ ಗೌಣಪ್ರಮಾಣದ ವೀರಶೈವ ಸಾಹಿತ್ಯವನ್ನು ಗಣನೆಗೆ ತೆಗೆದುಕೊಂಡರೆ ಅರ್ಧಕೋಟಿ ಮಿಕ್ಕಿ ಸಂಖ್ಯೆ ಯಲ್ಲಿರುವ ವೀರಶೈವರು ತಲೆತಗ್ಗಿಸಬೇಕಾಗುತ್ತದೆ. ವೇದೋಪನಿಷತ್ತುಗಳ ಕಾಲದಿಂದ ವೀರಶೈವ ಧರ್ಮ ಉಳಿದು ಬೆಳೆದು ಬಂದಿದೆಯೆಂದು ಹೇಳುತ್ತಾ ಬಂದಿರುವ ಅನೇಕ ವೀರಶೈವ ಬರಹಗಾರರು, ವಿದ್ವಾಂಸರು, ಸ್ವಾಮಿಗಳು ಈ ಅತ್ಯಲ್ಪ ಸಾಹಿತ್ಯ ರಚನೆಗೆ ಕಾರಣವೇನೆಂದು ಕಂಡು ಹಿಡಿಯಬೇಕಾಗಿದೆ. ಇರಲಿ.

ಹಿಂದೀ ಭಾಷೆಯಲ್ಲಿಯೂ 'ಬಸವ ಪುರಾಣ'ವು ಗದುಗಿನ ಡಾ॥ ಪುಟ್ಟರಾಜ ಗವಾಯಿ ಅವರಿಂದ ರಚಿಸಲ್ಪಟ್ಟು ಪ್ರಕಟವಾಗಿರುವದೊಂದು (೧೯೬೦) ವಿಶೇಷ ಸಂಗತಿ ಯಾಗಿದೆ. ಬಸವಣ್ಣನವರನ್ನು ಕುರಿತು ಪ್ರಕಟವಾದ ಸಣ್ಣ ದೊಡ್ಡ ಗ್ರಂಥಗಳಲ್ಲಿ ಭಟ್ಟತಿರಿಯವರ 'ಮಹಾತ್ಮಾ ಬಸವೇಶ್ವರ' (೧೯೬೨), ಕಪ್ಪಿಕೇರಿ ಮತ್ತು ಇತರರಿಂದ ಸಂಪಾದಿತ 'ಮಹಾತ್ಮಾ ಬಸವೇಶ್ವರ' (೧೯೬೩), ಎಸ್.ವಿ. ಕಂದಗುಳ್ ಮತ್ತು ಗಾಯತ್ರಿ ವರ್ಮಾರಿಂದ ಅನುವಾದಿತ 'ಭಕ್ತಿ ಭಂಡಾರಿ ಬಸವೇಶ್ವರ ಕೆ ವಚನ' (೧೯೭೮), ಸರೋಜಿನಿ ಮಹಿಷಿ ಅವರ 'ಬಸವೇಶ್ವರ ಔರ ವಚನ ಸಾಹಿತ್ಯ' (೧೯೬೪), ಟಿ ಪ್ರಭಾಶಂಕರರಿಂದ ಅನುವಾದಿತ 'ಬಸವ ದರ್ಶನ' (೧೯೮೫), ಎಂ. ರಾಜೇಶ್ವರಯ್ಯನವರಿಂದ ಅನುವಾದಿತ 'ಬಸವೇಶ್ವರ ಕೆ ಚುನೆ ಹುಯೆ ವಚನ' (೧೯೫೨), ಇವುಗಳನ್ನು ಹೆಸರಿಸಬಹುದು. ಹಿಂದಿಯಲ್ಲಿ ಬಸವೇಶ್ವರರನ್ನು ಕುರಿತ ಐತಿಹಾಸಿಕ ಅಂಶಗಳನ್ನೊಳಗೊಂಡ ಮೌಲಿಕ ಜೀವನ ಚರಿತ್ರೆ ಇನ್ನೂ ಮೂಡಿಬರಬೇಕಾಗಿದೆ.

ಉರ್ದು ಭಾಷೆಯಲ್ಲಿ ನಾಲ್ಕಾರು ಪುಟ್ಟ ಗ್ರಂಥಗಳು ಬಸವೇಶ್ವರನ ತತ್ವ ಪರಿಚಯ ಮಾಡಿ ಕೊಡುತ್ತವೆ. ಬೆಂಗಾಲಿಯಲ್ಲಿ ಮತ್ತು ಪಂಜಾಬಿಯಲ್ಲಿ ಇತ್ತೀಚೆಗೆ ತಲಾ ಒಂದೊಂದು ಗ್ರಂಥ ಪ್ರಕಟವಾಗಿದೆಯೆಂದು ತಿಳಿದು ಬಂದಿದೆ.

ಮೇಲಿನ ಪರಿವೀಕ್ಷಣೆಯಿಂದ ಬಸವೇಶ್ವರನ ತತ್ವಗಳು ಭಾರತೀಯ ಇನ್ನಿತರ ಭಾಷೆಗಳಲ್ಲಿ ಪ್ರಚಾರವಾಗುವ ಕಾರ್ಯ ಎಷ್ಟು ಗುರುತರವಾಗಿದೆಯೆಂದು ತಿಳಿದು ಬರುತ್ತದೆ.

ಒಟ್ಟನಲ್ಲಿ ಬಸವಣ್ಣನವರ ಜೀವನವು ಭಾವುಕರಿಗೆ, ಲೇಖಕರಿಗೆ, ಸಂಶೋಧಕರಿಗೆ, ಸಕಲ ಮಾನವರಿಗೆ ಸ್ಫೂರ್ತಿಯ ಸೆಲೆ, ಬತ್ತದ ಒರತೆ. ಪಾಶ್ಚಿಮಾತ್ಯ ವಿದ್ವಾಂಸ ಅರ್ಥರ್ ಮಾಯಿಲ್ಸ್‌ನು ಹೇಳಿದಂತೆ ಅವನೊಬ್ಬ ಭಾರತದ ಏಕೈಕ ಸ್ವತಂತ್ರ ವಿಚಾರವಾದಿ, ಮಹಾಪ್ರವಾದಿ. ಮುಂದೆಯೂ ಬರಹಗಾರರಿಗೆ ಅವನ ಜೀವನ ಮೃಷ್ಟಾನ್ನ ಭೋಜನ; ಬರವಣಿಗೆ ಬರಡಾಗದ ಬಂಗಾರದ ಖಣಿ; ಕರ್ನಾಟಕದ

ದ್ವಾಂಸರಾದ ದಿವಂಗತ ಶ್ರೀ ಎಂ.ಆರ್. ಶ್ರೀನಿವಾಸ ಮೂರ್ತಿಯವರು ತಮ್ಮ 'ಭಕ್ತಿ ಭಂಡಾರಿ ಬಸವಣ್ಣನರು' ಗ್ರಂಥದಲ್ಲಿ ಹೇಳಿದ ಮಾತುಗಳು ನಮ್ಮ ಮೇಲಿನ ಅಭಿಪ್ರಾಯಕ್ಕೆ ಪೂರಕವಾಗಿರುವದರಿಂದ ಇಲ್ಲಿ ಉದಾಹರಿಸಿದ್ದೇವೆ. :

''ಬಸವಣ್ಣನವರ ಜೀವನ ಚರಿತ್ರೆಯು ಇಂತಹದು. ಅಭಿಮಾನಶಾಲಿಗಳಾದ ವೀರಶೈವ ಮಹಾಜನಗಳು ಬಸವಣ್ಣನವರನ್ನು ಕೇವಲ ನಂದೀಶ್ವರಾವತಾರವೆಂದು ಭಾವಿಸಲಿ; ಅಭಿಜ್ಞರು ಅವರನ್ನು ಮಾನವರಾಗಿ ಜನಿಸಿ ದೇವತ್ವಕ್ಕೆ ಏರಿದ ಮಹಿಮಾ ಪುರುಷರೆಂದೇ ಭಾವಿಸಲಿ. ಬಸವಣ್ಣನವರು ಮಾಡಿರುವ ಕಾರ್ಯನಿರ್ವಾಹದಿಂದ ಅವರನ್ನು ನಾವು ಕಾರಣಪುರುಷರೆಂದು ಹೇಳಲೇಬೇಕು. ಪ್ರಪಂಚದ ಇತಿಹಾಸದಲ್ಲಿ ಮತಸ್ಥಾಪಕರೂ ಮತೋದ್ಧಾರಕರೂ ಯಾವುದೊಂದು ಚಿತ್ಕಳೆಯನ್ನು ಪಡೆದು ಭಗವಂತನ ಸಂಕಲ್ಪಕ್ಕಾಗಿ ಅವತರಿಸಿದರೋ, ಅದೇ ಚಿತ್ಕಳೆಯನ್ನು ಪಡೆದು ಬಸವಣ್ಣನವರೂ ಅವತರಿಸಿದರು. ಮತ ಪ್ರಚಾರಕಾಗಿ ಅವರ ಸ್ಥಾನವು ಉನ್ನತವಾಗಿದೆ. ತತ್ತ್ವಬೋಧಕರಾಗಿ ಅವರ ಸ್ಥಾನವು ಅತ್ಯುನ್ನತ ವಾಗಿದೆ. ಇಂತಹ ಮಹಾತ್ಮರು ಕರ್ನಾಟಕ ದೇಶದಲ್ಲಿ ಅವತರಿಸಿದರು. ಕರ್ನಾಟಕದ ಕೀರ್ತಿ ಅವರಿಂದಲೂ ಹೆಚ್ಚಿರುವುದು. ಸಮಾಜ ಸುಧಾರಣೆಗಾಗಲಿ, ರಾಷ್ಟ್ರ ಸುಧಾರಣೆಗಾಗಲಿ ಅವರು ಹಾಕಿರುವ ಮೇಲ್ಪಂಕ್ತಿ ಯನ್ನು ಇಂದಿಗೂ ನಾವು ಅನುಸರಿಸ ಬೇಕಾಗಿದೆ. ಅವರ ವಚನಗಳಿಂದ ಅವರ ಮೂರ್ತಿ ಸ್ವರೂಪವನ್ನು ಚಿತ್ರಿಸಿ, ಅವರ ಕಾರ್ಯ ಕಲಾಪಗಳಿಂದ ಅವರ ಮಹಿಮೆಯನ್ನು ರೂಪಿಸಿ, ಲೋಕದ ಮುಂದೆ ನಿಜವಾದ ಬಸವಣ್ಣನವರನ್ನು ಸ್ಥಾಪಿಸುವುದೇ ಅವರಿಗೆ ನಾವು ನ್ಯಾಯವಾಗಿ ಸಲ್ಲಿಸುವ ಭಕ್ತಿಯ ಕಾಣಿಕೆಯಾಗಿರುತ್ತದೆ. ಬಸವಣ್ಣನವರು ವೀರಶೈವರಿಗೆ ಮಾತ್ರ ಸಂಬಂಧ ಪಟ್ಟವರಲ್ಲ; ಕರ್ನಾಟಕಕ್ಕೆ ಮಾತ್ರ ಸಂಬಂಧಪಟ್ಟವರೂ ಅಲ್ಲ; ಅವರು ಇಡೀ ಭರತಖಂಡಕ್ಕೆ, ಇಡೀ ಪ್ರಪಂಚಕ್ಕೆ, ಸಂಬಂಧಪಟ್ಟ ಮಹಾ ಪುರುಷರು''.

(ಭಕ್ತಿ ಭಂಡಾರಿ ಬಸವಣ್ಣನವರು, ಪು:೧೭೬)

O

ಸಿ.ಆರ್.ಶ್ಯಾಮಲ *
ಡಾ॥ ಶ್ರೀನಿವಾಸ ಹಾವನೂರ **

# ಮೆಕೆನ್ಸಿಯ ಒಂದು ಅಜ್ಞಾತ ಸಂಗ್ರಹ

ಅನುವಾದಕರು, ಗ್ರಂಥಪಾಲರು ಹಾಗೂ ಸಂಗ್ರಹಕಾರರು-ಇವರ ಕೆಲಸ ಎಷ್ಟೇ ಮೇಲ್ಮಟ್ಟದ್ದಾಗಿದ್ದರೂ ವಿದ್ವಾಂಸರು ಅವರನ್ನು ದ್ವಿತೀಯ ಸ್ಥಾನದಲ್ಲಿಯೇ ಗಣಿಸುತ್ತಾರೆ. ಆದರೆ ಇವರುಗಳು ತಮ್ಮ ಕೆಲಸದಲ್ಲಿ ತೋರುವ ಶ್ರದ್ಧೆ, ಸತತ ಪ್ರಯತ್ನ ಮತ್ತು ದೀರ್ಘಕಾಲೀನ ಪರಿಶ್ರಮ ಇವನ್ನು ನೆನೆದರೆ ಅವರನ್ನು ಆ ದ್ವಿತೀಯ ಸ್ಥಾನದಲ್ಲಿ ಇರಿಸುವುದು ತಪ್ಪಾಗುತ್ತದೆ. ಮೆಕೆನ್ಸಿಯ ಕೆಲಸ ಈ ಅರ್ಥದಲ್ಲಿ ಉನ್ನತ ಮಟ್ಟದ್ದು, ಮೌಲಿಕವಾದದ್ದು.

ಕಾಲಿನ್ ಮೆಕೆನ್ಸಿ (ಮೆಕೆನ್ಸಿ) ವೃತ್ತಿಯಲ್ಲಿ ಒಬ್ಬ ಕರ್ನಲ್. ಅದರಲ್ಲಿ ಅವನಿಗೆ ಬಡತಿಯೂ ಸಿಕ್ಕಿತ್ತು. ಆದರೆ ಪ್ರವೃತ್ತಿಯಲ್ಲಿ ಆತ ಚರಿತ್ರೆಯಲ್ಲಿ ಆಸಕ್ತ, ಪಳೆಯುಳಿಕೆಗಳ ಪ್ರೇಮಿ. ಈ ಪ್ರವೃತ್ತಿಗೆ ಅನುಗುಣವಾಗಿ ಟೀಪೂಸುಲ್ತಾನನಿಂದ ಬ್ರಿಟಿಶರು ಪಡೆದ ಪ್ರದೇಶದ ಪರಿವೀಕ್ಷಣೆಯ ಕೆಲಸ ಕೊಡಲಾಯಿತು. ಅದಕ್ಕಾಗಿ ಹಳ್ಳಿಹಳ್ಳಿಗಳಿಗೆ ಹೋದ. ಮತ್ತಲ್ಲದೆ ಯಾರು ಸಿಕ್ಕರೂ ''ನಿಮ್ಮಲ್ಲಿ ಸ್ಥಳ ಪುರಾಣವುಂಟೇ? ವಂಶಾವಳಿ, ಇತರ ಕಾಗದ ಪತ್ರಗಳು ಇವೆಯೆ? ನಿಮ್ಮ ಊರಿನ ಹಿಂದಿನ ಚರಿತ್ರೆ ಗೊತ್ತೇ, ನಿಮಗೆ?'' ಎಂದೆಲ್ಲ ಕೇಳುತ್ತಿದ್ದ [ದೇವಚಂದ್ರನ 'ರಾಜಾವಳೀ ಕಥೆ'(೧೮೦೮) ಎಂಬ ಸಾಹಿತ್ಯಗ್ರಂಥ'ದಲ್ಲಿ ಇದರ ಉಲ್ಲೇಖವಿದ್ದು, ಕನ್ನಡ ಸಾಹಿತ್ಯದಲ್ಲಿ ಕಾಣಿಸಿಕೊಂಡ ವಿದೇಶೀಯರಲ್ಲಿ ಇವನೇ ಮೊದಲಿಗ]. ಅವರುಗಳು ಕನ್ನಡ, (ತೆಲಗು, ತಮಿಳು) ಭಾಷೆಯಲ್ಲಿ ಹೇಳಿದ್ದನ್ನು ಕಾವಲಿ ಬೋರಯ್ಯ, ಅನಂತರ ಅವನ ತಮ್ಮ ವೆಂಕಟಲಕ್ಷ್ಮಯ್ಯ ಇವರ ಮೂಲಕ ಬರೆದುಕೊಂಡು ಇಂಗ್ಲೀಷಿಗೆ ಭಾಷಾಂತರ ಮಾಡಿಸಿಕೊಂಡ, ತಾನೂ ಮಾಡಿದ. ಸಾಧ್ಯವಾದಲ್ಲಿ ಗುಡಿಗಳ, ಮೂರ್ತಿಗಳ, ಮನುಷ್ಯರ ಚಿತ್ರ-ನಕ್ಷೆಗಳನ್ನು ತೆಗೆಸಿದ. ಶಾಸನಗಳ ಯಥಾವತ್ ಪ್ರತಿ ಮಾಡಿಸಿದ. ಬಖೈರು, ಕೈಫಿಯತ್, ಕಾವ್ಯಗಳ ಹಸ್ತಪ್ರತಿ-ಇವನ್ನು ದಾನವಾಗಿ ಪಡೆದ . ಅಖಂಡ ೧೫ ವರ್ಷಗಳ ಕಾಲ ಅವನ ಈ ಸಂಗ್ರಹ ಕಾರ್ಯ ನಡೆಯಿತು. ಓರ್ವ ಸೈನ್ಯಾಧಿಕಾರಿ ತನ್ನದಲ್ಲದ ಕ್ಷೇತ್ರದಲ್ಲಿ ತೊಡಗಿಸಿಕೊಂಡು ನಮ್ಮ ರಾಜಕೀಯ, ಸಾಮಾಜಿಕ ಚರಿತ್ರೆಯ ಕುರುಹುಗಳನ್ನು ಉಳಿಸಿ ಕೊಟ್ಟ ಘಟನೆ ಅಗಾಧವಾದದ್ದು.

ಅವನು ಸಂಗ್ರಹಿಸಿದ್ದು ಹೆಚ್ಚಾಗಿ ಮೌಖಿಕ ಇತಿಹಾಸದ ಸದರಿನಲ್ಲಿ (ಓರಲ್ ಹಿಸ್ಟರಿ) ಬರುವಂತಹದು. ಒಂದು ಸಣ್ಣ ನಿದರ್ಶನವನ್ನು ಕೊಡುವೆವು: ತೆರಕಣಾಂಬಿಯಲ್ಲಿ ಓರ್ವ ಲಿಂಗಾಯತ ಮುದುಕನಿದ್ದ. ನೂರು ಸಂವತ್ಸರವನ್ನು ದಾಟಿದವನು. ಆದರೂ ನೆನಪಿನ ಶಕ್ತಿ ಚೆನ್ನಾಗಿ ಇದ್ದಿತು. ೧೮೦೪ನೇ ಇಸವಿಯಲ್ಲಿ ಮೆಕೆನ್ಸಿ ಅವನನ್ನು ಎರಡು ಬಾರಿ ಕಂಡನಂತೆ. ಪೇಶ್ವೆ ಬಾಜೀರಾಯನು ೧೭೨೬ರಲ್ಲಿ ಮೈಸೂರು ಪ್ರದೇಶದಲ್ಲಿ ದಾಳಿ ಮಾಡಲೆಂದು ಬಂದಿದ್ದರ ಅನೇಕ ವಿವರಗಳನ್ನು ನೆನಪಿಟ್ಟು ಹೇಳಿದನಂತೆ. ಮತ್ತೊಂದೆಂದರೆ, ಅವನ ಪ್ರಕಾರ 'ಒಡೆಯರರ ಆಳ್ವಿಕೆ ಸುಖ-ಶಾಂತಿಯಿಂದ ಕೂಡಿದ್ದಿತು. ತೆರಿಗೆಗಳ ಭಾರ ಇರಲಿಲ್ಲ. ಹೈದರ-ಟೀಪೂ ಇವರ ಕಾಲದಲ್ಲಿ ಜನಜೀವನ ಕ್ಲೇಶಕರವಾಗಿದ್ದಿತು.'

ಹೀಗೆ ಇದು ಮೌಖಿಕ ಇತಿಹಾಸವಾದ್ದರಿಂದ, ಮೆಕೆನ್ಸಿಯ ಕಾಲದ ೧೦೦-೧೫೦ ವರ್ಷಗಳ ಹಿಂದಿನ ಇತಿಹಾಸಕ್ಕೆ ಪ್ರಾಮುಖ್ಯತೆ ಬಂದಿದೆ.

---

* ನಿವೃತ್ತ ಕನ್ನಡ ಅಧ್ಯಾಪಕಿ, ಮುಂಬೈ.
** ೯೦೯, ೪ನೇಕ್ರಾಸ್, ೧೧ನೇ ಮೇನ್, ಮೈಕೊ ಲೇಔಟ್, ಬಿಟಿಎಂ ೨ನೇ ಹಂತ, ಬೆಂಗಳೂರು ೫೬೦ ೦೭೬.

ಅವನ ಸಮಗ್ರ ಸಂಗ್ರಹದಲ್ಲಿ, ದೇಶ ಭಾಷೆಗಳಲ್ಲಿದ್ದದ್ದು ಮದ್ರಾಸದಲ್ಲಿ ಉಳಿಯಿತು, ಈ ವಿಷಯ ಗೊತ್ತಿದ್ದದ್ದೇ. ಅವುಗಳ ಸೂಚಿಯನ್ನು ಕಳೆದ ಶತಮಾನದಲ್ಲಿ ವಿಲ್ಸನ್ (೧೮೨೮) ಮತ್ತು ಟೇಲರ್ (೧೮೬೨) ಇವರೂ, ಸ್ವತಂತ್ರ ಭಾರತದ ಕಾಲದಲ್ಲಿ ಮದ್ರಾಸ ಯುನಿವರ್ಸಿಟಿ ಹಾಗೂ ಓರಿಯಂಟಲ್ ಲೈಬ್ರರಿಯವರೂ ಮಾಡಿದ್ದಾರೆ. ಆದರೆ ಅವೆಲ್ಲ ಆಯ್ದ ಸ್ವಲ್ಪಭಾಗ ಮಾತ್ರ. ಅವನ ಹೆಚ್ಚಿನ ಸಂಗ್ರಹ-ಇಂಗ್ಲೀಷ್ ಭಾಷೆಯಲ್ಲಿ ಇದ್ದುದ್ದು ಲಂಡನಿನ್ನ ಇಂಡಿಯಾ ಆಫೀಸ್ ಲೈಬ್ರರಿಯಲ್ಲಿದೆ. ಇಲ್ಲಿ ಲಭ್ಯವಿರುವ ಸಂಗ್ರಹದ ಒಂದು ಭಾಗ ಪ್ರಕಾಶನಗೊಂಡಿದೆ. ಇನ್ನೊಂದು "Mackenzie Collection, Part II; GENERAL" ಎಂಬ ಹೆಸರಿನದು ಅರ್ಧ ಮುದ್ರಿತವಾಯಿತು, ಹೊರ ಬರಲೇ ಇಲ್ಲ, ಹೀಗಾಗಿ ಹೊರಗಿನವರಿಗೆ ಅದರ ಅಸ್ತಿತ್ವದ ಕಲ್ಪನೆಯೂ ಇಲ್ಲ.

ಇದನ್ನು ಜನರಲ್ ಎಂದು ಕರೆದಿದ್ದರೂ ಅದರಲ್ಲಿ ಅಡಕವಾಗಿರುವ ಮಾಹಿತಿ, ದಕ್ಷಿಣ ಭಾರತಕ್ಕೇ ಮೀಸಲಾಗಿದೆ-ಕರ್ನಾಟಕವೂ ಸೇರಿದಂತೆ. ಅದರಲ್ಲಿ ಶಾಸನಗಳ ಪ್ರತಿಗಳು, ಸನದುಗಳು, ಸ್ಥಳ ಪರಿಚಯಗಳು, ಬಖೈರು-ಕೈಫಿಯತ್ತುಗಳು, ನಕ್ಷೆ-ನಕಾಶಗಳು ಸಮಾವೇಶಗೊಂಡಿವೆ; ಕಾವ್ಯಾನುವಾದಗಳು ಕೆಲವು ಮಾತ್ರ ಇವೆ. ಎಲ್ಲವೂ ಇಂಗ್ಲೀಷ್ ಭಾಷೆಯವು ಎಂಬುದನ್ನು ಇನ್ನೊಮ್ಮೆ ನೆನಪಿಸ ಬಯಸುತ್ತೇವೆ. ಮತ್ತೆ ಎಲ್ಲವೂ ಅನುವಾದಗಳೇ ಏನಲ್ಲ. ಅಲ್ಲದೆ ಅವು ವಿಷಯದ ಇಲ್ಲವೆ ಕಾಲದ ಅನುಕ್ರಮದಲ್ಲೇನೂ ಇಲ್ಲ.

ಈ ಸಂಗ್ರಹದಲ್ಲಿ ಒಟ್ಟಿಗೆ ೬೫ ಕಟ್ಟುಗಳಿವೆ. ಒಂದೊಂದರಲ್ಲಿ ೧೦೦ ರಿಂದ ೪೦೦ರವರೆಗೆ ನಿರ್ದಿಷ್ಟ ವಿಷಯಗಳ ಬಗ್ಗೆ ಮಾಹಿತಿ ಇದೆ. ಒಟ್ಟಿನ ಮಾಹಿತಿ ಹನ್ನೆರಡು ಸಾವಿರ ಪುಟಗಳಷ್ಟಾದೀತು. ಇನ್ನು ಕರ್ನಾಟಕಕ್ಕೆ ಸಂಬಂಧಪಟ್ಟ ಮಾಹಿತಿಯು ೧೨ ಕಟ್ಟುಗಳಲ್ಲಿ ಚದುರಿದ್ದು ಸುಮಾರು ೧೫೦೦ ಪುಟಗಳಷ್ಟು ಆಗಬಹುದು. ಕಾಲಮಾನದ ಪ್ರಕಾರ ೬ ರಿಂದ ೧೮ಈ ಶತಮಾನದ ಘಟನೆಗಳು. ಮಾಹಿತಿಗಳು ಅಡಕವಾಗಿವೆ. ಅದನ್ನು ಹೀಗೆ ವಿಭಾಗಿಸ ಬಹುದು:

- ವಿಜಯನಗರದ ಪೂರ್ವದ ಚರಿತ್ರೆ.
- ವಿಜಯನಗರ ಸಾಮ್ರಾಜ್ಯ.
- ವಿಜಯನಗರೋತ್ತರ ಪಾಳೆಯಗಾರರು.
- ಮೈಸೂರು ಒಡೆಯರು ಹಾಗೂ ಹೈದರ-ಟೀಪೂ.

ಇದಕ್ಕೆ ಪೂರಕವಾಗಿ ಕರ್ನಾಟಕ-ಮರಾಠಾ ಸಂಬಂಧ ವನ್ನು ತುಸು ಲಕ್ಷಿಸಬಹುದು.

ಅದಕ್ಕೂ ಮುಂಚೆ ಮೆಕೆನ್ಜಿಯ ಶಾಸನ ಸಂಗ್ರಹದ ಬಗ್ಗೆ ಎರಡು ಮಾತು ಹೇಳಬೇಕು. ಸುಮಾರು ಮೂರು ಸಾವಿರ ಶಾಸನಗಳ ಸಂಗ್ರಹ ಅವನದು. ಅವನಂತೂ ಅವನ್ನು ಓದುವ ವಿಷಯದಲ್ಲಿ ಅನಭಿಜ್ಞ. ನಮ್ಮ ನಾಡಿನಲ್ಲಿ ಓದಬಲ್ಲವರೂ ಕೆಲವೇ ಜನ. ಅವರು ಯಾರೆಂಬುದು ತಿಳಿಯದಂತಹ ಪರಿಸ್ಥಿತಿ. ಆನವಟ್ಟಿಯಲ್ಲಿ ಅಂಥ ಒಬ್ಬ ಇದ್ದಾನೆಂದು ತಿಳಿದುಬಂದ ಮೇಲೆ ಅವನನ್ನು ಮುಳಗುಂದದಲ್ಲಿ ಲಭ್ಯವಿದ್ದ ಶಾಸನಗಳನ್ನು ಓದಲೆಂದು ಮೆಕೆನ್ಜಿ ತನ್ನ ವೆಚ್ಚದಿಂದ ಕಳುಹಿಸಿಕೊಟ್ಟನಂತೆ. ಇಂಥ ಸಮಗ್ರ ಶಾಸನ ಪಟ್ಟಿ ನಮ್ಮ ಸುದೈವಕ್ಕೆ ಈ ಸಂಗ್ರಹದ ೧೮ನೆಯ ಕಟ್ಟಿನಲ್ಲಿದೆ. ಸುಮಾರು ೮೦ ಪುಟಗಳ ಪಟ್ಟಿ. ಅದರಲ್ಲಿ ಕರ್ನಾಟಕಕ್ಕೆ ಸಂಬಂಧವಿರುವಂಥವನ್ನು ಹುಡುಕ ಬೇಕು. ಅನೇಕ ಶಾಸನಗಳು ಪ್ರಕಟವಾಗಿರಲೂ ಸಾಕು. ಎಷ್ಟೋ ನಶಿಸಿ ಹೋಗಿರಲೂ ಬಹುದು. ಹೆಚ್ಚು ಸುರಕ್ಷಿತವಿರುವ ತಾಮ್ರ ಶಾಸನಗಳು ಸ್ಥಳಾಂತರವಾಗುತ್ತಿದ್ದುವು. ಚಂದ್ರಗಿರಿಯ ಯತಿರಾಜ ಎಂಬವರಿಗೆ ಕೊಟ್ಟದತ್ತಿಯ ಶಾಸನ ದಾವಣಗೆರೆಯ ಹತ್ತಿರದ ಒಂದು ಹಳ್ಳಿಯಲ್ಲಿ ಮೆಕೆನ್ಜಿಗೆ ದೊರೆಯಿತಂತೆ.

ಇನ್ನೀಗ ಕಾಲಮಾನದಿಂದ ಈ ಸಂಗ್ರಹದ ಪರಿಚಯ ಮಾಡಿಕೊಳ್ಳೋಣ :

೧. **ವಿಜಯನಗರ-ಪೂರ್ವದ ಕಾಲ:** ಎಂದರೆ ಕದಂಬರ, ಹೊಯ್ಸಳರ ಕೆಲವು ವಂಶಾವಳಿಗಳಿವೆ. ಘಟನೆಗಳಲ್ಲಿ ಹೆಚ್ಚಿನವು ಅತಿರಂಜಿತ.

೨. **ವಿಜಯನಗರ ಸಾಮ್ರಾಜ್ಯ ಕಾಲ:** ವಿಜಯನಗರ ರಾಜವಂಶದವರ ಹಲವಾರು ಚರಿತ್ರೆ, ವಂಶಾವಳಿಗಳಿವೆ-ಬೇರೆ ಬೇರೆಯವರಿಂದ ಸಂಗ್ರಹಿಸಿದವುಗಳು. - ಅಂತಾಗಿ ವೈವಿಧ್ಯಮಯ ವಾಗಿವೆ. ಕೃಷ್ಣದೇವರಾಯ ಮತ್ತು ಅವನಿಂದ ಈಚೆಗಿನ ರಾಜರು ಹೊರಡಿಸಿದ ೧೬-೧೮ ಆಜ್ಞಾಪತ್ರಗಳಿವೆ. ಅಂತೂ ಅವರ-ಎಂದರೆ ವಿಜಯನಗರ ಸಾಮ್ರಾಜ್ಯದ ಉತ್ತರ ಕಾಲೀನ ಮಾಹಿತಿಯೇ ಇಲ್ಲಿ ಹೆಚ್ಚಾಗಿ ಲಭ್ಯವಿದೆ. ಆ ದೃಷ್ಟಿಯಿಂದ ಇಲ್ಲಿ ದಾಖಲಿತವಾದ ಬಖೈರುಗಳು ಹೆಚ್ಚು ಉಪಯುಕ್ತ ವಾಗಿವೆ. ಒಂದು ಬಖರಿನಲ್ಲಿ ಅಳಿಯ ರಾಮರಾಯನ ರಾಜ್ಯಭಾರ, ಅವನು ಮಾಡಿಕೊಂಡಿದ್ದ ಏಳು ರಾಜಕೀಯ ವಿಭಾಗಗಳು, ಅವನ ಅಷ್ಟ ಪ್ರಧಾನರು, ಸೈನ್ಯದ ವಿಸ್ತಾರ ಮುಂತಾದ ಅಂಶಗಳಿವೆ. ಅಂದಹಾಗೆ ಕೊನೆಯ ರಕ್ಕಸತಂಗಡಿ ಯುದ್ಧದ ಕಾರಣವು ಜನರಲ್ಲಿ ಪ್ರಚಾರ

ವಿದ್ದುದ್ದು ಹೀಗೆ: ಒಮ್ಮೆ ವಿಜಯನಗರದ ಅರಮನೆಗೆ ಓರ್ವ ಫಕೀರನು ಬಂದು, ಅಲ್ಲಿಯ ಚಿಕ್ಕ ಜಲಾಶಯವೊಂದರ ನೀರು ಕುಡಿದನಂತೆ. ಆಗ ರಾಮರಾಜನು ಅವನಿಗೆ ಮರಣದಂಡನೆ ವಿಧಿಸಿದನಂತೆ, ಆದ್ದರಿಂದ ಬಿಜಾಪುರ, ಅಹಮ್ಮದನಗರ ಸುಲ್ತಾನರು ಸಿಟ್ಟಿಗೆದ್ದು ಯುದ್ಧ ಸಾರಿದರಂತೆ.

ವಿಜಯನಗರ ಕಾಲದ ಜನಜೀವನ, ಶಿಲ್ಪ, ಮುಂತಾದುವುಗಳಿಗೆ ಸಂಬಂಧಿಸಿ ಮೆಕೆನ್ಜಿಯು ತೆಗೆಸಿದ ಚಿತ್ರಗಳು, ನಕ್ಷೆ, ನಕಾಶಗಳು ಅಪೂರ್ವದವಾಗಿವೆ. ಕೃಷ್ಣದೇವರಾಯನ ಸಿಂಹಾಸನ, ಆನೆಗಳ ಲಾಯ, ದರ್ಬಾರಿನಲ್ಲಿ ಸಾಮಂತರಿಗಾಗಿ ಇರುವ ಮಂಚಗಳ ಏರ್ಪಾಡು, ನಾಣ್ಯಗಳು, ಇನ್ನೂ ಮೊದಲಾದವುಗಳ ಚಿತ್ರಗಳು ಗಮನಾರ್ಹವಾದವುಗಳು. ವೀರನರಸಿಂಹ ಎಂಬವನ ಹೆಸರಿನಲ್ಲಿ ಒಂದು ಮುದ್ರೆ ಇದ್ದು, ಮೇಲೆ 'ಶ್ರೀ'ಕಾರ, ಬದಿಗಳಿಗೆ ಸೂರ್ಯ-ಚಂದ್ರರು ಇದ್ದು, ಅದರಲ್ಲಿಯ ಒಕ್ಕಣಿಕೆ ಹೀಗಿದೆ- 'ಶ್ರೀ ಲಕ್ಷ್ಮೀಗೋವಿಂದ। ಗಣನಾಥದಾತ ವರ ಪ್ರಸಾದ। ಶ್ರೀ ಮದ್ರಾಜಾಧಿರಾಜ। ಪರಮೇಶ್ವರ ಶ್ರೀ ವೀರ। ಪ್ರತಾಪ ಶ್ರೀ ವೀರ। ರಪತಿ ಸ್ವಾಮಿ . . .'

**ವಿಜಯನಗರೋತ್ತರ ಕಾಲ:** ಈ ಕಾಲದ ಹೆಚ್ಚಿನ ಮಾಹಿತಿ ಕೈಫಿಯತ್ತುಗಳಿಂದಲೇ ತಿಳಿದುಬರಬೇಕು. ಅಂತಾಗಿ ಅವು ಮೊದಲಿಗೆ ದೇಶೀ ಭಾಷೆಗಳಲ್ಲಿ ಲಭ್ಯ. ಆದರೆ ಮೆಕೆನ್ಜಿ ನೇರವಾಗಿ ದಾಖಲಿಸಿದ್ದ ಸಂದರ್ಭಗಳೂ ಇವೆ. ಉದಾ., ಹೊಸಪೇಟೆ ತಾಲೂಕಿನ ದರೋಜಿ, ಕಂಪಿಲಿ ಹಾಗೂ ಸುತ್ತಲಿನ ಊರುಗಳ ಚರಿತ್ರೆಯನ್ನು ಮೆಕೆನ್ಜಿಯು ಅವರಿವರಿಂದ ಕೇಳಿ ಬರೆದುಕೊಂಡದ್ದು. ತಲಕಾಡು ಮತ್ತು ಕಾವೇರೀತೀರದ ಶಿವ ಸಮುದ್ರ-ಈ ಪ್ರಾಚೀನ ಸ್ಥಳಗಳ ಚರಿತ್ರೆ 'ಮಹಾತ್ಮೆ'ಯ ಸ್ವರೂಪವನ್ನು ತಾಳಿದೆ. ಸಿರಾ, ಪಾವಗಡ, ಬಾಣಾವರ, ಕಳಸ, ನಾಯ್ಕನಹಟ್ಟಿ, ತುರುವೇಕೆರೆ-ಇನ್ನೂ ಹಲವು ಸ್ಥಳಗಳ, ತುಸುವೇ ಆಗಲಿ, ಚರಿತ್ರಾತ್ಮಕ ಮಾಹಿತಿ ಇದೆ. ಅದರಂತೆ ಕಳಲೆ, ಮಾಗಡಿ, ಮಹಾರಾಜಾದುರ್ಗ, ಉಚ್ಚಂಗಿದುರ್ಗ, ಹರಪನಹಳ್ಳಿ-ಇವನ್ನೂ ಹೆಸರಿಸಬೇಕು. ಸ್ಥಾನಿಕ ಅಭ್ಯಾಸ ಮಾಡುವವರಿಗೆ ಅಷ್ಟಿಷ್ಟು ಮಾಹಿತಿ ದೊರೆಯಬಹುದು. ಅಂದ ಹಾಗೆ 'ಕೆಳದಿ ನೃಪವಿಜಯ' ಕಾವ್ಯದ ಇಂಗ್ಲೀಷ್ ಅನುವಾದದ ಪ್ರತಿ ಒಂದಿದೆ.

ಅದೇ ಚಂದ್ರಗಿರಿಗೆ ಸಂಬಂಧಿಸಿದಂತೆ ಮಾಹಿತಿ ಸ್ವಲ್ಪ ಹೆಚ್ಚೇ ದೊರೆಯುವುದು- ಹಲವಾರು ದಾಖಲೆಗಳಿರುವುದರಿಂದ ಕೃಷ್ಣದೇವರಾಯನು ಗಜಪತಿಯನ್ನು ಯುದ್ಧದಲ್ಲಿ ಸೋಲಿಸಿ ಅದನ್ನು ಗೆದ್ದುಕೊಂಡ ಮೇಲೆ ಮೂರು ಜನ ನಾಯ್ಡುಗಳನ್ನು ಅದರ ರಕ್ಷಣೆಗೆ ನಿಯಮಿಸಿದ್ದನಂತೆ. ಅದರಂತೆ ರಾಯದುರ್ಗ, ಇಲ್ಲಿಯೂ ಒಂದು ನಾಯ್ಡು ವಂಶದ ಪಾಳೆಯಗಾರಿಕೆ. ಇವರಿಗೂ ಪೆನುಗೊಂಡೆಯವರಿಗೂ ರಕ್ತಸಂಬಂಧವಿದ್ದಿತು. ಅಂತಾಗಿ, ಟೀಪೂನ ಸಂಗಡ ಜೊತೆಯಾಗಿ ಯುದ್ಧ ಮಾಡಿದರು.

ಆನೆಗೊಂದಿಯ ರಾಜರ ಬಗ್ಗೆಯಂತೂ ಇನ್ನೂ ಹೆಚ್ಚಿನ ಮಾಹಿತಿ ಇದೆ. ವಿಜಯನಗರ ಪೂರ್ವದ ಕಾಲದಿಂದಲೂ ಇದ್ದ ರಾಜಮನೆತನ ಅದು. ಮುಂದೆ ಇಂಗ್ಲಿಷರ ಆಶ್ರಿತರಾಜರೆನಿಸಿದ್ದರೂ, ತಕ್ಕ ಮಟ್ಟಿಗೆ ಸುಭದ್ರಸ್ಥಿತಿಯಲ್ಲಿ ಇದ್ದವರು. ಮೆಕೆನ್ಜಿಗೂ ಆಗಿನ ಆನೆಗೊಂದಿಯ ರಾಜ ತಿಮ್ಮಪ್ಪನಿಗೂ ವೈಯಕ್ತಿಕ ಸ್ನೇಹ. ಹೀಗಾಗಿ ತಿಮ್ಮಪ್ಪ ತನ್ನ ಸಂಸ್ಥಾನದ್ದಲ್ಲದೆ ಇತರ ಮಾಹಿತಿಯನ್ನೂ ಒದಗಿಸಿದ್ದಾನೆ. ತನ್ನ ಮೊಮ್ಮಕ್ಕಳ ಚಿತ್ರವನ್ನು ಕೊಟ್ಟಿದ್ದಾನೆ. ಇವರ ಪರಸ್ಪರ ಸ್ನೇಹವನ್ನು ತಿಳಿದಿದ್ದ ಹರಿಹರದ ಓರ್ವ ಸ್ವಾಮಿಗಳು ತಮಗೆ ಮೆಕೆನ್ಜಿಯ ಭೆಟ್ಟಿ ಮಾಡಿಸಬೇಕೆಂದು ತಿಮ್ಮಪ್ಪನಿಗೆ ಬರೆಸಿದ ರಾಯಸ ಒಂದಿದೆ. ನಮ್ಮ ನಾಡಿನಲ್ಲಿ ಮೆಕೆನ್ಜಿಯು ಎಷ್ಟರ ಮಟ್ಟಿಗೆ ಬೇರೂರಿದ್ದನೆಂಬುದನ್ನು ಇದು ತಿಳಿಯಪಡಿಸುತ್ತದೆ.

**೪. ಮೈಸೂರು ಒಡೆಯರ ಕಾಲ:** ಒಡೆಯರ ಚರಿತ್ರೆಯನ್ನು ಹೇಳುವ ನಾನಾ ಬಗೆಯ ದಾಖಲೆಗಳು ಈ ಸಂಗ್ರಹದಲ್ಲಿವೆ. ಅದು ಸಹಜವೇ. (ಪೂರ್ವಾಧುನಿಕ 'ಪ್ರಿ-ಮಾಡರ್ನ್') ಕಾಲವಾದ್ದರಿಂದ ಈ ದಾಖಲೆಗಳು ಕನ್ನಡ ವಲ್ಲದೆ ಪರ್ಶಿಯನ್, ಮರಾಠೀ ಭಾಷೆಗಳಲ್ಲಿಯೂ ಇರುವುದೊಂದು ವಿಶೇಷ. ಈ ಮೈಸೂರು ರಾಜರು, ವಿಶೇಷತಃ ದೇವರಾಜ, ಚಿಕ್ಕದೇವರಾಜ ಇವರು ವಿಧಿಸಿದ ತೆರಿಗೆಗಳ ಮಾಹಿತಿ ಲಭ್ಯವಿದೆ. 'ನರಪತಿ ವಿಜಯಂ' ಎಂಬ ಅಲಂಕಾರ ಗ್ರಂಥವಿದೆ-ಕನ್ನಡದಲ್ಲಿ. ಇದೇ ಹೆಸರಿನ ತಮಿಳು ಕಾವ್ಯ ಒಂದಿದೆಯಂತೆ. ಕಾವಲಿ ಬೋರಯ್ಯ ಇಂಗ್ಲೀಷಿಗೆ ಅನುವಾದಿಸಿದ ಪ್ರತಿ ಪ್ರಸ್ತುತ ಸಂಗ್ರಹದಲ್ಲಿದೆ.

ಹೈದರ, ಟೀಪೂಸುಲ್ತಾನರಿಗೆ ಸಂಬಂಧಿಸಿದ ಕೈಫಿಯತ್ತುಗಳು, ದಾಖಲೆಗಳೂ ಸಾಕಷ್ಟಿವೆ. ಅವುಗಳನ್ನು ಮಥಿಸಿದಾಗ ಹೊಸ ಅಂಶಗಳು ಹೊರಡಬಹುದು. ನಮ್ಮ ಗಮನ ಸೆಳೆದ ಎರಡನ್ನು ಮಾತ್ರ ಇಲ್ಲಿ ಪ್ರಸ್ತಾಪಿಸುವೆವು. ಒಂದು-ಟೀಪೂ ಸುಲ್ತಾನ ಮತ್ತು ಜಾನ್ ಕನವೇ ಇವರ ನಡುವಿನ ಸಂಭಾಷಣೆ

೧೭೯೨ರಲ್ಲಿ). ೫೮೬ ಪುಟಗಳ ಸುದೀರ್ಘ ದಾಖಲೆ ಇದು. ಎಲ್ಲಿಯೂ ಪ್ರಕಟವಾಗಿಲ್ಲ. ಇನ್ನೊಂದು-ತನ್ನ ಮರಣಕ್ಕೆ ಕೇವಲ ಒಂದು ವರ್ಷದ ಹಿಂದೆ ಟೀಪೂಸುಲ್ತಾನನು ಮೈಸೂರು ಒಡೆಯರ ಚರಿತ್ರೆಯನ್ನು ಪರ್ಶಿಯನ್ ಭಾಷೆಯಲ್ಲಿ ಬರೆಯುವ ಕೆಲಸವನ್ನು ಅಸದ್ ಅನ್ವರ್ ಹಾಗೂ ಗುಲಾಮ್ ಹುಸೇನ್ ಎಂಬುವವರಿಗೆ ಒಪ್ಪಿಸಿದ್ದುದು. 'ನಸಾದ್-ಎ-ನಾಮಾ-ಎ-ರಾಜ್ ಮೈಸೂರ್' ಎಂಬ ಹೆಸರಿನ ಆ ಚರಿತ್ರೆ ೧೬೩೪ಕ್ಕೆ ತಡೆದು ನಿಂತಿದೆ. ದಿವಾನ ಪೂರ್ಣಯ್ಯನನ್ನು ಕುರಿತು ಒಂದು ದಾಖಲೆಯಿದ್ದು, ಅದರಲ್ಲಿ ಆತನ ತಪ್ಪು ಹುಡುಕುವೆವೆಂದು ಕೆಲವರು ಎಷ್ಟು ಪ್ರಯತ್ನಿಸಿದರೂ, ಒಂದೂ ಸಿಗಲಿಲ್ಲವೆಂದು ಅದರಲ್ಲಿ ಹೇಳಿದೆ.

೫. **ಕರ್ನಾಟಕ-ಮರಾಠಾ ಸಂಬಂಧ:** ಕರ್ನಾಟಕದೊಡನೆ ಮರಾಠಿಗರ ಸಂಬಂಧ ೧೪ನೆಯ ಶತಮಾನದಿಂದಲೇ ಇದ್ದುದ್ದರ ಒಂದು ಸ್ಪಷ್ಟನಿದರ್ಶನ ಮೆಕೆನ್ಸಿಯ ಈ ಸಂಗ್ರಹದಲ್ಲಿದೆ. ಎರಡನೆಯ ಹರಿಹರನು ೧೩೯೪ರಲ್ಲಿ ಚಿತ್ರದುರ್ಗ ಜಿಲ್ಲೆಯ ಮಾದನಹಳ್ಳಿಯನ್ನು ಪಟವರ್ಧನ ಕುಟುಂಬದ ವಿಷ್ಣುದೀಕ್ಷಿತ ಹಾಗೂ ಅನಂತದೀಕ್ಷಿತ ಎಂಬುವವರಿಗೆ ದತ್ತಿ ಬಿಟ್ಟಿದ್ದರ ಉಲ್ಲೇಖ ದೊರೆಯುತ್ತದೆ.

ಛತ್ರಪತಿ ಶಿವಾಜಿ ಮತ್ತು ಅವನ ತಂದೆ ಇವರ ಕರ್ನಾಟಕ ಸಂಬಂಧ ತಿಳಿದ ಮಾತೇ ಆಗಿದೆ. ಇಲ್ಲಿಯೂ ಆ ಕುರಿತು ಮಾಹಿತಿ ಇದೆ. ಅವುಗಳಲ್ಲಿಯ ಕೆಲವು ದಾಖಲೆಗಳನ್ನು ಮೆಕೆನ್ಸಿಯೇ JASBಯ ೧೩ನೆಯ ಸಂಪುಟದಲ್ಲಿ ಅನುವಾದಿಸಿ ಪ್ರಕಟಿಸಿದ್ದಾನೆ. ಶಹಾಜಿ-ಶಿವಾಜಿ ಇವರ ಕರ್ನಾಟಕ ಸಂಬಂಧವನ್ನು ಅವನೇ ಮೊದಲಿಗೆ ಬೆಳಕಿಗೆ ತಂದವನು. ಶಿವಾಜಿಯನ್ನು ಕುರಿತ ಡಚ್ ದಾಖಲೆಯೊಂದಿದೆ-ಅನುವಾದ ರೂಪದಲ್ಲಿ. ಪೇಶ್ವೆಯ ಬಾಳಾಜಿ ಬಾಜೀರಾಯನು ಕೊಟ್ಟಿದ್ದ ಸನದು ಮೂಲತಃ ಕನ್ನಡದಲ್ಲಿ ಇದ್ದುದು, ಅದರ ಆಂಗ್ಲ ಅನುವಾದವೂ ಮೆಕೆನ್ಸಿಯ ಈ ಸಂಗ್ರಹದಲ್ಲಿದೆ. ಪೇಶ್ವೆಯರು ಪುಣೆಯಿಂದ ಹೊರಟು ಉತ್ತರ ಕರ್ನಾಟಕದ ಮಾರ್ಗವಾಗಿ ಶ್ರೀರಂಗಪಟ್ಟಣದವರೆಗೆ ದಂಡೆತ್ತಿ ಹೋಗುತ್ತಿದ್ದರಷ್ಟೆ. ಆ ದಾರಿಯಲ್ಲಿಯ ಕೋಟೆಗಳು, ಸ್ಥಳಗಳು- ಇವುಗಳ ಮಾಹಿತಿ ಬೇರೊಂದು ದಾಖಲೆಯಲ್ಲಿದೆ.

ಆದರೆ ಮರಾಠೀ ಪ್ರದೇಶಗಳೇ ಆಗಿರುವ ರತ್ನಾಗಿರಿ, ಮಿರಜ, ನಾಗಪುರ, ಮತ್ತು ದೌಲತಾಬಾದ ಅಲ್ಲದೆ ತಮಿಳುನಾಡಿನ ಜಿಂಜಿ ಇವುಗಳ ಕೈಫಿಯತ್ತುಗಳು ಮೆಕೆನ್ಸಿಗೆ ಕರ್ನಾಟಕದಲ್ಲಿ ಸಿಕ್ಕಿದ್ದೊಂದು ವಿಶೇಷ. ಅದರಂತೆ, ಮದ್ರಾಸಿದಲ್ಲಿ ಇಂಗ್ಲೀಷ್ ಸತ್ತೆ ಹೇಗೆ ಮೊದಲಾಯಿತೆನ್ನುವುದರ ಒಂದು ದಾಖಲೆಯೂ ಕರ್ನಾಟಕದಲ್ಲಿ ದೊರೆತದ್ದಾಗಿದೆ. 'ಚೋಳರಾಜಾಂಚೆ ಕಥಾ' ಇದೊಂದು ಮರಾಠಿ ಬರಹ. ಅದನ್ನು ತಂಜಾವೂರ ನಿವಾಸಿ ವೆಂಕಟರಾಯ ಎಂಬುವವನು ಅನುವಾದಿಸಿ ಮೆಕೆನ್ಸಿಗೆ ಕೊಟ್ಟಿದ್ದಾನೆ.

'ಬಲ್ಲಾಘಾಟ್' ಎಂಬುದು ಪದೇ ಪದೇ ಈ ಸಂಗ್ರಹದಲ್ಲಿ ಕಾಣ ಬರುತ್ತದೆ. ಅದುವೇ ಈಗಿನ 'ಪಾಲಘಾಟ'. ದೀರ್ಘಕಾಲದವರೆಗೆ ಕರ್ನಾಟಕದ ರಾಜರ ಕೈಕೆಳಗೇ ಇದ್ದಿತು. ಆ ಕಾರಣದಿಂದ ಸಾಕಷ್ಟು ದಾಖಲೆಗಳು ಈ ಸಂಗ್ರಹದಲ್ಲಿವೆ. ಗಣನೀಯ ಮಾಹಿತಿಯೂ ಇದೆ. ವಿಸ್ತಾರ ಭಯದಿಂದ ಅದನ್ನು ಇಲ್ಲಿ ವಿವರಿಸಹೋಗಿಲ್ಲ.

ಅದೇ ಸೊಂಡೂರು, ಗುತ್ತಿ ಇವುಗಳ ಬಗ್ಗೆ ಇರುವ ದಾಖಲೆಗಳನ್ನು ವಿಶೇಷವಾಗಿ ಹೆಸರಿಸಬೇಕು. ಇವೆರಡೂ ಘೋರ್ಪಡೆ ಮನೆತನದವರ ವಶವರ್ತಿಯಾಗಿದ್ದವುಗಳು. ಈ ಮನೆತನದ ವಂಶಾವಳಿಯ ೨-೩ ಪಾಠಭೇದ ಪ್ರತಿಗಳು ಕಣ್ಣಿಗೆ ಬೀಳುತ್ತವೆ. 'ಘೋರ್ಪಡೆಯಾಂಚೆ ಕೈಫಿಯತ್' ಎಂಬುದೂ ಲಕ್ಷಿಸಬೇಕಾದ ದಾಖಲೆಯೇ. ಸೊಂಡೂರು ಪರಿಸರಕ್ಕೆ ಸಂಬಂಧಿಸಿದ 'ಲೋಹಾಚಲ ಮಹಾತ್ಮೆ' ಯನ್ನು ಮೆಕೆನ್ಸಿ ಇಡಿಯಾಗಿ ಅನುವಾದ ಮಾಡಿಸಿ ಇರಿಸಿದ್ದಾನೆ. ಮೂಲ ಭಾಷಾಪ್ರತಿ ಸ್ಥಳೀಯವಾಗಿ ಲಭ್ಯವಿಲ್ಲ-ಎಂದಾದರೆ ಮೆಕೆನ್ಸಿಯದನ್ನು ನೋಡಬಹುದು.

ಹಿರೇಹಾಳ ಎಂಬುದು ಸೊಂಡೂರಿನ ಹತ್ತಿರದ ಘೋರ್ಪಡೆಯವರ ವಶದಲ್ಲಿದ್ದ ಒಂದು ಊರು. ಆ ಊರ ಹೆಸರಿನ ಕೈಫಿಯತ್ತಿನಲ್ಲಿ ಒಂದು ವಿಶೇಷ ಘಟನೆಯ ಪ್ರಸ್ತಾಪವಿದೆ. ಟೀಪೂ ಹತನಾದ ಮೇಲೆ, ಅವನ ರಾಜ್ಯದ ಹಂಚಿಕೊಳ್ಳುವಿಕೆಯಲ್ಲಿ ಹಿರೇಹಾಳ, ನಿಜಾಮನಿಗೆ ಹೋಯಿತು. ಆಗಿನ ಘೋರ್ಪಡೆ ಸಂಸ್ಥಾನಿಕನ ತಮ್ಮ ವೆಂಕಟರಾಯನು ಅದನ್ನು ಮರಳಿ ಪಡೆಯಲು ಯತ್ನಿಸಿದ. ಈ ಮಧ್ಯೆ ಬ್ರಿಟಿಶರು ಪ್ರವೇಶಿಸಿ, ನೇರವಾಗಿ ಅದನ್ನು ತಮ್ಮದನ್ನಾಗಿ ಮಾಡಿಕೊಂಡು ಬಳ್ಳಾರಿ ಜಿಲ್ಲೆಗೆ ಸೇರಿಸಿ ಬಿಟ್ಟರು!

ನಮಗೆ ವಿಶೇಷವಾಗಿ ತೋರಿದ್ದೆಂದರೆ, ಮೆಕೆನ್ಸಿಯು

ದೊರಕಿಸಿದ ಅನೇಕಾನೇಕ ದಾಖಲೆಗಳು ಮೂಲ ಮರಾಠೀ ಭಾಷೆಯಲ್ಲಿದ್ದು 'Translated from Marathi' ಎಂಬುದನ್ನು ಎಲ್ಲೆಲ್ಲಿಯೂ ಕಾಣುತ್ತೇವೆ. ಎಂದರೆ ಆ ಭಾಷೆಯನ್ನು ಅರ್ಥ ಮಾಡಿಕೊಳ್ಳುವ, ಅಗತ್ಯಬಿದ್ದರೆ ಲಿಖಿತಗೊಳಿಸಬಲ್ಲ ಅನೇಕರು, ಕರ್ನಾಟಕದ ರಾಜರ, ಸಂಸ್ಥಾನಿಕರ ಬಳಿ ಇದ್ದರು ಎಂದು ಹೇಳ ಬೇಕಾಗುತ್ತದೆ. ಕನ್ನಡವು ಎಷ್ಟರ ಮಟ್ಟಿಗೆ ಆಡಳಿತ ಭಾಷೆಯಾಗಿದ್ದಿತೆಂದು ಹೇಳುವುದು ಕಷ್ಟ (ಬಳಕೆಯ ಭಾಷೆಯಾಗಿ ಇದ್ದಿರಬಹುದು). ಅದೇ, ಪರ್ಶಿಯನ್, ಉರ್ದು ಮತ್ತು ಮರಾಠಿ ಇವು ಮಾತ್ರ ಮಧ್ಯಯುಗೀನ ಹಾಗೂ ಪೂರ್ವಾಧುನಿಕ (Pre-modern) ಕಾಲಗಳಲ್ಲಿ, ರಾಜಕೀಯ ಮತ್ತು ಆಡಳಿತ ಸಂದರ್ಭಗಳಲ್ಲಿ ರಾರಾಜಿಸಿದುವೆಂದೇ ಹೇಳ ಬೇಕು.

ಪ್ರಬಂಧವನ್ನು ಮುಗಿಸುವ ಮುನ್ನ ಒಂದು ಎಚ್ಚರಿಕೆಯ ಮಾತು ಹೇಳಬೇಕು. ಈ General ವಿಭಾಗದಲ್ಲಿ ಸಾಮಗ್ರಿ ಏನೋ ವಿಪುಲವಾಗಿದೆ. ಅದು ಎಷ್ಟರ ಮಟ್ಟಿಗೆ ವಿಶ್ವಾಸಾರ್ಹ?

ಬಖೈರು-ಕೈಫಿಯತ್ತುಗಳು ತಲತಲಾಂತರದಿಂದ ಕೇಳಿಬಂದಷ್ಟನ್ನೇ ದಾಖಲಿಸಿರುವ ವಂಶಾವಳಿ ಮತ್ತು ಚರಿತ್ರೆಗಳು, ಹಾಗೆಯೇ ಮುದುಕರು ಹೇಳಿದ ಮಾತುಗಳು-ಇವುಗಳನ್ನು ಎಷ್ಟರ ಮಟ್ಟಿಗೆ ನಂಬಬೇಕೆಂಬುದು ಅವರವರಿಗೇ ಬಿಟ್ಟಿದ್ದು. ಹಾಗೆಂದು ಇವುಗಳ ಮಹತ್ವ ಹಾಗೂ ಉಪಯುಕ್ತತೆಗೆ ಯಾವುದೇ ಕುಂದು ತಟ್ಟಲಾರದು.

○

ಡಾ|| ಬಿ.ನಂಜುಂಡ ಸ್ವಾಮಿ *

# ಈ ಶತಮಾನದ ಓಲೆಗರಿಯ ಲಿಪಿಗಾರ ಹಾಗಲವಾಡಿ ಅಳಗಯ್ಯ ( ಸುಮಾರು ೧೮೪೦-೧೯೨೮ರ )

ಗುಬ್ಬಿ ತಾಲ್ಲೂಕ್ ಹಾಗಲವಾಡಿ ಒಂದು ಪಾಳೆಪಟ್ಟಿನ ರಾಜಧಾನಿಯಾಗಿತ್ತು. ಆ ಪಾಳೆಪಟ್ಟಿನ ಬಗ್ಗೆ ಸಾಕಷ್ಟು ಲೇಖನಗಳು ಬಂದಿವೆ. ಈ ಪಾಳೆಪಟ್ಟಿನ ಬಗ್ಗೆ ಸಿದ್ಧಗಂಗಾ ಮಠದಲ್ಲಿ ಒಂದು ವಿಚಾರಸಂಕಿರಣ ನಡೆದು ಆ ಬಗ್ಗೆ ಕೃತಿ ಹೊರಬರಬೇಕಾಗಿದೆ. ಇಂದು ಹಾಗಲವಾಡಿಯಲ್ಲಿ ಅಳಿದು ಉಳಿದಿರುವ ಅವಶೇಷಗಳು ಬಿಟ್ಟರೆ ಬೇರೆ ವಿಧವಾದ ಮಾಹಿತಿಯನ್ನು ನಿಖರವಾಗಿ ತಿಳಿದಿರುವವರು ಯಾರೂ ಇಲ್ಲ. ಈ ಊರಿನಲ್ಲೆ ಇದ್ದು ಸರ್ಕಾರಿ ಶಾಲೆಯ ಅಧ್ಯಾಪಕರಾಗಿ, ಮುಖ್ಯೋಪಾಧ್ಯಾಯರಾಗಿ, ನಿವೃತ್ತಿ ಹೊಂದಿದ ಅಳಗಯ್ಯನವರು ಅಂಚೆ ಮುಖ್ಯಸ್ಥರಾಗಿ, ವೈದ್ಯರಾಗಿ, ಮಂತ್ರಗಾರರಾಗಿ, ಪುರೋಹಿತರಾಗಿ, ಧರ್ಮಾಧಿಕಾರಿಯಾಗಿ, ಜ್ಯೋತಿಷಿಯಾಗಿ, ಲಿಪಿಗಾರರಾಗಿ, ತ್ರಾಮ ಶಾಸನವನ್ನು ಕೊರೆದವರಾಗಿ ಹೀಗೆ ಹಲವು ಮುಖ ಪ್ರತಿಭೆ ಉಳ್ಳವರಾಗಿದ್ದಾರೆ. ರಾಮಾನುಜಾಚಾರ್ಯರ ಪರಂಪರೆಯ ಶ್ರೀ ವೈಷ್ಣವ ಧರ್ಮದ ಶಾತ್ತಾದ ಶ್ರೀ ವೈಷ್ಣವ ಮತಸ್ಥರು.

ಸುಮಾರು ಐವತ್ತಕ್ಕೂ ಮಿಕ್ಕ ಕೃತಿಗಳನ್ನು ಓಲೆ ಮೇಲೆ ಬರೆದಿದ್ದಾರೆ. ಶ್ರೀವೈಷ್ಣವ, ಆಯುರ್ವೇದ, ಶಾಸ್ತ್ರ, ಜ್ಯೋತಿಷ್ಯ, ವೀರಶೈವ, ಅದ್ವೈತ, ಭಾರತ, ರಾಮಾಯಣಗಳನ್ನು, ಕನ್ನಡ, ಸಂಸ್ಕೃತ, ತೆಲುಗು, ತಮಿಳು, ಹಿಂದಿ ಭಾಷೆಯಲ್ಲಿ ಕೆಲವು ಹಾಡುಗಳನ್ನು, ಲಘುಕೃತಿಗಳನ್ನು ಪ್ರತಿ ಮಾಡಿದ್ದಾರೆ. ಮುದ್ರಿತವಾದ ಪುಸ್ತಕಗಳನ್ನು ಮತ್ತೆ ಓಲೆ ಮೇಲೆ ಬರೆದಿದ್ದಾರೆ. ಸುಂದರವಾದ ಮುದ್ದಾದ ಅಕ್ಷರ. ಈ ಎಲ್ಲಾ ಹಸ್ತಪ್ರತಿಗಳ ಅಧ್ಯಯನ ನಡೆದಿದ್ದು ಅವುಗಳ ಒಂದು ಸೂಚಿಯನ್ನು ಮಾಡಲಾಗುತ್ತಿದೆ.

### ೧. ತೊರುವೆ ರಾಮಾಯಣ

ಅಂತ್ಯ : ಗರಿ ೪೮೨/B

ಅಂತು ಖಾಂಡಗಳು ೮ಕಂ ಪದನು ೫೧೫೨ಕಂ ಮಂಗಳಮಹಾ ಶ್ರೀ ಶ್ರೀ ಶ್ರೀ ೧೮೭೨ನೇ ಇಸವಿ ನವಂಬರು ತಾರೀಖು ೨೮ನೇ ಗುರುವಾರ ಸಲುವ ಆಂಗೀರಸ ನಾಮ ಸಂವತ್ಸರದ ಕಾರ್ತೀಕ ಬಹುಳ ೧೩ ಗುರುವಾರ ದಿವಸ ಹಾಗಲವಾಡಿ ಸದ್ವಾರಿ ಹೋಬಳಿ ಸ್ಕೂಲ್ ಮಾಸ್ಟರ್ ಹಲಗಯ್ಯ ತಂನ ಸ್ವಂತವಾದ ರಾಮಾಯಣದ ಪುಸ್ತಕವನ್ನು ಪೂರೈಸಿ ಯಾದಿವಸ ಮತ್ತಿಕೆರೆ ರಂಗಸ್ವಾಮಿ ದೇವರಗುಡಿಯಲ್ಲಿ ಆಖೈರಾಗಿ ಪೂರೈಸಿರುತ್ತೆ, ಪಟ್ಟಾಭಿಷೇಕ ವಂನು ಮಾಡಿಸಿದಕ್ಕೆ ಶುಭಮಸ್ತು ಶೋಭನಮಸ್ತು ''ಮಂಗಳಾನಿ ಭವಂತು'' ಆಯುರಾರೋಗ್ಯ ಅೈಶ್ವರ್ಯಾಬಿವೃದ್ಧಿರಸ್ತೂ.

### ೨. ಬಾಲಗ್ರಹ ಗರ್ಭಿಣಿ ಚಿಕಿತ್ಸೆ

ಆದಿ: ೧P

ಶ್ರೀ ಗಣಾಧಿಪತಯೇನಮಃ। ಶ್ರೀ ಶಾರದಾಗುರುಭ್ಯೋನಮಃ

ಶ್ರೀ ನೃಶಿಂಹಸ್ವಾಮಿಯೇನಮಃ। ಪರಮಾತ್ಮಯ ನಮಃ

ಸನ್ ೧೮೯೦ ನೇ ಇಸವಿ ಎಪ್ರಿಲ್ ತಾರೀಖು ೬ನೇ ಭಾನುವಾರ ವಿಕೃತ ಸಂವತ್ಸರ ಚೈತ್ರ ಬ೨ಲ್ಲು ಹಾಗಲ್ವಾಡಿ ಮೇಷ್ಟರು ಹಳಗಯ್ಯನವರ ಪುಸ್ತಕಕ್ಕೆ ಬಾಲಗ್ರಹ ಮತ್ತು ಗರ್ಭಿಣಿ ಚಿಕಿತ್ಸೆ ಬರೆಯುವದಕ್ಕೆ ಶುಭ ಮಸ್ತು

ಅಂತ್ಯ : ೧೭B

ಹಾಗಲ್ವಾಡಿ ಸರ್ಕ್ಯಾರಿ ಸ್ಕೂಲ್ಮಾಸ್ಟರ್ ಹಳಗಯ್ಯ ಬರದ್ದು ೧೬ ವರುಷದ ಬಾಲಗ್ರಹ ಗರ್ಭಿಣೀ ಚಿಕಿತ್ಸೆಯು

* ಪಂಡಿತ್ ತಾರಾನಾಥ್ ಆಯುರ್ವೇದ ಚಿಕಿತ್ಸಾಲಯ, ತುಮಕೂರು ಶಾಪಿಂಗ್ ಕಾಂಪ್ಲೆಕ್ಸ್, ಬಿ.ಹೆಚ್.ರಸ್ತೆ ತುಮಕೂರು-೫೭೨೧೦೨.

ಂಪೂರ್ಣಂ ಮಗಳಮಹಾ ಸ್ ೧೮೯೦ನೇ ಇಸವಿ ಏಪ್ರಿಲ್ ಾರೀಖು ೧೬ನೇ ವಿಕೃತಿ ಸಂವತ್ಸರದ ಚೈತ್ರ ಬಹುಳ ೧೨ಯಲ್ಲು ಮಂಗಳ ಮಹಾ ಅಳಗಯ್ಯ ಸರ್ಕಾರಿ ಸ್ಕೂಲ್ ಹೆಡ್ಮಾಷ್ಟರು

೩. ಜ್ಯೋತಿಷ್ಯ ಕಾಲದರ್ಪಣ ನವಗ್ರಹಗಳ ದೆಶೆಗಳು

ಆದಿ : ೧F

ಶ್ರೀಮತೆರಾಮಾನುಜಾಯನಮಃ

ವಿಳಂಬಿನಾಮ ಸಂವತ್ಸರದ ಶ್ರಾವಣ ಬಹುಳ ೧೪ ಮಂಗಳವಾರ ಸ್ ೧೮೯೮ ನೇ ಯಿಸವಿ ಆಗಷ್ಟು ತಾರೀಖು ೯ಲ್ಲು ಹಾಗಲವಾಡಿ ಪ್ ಷ್ ಮಾಸ್ಟರ್ ಅಳಗಯ್ಯನವರು ನ್ನ ಸ್ವಂತಕ್ಕಾಗಿ ಜೋತಿಷ್ಯ ಕಾಲದರ್ಪಣ ಬರೆಯುವದಕ್ಕೆ ುಭಮಸ್ತು ಶ್ರೀರಸ್ತು . . . . . . . . . .

೪. ಶಾತ್ತಾದ ಶ್ರೀ ವೈಷ್ಣವರ ಲಗ್ನಗಳ ಮಹಾಸಂಕಲ್ಪ, ಮಂಗಳಾಷ್ಟಕ ಅಳಗಯ್ಯ ಮೇಷ್ಟರು ಪ್ ಷ್ ದಾರ್‍ರು

ಆದಿ : ೧F

ಶ್ರೀಮತೆರಾಮಾನುಜಾಯನಮಃ । ಸ್ ೧೯೦೨ನೇ ಇಸವಿ ಜೂನ್ ತಾ ೨೨ನೇ ಶುಭಕೃತು ಸಂವತ್ಸರದ ಜೇಷ್ಠ ಬಹುಳ ೨ ಭಾನುವಾರ ಪ್ ಷ್ ಮಾಸ್ಟರು ಅಳಗಯ್ಯನವರು ತನ್ನ ಸ್ವಂತಕ್ಕಾಗಿ ಮಹಾಸಂಕಲ್ಪ ಬರೆಯುವದಕ್ಕೆ ುಭಮಸ್ತು. . . . . .

೫. "ಆಳ್ವಾರುಗಳ ತಿರುನಕ್ಷತ್ರ ತನಯುಗಳು"

ಆದಿ : ೧F

ಶ್ರೀಮತೆರಾಮಾನುಜಾಯ ನಮಃ। ಸ್ ೧೯೦೭ ನೇ ಇಸವಿ ಮೇ ತಾರೀಖು ೧೩ನೇ ಪ್ಲವಂಗನಾಮ ಸಂವತ್ಸರದ ವೈಶಾಖ ಶುದ್ಧ ೧ ಸೋಮವಾರ ಪ್ರಾತಃಕಾಲ ೧೧ ಘಳಿಗೆಯಲ್ಲಿ ಪರಂಧಾಮ ಮೂರ್ತಿ ಪೂರ್ವದಲ್ಲಿಯಿರುವ ಕಾಲದಲ್ಲಿ ಶಾತ್ತಾದ ಶ್ರೀ ವೈಷ್ಣವರ "ಆಳ್ವಾರುಗಳ ತಿರುನಕ್ಷತ್ರ ತನಯುಗಳ" ಹಾಗಲ್ವಾಡಿ ಸರ್ಕಾರಿಸ್ಕೂಲ್ ಹೆಡ್ಮಾಷ್ಟರು ಅಳಗಯ್ಯನವರು ತಂಮ ಸ್ವಂತಕ್ಕಾಗಿ ಬರದುಕೊಂಡ ತನಯುಗಳು

[೪ ಮತ್ತು ೫ ಕೃತಿಗಳು ಒಂದೇ ಕಟ್ಟಿನಲ್ಲಿ ಇವೆ.]

೬. ಅಬ್ದಕಲ್ಪ

ಆದಿ: ೧F

೬. ಅಬ್ದ ಕಲ್ಪ ಬರೆಯುವದಕ್ಕೆ ಶುಭಮಸ್ತು ॥ ಸ್ ೧೯೦೭ ನೇ ಇಸವಿ ಫೆಬ್ರುರವರಿ ತಾರೀಖು ೨೩ನೇ ಪರಾಭವ ಸಂವತ್ಸರದ ಫಾಲ್ಗುಣ ಶುದ್ಧ ೧೧ಲ್ಲು ಹಾಗಲ್ವಾಡಿ ಸ್ಕೂಲ್ ಹೆಡ್ಮಾಷ್ಟರು ಪ್ ಷ್ ದಾರು ಅಳಗಯ್ಯನವರ ಸ್ವಂತಕ್ಕಾಗಿ

ಶ್ರೀ ಶೀಬಿ ನರಶಿಂಹಸ್ವಾಮಿಯೇ ನಮಃ।
ಶ್ರೀ ಅಪ್ಪಂಣನಹಳ್ಳಿ ಆಂಜನೇಯಸ್ವಾಮಿಯೇ ನಮಃ
ಶ್ರೀ ಕುಲಶೇಖರಾಳ್ವರ್ ತಿರುವಡಿಗಳಿಗೆ ಶರಣಂ ಶರಣಂ ಪ್ರಪದ್ಯೆ.

೭. ಕರಣಹಸಿಗೆ

೧F

ಶ್ರೀ ಗುರುಪರಬ್ರಂಹ್ಮಣೆ ನಮಃ

ಕೀಲಕಸಂವತ್ಸರದ ಫಾಲ್ಗುಣ ಬಹುಳ ೧೨ ಶುಕ್ರವಾರ ಪ್ರಾತಃಕಾಲ ೯ ಘಳಿಗೆಯಲ್ಲಿ ಪರಬ್ರಂಹ್ಮಮೂರ್ತಿ ಈಶ್ಯಾನದಳದಲ್ಲಿ ಇರುವಾಗ್ಯೆ ಚನ್ನಬಸವದೇವರು ನಿರೂಪಿಸಿದ ಕರ್ಣಹಶಿಗೆ ಮೇಷ್ಟರು ಅಳಗಯ್ಯನವರು ತಮ್ಮ ಸ್ವಂತಕ್ಕಾಗಿ ಬರದು ಕೊಂಡದಕ್ಕೆ ಶುಭಮಸ್ತು ಶ್ರೀರಸ್ತು

೬೯B: ಕರಣಹಸಿಗೆ ಸಮಾಪ್ತಂ

ಸ್ ೧೯೦೯ನೇ ಇಸವಿ ಮಾರ್ಚಿ ತಾರೀಖು ೨೬ನೇ ಸೌಂಮ್ಯ ಸಂವತ್ಸರದ ಚೈತ್ರ ಶುದ್ಧ ಶುಕ್ರವಾರ ಪ್ರಾತಃಕಾಲ ೧೦ ಘಳಿಗೆಯಲ್ಲಿ ಪರಬ್ರಂಹ್ಮಮೂರ್ತಿ ಈಶ್ಯಾನದಳದಲ್ಲಿ ಇರುವಾಗ್ಗೆ ಹಾಗಲವಾಡಿ ಸ್ಕೂಲ್ ಹೆಡ್ಮಾಷ್ಟರು ಪ್ ಷ್ ದಾರ್‍ರು ಅಳಗಯ್ಯನವರು ಸ್ವಂತಕ್ಕಾಗಿ ಕರ್ಣಹಸಿಗೆ ಬರೆದು ಪೂರೈಸಿದ್ದಕ್ಕೆ ಶುಭಮಸ್ತು

ಶ್ರಿ ಶ್ರಿ ಅಳಗಯ್ಯ ಪ್ ಷ್ ಮಾಸ್ಟರ್ ಹಾಗಲ್ವಾಡಿ

೮. ಕಾಲಜ್ಞಾನವು

ಆದಿ : ೧F

೮. ಸ್ ೧೯೧೫ನೇ ಇಸವಿ ಮೇ ತಾರೀಖು ೩೦ನೇ ರಾಕ್ಷಸನಾಮ ಸಂವತ್ಸರದ ನಿಜ ವೈಶಾಖ ಬಹುಳ ೨ ಭಾನುವಾರ ಬೆಳಗಿನ ೬ ಘಳಿಗೆಯಲ್ಲಿ ಪರಮಾತ್ಮನು ಯಿಂದ್ರನಲ್ಲಿ ಯಿರುವಾಗ್ಯೆ ಕಾಲಜ್ಞಾನ ಬರೆಯುವದಕ್ಕೆ ಶುಭಮಸ್ತು ॥ ಶ್ರೀ ಪರಮಹಂಸ ಪ್ರಸಂನಾ ॥ ರುದ್ರ ಮುನಿಸ್ವಾಮಿಗಳಿಂದಲೂ ಬಸವಂಣನವರಿಂದಲೂ ನೀಲಂಮನವರಿಂದಲೂ ಹೇಳಲ್ಪಟ್ಟ ಕಾಲಜ್ಞಾನವುನು ವಿವರಿಸಲ್ಪಡುತ್ತವೆ.

೨೫B ನೀಲಂಮನವರ ಕಾಲಜ್ಞಾನ ಪೂರ್ಣಮಾದುದು.

## ೯. ವೈದ್ಯ ಸಂಗ್ರಹ ೧ನೇ ಭಾಗ

ಶ್ರೀ ಗುರು ಪರಬ್ರಂಹ್ಮಣೇನಮಃ ॥ ಸ್‌ ೧೯೧೭ ನೇ ಇಸವಿ ಜೂನ್ ತಾರೀಖು ೫ನೇ ನಳಸಂವತ್ಸರದ ಜೇಷ್ಠ ಶುದ್ಧ ೫ ಸೋಮವಾರ ಪ್ರಾತಃಕಾಲ ೧ನೇ ಘಳಿಗೆಯಲ್ಲಿ ಪರ ಮಾತ್ಮನು ಕುಬೇರದಲ್ಲಿ ಇರುವಾಗ ಮೇಷ್ಟರ ಅಳಗಯ್ಯನು ತಂನ ಸ್ವಂತಕಾಗಿ ವೈದ್ಯಸಂಗ್ರಹ ಬರದು ಕೊಂಡದಕ್ಕೆ ಶುಭಮಸ್ತು

೯೦ F

ಸರ್ ೧೯೧೬ ನೇ ಇಸವಿ ಜೂನ್ ತಾರೀಖು ೨೦ ನೇ ನಳಸಂವತ್ಸರದ ಜೇಷ್ಠ ಬಹುಳ ೫ ಮಂಗಳವಾರ ಪ್ರಾತಃಕಾಲ ೨ ಘಳಿಕೆಯಲ್ಲಿ ಪರಮಾತ್ಮ ಈಶ್ಯಾನ್ಯದಲ್ಲಿ ಇರುವಾಗ್ಯೆ ಹಾಗಲವಾಡಿ ಸ್ಕೂಲ್ ಹೆಡ್ಮಾಷ್ಟರು ಪೇರ್ಷದಾರ್ರು ಅಳಗಯ್ಯನವರು ತಂಮು ಸ್ವಂತಕ್ಕಾಗಿ ವೈದ್ಯಸಂಗ್ರಹ ಬರೆದುಕೊಂಡದಕ್ಕೆ ಶುಭಮಸ್ತು.

ಅಳಗಯ್ಯ ಪೇರ್ಷಿಮಾಷ್ಟರು ಹಾಗಲವಾಡಿ ಸ್ಕೂಲ್ ಹೆಡ್ಮಾಷ್ಟರು.

## ೧೦. ಶ್ರಿ ಸರ್‍ವಗ್ನ ಮೂರ್ತಿ ವಚನ

ಆದಿ: ೧F

ಶ್ರೀ ಗುರುಪರಬ್ರಂಹ್ಮಣೇನಮಃ। ಸರ್ ೧೯೧೧ ನೇ ಇಸವಿ ಜನವರಿ ತಾರೀಖು ೬ನೇ ಸಾಧಾರಣ ಸಂವತ್ಸರದ ಪುಷ್ಯ ಶುದ್ಧ ೬ ಶುಕ್ರವಾರ ಮಧ್ಯಾಹ್ನ ೨೧ನೇ ಘಳಿಗೆಯಲ್ಲಿ ಪರವಾತ್ಮ ಇಂದ್ರನಲ್ಲಿ ಇರುವಾಗ ಮೇಷ್ಟರು ಅಳಗಯ್ಯನವರು ತಮ್ಮ ಸ್ವಂತಕ್ಕಾಗಿ ಸರ್ವಜ್ಞ ಮೂರ್ತಿ ವಚನ ಬರೆದುಕೊಂಡದಕ್ಕೆ ಶುಭಮಸ್ತು

॥ಶ್ರೀ ರಾಮ ಪ್ರಸನ್ನಾ ॥

ಅಂತ್ಯ:೧೨೮ F

ಅಂತು ಸಂಧಿ ೨೯ಕ್ಕಂ ಪದ ೧೧೫೬ ಕಂ ಮಂಗಳಮಸ್ತು ॥ಸಂಪೂರ್ಣ ॥

ಸರ್ ೧೯೧೧ ನೇ ಇಸವಿ ಫೆಬ್ಬ್ರವರಿ ತಾರೀಖು ೮ನೇ ಸಾಧಾರಣ ಸಂವತ್ಸರದ ಮಾಘ ಶುದ್ಧ ೧೦ ಬುಧವಾರ ಹಾಗಲ್ವಾಡಿ ಮೇಷ್ಟರು ಅಳಗಯ್ಯನವರು ತಮ್ಮ ಸ್ವಂತಕ್ಕಾಗಿ ಸರ್‍ವಜ್ಞಮೂರ್ತಿ ವಚನ ಬರೆದು ಕೊಂಡದಕ್ಕೆ ಶುಭಮಸ್ತು

ಅಳಗಯ್ಯ ಪೇರ್ಷ ಮಾಷ್ಟರು.

## ೧೧. ಪಾಷಾಣಮಾಲಾ ವೃತ್ತಾ ವ್ಯಾಖ್ಯಾನ ಸಹಾ

### ಕಾಳಿದಾಸ ವಿರಚಿತ

೧F

ಶ್ರಿ ಗುರುಪರಬ್ರಂಹ್ಮಣೇನಮಃ ಸರ್ ೧೯೧೨ ಇಸವಿ ಮೇ ತಾರೀಖು ೨೭ನೇ ಪರಿಧಾವೀ ಸಂವತ್ಸರದ ಜೇಷ್ಠ ಶುದ್ಧ ೧೨ ಸೋಮವಾರ ಹಗಲು, ೨೦ನೇ ಘಳಿಯಲ್ಲಿ ಪರಮಾತ್ಮನು ನೈರುತ್ಯದಲ್ಲಿ ಬಿಜಮಾಡಿಕೊಂಡು ಇರುವಲ್ಲಿ ಹಾಗಲವಾಡಿ ಸ್ಕೂಲ್ ಪೇರ್ಷ ಮಾಸ್ಟರು ಅಳಗಯ್ಯನವರು ತಂಮ ಸ್ವಂತಕ್ಕಾಗಿ ಪಾಷಾಣಮಾಲಾ ವೃತ್ತಾ ವ್ಯಾಖ್ಯಾನ ಸಹಿತ ಬರೆಯುವದಕ್ಕೆ ಶುಭಮಸ್ತು.

ಅಂತ್ಯ ೨೫ F ಕಾಳಿದಾಸರು ಮಾಡಿದ ಕಲ್ಮಾಲೆ ವೃತ್ತ ಸಮಾಪ್ತಂ ಸರ್ ೧೯೧೨ ಜೂನ್ ತಾರೀಖು ೨ನೇ ಪರಿಧಾವಿ ಸಂವತ್ಸರದ ಜೇಷ್ಠ ಬಹುಳ ೩ ಭಾನುವಾರ ಹಗಲು ೧೯ ಘಳಿಗೆಯಲ್ಲಿ ಪರಮಾತ್ಮನಾದ ಪರಬ್ರಂಹ್ಮಸ್ವಾಮಿಯು ನೈರುತ್ಯದಲ್ಲಿ ಬಿಜಮಾಡಿಕೊಂಡಿರುವಲ್ಲಿ ಹಾಗಲ್ವಾಡಿ ಸ್ಕೂಲ್ ಹೆಡ್ಮಾಷ್ಟರು ಪೇರ್ಷದಾರ್ರು ಅಳಗಯ್ಯನವರು ತಮ್ಮ ಸ್ವಂತಕ್ಕಾಗಿ ಪಾಷಾಣಮಾಲ ವೃತ್ತಾ ಬರದ್ದು ಶ್ರೀ ಶ್ರೀ ಶ್ರೀ

ಕಾಳಿದಾಸ ಮಾಡಿದ ಕಲ್ಮಾಲೆ ವೃತ್ತಾ ಸಮಾಪ್ತಂ

## ೧೨. ಹಿಂದೂ ಯುನಾನಿ ವೈದ್ಯ

ಆದಿ: ೧೨ F

ಸರ್ ೧೯೧೭ ನೇ ಇಸವಿ ಆಗಷ್ಟು ತಾರೀಖು ೧೨ನೇ ಪಿಂಗಳನಾಮ ಸಂವತ್ಸರದ ಶ್ರಾವಣ ಬಹುಳ ೧೦ ಭಾನುವಾರ ಮಧ್ಯಾಂಹ್ನ ೧॥ ಘಂಟೆಯಲ್ಲಿ ಪೇರ್ಷ ಮಾಸ್ಟರು ಅಳಗಯ್ಯನವರು ತಂಮ ಸ್ವಂತಕಾಗಿ ಹಿಂದು ಯುನಾನಿ ವೈದ್ಯ ಸುಗಂಧ ಭೋದಕ ಬರದು ಕೊಂಡದಕ್ಕೆ ಶುಭಮಸ್ತು.

॥ಶ್ರಿ ರಾಮ ಪ್ರಸಂನಾ ॥

೨೦೫ F

ಅಂತ್ಯಃ ಸರ್ ೧೯೧೯ನೇ ಇಸವಿ ಎಪ್ರೀಲ್ ತಾರೀಖು ೩ನೇ ಪಿಂಗಳ ಸಂವತ್ಸರದ ಫಾಲ್ಗುಣ ಬಹುಳ ೭ ಸಪ್ತಮಿ ಬುಧವಾರ ಪ್ರಾತಃಕಾಲ ೨ ಘಳಿಗೆಯಲ್ಲಿ ಹಾಗಲವಾಡಿ ಗೌರನ್ಮೆಂಟು ಸ್ಕೂಲ್ ಹೆಡ್ಮಾಷ್ಟರು ಪೇರ್ಷದಾರ್ ಅಳಗಯ್ಯ ನವರು ತಂಮ ಸ್ವಂತಕ್ಕಾಗಿ ಯುನಾನಿ ವೈದ್ಯ ಸುಗಂಧ ಭೋದಕ ಸಹ ಬರೆದು ಪೂರೈಸಿರುವುದಕ್ಕೆ ಶುಭಮಸ್ತು.

ಅಳಗಯ್ಯ ಪೇರ್ಷಿ ಮಾಸ್ಟ್ರು ಹಾಗಲವಾಡಿ .

ಹೀಗೆ ಅನೇಕ ಕೃತಿಗಳನ್ನು ಓಲೆ ಮೇಲೆ ಬರೆದು ತಮ್ಮ ಸಂಗ್ರಹವನ್ನು ಹೆಚ್ಚಿಸಿ ಕೊಳ್ಳುತ್ತಾ ಇದ್ದರು. ತದನಂತರ ಕೋರಿಕಾಗದದ ಹಸ್ತಪ್ರತಿಗಳಲ್ಲಿ ಅನೇಕ ವಚನಗಳನ್ನು, ಸ್ವರವಚನಗಳು, ಕೀರ್ತನೆಗಳು, ಲಘುಕೃತಿಗಳನ್ನು ಬರೆದಿದ್ದಾರೆ. ಮುದ್ರಿತ ಪುಸ್ತಕಗಳನ್ನು ಮತ್ತೆ ಓಲೆಯ ಮೇಲೆ ಬರೆದುಕೊಂಡಿರುವುದನ್ನು ನಾವು ಮೇಲಿನ ಪುಷ್ಪಿಕೆಗಳಿಂದ ತಿಳಿಯಬಹುದಾಗಿದೆ. ಮುಮ್ಮಡಿ ಕೃಷ್ಣರಾಜ ಒಡೆಯರು ರಚಿಸಿದ ಚಾಮುಂಡಿಕಾ ಲಘು ನಿಘಂಟು, ಸ್ವರ ಚೂಡಾಮಣಿ ಕೃತಿಗಳು ಅವರ ಆಜ್ಞಾನಾನುಸಾರ ಕಲ್ಲಚ್ಚಿನಲ್ಲಿ ಮುದ್ರಣಗೊಂಡವು. ಆ ಕೃತಿಗಳನ್ನು ಅಳಗಯ್ಯನವರು ಮತ್ತೆ ಓಲೆ ಮೇಲೆ ಬರೆದುಕೊಂಡಿದ್ದಾರೆ.

ಹಸ್ತ ಪ್ರತಿ ಶಾಸ್ತ್ರದ ಬಗ್ಗೆ ಈ ಶತಮಾನದಲ್ಲಿ ಸಾಕಷ್ಟು ಚರ್ಚಿತವಾಗಿದ್ದರೂ ಈ ಶತಮಾನದಲ್ಲಿ ಲಿಪ್ಯಂತರಗೊಂಡ ಓಲೆಗರಿಯ ಹಸ್ತಪ್ರತಿಗಳು ಇಷ್ಟು ಸಂಖ್ಯೆಯಲ್ಲಿ ಒಂದು ಕಡೆ ದೊರೆತಿರುವುದು ಬಹಳ ಅಪರೂಪವೆ. (ಈ ಹಸ್ತಪ್ರತಿಗಳನ್ನು ಜತನದಿಂದ ಕಾಪಾಡಿಕೊಂಡು ಬಂದಿರುವ ಶ್ರೀ ಹಾಗಲವಾಡಿ ಅಳಗಯ್ಯನವರು ಅರ್ಥಾತ್ ಲಿಪಿಗಾರರ ಮೊಮ್ಮಕ್ಕಳು. ಅಧ್ಯಯನಕ್ಕೆ ಸಹಕರಿಸಿದ ಇವರಿಗೆ ನನ್ನ ಅನಂತ ಧನ್ಯವಾದಗಳು. ಈ ಪುಷ್ಪಿಕೆಗಳನ್ನು ಪ್ರಕಟಿಸಲು ಮಾರ್ಗದರ್ಶನ ನೀಡಿದ ಹಿರಿಯ ಹಸ್ತಪ್ರತಿ ತಜ್ಞರಾದ ಶ್ರೀ ಎಸ್. ಶಿವಣ್ಣನವರಿಗೆ ವಂದನೆಗಳು).

○

ಎಂ. ಬಿ. ಪಾಟೀಲ.*

# ರಾಜ್ಯ ಪುನರ್ ರಚನೆಯ ನಂತರ ಪಂಚಾಯತ್‌ರಾಜ್ ವ್ಯವಸ್ಥೆ ( 1956-1995 )

ಭಾರತದ ಇಂದಿನ (ಫೆಡರಲ್) ಸಂಯುಕ್ತ ಮಾದರಿಯ ಆಡಳಿತ ವ್ಯವಸ್ಥೆಯಲ್ಲಿ ಕೇಂದ್ರ ಸರ್ಕಾರ ಮತ್ತು ಪ್ರಾಂತೀಯ (ರಾಜ್ಯ) ಸರ್ಕಾರಗಳಂತೆ ಸ್ಥಳೀಯ ಸರ್ಕಾರಗಳು ಹಿಂದೆಂದಿಗಿಂತಲೂ ಹೆಚ್ಚು ವಾಸ್ತವಿಕ ಮತ್ತು ಜನ ಸಮುದಾಯಕ್ಕೆ ಹೆಚ್ಚು ನಿಕಟವಾಗಿದೆ.

ಕಳೆದ ನಾಲ್ಕು ದಶಕಗಳ ಅವಧಿಯಲ್ಲಿ ದೇಶದ ಇತರಡೆಯಂತೆ ಕರ್ನಾಟಕದಲ್ಲಿಯೂ ಪಂಚಾಯತಿರಾಜ್ ಆಡಳಿತ ವ್ಯವಸ್ಥೆಯಲ್ಲಿ ವ್ಯಾಪಕ ಬದಲಾವಣೆಗಳನ್ನು ಕಾಣಬಹುದು. ಇತ್ತೀಚೆಗೆ ಕೇಂದ್ರ ಸರ್ಕಾರವು ಅಳವಡಿಸಿದ ಸಂವಿಧಾನದ ೭೩ ಮತ್ತು ೭೪ ತಿದ್ದುಪಡಿಯ ಅನುಸಾರ ಇಂದು ದೇಶದ ಎಲ್ಲಡೆಯಲ್ಲಿ ಪಂಚಾಯತಿರಾಜ್ ವ್ಯವಸ್ಥೆ ಮತ್ತು ನಗರ ಪ್ರದೇಶಗಳ ಸ್ಥಳೀಯ ಸರ್ಕಾರ ಅಥವಾ ಸ್ಥಾನೀಯ ಸ್ವರಾಜ್ಯ ಸಂಸ್ಥೆಗಳ ಕಾರ್ಯವಿಧಾನ, ಅಂಗರಚನೆ, ಆಡಳಿತದಲ್ಲಿ ವಿಕೇಂದ್ರೀಕರಣ, ಸ್ವಾಯತ್ತತೆ, ಸಾಮಾಜಿಕ ಮತ್ತು ರಾಜಕೀಯ ಪ್ರಜ್ಞೆಯ ಜಾಗೃತಿ, ಸಾಮಾಜಿಕ ನ್ಯಾಯ ಮುಂತಾದ ಪರಿಕಲ್ಪನೆಗಳು ಹೆಚ್ಚು ವ್ಯಾಪಕ ಮತ್ತು ಅರ್ಥಪೂರ್ಣವಾಗುತ್ತಿರುವುದು ಕಂಡುಬರುವುದು. ಇಂದು ಸ್ಥಳೀಯ ಸಂಸ್ಥೆಗಳು ಕೇಂದ್ರ ಮತ್ತು ಪ್ರಾಂತೀಯ ಸರ್ಕಾರಗಳಷ್ಟೇ ಮಹತ್ವದ ಪಾತ್ರವನ್ನು ವಹಿಸಬೇಕಾದ ಅವಶ್ಯಕತೆಯನ್ನು ಅರಿಯಬೇಕಾಗಿದೆ. ಸರ್ಕಾರ ಯಾವುದಾದರೆ ಏನು ? ಗ್ರಾಮೀಣ ಪ್ರದೇಶದ ಅಭಿವೃದ್ಧಿ ಕಾರ್ಯಕ್ರಮಗಳು ಮುಖ್ಯವಾಗಿ ಪ್ರವಹಿಸುವದು ಈ ಪಂಚಾಯತಿರಾಜ್ ಸಂಸ್ಥೆಗಳ ಮೂಲಕವೇ.

ಭಾರತದಲ್ಲಿ ಪಂಚಾಯತಿರಾಜ್ ವ್ಯವಸ್ಥೆ ಸುಮಾರು ನಾಲ್ಕು ಸಾವಿರ ವರ್ಷಗಳಿಂದ ತನ್ನದೇ ಆದ ರೀತಿಯಲ್ಲಿ
ಕಾಲಕಾಲಕ್ಕೆ ಉಂಟಾದ ರಾಜಕೀಯ, ಸಾಮಾಜಿ
ಬದಲಾವಣೆಗಳಿಗೆ ಸ್ಪಂದಿಸುತ್ತ ನಡೆದುಕೊಂಡು ಬಂದಿರ
ವುದು. ಕರ್ನಾಟಕವು ಪ್ರಾಚೀನ ಕಾಲದಿಂದಲೂ ಉತ್ತಮ
ವಾದ, ಇಂದಿಗೂ ಮಾದರಿಯಾಗಬಲ್ಲ, ಪಾರಂಪರಿ
ಗ್ರಾಮೀಣ ಆಡಳಿತ ವ್ಯವಸ್ಥೆಯನ್ನು ರೂಢಿಸಿಕೊಂಡಿದ್ದ
ಬಗ್ಗೆ ಐತಿಹಾಸಿಕ ದಾಖಲೆಗಳು ಉಂಟು, ಪ್ರಾಚೀನ ಮತ
ಮಧ್ಯಕಾಲದಲ್ಲಿನ ಕೇಂದ್ರಿಯ ಆಡಳಿತ ವ್ಯವಸ್ಥೆಯಲ್ಲಿಯು
ಸ್ಥಳೀಯ ಆಡಳಿತ ಸಂಸ್ಥೆಗಳು ಬಹು ಪ್ರಾಮುಖ್ಯತೆಯನ
ಹೊಂದಿದ್ದವು. ಇವು ಕೇಂದ್ರಿಯ ಮತ್ತು ಪ್ರಾಂತೀಯ ಆಡಳಿ
ಮಧ್ಯದ ಕೊಂಡಿಗಳಾಗಿದ್ದವು, ಪರಸ್ಪರ ಹೊಂದಾಣಿಕೆಯ
ಇರುತ್ತಿತ್ತು. ಈ ಸಂಸ್ಥೆಗಳು ಕೇಂದ್ರ ಅಥವಾ ರಾ
ಸರ್ಕಾರಗಳಿಂದ ಒತ್ತಾಯಪೂರ್ವಕ ಹೇರಲ್ಪಟ್ಟ ಸಂ
ಗಳಾಗಿರಲಿಲ್ಲ. ಗ್ರಾಮ ಸಮುದಾಯದಿಂದ ಮೂಡಿಬಂ
ಗೌರವಯುತ, ಸರ್ವಮಾನ್ಯ ಸಂಸ್ಥೆಗಳಾಗಿದ್ದವು. ಸ್ವಾತಂತ
ನಂತರದ ದಶಕಗಳಲ್ಲಿ ಬದಲಾಗುತ್ತಿರುವ ಆರ್ಥಿಕ ಸಾಮಾಜ
ಮತ್ತು ರಾಜಕೀಯ ವ್ಯವಸ್ಥೆಯಲ್ಲಿ 'ಗ್ರಾಮಸ್ವರಾಜ್'
'ಗ್ರಾಮ ಸುರಾಜ್', 'ರಾಮರಾಜ್ಯ' ಮುಂತಾದ ಹಲವಾ
ಕೇವಲ ಬಾಯಿಮಾತಿನ ವಿಶೇಷಣಗಳನ್ನು ಉಪಯೋಗಿಸು
ಪಂಚಾಯತಿರಾಜ್ ಪರಿಕಲ್ಪನೆಯನ್ನು ಕೇವಲ ಹೊ
ನೋಟಕ್ಕೆ ವೈಭವೀಕರಿಸಲಾಗುತ್ತಿದೆ. ಆದರೆ ನಿಜವಾ
ಅರ್ಥದಲ್ಲಿ ಪಂಚಾಯತಿಗಳು ತಾವು ನಿರ್ವಹಿಸಬೇಕಾ
ಕೆಲಸ ಕಾರ್ಯಗಳನ್ನು ಸಮರ್ಪಕವಾಗಿ ನಿರ್ವಹಿಸಿ ಜನಪರ
ಸಮಷ್ಟಿಯ ಸಮಗ್ರ ಅಭಿವೃದ್ಧಿಗೆ ಸಹಾಯಕವಾಗಿದೆಯೆ
ಎಂಬುದು ಯಕ್ಷ ಪ್ರಶ್ನೆ. ಇಂದಿನ ಪಂಚಾಯತಿರಾ

* ಸಂಪಾದಕರು,ಕರ್ನಾಟಕ ಗ್ಯಾಸೆಟಿಯರ್, ಕಾವೇರಿ ಭವನ, ಬೆಂಗಳೂರು-೫೬೦ ೦೦೯

ಸಂಸ್ಥೆಗಳಿಗೆ ಎಲ್ಲಾ ಹಂತಗಳಲ್ಲಿ ನಿಜವಾದ ಜನ ತಾಂತ್ರಿಕ ಅಧಿಕಾರ ದೊರೆತಿಲ್ಲ. ಅವು ಇನ್ನೂ ಆಳುವ ಸರ್ಕಾರಗಳ ಮುತುವರ್ಜಿಯಲ್ಲಿ, ಹಣಕಾಸಿನ ಮುಗ್ಗಟ್ಟಿನಲ್ಲಿ ಕಾರ್ಯ ನಿರ್ವಹಿಸಬೇಕಾಗಿದೆ. ಪಕ್ಷ ರಾಜಕೀಯದ ಪ್ರಾಬಲ್ಯದಲ್ಲಿ ಅಲ್ಪ ಮತ ಬಹುಮತಗಳ ಹೊಂದಾಣಿಯಲ್ಲಿ ಅವು ನಿಸ್ತೇಜವಾಗಿವೆ, ಎಂಬುದು ಇಂದಿನ ವ್ಯವಸ್ಥೆಯಲ್ಲಿ ಕಂಡುಬರುವ ಮತ್ತು ಕೇಳಿ ಬರುವ ಅನುಭವ. ಪಂಚಾಯಿತಿಗಳು ಗ್ರಾಮೀಣ ಜೀವನದ ಜನಸಾಮಾನ್ಯರ, ದುರ್ಬಲರ, ಹಿಂದುಳಿದವರ, ಅಸಂಘಟಿತರ ಬಾಳಿನ ನಾರಿದೀಪವಾಗಬೇಕು. ಅವರು ಬದುಕಿನಲ್ಲಿ 'ಪಂಚೇತಿ' (ತೊಡಕು, ಅಡ್ಡಿ, ಆತಂಕ) ಆಗಬಾರದು.

ರಾಜ್ಯ ಪುನರ್ ಘಟನೆಯ ನಂತರ ಕಳೆದ ಸುಮಾರು ೪೦ ವರ್ಷಗಳಲ್ಲಿ ಕರ್ನಾಟಕವು ಮೂರು ಪಂಚಾಯತಿರಾಜ್ ವಿಧೇಯಕಗಳನ್ನು ಕಂಡು ಅನಿಭವಿಸಿದೆ. ಕರ್ನಾಟಕ ರಾಜ್ಯ ನಿರ್ಮಾಣವಾದ ಹೊಸದರಲ್ಲಿ ಅಂದರೆ ೧೯೬೦ರಲ್ಲಿ ಮೂರು ಹಂತದ ಪಂಚಾಯತಿರಾಜ್ ಸಂಸ್ಥೆಗಳನ್ನು ಅಂದರೆ ಗ್ರಾಮ ಪಂಚಾಯತಿ ತಾಲ್ಲೂಕು ಅಭಿವೃದ್ಧಿ ಮಂಡಳಿ, ಜಿಲ್ಲಾ ಅಭಿವೃದ್ಧಿ ಸಮಿತಿಗಳನ್ನು ರಾಜ್ಯದಲ್ಲೆಲ್ಲಾ ೧೯೫೯ರ ಲೋಕಲ್ ಬೋರ್ಡ್ ಮತ್ತು ಗ್ರಾಮ ಪಂಚಾಯತಿ ಕಾನೂನಿನ ಅನ್ವಯ ರಚಿಸಲಾಯಿತು. ಈ ಪ್ರಥಮ ಕಾನೂನು ವಿಲೀನಗೊಂಡ ಕರ್ನಾಟಕದ ವಿವಿಧ (ಐದೂ ) ಆಡಳಿತ ಪ್ರದೇಶಗಳಲ್ಲಿ ಜಾರಿಯಲ್ಲಿದ್ದ ಕಾನೂನುಗಳ ಬದಲಿಗೆ ಜಾರಿಯಲ್ಲಿ ತರಲಾಯಿತು. ಈ ಕಾನೂನಿನ ಅನ್ವಯ ಕೇವಲ ಗ್ರಾಮಪಂಚಾಯತಿಗಳು ಮತ್ತು ತಾಲ್ಲೂಕು ಅಭಿವೃದ್ಧಿ ಮಂಡಳಿಗಳು ಮಾತ್ರ ಚುನಾಯಿತ ಸಂಸ್ಥೆಗಳಾಗಿದ್ದವು. ಜಿಲ್ಲಾಭಿವೃದ್ಧಿ ಸಮಿತಿಗಳು ಜಿಲ್ಲಾಧಿಕಾರಿಗಳ ಅಧ್ಯಕ್ಷತೆಯಲ್ಲಿ ಕಾರ್ಯ ನಿರ್ವಹಿಸುತ್ತಿದ್ದ ಸಲಹಾ ಸಮಿತಿಗಳಾಗಿದ್ದವು. ಈ ಕಾನೂನಿನ ಅನ್ವಯ ನಮ್ಮ ರಾಜ್ಯದಲ್ಲಿ ೧೯೭೭ರ ಮಾರ್ಚ್ ಅಂತ್ಯದ ವೇಳೆಗೆ ೨೬, ೮೨೬ ಗ್ರಾಮಗಳಿದ್ದವು. ಆ ಪೈಕಿ ೧೯೨ ಪಟ್ಟಣ ಪಂಚಾಯತಿಗಳೂ ಸೇರಿದಂತೆ ೮,೨೨೪ ಗ್ರಾಮ ಪಂಚಾಯತಿಗಳು ೧೭೫ ತಾಲ್ಲೂಕು ಅಭಿವೃದ್ಧಿ ಮಂಡಳಿಗಳು ೧೯ ಜಿಲ್ಲಾಭಿವೃದ್ಧಿ ಸಮಿತಿಗಳು ಕಾರ್ಯ ನಿರ್ವಹಿಸುತ್ತಿದ್ದವು. ಹೊಸ ರಾಜ್ಯದ ಪ್ರಾರಂಭದ ಕಾನೂನಿನಂತೆ ೧೫೦೦ಕ್ಕಿಂತ ಕಡಿಮೆ ಇಲ್ಲದ ಮತ್ತು ೧೦,೦೦೦ಕ್ಕೆ ಮೀರದ ಜನಸಂಖ್ಯೆಯ ಪ್ರತಿ ಒಂದು ಕಂದಾಯ ಗ್ರಾಮ ಅಥವಾ ಹಲವಾರು ಕಂದಾಯ ಗ್ರಾಮ ಸೇರಿ ಒಂದು ಸ್ವತಂತ್ರ ಅಥವಾ 'ಗ್ರೂಪ್' ಗ್ರಾಮ ಪಂಚಾಯಿತಿಯನ್ನು ರಚಿಸಲಾಯಿತು. ಈ ಕಾನೂನಿನ ಅನ್ವಯ ೫೦೦೦ಕ್ಕಿಂತ ಕಡಿಮೆ ಜನಸಂಖ್ಯೆ ಇಲ್ಲದ ಮತ್ತು ವಾರ್ಷಿಕ ಸರಾಸರಿ ಸಾವಿರ ರೂ.ಗೆ ಕಡಿಮೆ ಆದಾಯ ಇಲ್ಲದ ದೊಡ್ಡ ದೊಡ್ಡ ಗ್ರಾಮಗಳಿಗೆ ''ಪಂಚಾಯತಿ''ಯ ವ್ಯವಸ್ಥೆಯನ್ನು ಮಾಡಿಕೊಡಲಾಗಿತ್ತು. ಪ್ರಾರಂಭದಲ್ಲಿ ನಾಲ್ಕು ವರ್ಷ ಇದ್ದ ಚುನಾಯಿತ ಸದಸ್ಯರ ಅಧಿಕಾರ ಅವಧಿಯನ್ನು ಐದು ವರ್ಷಕ್ಕೆ ಹೆಚ್ಚಿಸಲಾಯಿತು. ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಡಗದವರಿಗೆ ಅವರ ಜನಸಂಖ್ಯೆಯ ಅನುಸಾರ ಮೀಸಲಾತಿಯನ್ನು ಒದಗಿಸಲಾಗಿತ್ತು. ಪ್ರತೀ ಪಂಚಾಯತಿಯಲ್ಲಿ ಕನಿಷ್ಟ ಇಬ್ಬರು ಮಹಿಳೆಯರಿಗೆ ಮೀಸಲಾತಿಯನ್ನು ಕಲ್ಪಿಸಲಾಗಿತ್ತು. ಈ ವ್ಯವಸ್ಥೆಯಲ್ಲಿ ಪ್ರತಿ ಒಂದು ತಾಲ್ಲೂಕಿಗೆ ಒಂದರಂತೆ ರಚನೆಯಾಗಿದ್ದ ತಾಲ್ಲೂಕು ಅಭಿವೃದ್ಧಿ ಮಂಡಳಿಗಳು ಅಭಿವೃದ್ಧಿ ಕಾರ್ಯಕ್ರಮಗಳ ಪ್ರಮುಖ ವಾಹಿನಿಯಾಗಿದ್ದವು. ಪ್ರತೀ ಒಂದು ಸಮಿತಿಯು ೧೫ ರಿಂದ ೧೯ ಜನ ನೇರ ಚುನಾಯಿತ ಪ್ರತಿನಿಧಿಗಳನ್ನು ಒಳಗೊಂಡಿರುತ್ತಿತ್ತು. ಈ ವ್ಯವಸ್ಥೆಯು ಕರ್ನಾಟಕದಲ್ಲೂ ಸ್ವಾತಂತ್ರ್ಯಾನಂತರ ಆಡಳಿತ ವಿಕೇಂದ್ರೀಕರಣದ ಪ್ರಥಮ ಪ್ರಯೋಗವಾಗಿತ್ತು ಎಂದು ಹೇಳಬಹುದು.

ಪ್ರತೀ ಒಂದು ಗ್ರಾಮ ಪಂಚಾಯತಿ ಮತ್ತು ತಾಲ್ಲೂಕು ಅಭಿವೃದ್ಧಿ ಮಂಡಳಿಗಳಿಗೆ ಕಾನೂನಿನ ಅನ್ವಯ ಆರ್ಥಿಕ ಮೂಲಗಳನ್ನು ಒದಗಿಸಲಾಗಿದ್ದರೂ ಇವುಗಳು ಬಹುಮಟ್ಟಿಗೆ ಸರ್ಕಾರದ ಅನುದಾನವನ್ನು ಅವಲಂಬಿಸಿದ್ದವು. ಆಯಾ ಪ್ರದೇಶದ ಭೂ ಕಂದಾಯದ ಹಣವನ್ನು ತಾಲ್ಲೂಕು ಅಭಿವೃದ್ಧಿ ಮಂಡಳಿ ಮತ್ತು ಪಂಚಾಯತಿಗಳ ನಡುವೆ ಅನುಕ್ರಮವಾಗಿ ಶೇ. ೬೦:೪೦ ಪ್ರಮಾಣದಲ್ಲಿ ಹಂಚಲಾಗುತ್ತಿತ್ತು. ಭೂ ಕಂದಾಯ ವಸೂಲಾತಿಯ ಹಣವನ್ನು ಸಂಪೂರ್ಣವಾಗಿ ಪಂಚಾಯತಿ ರಾಜ್ ಸಂಸ್ಥೆಗಳಿಗೆ ವರ್ಗಾಯಿಸಿದ ರಾಜ್ಯಗಳಲ್ಲಿ ಅಂದು ಕರ್ನಾಟಕವು ಮೊದಲನೆಯದಾಗಿತ್ತು. ಬಹುಪಾಲು ತಾಲ್ಲೂಕು ಅಭಿವೃದ್ಧಿ ಮಂಡಳಿಗಳು ಸರ್ಕಾರದ ಅನುದಾನವನ್ನು ಅವಲಂಭಿಸಿರುತ್ತಿದ್ದವು. ಈ ಪ್ರಾರಂಭದ ವ್ಯವಸ್ಥೆಯು ಸುಮಾರು ೨೫ ವರ್ಷಗಳ ಸುದೀರ್ಘ ಕಾಲ (೧೯೬೦-೧೯೮೫) ಮುಂದುವರಿಯಿತು.

## ಜಿಲ್ಲಾ ಪರಿಷತ್ ಇತ್ಯಾದಿ

ಪ್ರಥಮ ಪಂಚಾಯತಿ ರಾಜ್ ಪರಿಕಲ್ಪನೆಗಿಂತ ತೀರ ಭಿನ್ನವಲ್ಲದಿದ್ದರೂ ಮೊದಲಿಗಿಂತಲೂ ಹೆಚ್ಚು ಸಕ್ರಿಯವಾದ,

ಜನತೆಯ ಸಹಭಾಗಿತ್ವವನ್ನು ಅಧಿಕಗೊಳಿಸಿ, ಅಧಿಕಾರ ವಿಕೇಂದ್ರೀಕರಣವನ್ನು ವಿಸ್ತರಿಸಿ, ಈ ಸ್ವಾಯತ್ತ ಸಂಸ್ಥೆಗಳ ಕಾರ್ಯವಿಧಾನವನ್ನು ಹೆಚ್ಚು ಅರ್ಥಪೂರ್ಣಗೊಳಿಸುವ ಸಲುವಾಗಿ ಜಿಲ್ಲಾ ಮತ್ತು ಮಂಡಳ ಮಟ್ಟದಲ್ಲಿ ಅಭಿವೃದ್ಧಿ ಕಾರ್ಯಗಳ ಸಂಪೂರ್ಣ ವಿಕೇಂದ್ರೀಕರಣಗೊಂಡ ಸ್ವಾಯತ್ತತೆಯನ್ನು ಹೊಂದಿದ ಜಿಲ್ಲಾ ಪರಿಷತ್, ಮಂಡಳ ಪಂಚಾಯತಿ ಮತ್ತು ತಾಲ್ಲೂಕು ಪಂಚಾಯತಿ ಸಮಿತಿಗಳನ್ನು ೧೯೫೯ರ ಕಾನೂನಿಗೆ ಬದಲಾಗಿ ಜಾರಿಯಲ್ಲಿ ತರಲಾಯಿತು. ಅಂದಿನ ಜನತಾ ಸರ್ಕಾರ ರೂಪಿಸಿದ್ದ ಈ ಯೋಜನೆಯು ೧೯೮೩ರಲ್ಲಿ ಕೇಂದ್ರದ ಅನುಮತಿಗಾಗಿ ಕಳಿಸಲ್ಪಟ್ಟರೂ ಅದು ಶಾಸನ ರೂಪತಾಳಿದ್ದು ೧೯೮೫ ಆಗಸ್ಟ್ ೧೪ ರಂದು. ಈ ಎರಡನೆಯ ಪಂಚಾಯತಿ ರಾಜ್ ಕಾನೂನಿನ ಅನ್ವಯ ಹೊಸ ಸಂಸ್ಥೆಗಳು ಕಾರ್ಯರೂಪದಲ್ಲಿ ಬಂದದ್ದು ೧೯೮೭ರ ಜನವರಿಯಲ್ಲಿ. ಈ ಒಂದು ಕೀರ್ತಿಗೆ ಕಾರಣ ೧೯೮೩-೮೮ರಲ್ಲಿ ಕರ್ನಾಟಕದಲ್ಲಿ ಅಧಿಕಾರಕ್ಕೆ ಬಂದ ಪ್ರಥಮ ಕಾಂಗ್ರೆಸ್ಸೇತರ ಸರ್ಕಾರ. ಅದರಲ್ಲಿಯೂ ವಿಶೇಷವಾಗಿ ಕರ್ನಾಟಕದಲ್ಲೇ 'ನೀರಸಾಹೇಬ' ಎಂದು ಚಿರಪರಿತರಾಗಿದ್ದ ದಿವಂಗತ ಅಬ್ದುಲ್ ನಜೀರ್‌ಸಾಹೇಬರು ಮತ್ತು ಅಂದಿನ ಮುಖ್ಯಮಂತ್ರಿ ರಾಮಕೃಷ್ಣ ಹೆಗಡೆಯವರ ಪಾತ್ರ ಬಹು ಪ್ರಮುಖವಾಗಿತ್ತು. ಈ ಕಾನೂನಿನ ಅನ್ವಯ ಮೊದಲು ಅಳವಡಿಸಿಕೊಳ್ಳಲಾಗಿದ್ದ ನ್ಯಾಯ ಪಂಚಾಯತಿಯ ರಚನೆಯನ್ನು ಕೊನೆಯವರೆಗೂ ಕೈಬಿಡಲಾಯಿತು. ನ್ಯಾಯ ಪಂಚಾಯತಿ ಕಾಯಿದೆಯನ್ನು ಅಳವಡಿಸಿಕೊಂಡ ರಾಜ್ಯಗಳಲ್ಲಿ ಉತ್ತರ ಪ್ರದೇಶ (೧೯೪೯) ಮೊದಲನೆಯದು. ಹಿಂದಿನ ಮುಂಬಯಿ ಕರ್ನಾಟಕದ ಜಿಲ್ಲೆಗಳಲ್ಲಿ ೧೯೫೬ರ ಪೂರ್ವದಲ್ಲಿ ನ್ಯಾಯ ಪಂಚಾಯತಿಗಳು ಸೀಮಿತ ವಲಯದಲ್ಲಿ ರೂಢಿಯಲ್ಲಿ ಇದ್ದವು. ಅದರಂತೆ ಹಿಂದಿನ ಮೈಸೂರು ಪ್ರಾಂತ್ಯದಲ್ಲಿ ಪಂಚಾಯತಿಯ ಪರಿಕಲ್ಪನೆ ಕೇವಲ ಗ್ರಾಮದ ಆಡಳಿತಕ್ಕೆ ಸೀಮಿತವಾಗದೇ ಗ್ರಾಮ ಸಮುದಾಯದ ಆಸ್ತಿಗಳಾಗಿದ್ದ, ಕೆರೆ, ಕಾಡು, ಮುಂತಾದವುಗಳ ಸಮರ್ಪಕ ನಿರ್ವಹಣೆಗೆ ಸಹಾಯಕವಾಗುವಂತೆ ಕೆರೆ (ಟ್ಯಾಂಕ್) ಮತ್ತು ಕಾಡಿನ (ಫಾರೆಸ್ಟ್) ಬಗ್ಗೆ ಪಂಚಾಯಿತಿ ಇದ್ದವೆಂಬುದು ಹಳೆಯ ದಾಖಲೆಗಳಿಂದ ತಿಳಿದುಬರುವದು. ಈ ಹೊಸ ವ್ಯವಸ್ಥೆಯು ಪ್ರಾರಂಭದಲ್ಲಿ ರಾಜಕೀಯ ವಲಯದಲ್ಲಿ ಒಂದು ಮಹಾನ್ ಕ್ರಾಂತಿಯನ್ನು ಉಂಟುಮಾಡಿತು ಎಂದು ಹೇಳಲಾಗುವುದು. ಮಂಡಳ ಪಂಚಾಯತಿಗಳ ರಚನೆಯಿಂದ ಮತ್ತು ಅಧಿಕಾರ ವಿಕೇಂದ್ರೀಕರಣದಿಂದ ಒಂದು ತಾಲೂಕಿನ ವ್ಯಾಪ್ತಿಯಲ್ಲಿ ಬಹುಕಾಲ ರಾಜಕೀಯವಾಗಿ ಪ್ರಭಾವಶಾಲಿಗಳಾಗಿದ್ದ ಅನೇಕ ವ್ಯಕ್ತಿಗಳಿಗೆ, ಶಾಸಕರಿಗೆ ಹೊಸ ವ್ಯವಸ್ಥೆ ಯಲ್ಲಿ ನೆಲೆಯೇ ಇಲ್ಲದಂತಹ ಪರಿಸ್ಥಿತಿ ಉಂಟಾಯಿತು. ಒಂದು ಅರ್ಥದಲ್ಲೂ ಅಧಿಕಾರ ವಿಕೇಂದ್ರೀರಕರಣದೊಂದಿಗೆ ರಾಜಕೀಯ ವಿಕೇಂದ್ರೀಕರಣವಾಯಿತು ಎಂದು ಹೇಳಬಹುದು. ಮಹಿಳೆಯರಿಗೆ ಶೇ. ೨೫ ರಷ್ಟು ಮೀಸಲಾತಿಯನ್ನು ಒದಗಿಸಲಾಯಿತು. ಯಾವ ಶಾಸನಬದ್ಧ ಅಧಿಕಾರವನ್ನು ಹೊಂದದ ತಾಲ್ಲೂಕು ಪಂಚಾಯತಿ ಸಮಿತಿಗಳು ಜಿಲ್ಲಾ ಪರಿಷತ್ತಿನ ಅಧೀನ ಸಂಸ್ಥೆಗಳಾಗಿ ಮುಂದುವರಿದವು. ಈ ವ್ಯವಸ್ಥೆ ತಂದ ಪ್ರಮುಖ ಬದಲಾವಣೆಗಳೆಂದರೆ (೧) ಗ್ರಾಮಮಟ್ಟದಲ್ಲಿ ಗ್ರಾಮದ ಸಕಲ ಮತದಾರರನ್ನು ಹೊಂದಿದ 'ಗ್ರಾಮಸಭೆ', (೨) ಹಲವಾರು ಗ್ರಾಮಗಳನ್ನು ಹೊಂದಿದ್ದ ೧೦ ರಿಂದ ೧೨ ಸಾವಿರ ಜನಸಮುಚ್ಚಯದಿಂದ ಕೂಡಿದ್ದ ಮಂಡಳ ಪಂಚಾಯತಿಗಳು, ಮತ್ತು (೩) ಜಿಲ್ಲೆಯ 'ಪ್ರತಿ ಸರ್ಕಾರದಂತೆ' ಕಾರ್‍ಯನಿರ್ವಹಿಸಲು ಸ್ವಾಯತ್ತತೆ ಮತ್ತು ವ್ಯಾಪಕ ಅಧಿಕಾರವನ್ನು ಹೊಂದಿದ್ದ ಜಿಲ್ಲಾ ಪರಿಷತ್ತುಗಳು. ಹಿಂದಿನ ತಾಲೂಕು ಅಭಿವೃದ್ಧಿ ಮಂಡಳಿಗಳಂತೆ ಮಂಡಳ ಪಂಚಾಯತಿಗಳು ತಮ್ಮ ಸೀಮಿತವಲಯದಲ್ಲಿ ಅಭಿವೃದ್ಧಿ ಕಾರ್ಯಕ್ರಮಗಳ ಅನುಷ್ಠಾನದಲ್ಲಿ ಸಕ್ರಿಯವಾಗಿ ಭಾಗವಹಿಸುವಂತಾಯಿತು. ಜಿಲ್ಲಾಮಟ್ಟದಲ್ಲಿ ಜಿಲ್ಲಾಪರಿಷತ್ತುಗಳು ಅತ್ಯಂತ ಪ್ರಭಾವಶಾಲಿಯಾದ ಸಂಸ್ಥೆಗಳಾಗಿ ಹೊರಹೊಮ್ಮಿದವು. ಜಿಲ್ಲಾ ಪರಿಷತ್ತಿನ ಅಧ್ಯಕ್ಷರು ಮತ್ತು ಉಪಾಧ್ಯಕ್ಷರುಗಳು ಅನುಕ್ರಮವಾಗಿ ರಾಜ್ಯಮಂತ್ರಿಯ ಮತ್ತು ಉಪಮಂತ್ರಿಗಳ ಸ್ಥಾನಮಾನವನ್ನು ಪಡೆಯುವಂತಾಯಿತು. ರಾಜ್ಯದ ೧೯ ಜಿಲ್ಲಾ ಪರಿಷತ್ತುಗಳಲ್ಲಿ ೧೩ ಜಿಲ್ಲಾ ಪರಿಷತ್ತುಗಳು, ಮಂಡಲಗಳಲ್ಲಿ ಅರ್ಧದಷ್ಟು ಜನತಾದಳದ ಅಧಿಕಾರದಲ್ಲಿ ಇದ್ದವು. ಈ ಒಂದು ರಾಜಕೀಯ ಹಿನ್ನೆಲೆ ಜನತಾ ಸರ್ಕಾರವು ರಾಜ್ಯದಲ್ಲಿ ಆಳವಾಗಿ ಬೇರೂರಲು ಅಂದಿನ ಪರಿಸ್ಥಿತಿಯಲ್ಲಿ ಸಹಾಯಕವಾಯಿತು. ಜಿಲ್ಲಾ ಪರಿಷತ್ತಿನ ಮುಖ್ಯ ಕಾರ್ಯನಿರ್ವಾಹಕರನ್ನು 'ಮುಖ್ಯ ಕಾರ್ಯದರ್ಶಿ' ಎಂದು ಕರೆಯಲಾಗುತ್ತಿತ್ತು.

ಈ ನಿಟ್ಟಿನಲ್ಲಿ ಅಂದಿನ ಸರ್ಕಾರದ ಇನ್ನೊಂದು ಮಹತ್ವಪೂರ್ಣ ಕೊಡುಗೆ ಎಂದರೆ ೧೯೮೭ರಲ್ಲಿ ದೇಶದಲ್ಲಿಯೇ ಪ್ರಥಮ ಬಾರಿಗೆ ಸಾರ್ವತ್ರಿಕ ಪ್ರೌಢ ಮತದಾನದ ವಯಸ್ಸನ್ನು ಪಂಚಾಯತಿರಾಜ್ಯ ಸಂಸ್ಥೆಗಳು ಮತ್ತು ನಗರಸಭೆಗಳ ಚುನಾವಣೆಗೆ ಸೀಮಿತವಾದಂತೆ ೨೧ರಿಂದ

೮ಕ್ಕೆ ಇಳಿಸಲಾಯಿತು. ಭಾರತದಲ್ಲಿ ಸಾರ್ವತ್ರಿಕವಾಗಿ ಮಾರ್ಚ್ ೧೯೮೯ ರಿಂದ ಪ್ರೌಢ ಮತದಾನದ ವಯಸ್ಸನ್ನು ೧ ರಿಂದ ೧೮ಕ್ಕೆ ಇಳಿಸಲಾಯಿತು. ಯುವಶಕ್ತಿಯನ್ನು ರಾಜಕೀಯ ವಲಯದಲ್ಲಿ ಆಕರ್ಷಿಸಲು ಮತ್ತು ಸಕ್ರಿಯವಾಗಿ ವಿಧಾಯಕ ಕಾರ್ಯಕ್ರಮಗಳಲ್ಲಿ ತೊಡಗಿಸಲು ಇದು ಒಂದು ಪ್ರಮುಖ ಹೆಜ್ಜೆಯಾಗಿತ್ತು. ಇದೂ ಅಲ್ಲದೇ ರಾಜ್ಯದಲ್ಲಿ ಪಕ್ಷಾಂತರ ನಿಷೇದ ಕಾನೂನನ್ನು ೧೯೮೭ರಲ್ಲಿ ಪಂಚಾಯತಿ ರಾಜ್ ಸಂಸ್ಥೆಗಳಿಗೂ ಅನ್ವಯಿಸಿದ್ದರಿಂದ ಈ ಸಂಸ್ಥೆಗಳು ರಾಜಕೀಯ ಸ್ಥಿರತೆಯನ್ನು ಹೊಂದಲು ಸಹಾಯಕವಾಯಿತು.

ಅಭಿವೃದ್ಧಿ ಯೋಜನೆಗಳಲ್ಲೂ ಶೇ. ೮೦ರಷ್ಟು ಯೋಜನೆಗಳು ಜಿಲ್ಲಾ ಪರಿಷತ್ತಿಗೆ ವರ್ಗಾವಣೆಯಾದವು. ವ್ಯವಸಾಯ, ರಕ್ಷಣೆ, ಆರೋಗ್ಯ ಮುಂತಾದ ಸುಮಾರು ೪೪ ಕಾರ್ಯಕ್ರಮಗಳು ನೇರವಾಗಿ ಜಿಲ್ಲಾ ಪರಿಷತ್ತಿನ ಸುಪರ್ದಿಗೆ ಮತ್ತು ೨೭ ಅಭಿವೃದ್ಧಿ ಕಾರ್ಯಕ್ರಮಗಳು ಸ್ವತಂತ್ರವಾಗಿ ಮಂಡಳ ಪಂಚಾಯತಿಗೆ ವರ್ಗಾವಣೆಗೊಂಡವು. ಕೇಂದ್ರ ಸರ್ಕಾರದ ಬಹು ಜನಪ್ರಿಯ ಯೋಜನೆಯಾದ 'ಜವಾಹರ ರೋಜಗಾರ ಯೋಜನೆ'ಯು ಮಂಡಳದ ಪ್ರಮುಖ ಅಭಿವೃದ್ಧಿ ಚಟುವಟಿಕೆಯಾಗಿತ್ತು. ಪ್ರತೀ ಮಂಡಳ ಪಂಚಾಯತಿಯು ತನ್ನ ವ್ಯಾಪ್ತಿಯಲ್ಲಿ ಬರುವ ಅಭಿವೃದ್ಧಿ ಕಾರ್ಯಕ್ರಮಗಳಿಗೆ ಸರಾಸರಿ ಐದು ಲಕ್ಷ ರೂ. ವೆಚ್ಚ ಮಾಡಲು ಅವಕಾಶ ಮಾಡಲಾಗಿತ್ತು. ಸರ್ಕಾರದ ನಿಯಂತ್ರಣದಲ್ಲಿ ಕೇವಲ ಮಧ್ಯಮ ಮತ್ತು ಬೃಹತ್ ನೀರಾವರಿ ಯೋಜನೆಗಳು, ಕೇಂದ್ರ ಸರ್ಕಾರದ ಯೋಜನೆಗಳು, ಒಂದಕ್ಕಿಂತ ಹೆಚ್ಚು ಜಿಲ್ಲೆಗಳನ್ನು ವ್ಯಾಪಿಸಿದ ಯೋಜನೆಗಳು ಮಾತ್ರ ಉಳಿದುಕೊಂಡವು. ಒಂದು ವಿಧದಲ್ಲಿ ಬದಲಾವಣೆ ಆಡಳಿತಾತ್ಮಕ ವಿಕೇಂದ್ರೀಕರಣವನ್ನು ಸಾಧಿಸಿತ್ತೆಂದು ಹೇಳಬಹುದು. ವ್ಯಾಪಕ ಅಧಿಕಾರ ಮತ್ತು ಹಣಕಾಸಿನ ವಿಕೇಂದ್ರೀಕರಣದೊಂದಿಗೆ ಭ್ರಷ್ಟಾಚಾರವೂ ವಿಕೇಂದ್ರೀಕರಣಗೊಂಡಿತು ಎಂಬ ಅಪವಾದವೂ ಈ ಸಂಸ್ಥೆಗಳನ್ನು ಆವರಿಸದೇ ಬಿಡಲಿಲ್ಲ. ೧೯೯೫-೯೬ನೇ ಸಾಲಿನಲ್ಲಿ ಜಿಲ್ಲಾವಲಯಕ್ಕೆ ಅಂದರೆ ಪ.ರಾ. ಸಂಸ್ಥೆಗಳಿಗೆ ರಾಜ್ಯ ಯೋಜನೆಯಲ್ಲೂ ಒದಗಿಸಲಾಗಿದ್ದ ಹಣ ರೂ. ೬೨೦ ಕೋಟಿ. ಕೇಂದ್ರವಲಯದ ಯೋಜನೆಗಳನ್ನು ಸೇರಿಸಿದರೆ ಒಟ್ಟು ಜಿಲ್ಲಾ ಯೋಜನೆಯ ಗಾತ್ರ ರೂ. ೧೧೦೦ ಕೋಟಿ. ಈ ಅಂಕಿ-ಅಂಶಗಳು ಪಂಚಾಯತಿ ರಾಜ್ ಸಂಸ್ಥೆಗಳು ನಿರ್ವಹಿಸಬೇಕಾದ ಅಭಿವೃದ್ಧಿ ಕಾರ್ಯಗಳ ಪ್ರಮಾಣವನ್ನು ಸೂಚಿಸುವವು.

## ವೈಫಲ್ಯದ ವಿವಿಧ ಮುಖಗಳು

ಈ ಯೋಜನೆಯನ್ನು ಅತುರದಲ್ಲಿ ಜಾರಿಗೊಳಿಸಿದ್ದರಿಂದ ಹಣಕಾಸು ವ್ಯವಸ್ಥೆಯ ಬಗ್ಗೆ ಪ್ರಾರಂಭದಲ್ಲಿ ಯಾವ ರೂಪರೇಖೆಗಳನ್ನು ರಚಿಸಿರಲಿಲ್ಲ. ಪ್ರಾರಂಭದ ಎರಡು ಮೂರು ವರ್ಷಗಳಲ್ಲಿ ಹಣಕಾಸಿನ ಅಸಮರ್ಪಕ ವ್ಯವಸ್ಥೆಯಿಂದ, ಹೊಸ ಆಡಳಿತ ವ್ಯವಸ್ಥೆಯಲ್ಲಿ ಸಾಕಷ್ಟು ಪರಿಣತಿ ಬಾರದೇ ಇದ್ದುದರಿಂದ ಚುನಾಯಿತ ಪ್ರತಿನಿಧಿಗಳು ಹೊಸ ಆಡಳಿತ ವ್ಯವಸ್ಥೆಯನ್ನು ಅರಿತುಕೊಂಡು ನಡೆಯುವಲ್ಲಿ ಆದ ವಿಳಂಬ ಪ್ರವೃತ್ತಿಯಿಂದ ಈ ಜಿಲ್ಲಾ ಪರಿಷತ್ತುಗಳು, ಮಂಡಳಗಳು, ನಿರೀಕ್ಷಿಸಿದ ಮಟ್ಟದಲ್ಲಿ ಕಾರ್ಯ ನಿರ್ವಹಿಸಲು ಸಾಧ್ಯವಾಗಲಿಲ್ಲ ಎಂದು ಹಲವಾರು ಸಮೀಕ್ಷೆಗಳಿಂದ ತಿಳಿದುಬರುವುದು. ಅನೇಕ ಸಂದರ್ಭಗಳಲ್ಲಿ ಹಿಂದುಳಿದ ವರ್ಗದ ಹೆಸರಿನಲ್ಲಿ ಮಂಡಳ ಪಂಚಾಯತಿಗೆ ಜಿಲ್ಲಾ ಪರಿಷತ್ತಿನಿಂದ ನಾಮಕರಣ ಮಾಡುವ ಸಂದರ್ಭಗಳನ್ನು ರಾಜಕೀಯ ಉದ್ದೇಶದಿಂದ ದುರುಪಯೋಗಪಡಿಸಿಕೊಂಡು ಮಂಡಳಗಳಲ್ಲಿ ಅಸ್ಥಿರತೆ ಉಂಟಾಯಿತು. ಆದರೆ ಗ್ರಾಮಮಟ್ಟದಲ್ಲಿ ಈ ಸಂಸ್ಥೆಗಳು ತಮ್ಮದೇ ಆದ ಪ್ರಭಾವ ವಲಯವನ್ನು ನಿರ್ಮಿಸಿಕೊಂಡಿದ್ದವು. ೧೯೮೭ ಜನವರಿಯಲ್ಲಿ ಜಿಲ್ಲಾ ಪರಿಷತ್ತು ಮತ್ತು ೨,೫೫೬ ಮಂಡಳ ಪಂಚಾಯತಿಗಳಿಗೆ ಪ್ರಥಮ ಚುನಾವಣೆ ನಡೆದು ೮೮೭ ಜಿಲ್ಲಾ ಪರಿಷತ್ತು ಸದಸ್ಯರು ೫೪,೬೩೮ ಮಂಡಲ ಸದಸ್ಯರು ಚುನಾಯಿತರಾಗಿದ್ದರು. ಜಿ. ಪ. ಗಳು ಒಂದು ಅವಧಿ ಮುಗಿಸುವ ಒಳಗಾಗಿ ಸರ್ಕಾರ ಬದಲಾಗಿತ್ತು. ೧೯೯೨ ಜನವರಿಯಲ್ಲಿ ಅಂದಿನ ಕಾಂಗ್ರೆಸ್ ಸರ್ಕಾರವು ಈ ಸಂಸ್ಥೆಗಳು ೫ ವರ್ಷಗಳ ಅಧಿಕಾರಾವಧಿ ಪೂರೈಸಿದ ನಂತರ ಪುನಃ ಚುನಾವಣೆಗಳನ್ನು ನಡೆಸದೇ ಇವುಗಳಿಗೆ ಆಡಳಿತಾಧಿಕಾರಿಗಳನ್ನು ನೇಮಿಸಿತು. ಈ ಕ್ರಮವನ್ನು ವಿರೋಧ ಪಕ್ಷವಾಗಿದ್ದ ಜನತಾ ಸರ್ಕಾರವು ಬಲವಾಗಿ ವಿರೋಧಿಸಿತು. ಈ ಸಂದರ್ಭದಲ್ಲಿ ಪ್ರಕಟವಾದ ಕೆಲವು ಗಣ್ಯರ ಅಭಿಪ್ರಾಯಗಳು ಇಂತಿವೆ: ಇದೊಂದು ಪ್ರಾಯೋಗಿಕ ಪ್ರಯತ್ನ; ಹೆಚ್ಚಿಗೆ ಏನನ್ನೂ ಸಾಧಿಸದಿದ್ದರೂ ಹಿಂದಿನ ಅಧಿಕಾರಿ ವ್ಯವಸ್ಥೆಗಿಂತಲೂ ಮೇಲು ಎಂಬುದು ಸಾರ್ವತ್ರಿಕ ಅಭಿಪ್ರಾಯವಾಗಿತ್ತು (-ಪ್ರಜಾವಾಣಿಯ ವರದಿ). ರಾಜಕಾರಣಿಗಳ ಬೆಕ್ಕು - ಇಲಿ ಆಟದಿಂದಾಗಿ ಪಂಚಾಯತಿರಾಜ್ ವ್ಯವಸ್ಥೆ ಬೇರೂರಲು ಸಾಧ್ಯವಾಗಿಲ್ಲ (-ಚಿದಂಬರಂ; ಕೇಂದ್ರ ಮಂತ್ರಿಗಳು). ಜಿಲ್ಲಾ ಪರಿಷತ್ತು ಮತ್ತು ಮಂಡಳಗಳಿಗೆ ಸಂವಿಧಾನಾತ್ಮಕ ಅಧಿಕಾರಗಳನ್ನು ನೀಡುವ ಅವಶ್ಯಕತೆ ಇದೆ.

ಮಂಡಲ ಪ್ರಧಾನರ ಸ್ಥಾನಗಳಿಗೆ ಪರಿಶಿಷ್ಟ ಜಾತಿ, ಪಂಗಡ ಮತ್ತು ಹಿಂದುಳಿದವರನ್ನು ನಾಮಕರಣ ಮಾಡುವ ಅವಕಾಶ ಇರಬೇಕು (ದಿ. ಬಸವಲಿಂಗಪ್ಪ, ಪ. ರಾ. ಮಂತ್ರಿಗಳು). ಮಂಡಲಗಳಿಗೆ ಪಕ್ಷಾತೀತ ಚುನಾವಣೆ, ಜಿ. ಪ. ಮತ್ತು ಮಂಡಗಲಗಳ ಅಧ್ಯಕ್ಷರು ನೇರವಾಗಿ ಜನರಿಂದ ಚುನಾಯಿತ ರಾಗಬೇಕು, ಸರ್ಕಾರಿ ನಾಮಕರಣ ಎಲ್ಲಾ ಹಂತದಲ್ಲಿ ತೆಗೆದು ಹಾಕಬೇಕು. ಒಟ್ಟು ಮೀಸಲಾತಿ ಶೇ. ೫೦ ರಲ್ಲಿ ಮಹಿಳೆಯರಿಗೆ ಶೇ. ೩೩ % ಇರಬೇಕು. (ದಿ. ಕೆ.ಎಚ್. ಪಾಟೀಲ, ೧೯೯೧ರಲ್ಲಿ ಪಂಚಾಯತಿರಾಜ್ ಮಂತ್ರಿಗಳು).

ಸ್ಥಳೀಯ ಅಗತ್ಯಗಳಿಗೆ ಒತ್ತು ಕೊಟ್ಟು ಯೋಜನೆಯನ್ನು ರೂಪಿಸುವ ಜವಾಬ್ದಾರಿಯನ್ನು ಪಂಚಾಯತ್‌ರಾಜ್ ಸಂಸ್ಥೆಗಳಿಗೆ ವಹಿಸಿದರೆ ಅಭಿವೃದ್ಧಿಗಾಗಿ ಖರ್ಚು ಮಾಡುವ ಅರ್ಥ ಹಣ ಮತ್ತು ಶ್ರಮ ಉಳಿತಾಯವಾಗುವುದು (ಡಾ॥ ಎಲ್.ಸಿ. ಜೈನ ಯೋಜನಾ ಆಯೋಗದ ಮಾಜಿ ಸದಸ್ಯ). ಅಂದಿನ ಜಿಲ್ಲಾ ಪರಿಷತ್ತು ಮತ್ತು ಮಂಡಳ ಪಂಚಾಯತ್ ಕಾರ್ಯನಿರ್ವಹಣೆಯನ್ನು ಕುರಿತಂತೆ ಸರ್ಕಾರದಿಂದ ನೇಮಕವಾದ ಡಾ॥ ಕೃಷ್ಣಸ್ವಾಮಿಯವರ ಸಮಿತಿಯು (೧೯೮೮-೮೯) ಈ ರೀತಿ ಅಭಿಪ್ರಾಯ ಸೂಚಿಸುವುದು: "ಶಿಕ್ಷಣ, ಆರೋಗ್ಯ ಸೌಲಭ್ಯಗಳು, ವಿವಿಧ ಯೋಜನೆಗಳ ಅನ್ವಯ ನಿವೇಶನ ಮತ್ತು ಮನೆಗಳ ಹಂಚಿಕೆ, ತೋಟಗಾರಿಕೆ ಮತ್ತು ಅರಣ್ಯ ಚಟುವಟಿಕೆ ಸಂಬಂಧಿಸಿದ ಕಾರ್ಯಕ್ರಮಗಳು ಪರಿಣಾಮಕಾರಿಯಾಗಿವೆ. ಅಭಿವೃದ್ಧಿ ಕಾರ್ಯಕ್ರಮಗಳ ಅನುಷ್ಠಾನ ತೀವ್ರವಾಗಿ ನಡೆಯುತ್ತಿದೆ". ಸಮಿತಿಯ ಇನ್ನೊಂದು ಪ್ರಮುಖ ಶಿಫಾರಸ್ಸು ಈ ರೀತಿ ಇರುವುದು: "ರಾಜ್ಯದ ಮಂತ್ರಿಗಳು ಮತ್ತು ಶಾಸಕರು ಜಿಲ್ಲಾ ಪರಿಷತ್ತುಗಳ ಅನುದಿನದ ವ್ಯವಹಾರದಲ್ಲಿ ಕೈಹಾಕಬಾರದು. ಬದಲಾಗಿ ಇವುಗಳು ಪರಿಣಾಮಕಾರಿಯಾಗಿ ಕಾರ್ಯನಿರ್ವಹಿಸಲು ಅಗತ್ಯವಾದ ವಾತಾವರಣವನ್ನು ನಿರ್ಮಿಸಿ ನೆರವಾಗಬೇಕು. ಪಂಚಾಯತಿ ಕಾರ್ಯ ಚಟುವಟಿಕೆಗಳ ನಿರ್ವಹಣೆಯನ್ನು ರಾಜ್ಯಮಟ್ಟದಲ್ಲಿ ಅಪರ ಮುಖ್ಯ ಕಾರ್ಯದರ್ಶಿಯ ದರ್ಜೆಯ ಅಧಿಕಾರಿಯು ಮುಖ್ಯಸ್ಥನಾಗಿವುಳ್ಳ ಪ್ರತ್ಯೇಕ ಇಲಾಖೆಗೆ ವಹಿಸಬೇಕು". ಈ ಶಿಫಾರಸ್ಸುಗಳು ಇಂದಿಗೂ ಅನ್ವಯ ವಾಗುವವು. ಎರಡನೆಯ ಪಂಚಾಯತಿ ರಾಜ್ಯ ಕಾನೂನು (೧೯೮೩) ವ್ಯಾಪಕವಾಗಿ ಬೇರು ಬಿಡುವುದರ ಒಳಗಾಗಿ ಪುನಃ ಬದಲಾದ ರಾಜಕೀಯ ಪರಿಸ್ಥಿತಿಯಿಂದಾಗಿ ಹೊಸ ಕಾಂಗ್ರೆಸ್ ಸರ್ಕಾರವು ಅಂದಿನ ಪಂಚಾಯತಿ ರಾಜ್ಯ ಮಂತ್ರಿಗಳಾಗಿದ್ದ ಶ್ರೀ ಎಂ. ವೈ. ಘೋರ್ಪಡೆಯವರ ತೀವ್ರ ಆಸಕ್ತಿಯ ಫಲವಾಗಿ ಸಾಮಾಜಿಕ ನ್ಯಾಯ, ಪ್ರತೀ ಒಂದು ಹಂತದಲ್ಲಿ ಸೂಕ್ತವಾದ ಮತ್ತು ಸಮನಾದ ಆಡಳಿತ ವಿಕೇಂದ್ರೀಕರಣ, ಗ್ರಾಮ ಪಂಚಾಯತಿಗಳಿಗೆ ಪಕ್ಷಾತೀತ ಚುನಾವಣೆ, ಮಹಿಳೆಯರಿಗೆ, ಹಿಂದುಳಿದವರಿಗೆ ಹೆಚ್ಚಿನ ಪ್ರಾತಿನಿಧ್ಯ, ಮುಂತಾದ ವ್ಯಾಪಕ ಬದಲಾವಣೆಗಳನ್ನು ಅಳವಡಿಸಿಕೊಂಡು ಹೊಸ ಪಂಚಾಯತಿ ರಾಜ್ಯ ಕಾನೂನನ್ನು ಜಾರಿಯಲ್ಲಿ ತರಲಾಯಿತು.

**ಕರ್ನಾಟಕದ ಪಂಚಾಯತ್ ರಾಜ್ಯ ಕಾಯದೆ ೧೯೯೩:**

೧೯೮೩ರ ಜಿಲ್ಲಾ ಪರಿಷತ್ತು, ಮಂಡಳ ಪಂಚಾಯತ್, ಕಾಯ್ದೆಗೆ ಬದಲಾಗಿ ೧೯೯೩ರ ಕರ್ನಾಟಕ ಪಂಚಾಯತಿರಾಜ್ ಕಾಯಿದೆಯನ್ನು ಮೇ ೧೦ ರಿಂದ ಜಾರಿಗೊಳಿಸಲಾಗಿದೆ. ರಾಜ್ಯಾಂಗದ ೭೩ನೇ ತಿದ್ದುಪಡಿಯ ನಂತರ ಕಾರ್ಯ ರೂಪದಲ್ಲಿ ಬಂದಿರುವ, ದೇಶದಲ್ಲಿಯೇ ಪ್ರಥಮ ಪಂಚಾಯತ್ ರಾಜ್ಯ ಕಾಯಿದೆ ಇದಾಗಿರುವುದು. ಸ್ಥಳೀಯ ಸಂಸ್ಥೆಗಳನ್ನು ಇನ್ನಷ್ಟು ಬಲಪಡಿಸಿ ಅವುಗಳ ಕಾರ್ಯ ವಿಧಾನವನ್ನು ಉತ್ತಮಗೊಳಿಸುವ ಸಲುವಾಗಿ ರಾಜ್ಯಾಂಗದ ೭೩ನೇಯ ತಿದ್ದುಪಡಿಯ ಎಲ್ಲಾ ಪ್ರಮುಖ ಅಂಶಗಳನ್ನು ಒಳಗೊಂಡಿರುವ ಈ ಕಾನೂನು ಮೂರು ಹಂತಗಳ ಪಂಚಾಯತ್ ರಾಜ್ಯ ಸಂಸ್ಥೆಗಳ ರಚನೆಗೆ ಅನುವುಮಾಡಿವೆ. ಈ ಹೊಸ ಮತ್ತು ಪ್ರಚಲಿತ ಮೂರನೆಯ ಪಂಚಾಯತ್‌ರಾಜ್ಯ ಅಧಿನಿಯಮ ಮೂರು ಹಂತಗಳ ಸಂಸ್ಥೆಗಳು ಚುನಾಯಿತ ಪ್ರತಿನಿಧಿಗಳನ್ನು ಒಳಗೊಂಡಿರುವಂತೆ, ಅಧಿಕಾರ ವಿಕೇಂದ್ರೀಕರಣದೊಂದಿಗೆ ಎಲ್ಲಾ ಹಂತಗಳಲ್ಲಿಯೂ ಅಭಿವೃದ್ಧಿ ಕಾರ್ಯಗಳ ಅನುಷ್ಠಾನದಲ್ಲಿ ಜನತೆಯ ಸಹಭಾಗಿತ್ವಕ್ಕೆ ಹೆಚ್ಚಿನ ಅವಕಾಶವನ್ನು ಹಿಂದುಳಿದವರಿಗೆ ಸಾಮಾಜಿಕ ನ್ಯಾಯವನ್ನು ಒದಗಿಸಿದೆ.

ಹಿಂದಿನ ಮಂಡಳಗಳ ಕಾರ್ಯವ್ಯಾಪ್ತಿ, ಆಡಳಿತ ವಿಧಾನ, ಇವುಗಳ ಲೋಪ ದೋಷಗಳನ್ನು ಗುರುತಿಸಿ ಮೊದಲಿನ ಮಂಡಳಗಳ ಆಡಳಿತ ವ್ಯಾಪ್ತಿಯನ್ನು ಕುಗ್ಗಿಸಿ ಅವುಗಳನ್ನು ಪುನಃ ಗ್ರಾಮಪಂಚಾಯತಿಗಳೆಂದೇ ಪುನರ್ ನಾಮಕರಣಗೊಳಿಸಲಾಗಿದೆ. ಗ್ರಾಮದ ಅತೀ ಪ್ರಮುಖ ಸಾರ್ವಜನಿಕ ವೇದಿಕೆಯಾದ 'ಗ್ರಾಮ ಸಭೆಯನ್ನು' ಹೆಚ್ಚು ಬಲಪಡಿಸಲಾಗಿದೆ. ಆಡಳಿತದಲ್ಲಿ ಪಾರದರ್ಶಕತ್ವ ಮತ್ತು ಹೊಣೆಗಾರಿಕೆಯನ್ನು ನಿರೂಪಿಸಲಾಗುವಂತೆ ಕಾನೂನನ್ನು

ತಿದ್ದುಪಡಿ ಮಾಡಲಾಗಿದೆ. ಪ್ರತಿ ಗ್ರಾಮಪಂಚಾಯತಿಗೆ ವಾರ್ಷಿಕ ಒಂದು ಲಕ್ಷ ರೂ. ಅನುದಾನವನ್ನು ಒದಗಿಸಲಾಗಿದೆ. ಈ ಹಣವನ್ನು ಪಂಚಾಯತಿಯು ಸಿಬ್ಬಂದಿಯ ವೆಚ್ಚಕ್ಕೆ ಬಳಸುವಂತಿಲ್ಲ. ಅತೀ ಆವಶ್ಯಕ ವೆಚ್ಚಗಳಾದ ನೀರುಪೂರೈಕೆ, ದೀಪದ ವ್ಯವಸ್ಥೆಗೆ ಮಾತ್ರ ಉಪಯೋಗಿಸುವದು. ೧೯೯೧ರ ಗಣತಿಯಂತೆ ಹಿಂದಿನ ೨,೪೬೯ ಮಂಡಲ ಪಂಚಾಯತಿಗಳ ಬದಲಾಗಿ ಇಂದು ೫,೬೪೫ ಗ್ರಾಮ ಪಂಚಾಯತಿಗಳು ಅಸ್ತಿತ್ವದಲ್ಲಿ ಇರುತ್ತವೆ. ಗ್ರಾಮ ಪಂಚಾಯತಿಯಲ್ಲಿ ಕನಿಷ್ಠ ೧೧ ಜನ ಚುನಾಯಿತ ಸದಸ್ಯರಿರುವರು. ಗ್ರಾಮ ಪಂಚಾಯತಿಗಳಿಗೆ ೧೯೯೩ ಡಿಸೆಂಬರ್ ಕೊನೆಯಲ್ಲಿ ಚುನಾವಣೆಗಳು ನಡೆದವು. ಚುನಾಯಿತ ಸದಸ್ಯರ ಸಂಖ್ಯೆ ಸುಮಾರು ೭೯,೮೬೫, ಆ ಪೈಕಿ ೨೩,೪೫೪ ಮಹಿಳೆಯರು. ಜಿಲ್ಲಾ ಪಂಚಾಯತಿ ಮತ್ತು ತಾಲೂಕು ಪಂಚಾಯತಿಗಳಿಗೆ ಮುಂದೆ ಅಧಿಕಾರಕ್ಕೆ ಬಂದ ಜನತಾ ಸರ್ಕಾರ ೧೯೯೫ ಮಾರ್ಚಿಯಲ್ಲಿ ಚುನಾವಣೆಯನ್ನು ನಡೆಸಿತು. ಜಿ. ಪ. ಮತ್ತು ತಾ.ಪ. ಗಳ ಚುನಾಯಿತ ಸದಸ್ಯರ ಸಂಖ್ಯೆ ಕ್ರಮವಾಗಿ ೯೧೯ ಮತ್ತು ೩೩೪೦ ಆಗಿತ್ತು. ಪ್ರತೀ ೧೦ ಸಾವಿರಕ್ಕೆ ಒಬ್ಬರಂತೆ ತಾಲೂಕು ಪಂಚಾಯಿತಿಗಳಿಗೆ ಜಿಲ್ಲಾಪಂಚಾಯತ್‌ಗಳಿಗೆ ಪ್ರತೀ ೪೦ ಸಾವಿರ ಜನಕ್ಕೆ ಒಬ್ಬರಂತೆ ಚುನಾಯಿತ ಪ್ರತಿನಿಧಿಗಳು ಇರುವರು.

ಹೊಸ ವ್ಯವಸ್ಥೆಯಲ್ಲಿ ಚುನಾಯಿತ ಪ್ರತಿನಿಧಿಗಳನ್ನು ಒಳಗೊಂಡ ತಾಲೂಕು ಪಂಚಾಯತಿಗಳನ್ನು ಸಕ್ರಿಯ ಗೊಳಿಸಲಾಗಿದೆ. ಸುಮಾರು ಅರ್ಧದಷ್ಟು ಅಭಿವೃದ್ಧಿ ಯೋಜನೆಗಳ ಮತ್ತು ಕಾರ್ಯಕ್ರಮಗಳನ್ನು ತಾಲೂಕು ಮಟ್ಟದಲ್ಲಿ ಅನುಷ್ಠಾನಗೊಳಿಸಲಾಗುವುದು. ಪ್ರತಿಹಂತ ದಲ್ಲಿಯೂ ಗರಿಷ್ಠ ಮೀಸಲಾತಿಯ ಪ್ರಮಾಣ ಶೇ. ೫೬ (೨೩+೩೩) ಅದರಂತೆ ಈ ಸಂಸ್ಥೆಗಳ ಅಧ್ಯಕ್ಷರ ಉಪಾಧ್ಯಕ್ಷರ ಆಯ್ಕೆಯಲ್ಲಿಯೂ ಪರಿಶಿಷ್ಟ ಜಾತಿ, ಪರಿಶಿಷ್ಟ ವರ್ಗ, ಹಿಂದುಳಿದವರಿಗೆ ಮತ್ತು ಮಹಿಳೆಯರಿಗೆ ಮೀಸಲಾತಿ ಉಂಟು. ಸಾಮಾಜಿಕ ನ್ಯಾಯ ಒದಗಿಸುವಲ್ಲಿ ಈ ಕಾಯಿದೆಯು ಹಿಂದಿನ ಕಾನೂನಿಗಿಂತ ಬಹು ಪ್ರಗತಿಪರ ಕಾನೂನಾಗಿದೆ. ಪ್ರತಿ ಒಂದು ಮೀಸಲು ಮತ್ತು ಸಾರ್ವತ್ರಿಕ ಕ್ಷೇತ್ರದಲ್ಲಿ ಒಟ್ಟು ಸ್ಥಾನಗಳ ಮೂರನೇಯ ಒಂದು ಭಾಗವನ್ನು ಕಾಯ್ದಿರಿಸಲಾಗುವುದು. ಪ್ರಸ್ತುತ ಕಾಯಿದೆಯಂತೆ ಇತರ ಹಿಂದುಳಿದ ವರ್ಗಗಳಿಗೆ ನಾಮಕರಣ ಮಾಡುವ ರೂಢಿಯನ್ನು ಸಂಪೂರ್ಣವಾಗಿ ಕೈಬಿಡಲಾಗಿದೆ.

ಒಂದು ಅಧ್ಯಯನ ವರದಿ ತಿಳಿಸುವಂತೆ, ಜಿ.ಪ. ಮತ್ತು ತಾ. ಪ. ಗಳಲ್ಲಿ ಮಹಿಳೆಯರು ಅನುಕ್ರಮವಾಗಿ ಶೇ. ೩೬ ರಷ್ಟು ಮತ್ತು ಶೇ. ೪೦ರಷ್ಟು ಪ್ರಾತಿನಿಧ್ಯ ಪಡೆದರೆ, ಪ.ಜಾ., ಪ.ಪಂ.ಗಳ ಶೇ. ೧೮ ಮತ್ತು ಶೇ. ೫ರಷ್ಟು ಪ್ರಾತಿನಿಧ್ಯ ಪಡೆಯುವರು. ಹಿಂದುಳಿದ ವರ್ಗ 'ಎ' ಗುಂಪು ತಾ. ಪ. ಗಳಲ್ಲಿ ಶೇ. ೨೭ ಮತ್ತು ಜಿ. ಪ.ಗಳಲ್ಲಿ ಶೇ. ೨೬ ರಷ್ಟು ಪ್ರಾತಿನಿಧ್ಯ ಪಡೆದರೆ, ಹಿಂದುಳಿದವರ್ಗ 'ಬಿ' ಗುಂಪು ಜಿ.ಪ. ಮತ್ತು ತಾ.ಪ.ಗಳೆರಡರಲ್ಲಿಯೂ ಶೇ. ೭ರ ಪ್ರಾತಿನಿಧ್ಯ ಪಡೆಯುವರು. ಆದರೆ ಸಾಮಾನ್ಯ (ಜನರಲ್) ವರ್ಗದವರ ಪ್ರಾತಿನಿಧ್ಯ ಎರಡೂ ಪಂಚಾಯತಿಗಳಲ್ಲೂ ಶೇ. ೪೦ ಎಂದು ತಿಳಿದುಬರುವದು.

ರಾಜ್ಯಾಂಗದ ೭೪ನೇಯ ತಿದ್ದುಪಡಿಯ ಅನ್ವಯ ಜಿಲ್ಲೆಗೆ ಒಂದರಂತೆ ಜಿಲ್ಲಾ ಯೋಜನಾ ಸಮಿತಿಯನ್ನು ರಚಿಸಲು ಹೊಸಕಾಯಿದೆಯಲ್ಲಿ ಅವಕಾಶ ಕಲ್ಪಿಸಲಾಗಿದೆ. ಯೋಜನೆಗಳ ಗುಣಮಟ್ಟವನ್ನು ಹೆಚ್ಚಿಸಿ ಅವುಗಳ ಅನುಷ್ಠಾನವನ್ನು ತೀವ್ರಗೊಳಿಸುವುದೇ ಈ ಸಮಿತಿಗಳ ರಚನೆಯ ಉದ್ದೇಶ. ಪಂಚಾಯತ್ ರಾಜ್ ಹಣಕಾಸು ವ್ಯವಸ್ಥೆಯನ್ನು ಐದು ವರ್ಷಗಳಿಗೆ ಒಮ್ಮೆ ಪರಿಶೀಲಿಸಲು ಹಣಕಾಸು ಆಯೋಗ ಮತ್ತು ಖಾಯಂ ಆದ ಚುನಾವಣಾ ಆಯೋಗವನ್ನು ರಚಿಸಲು ಅವಕಾಶ ಮಾಡಿಕೊಡಲಾಗಿದೆ. ರಾಜ್ಯ ಸರ್ಕಾರವು ಈಗಾಗಲೇ ಪ್ರತ್ಯೇಕವಾದ ಚುನಾವಣಾ ಆಯೋಗ ಮತ್ತು ಹಣಕಾಸು ಆಯೋಗ ನೇಮಿಸಿದೆ. ಈ ಸಂಸ್ಥೆಗಳಿಗೆ ಪ್ರತೀ ಐದು ವರ್ಷಗಳಿಗೆ ಒಮ್ಮೆ ತಪ್ಪದೇ ಚುನಾವಣೆ ನಡೆಸುವುದನ್ನು ಕಡ್ಡಾಯ ಗೊಳಿಸಲಾಗಿದೆ. ಪ್ರತೀ ಒಂದು ಹಂತದಲ್ಲಿ ಚುನಾಯಿತ ಪ್ರತಿನಿಧಿಗಳು ಹಾಗೂ ಮುಖ್ಯ ಕಾರ್ಯ ನಿರ್ವಹಣಾ ಅಧಿಕಾರಿಗಳ ಹೊಣೆಗಾರಿಕೆಯ ಬಗ್ಗೆ ಕಾಯ್ದೆಯು ಸೂಕ್ತ ಗಮನ ನೀಡಿದೆ. ಜಿಲ್ಲಾ ಪರಿಷತ್ತಿನ ಮುಖ್ಯ ಅಧಿಕಾರಿಯನ್ನು 'ಮುಖ್ಯ ಕಾರ್ಯದರ್ಶಿ' ಎಂದು ಕರೆಯದೇ ಮಹಾರಾಷ್ಟ್ರದಲ್ಲಿಯಂತೆ "ಮುಖ್ಯ ಕಾರ್ಯ ನಿರ್ವಹಣಾಧಿಕಾರಿ" ಎಂದು ಕರೆಯಲಾಗುವುದು. ಜಿಲ್ಲಾ ಮತ್ತು ತಾಲೂಕು ಪಂಚಾಯತಿಯ ಅಧ್ಯಕ್ಷರನ್ನು ಮೂರನೇಯ ಎರಡು ಬಹುಮತದ ಆಧಾರದ ಮೇಲೆ ಮಾತ್ರ ಪದಚ್ಯುತಗೊಳಿಸಬಹುದು. ಇದು ಗ್ರಾಮ ಮೂಲದ ಪಂಚಾಯತಿ ಸಂಸ್ಥೆಗಳಿಗೆ ಸ್ಥಿರತೆಯನ್ನು ಒದಗಿಸುವಲ್ಲಿ ಸಹಾಯಕವಾಗಿದೆ ಎಂದು ಹೇಳಬಹುದು.

ಸೂಕ್ತ ಸಂದರ್ಭದಲ್ಲಿ ಸರ್ಕಾರವು ಪಂಚಾಯತಿ

ಮ[illegible] ತ ಲ್ಲೂಕು ಪಂಚಾಯತಿಗಳನ್ನು ಸಕಾರಣವಿದ್ದಲ್ಲಿ ವಿಚಾರಣೆಗೆ ಒಳಪಡಿಸಿ ಅಂತಹ ಪಂಚಾಯತಿಗಳನ್ನು ರದ್ದುಪಡಿಸಬಹುದು. ಹೊಸ ಕಾನೂನಿನ ಅನ್ವಯ ಪಂಚಾಯತಿರಾಜ್ಯ ವ್ಯವಸ್ಥೆಯು ಒಟ್ಟು ಸಿಬ್ಬಂದಿಯ ವರ್ಗಾವಣೆ ಅಧಿಕಾರವನ್ನು ಸರ್ಕಾರ ಹೊಂದಿದೆ. ಹಾಗೆಯೇ ಪಂಚಾಯತಿಗಳ ಯಾವುದೇ ಗ್ರಾಮಬಾಹಿರ ಕೆಲಸ ಅಥವಾ ಗೊತ್ತುವಳಿಗಳನ್ನು ರದ್ದುಪಡಿಸುವ ಹಕ್ಕೂ ಸರ್ಕಾರಕ್ಕೆ ಇರುವದು. ಪ್ರತೀ ಗ್ರಾಮ ಪಂಚಾಯತಿ ತಾಲೂಕು ಪಂಚಾಯತಿ ಮತ್ತು ಜಿಲ್ಲಾ ಪಂಚಾಯತಿಗೆ ಪ್ರತ್ಯೇಕವಾದ ನಿಧಿಯನ್ನು ರೂಪಿಸಲು ಅವಕಾಶ ಮಾಡಿಕೊಡಲಾಗಿದೆ. ಜಿಲ್ಲಾ ಪಂಚಾಯತಿಯ ಕೆಲಸ ಕಾರ್ಯಗಳನ್ನು ಗ್ರಾಮೀಣ ಅಭಿವೃದ್ಧಿ ಮತ್ತು ಪಂಚಾಯತಿ ರಾಜ್ ಇಲಾಖೆಯ ಕಾರ್ಯದರ್ಶಿ ಅಥವಾ ವಿಭಾಗಾಧಿಕಾರಿ ಪರಿಶೀಲಿಸಬಹುದು.

**ಪಂಚಾಯತಿಗಳಿಗೆ ಬಹುಮಾನ**

ಪಂಚಾಯತಿ ರಾಜ್ ವ್ಯವಸ್ಥೆಯಲ್ಲಿ ಅತ್ಯುತ್ತಮ ಸಾಧನೆಯನ್ನು ಮಾಡುವ ಮೂರೂ ಹಂತದ ಪಂಚಾಯತಿಗಳಿಗೆ ಬಹುಮಾನ ನೀಡಿ ಪುರಸ್ಕರಿಸಲು ರಾಜ್ಯ ಸರ್ಕಾರ ೧೯೯೬ರಲ್ಲಿ ಒಂದು ಆಜ್ಞೆಯನ್ನು ಹೊರಡಿಸಿದೆ. ಅದರ ಅನ್ವಯ ಗ್ರಾಮಪಂಚಾಯತಿಗಳಿಗೆ ರಾಜ್ಯಮಟ್ಟದಲ್ಲಿ ಮೂರು ಬಹುಮಾನಗಳಿದ್ದು ( ರೂ.೧ ಲಕ್ಷ, ೫೦ ಸಾವಿರ, ೨೫ ಸಾವಿರ) ತಾಲೂಕು ಪಂಚಾಯತಿಗಳಿಗೂ ಮೂರು ಬಹುಮಾನಗಳಿದ್ದು (ರೂ ೨ ಲಕ್ಷ, ೧ ಲಕ್ಷ ಮತ್ತು ೫೦ ಸಾವಿರ) ರಾಜ್ಯಮಟ್ಟದ ಅತ್ಯುತ್ತಮ ಜಿ.ಪಂ.ಗೆ ರೂ. ೫ ಲಕ್ಷದ ಒಂದು ಪುರಸ್ಕಾರ ಇರುವದು.

## ಗ್ರಂಥಋಣ


1. ಮೈಸೂರು ಲೋಕಲ್ ಬೋರ್ಡ್ಸ್ ಮತ್ತು ಗ್ರಾಮಪಂಚಾಯತಿಗಳ ಕಾನೂನು, ೧೯೫೯
2 ಕರ್ನಾಟಕ ಜಿಲ್ಲಾ ಪರಿಷತ್, ತಾಲೂಕು ಪಂಚಾಯತಿ ಸಮಿತಿ, ಮಂಡಳ ಪಂಚಾಯತಿ ಮತ್ತು ಗ್ರಾಮ ಪಂಚಾಯತಿ ಅಧಿನಿಯಮ; ೧೯೮೩
3. ಕರ್ನಾಟಕದ ಪಂಚಾಯತ್ ರಾಜ್ ಕಾನೂನು; ೧೯೯೩
4. ಕರ್ನಾಟಕ ರಾಜ್ಯ ಗ್ಯಾಜೆಟಿಯರ್ (ಸಂಪುಟಗಳ ೧ ರಿಂದ ೩ ಮತ್ತು ದಶವಾರ್ಷಿಕ) ಪುರವಣಿ
5. ಪತ್ರಿಕಾವರದಿಗಳು

**ಕರ್ನಾಟಕ ಇತಿಹಾಸ ಅಕಾದೆಮಿ ( ರಿ. )**
**ಗೋಖಲೆ ಸಾರ್ವಜನಿಕ ವಿಚಾರ ಸಂಸ್ಥೆ ಆವರಣ, ಬಸವನಗುಡಿ ರಸ್ತೆ,**
**ನರಸಿಂಹರಾಜಾ ಕಾಲೋನಿ, ಬೆಂಗಳೂರು-೧೯**

# ೧೯೯೪ನೇ ಸಾಲಿನ ವಾರ್ಷಿಕ ವರದಿ

ಕರ್ನಾಟಕ ಇತಿಹಾಸ ಅಕಾದೆಮಿಯ ಬೆಳವಣಿಗೆಯಲ್ಲಿ ಸಕ್ರಿಯವಾಗಿ ಪಾಲ್ಗೊಂಡು, ಅದರ ಗೌರವವನ್ನು ಹೆಚ್ಚಿಸಿರುವ ಪ್ರಿಯ ಸರ್ವಸದಸ್ಯ ಬಂಧುಗಳೇ,

ತಮ್ಮೆಲ್ಲರ ಅವಗಾಹನೆಗೆ ೧೯೯೪ನೇ ಸಾಲಿನ, ಅಂದರೆ ಕರ್ನಾಟಕ ಇತಿಹಾಸ ಅಕಾದೆಮಿಯ ೯ನೇ ವರ್ಷದ ವಾರ್ಷಿಕ ವರದಿಯನ್ನು ಮಂಡಿಸಲು ಅತ್ಯಂತ ಸಂತೋಷವಾಗುತ್ತಿದೆ.

ಕರ್ನಾಟಕ ಇತಿಹಾಸ ಅಕಾದೆಮಿಯ ಸ್ಥಾಪನೆಯಾಗಿ ೯ ವರ್ಷಗಳು ಪೂರ್ಣವಾಗಿ ೧೦ನೇ ವರ್ಷಕ್ಕೆ ಕಾಲಿಟ್ಟಿದೆ. ದಿ : ೨೮-೬-೧೯೮೬ರಂದು ಕರ್ನಾಟಕ ಇತಿಹಾಸದ ಬಗೆಗೆ ಪ್ರೀತಿ ಇರಿಸಿಕೊಂಡಿರುವ ೧೯ ಜನರು ಬೆಂಗಳೂರಿನ ಮಿಥಿಕ್ ಸೊಸೈಟಿಯಲ್ಲಿ ಸಭೆ ಸೇರಿ ತೀರ್ಮಾನಿಸಿದ ಪ್ರಕಾರ ಕರ್ನಾಟಕ ಇತಿಹಾಸ ಅಕಾದೆಮಿಯ ಸ್ಥಾಪನೆಗೊಂಡಿತು. ದಿನಾಂಕ ೧೪-೧೨-೧೯೮೬ರಂದು ಬೆಂಗಳೂರಿನಲ್ಲೇ ಕರ್ನಾಟಕ ಇತಿಹಾಸ ಅಕಾದೆಮಿಯ ಔಪಚಾರಿಕ ಉದ್ಘಾಟನೆಯೂ ಆಯಿತು. ಈಗ ಹತ್ತನೆಯ ವರ್ಷಕ್ಕೆ ಅಡಿ ಇಟ್ಟಿರುವ ಅಕಾದೆಮಿಯ ೧೦ನೆಯ ಹುಟ್ಟುಹಬ್ಬವನ್ನು ೧೯೯೫ರ ಡಿಸೆಂಬರ್ ತಿಂಗಳಿನಲ್ಲಿ ಹಮ್ಮಿಕೊಳ್ಳುವ ಅಭಿಲಾಷೆಯಿದೆ ಎಂದು ಹೆಮ್ಮೆಯಿಂದ ತಿಳಿಸುತ್ತಾ, ೧೯೯೪ನೇ ಸಾಲಿನ ವಾರ್ಷಿಕ ವರದಿಯನ್ನು ತಮ್ಮ ಮುಂದೆ ಮಂಡಿಸುತ್ತಿದ್ದೇನೆ.

**ಎಂಟನೆಯ ವಾರ್ಷಿ ಸಮ್ಮೇಳನ**

ಅಕಾದೆಮಿಯ ಎಂಟನೇ ವಾರ್ಷಿಕ ಸಮ್ಮೇಳನವು ೧೯೯೪ರ ಜುಲೈ ೮, ೯ ಮತ್ತು ೧೦ರಂದು ಬಳ್ಳಾರಿ ಜಿಲ್ಲೆಯ ಸೊಂಡೂರಿನಲ್ಲಿ ನಡೆಯಿತು. ಅತ್ಯಂತ ಯಶಸ್ವಿಯಾಗಿ ನಡೆದ ಸಮ್ಮೇಳನಕ್ಕೆ ಸೊಂಡೂರಿನ ಕರ್ನಾಟಕ ಸೇವಾ ಸಂಘ ಆಶ್ರಯ ನೀಡಿ ಉಪಕರಿಸಿತು. ಕರ್ನಾಟಕ ಸರ್ಕಾರದ ಮಾಜಿ ಮಂತ್ರಿಗಳು ಮಾತ್ರವಲ್ಲದೆ, ಕರ್ನಾಟಕ ಸಂಸ್ಕೃತಿಯ ಉತ್ತಮ ಹರಿಕಾರರಾದ ಶ್ರೀ ಎಂ. ವೈ. ಘೋರ್ಪಡೆ ಅವರ ನೇತೃತ್ವದಲ್ಲಿ ಆಶ್ರಯದಾತ ಸಂಸ್ಥೆಯು, ಸೊಂಡೂರಿನ ಆದರ್ಶ ಸಮುದಾಯ ಭವನ ಕಲ್ಯಾಣ ಮಂಟಪದಲ್ಲಿ ಸಮ್ಮೇಳನವು ಅತ್ಯಂತ ವಿಜೃಂಭಣೆಯಿಂದ ಮಾತ್ರವಲ್ಲದೆ, ಅರ್ಥಪೂರ್ಣವಾಗಿ ನಡೆಯಲು ಕಾರಣವಾಯಿತು. ಕರ್ನಾಟಕ ವಿಶ್ವವಿದ್ಯಾಲಯದ ಕನ್ನಡ ಅಧ್ಯಯನ ಪೀಠದಲ್ಲಿ ಪ್ರಾಧ್ಯಾಪಕರಾಗಿ ಸೇವೆ ಸಲ್ಲಿಸುತ್ತಿರುವ ಹಾಗೂ ಕರ್ನಾಟಕದ ಸಂಶೋಧಕರ ಸಾಲಿನಲ್ಲಿ ಮೊದಲ ಪಂಕ್ತಿಯಲ್ಲೇ ನಿಲ್ಲುವ ಡಾ॥ ಎಂ. ಎಂ. ಕಲಬುರ್ಗಿ ಅವರು ಸಮ್ಮೇಳನದ ಅಧ್ಯಕ್ಷರಾಗಿ, ಸಮ್ಮೇಳನದ ಗೌರವ ಹೆಚ್ಚಿಸಿದರು.

ದಿನಾಂಕ: ೮-೭-೧೯೯೪ ರಂದು ಬೆಳಿಗ್ಗೆ ೧೦ ಘಂಟೆಗೆ ಆದರ್ಶ ಸಮುದಾಯ ಭವನದಲ್ಲಿ ಶ್ರಿ ಎಂ. ವೈ. ಘೋರ್ಪಡೆಯವರು ಸಮ್ಮೇಳನವನ್ನು ಉದ್ಘಾಟಿಸಿದರು ಮಾತ್ರವಲ್ಲದೆ, ಕನ್ನಡ ವಿಶ್ವವಿದ್ಯಾಲಯದ ಕರ್ನಾಟಕ ಕೈಫಿಯತ್ತುಗಳು,

ಕೃತಿಯನ್ನೂ ಬಿಡುಗಡೆ ಮಾಡಿದರು. ಇತಿಹಾಸವು ಕೇವಲ ಒಬ್ಬ ವ್ಯಕ್ತಿಯ, ಒಂದು ಜನಾಂಗದ ಅಧ್ಯಯನಕ್ಕೆ ಮಾತ್ರ ಸೀಮಿತಗೊಳ್ಳದೆ, ಇಡೀ ಜನಸಮುದಾಯದ ಆಚಾರ ವಿಚಾರಗಳು ಮತ್ತು ಅವುಗಳಲ್ಲಾಗುತ್ತಿರುವ ಪರಿವರ್ತನೆಯ ವಿಶ್ಲೇಷಣೆಗೂ ಅವಕಾಶ ಮಾಡಿಕೊಡಬೇಕು ಎಂಬ ಶ್ರೀ ಎಂ. ವೈ. ಘೋರ್ಪಡೆಯವರ ಅಭಿಪ್ರಾಯವು ಅವರ ಉದ್ಘಾಟನಾ ಭಾಷಣದಲ್ಲಿ ವ್ಯಕ್ತವಾಯಿತು. ಮೈಸೂರು ವಿಶ್ವವಿದ್ಯಾನಿಲಯದ ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ವಿಭಾಗದ ಪ್ರಾಧ್ಯಾಪಕ ಪ್ರೊ॥ ಎ. ವಿ. ನರಸಿಂಹಮೂರ್ತಿ ಅವರು 'ಇತಿಹಾಸ ದರ್ಶನ'ದ ಒಂಬತ್ತನೆಯ ಸಂಚಿಕೆಯನ್ನು ಬಿಡುಗಡೆ ಮಾಡಿದರು. ಸಭೆಯಲ್ಲಿ ವೇದಿಕೆಯ ಮೇಲೆ ಉಪಸ್ಥಿತರಿದ್ದ ಕಳೆದ ಸಮ್ಮೇಳನದ ಅಧ್ಯಕ್ಷ ಡಾ॥ ಅ. ಸುಂದರ ಅವರು ಈಗಿನ ಸಮ್ಮೇಳನದ ಅಧ್ಯಕ್ಷ ಡಾ॥ ಎಂ. ಎಂ. ಕಲಬುರ್ಗಿ ಅವರಿಗೆ ಮಾಲಾರ್ಪಣೆ ಮಾಡಿದರು. ಸಮ್ಮೇಳನಾಧ್ಯಕ್ಷರಿಗೆ ಅಕಾದೆಮಿಯ ಅಧ್ಯಕ್ಷ ಪ್ರೊ॥ ಜಿ. ಎಸ್. ದೀಕ್ಷಿತ್ ಅವರು ಗೌರವ ಸಮರ್ಪಣೆ ಮಾಡಿದರು. ಶೈಕ್ಷಣಿಕ ನೆಲೆಯಲ್ಲೇ ನಡೆದು ಬಂದಿರುವ ಅಕಾದೆಮಿಯ ಸಮ್ಮೇಳನಗಳ ಬಗೆಗೆ ಮೆಚ್ಚುಗೆ ವ್ಯಕ್ತಪಡಿಸಿದ ಸಮ್ಮೇಳನಾಧ್ಯಕ್ಷರಾದ ಡಾ॥ ಎಂ. ಎಂ. ಕಲಬುರ್ಗಿ ಅವರು ಚಾರಿತ್ರಿಕ ಮತ್ತು ಸಮಕಾಲೀನ ಪ್ರಶ್ನೆಗಳಿಗಿರಬೇಕಾದ ಸಹ ಸಂಬಂಧದ ಬಗೆಗೆ ತಿಳಿಸುತ್ತಾ ಇತಿಹಾಸಕ್ಕೂ ಚಲನಶೀಲತೆ ಲಭ್ಯವಾಗಬೇಕೆಂದು ಅಭಿಪ್ರಾಯಪಟ್ಟರು. ಸಂಸ್ಕೃತಿಯ ಬಗೆಗೆ ಇನ್ನೂ ಹೆಚ್ಚಿನ ಅಧ್ಯಯನವಾಗಬೇಕೆಂದು ಸಮ್ಮೇಳನಾಧ್ಯಕ್ಷರ ಅಭಿಪ್ರಾಯವಾಗಿತ್ತು.

ಸಮ್ಮೇಳನದಲ್ಲಿ ಕಳೆದ ವರ್ಷ (ಜುಲೈ ೧೯೯೩ರಿಂದ ಜುಲೈ ೧೯೯೪) ಪಿಎಚ್.ಡಿ. ಪದವಿ ಪಡೆದ ಅಕಾದೆಮಿಯ ೯ ಸದಸ್ಯರನ್ನು ಸನ್ಮಾನಿಸಲಾಯಿತು. ಸನ್ಮಾನ ಪಡೆದವರೆಂದರೆ ಹೊಸಪೇಟೆಯ ಡಾ॥ ಮೃತ್ಯುಂಜಯ ರುಮಾಲೆ, ಹಂಪಿಯ ಡಾ॥ ಎಫ್. ಟಿ. ಹಳ್ಳಿಕೇರಿ, ಮೈಸೂರಿನ ಡಾ॥ ಎನ್. ಹರಳಯ್ಯ, ಭದ್ರಾವತಿಯ ಡಾ॥ ಕೆ.ಎಸ್. ಕುಮಾರಸ್ವಾಮಿ, ಸೊಂಡೂರಿನ ಡಾ॥ ಸಿ. ನಾಗಭೂಷಣ, ಮೈಸೂರಿನ ಡಾ॥ ಆರ್. ಗೋಪಾಲ್, ಬೆಂಗಳೂರಿನ ಡಾ॥ ಬೆಂ. ಶಾ. ಶ್ಯಾಮಲಾ ರತ್ನಕುಮಾರಿ, ತಿಪಟೂರಿನ ಡಾ॥ ಎಸ್. ಎನ್. ಶಿವರುದ್ರಸ್ವಾಮಿ ಮತ್ತು ರಾಯಚೂರಿನ ಡಾ॥ ಚನ್ನಬಸವ ಹಿರೇಮಠ.

ಅಕಾದೆಮಿಯ ಅಧ್ಯಕ್ಷರಾದ ಪ್ರೊ॥ ಜಿ. ಎಸ್. ದೀಕ್ಷಿತ್ ಸ್ವಾಗತಿಸಿದರು. ಇತಿಹಾಸ ದರ್ಶನದ ಸಂಪಾದಕರಾದ ಡಾ॥ ಸೂರ್ಯನಾಥ್ ಕಾಮತ್ ಅಕಾದೆಮಿಯ ಪರಿಚಯ ಮಾಡಿದರು ಮತ್ತು ಅಕಾದೆಮಿಯ ಪ್ರಧಾನ ಕಾರ್ಯದರ್ಶಿ ಡಾ॥ ಎಚ್. ಎಸ್. ಗೋಪಾಲರಾವ್ ವಂದನೆ ಸಲ್ಲಿಸಿದರು.

ಸಮ್ಮೇಳನದಲ್ಲಿ ಪ್ರಧಾನವಾಗಿರುವ ಸಂಶೋಧನ ಪ್ರಬಂಧಗಳ ಗೋಷ್ಠಿಗಳು ೮ನೇ ತಾರೀಖು ಮಧ್ಯಾಹ್ನ ೨ ಗಂಟೆಯಿಂದ ಆರಂಭಗೊಂಡವು. ಮೊದಲ ಗೋಷ್ಠಿಯ ಅಧ್ಯಕ್ಷತೆಯನ್ನು ಡಾ॥ ವಸುಂಧರಾ ಫಿಲಿಯೋಜಾ ವಹಿಸಿದ್ದರು. ಮತ್ತು ನಾಲ್ಕು ಪ್ರಬಂಧಗಳ ಮಂಡನೆಯಾಯಿತು. ಗೋಷ್ಠಿಯನ್ನು ಡಾ॥ ಮೃತ್ಯುಂಜಯ ರುಮಾಲೆ ನಿರ್ವಹಿಸಿದರು. ಅದೇ ದಿನ ಮಧ್ಯಾಹ್ನ ೪-೧೫ ಗಂಟೆಗೆ ನಡೆದ ಗೋಷ್ಠಿಯ ಅಧ್ಯಕ್ಷತೆಯನ್ನು ಡಾ॥ ಅ. ಸುಂದರ ವಹಿಸಿದ್ದು, ಡಾ॥ ದೇವರ ಕೊಂಡಾರೆಡ್ಡಿ ಗೋಷ್ಠಿಯ ನಿರ್ವಹಣೆ ಮಾಡಿದರು. ಏಳು ಪ್ರಬಂಧಗಳು ಮಂಡಿತವಾದವು. ದಿನಾಂಕ ೯-೭-೧೯೯೪ ರಂದು ಬೆಳಿಗ್ಗೆ ೯ ರಿಂದ ೧೧ ರವರೆಗೆ ನಡೆದ ಮೂರನೆಯ ಗೋಷ್ಠಿಯ ಅಧ್ಯಕ್ಷತೆಯನ್ನು ಪ್ರೊ॥ ಜಿ. ಎಸ್. ದೀಕ್ಷಿತ್ ವಹಿಸಿದ್ದರು. ನಿರ್ವಹಣೆ ಡಾ॥ ಕೆಳದಿ ವೆಂಕಟೇಶ್ ಜೋಯಿಸ್; ಹಾಗೂ ಏಳು ಪ್ರಬಂಧಗಳು ಮಂಡಿತವಾದವು. ಅದೇ ದಿನ ಮಧ್ಯಾಹ್ನ ೧೧-೧೫ಕ್ಕೆ ಆರಂಭವಾದ ನಾಲ್ಕನೇ ಗೋಷ್ಠಿಯಲ್ಲಿ ಎಂಟು ಪ್ರಬಂಧಗಳ ಮಂಡನೆಯಾಗಿ ಪ್ರೊ॥ ಎ. ವಿ. ನರಸಿಂಹಮೂರ್ತಿ ಅಧ್ಯಕ್ಷತೆ ವಹಿಸಿದ್ದರು ಮತ್ತು ಡಾ॥ ಎಚ್.ಎಸ್. ಉಷಾರಾಣಿ ನಿರ್ವಹಣೆ ಮಾಡಿದರು.

ದಿನಾಂಕ: ೯-೭-೧೯೯೪ ರಂದು ಮಧ್ಯಾಹ್ನ ೨ ರಿಂದ ೪ ಘಂಟೆಯವರೆಗೆ ನಡೆದ ಐದನೆಯ ಗೋಷ್ಠಿಯ ಅಧ್ಯಕ್ಷತೆ ವಹಿಸಿದ್ದವರು ಡಾ॥ ಕೆ. ಎನ್. ಚಿಟ್ನಿಸ್ ಮತ್ತು ನಿರ್ವಹಣೆ ಮಾಡಿದವರು ಶ್ರೀ ಕೆ. ಬಿ. ಶಿವತಾರಕ್. ನಾಲ್ಕು ಪ್ರಬಂಧಗಳು ಮಂಡಿತವಾದವು. ಅದೇ ದಿನ ಮಧ್ಯಾಹ್ನ ೪-೧೫ ರಿಂದ ೬-೧೫ರ ವರೆಗೆ ನಡೆದ ಆರನೆಯ ಗೋಷ್ಠಿಯಲ್ಲಿ ಆರು ಪ್ರಬಂಧಗಳು ಮಂಡಿತವಾದವು. ಅಧ್ಯಕ್ಷತೆಯನ್ನು ಡಾ॥ ಜ್ಯೋತ್ಸ್ನಾ ಕಾಮತ್ ವಹಿಸಿದ್ದರು. ನಿರ್ವಹಣೆಯ ಜವಾಬ್ದಾರಿ ಹೊತ್ತಿದ್ದವರು ಶ್ರೀ ಪಿ. ವಿ. ಕೃಷ್ಣಮೂರ್ತಿ.

ದಿನಾಂಕ : ೯-೭-೧೯೯೪ ರಂದು ಸಂಜೆ ೬-೩೦ ಗಂಟೆಗೆ ಸೊಂಡೂರಿನ ಆದರ್ಶ ಸಮುದಾಯ ಭವನದಲ್ಲಿ ಪ್ರೊ॥ ಜಿ. ಎಸ್. ದೀಕ್ಷಿತ್ ಅವರ ಅಧ್ಯಕ್ಷತೆಯಲ್ಲಿ ಅಕಾದೆಮಿಯ ಸರ್ವಸದಸ್ಯರ ಸಭೆ ನಡೆಯಿತು. ಆ ವಿವರಗಳನ್ನು ಮುಂದೆ ಪ್ರಸ್ತಾಪಿಸಲಾಗುವುದು.

ದಿನಾಂಕ : ೧೦-೭-೧೯೯೪ರಂದು ಬೆಳಿಗ್ಗೆ ೯ ರಿಂದ ೧೧ ರವರೆಗೆ ನಡೆದ ಏಳನೆಯ ಗೋಷ್ಠಿಯಲ್ಲಿ ಹನ್ನೆರಡು ಪ್ರಬಂಧಗಳೂ (ಅಧ್ಯಕ್ಷತೆ : ಡಾ॥ ಶ್ರೀನಿವಾಸ ಹಾವನೂರ್, ನಿರ್ವಹಣೆ : ಶ್ರೀ ಎಸ್. ರಾಜೇಂದ್ರಪ್ಪ), ೧೧-೧೫ ರಿಂದ ೧-೧೫ ರವರೆಗೆ ನಡೆದ ಎಂಟನೆಯ ಗೋಷ್ಠಿಯಲ್ಲಿ ಹತ್ತು ಪ್ರಬಂಧಗಳೂ (ಅಧ್ಯಕ್ಷತೆ : ಡಾ॥ ಸೂರ್ಯನಾಥ್ ಕಾಮತ್) ಮಂಡನೆಯಾದವು. ಸಮ್ಮೇಳನದ ಕೊನೆಯ ಗೋಷ್ಠಿಯಲ್ಲಿ ಏಳು ಪ್ರಬಂಧಗಳು ಮಂಡನೆಯಾದವು. ಅಧ್ಯಕ್ಷತೆ ವಹಿಸಿದ್ದವರು: ಡಾ॥ ಪ್ರತಿಭಾ ಚಿಣ್ಣಪ್ಪ ಮತ್ತು ಗೋಷ್ಠಿಯನ್ನು ನಿರ್ವಹಿಸಿದವರು ಶ್ರೀ ಎಸ್. ಎಂ. ನಾಗಭೂಷಣ.

ದಿನಾಂಕ ೮-೭-೧೯೯೪ ರಂದು ರಾತ್ರಿ ೭-೩೦ ಘಂಟೆಗೆ ಉತ್ಖನನಗಳನ್ನು ಕುರಿತು ಸೋದಾಹರಣಪೂರ್ವಕ ವಿಶೇಷ ಉಪನ್ಯಾಸವನ್ನು ಏರ್ಪಡಿಸಲಾಗಿತ್ತು. ಉಪನ್ಯಾಸ ನೀಡಿದವರು ಶ್ರೀ ಎಚ್. ಟಿ. ತಳವಾರ್ ಮತ್ತು ಅಧ್ಯಕ್ಷತೆ ವಹಿಸಿದ್ದವರು ಡಾ॥ ಡಿ. ವಿ. ದೇವರಾಜ್.

**ದಿನಾಂಕ ೯-೭-೧೯೯೪ ರಂದು ನಡೆದ ಸರ್ವಸದಸ್ಯರ ಸಭೆಯ ವರದಿ**

ಕರ್ನಾಟಕ ಇತಿಹಾಸ ಅಕಾದೆಮಿಯ ೮ನೆಯ ವಾರ್ಷಿಕ ಸಮ್ಮೇಳನದ ಸಭಾಸ್ಥಾನವಾದ ಸೊಂಡೂರಿನ ಆದರ್ಶ ಸಮುದಾಯ ಭವನದಲ್ಲಿ ಮೊದಲೇ ಸರ್ವಸದಸ್ಯರಿಗೂ ಪತ್ರಮುಖೇನ ತಿಳಿಸಿದ್ದಂತೆ ದಿನಾಂಕ ೯-೭-೧೯೯೪ ಶನಿವಾರ ಸಂಜೆ ೬-೩೦ಕ್ಕೆ ಅಕಾದೆಮಿಯ ಅಧ್ಯಕ್ಷರಾದ ಪ್ರೊ॥ ಜಿ. ಎಸ್. ದೀಕ್ಷಿತ್ ಅವರ ಅಧ್ಯಕ್ಷತೆಯಲ್ಲಿ ನಡೆದ ಸರ್ವಸದಸ್ಯರ ಸಭೆಯ ನಡವಳಿಕೆಗಳು ಕೆಳಕಂಡಂತಿವೆ :

ಸಭೆಯನ್ನು ಆರಂಭಿಸಲು ಪ್ರಧಾನ ಕಾರ್ಯದರ್ಶಿ ಡಾ॥ ಎಚ್. ಎಸ್. ಗೋಪಾಲರಾವ್ ಅವರು ಸರ್ವಸದಸ್ಯರ ಅನುಮತಿ ಕೋರಿದರು. ಡಾ॥ ಶ್ರೀನಿವಾಸ ಹಾವನೂರ ಅವರೊಂದಿಗೆ ಸರ್ವಸದಸ್ಯರೂ ಸಭೆಯ ಆರಂಭಕ್ಕೆ ಅನುಮತಿ ನೀಡಿದರು.

ಶ್ರೀ ಜಯಮ್ಮ ಕರಿಯಣ್ಣ ಅವರ ಪ್ರಾರ್ಥನೆಯೊಂದಿಗೆ ಸಭೆ ಆರಂಭವಾಯಿತು. ಪ್ರಧಾನ ಕಾರ್ಯದರ್ಶಿ ಡಾ॥ ಎಚ್. ಎಸ್. ಗೋಪಾಲರಾವ್ ಅವರು ಅಧ್ಯಕ್ಷರ ಸಹಿತ ಸರ್ವಸದಸ್ಯರನ್ನೂ ಸಭೆಗೆ ಸ್ವಾಗತಿಸಿದರು.

೧೯೯೩ನೆಯ ಸಾಲಿನ ವಾರ್ಷಿಕ ವರದಿಯನ್ನು ಸರ್ವಸದಸ್ಯರಿಗೂ ಹಂಚಿದ್ದುದರಿಂದ, ವಿವರವಾಗಿ ವರದಿಯ ವಾಚನದ ಅವಶ್ಯಕತೆ ಇಲ್ಲವೆಂದೂ, ಸಂಕ್ಷಿಪ್ತವಾಗಿ ಪ್ರಧಾನ ಕಾರ್ಯದರ್ಶಿಯವರು ತಿಳಿಸಿದರೆ ಸಾಕೆಂದು ಸದಸ್ಯರೆಲ್ಲರೂ ಸೂಚಿಸಿದರು. ಅದರಂತೆ ಪ್ರಧಾನ ಕಾರ್ಯದರ್ಶಿಯವರು ಸಂಕ್ಷಿಪ್ತ ವರದಿಯನ್ನು ಸರ್ವಸದಸ್ಯರಿಗೆ ತಿಳಿಸಿದರು. ವರದಿಯನ್ನು ಸ್ವೀಕರಿಸಬಹುದೆಂದು ಡಾ॥ ಎ. ವಿ. ನರಸಿಂಹಮೂರ್ತಿ ಅವರು ಮಾಡಿದ ಸೂಚನೆಗೆ ಡಾ॥ ಎಂ. ವೈ. ಸಾವಂತ ಮತ್ತು ಶ್ರೀ ವಿ. ಸಿ. ಮಾಲಗತ್ತಿ ಅನುಮೋದಿಸಿದರು. ಸರ್ವಸದಸ್ಯರ ಅನುಮೋದನೆಯೂ ದೊರೆಯಿತು.

ಕೋಶಾಧಿಕಾರಿ ಶ್ರೀ ಎಂ. ಬಿ. ಪಾಟೀಲ್ ಅವರು ಅಕಾದೆಮಿಯ ಆಡಿಟ್ ಆದ ೧೯೯೩ನೆಯ ಸಾಲಿನ ಲೆಕ್ಕಪತ್ರವನ್ನು ಮಂಡಿಸಿದರು. ಅದರ ವಿವರಗಳನ್ನೂ ಸರ್ವಸದಸ್ಯರಿಗೆ ಹಂಚಲಾಗಿತ್ತು. ಶ್ರೀ ಪಾಟೀಲರು ಕೆಲವು ವಿಷಯಗಳನ್ನು ಸ್ಪಷ್ಟಪಡಿಸುತ್ತಾ, ವರ್ಷದಿಂದ ವರ್ಷಕ್ಕೆ ಅಕಾದೆಮಿಯ ಆದಾಯ ಹೆಚ್ಚುತ್ತಿರುವಂತೆ ವೆಚ್ಚವೂ ಹೆಚ್ಚಾಗುತ್ತಿರುವುದನ್ನು ತಿಳಿಸಿ ಕೆಲವು ಆಜೀವ ಸದಸ್ಯರಿಂದ ಇನ್ನೂ ಬಾಕಿ ಬರಬೇಕಾಗಿರುವ ಸದಸ್ಯ ಶುಲ್ಕವು ಸುಮಾರು ೨೫ ಸಾವಿರ ರೂಪಾಯಿಗಳಿವೆಯೆಂದೂ, ಅದನ್ನು ಸದಸ್ಯರು ಪಾವತಿ ಮಾಡಿ ಸಹಕರಿಸಬೇಕೆಂದೂ ಮನವಿ ಮಾಡಿದರು. ಆರಂಭದ ವರ್ಷಗಳಲ್ಲಿ ಅಕಾದೆಮಿಗೆ ೨೦೦ ರೂ. ಆಜೀವ ಸದಸ್ಯತ್ವ ಶುಲ್ಕ ನೀಡಿ, ಸದಸ್ಯರಾಗಿದ್ದವರು ೧೦೦ ರೂ.ಗಳ ದೇಣಿಗೆ ನೀಡಬೇಕೆಂಬ ರಾಯಚೂರು ಸಮ್ಮೇಳನದ ಸಂದರ್ಭದ ಸರ್ವಸದಸ್ಯರ ಸಭೆಯಲ್ಲಿ ಮಾಡಿಕೊಂಡ ಮನವಿಗೆ ಹಲವು ಸದಸ್ಯರು ಮಾತ್ರ ಓಗೊಟ್ಟಿದ್ದು, ಉಳಿದ ಸದಸ್ಯರು

ಐಚ್ಛಿಕವಾಗಿ ಕೋರಿರುವ ನೆರವನ್ನು ನೀಡುವಂತೆ ಮತ್ತೆ ಕಳಕಳಿಯ ಮನವಿ ಮಾಡಿದರು. ಅಕಾದೆಮಿಯ ಕಚೇರಿ ಬಾಡಿಗೆ, ಪೀಠೋಪಕರಣ, ಅಂಚೆವೆಚ್ಚ ಇತ್ಯಾದಿಗಳು ಹೆಚ್ಚುತ್ತಿರುವ ಸಂದರ್ಭದಲ್ಲಿ ಸದಸ್ಯರ ಸ್ವಪ್ರೇರಿತ ನೆರವು ಅಪೇಕ್ಷಿತ ಎಂದು ಶ್ರೀ ಪಾಟೀಲ್ ಅರಿಕೆ ಮಾಡಿದರು. ಅಕಾದೆಮಿಯ 'ಇತಿಹಾಸ ದರ್ಶನ' ಸಂಚಿಕೆಯ ಮುದ್ರಣಕ್ಕೆ ಅಕಾದೆಮಿಯು ೨ನೇ ಪಿ.ಯು. ಇತಿಹಾಸ ವಿದ್ಯಾರ್ಥಿಗಳಿಗೆ ನಡೆಸುವ 'ಇತಿಹಾಸ ಪ್ರಶಸ್ತಿ' ಪರೀಕ್ಷೆಗಳಿಂದ ಉಳಿಯುವ ಹಣವನ್ನು ಬಳಸಿಕೊಳ್ಳುತ್ತಿರುವುದನ್ನು ಸಭೆಗೆ ಮನವರಿಕೆ ಮಾಡಿದರು.

ಪೀಠೋಪಕರಣಗಳಿಗೆ ಸಂಬಂಧಿಸಿದ ವೆಚ್ಚವನ್ನು ಉಳಿಸಬಹುದಿತ್ತು ಎಂದು ಶ್ರೀ ವಿ. ಸಿ. ಮಾಲಗತ್ತಿ ಅವರು ಅಭಿಪ್ರಾಯ ವ್ಯಕ್ತಪಡಿಸಿದರು. ಇನ್ನೂ ಪೀಠೋಪಕರಣಗಳನ್ನು ಕೊಳ್ಳದಿರುವುದರಿಂದ, ಅಭಿಮಾನಿಗಳು ಮತ್ತು ಆಸಕ್ತರು ಆ ಬಗ್ಗೆ ನೆರವಿಗೆ ಬಂದಲ್ಲಿ ಪೀಠೋಪಕರಣಗಳಿಗೆ ನಿಗದಿಪಡಿಸಿರುವ ಹಣವನ್ನು ಉಳಿಸಬಹುದೆಂದು ಶ್ರೀ ಎಂ. ಬಿ. ಪಾಟೀಲ್ ಸ್ಪಷ್ಟೀಕರಣ ನೀಡಿದರು. ಆ ಸಂದರ್ಭದಲ್ಲೇ ಶ್ರೀ ಹಿರಿಯಣ್ಣಯ್ಯ ಅವರು ಒಂದು ಗೋಡೆ ಗಡಿಯಾರವನ್ನೂ, ಶ್ರೀ ಮೋಹನ್ ಗ. ಹೆಗಡೆಯವರು ರೂ. ೧೫೦ ಅನ್ನೂ, ವಿವೇಕಾನಂದ ಕಾಲೇಜಿನ ಶ್ರೀ ಪಾಂಡುಕುಮಾರ್ ಮತ್ತು ಶ್ರೀ ಜಯರಾಮಯ್ಯ ಅವರು ಒಂದು ಮೇಜು ಅಥವಾ ರೂ. ೧೦೦೦ ವನ್ನೂ, ಶ್ರೀ ಜಿ. ಸುಭಾಷ್ ಚಂದ್ರಬೋಸ್, ಶ್ರೀ ಕೆ. ಆರ್. ಗಣೇಶ್, ಶ್ರೀ ಯು. ಆರ್. ಸುಬ್ರಹ್ಮಣ್ಯ ಮತ್ತು ಶ್ರೀ ಆರ್. ವೆಂಕಟೇಶಮೂರ್ತಿ ಅವರು ತಲಾ ಒಂದು ಕುರ್ಚಿಯನ್ನು ಅಕಾದೆಮಿಯ ಕಛೇರಿಯ ಪೀಠೋಪಕರಣ ವ್ಯವಸ್ಥೆಗೆ ದಾನ ನೀಡುವ ಆಶ್ವಾಸನೆ ನೀಡಿದರು. ಸರ್ವಸದಸ್ಯರೂ ಮೆಚ್ಚುಗೆಯಿಂದ ಆಶ್ವಾಸನೆ ನೀಡಿದ ದಾನಿಗಳಿಗೆ ಧನ್ಯವಾದಗಳನ್ನು ಸಲ್ಲಿಸಿದರು.

ಅಕಾದೆಮಿಯ ಸದ್ಯದ ಆರ್ಥಿಕ ಪರಿಸ್ಥಿತಿಯಲ್ಲಿ ಕಚೇರಿಗಾಗಿ ಬಾಡಿಗೆ ಕೊಠಡಿಯನ್ನು ಪಡೆಯಬೇಕಾಗಿದ್ದ ಔಚಿತ್ಯವನ್ನು ಶ್ರೀ ವಿ. ಸಿ. ಮಾಲಗತ್ತಿ ಪ್ರಶ್ನಿಸಿದರು. ಶ್ರೀ ಎಂ. ಬಿ. ಪಾಟೀಲರು ಹಿಂದೆ ಅಕಾದೆಮಿಯು ಸದಸ್ಯರೊಬ್ಬರ ಮನೆಯ ವಿಳಾಸವನ್ನು ಬಳಸಿಕೊಳ್ಳುತ್ತಿದ್ದು, ಅದರಿಂದ ಆ ಮನೆಯವರಿಗೆ ಆಗುತ್ತಿದ್ದ ತೊಂದರೆಗಳನ್ನು ತಿಳಿಸಿ, ಅಕಾದೆಮಿಗೆ ಪ್ರತ್ಯೇಕ ಕಛೇರಿಯ ಅಗತ್ಯ ಇದ್ದುದನ್ನು ಸ್ಪಷ್ಟಪಡಿಸಿದರು.

೧೯೯೩ರ ಸಾಲಿನ ಅಕಾದೆಮಿಯ ಅಡಿಟ್ ಆದ ಲೆಕ್ಕಪತ್ರವನ್ನು ಒಪ್ಪಬಹುದೆಂದು ಶ್ರೀ ವಿ. ಸಿ. ಮಾಲಗತ್ತಿಯವರು ಸೂಚಿಸಿದ್ದಕ್ಕೆ ತಿರುಮಲೆ ಶ್ರೀ ರಂಗಾಚಾರ್ಯ ಅನುಮೋದಿಸಿದರು. ನಂತರ ಶ್ರೀ ಎಂ. ಬಿ. ಪಾಟೀಲರು ಅಕಾದೆಮಿಯ ೧೯೯೪ನೆಯ ಸಾಲಿನ ಮುಂಗಡ ಆಯವ್ಯಯ ಪತ್ರವನ್ನು ಮಂಡಿಸಿದರು. ಅದರ ಪ್ರತಿಗಳನ್ನೂ ಸದಸ್ಯರಿಗೆ ಮೊದಲೇ ಹಂಚಲಾಗಿತ್ತು.

ರಾಯಚೂರು ಸಮ್ಮೇಳನದಲ್ಲಿ (೧೯೯೨) ಆಗಿನ ಶಿಕ್ಷಣ ಮಂತ್ರಿ ಶ್ರೀ ಎಂ. ವೀರಪ್ಪ ಮೊಯ್ಲಿ ಅವರು ಸಮ್ಮೇಳನದ ಉದ್ಘಾಟನೆಯ ಸಂದರ್ಭದಲ್ಲಿ ಸರ್ಕಾರದ ಪರವಾಗಿ ಆಶ್ವಾಸನೆ ನೀಡಿದ್ದ ೪೦,೦೦೦-೦೦ ರೂ.ಗಳ ಸಹಾಯಧನ ಇನ್ನೂ ಲಭಿಸದಿರುವ ಬಗ್ಗೆ ಶ್ರೀ ವಿ. ಸಿ. ಮಾಲಗತ್ತಿ ಅವರು ಸ್ಪಷ್ಟೀಕರಣ ಬಯಸಿದರು. ಆ ಬಗ್ಗೆ ಪ್ರಯತ್ನಗಳು ನಡೆದಿವೆಯೆಂದೂ, ಆದರೆ ಈವರೆಗೆ ಯಾವ ನೆರವೂ ಬಂದಿಲ್ಲವೆಂದೂ ಡಾ॥ ಸೂರ್ಯನಾಥ್ ಕಾಮತ್ ಅವರು ಸ್ಪಷ್ಟಪಡಿಸಿದರು. ನಗರ ಸಮಿತಿಗಳು ಮತ್ತು ಜಿಲ್ಲಾ ಸಮಿತಿಗಳ ಅಧ್ಯಕ್ಷರು ಮತ್ತು ಕಾರ್ಯದರ್ಶಿಗಳಿಗೆ ಸೂಚನೆ ನೀಡಿ ಆಯಾ ಭಾಗಗಳ ಬಾಕಿ ಸದಸ್ಯತ್ವ ಶುಲ್ಕ ವಸೂಲಿಗೆ ಶ್ರೀ ಕುಂ. ಬಾ. ಸದಾಶಿವಪ್ಪ ನೀಡಿದ ಸಲಹೆಯನ್ನು ಎಲ್ಲ ಸದಸ್ಯರೂ ಒಪ್ಪಿದರು.

ಉಳಿತಾಯ ಆಯವ್ಯಯ ಮುಂಗಡ ಪತ್ರವನ್ನು ಮಂಡಿಸುವುದು ಸರಿಯಲ್ಲವೆಂದು ಶ್ರೀ ತಿರುಮಲೆ ಶ್ರೀ ರಂಗಾಚಾರ್ಯ ಸೂಚಿಸಿದರು. ಮುಂಗಡ ಪತ್ರವನ್ನು ಅನುಮೋದಿಸಿದರು.

**ಠರಾವುಗಳು**

೧) 'ಇತಿಹಾಸ ಪರಂಪರೆ' ಉಳಿಸಿಕೊಂಡು ಬರಲು ಹಾಗೂ ಆಸಕ್ತಿ ಉಂಟುಮಾಡಲು ಯುವ ಸಂಶೋಧಕರ ಪಡೆಯನ್ನು ನಿರ್ಮಿಸುವ ದೃಷ್ಟಿಯಿಂದ ಪ್ರತೀ ಡಿಗ್ರಿ ಕಾಲೇಜಿನ ಪ್ರಾಧ್ಯಾಪಕರು ತಮ್ಮಲ್ಲಿ ಕಲಿಯುವ ವಿದ್ಯಾರ್ಥಿಗಳಲ್ಲಿ ಹೆಚ್ಚಿನ

ಆಸಕ್ತಿ ಅಭಿಮಾನ ಉಂಟುಮಾಡಲು, ವಿದ್ಯಾರ್ಥಿಗಳು ೩-೪ ತಿಂಗಳವರೆಗೆ ಸೂಟಿಗೆ ಊರಿಗೆ ಹೋಗುವಾಗ ಸೂಟಿಯಲ್ಲಿ ತಮ್ಮ ತಮ್ಮ ಊರು ಹಾಗೂ ಸುತ್ತಲಿನ ಐತಿಹಾಸಿಕ, ಸಾಮಾಜಿಕ ಪರಿಸ್ಥಿತಿಯನ್ನು ಅಭ್ಯಾಸ ಮಾಡಿ ಸೂಟಿಮುಗಿಸಿ ಬರುವಾಗ ಒಂದಾದರೂ ಪ್ರಬಂಧ ಬರೆದು ತರಲು ಕಡ್ಡಾಯ ಮಾಡಲು ವಿಶ್ವವಿದ್ಯಾಲಯಗಳ ಅಧಿಕಾರಿಗಳಲ್ಲಿ ಈ ಸಭೆ ಕೇಳಿಕೊಳ್ಳುತ್ತದೆ, ಎಂದು ಬೆಳಗಾವಿಯ ಶ್ರೀ ವಿ. ಸಿ. ಮಾಲಗತ್ತಿ ಅವರು ಮಂಡಿಸಿದ ಠರಾವನ್ನು ಧಾರವಾಡದ ಡಾ॥ ಎಂ. ವಾಯ್. ಸಾವಂತ್ ಅವರು ಅನುಮೋದಿಸಿದರು. ಸರ್ವಸದಸ್ಯರ ಅನುಮೋದನೆಯ ದೊರೆಯಿತು.

೨) ಭಾರತ ಸ್ವಾತಂತ್ರ್ಯದ ಇತಿಹಾಸ, ಅದರಲ್ಲಿ ಕನ್ನಡಿಗರ ಪಾತ್ರ ಮತ್ತು ಕರ್ನಾಟಕ ಏಕೀಕರಣ ಚಳುವಳಿಯ ಇತಿಹಾಸವನ್ನು ಎಸ್.ಎಸ್.ಎಲ್.ಸಿ.ವರೆಗಿನ ಎಲ್ಲಾ ತರಗತಿಗಳಲ್ಲಿ ಕಡ್ಡಾಯವಾಗಿ ಪಠ್ಯರೂಪದಲ್ಲಿ ಬೋಧಿಸಬೇಕು ಎಂದು ಹುಬ್ಬಳ್ಳಿಯ ಡಾ॥ ಸರೋಜಿನ ಚವಲಾರ ಮಂಡಿಸಿದ ಠರಾವನ್ನು ಧಾರವಾಡದ ಡಾ॥ ರು. ಮ. ಷಡಕ್ಷರಯ್ಯ ಅನುಮೋದಿಸಿದರು.

೩) ಇತಿಹಾಸದ ಬಗ್ಗೆ ಕುತೂಹಲ ಮತ್ತು ಪ್ರಜ್ಞೆಯನ್ನು ಮೂಡಿಸಲು ವಸ್ತು ಸಂಗ್ರಹಾಲಯಗಳು ಸಹಾಯಕವಾಗಬಲ್ಲವು. ಇದನ್ನು ಗಮನಿಸಿ ಮಠ ಮಾನ್ಯಗಳು, ದೇವಾಲಯಗಳು ಮುಂತಾದ ಸಂಸ್ಥೆಗಳು, ತಮ್ಮ ವ್ಯಾಪ್ತಿಯಲ್ಲಿ ಸ್ಥಳೀಯವಾಗಿ ವಸ್ತು ಸಂಗ್ರಹಾಲಯಗಳನ್ನು ಸ್ಥಾಪಿಸಿ ಅಭಿವೃದ್ಧಿ ಪಡಿಸಬೇಕೆಂದೂ, ಈ ವಿಷಯದಲ್ಲಿ ಇತಿಹಾಸ ಅಕಾದೆಮಿಯ ಸದಸ್ಯರು ಆಸಕ್ತಿವಹಿಸಿ ಅಂಥ ಸಂಸ್ಥೆಗಳಿಗೆ ಸಹಕಾರ ನೀಡಬೇಕೆಂದು ಅಕಾದೆಮಿಯ ಈ ಸರ್ವಸದಸ್ಯರ ಸಭೆ ಕೋರುತ್ತದೆ-ಎಂದು ಡಾ॥ ಎಚ್. ಎಸ್. ಗೋಪಾಲರಾವ್ ಮಂಡಿಸಿದ ಠರಾವನ್ನು ಡಾ॥ ಎ.ವಿ. ನರಸಿಂಹಮೂರ್ತಿ ಮತ್ತು ಡಾ॥ ಬಸವರಾಜ ಮಲಶೆಟ್ಟಿ ಅನುಮೋದಿಸಿದರು.

**ಇತರ ವಿಷಯಗಳು**

ತನ್ನ ಕಾರ್ಯವಿಸ್ತರಣೆಯ ಅಂಗವಾಗಿ ಮೈಸೂರು ವರ್ತುಲ, ಬೆಂಗಳೂರು ವರ್ತುಲ, ನೃಪತುಂಗ ಸಂಶೋಧನ ವಿಭಾಗ ಮುಂತಾಗಿ ಯೋಜನೆಗಳು ಅಸ್ತಿತ್ವದಲ್ಲಿ ಬಂದಿವೆ. ಸ್ಥಾನಿಕ ಹಾಗೂ ಪ್ರಾದೇಶಿಕ ಅಧ್ಯಯನದ ದೃಷ್ಟಿಯಿಂದ ಇವು ಯಾವ ರೀತಿ ಮುಂದುವರಿಯಬೇಕೆಂಬ ಬಗ್ಗೆ ಸಲಹೆ ಮತ್ತು ಮಾರ್ಗದರ್ಶನಗಳ ಅಗತ್ಯದ ಬಗೆಗೆ ಡಾ॥ ಶ್ರೀನಿವಾಸ ಹಾವನೂರ್ ಅವರು ಪ್ರಸ್ತಾಪ ಮಾಡಿದರು.

ಅಕಾದೆಮಿಯ ೨೦ ಜನರಿಗಿಂತ ಹೆಚ್ಚು ಸದಸ್ಯರಿರುವ ನಗರ ಮತ್ತು ಜಿಲ್ಲೆಗಳಲ್ಲಿ ಸ್ಥಳೀಯ ಸಮಿತಿಗಳನ್ನು ರಚಿಸಿಕೊಂಡು ಕಾರ್ಯನಿರ್ವಹಿಸಲು ಅವಕಾಶವಿರುವುದನ್ನು ಡಾ॥ ಸೂರ್ಯನಾಥ್ ಕಾಮತ್ ಸ್ಪಷ್ಟಪಡಿಸಿದರು. ಅದಕ್ಕೆ ಸ್ಥಳೀಯ ಸಂಘ-ಸಂಸ್ಥೆಗಳ ನೆರವನ್ನು ಪಡೆಯುವುದು ಉಚಿತ ಮತ್ತು ಅವಶ್ಯಕ ಎಂದು ಡಾ॥ ಎಚ್. ಆರ್. ರಘುನಾಥ ಭಟ್ ಸೂಚಿಸಿದರು. ಅದಕ್ಕೆ ಸರ್ವಸದಸ್ಯರು ಅನುಮೋದಿಸಿದರು.

ಸ್ಥಳೀಯ ಸಂಘ ಸಂಸ್ಥೆಗಳ ನೆರವಿನೊಡನೆ ಅಕಾದೆಮಿಯ ಸ್ಥಳೀಯ ಸಂಸ್ಥೆಗಳು ಉದ್ದೇಶಿತ ಸಾರ್ಥಕ ಕೆಲಸಗಳಿಗೆ ತೊಡಗಲು ಸಭೆ ಒಪ್ಪಿಗೆ ನೀಡಿತು. ಅಕಾದೆಮಿಯು ಸ್ಥಳೀಯ ಕಾರ್ಯಕ್ರಮಗಳಿಗೆ ನೀಡುವ ನೆರವಿನ ಬಗ್ಗೆ ಹರಿಹರದ ಶ್ರೀ ವೈ. ಎನ್. ಚಂದನ್ ಕೇಳಿದರು. ಆ ನಿಟ್ಟಿನಲ್ಲಿ ಸ್ಥಳೀಯ ಪ್ರಾಯೋಜಕರ ನೆರವು ಪಡೆಯಬಹುದೆಂದೂ, ಅಕಾದೆಮಿಯು ತನ್ನ ಸಾಮರ್ಥ್ಯಕ್ಕೆ ತಕ್ಕಂತೆ ನೈತಿಕ ನೆರವು ನೀಡಲು ಸಾಧ್ಯವಾಗಬಹುದೆಂದು ತಿಳಿಸಲಾಯಿತು.

ಸರ್ಕಾರದಲ್ಲಿರುವ 'ಸಂರಕ್ಷಿತ ನಿವೇಶನ, ಸ್ಮಾರಕಗಳ' ಪಟ್ಟಿಯನ್ನು ಪಡೆದು ಅಕಾದೆಮಿಯು ಸರ್ಕಾರದ ನೆರವಿನಿಂದ ಅಂತಹ ನಿವೇಶನ ಮತ್ತು ಸ್ಮಾರಕಗಳ ರಕ್ಷಣೆಗೆ ಪ್ರಯತ್ನಿಸಬೇಕೆಂದು ಬೆಂಗಳೂರಿನ ಶ್ರೀ ಅಲ್ಮಿತ್ರಾ ಪಟೇಲ್ ಮಾಡಿಕೊಂಡ ಮನವಿಗೆ ಸರ್ವಸದಸ್ಯರೂ ಅನುಮೋದನೆ ನೀಡಿದರು.

ಅಕಾದೆಮಿಯು ನಡೆಸುವ 'ಇತಿಹಾಸ ಪ್ರಶಸ್ತಿ' ಪರೀಕ್ಷೆಗಳ ಬಗೆಗೆ ಶ್ರೀ ವೆಂಕಟಪ್ಪ ಅವರು ಗುಲಬರ್ಗಾ ಕೇಂದ್ರದಲ್ಲಿ ವಿದ್ಯಾರ್ಥಿಗಳು ಕಡಿಮೆ ಸಂಖ್ಯೆಯಲ್ಲಿ ಹಾಜರಾಗುವ ಬಗ್ಗೆ ಕಾರಣ ಬಯಸಿ ಬಹುತೇಕ ಅದು ದೂರದಲ್ಲಿರುವುದರಿಂದ, ಮತ್ತೊಂದು ಕೇಂದ್ರದ ಅವಶ್ಯಕತೆ ಇದೆಯೆಂದು ಅಭಿಪ್ರಾಯಪಟ್ಟರು.

ಅಕಾದೆಮಿಯು ರಾಜ್ಯದ ಪ್ರಮುಖ ನಾಲ್ಕು ಕೇಂದ್ರಗಳಲ್ಲಿ ಪರೀಕ್ಷೆಗಳನ್ನು ನಡೆಸುತ್ತಿದ್ದು, ಪರೀಕ್ಷೆಯ ದಕ್ಷತೆಯನ್ನು ಉಳಿಸಿಕೊಳ್ಳಬೇಕಾಗಿರುವುದರಿಂದ ಪರೀಕ್ಷಾ ಕೇಂದ್ರಗಳನ್ನು ಹೆಚ್ಚಿಸಲು ಸಾಧ್ಯವಿಲ್ಲವೆಂದು ಡಾ॥ ಸೂರ್ಯನಾಥ್ ಕಾಮತ್ ತಿಳಿಸಿದರು.

ಪರೀಕ್ಷೆಗಳಲ್ಲಿ ಬಡ ಮತ್ತು ಅರ್ಹ ವಿದ್ಯಾರ್ಥಿಗಳಿಗೆ ಪರೀಕ್ಷಾ ಶುಲ್ಕ ವಿನಾಯತಿ ಬಗ್ಗೆ ಬೆಂಗಳೂರಿನ ಶ್ರೀ ಗಾಯತ್ರಿ ರೆಡ್ಡಿ ಪ್ರಶ್ನಿಸಿದರು. ಆ ಕೆಲಸವನ್ನು ಮಾಡಲು ಅಕಾದೆಮಿಗೆ ಸಾಧ್ಯವಿಲ್ಲವೆಂದೂ, ಆಯಾ ಕಾಲೇಜುಗಳವರೇ ಆ ಜವಾಬ್ದಾರಿ ಹೊರಬಹುದೆಂದೂ ಡಾ॥ ಸೂರ್ಯನಾಥ್ ಕಾಮತ್ ತಿಳಿಸಿದರು.

ಶಾಸನಗಳ ಸಂರಕ್ಷಣೆ ಮತ್ತು ಪ್ರಕಟಣೆಗೆ ಸಂಬಂಧಿಸಿದಂತೆ, ವಚನ ಸಾಹಿತ್ಯ ಸಂಪುಟಗಳಂತೆ ನಿಗದಿತ ಕಾಲಾವಧಿಯ ಯೋಜನೆಯೊಂದರ ಅವಶ್ಯಕತೆಯನ್ನು ಡಾ॥ ಎಂ. ಎಂ. ಕಲಬುರ್ಗಿ ಅವರು ಪ್ರಸ್ತಾಪಿಸಿದರು.

ಕರ್ನಾಟಕ ರಾಜ್ಯ ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ನಿರ್ದೇಶಕ ಡಾ॥ ಡಿ. ವಿ. ದೇವರಾಜ್ ಅವರು ಸಭೆಯಲ್ಲಿ ಸದಸ್ಯರಾಗಿ ಉಪಸ್ಥಿತರಿದ್ದುದರಿಂದ ಅವರು ತಮ್ಮ ಇಲಾಖೆಯು ಆ ಬಗ್ಗೆ ಆಸಕ್ತಿ ಹೊಂದಿದ್ದು ಜವಾಬ್ದಾರಿ ಹೊರುವ ಸಮರ್ಥ ವ್ಯಕ್ತಿಗಳು ಬೇಕೆಂದು ತಿಳಿಸಿದರು. ಆ ಬಗ್ಗೆ ಚರ್ಚೆಯಲ್ಲಿ ಶ್ರೀ ವಿ. ಸಿ. ಮಾಲಗತ್ತಿ, ಶ್ರೀ ಪಿ. ವಿ. ಕೃಷ್ಣಮೂರ್ತಿ ಅವರು ಪಾಲ್ಗೊಂಡರು. ಶಾಸನ ಸಂಪುಟಗಳ ಪ್ರಕಟಣೆಯ ಸಲುವಾಗಿ ನಂತರ ಅಕಾದೆಮಿಯ ಪದಾಧಿಕಾರಿಗಳೊಡನೆ ಡಾ॥ ಎಂ. ಎಂ. ಕಲಬುರ್ಗಿ ಅವರು ಚರ್ಚಿಸಿ ಸೂಕ್ತವಾಗಿ ತೀರ್ಮಾನಿಸಬಹುದೆಂದು ಸಭೆಯು ಸೂಚಿಸಿತು.

ಸಮ್ಮೇಳನಗಳಲ್ಲಿ ತರುಣ ಸಂಶೋಧಕರಿಗೆ ಹಿರಿಯರು ಮಾರ್ಗದರ್ಶಕರಾಗುವಂತಹ ಒಂದು ಗೋಷ್ಠಿಯ ಅವಶ್ಯಕತೆಗಳ ಬಗ್ಗೆ ಡಾ॥ ಪ್ರತಿಭಾ ಚಿಣ್ಣಪ್ಪ ಸೂಚಿಸಿದರು. ಅಕಾದೆಮಿಯಿಂದ ಸನ್ಮಾನಿತರಾಗುವ ಪಿಎಚ್. ಡಿ. ಪದವಿ ಪಡೆದವರ ಸಂಶೋಧನಾ ವಿಷಯಗಳನ್ನೂ ಅವರ ಛಾಯಾಚಿತ್ರಗಳನ್ನು ಪ್ರಕಟಿಸಬೇಕೆಂದು ಶ್ರೀ ವಿ. ಸಿ. ಮಾಲಗತ್ತಿ ಸೂಚಿಸಿದರು. ಎರಡೂ ಸೂಚನೆಗಳನ್ನು ಸಭೆಯು ಒಪ್ಪಿತು.

ಇತಿಹಾಸ ಅಕಾದೆಮಿ ಮತ್ತು ಅದರ ಪರಿಸರ ಸಾಕಷ್ಟು ಬೆಳೆದಿರುವುದರಿಂದ ಇದವರೆವಿಗೂ ಆಗಿರುವ ಸಂಶೋಧನೆ, ಪ್ರಕಟವಾಗಿರುವ ಲೇಖನಗಳು ಇತ್ಯಾದಿಗಳ ಡಾಕ್ಯುಮೆಂಟೇಶನ್ ಆಗಬೇಕು. ಇದರಿಂದ ಹೊಸ ಸಂಶೋಧಕರಿಗೆ ಹೆಚ್ಚಿನ ನೆರವಾಗುತ್ತದೆ-ಎಂದು ಡಾ॥ ಶ್ರೀನಿವಾಸ ಹಾವನೂರ್ ಅಭಿಪ್ರಾಯಪಟ್ಟರು. ಇದಕ್ಕೆ ಪೂರಕವಾಗಿ ಡಾ॥ ಎಂ. ಎಂ. ಕಲಬುರ್ಗಿ ಅವರು ತರುಣ ವಿದ್ವಾಂಸರ ಅನುಕೂಲಕ್ಕಾಗಿ ವಿವಿಧ ವಿಷಯಗಳಿಗೆ ಸಂಬಂಧಿಸಿದಂತೆ ಪ್ರಕಟಗೊಂಡಿರುವ ಸಂಶೋಧನಾ ಲೇಖನಗಳ ಸೂಚಿಯೊಂದರ ಅವಶ್ಯಕತೆಯನ್ನು ಸೂಚಿಸಿದರು. ಡಾ॥ ಎಚ್. ಆರ್. ರಘುನಾಥ ಭಟ್ ಮತ್ತು ಶ್ರೀ ವಿ. ಸಿ. ಮಾಲಗತ್ತಿ ಅವರು ಆಗಲೇಬೇಕಾದ ಈ ಕಾರ್ಯದ ಬಗ್ಗೆ ಅನುಮೋದನೆ ನೀಡಿ ಅಕಾದೆಮಿಯೇ ಕಾರ್ಯಕ್ಕೆ ಕೈಹಾಕಬೇಕೆಂದು ಸೂಚನೆ ನೀಡಿದರು. ಸರ್ವಸದಸ್ಯರು ಅನುಮೋದಿಸಿದರು. ಈ ವಿಷಯದಲ್ಲಿ ಅಕಾದೆಮಿಯ ಸಮ್ಮೇಳನಾಧ್ಯಕ್ಷರುಗಳ ನೆರವು ಪಡೆಯಬೇಕೆಂಬ ಶ್ರೀ ಲಕ್ಷ್ಮಣ್ ತೆಲಗಾವಿ ಅವರ ಸೂಚನೆಯನ್ನು ಸಭೆಯು ಅನುಮೋದಿಸಿತು.

**ಆಡಿಟರ್ ನೇಮಕ**

ಈವರೆಗೆ ಅಕಾದೆಮಿಯ ಲೆಕ್ಕ ಪತ್ರಗಳನ್ನು ಆಡಿಟ್ ಮಾಡುತ್ತಿರುವ ಶ್ರೀ ಕೆ. ವಿ. ಆಚಾರ್ಯ ಮತ್ತು ಕಂಪನಿಯವರೇ ಮುಂದಿನ ವರ್ಷಕ್ಕೂ ಅಂದರೆ ೧೯ನೇ ಸಮ್ಮೇಳನೆಯ ಸಾಲಿಗೂ ಮುಂದುವರಿಯಬಹುದೆಂದು ಡಾ॥ ಎಚ್. ಎಸ್. ಗೋಪಾಲರಾವ್ ಅವರು ಮಾಡಿದ ಸೂಚನೆಯನ್ನು ಶ್ರೀ ತಿರುಮಲೆ ಶ್ರೀ ರಂಗಾಚಾರ್ಯ ಅನುಮೋದಿಸಿದರು. ಸರ್ವಸದಸ್ಯರ ಅನುಮೋದನೆಯೂ ದೊರೆಯಿತು. ಶ್ರೀ ಕೆ. ವಿ. ಆಚಾರ್ಯ ಮತ್ತು ಕಂಪನಿಯವರಿಗೆ ಈ ವರ್ಷ ೧೦೦೦ ರೂ.ಗಳ ಆಡಿಟ್ ಶುಲ್ಕ ನೀಡಬೇಕೆಂಬ ಶ್ರೀ ಎಂ. ಬಿ. ಪಾಟೀಲರ ಸೂಚನೆಗೆ ಸರ್ವಸದಸ್ಯರು ಒಪ್ಪಿದರು.

ಕೋಶಾಧಿಕಾರಿ ಶ್ರೀ ಎಂ. ಬಿ. ಪಾಟೀಲರೇ ಸ್ವಯಂ ಲೆಕ್ಕಪರಿಶೋಧನಾ ಸಾಮರ್ಥ್ಯ ಹೊಂದಿರುವುದರಿಂದ ಅಂತರಿಕ ಆಡಿಟರ್ ಅವರ ಅವಶ್ಯಕತೆ ಇಲ್ಲವೆಂದು ಸಭೆಯು ಅಭಿಪ್ರಾಯಪಟ್ಟಿತು.

**ಕಾರ್ಯಕಾರೀ ಸಮಿತಿಯ ಆಯ್ಕೆ**

ಅಕಾದೆಮಿಯ ಸದಸ್ಯರಲ್ಲೊಬ್ಬರಾದ ಶ್ರೀ ನೀರಲಗಿ ಅವರು ೧೯೯೪-೯೫ ಮತ್ತು ೧೯೯೫-೯೬ನೇ ಸಾಲಿನ ಕಾರ್ಯಕಾರಿ ಸಮಿತಿಗೆ ತಾವು ಸಿದ್ಧಪಡಿಸಿದ್ದ ೨೦ ಜನರ ಪಟ್ಟಿಯೊಂದನ್ನು ಕಾರ್ಯಕಾರೀ ಸಮಿತಿಯ ಸದಸ್ಯಸ್ಥಾನಕ್ಕೆ ಸೂಚಿಸಿದರು (ಆಯ್ಕೆಯಾದವರ ಪಟ್ಟಿ ಕೊನೆಯಲ್ಲಿ ಲಗತ್ತಾಗಿದೆ). ಸರ್ವಸದಸ್ಯರೂ ಆ ಪಟ್ಟಿಯಲ್ಲಿದ್ದವರ ಹೆಸರುಗಳನ್ನು ಅನುಮೋದಿಸಿದರು. ಇನ್ನು ಮೂವರು ಸದಸ್ಯರನ್ನು ನಾಮಕರಣ ಮಾಡಲು ಕಾರ್ಯಾಕಾರೀ ಸಮಿತಿಗೆ ಅವಕಾಶವಿರುವುದನ್ನು ಸಭೆಗೆ ತಿಳಿಸಲಾಯಿತು.

ಅಕಾದೆಮಿಯ ಮುಂದಿನ ಅಂದರೆ ೯ನೆಯ ವಾರ್ಷಿಕ ಸಮ್ಮೇಳನಕ್ಕೆ ಬೆಳಗಾವಿಯ ಶ್ರೀ ನಾಗನೂರು ಮಠದ ಪರವಾಗಿ ಆಹ್ವಾನವನ್ನು ಶ್ರೀ ಮಾಲಗತ್ತಿ ಅವರು ತಂದಿರುವುದನ್ನು ತಿಳಿಸಿದಾಗ ಸರ್ವಸದಸ್ಯರೂ ಅದನ್ನು ಸಂತೋಷದಿಂದ ಸ್ವೀಕರಿಸಿದರು.

ಸಭೆಯ ಅಧ್ಯಕ್ಷತೆ ವಹಿಸಿದ್ದ ಅಕಾದೆಮಿಯ ಅಧ್ಯಕ್ಷರಾದ ಪ್ರೊ॥ ಜಿ. ಎಸ್. ದೀಕ್ಷಿತ್ ಅವರು ಅಕಾದೆಮಿಯ ಸಾರ್ಥಕ ಕಾರ್ಯ ನಡೆಸಲು ನೆರವಾಗುತ್ತಿರುವ ಎಲ್ಲ ಸದಸ್ಯರಿಗೆ ಮತ್ತು ಸೂಕ್ತ ಸಲಹೆ ಸೂಚನೆಗಳನ್ನು ನೀಡಿ ಸರ್ವಸದಸ್ಯರ ಸಭೆಯನ್ನು ಸಾರ್ಥಕಗೊಳಿಸಿದ್ದಕ್ಕೆ ಎಲ್ಲ ಸದಸ್ಯರಿಗೂ ಅಭಿನಂದನೆಗಳನ್ನು ಸಲ್ಲಿಸಿದರು.

ಸಭಾಧ್ಯಕ್ಷತೆ ವಹಿಸಿದ್ದ ಪ್ರೊ॥ ಜಿ. ಎಸ್. ದೀಕ್ಷಿತ್ ಮತ್ತು ಸಭೆಯಲ್ಲಿ ಹಾಜರಿದ್ದು ಸೂಕ್ತ ಸಲಹೆ ಸೂಚನೆಗಳನ್ನು ನೀಡಿದ ಸರ್ವಸದಸ್ಯರಿಗೂ ಪ್ರಧಾನ ಕಾರ್ಯದರ್ಶಿ ಡಾ॥ ಎಚ್. ಎಸ್. ಗೋಪಾಲರಾವ್ ವಂದನೆ ಸಲ್ಲಿಸಿದರು.

**ಪದಾಧಿಕಾರಿಗಳ ಆಯ್ಕೆ**

ದಿನಾಂಕ ೧೦-೭-೧೯೯೪, ಭಾನುವಾರ ಸಂಜೆ ೬-೩೦ಕ್ಕೆ ಅಕಾದೆಮಿಯ ೮ನೆಯ ವಾರ್ಷಿಕ ಸಮ್ಮೇಳನದ ಸಭಾಸ್ಥಾನದಲ್ಲೆ (ಸೊಂಡೂರಿನ ಆದರ್ಶ ಸಮುದಾಯ ಭವನ) ಹೊಸದಾಗಿ ಆಯ್ಕೆಯಾದ ಕಾರ್ಯಕಾರೀ ಸಮಿತಿಯ ಸದಸ್ಯರು ಪ್ರೊ॥ ಜಿ. ಎಸ್. ದೀಕ್ಷಿತ್ ಅವರ ಅಧ್ಯಕ್ಷತೆಯಲ್ಲಿ ಸಭೆ ಸೇರಿ, ಮುಂದಿನ ಎರಡು ವರ್ಷಗಳಿಗೆ ಕೆಳಕಂಡ ಪದಾಧಿಕಾರಿಗಳನ್ನು ಸರ್ವಾನುಮತದಿಂದ ಆಯ್ಕೆಮಾಡಿದರು.

| | | |
|---|---|---|
| ೧) | ಪ್ರೊ॥ ಜಿ. ಎಸ್. ದೀಕ್ಷಿತ್, ಬೆಂಗಳೂರು | ಅಧ್ಯಕ್ಷರು |
| ೨) | ಡಾ॥ ಡಿ. ವಿ. ದೇವರಾಜ್, ಮೈಸೂರು | ಉಪಾಧ್ಯಕ್ಷರು |
| ೩) | ಶ್ರೀ ಎಂ. ಜಿ. ನಾಗರಾಜ್, ಬೆಂಗಳೂರು | ಉಪಾಧ್ಯಕ್ಷರು |
| ೪) | ಡಾ॥ ಎಚ್. ಎಸ್. ಗೋಪಾಲರಾವ್, ಅರಿಶಿನಕುಂಟೆ | ಪ್ರಧಾನ ಕಾರ್ಯದರ್ಶಿ |
| ೫) | ಡಾ॥ ಎಚ್. ಆರ್. ರಘುನಾಥ ಭಟ್, ಧಾರವಾಡ | ಕಾರ್ಯದರ್ಶಿ |
| ೬) | ಡಾ॥ ದೇವರಕೊಂಡಾರೆಡ್ಡಿ, ಬೆಂಗಳೂರು | ಕಾರ್ಯದರ್ಶಿ |
| ೭) | ಶ್ರೀ ಎಂ. ಬಿ. ಪಾಟೀಲ್, ಬೆಂಗಳೂರು | ಕೋಶಾಧಿಕಾರಿ |
| ೮) | ಡಾ॥ ಸೂರ್ಯನಾಥ್ ಕಾಮತ್, ಬೆಂಗಳೂರು | ಸಂಪಾದಕ |
| ೯) | ಡಾ॥ ರು. ಮ. ಷಡಕ್ಷರಯ್ಯ, ಧಾರವಾಡ | ಸದಸ್ಯರು |
| ೧೦) | ಶ್ರೀ ವಿ. ಸಿ. ಮಾಲಗತ್ತಿ, ಬೆಳಗಾವಿ | ಸದಸ್ಯರು |
| ೧೧) | ಶ್ರೀ ಕುಂ. ಬಾ. ಸದಾಶಿವಪ್ಪ, ಹರಪನಹಳ್ಳಿ | ಸದಸ್ಯರು |
| ೧೨) | ಶ್ರೀ ಕೆ. ಬಿ. ಶಿವತಾರಕ್, ಬ್ರಹ್ಮಾವರ | ಸದಸ್ಯರು |
| ೧೩) | ಡಾ॥ ಶ್ರೀನಿವಾಸ ಹಾವನೂರ, ಪುಣೆ | ಸದಸ್ಯರು |
| ೧೪) | ಡಾ॥ ಸಿ. ಎಸ್. ಪಾಟೀಲ್, ಮೈಸೂರು | ಸದಸ್ಯರು |

೧೫) ಶ್ರೀ ಎಚ್. ಎಂ. ಸಿದ್ಧನಗೌಡರ್, ಬೆಂಗಳೂರು ಸದಸ್ಯರು
೧೬) ಡಾ॥ ಎ. ವಿ. ನರಸಿಂಹಮೂರ್ತಿ, ಮೈಸೂರು ಸದಸ್ಯರು
೧೭) ಡಾ॥ ಕೆಳದಿ ವೆಂಕಟೇಶ್ ಜೋಯಿಸ್, ಕೆಳದಿ ಸದಸ್ಯರು
೧೮) ಶ್ರೀ ಲಕ್ಷ್ಮಣ್ ತೆಲಗಾವಿ, ಹಂಪಿ ಸದಸ್ಯರು
೧೯) ಡಾ॥ ಜ್ಯೋತಿಬಾಯಿ, ಬೆಂಗಳೂರು ಸದಸ್ಯರು
೨೦) ಡಾ॥ ಎಂ. ಬಿ. ನೇಗಿನಹಾಳ ಸದಸ್ಯರು

## ಐತಿಹಾಸಿಕ ಪರಂಪರೆ ಉಳಿಸಿ ಕಾರ್ಯಕ್ರಮ
## ಐತಿಹಾಸಿಕ ಪರಂಪರೆ ಉಳಿಸಿ ಸಪ್ತಾಹ ಕಾರ್ಯಕ್ರಮದ ವರದಿ-೧೯೯೪

ಕರ್ನಾಟಕ ಇತಿಹಾಸ ಅಕಾದೆಮಿಯು ಕಳೆದ ಐದು ವರ್ಷಗಳಿಂದ ರಾಜ್ಯದಾದ್ಯಂತ ನಡೆಸಿಕೊಂಡು ಬಂದಿರುವ 'ಐತಿಹಾಸಿಕ ಪರಂಪರೆ ಉಳಿಸಿ' ಸಪ್ತಾಹ ಕಾರ್ಯಕ್ರಮವನ್ನು ಈ ವರ್ಷವೂ ಎಂದಿನಂತೆ ಆಗಸ್ಟ್ ೧೬ರಿಂದ ೨೪ರ ಅವಧಿಯಲ್ಲಿ ಹಮ್ಮಿಕೊಳ್ಳಲಾಯಿತು. ಕಳೆದ ವರ್ಷದಂತೆ ಈ ವರ್ಷವೂ ಕರ್ನಾಟಕ ಸರ್ಕಾರದ ಪ್ರಾಚ್ಯವಸ್ತು ಮತ್ತು ವಸ್ತು ಸಂಗ್ರಹಾಲಯ ನಿರ್ದೇಶನಾಲಯವು ಕಾರ್ಯಕ್ರಮಕ್ಕಾಗಿ ಆರ್ಥಿಕ ಸಹಾಯ ನೀಡಿತು.

'ಐತಿಹಾಸಿಕ ಪರಂಪರೆ ಉಳಿಸಿ' ಸಪ್ತಾಹ ಕಾರ್ಯಕ್ರಮದ ಅಂಗವಾಗಿ ಅಕಾದೆಮಿಯ ಎಲ್ಲಾ ಸದಸ್ಯರಿಗೆ ಮತ್ತು ಕರ್ನಾಟಕದ ಬಹುತೇಕ ಕಾಲೇಜುಗಳ ಪ್ರಾಂಶುಪಾಲರಿಗೆ ಕಾರ್ಯಕ್ರಮದ ಉದ್ದೇಶ, ಸ್ವರೂಪ ಇತ್ಯಾದಿಗಳನ್ನು ವಿವರಿಸಿ, ನಮ್ಮೊಡನೆ ಕೈಗೂಡಿಸಲು ಮನವಿಯೊಂದನ್ನು ದಿನಾಂಕ ೩೦-೭-೧೯೯೪ರಂದು ಬಿಡುಗಡೆ ಮಾಡಲಾಯಿತು.

ಆಗಸ್ಟ್ ೧೯೯೪ರ ಮೊದಲ ವಾರದಲ್ಲಿ ಕಲಾವಿದ ಶ್ರೀ ಕಮಲೇಶ್ ಅವರು ಕಾರ್ಯಕ್ರಮದ ಹಿಂದಿರುವ ಅಕಾದೆಮಿಯ ಗುರಿ ಮತ್ತು ಉದ್ದೇಶಗಳು ವ್ಯಕ್ತವಾಗುವಂತೆ ಸೂಕ್ತ ಮತ್ತು ಆಕರ್ಷಕ ಭಿತ್ತಿಪತ್ರವನ್ನು ಸಿದ್ಧಪಡಿಸಿಕೊಟ್ಟರು. ಲಕ್ಷ್ಮಿ ಮುದ್ರಣಾಲಯದವರು ಭಿತ್ತಿಪತ್ರಗಳನ್ನು ಮುದ್ರಿಸಿಕೊಟ್ಟರು.

ದಿನಾಂಕ ೧೧-೮-೧೯೯೪ರಂದು ಕಾರ್ಯಕ್ರಮದ ಸಂಬಂಧ ಪೂರ್ವಭಾವಿಯಾಗಿ ಪತ್ರಿಕಾಗೋಷ್ಠಿಯೊಂದನ್ನು ಬೆಂಗಳೂರಿನಲ್ಲಿ ಏರ್ಪಡಿಸಲಾಯಿತು.

ಪತ್ರಿಕಾಗೋಷ್ಠಿಯ ಕರೆ ಮತ್ತು ಜೊತೆಗೆ ಇರಿಸಿದ್ದ ಮನವಿಯನ್ನು ಗಮನಿಸಿಯೇ ತಮಕೂರಿನ 'ತುಮಕೂರು ವಾರ್ತೆ' ಭದ್ರಾವತಿಯ 'ಭುವನವಾರ್ತೆ' ಮೈಸೂರಿನ 'ವಿಜಯ' ಪತ್ರಿಕೆಗಳು ಅಕಾದೆಮಿಯ ಉದ್ದೇಶವನ್ನು ಪ್ರಚಾರ ಮಾಡಿದವು. ದಿ: ೧-೮-೧೯೯೪ರಂದು ಪತ್ರಿಕಾಗೋಷ್ಠಿಯಲ್ಲಿ ಬೆಂಗಳೂರಿನ ಪ್ರಮುಖ ಪತ್ರಿಕೆಗಳ ಪ್ರತಿನಿಧಿಗಳು ಹಾಜರಿದ್ದರು. ದಿನಾಂಕ: ೧೨-೮-೧೯೯೪ರಂದು 'ಪ್ರಜಾಮಣಿ' ಪತ್ರಿಕೆಯು ವಿಶೇಷವಾಗಿ ಐತಿಹಾಸಿಕ ಪರಂಪರೆಯ ರಕ್ಷಣೆಯ ಮಹತ್ವದ ಬಗೆಗೆ ಅರಿವು ಮೂಡಿಸುವ ಲೇಖನ ಪ್ರಕಟಿಸಿ ಅಕಾದೆಮಿಯ ಕೆಲಸಕ್ಕೆ ಪ್ರೋತ್ಸಾಹ ನೀಡಿತು.

ದಿನಾಂಕ ೧೬-೮-೧೯೯೪ ರಂದು ಬೆಂಗಳೂರಿನ ವೆಂಕಟಪ್ಪ ಕಲಾಶಾಲೆಯಲ್ಲಿ 'ಐತಿಹಾಸಿಕ ಪರಂಪರೆ ಉಳಿಸಿ' ಕಾರ್ಯಕ್ರಮದ ಉದ್ಘಾಟನಾ ಸಮಾರಂಭವು ನಡೆಯಿತು.

ಭಾರತೀಯ ಪುರಾತತ್ವ ಸರ್ವೇಕ್ಷಣಾ ಇಲಾಖೆಯ ನಿವೃತ್ತ ಮಹಾನಿರ್ದೇಶಕ ಹಾಗೂ ಖ್ಯಾತ ವಿದ್ವಾಂಸ ಡಾ॥ ಎಸ್. ಆರ್. ರಾವ್ ಕಾರ್ಯಕ್ರಮವನ್ನು 'ಭಿತ್ತಿ ಪತ್ರ'ವನ್ನು ಅನಾವರಣಗೊಳಿಸುವುದರ ಮೂಲಕ ಉದ್ಘಾಟಿಸಿ, ಜನತೆಗೆ ಸೂಕ್ತ ಮಾರ್ಗದರ್ಶನ ನೀಡಿ ಇತಿಹಾಸ ಮತ್ತು ಸಂಸ್ಕೃತಿಯ ಪರಂಪರೆಯ ಕುರುಹಾಗಿ ಉಳಿದಿರುವ ಎಲ್ಲಾ ವಸ್ತು, ಕಟ್ಟಡ, ದಾಖಲೆಗಳನ್ನೂ ಉಳಿಸಬೇಕಾದ ಅಗತ್ಯವನ್ನು ಒತ್ತಿ ಹೇಳಿ, ಧರ್ಮಸ್ಥಳದ ಧರ್ಮಾಧಿಕಾರಿ ಶ್ರೀ ವೀರೇಂದ್ರ ಹೆಗಡೆ ಅವರು

ಹಮ್ಮಿಕೊಂಡಿರುವಂತಹ ಜೀರ್ಣೋದ್ಧಾರದ ಮೂಲಕ ದೇವಾಲಯಗಳ ಸಂರಕ್ಷಣೆಯ ಕೆಲಸವನ್ನು ಮತ್ತಿನ್ನೂ ಅನೇ ಧರ್ಮಸಂಸ್ಥೆಗಳು ಮತ್ತು ಆಸಕ್ತ ಸಂಘ ಸಂಸ್ಥೆಗಳು ಕೈಗೆತ್ತಿಕೊಳ್ಳಬೇಕೆಂದು ಮನವಿ ಮಾಡಿದರು.

ಸಮಾರಂಭಕ್ಕೆ ಮುಖ್ಯ ಅತಿಥಿಯಾಗಿ ಖ್ಯಾತ ಚಲನ ಚಿತ್ರ ನಟ ಶ್ರೀ ಶಿವರಾಂ ಆಗಮಿಸಿದ್ದರು. ಸಭೆಯ ಅಧ್ಯಕ್ಷತೆಯನ್ನು ಕರ್ನಾಟಕ ರಾಜ್ಯ ಪುರಾತತ್ವ ಮತ್ತು ವಸ್ತು ಸಂಗ್ರಹಾಲಯ ನಿರ್ದೇಶನಾಲಯದ ನಿರ್ದೇಶಕ ಡಾ || ಡಿ. ವಿ. ದೇವರಾಜ್ ಅವರು ವಹಿಸಿದ್ದರು. ಅವರು ತಮ್ಮ ಇಲಾಖೆಯು ಈ ವರೆಗೆ ರಕ್ಷಿಸಿರುವ ಶಿಥಿಲತೆಯ ಹಂತದಲ್ಲಿದ್ದ ದೇವಾಲಯಗಳ ಮತ್ತು ಕಟ್ಟಡಗಳ ಪರಿಚಯ ಮಾಡಿದರು. ಅದಕ್ಕೆ ಪೂರಕವಾಗಿ ಅವರ ಇಲಾಖೆಯ ಛಾಯಾಚಿತ್ರ ಪ್ರದರ್ಶನವನ್ನೂ ಏರ್ಪಡಿಸಿತ್ತು. ಸಭೆಯಲ್ಲಿ ಅಕಾದೆಮಿಯ ಅಧ್ಯಕ್ಷ ಡಾ || ಜಿ. ಎಸ್. ದೀಕ್ಷಿತ್ ಉಪಸ್ಥಿತರಿದ್ದರು.

ಅಕಾದೆಮಿಯ ಕೋರಿಕೆಯಂತೆ ಉತ್ಸಾಹೀ ಮತ್ತು ಕ್ರಿಯಾಶೀಲ ಸದಸ್ಯರು ಕೆಳಕಂಡ ಸ್ಥಳಗಳಲ್ಲಿ 'ಐತಿಹಾಸಿಕ ಪರಂಪರೆ ಉಳಿಸಿ' ಕಾರ್ಯಕ್ರಮವನ್ನು ಆಚರಿಸಿದ ವರದಿಗಳು ಬಂದಿವೆ. ಕೆಲವೆಡೆಗಳಲ್ಲಿ ಕಾರ್ಯಕ್ರಮಗಳು ನಡೆದಿರುವುದಾದರೂ, ಸ್ಥಳೀಯ ಸದಸ್ಯರಿಂದ ವರದಿಗಳು ಲಭ್ಯವಿಲ್ಲ. ಅಕಾದೆಮಿಯು ಕಾರ್ಯಕ್ರಮವನ್ನು ಸಪ್ತಾಹವನ್ನಾಗಿ ಆಚರಿಸಲು ಕರೆ ನೀಡಿದ್ದರೂ, ಸದಸ್ಯರ ಉತ್ಸಾಹ ಮತ್ತು ಕಾಲಾವಕಾಶದ ಅನುಕೂಲತೆಯ ಕಾರಣಗಳಿಂದ ಸೆಪ್ಟೆಂಬರ್ ಅಂತ್ಯದವರೆಗೂ ಕಾರ್ಯಕ್ರಮಗಳು ನಡೆದಿವೆ.

೧೬-೮-೧೯೯೪ - ಸರ್ಕಾರಿ ಪ್ರೌಢಶಾಲೆ, ಶಿವನಹಳ್ಳಿ, ಕನಕಪುರ ತಾಲ್ಲೂಕು

೧೬-೮-೧೯೯೪ - ಪ್ರಾಚೀನ ಭಾರತೀಯ ಇತಿಹಾಸ ಮತ್ತು ಪುರಾತತ್ವ ಇಲಾಖೆ, ಮಾನಸಗಂಗೋತ್ರಿ, ಮೈಸೂರು

೧೭-೮-೧೯೯೪ - ಶ್ರೀ ನಿರ್ವಾಣಸ್ವಾಮಿ ವಸತಿ ಪ್ರೌಢಶಾಲೆ, ಶ್ರೀ ದೇಗುಲಮಠ, ಕನಕಪುರ

೧೮-೮-೧೯೯೪ - ಸೆಂಟ್ ಮೈಕಲ್ ಪ್ರೌಢಶಾಲೆ, ಕನಕಪುರ

೧೯-೮-೧೯೯೪ - ಗ್ರಾಮ ಪಂಚಾಯತಿ, ಕಡಕೋಳ, ಧಾರವಾಡ ಜಿಲ್ಲೆ

೧೮-೮-೧೯೯೪ - ಮೈಸೂರು, ವಯಸ್ಕರ ಶಿಕ್ಷಣ ಇಲಾಖೆಯ ಕಾರ್ಯದರ್ಶಿಗಳು ಜಿಲ್ಲೆಯ ಎಲ್ಲಾ ತಾಲ್ಲೂಕುಗಳಲ್ಲೂ 'ಐತಿಹಾಸಿಕ ಪರಂಪರೆ ಉಳಿಸಿ' ಸಪ್ತಾಹದ ಭಿತ್ತಿ ಪತ್ರಗಳನ್ನು ಹಂಚಿದರು.

೧೮-೮-೧೯೯೪ - ಮೈಸೂರು ವಿಶ್ವವಿದ್ಯಾನಿಲಯದ ರಾಷ್ಟ್ರೀಯ ಸೇವಾ ಯೋಜನೆಯ ಸಂಯೋಜಕರಾದ ಬಿ. ಕೆ. ಶಿವಣ್ಣ, ನಗರದ ಎಲ್ಲಾ ಕಾಲೇಜುಗಳಲ್ಲಿ ಮತ್ತು ವಿದ್ಯಾರ್ಥಿನಿಲಯಗಳಲ್ಲಿ ಭಿತ್ತಿ ಪತ್ರಗಳನ್ನು ಪ್ರದರ್ಶಿಸಿದರು. ಅವರ ಜೊತೆಗೆ ಎನ್. ಎಸ್. ರಂಗರಾಜು ಇದ್ದರು.

೧೭-೮-೧೯೯೪ - ರಿಂದ ೨೪-೮-೧೯೯೪-ಮೈಸೂರಿನ ಮಾನಸಗಂಗೋತ್ರಿಯ ಪುರಾತತ್ವ ಇಲಾಖೆಯ ಎಲ್ಲಾ ತರಗತಿಗಳಲ್ಲಿ ವಿದ್ಯಾರ್ಥಿಗಳಲ್ಲಿ ಐತಿಹಾಸಿಕ ಪರಂಪರೆ ಉಳಿಸಿ ವಿಷಯದ ಬಗೆಗೆ ತಿಳಿಸಲಾಯಿತು.

೧೬-೮-೧೯೯೪ - ರಿಂದ ೨೨-೮-೧೯೯೪-ಶ್ರೀ ಶಂಕರ ಮಹಾವಿದ್ಯಾಲಯ, ನವಲಗುಂದ (ಭಿತ್ತಿ ಪತ್ರಗಳ ಪ್ರದರ್ಶನ, ವಿವಿಧ ಸ್ಪರ್ಧೆಗಳು ಮತ್ತು ಬಹುಮಾನ ವಿತರಣೆ)

೨೦-೮-೧೯೯೪ - ಮಾಧ್ಯಮಿಕ ಶಾಲೆ, ಅರೆತುರುಹಟ್ಟಿ, ನವಲಗುಂದ ತಾಲ್ಲೂಕು

೨೦-೮-೧೯೯೪ - ಮಾಧ್ಯಮಿಕ ಶಾಲೆ, ತಲವಡಿ, ನವಲಗುಂದ ತಾಲ್ಲೂಕು,

೨೨-೮-೧೯೯೪ - ನಾಗಲಿಂಗೇಶ್ವರ ಪ್ರೌಢಶಾಲೆ, ನವಲಗುಂದ

೨೨-೮-೧೯೯೪ - ಪ್ರೌಢಶಾಲೆ, ಸೊರಟೂರ

೨೨-೮-೧೯೯೪ - ಕಿರಿಯ ಕಾಲೇಜು, ಮೇಲುಕೋಟೆ

೨೩-೮-೧೯೯೪ - ಗ್ರಾಮಾಂತರ ಬಾಲಕಿಯರ ಪ್ರೌಢಶಾಲೆ, ಕನಕಪುರ

೨೩-೮-೧೯೯೪ - ಎಲೀಶಿರೂರು, ಧಾರವಾಡ ಜಿಲ್ಲೆ

೨೩-೮-೧೯೯೪ - ಮುಳಗುಂದ, ಧಾರವಾಡ ಜಿಲ್ಲೆ

೨೩-೮-೧೯೯೪ - ಹರ್ತಿ, ಧಾರವಾಡ ಜಿಲ್ಲೆ

೨೩-೮-೧೯೯೪ - ಬೆಳಧಡಿ, ಧಾರವಾಡ ಜಿಲ್ಲೆ

೨೩-೮-೧೯೯೪ - ಕಲ್ಮಠ ಶ್ರೀ ಚನ್ನಬಸವಸ್ವಾಮಿ ಮಹಿಳಾ ಮಹಾವಿದ್ಯಾಲಯ, ಗಂಗಾವತಿ

೨೪-೮-೧೯೯೪ - ಗ್ರಾಮಾಂತರ ಬಾಲಕರ ಪ್ರೌಢಶಾಲೆ, ಕನಕಪುರ

೨೩-೮-೧೯೯೪ - ಕಳಸಾಪುರ, ಧಾರವಾಡ ಜಿಲ್ಲೆ

೨೫-೮-೧೯೯೪ - ಸರ್ಕಾರಿ ಬಾಲಕಿಯರ ಪ್ರೌಢಶಾಲೆ, ಕನಕಪುರ

೨೪-೮-೧೯೯೪ - ನಾಗಾವಿ, ಧಾರವಾಡ ಜಿಲ್ಲೆ

೩೭-೮-೧೯೯೪ - ಪುರಸಭಾಪ್ರೌಢಶಾಲೆ, ಕನಕಪುರ

೨೮-೯-೧೯೯೪ - ಭಾರತೀಯ ಕರ್ನಾಟಕ ಸಂಘ, ಬೆಂಗಳೂರು-೩೮

೦೮-೯-೧೯೯೪ - ಯಳಂದೂರು

೧೨-೯-೧೯೯೪ - ಸರ್ಕಾರೀ ಪದವಿ ಪೂರ್ವ ಕಾಲೇಜು, ಹನುಮಸಾಗರ (ಕುಷ್ಟಗಿ) (ಸ್ಥಳೀಯ ಕಾಲೇಜು ವಿದ್ಯಾರ್ಥಿಗಳು ರಾಷ್ಟ್ರೀಯ ಸೇವಾ ಯೋಜನೆಯ ಆಶ್ರಯದಲ್ಲಿ ಚಂದಾಲಿಂಗೇಶ್ವರ ದೇವಸ್ಥಾನದ ಒಳ ಮತ್ತು ಹೊರಭಾಗಗಳ ಶುದ್ಧೀಕರಣದ ಸಾರ್ಥಕ ಕಾರ್ಯ)

೧೩-೯-೧೯೯೪ - ಬಿಜೈ ಶ್ರೀಮಂತಿಬಾಯಿ ಮೆಮೋರಿಯಲ್ ಸರಕಾರೀ ಮ್ಯೂಸಿಯಂ, ಮಂಗಳೂರು,

೧೩-೯-೧೯೯೪ - ವಿದ್ಯಾಭಾರತೀ ಪ್ರೌಢಶಾಲೆ, ಮಂಡ್ಯ

೧೩-೯-೧೯೯೪ - ಬಾಲಕರ ಸರ್ಕಾರೀ ಕಾಲೇಜು, ಮಂಡ್ಯ

೧೩-೯-೧೯೯೪ - ಮಹಿಳೆಯರ ಸರ್ಕಾರೀ ಕಾಲೇಜು, ಮಂಡ್ಯ

೨೨-೯-೧೯೯೪ - ಎನ್. ಎಂ. ಕೆ. ಆರ್. ವಿ. ಮಹಿಳಾ ಕಾಲೇಜು, ಬೆಂಗಳೂರು

೨೭-೯-೧೯೯೪ - ಶಹಾಜಿ ಸ್ಮಾರಕ ಸಮಿತಿ, ಹೊದಿಗ್ಗೆರೆ

೭-೧೦-೧೯೯೪ - ವಿವೇಕಾನಂದ ಕಾಲೇಜು, ಬೆಂಗಳೂರು

ಧಾರವಾಡ ವಿಶ್ವವಿದ್ಯಾಲಯದ ಮಾನವಿಕ ಅಧ್ಯಯನಕ್ಕೆ ಸಂಬಂಧಿಸಿದ ಹಲವು ವಿಭಾಗಗಳು 'ಐತಿಹಾಸಿಕ ಪರಂಪರೆ ಉಳಿಸಿ' ಸಪ್ತಾಹದ ಅಂಗವಾಗಿ ಕಾರ್ಯಕ್ರಮಗಳನ್ನು ಹಮ್ಮಿಕೊಂಡು ಯಶಸ್ವಿಯಾಗಿ ನಡೆಸಿವೆ ಎಂದು ತಿಳಿದಿದೆ. ರಾಯಚೂರು ಜಿಲ್ಲೆಯ ಕೊಪ್ಪಳದಲ್ಲಿ ೧೯೯೩ರ ಮಾರ್ಚ್‌ನಲ್ಲಿ ಐತಿಹಾಸಿಕ ಪರಂಪರೆ ಉಳಿಸಿ ಕಾರ್ಯಕ್ರಮ ನಡೆದ ವರದಿಗಳು ಬಂದಿವೆ. ಆಗ ಶ್ರೀ ಜಿ. ವಿ. ಕೊಪ್ಪಳ ಅವರು ಛಾಯಾಚಿತ್ರಗಳ ಪ್ರದರ್ಶನ ಏರ್ಪಡಿಸಿದ್ದರೆಂದು ತಿಳಿದು ಬಂದಿದೆ. ಅಂತೆಯೇ ಇನ್ನೂ ಹಲವಾರು ಸ್ಥಳಗಳಲ್ಲಿ ಕಾರ್ಯಕ್ರಮಗಳು ನಡೆದಿರುವುದು ತಿಳಿದಿದೆಯಾದರೂ ವರದಿಗಳನ್ನು ನಿರೀಕ್ಷಿಸಲಾಗಿದೆ.

## ಇತಿಹಾಸ ಪ್ರಶಸ್ತಿ ಪರೀಕ್ಷೆಗಳು

ದಿನಾಂಕ ೧೩-೩-೧೯೯೪ ರಂದು, ಪ್ರತೀ ವರ್ಷದಂತೆ ಈ ವರ್ಷವೂ ಅಕಾದೆಮಿಯು ದ್ವಿತೀಯ ಪಿ. ಯು. ಇತಿಹಾಸ ವಿದ್ಯಾರ್ಥಿಗಳಿಗೆ ಇತಿಹಾಸ ಪ್ರಶಸ್ತಿ ಪರೀಕ್ಷೆಗಳನ್ನು ನಾಲ್ಕು ಕೇಂದ್ರಗಳಲ್ಲಿ ನಡೆಸಿತು. ಪರೀಕ್ಷೆಗಳಿಗೆ ೩೯೩೧ ಜನ ವಿದ್ಯಾರ್ಥಿಗಳು ಅರ್ಜಿ ನೋಂದಾಯಿಸಿದ್ದರು. ಪ್ರಶಸ್ತಿ ಪರೀಕ್ಷೆಯಲ್ಲಿ ರೂ. ೧೦೦೦ಗಳ ಪ್ರಥಮ ಬಹುಮಾನವನ್ನು ನ್ಯಾಷನಲ್ ಕಾಲೇಜು, ಬೆಂಗಳೂರಿನ ಜಿ. ವಿ. ವೈದ್ಯನಾಥ್, ಹಾಗೂ ೨ನೇ ಬಹುಮಾನವನ್ನು ಕಿತ್ತೂರಿನ ಕೆ. ಎಸ್. ವಿ. ಕಾಲೇಜಿನ ಕುಮಾರಿ ಪಾರವ್ವ ಲದ್ದಿಮಠ, ಅವರು ಪಡೆದರು. ಪರೀಕ್ಷೆಗಳಿಗೆ ಸಂಬಂಧಿಸಿದಂತೆ ಬೆಂಗಳೂರು ಕೇಂದ್ರದಲ್ಲಿ ಶ್ರೀ ವೆಂಕಟರಾಜು,.ಶ್ರೀ ಮಲ್ಲಿಕಾರ್ಜುನ, ಶ್ರೀ ಟಿ. ಜಿ. ನರಸಿಂಹಮೂರ್ತಿ, ಮೈಸೂರು ಕೇಂದ್ರದಲ್ಲಿ ಪ್ರೊ॥ ಎಂ. ಪ್ರಸನ್ನಕುಮಾರ್, ಧಾರವಾಡ ಕೇಂದ್ರದಲ್ಲಿ ಶ್ರೀ ಎಂ. ವೈ. ಸಾವಂತ್, ಗುಲ್ಬರ್ಗಾ ಕೇಂದ್ರದಲ್ಲಿ ಪ್ರೊ॥ ವಸಂತ ಕುಷ್ಟಗಿ ಮತ್ತು ಶ್ರೀ ಎಸ್. ರೆಡ್ಡಿ ಅವರು ಪರೀಕ್ಷಾ ಕೇಂದ್ರಗಳ ಜವಾಬ್ದಾರಿಯನ್ನು ಹೊತ್ತು ಸಮರ್ಪಕವಾಗಿ ನಿರ್ವಹಿಸಿದರು. ಅವರುಗಳಿಗೆ ಮತ್ತು ಪರೀಕ್ಷೆಗಳನ್ನು ನಡೆಸಲು ಸ್ಥಳಾವಕಾಶ ನೀಡಿದ ಬೆಂಗಳೂರಿನ ಶೇಷಾದ್ರಿಪುರಂ ಕಾಲೇಜು, ರೇಣುಕಾಚಾರ್ಯ ಕಾಲೇಜು, ಮೈಸೂರಿನ ಬನುಮಯ್ಯ ಕಾಲೇಜು ಮತ್ತು ದಳವಾಯಿ ಹೈಸ್ಕೂಲು, ಧಾರವಾಡ ಕಿಟೆಲ್ ಕಾಲೇಜು, ಗುಲ್ಬರ್ಗಾದ ಎಸ್. ವಿ. ಕಾಲೇಜುಗಳ ಆಡಳಿತ ವರ್ಗಕ್ಕೆ ಅಕಾದೆಮಿಯು ಕೃತಜ್ಞತೆ ಸಲ್ಲಿಸುತ್ತದೆ. ಪರೀಕ್ಷೆಗಳ ನಿಯಂತ್ರಕರಾಗಿ ಶ್ರೀ ಸಿ. ಆರ್. ಗಾಡಗೋಳಿ ಅವರು ಅತ್ಯಂತ ಸಮರ್ಪಕವಾಗಿ ಕಾರ್ಯನಿರ್ವಹಿಸಿದ್ದಾರೆ. ಅವರಿಗೂ ಅಕಾದೆಮಿಯು ತನ್ನ ಕೃತಜ್ಞತೆಗಳನ್ನು ಸಲ್ಲಿಸುತ್ತದೆ.

## ಕಾರ್ಯಕಾರೀ ಸಮಿತಿಯ ಸಭೆಗಳು

೧೯೯೪ನೆಯ ಸಾಲಿನಲ್ಲಿ ಅಕಾದೆಮಿಯ ಕಾರ್ಯಕಾರೀ ಸಮಿತಿಯು ಬೆಂಗಳೂರಿನಲ್ಲಿ ನಾಲ್ಕು ಬಾರಿ (೩-೪-೧೯೯೪, ೧೬-೬-೧೯೯೪ ಮತ್ತು ೨೨-೧೧-೧೯೯೪) ಮತ್ತು ಸೊಂಡೂರಿನಲ್ಲಿ (೧೦-೭-೧೯೯೪) ಒಮ್ಮೆ ಸಭೆ ಸೇರಿ ಅಕಾದೆಮಿಯ ಕಾರ್ಯಗಳು ಯಶಸ್ವಿಯಾಗಿ ನಡೆಯಲು ಸಹಕರಿಸಿದೆ. ಸೊಂಡೂರಿನಲ್ಲಿ ೬-೭-೧೯೯೪ ರಂದು ನಡೆದ ಸರ್ವಸದಸ್ಯರ ಸಭೆಯಲ್ಲಿ ಮುಂದಿನ ಎರಡು ವರ್ಷಗಳ ಕಾಲಾವಧಿಗೆ ಆಯ್ಕೆಗೊಂಡ ಕಾರ್ಯಕಾರಿ ಸಮಿತಿಯ ಸದಸ್ಯರು ೧೦-೭-೧೯೯೪ ರಂದು ಸೊಂಡೂರಿನಲ್ಲೇ ಸಭೆ ಸೇರಿ, ಕಳೆದ ವರ್ಷದ ಪದಾಧಿಕಾರಿಗಳೇ ಮುಂದುವರಿಯಬೇಕೆಂದು ಅಭಿಪ್ರಾಯಪಟ್ಟರು. ಹಾಗಾಗಿ ಅದನ್ನು ಒಪ್ಪಲಾಗಿದೆ. ಕಾರ್ಯಕಾರೀ ಸಮಿತಿಯ ಸಭೆಗಳಲ್ಲಿ ಪಾಲ್ಗೊಂಡು ಅಥವಾ ಪಾಲ್ಗೊಳ್ಳಲಾಗದಿದ್ದ ಸಮಯದಲ್ಲಿ ಪತ್ರಮುಖೇನ ಸಲಹೆ ಸೂಚನೆಗಳನ್ನು ನೀಡಿ ಅಕಾದೆಮಿಯು ಒಳ್ಳೆಯ ಕಾರ್ಯ ನಡೆಸಲು ನೆರವಾಗುತ್ತಿರುವ ಕಾರ್ಯಕಾರೀ ಸಮಿತಿಯ ಎಲ್ಲ ಸದಸ್ಯರಿಗೂ ಅಕಾದೆಮಿ ಕೃತಜ್ಞವಾಗಿದೆ.

## ಸದಸ್ಯರ ಸಂಖ್ಯೆ

ಈ ವರದಿಯನ್ನು ಸಿದ್ಧಪಡಿಸುತ್ತಿರುವ ವೇಳೆಗೆ ಅಕಾದೆಮಿಯ ಸದಸ್ಯತ್ವದ ವಿವರಗಳು ಹೀಗಿವೆ.

| | | |
|---|---|---|
| ಆಜೀವ | - | ೬೯೦ |
| ಸಾಮಾನ್ಯ | - | ೨೦ |
| ಒಟ್ಟು | | ೭೧೦ |

## ಅಕಾದೆಮಿಯ ಘಟಕಗಳು

ಈ ವರ್ಷವೂ ಶ್ರೀ ತ. ರಂ. ಕೃಷ್ಣೇಗೌಡ ಅವರ ಅಧ್ಯಕ್ಷತೆಯಲ್ಲಿ ಬೆಂಗಳೂರು ನಗರ ಘಟಕವೂ, ಡಾ॥ ಎಂ. ಎಸ್. ಕೃಷ್ಣಮೂರ್ತಿ ಅವರ ಅಧ್ಯಕ್ಷತೆಯಲ್ಲಿ ಮೈಸೂರು ಘಟಕವೂ, ಶ್ರೀ ಕುಂ. ಬಾ. ಸದಾಶಿವಪ್ಪ ಅವರ ಅಧ್ಯಕ್ಷತೆಯಲ್ಲಿ ಬಳ್ಳಾರಿ ಜಿಲ್ಲಾ ಘಟಕವೂ ಕಾರ್ಯನಿರ್ವಹಿಸುತ್ತಿವೆ.

## ಸಂತಾಪ ಸೂಚನೆ

ಕರ್ನಾಟಕ ಇತಿಹಾಸ ಅಕಾದೆಮಿಯ ೨ನೇ ವಾರ್ಷಿಕ ಸಮ್ಮೇಳನದ ಅಧ್ಯಕ್ಷರಾಗಿದ್ದ ಖ್ಯಾತ ಶಾಸನತಜ್ಞ ಡಾ॥ ಜಿ. ಎಸ್. ಗಾಯಿ, ಜ್ಞಾನಪೀಠ ಪ್ರಶಸ್ತಿ ವಿಜೇತ ರಾಷ್ಟ್ರಕವಿ ಡಾ॥ ಕೆ. ವಿ. ಪುಟ್ಟಪ್ಪ, ಖ್ಯಾತ ಇತಿಹಾಸಕಾರ ಡಾ॥ ಎಂ. ಎಚ್. ಗೋಪಾಲ್, ಇತಿಹಾಸಕ್ಕೆ ಸಂಬಂಧಿಸಿದ ಚಲನ ಚಿತ್ರಗಳನ್ನು ನಿರ್ಮಿಸಿ ಹೆಸರು ಪಡೆದಿದ್ದ ಖ್ಯಾತ ನಟ ಬಾಲಕೃಷ್ಣ ಅವರ ನಿಧನಕ್ಕೆ ಅಕಾದೆಮಿಯು ತೀವ್ರ ಸಂತಾಪ ವ್ಯಕ್ತಪಡಿಸುತ್ತದೆ.

## ಕೃತಜ್ಞತೆಗಳು

ಅಕಾದೆಮಿಯ ೮ನೆಯ ವಾರ್ಷಿಕ ಸಮ್ಮೇಳನಕ್ಕೆ ಆಶ್ರಯ ನೀಡಿದ ಸೊಂಡೂರಿನ ಕರ್ನಾಟಕ ಸೇವಾ ಸಂಘ, ನೇತೃತ್ವ ವಹಿಸಿದ ಶ್ರೀ ಎಂ. ವೈ. ಘೋರ್ಪಡೆ, ನೆರವು ನಡಿದ ಶ್ರೀ ಆರ್. ಎಸ್. ರೋಹಿಡೇಕರ್, ಶ್ರೀ ಜನಾರ್ದನ ಅವರಿಗೆ ಅಕಾದೆಮಿಯು ವಿಶೇಷ ಕೃತಜ್ಞತೆಗಳನ್ನು ಸಲ್ಲಿಸುತ್ತದೆ. ಐತಿಹಾಸಿಕ ಪರಂಪರೆ ಉಳಿಸಿ ಕಾರ್ಯಕ್ರಮಕ್ಕೆ ಧನ ಸಹಾಯ ನೀಡಿ ಸಹಕರಿಸುತ್ತಿರುವ ಕರ್ನಾಟಕ ರಾಜ್ಯ ಪುರಾತತ್ವ ಮತ್ತು ವಸ್ತು ಸಂಗ್ರಹಾಲಯ ನಿರ್ದೇಶನಾಲಯದ ನಿರ್ದೇಶಕರು ಮತ್ತು ಅಧಿಕಾರ ವರ್ಗಕ್ಕೆ, ಇತಿಹಾಸ ದರ್ಶನ ಸಂಚಿಕೆಯ ಮುದ್ರಣಕ್ಕೆ ಸ್ವಲ್ಪ ಮಟ್ಟಿನ ನೆರವು ನೀಡುತ್ತಿರುವ ಐ. ಸಿ. ಎಚ್. ಆರ್. ಸಂಸ್ಥೆಗೆ, ಇತಿಹಾಸ ದರ್ಶನ ಮತ್ತು ಐತಿಹಾಸಿಕ ಪರಂಪರೆ ಉಳಿಸಿ ಭಿತ್ತಿ ಪತ್ರಗಳ ಮುದ್ರಣ ಕಾರ್ಯವನ್ನು ಸ್ವಂತದ್ದೆಂಬಂತೆ ಮಾಡಿ ಸಹಕರಿಸುತ್ತಿರುವ ಬೆಂಗಳೂರಿನ ಲಕ್ಷ್ಮಿ ಮುದ್ರಣಾಲಯದ ಶ್ರೀ ಅಶೋಕ್‌ಕುಮಾರ್ ಮತ್ತು ಅವರ ಸಿಬ್ಬಂದಿಗೆ ಅಕಾದೆಮಿಯು ಕೃತಜ್ಞತೆ ಸಲ್ಲಿಸುತ್ತದೆ.

ಅಕಾದೆಮಿಯ ಬಹುತೇಕ ಸದಸ್ಯರು ಸೇವಾ ಮನೋಭಾವದಿಂದ ಕೆಲಸ ಮಾಡುತ್ತಾ, ಅಕಾದೆಮಿಯ ಯಶಸ್ಸಿಗೆ ಕಾರಣರಾಗಿದ್ದಾರೆ. ಅವರೆಲ್ಲರಿಗೂ ಧನ್ಯವಾದಗಳು.

ಅಕಾದೆಮಿಯ ಈ ವರೆಗಿನ ಸಾಧನೆಗೆ ನೀವೇ ಕಾರಣ. ಮುಂದಿನ ದಿನಗಳಲ್ಲೂ ಅಕಾದೆಮಿಯ ಕಾರ್ಯಗಳು ಮತ್ತಷ್ಟು ಯಶಸ್ವಿಯಾಗಲು, ಕರ್ನಾಟಕದ ಇತಿಹಾಸದ ಬಗೆಗೆ ಪ್ರೀತಿ ಮತ್ತು ಆಸಕ್ತಿ ಹುಟ್ಟಲು ನೀವೇ ಸಹಕರಿಸಬೇಕು ಎಂಬುದು ನಮ್ಮೆಲ್ಲರ ಕೋರಿಕೆ.

ಡಾ॥ ಎಚ್. ಎಸ್. ಗೋಪಾಲರಾವ್,
ಪ್ರಧಾನ ಕಾರ್ಯದರ್ಶಿ,
(ಕಾರ್ಯಕಾರಿ ಸಮಿತಿಯ ಅನುಮತಿಯೊಂದಿಗೆ)

# 'ಐತಿಹಾಸಿಕ ಪರಂಪರೆ ಉಳಿಸಿ' ಸಪ್ತಾಹ



ನಮ್ಮ ಪರಂಪರೆಯ ರಕ್ಷಣೆ ನಮ್ಮದೇ ಹೊಣೆ

**ಕರ್ನಾಟಕ ಇತಿಹಾಸ ಅಕಾದೆಮಿ(ರಿ)**

ನೆರವು: ಕರ್ನಾಟಕ ರಾಜ್ಯ ಪುರಾತತ್ವ ಇಲಾಖೆ, ಮೈಸೂರು